# ಶ್ರೀವಿಷ್ಣುಸಹಸ್ರನಾಮ

(ಕನ್ನಡ ಭಾವಾರ್ಥ ಸಹಿತ)



ದ್ವಿತೀಯ ಸಂಪುಟ

ಶ್ರೀ ಪಲಿಮಾರು ಮಠ, ಉಡುಪಿ

# ವಾಸುದೇವಾದಿ ಚತುರ್ಮೂರ್ತಿ ಸಹಿತ ಶ್ರೀಮನ್ನಾರಾಯಣನು

ಪ್ರಲಯಕಾಲದಲ್ಲಿ ನಾರಾಯಣನಾಮಕನಾಗಿದ್ದ ಭಗವಂತನು ಚೇತನರು ತಮ್ಮ ತಮ್ಮ ಸ್ವಭಾವದ ಅಭಿವ್ಯಕ್ತಿಯನ್ನು ಪಡೆಯಲೆಂದು ಸೃಷ್ಟಿಸಲು ಇಚ್ಛಿಸಿ ಮೊಟ್ಟಮೊದಲು ತಾನೇ ವಾಸುದೇವಾದಿ ನಾಲ್ಕು ರೂಪಗಳನ್ನು ಹೊಂದಿರುವನು ವಿಷ್ಣು ಸಹಸ್ರನಾಮಸ್ತೋತ್ರದ ಚತುರಾತ್ಮಾ ಚತುರ್ಮೂರ್ತಿ ಮುಂತಾದ ನಾಮಗಳಲ್ಲಿ ಪ್ರಸ್ತಾಪಿಸಲ್ಪಡುವ ಈ ರೂಪ ಚತುಷ್ಟಯ ಭಗವಂತನು ಸ್ವೀಕರಿಸುವ ರೂಪಗಳಲ್ಲೆಲ್ಲ ಮೊದಲನೆಯವುಗಳು

ಇವುಗಳಲ್ಲಿ ಭಕ್ತರಿಗೆ ಮೋಕ್ಷಪ್ರದನಾದ ಮಾಯಾಪತಿ ಶ್ರೀ ವಾಸುದೇವನು ಶುಕ್ಲವರ್ಣನು ಸುದರ್ಶನ ಚಕ್ರ ಪಾಂಚಜನ್ಯ ಶಂಖ ಕೌಮೋದಕೀ ಗದಾ ಹಾಗೂ ಪದ್ಮಗಳನ್ನು ಧರಿಸಿರುವನು

ಕೆಂಪು ಬಣ್ಣದ ಜಯಾಪತಿ ಶ್ರೀ ಸಂಕರ್ಷಣನು ಸಂಹಾರಕ್ಕೆ ಕಾರಣನು ಶಂಖಚಕ್ರಗಳ ಜೊತೆ ಮುಸಲಾಯುಧವನ್ನೂ ಹಲಾಯುಧವನ್ನೂ ಧರಿಸಿರುವನು

ಸೃಷ್ಟಿಗೆ ಕಾರಣನಾದ ಕೃತಿಪತಿ ಶ್ರೀ ಪ್ರದ್ಯುಮ್ನನು ಹಳದಿ ಬಣ್ಣದವನು ಶಾರ್ಙ್ಗಧನಸ್ಸು ಬಾಣ ಶಂಖ ಹಾಗೂ ಚಕ್ರಗಳು ಇವನ ಆಯುಧಗಳು

ಶಾಂತಿಪತಿ ಅನಿರುದ್ಧನು ಪಾಲಕನಾಗಿರುವವನು ಕೃಷ್ಣವರ್ಣದ ಇವನು ಚಕ್ರ ಶಂಖ ಖಡ್ಗ ಹಾಗೂ ಚರ್ಮಗಳನ್ನು ಧರಿಸಿರುವನು

ಹೀಗೆ ತನ್ನ ಸ್ವರೂಪಾತ್ಮಕಗಳಾದ ನಾಲ್ಕು ರೂಪಗಳಿಂದ ಕೂಡಿಕೊಂಡು ಉದಯಿಸುವ ಸೂರ್ಯನಂತೆ ರಾರಾಜಿಸುತ್ತ ಚಕ್ರಶಂಖಗದಾಪದ್ಮಧಾರಿಯಾಗಿ ಇರುವವನೇ ಮೂಲರೂಪಿ ಶ್ರೀಮನ್ನಾರಾಯಣನು ಶಾಸ್ತ್ರದಲ್ಲಿ ಪುರುಷ ಪದ್ಮನಾಭ ಎಂದೂ ಕರೆಸಿಕೊಳ್ಳಲ್ಪಡುವ ಇವನಿಂದಲೇ ಇವನ ಇತರ ರೂಪಗಳಂತೆ ಸಹಸ್ರನಾಮ ಪ್ರತಿಪಾದ್ಯಗಳಾದ ಸಾವಿರ ರೂಪಗಳೂ ಅಭಿವ್ಯಕ್ತಗಳಾಗಿವೆ

ಶ್ರೀಃ

# ವಿಷ್ಣು ಸಹಸ್ರನಾಮ

(ಕನ್ನಡ ಭಾವಾರ್ಥ ಸಹಿತ)

['ಅಮೃತ್ಯುಃ' ಎಂಬ ನಾಮದಿಂದ 'ಧರ್ಮವಿದುತ್ತಮಃ' ಎಂಬಲ್ಲಿಯ ವರೆಗೆ ಒಟ್ಟು ೨೦೮ ನಾಮಗಳು ]



ಪ್ರೇರಣೆ:

**ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು**

ಪರಿಶೀಲನೆ:

**ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯ**

ಸಂಪಾದನೆ:

**ಸಗ್ರಿ ರಾಘವೇಂದ್ರ ಉಪಾಧ್ಯಾಯ**



**ಪಲಿಮಾರು ಮಠ, ಉಡುಪಿ**

**1989**

Sri Vishnusahastranama with Kannada Bhavartha

Publishers Sri Palimar Mutt, Udupi

Guide:

**H. H. Sri Vidyamanya Tirtha Swamiji**

Printers:

**M Madhusudan Bhat**
Abhyudaya Printers, Marpally
P. O Korangrapady - 574 505

**Palimar Mutt, UDUPI**

**First Edition 1989**

**Price : Rs. 75/-**

# ಸಂಕೇತಾಕ್ಷರಗಳ ವಿವರ

(ವಿ. ಸ.ನಾ. ಸ್ತೋತ್ರದ ಪ್ರಕೃತ ವ್ಯಾಖ್ಯಾನದಲ್ಲಿ ಬಳಸಲಾದ ಸಂಕೇತಗಳ ವಿವರ)

| | | |
|---|---|---|
| ಅ. ಕೋ. | | ಅಮರ ಕೋಶ |
| ಅ. ವ್ಯಾ, ಅನು. ವ್ಯಾ | . | ಅನುವ್ಯಾಖ್ಯಾನ |
| ಅಥ ಉ. | | ಆಥರ್ವಣೋಪನಿಷತ್ |
| ಈ ಉ, ಈಶ ಉ | ; | ಈಶಾವಾಸ್ಯೋಪನಿಷತ್ |
| ಉ. ಖಂ. | · | ಉಪನಿಷತ್ ಖಂಡಾರ್ಥ |
| ಋ ವೇ. | . | ಋಗ್ವೇದ |
| ಋ ಭಾ | . | ಋಗ್ಭಾಷ್ಯ |
| ಐ. ಉ. | . | ಐತರೇಯೋಪನಿಷತ್ |
| ಐ ಉ ಭಾ | : | ಐತರೇಯೋಪನಿಷದ್ಭಾಷ್ಯ |
| ಓಂ ಪ್ರ ಕ | : | ಓಂ ತತ್ಸತ್ಪ್ರಣವಕಲ್ಪ |
| ಕ ನಿ | | ಕರ್ಮನಿರ್ಣಯ |
| ಕ ನಿ ಟೀ | | ಕರ್ಮನಿರ್ಣಯ ಟೀಕಾ |
| ಕಾ ಉ. | · | ಕಾಠಕೋಪನಿಷತ್ |
| ಕೃ ಮ | . | ಕೃಷ್ಣಾಮೃತಮಹಾರ್ಣವ |
| ಗೀ | : | ಗೀತಾ |
| ಗೀ ತಾ | · | ಗೀತಾತಾತ್ಪರ್ಯ |
| ಗೀ. ಭಾ | | ಗೀತಾ ಭಾಷ್ಯ |
| ಗೀ. ವಿ | · | ಗೀತಾ ವಿವೃತಿ |
| ಛಾಂ ಉ | : | ಛಾಂದೋಗ್ಯೋಪನಿಷತ್ |
| ಛಾಂ ಉ ಭಾ. | · | ಛಾಂದೋಗ್ಯೋಪನಿಷದ್ಭಾಷ್ಯ |
| ತ ಉ | · | ತಲವಕಾರೋಪನಿಷತ್ |
| ತ ಪ್ರ | . | ತತ್ತ್ವಪ್ರಕಾಶಿಕಾ |
| ತಾ ಪ. | | ತಾಮ್ರಪರ್ಣೀಯ |
| ತ್ರೈ. ದಾ. ಟೀ | · | ತ್ರೈವಿಕ್ರಮಾರ್ಯದಾಸ ಟೀಕಾ |
| ತೈ ಉ | · | ತೈತ್ತಿರೀಯೋಪನಿಷತ್ |
| ತೈ. ಉ. ಭಾ. | : | ತೈತ್ತಿರೀಯೋಪನಿಷದ್ಭಾಷ್ಯ |

| | | |
|---|---|---|
| ತಂ. ಸಾ. ಸಂ. | : | ತಂತ್ರಸಾರ ಸಂಗ್ರಹ |
| ದ್ವಾ. ಸ್ತೋ. | : | ದ್ವಾದಶ ಸ್ತೋತ್ರ |
| ನ. ಸ್ಮೃ. | : | ನಖಿಸ್ಮೃತಿ |
| ನ್ಯಾ. ಸು. | : | ಶ್ರೀಮನ್ನ್ಯಾಯಸುಧಾ |
| ಪ. ಭ. | : | ಪರಾಶರಭಟ್ಟೀಯಂ |
| ಪ್ರ. ಲ. | : | ಪ್ರಮಾಣ ಲಕ್ಷಣ |
| ಪು. ಸೂ. | : | ಪುರುಷ ಸೂಕ್ತ |
| ಪ್ರ. ದೀ. | : | ಪ್ರಮೇಯ ದೀಪಿಕಾ |
| ಬ. ಸೂ. | : | ಬಳಿತ್ಥಾ ಸೂಕ್ತ |
| ಬ. ಗೋ. | : | ಬನ್ನಂಜೆ ಗೋವಿಂದಾಚಾರ್ಯ |
| ಭಾಗ. ತಾ. ನಿ. | : | ಭಾಗವತತಾತ್ಪರ್ಯ ನಿರ್ಣಯ |
| ಭಾ. ಪ್ರ. | : | ಭಾವಪ್ರಕಾಶಿಕಾ |
| ಭಾ. ಬೋ. | : | ಭಾವ ಬೋಧ |
| ಬೃ. ಉ. | : | ಬೃಹದಾರಣ್ಯಕೋಪನಿಷತ್ |
| ಬೃ. ಉ. ಭಾ. | : | ಬೃಹದಾರಣ್ಯಕೋಪನಿಷದ್ಭಾಷ್ಯ |
| ಬ್ರ. ಸೂ. | : | ಬ್ರಹ್ಮ ಸೂತ್ರ |
| ಬ್ರ. ಸೂ. ಭಾ. | : | ಬ್ರಹ್ಮ ಸೂತ್ರ ಭಾಷ್ಯ |
| ಬ್ರ. ತ. | | ಬ್ರಹ್ಮತರ್ಕ |
| ಮಾ. ಖಂ. | : | ಮಾಯಾವಾದ ಖಂಡನ |
| ಮ. ನಾ. ಉ. | | ಮಹಾ ನಾರಾಯಣೋಪನಿಷತ್ |
| ಮ. ಭಾರ. | : | ಮಹಾ ಭಾರತ |
| ಮ. ಭಾರ. ತಾ. ನಿ. | : | ಮಹಾಭಾರತ ತಾತ್ಪರ್ಯನಿರ್ಣಯ |
| ಮಂ. ಮಂ. | : | ಮಂತ್ರಾರ್ಥ ಮಂಜರೀ |
| ಯಾ. ತೀ. | : | ಯಾದವೇಂದ್ರ ತೀರ್ಥಾಃ |
| ಯ. ವೇ. | : | ಯಜುರ್ವೇದ |
| ಯ. ಪು. ಸೂ. | : | ಯಜುರ್ವೇದ ಪುರುಷಸೂಕ್ತ |
| ಯಾ. ಉ. | : | ಯಾಜ್ಞೀಯ ಮಂತ್ರೋಪನಿಷತ್ |
| ರಾ. ಟಿ. | : | ರಾಘವೇಂದ್ರತೀರ್ಥೀಯ ಟಿಪ್ಪಣೀ |
| ವಾ. ರಾ. | : | ವಾದಿರಾಜೀಯ ಟಿಪ್ಪಣೀ |
| ವಾ. ರಾ. ಬಾಲ | : | ವಾಲ್ಮೀಕಿರಾಮಾಯಣ ಬಾಲಕಾಂಡ |
| ವಾ. ಲ. | : | ವಾದ ಲಕ್ಷಣ |
| ವಾ. ಸ್ಮೃ. | : | ವಾಯುಸ್ಮೃತಿ |

| | | |
|---|---|---|
| ವಿ. ರಾ | · | ವಿದ್ಯಾಧಿರಾಜೀಯಂ ಟಿಪ್ಪಣೀ |
| ವಿ. ತ. ವಿ | . | ವಿಷ್ಣುತತ್ತ್ವವಿನಿರ್ಣಯಂ |
| ವಿ ಪು | | ವಿಷ್ಣು ಪುರಾಣ |
| ವಿ ಪ ಟೀ. | · | ವಿಶ್ವಪತಿ ಟೀಕಾ |
| ಶಾಂ. ಭಾ | . | ಶಾಂಕರಭಾಷ್ಯ |
| ಶೇ. ಚಂ. | . | ಶೇಷ ಚಂದ್ರಿಕಾಚಾರ್ಯಾಃ |
| ಶ್ವೇ. ಉ | | ಶ್ವೇತಾಶ್ವತರೋಪನಿಷತ್ |
| ಷ. ಉ. ಭಾ. | · | ಷಟ್ಪ್ರಶ್ನೋಪನಿಷದ್ಭಾಷ್ಯ |
| ಸ. ಸಂ. | | ಸತ್ಯ ಸಂಧೀಯಂ |
| ಸಂ. ವಿ | ; | ಸಂಬಂಧ್ವ ವಿಜಯಂ |
| ಹ. ವಂ. | . | ಹರಿವಂಶ |



## ನಮ್ಮ ಕೃತಜ್ಞತೆ :

- ಶ್ರೀ ವಿಷ್ಣು ಸಹಸ್ರನಾಮದ 'ಅಮೃತ್ಯುಃ' ಎಂಬ ನಾಮದಿಂದ 'ಧರ್ಮವಿದುತ್ತಮಃ' ಎಂಬ ನಾಮದ ವರೆಗೆ ಒಟ್ಟು ೨೦೮ ನಾಮಗಳ ವ್ಯಾಖ್ಯಾನವನ್ನು ಸಂಪಾದಿಸಿಕೊಟ್ಟ

  — ಸಗ್ರಿ ರಾಘವೇಂದ್ರ ಉಪಾಧ್ಯಾಯರಿಗ

- ವ್ಯಾಖ್ಯಾನದ ಹಸ್ತಪ್ರತಿಯನ್ನು ಪರಿಶೀಲಿಸಿ ಸೂಕ್ತ ಸಲಹೆ ಸೂಚನೆಗಳನ್ನು ಇತ್ತ

  — ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರಿಗೆ

- ವಿಷ್ಣು ಸಹಸ್ರನಾಮದ ಮೊದಲ ಸಂಪುಟದ ಆರ್ಥಿಕ ವೆಚ್ಚವನ್ನು ನಿರ್ಭರಿಸಿ ಆ ಮೂಲಕ ಈ ದ್ವಿತೀಯ ಸಂಪುಟದ ಮುದ್ರಣಕ್ಕೆ ನೆರವಿತ್ತ

  — ಶ್ರೀ ಯಾದವಾಚಾರ್ಯ, ಮುಂಬಯಿ ಇವರಿಗೆ

- ಗ್ರಂಥವನ್ನು ಶ್ರದ್ಧೆಯಿಂದ ಮುದ್ರಿಸಿಕೊಟ್ಟ

  - ಯಂ. ಮಧುಸೂದನ ಭಟ್,

  ಅಭ್ಯುದಯ ಪ್ರಿಂಟರ್ಸ್, ಮಾರ್ಪಳ್ಳಿ ಇವರಿಗೆ

- ಕರಡುಪ್ರತಿ ತಿದ್ದುವುದರಲ್ಲಿ ನೆರವಿತ್ತ

  —ಶ್ರೀ ಪಿ. ಕೆ. ಹರಿದಾಸಾಚಾರ್ಯ, ಇವರಿಗೆ

- ಗ್ರಂಥದ ರಕ್ಷಾಕವಚವನ್ನು ಮುದ್ರಿಸಿಕೊಟ್ಟ

  —ಮಣಿಪಾಲ ಪವರ್ ಪ್ರೆಸ್ಸಿನವರಿಗ

- ಪ್ರಥಮ ಸಂಪುಟವನ್ನು ಓದಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿರುವ

  —— ಜಿಜ್ಞಾಸುಗಳಿಗೆ

**ನಮ್ಮ ಹಾರ್ದಿಕ ಕೃತಜ್ಞತೆ ಸಲ್ಲುವುದು.**

ವ್ಯವಸ್ಥಾಪಕರು,

ಪಲಿಮಾರು ಮಠ,

ಉಡುಪಿ.

ಶ್ರೀಃ

# ಅನುಗ್ರಹ ವಚನ

ನಮ್ಮ ದೇಹದಲ್ಲಿ ಎಪ್ಪತ್ತೆರಡು ಸಾವಿರ ನಾಡಿಗಳಿವೆ. ಭಗವಂತನು ಎಪ್ಪತ್ತೆರಡು ಸಾವಿರ ರೂಪಗಳನ್ನು ತಾಳಿ ಈ ನಾಡಿಗಳಲ್ಲಿದ್ದುಕೊಂಡು ನಮ್ಮ ದೇಹವನ್ನು ಕಾಪಾಡುತ್ತಿರುತ್ತಾನೆ. ಹಾಗೆಯೇ ನಮ್ಮ ಆಯುಸ್ಸು ನೂರು ವರ್ಷ ಕಾಲ. ನೂರು ವರ್ಷಗಳಲ್ಲಿ ಮೂವತ್ತಾರು ಸಾವಿರ ಹಗಲುಗಳೂ, ಮೂವತ್ತಾರು ಸಾವಿರ ರಾತ್ರಿಗಳೂ ಸೇರಿಕೊಂಡಿದ್ದು ಒಟ್ಟು ಎಪ್ಪತ್ತೆರಡು ಸಾವಿರ ಎನಿಸುವವು. ಭಗವಂತನು ಸೂರ್ಯನಲ್ಲಿ ಎಪ್ಪತ್ತೆರಡು ಸಾವಿರ ರೂಪಗಳಿಂದ ಇದ್ದುಕೊಂಡು ನಮ್ಮ ಆಯುಸ್ಸಿನ ಎಪ್ಪತ್ತೆರಡು ಸಾವಿರ ಹಗಲು ರಾತ್ರಿಗಳನ್ನು ನಿಯಮಿಸುತ್ತಿರುತ್ತಾನೆ.

ಹೀಗೆ ನಮ್ಮ ದೇಹದ ನಾಡಿಗಳನ್ನು ಹಾಗೂ ನಮ್ಮ ಆಯುಸ್ಸಿನ ಹಗಲು-ರಾತ್ರಿಗಳನ್ನು ನಿಯಮಿಸುತ್ತಿರುವ ಎಪ್ಪತ್ತೆರಡು ಸಾವಿರ ಭಗವದ್ರೂಪಗಳ ಪ್ರತಿಪಾದನೆಗಾಗಿಯೇ 'ಬೃಹತೀಸಹಸ್ರ' ಎಂಬ ಶಾಸ್ತ್ರವು (ಸ್ತೋತ್ರ ವಿಶೇಷ) ಹೊರಟಿರುವುದು. ಮೂವತ್ತಾರು ಅಕ್ಷರಗಳನ್ನೊಳಗೊಂಡ ಸಾವಿರ ವೇದಋಕ್ಕುಗಳಿಂದ ಕೂಡಿದ ಬೃಹತೀಸಹಸ್ರದಲ್ಲಿ ಮೂವತ್ತಾರು ಸಾವಿರ ಸ್ವರಾಕ್ಷರಗಳೂ, ಮೂವತ್ತಾರು ಸಾವಿರ ವ್ಯಂಜನಾಕ್ಷರಗಳೂ ಇವೆ. ಹೀಗೆ ಬೃಹತೀಸಹಸ್ರವು ತನ್ನ ಎಪ್ಪತ್ತೆರಡು ಸಾವಿರ ಅಕ್ಷರಗಳಿಂದ ನಾಡಿಗಳಲ್ಲಿ ಹಾಗೂ ಆಯುಸ್ಸಿನ ಹಗಲುರಾತ್ರಿಗಳಲ್ಲಿ ಇರುವ ಎಪ್ಪತ್ತೆರಡು ಸಾವಿರ ಭಗವದ್ರೂಪಗಳನ್ನು ಸ್ತುತಿಸುತ್ತಿದೆ.

ಇಂತಹ 'ಬೃಹತೀಸಹಸ್ರ'ದ ವ್ಯಾಖ್ಯೆಯು ಅಂದರೆ ಮೂಲ ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರ. ಇಂದ ಮೇಲೆ ಶ್ರೀ ವಿಷ್ಣು ಸಹಸ್ರನಾಮದ ಮಹಿಮೆ ಎಷ್ಟು ಎಂಬುದು ಸ್ಪಷ್ಟ. ಒಮ್ಮೆ ವಿಷ್ಣು ಸಹಸ್ರನಾಮವನ್ನು ಪಾರಾಯಣ ಮಾಡಿದೆವೆಂದರೆ ನಮ್ಮ ನಾಡಿಗಳನ್ನು, ಆಯುಸ್ಸಿನ ಹಗಲು-ರಾತ್ರಿಗಳನ್ನು ನಿಯಮಿಸುತ್ತಿರುವ ಎಪ್ಪತ್ತೆರಡು ಸಾವಿರ ಭಗವದ್ರೂಪಗಳನ್ನು ಸ್ತುತಿಸಿದಂತಾಗುವುದು.

ಅಲ್ಲದೆ ಶನಿಗ್ರಹಸೂಚಿತ ಪೀಡೆಗಳಿಗೆ ಎಲ್ಲರೂ ಭಯಪಡುತ್ತಿರುತ್ತಾರೆ. ಅಂತಹವರಿಗೆ ಶ್ರೀ ವಿಷ್ಣು ಸಹಸ್ರನಾಮ ಬಹಳ ಉಪಯುಕ್ತ. ಒಬ್ಬೊಬ್ಬ ಗ್ರಹನಿಗೆ ಒಬ್ಬೊಬ್ಬ ದೇವತೆ ಇರುವಂತೆ, ಶನಿ ಗ್ರಹನಿಗೆ ಶ್ರೀ ವಿಷ್ಣುವೇ ದೇವತೆ. ಅಂತಹ ವಿಷ್ಣುವನ್ನು ಶ್ರೀ ವಿಷ್ಣು ಸಹಸ್ರನಾಮದ ಮೂಲಕ ಸ್ತುತಿಸಿದಲ್ಲಿ ಶನಿಗ್ರಹನೂ ಪ್ರೀತನಾಗುವನು, ಪೀಡೆಗಳನ್ನು ಪರಿಹರಿಸುವನು.

ಹೀಗೆ ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರವು ಸಾಧಕರಿಗೆ ಭಗವದ್ಭಕ್ತರಿಗೆ ಅತ್ಯುಪಯುಕ್ತವಾಗಿದ್ದು, ಅದರ ಅರ್ಥಾನುಸಂಧಾನಕ್ಕಾಗಿ ಈ ಪುಸ್ತಕವನ್ನು ಬಳಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆ

ಶ್ರೀ ಶ್ರೀ ವಿದ್ಯಾಮಾನ್ಯ ಶ್ರೀಪಾದರು

ಪಲಿಮಾರು ಮಠ

ಉಡುಪಿ



ಉಪೋದ್ಘಾತ-

# ಸಹಸ್ರನಾಮಗಳಲ್ಲಿ ಶ್ರೀ ವಿಷ್ಣುಸಹಸ್ರನಾಮ

ವೈದಿಕ ವಾಙ್ಮಯದಲ್ಲಿ ಹಲವಾರು ಸಹಸ್ರ ನಾಮ ಸ್ತೋತ್ರಗಳು ಬಂದಿವೆ. ನಾರದೀಯ ಪುರಾಣದಲ್ಲಿ (ಪೂರ್ವಖಂಡ—೮೯) ಲಲಿತಾಸಹಸ್ರನಾಮ ಸ್ತೋತ್ರ ಹಾಗೂ (ಪೂರ್ವ ಖಂಡ—೮೨) ರಾಧಾಕೃಷ್ಣಸಹಸ್ರನಾಮ ಸ್ತೋತ್ರ, ಸ್ಕಾಂದ ಪುರಾಣದಲ್ಲಿ (ಕಾಶೀಖಂಡ-೨೯) ಗಂಗಾಸಹಸ್ರನಾಮ ಸ್ತೋತ್ರ, ಕೂರ್ಮ ಪುರಾಣದಲ್ಲಿ (೧೨) ದೇವೀಸಹಸ್ರನಾಮ ಸ್ತೋತ್ರ, ಗರುಡ ಪುರಾಣದಲ್ಲಿ (ಪೂರ್ವಖಂಡ-ಆಚಾರಕಾಂಡ-೧೫) ಶ್ರೀವಿಷ್ಣುಸಹಸ್ರನಾಮ ಸ್ತೋತ್ರ, ಪದ್ಮಪುರಾಣದಲ್ಲಿ (ಉತ್ತರಖಂಡ-೭೨) ಶ್ರೀವಿಷ್ಣುಸಹಸ್ರನಾಮ ಸ್ತೋತ್ರ ಮತ್ತು ಮಹಾಭಾರತದಲ್ಲಿ (ಶಾಂತಿಪರ್ವ-೨೮೪ ಮತ್ತು ಅನುಶಾಸನಪರ್ವ—೧೭) ಶಿವಸಹಸ್ರನಾಮ ಸ್ತೋತ್ರಗಳು—ಹೀಗ ಐದು ಸಹಸ್ರನಾಮ ಸ್ತೋತ್ರಗಳು ರುದ್ರ, ಲಲಿತಾ, ಗಂಗಾ ಮುಂತಾದ ಇತರ ದೇವತಾ ಪರಗಳಾಗಿ ಹೊರಟಿರುವವಾದರೆ, ಮೂರು ಸಹಸ್ರನಾಮ ಸ್ತೋತ್ರಗಳು ಭಗವಂತನ ಬಗ್ಗೆಯೇ ಹೊರಟಿವೆ ಅವುಗಳಲ್ಲೂ ಗರುಡ-ಪುರಾಣದಲ್ಲಿ ಹಾಗೂ ಪದ್ಮಪುರಾಣದಲ್ಲಿ ಪಠಿತಗಳಾಗಿರುವ ಸಹಸ್ರನಾಮ ಸ್ತೋತ್ರಗಳು ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರಗಳೆಂದೇ ಪ್ರಸಿದ್ಧಗಳಾಗಿವೆ.

ಇದಲ್ಲದೆ, ಶ್ರೀಲಕ್ಷ್ಮೀನೃಸಿಂಹ ಸಹಸ್ರನಾಮ ಸ್ತೋತ್ರ (ನೃಸಿಂಹ ಪುರಾಣ) ಶ್ರೀ ಕೃಷ್ಣಸಹಸ್ರನಾಮ ಸ್ತೋತ್ರ (ವಿಷ್ಣುಧರ್ಮೋತ್ತರ) ಲಕ್ಷ್ಮೀಸಹಸ್ರನಾಮ ಸ್ತೋತ್ರ (ಸ್ಕಾಂದಪುರಾಣ) ಶಿವಸಹಸ್ರನಾಮ ಸ್ತೋತ್ರ (ಲಿಂಗಪುರಾಣ) ಶ್ರೀ ಗೋಪಾಲಸಹಸ್ರ-ನಾಮ ಸ್ತೋತ್ರ (ಶ್ರೀ ಸಮ್ಮೋಹನ ತಂತ್ರ) ಭವಾನೀಸಹಸ್ರನಾಮ ಸ್ತೋತ್ರ (ರುದ್ರಯಾಮಲ ತಂತ್ರ) ಅನ್ನಪೂರ್ಣಾಸಹಸ್ರನಾಮ ಸ್ತೋತ್ರ (ರುದ್ರಯಾಮಲ ತಂತ್ರ) ಶ್ರೀ ರಾಮಸಹಸ್ರನಾಮ ಸ್ತೋತ್ರ, ಶ್ರೀ ಹಯಗ್ರೀವಸಹಸ್ರನಾಮ ಸ್ತೋತ್ರ, ಕಾಳಿಕಾ ಸಹಸ್ರನಾಮ ಸ್ತೋತ್ರ, ಸುಬ್ರಹ್ಮಣ್ಯಸಹಸ್ರನಾಮ ಸ್ತೋತ್ರ, ಗಣಪತಿಸಹಸ್ರನಾಮ ಸ್ತೋತ್ರ—ಇತ್ಯಾದಿಯಾಗಿ ಬೇರೆ ಬೇರೆ ಪುರಾಣಗಳಲ್ಲಿ, ತಂತ್ರ ಗ್ರಂಥಗಳಲ್ಲಿ ಹಲವು ಸಹಸ್ರನಾಮ ಸ್ತೋತ್ರಗಳು ಪಠಿತಗಳಾಗಿವೆಯೆಂದು ಉಲ್ಲೇಖಿಸಲ್ಪಟ್ಟಿದ್ದದೆ.

ಹೀಗೆ ವಿಸ್ತೃತವಾದ ಸಹಸ್ರನಾಮ ಸ್ತೋತ್ರ ಸಾಹಿತ್ಯ ಕ್ಷೇತ್ರದಲ್ಲಿ, ಭೀಷ್ಮದೃಷ್ಟ ವಾದ ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರದ ವೈಶಿಷ್ಟ್ಯವನ್ನು ಗುರುತಿಸಿಕೊಳ್ಳಬೇಕೆಂದರೆ ಇತರ ಸಹಸ್ರನಾಮ ಸ್ತೋತ್ರಗಳ ಇತಿಮಿತಿಗಳನ್ನು ಪರಿಶೀಲಿಸಬೇಕು. ಮುಖ್ಯವಾಗಿ

ಸಾಧನೆಯ ದೃಷ್ಟಿಯಲ್ಲಿ ಅವುಗಳ ಪಾತ್ರವನ್ನು, ಉಪಯೋಗವನ್ನು ನಿಷ್ಕರ್ಷಿಸಿಕೊಳ್ಳ ಬೇಕು.

ಮಿಶ್ರಸ್ತುತಿ:

'ಮುಖ್ಯತೋ ವಾಸುದೇವೇ ತೇ ಗುಣಾಃ ಸಂತ್ಯೇವ ಸರ್ವಶಃ । ಅನ್ಯೇಷು ಯಥಾಯೋಗ್ಯತಯಾ ಮತಾಃ' (ಋ ಭಾ. ೧೦೯)-ಋಗ್ವೇದವನ್ನು ವ್ಯಾಖ್ಯಾನಿಸಹೊರಟ ಶ್ರೀಮದಾಚಾರ್ಯರು, ವೇದದಲ್ಲಿಯ ಅಗ್ನಿಸೂಕ್ತಾದಿಗಳನ್ನು ಹೇಗೆ ಅರ್ಥೈಸಿಕೊಳ್ಳಬೇಕೆಂಬುದಕ್ಕೆ ಪ್ರಾರಂಭದಲ್ಲೇ ನೀಡಿದ ಸೂಚನೆ ಇದಾಗಿದೆ. ಅಗ್ನಿ ಸೂಕ್ತಾದಿಗಳಲ್ಲಿ ಪ್ರತಿಪಾದಿತಗಳಾದ ಗುಣಗಳು ಪೂರ್ಣಪ್ರಮಾಣದಲ್ಲಿ ಅನ್ವಯಿಸುವುದು ಅಗ್ನ್ಯಾದ್ಯಂತರ್ಗತ ಭಗವದ್ರೂಪಗಳಲ್ಲಿ. ಆ ರೂಪಗಳಿಗೆ ಪ್ರತೀಕರಾಗಿರುವ ಅಗ್ನ್ಯಾದಿ ದೇವತೆಗಳಲ್ಲಾದರೂ ಅವರವರ ಯೋಗ್ಯತೆಗೆ ಅನುಗುಣವಾಗಿಯಷ್ಟೇ ಅನ್ವಯಿಸುವವು ಎಂಬುದು ಆ ಮಾತಿನ ಆಶಯ.

ಈ ಮಾತು ವೇದಕ್ಕಷ್ಟೇ ಅಲ್ಲದೆ, ಸಮಗ್ರ ವೈದಿಕ ವಾಙ್ಮಯಕ್ಕೇ ಸಂಬಂಧಿಸು ವಂತಹದ್ದು. ವೈದಿಕ ವಾಙ್ಮಯದಲ್ಲಿ ಪ್ರಸ್ತುತಗಳಾಗುವ ಸ್ತುತಿಗಳನ್ನೆಲ್ಲ, ಗುಣಪ್ರತಿ ಪಾದಕ ಮಾತುಗಳನ್ನೆಲ್ಲ ಈ ಸೂತ್ರದ ಆಧಾರದ ಮೇಲೆಯೇ ವ್ಯಾಖ್ಯಾನಿಸಿಕೊಳ್ಳಬೇಕು. ಬ್ರಾಹ್ಮ (ಭಾಗ ತಾ. ನಿ. 4-6-42) ಈ ಅಭಿಪ್ರಾಯವನ್ನೇ ಅಭಿವ್ಯಕ್ತಗೊಳಿಸಿದೆ— 'ಕ್ರಿಯಂತೇ ಸ್ತುತಯೋಽನ್ಯತ್ರ ತದಂತರ್ಯಾಮ್ಯಪೇಕ್ಷಯಾ । ನ ಜೀವೇಷು ಗುಣಾಃ ಪೂರ್ಣಾಃ ಯಥಾಯೋಗ್ಯಾ ಹಿ ತದ್ಗತಾಃ' ಇತರ ದೇವತೆಗಳಲ್ಲಿ ಗುಣಪೂರ್ಣತೆ ಇಲ್ಲದ ಪ್ರಯುಕ್ತ ಅಂತಹ ದೇವತೆಗಳ ಕುರಿತು ನೊರಟ ಸ್ತುತಿಗಳೆಲ್ಲ ಮುಖ್ಯವಾಗಿ ಆಯಾಯ ದೇವತೆಗಳ ಅಂತರ್ಯಾಮಿಯಾದ ಭಗವಂತನನ್ನೇ ದೃಷ್ಟಿಯಲ್ಲಿಟ್ಟುಕೊಂಡು ಹೊರಟಿರುವ ವೆಂದು ಅನುಸಂಧಾನ ಮಾಡಿಕೊಳ್ಳಬೇಕು. ಇದನ್ನೇ ಬ್ರಹ್ಮತರ್ಕ' (ಭಾಗ. ತಾ. ನಿ. 7-3-27) ಇನ್ನಷ್ಟು ಸ್ಪಷ್ಟವಾಗಿ ವಿವರಿಸಿದೆ—

"ಪ್ರಾಯಸ್ತು ಸ್ತುತಿಶಬ್ದೇಷು ಮಿಶ್ರಾ ವಾಚೋ ಹರಿಂ ವಿನಾ ।
ಕೇಚಿಜ್ಜೀವಗುಣಾಸ್ತತ್ರ ತನ್ನಿಯಂತುರ್ಹರೇಃ ಪರೇ ।
ಏಕಸ್ಥಾನೈಕಕಾರ್ಯತ್ವಾತ್ ವಿಷ್ಣೋಃ ಪ್ರಾಧಾನ್ಯತಸ್ತಥಾ ।
ಜೀವಸ್ಯ ತದಧೀನತ್ವಾನ್ನ ಭಿನ್ನಾಧಿಕೃತಂ ವಚಃ"

ಸಾಕ್ಷಾತ್ ಭಗವಂತನ ಕುರಿತ ಸ್ತುತಿಗಳನ್ನು ಹೊರತು ಇತರವುಗಳಾದ ಸ್ತುತಿ ಗಳೆಲ್ಲ ಮಿಶ್ರಸ್ತುತಿಗಳೆನಿಸುವವು. ಅಂದರೆ, ಆ ಸ್ತುತಿಗಳು ಸ್ತುತಿಸುವ ಗುಣಗಳಲ್ಲಿ ಕೆಲ

ಪಷ್ಟೇ ಆಯಾಯ ಜೀವಾತ್ಮರಲ್ಲಿ ಸಮನ್ವಯಿಸುತ್ತಿದ್ದು, ಉಳಿದೆಲ್ಲ ಗುಣಗಳು ಆ ಜೀವಾತ್ಮರ ಅಂತರ್ಯಾಮಿ ಭಗವಂತನಲ್ಲೇ ಸಮನ್ವಯಿಸುವಂತಹವುಗಳು. ಆ ಜೀವಾತ್ಮನೂ ಅವನ ಅಂತರ್ಯಾಮಿಯಾದ ಭಗವಂತನೂ ಒಂದೇ ದೇಹದಲ್ಲಿದ್ದು, ಒಂದೇ ಕಾರ್ಯವನ್ನು ನಿರ್ವಹಿಸುವ ಪ್ರಯುಕ್ತ ಅವರಿಬ್ಬರನ್ನೂ ಜೊತೆಗೆಯೇ ಸ್ತುತಿಸಲಾಗುವುದು. ಅವರಿಬ್ಬರಲ್ಲಿ ಭಗವಂತನೇ ಪ್ರಧಾನನಾಗಿದ್ದು, ಅವನಿಂದ ನಿಯಮ್ಯನಾದ ಜೀವಾತ್ಮನು ಅವನ ಅಧೀನನಾಗಿರುವುದರಿಂದ ಆ ಸ್ತುತಿ ಮುಖ್ಯವಾಗಿ ಭಗವಂತನಿಗೆ ಸಂಬಂಧಿಸಿ, ಅಪ್ರಧಾನವಾಗಿಯಷ್ಟೇ ಜೀವಾತ್ಮನನ್ನು ಸಂಬಂಧಿಸುವುದು ಹೊರತು ಬರೇ ಜೀವಾತ್ಮನನ್ನು ಅಧಿಕರಿಸಿಕೊಂಡು ಹೊರಟ ಸ್ತುತಿ ಆಗಿರುವುದಿಲ್ಲ

ಮಿಶ್ರಸ್ತುತಿಯ ಕುರಿತಾದ ಈ ವಿವರಣೆಯಿಂದ ರುದ್ರ, ಲಲಿತಾದೇವಿ, ಗಂಗಾದೇವಿ, ಮುಂತಾದ ಇತರ ದೇವತೆಗಳ ಕುರಿತು ಹೊರಟಿರುವ ಸಹಸ್ರನಾಮ ಸ್ತೋತ್ರಗಳು ಸಾಧನೆಯ ದೃಷ್ಟಿಯಲ್ಲಿ ಅಷ್ಟೊಂದು ಉಪಯೋಗಕ್ಕೆ ಬರಲಾರವೆಂಬುದು ಸ್ಪಷ್ಟವಾಗದಿರದು. ರುದ್ರಾದಿಗಳ ಉತ್ಕರ್ಷವನ್ನೇ ಮೇಲ್ನೋಟಕ್ಕೆ ಸಾರುತ್ತಿರುವ ಶಿವಸಹಸ್ರನಾಮ ಸ್ತೋತ್ರವೇ ಮುಂತಾದವು 'ಮಿಶ್ರಸ್ತುತಿ' ಗಳೇ ಆಗಿದ್ದು, ಅವುಗಳ ಮೂಲಕ ಸಾಧನೆಯನ್ನು ನಡೆಸುವಾಗ 'ಮಿಶ್ರಸ್ತುತಿ' ಯ ಕುರಿತಾಗಿ ಇರಬೇಕಾದ ಅನುಸಂಧಾನವನ್ನೇ ಅಳವಡಿಸಿಕೊಳ್ಳಬೇಕು. ಈ ಅನುಸಂಧಾನವು ಭಗವಂತನನ್ನೇ ನೇರವಾಗಿ, ಸ್ಪಷ್ಟವಾಗಿ ಪ್ರತಿಪಾದಿಸುತ್ತಿರುವ 'ಶುದ್ಧಸ್ತುತಿ' ಯ ಕುರಿತು ಅಳವಡಿಸಿಕೊಳ್ಳಬೇಕಾದ ಅನುಸಂಧಾನದಷ್ಟು ಸುಲಭಸಾಧ್ಯವಲ್ಲ ಪ್ರಯಾಸಸಾಧ್ಯವಾದ ಆ ಅನುಸಂಧಾನವಿಲ್ಲದೆ, ಅಂದರೆ ಸ್ತುತಿಯಲ್ಲಿ ಮೇಲ್ನೋಟಕ್ಕೆ ಕಾಣುವಂತೆ ರುದ್ರಾದಿಗಳ ಮಹಿಮೆಯನ್ನೇ ಅನುಸಂಧಾನ ಮಾಡಿಕೊಂಡರೆ ಅದರಿಂದಾಗಿ ಭಗವಂತನ ವ್ಯಕ್ತಿತ್ವಕ್ಕೆ ಅಪಚಾರ ಮಾಡಿದಂತಾಗುವುದಲ್ಲದೆ ಅಂತಹ ಅನುಸಂಧಾನ ಪೂರ್ವಕವಾದ ಸ್ತುತಿಯಿಂದ ರುದ್ರಾದಿದೇವತೆಗಳೂ ಪ್ರಸನ್ನರಾಗುವುದಿಲ್ಲ ಅಂತಹ ಸ್ತುತ್ಯಾದಿಗಳನ್ನು ಅವರು ಸ್ವೀಕರಿಸುವುದೇ ಇಲ್ಲ ತಮ್ಮ ಸ್ವಾಮಿಯಾದ ಭಗವಂತನನ್ನು ಮರೆಯದೆ, ಅವನ ಭಕ್ತರಾಗಿ ತಮ್ಮನ್ನು ಪರಿಗಣಿಸಿ ತಮಗೆ ನೀಡಿದ ಸ್ತುತ್ಯಾದಿಗಳನ್ನಷ್ಟೇ ವೇದಪ್ರತಿಪಾದ್ಯ ಬ್ರಹ್ಮಾದಿ ದೇವತೆಗಳು ಸ್ವೀಕರಿಸುವರೆಂಬುದಾಗಿ 'ಸಾರನಿರ್ಣಯ' (ಛಾಂ. ಉ. ಭಾ 1-1-1) ನಿರ್ಣಯಿಸಿದೆ—'ಯದ್ ಭಾಗವತಬುದ್ಧ್ಯೈವ ದತ್ತಂ ಬ್ರಹ್ಮಾದಯಃ ಸುರಾಃ । ವೈದಿಕಾಃ ಪತಿಗೃಹ್ಣೀಯುಃ.. 'ಆದ್ದರಿಂದ ಮಿಶ್ರಸ್ತುತಿ' ರೂಪದಲ್ಲಿರುವ ಶಿವಸಹಸ್ರನಾಮ ಸ್ತೋತ್ರಾದಿಗಳ ಮೂಲಕ ಸಾಧನೆಯನ್ನು 'ನಡೆಸುವುದಾದರೆ ಅಳವಡಿಸಿಕೊಳ್ಳಲೇ ಬೇಕಾದ ಅನುಸಂಧಾನಕ್ಕಿಂತ, 'ಶುದ್ಧಸ್ತುತಿ' ರೂಪದಲ್ಲಿರುವ ಶ್ರೀ ವಿಷ್ಣುಸಹಸ್ರನಾಮದ ಮೂಲಕ ಸಾಧನೆಯನ್ನು ನಡೆಸುವಾಗ ತಂದುಕೊಳ್ಳಬೇಕಾದ 'ಅನುಸಂಧಾನ' ಸುಲಭಸಾಧ್ಯವಾದುದರಿಂದ, ರುದ್ರ ಮುಂತಾದ ಇತರ ದೇವತಾಪರಗಳಾದ ಸಹಸ್ರನಾಮ ಸ್ತೋತ್ರಗಳಿಗಿಂತ, ಭಗವತ್ಪರರಾದ ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರವು ಸಾಧಕರಿಗೆ ಹೆಚ್ಚು ಉಪಯುಕ್ತ ಎಂದು ಬೇರೆ ಹೇಳಬೇಕಿಲ್ಲ.

**ಅಮಿತ ಹಾಗೂ ಅಲೌಕಿಕಾರ್ಥಗಳು:**

ಹೀಗೆ ಇತರ ದೇವತಾಪರಗಳಾದ ಸಹಸ್ರನಾಮಗಳಲ್ಲಿಯ ನಾಮಗಳು ಆಯಾಯ ದೇವತೆಗಳಲ್ಲಿ ಮಿತಾರ್ಥಕಗಳಾಗಿಯೇ ಸಮನ್ವಯಗೊಳ್ಳುವವು. ಶ್ರೀ ವಿಷ್ಣುಸಹಸ್ರನಾಮದ ನಾಮಗಳಾದರೂ ಹೀಗಲ್ಲ. ಅವುಗಳಲ್ಲಿಯ ಪ್ರತಿಯೊಂದು ನಾಮವೂ ತನ್ನ ಪರಿಪೂರ್ಣಾರ್ಥದಲ್ಲೇ ಭಗವಂತನಲ್ಲಿ ಸಮನ್ವಯಿಸುವುದು. ಅದ್ದರಿಂದ ಶ್ರೀ ವಿಷ್ಣುಸಹಸ್ರನಾಮದ ನಾಮಗಳು ಪೂರ್ಣಪ್ರಮಾಣದ ಅರ್ಥವನ್ನು ಹೇಳುತ್ತಿರುವವು

ಹಾಗೆಯೇ ಶ್ರೀ ವಿಷ್ಣುಸಹಸ್ರನಾಮದ ಪ್ರತಿಯೊಂದು ನಾಮವೂ ಅಲೌಕಿಕಾರ್ಥವನ್ನೂ ಹೊಂದಿದೆ, ಭಗವಂತನ ಯಾವುದೇ ನಾಮ ಲೋಕಸಿದ್ಧಾರ್ಥವನ್ನಷ್ಟೇ ಒಳಗೊಂಡಿರದೆ, ಅಲೌಕಿಕಾರ್ಥವನ್ನೂ ಹೊಂದಿಯೇ ಇರುವುದು ಬರೇ ಲೋಕಸಿದ್ಧಾರ್ಥವನ್ನೊಳಗೊಂಡ ನಾಮ ಅವನಿಗೆ ಇಲ್ಲದ ಪ್ರಯುಕ್ತವೇ ಶಾಸ್ತ್ರವು ಅವನನ್ನು ಅಲ್ಲಲ್ಲಿ 'ನಾಮವರ್ಜಿತ' ಎಂದು ಉಲ್ಲೇಖಿಸಿದೆ. ಬೃಹತ್ತರ್ಕವು (ಭಾಗ ತಾ ನಿ 10–3–36) ಹೀಗೆಯೇ ನಿಷ್ಕರ್ಷಿಸಿದೆ—'ಲೋಕಸಿದ್ಧಾರ್ಥನಾಮ್ನಃ[1] ಸ ರಾಹಿತ್ಯಾನ್ನಾಮವರ್ಜಿತಃ' ಎಂಬುದಾಗಿ. ಅದ್ದರಿಂದ ಶ್ರೀವಿಷ್ಣುಸಹಸ್ರನಾಮದ ನಾಮಗಳು ಅಮಿತಾರ್ಥಕಗಳಾಗಿರುವಂತೆ ಅಲೌಕಿಕಾರ್ಥಕಗಳೂ ಆಗಿವೆ ವಿಷ್ಣುಸಹಸ್ರನಾಮದ 'ಶೌರಿಃ' ದೇವಕೀನಂದನಃ 'ಸಾತ್ವತಾಂ ಪತಿಃ' 'ಶಿಖಂಡೀ' ಚಾಣೂರಾಂಧ್ರನಿಷೂದನಃ 'ಕಾಲನೇಮಿನಿಹಾ' 'ಕೇಶಿಹಾ'—ಮುಂತಾದ ನಾಮಗಳಿಗೆ ಲೌಕಿಕಾರ್ಥಗಳಿರುವಂತೆ ಅಲೌಕಿಕಾರ್ಥಗಳೂ ಇದ್ದೇ ಇವೆ

**ಅರ್ಥ ಗೌರವ:**

ಭೀಷ್ಮದೃಷ್ಟವಾದ ವಿಷ್ಣುಸಹಸ್ರನಾಮದ ನಾಮಗಳಲ್ಲಿಯ ಅರ್ಥಗೌರವ ಇಷ್ಟಕ್ಕೆ ಪರ್ಯವಸಾನಗೊಳ್ಳುವಂತಹದ್ದಲ್ಲ. ಇನ್ನೂ ಮೂರು ವಿಧವಾಗಿ ಅಲ್ಲಿಯ ಅರ್ಥಗೌರವ

---

1 ಲೋಕಮಾತ್ರಸಿದ್ಧಾರ್ಥನಾಮ್ನಃ ಇತ್ಯರ್ಥಃ ।
ಲೋಕಸಿದ್ಧೋ ಹ್ಯರ್ಥ ಕ್ವಚಿದ್ ಯುಜ್ಯತೇ ।
ಯಥಾ ದೇವಕೀನಂದನತ್ವಾದಿಃ ।
ತಥಾಚೋಕ್ತಂ ಪುರಸ್ತಾತ್—ಅಥ ದಾಮೋದರಾದೀನಿ ಲೋಕಿಕಸ್ಯಾಪ್ಯಪವಾನಿ ತು, ಇತಿ ಷಷ್ಠೇ -ಬ. ಗೋ. (ಭಾಗ. ತಾ. ನಿ. ಟಿ.)

ವನ್ನು ಗುರುತಿಸಬಹುದಾಗಿದೆ. ಇಂತಹ ಅರ್ಥಗೌರವದಿಂದಾಗಿ ಭೀಷ್ಮದೃಷ್ಟವಾದ ವಿಷ್ಣು ಸಹಸ್ರನಾಮವು ಇತರ ದೇವತೆಗಳ ಸಹಸ್ರನಾಮಗಳಿಗಿಂತಷ್ಟೇ ಅಲ್ಲದೆ, ಭಗವತ್ಪರಗಳಾದ ಇತರ ಸಹಸ್ರನಾಮಗಳಿಗಿಂತಲೂ ವಿಶಿಷ್ಟವೆನಿಸಿದೆ.

'... ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್' (ಶಾಂ. ಭಾ -73) ಎಂದಿರುವಂತೆ ಸಹಸ್ರನಾಮದ ಪ್ರತಿಯೊಂದು ನಾಮವೂ ನೂರು ಅರ್ಥಗಳನ್ನು ಹೊಂದಿ ಯೇ ಇರುವುದರಿಂದ, ನೂರು ನೂರು ಅರ್ಥಗಳನ್ನೊಳಗೊಂಡಿರುವಂತಹ ಒಂದು ಬಗೆಯ ಅರ್ಥಗೌರವವಾದರೆ, ಬೃಹತೀಸಹಸ್ರದ ವ್ಯಾಖ್ಯೇಯ ರೂಪದಲ್ಲಿರುವ ಪ್ರಯುಕ್ತ ಮತ್ತೊಂದು ಬಗೆಯ ಅರ್ಥಗೌರವವು ಶ್ರೀವಿಷ್ಣುಸಹಸ್ರನಾಮಕ್ಕೆ ಸಲ್ಲುವುದು. 'ವಿಷ್ಣೋಃ ಸಹಸ್ರನಾಮ್ನಾಸ್ತು ಯತ್ ತದ್ ರೂಪಸಹಸ್ರಕಮ್ । ಬೃಹತೀಸಹಸ್ರಮೇತಚ್ಚ ತದೇವ ವಕ್ತಿ ಹಿ ಪೃಥಕ್ । ಪೃಥಕ್ ಪೃಥಗ್ಘಿ ನಾಮಾರ್ಥಾ ಋಚಃ ಏತಾ ಪ್ರಕೀರ್ತಿತಾಃ ।" (ಐ ಉ ಭಾ 2-2-4-4) ಎಂಬುದಾಗಿ ಶ್ರೀವಿಷ್ಣುಸಹಸ್ರನಾಮದಿಂದ ಪ್ರತಿಪಾದ್ಯಗಳಾದ ಭಗವಂತನ ಸಾವಿರಾರು ರೂಪಗಳನ್ನೇ ಬೃಹತೀಸಹಸ್ರದ ಋಕ್‌ಗಳು ಪ್ರತ್ಯೇಕವಾಗಿ ಪ್ರತಿಪಾದಿಸುತ್ತಿವೆ—ಎಂದು ಹೇಳಲಾಗಿದೆ

ಶ್ರೀ ವಿಷ್ಣುಸಹಸ್ರನಾಮ ಭಗವಂತನ ಅನಂತರೂಪಗಳನ್ನು ಪ್ರತಿಪಾದಿಸುತ್ತಿರುವ ಪ್ರಯುಕ್ತ ಅದಕ್ಕೆ ಮತ್ತೊಂದು ಬಗೆಯ ಅರ್ಥಗೌರವ

ವಿಷ್ಣುಸಹಸ್ರನಾಮದ ಸಹಸ್ರತ್ವ:

ಮುಖ್ಯವಾಗಿ ಶ್ರೀವಿಷ್ಣುಸಹಸ್ರನಾಮ ತನ್ನ ಸಾವಿರ ನಾಮಗಳಿಂದ ಭಗವಂತನ ಸಾವಿರ ರೂಪಗಳನ್ನು ಪ್ರತಿಪಾದಿಸಲು ಬಂದಿರುವಂತಹದ್ದು. ಆದರೆ ಅದು ಭಗವಂತನ ಸಾವಿರ ರೂಪಗಳನ್ನಷ್ಟೇ ಹೇಳುವುದಿಲ್ಲ ಭಗವಂತನ ಅನಂತ ರೂಪಗಳನ್ನು ಪ್ರತಿಪಾದಿಸು ತ್ತಿವೆ. 'ಸಹಸ್ರನಾಮ' ಎನ್ನುವಲ್ಲಿಯ 'ಸಹಸ್ರ' ಶಬ್ದವು ಸಾವಿರ ಸಂಖ್ಯೆಯನ್ನು ಹೇಳು ವಂತಹದಲ್ಲ ಅನಂತ ಸಂಖ್ಯೆಯನ್ನು ಹೇಳುವಂತಹದ್ದು. ಆದ್ದರಿಂದ ವಿಷ್ಣುಸಹಸ್ರನಾಮ ಸ್ತೋತ್ರದಲ್ಲಿ ಸಹಸ್ರ ಎಂಬುದಾಗಿ ಅನಂತ ನಾಮಗಳನ್ನೇ ಹೇಳಬೇಕಿತ್ತು. ಆದರೆ ಅನಂತ ನಾಮಗಳ ಪಠನಾದಿಗಳು ಅಧಿಕಾರಿಗಳಿಗೆ ಅಶಕ್ಯ ಎಂಬುದಾಗಿ, ಭಗವಂತನ ಅನಂತ ರೂಪ ಗಳನ್ನು ಪ್ರತಿಪಾದಿಸುವುದರಿಂದಲೇ ಶ್ರೀವಿಷ್ಣುಸಹಸ್ರನಾಮದ ನಾಮಗಳು ಸಹಸ್ರ ಎನಿಸಿವೆ. ಅರ್ಥದಲ್ಲಿಯ ಅನಂತತ್ವವೇ ಆ ನಾಮಗಳು ಸಹಸ್ರ ಎನಿಸಲು ಪ್ರವೃತ್ತಿನಿಮಿತ್ತವೆನಿಸಿದೆ.

ವಿಷ್ಣುಸಹಸ್ರನಾಮದ ನಾಮಗಳು ಸಹಸ್ರ ಎನಿಸಲು ಮತ್ತೊಂದು ಕಾರಣವೂ ಇದೆ. ಈ ನಾಮಗಳು ಭಗವಂತನ ಅನಂತ ರೂಪಗಳ ಜೊತೆಗೆಯೇ ಇರುವವು 'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್'—ಎನ್ನುವ ಶ್ರುತಿಯು ಭಗವಂತನು ಎಷ್ಟು ರೂಪಗಳಿಂದ ಇರುವನೋ, ಅಷ್ಟು ರೂಪಗಳಿಗೂ ವಾಚಕಗಳಾದ ನಾಮಗಳಿವೆ—ಎಂದು ಸಂದೇಶಿಸುತ್ತಿದೆ. ವೇದವಾಙ್ಮಯಕ್ಕೆ ಬ್ರಹ್ಮನಂತೆಯೇ ನಿತ್ಯತ್ವವನ್ನು ಸಾರುತ್ತಿರುವ 'ಯಾವದ್ ಬ್ರಹ್ಮ.. ' ಈ ಶ್ರುತಿಗೆ ಮೇಲಿ ತಿಳಿಸಿದ ಅರ್ಥವೂ ಇದೆ.[1] ಆದ್ದರಿಂದ ಈ ಶ್ರುತಿ ಸಂದೇಶಿಸಿರುವಂತೆ ಸಹಸ್ರನಾಮಘಟಕಗಳಾದ ಭಗವಂತನ ನಾಮಗಳು ಅವನ ಅನಂತ ರೂಪಗಳ ಜೊತೆಗೇ ಇರುವುದರಿಂದ (ಭಗವದ್ರೂಪೈಃ ಸಹೈವ ಸರತೀತಿ ಸಹಸ್ರಮ್) ಸಹಸ್ರವೆನಿಸಿದೆ ಹಾಗೆಯೇ ಸಹಸ್ರನಾಮ ಪ್ರತಿಪಾದ್ಯರೂಪಗಳು ಅನಂತ ಇರುವದಾದರೂ ಅವು ನಾಮಗಳ ಜೊತೆಗೇ ಇರುವುದರಿಂದಷ್ಟೇ (ನಾಮ್ನಾ ಸಹೈವ ಸರತೀತಿ ಸಹಸ್ರಮ್) ಸಹಸ್ರವೆನಿಸಿವೆ. ಎಂಬುದಾಗಿ ಶ್ರೀಮದಾಚಾರ್ಯರು—ಬೃಹತೀಸಹಸ್ರಕ್ಕೂ ಶ್ರೀ ವಿಷ್ಣುಸಹಸ್ರನಾಮಕ್ಕೂ, ಇರುವ ಸಂಬಂಧವನ್ನು ತೋರಿಸಲು ಹೊರಟಿರುವ 'ತದೇತದ್ ಸಹಸ್ರಂ ತತ್ ಸರ್ವಂ, ಎಂಬ ಐತರೇಯೋಪನಿಷತ್ತಿನ (2-2-4-4) ಸೂತ್ರಪ್ರಾಯವಾದ ಮಾತನ್ನು ವ್ಯಾಖ್ಯಾನಿಸುತ್ತ ವಿವರಿಸಿರುವರು—

"ಸಹಸ್ರಶಬ್ದೋಽನ್ಯಮಿತಂ ಯತೋ ವಕ್ತ್ಯಮಿತಾನ್ಯತಃ ।
ನಾಮಾನಿ ವಿಷ್ಣೋರುಚ್ಯಂತೇ ಸಹಸ್ರಮಿತಿ ಚಾಽಽಖ್ಯಯಾ।
ಅನಂತನಾಮವಚನೇ ತ್ವಶಕ್ತತ್ವಾತ್ ಸಹಸ್ರಕಮ್ ।
ನಾಮ್ನಾಂ ಪೃಥಗಿದಂ ಪ್ರೋಕ್ತಮನಂತತನುವಾಚಕಮ್ ।
ವಿಷ್ಣೋರನಂತರೂಪಾಣಾಮುಕ್ತ್ಯಾ ಪಂಚಶತದ್ವಯೇ ।
ಆಸೀತ್ ಸಹಸ್ರಮಿತ್ಯಾಖ್ಯಾ ಸಹಸ್ರಂ ಮುಖ್ಯತೋಽಮಿತಮ್ ।
ಬ್ರಹ್ಮ ಯಾವತ್ ತಾವತೀ ವಾಗಿತಿ ವೇದಪ್ರಮಾಣತಃ ।

---

1 ನನು ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಗಿತಿ ಶ್ರುತಿರನ್ಯತ್ರ ಬ್ರಹ್ಮ ಯಾವದ್ದೇಶಕಾಲವ್ಯಾಪಿ ವೇದವಾಗಪಿ ತಾವತೀ ತಾವದ್ದೇಶಕಾಲವ್ಯಾಪಿನೀತಿ ವ್ಯಾಖ್ಯಾತಮ್ ಕಥಮೇತತ್? ಸತ್ಯಂ, ವ್ಯಾಖ್ಯಾನಾಂತರತ್ವಾತ್ ॥ —ಶಾ. ಪ.

ಸಹ್ಯಾನಾನಂತರೂಪ್ಯಸ್ತು ಚರಣೇನ ಸಹಸ್ರಕಮ್ ।
ನಾಮ್ನಾ ಸಹ ಸ್ಮೃತೇಶೇವ ರೂಪಾಣಾಂ ವಾ ಸಹಸ್ರತಾ ॥

ಸ್ವರೂಪತಃ ಮಹತ್ತ್ವ:

ಈ ರೀತಿಯಾಗಿ ಶ್ರೀವಿಷ್ಣುಸಹಸ್ರನಾಮ ನೂರು ನೂರು ಅರ್ಥಗಳನ್ನೊಳಗೊಂಡಿರುವಷ್ಟು, ವೇದವಾಕ್ಯಗಳಿಗೆ ವ್ಯಾಖ್ಯೇಯರೂಪದಲ್ಲಿರುವಷ್ಟು ಹಾಗೂ ತನ್ನಲ್ಲಿಯ ಸಾವಿರ ನಾಮಗಳಿಂದ ಭಗವಂತನ ಅನಂತರೂಪಗಳನ್ನು ಪ್ರತಿಪಾದಿಸುವಷ್ಟು ಅರ್ಥ ಗೌರವವನ್ನು ಹೊಂದಿರುವುದೆಂದರೆ ಅದು ಸ್ವಾಭಾವಿಕವಾಗಿಯೂ ಮಹತ್ತ್ವಪೂರ್ಣವಾಗಿದೆ ಎಂದು ಸಿದ್ಧಿಸದಿರದು. ಸ್ವರೂಪತಃ ವೈಶಿಷ್ಟ್ಯಪೂರ್ಣವಾಗಿರುವುದರಿಂದಷ್ಟೇ ಶ್ರೀವಿಷ್ಣುಸಹಸ್ರನಾಮವು ಇನ್ನಾವುದೇ ವಾಙ್ಮಯದಲ್ಲಿ ಕಂಡು ಬರದ ಇಂತಹ ಅಸಾಧಾರಣ ಅರ್ಥ ಗಾಂಭೀರ್ಯವನ್ನು ಪಡೆದಿರಲು ಸಾಧ್ಯ

ಶ್ರೀವಿಷ್ಣುಸಹಸ್ರನಾಮದ ಪಠನವು ಸರ್ವಜ್ವರಪರಿಹಾರಕವಾಗಿ ಪರಿಗಣಿಸಲ್ಪಟ್ಟಿರುವುದೂ ಅದರ ಸ್ವಾಭಾವಿಕ ವೈಶಿಷ್ಟ್ಯಕ್ಕೆ ಮತ್ತೊಂದು ಜ್ಞಾಪಕವೆನಿಸಬಲ್ಲದು ಶ್ರೀವಿಷ್ಣುಸಹಸ್ರನಾಮದ ಮೂಲಕವಾಗಿ ಭಗವಂತನನ್ನು ಸ್ತುತಿಸಿದಲ್ಲಿ ಸರ್ವಜ್ವರಗಳೂ ಉಪಶಮನಗೊಳ್ಳುವವೆಂದು ವಿಷ್ಣುಧರ್ಮೋತ್ತರ (2-110-12) ಸಂದೇಶಿಸಿದೆ—

'ವಿಷ್ಣುಂ ಸಹಸ್ರಮೂರ್ಧಾನಂ ಚರಾಚರಪತಿಂ ಪ್ರಭುಮ್ ।
ಸ್ತುವನ್ನಾಮಸಹಸ್ರೇಣ ಜ್ವರಾನ್ ಸರ್ವಾನ್ ವ್ಯಪೋಹತಿ'

ಈ ವಿಚಾರವು ವಿಷ್ಣುಸಹಸ್ರನಾಮವನ್ನು ಹೊಗಳುವ ಸಂದರ್ಭದಲ್ಲಿ ಪ್ರಸ್ತಾಪಿಸಲ್ಪಟ್ಟಿದಲ್ಲ ವಿಷ್ಣುಸಹಸ್ರನಾಮಕ್ಕೆ ನೇರವಾಗಿ ಸಂಬಂಧಿಸದ ವಿಷ್ಣುಧರ್ಮೋತ್ತರದಲ್ಲಿ ಬಂದಿರುವಂಥದ್ದು ಆದ್ದರಿಂದ ಇದು ಅರ್ಥವಾದಶೈಲಿಯಲ್ಲಿ ಹೊರಟಿರುವ ಮಾತೆಂದು ಪರಿಗಣಿಸುವಂತಿಲ್ಲ.[1] ಅಲ್ಲದೆ ಆಯುರ್ವೇದದ ಪ್ರಸಿದ್ಧ ಗ್ರಂಥವಾದ ಚರಕಸಂಹಿತೆಯಲ್ಲೂ(6-

---

1 ಮಹಾಭಾರತಮಹತ್ತ್ವಮಧಿಕೃತ್ಯ ಪ್ರವೃತ್ತಂ 'ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್' ಇತಿ ವಚನಂ 'ಗ್ರಂಥಾಂತರವಚನತತ್ವಾಚ್ಚ ನಾವಿದ್ಯಮಾನಸ್ತುತಿಃ' ಇತಿ ಯಥಾ ಶ್ರೀಮದಾಚಾರ್ಯೈಃ (ಗೀತಾಭಾಷ್ಯೇ) ವ್ಯಾಖ್ಯಾತಂ ತದ್ವತ್ ।

ತಿ-306) ಈ ಮಾತು ಉಲ್ಲೇಖಿಸಲ್ಪಟ್ಟಿರುವುದರಿಂದ ಇದು ಅರ್ಥವಾದ ಆಗಿರಲು ಸಾಧ್ಯವೇ ಇಲ್ಲ.

**ವಿಶೇಷಣರಹಿತ ನಿರ್ದೇಶ:**

ಹೀಗೆ ಭೀಷ್ಮರ ದರ್ಶನಕ್ಕೆ ಗೋಚರವಾದ ಶ್ರೀವಿಷ್ಣುಸಹಸ್ರನಾಮವು ಅಸಾಧಾರಣವಾದ ಅರ್ಥಗಾಂಭೀರ್ಯ, ಸ್ವಾಭಾವಿಕ ವೈಶಿಷ್ಟ್ಯಗಳನ್ನು ಹೊಂದಿದ್ದು ಸಹಸ್ರನಾಮ ಸಾಹಿತ್ಯಕ್ಷೇತ್ರದಲ್ಲೇ ಪ್ರಮುಖವೆನಿಸಿದೆ. ಯಾವುದೇ ವಿಶೇಷಣವನ್ನು ನೀಡದೆ 'ಸಹಸ್ರನಾಮ' ಎಂದಾಕ್ಷಣ ಈ ಸಹಸ್ರನಾಮವೇ ಪ್ರತೀತವಾಗಲು ಇದೇ ಕಾರಣ.[1]

......ಸೋಽಲಂಕೃಷೀಷ್ಟ ಭಗವಾನ್ ವಚಾಂಸಿ ಮೇ ।

—ಸಗ್ರಿ ರಾಘವೇಂದ್ರ ಉಪಾಧ್ಯಾಯ

ವೇದಾಂತ ಸಹಪ್ರಾಧ್ಯಾಪಕ

ಸಂಸ್ಕೃತ ಕಾಲೇಜು, ಉಡುಪಿ.

---

1 ಮುಖ್ಯಸ್ಯ ನಿರ್ವಿಶೇಷೇಣ ಶಬ್ದೋಽನ್ಯೇಷಾಂ ವಿಶೇಷತಃ ।

—ಸ್ಕಾಂದ (ಬ್ರ. ಸೂ. ಭಾ. 1-1 1)

# ವಿಷಯಾನುಕ್ರಮಣಿಕೆ

—o—

ಶ್ರೀಃ

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಲಕ್ಷ್ಮೀಹಯಗ್ರೀವಾಯ ನಮಃ ।

ಹರಿಃ ಓಂ

# ಶ್ರೀ ವಿಷ್ಣುಸಹಸ್ರನಾಮ-ದ್ವಿತೀಯ ಸಂಪುಟ

## (ಕನ್ನಡ ಭಾವಾರ್ಥ ಸಹಿತ)

ಅಮೃತ್ಯುಃ ಸರ್ವದೃಕ್ ಸಿಂಹಃ ಸಂಧಾತಾ ಸಂಧಿಮಾನ್ ಸ್ಥಿರಃ ।
ಅಜೋ ದುರ್ಮರ್ಷಣಃ ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ ॥ ೨೨ ॥

೨೦೨ ಅಮೃತ್ಯುಃ

೧ ಮರಣಕ್ಕೊಳಗಾಗದವನು[1]

೨ ಮರಣಕ್ಕೊಳಗಾಗದವನು ಮತ್ತು ಉತ್ಕೃಷ್ಟನಾಗಿರುವವನು[2]

೩ ಮಾರಕರಹಿತನು.[3]

---

೧ 1 ನ ವಿದ್ಯತೇ ಮೃತ್ಯುಃ ಮರಣಂ ಯಸ್ಯ ಸಃ ಅಮೃತ್ಯುಃ । 'ಮೃತ್ಯುರ್ನಾ ಮರಣೇ ಯಮೇ' ।

೨ 2 ನ ವಿದ್ಯತೇ ಮೃತಿಃ ಮರಣಂ ಯಸ್ಯ ಸಃ ಅಮೃತಿಃ । ಉತ್ಕೃಷ್ಟತ್ವಾದುಃ । ಅಮೃತಿಶ್ಚಾಸೌ ಉಶ್ಚ ಅಮೃತ್ಯುಃ । 'ಅಧಿಕೋಚ್ಚತ್ವಮಾನಂ ಹಿ ತಸ್ಯಾರ್ಥಃ ಸಮುದೀರಿತಃ'-ಬ್ರಹ್ಮಸಾರೇ (ಐ ಉ. ಭಾ. 2-2-6-5) ಪ್ರಣವವ್ಯಾಖ್ಯಾನಸಂದರ್ಭೇ ಉಕಾರಸ್ಯೋಚ್ಚತ್ವಾರ್ಥಕತ್ವಮುಕ್ತಮ್ ।

೩ 3 ನ ವಿದ್ಯತೇ ಮೃತ್ಯುಃ ಮಾರಕಃ ಯಸ್ಯ ಸಃ ಅಮೃತ್ಯುಃ ।

* ವಿನಾಶಹೇತುಶೂನ್ಯತ್ವಾದಮೃತ್ಯುಃ ।

-ವಿ. ರಾ.

ಜೀವಾತ್ಮರೂ ಸ್ವರೂಪತಃ ನಿತ್ಯರಾದವರೇ. ಆದರೆ ಅವರು ದೇಹಪ್ರಾಪ್ತಿ ಹಾಗೂ ದೇಹ ವಿಯೋಗ ರೂಪವಾದ ಜನ್ಮ ಮತ್ತು ಮರಣಗಳಿಗೊಳಗಾಗುವರು. ಮುಕ್ತರಾದ ಮೇಲೆ ಈ ರೀತಿಯ ಜನ್ಮ ಮತ್ತು ಮರಣವನ್ನು ದಾಟುವರಾದರೂ ಮುಕ್ತಿಯ ಮೊದಲು ಜನ್ಮಮರಣಗಳನ್ನು ಹೊಂದುತ್ತಲೇ ಇರುವವರು. ಭಗವಂತನು ಮಾತ್ರ ಎಂದೆಂದೂ ಜನ್ಮಕ್ಕೆ ಅಥವಾ ಮರಣಕ್ಕೆ ಒಳಗಾಗುವುದಿಲ್ಲ.[1] ಆದ್ದರಿಂದಲೇ ನಿತ್ಯರಲ್ಲೂ ನಿತ್ಯ ಎಂದೆನಿಸಿರುವವನು ಅವನು.[2] ಬೃಹದಾರಣ್ಯಕೋಪನಿಷತ್ತು ಭಗವಂತನನ್ನು ಮುಂದೆಂದೂ ಮರಣವನ್ನು ಹೊಂದದ ಪ್ರಯುಕ್ತ 'ಅಮರ' ಎಂಬುದಾಗಿಯೂ ಹಿಂದೆಂದೂ ಮರಣಕ್ಕೊಳಗಾಗದ ಪ್ರಯುಕ್ತ 'ಅಮೃತ' ಎಂಬುದಾಗಿಯೂ ಕರೆದಿದೆ.[3] ಹೀಗೆ ಭಗವಂತನು ಎಂದೆಂದೂ ಮೃತ್ಯುವನ್ನು ಮೀರಿ ಇರುವುದರಿಂದ 'ಅತಿಮೃತ್ಯು' ಎನಿಸಿರುವನೆಂದು ಛಾಂದೋಗ್ಯೋಪನಿಷತ್ತು ಸಂದೇಶಿಸಿದೆ.[4]

ಅವತಾರ ರೂಪಗಳಲ್ಲೂ, ದೇಹಸ್ವೀಕಾರ ರೂಪವಾದ ಜನ್ಮ ಭಗವಂತನಿಗೆ ಇಲ್ಲ ಎಂದ ಮೇಲೆ ಮರಣ ಹೇಗೆ ತಾನೇ ಇರಲು ಸಾಧ್ಯ?[5] ಹೀಗಿದ್ದರೂ ಅಸುರ ಮೋಹಕ್ಕಾಗಿಯಷ್ಟೇ ಮೃತನಾದವನಂತೆ ಕೃಷ್ಣಾವತಾರ ಮೊದಲಾದವುಗಳಲ್ಲಿ ತೋರಿಸಿರುವನು. ಮರಣವೇ ಇಲ್ಲದವನ

---

1 ಸ್ವದೇಹಯೋಗವಿಗಮನಾಮಜನ್ಮಮೃತೀ ಪುರಾ ।
ಇಷ್ಯೇತೇ ಹ್ಯೇವ ಜೀವಸ್ಯ ಮುಕ್ತೇರ್ನತು ಹರೇಃ ಕ್ವಚಿತ್ ।
–ಸ್ಕಾಂದ (ಗೀ 2-12)

2 ನಿತ್ಯೋ ನಿತ್ಯಾನಾಂ
–ಕಾ. ಉ 2-3-1

3 'ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತಃ ।'
–ಬೃ ಉ. 6-4-26

ನ ಮರಿಷ್ಯತೀತಿ ಹ್ಯಮರೋ ನ ಮೃತೋ ಯತ್ ತತೋಽಮೃತಃ
–ಬೃ ಉ. ಭಾ.

4 'ಅಥ ಖಲ್ವಾತ್ಮಸಮ್ಮಿತಮತಿಮೃತ್ಯು ಸಪ್ತವಿಧಂ ಸಾಮೋಪಾಸೀತ ।'
–ಛಾಂ. ಉ. 2-2-1

' ವಿಷ್ಣು ರತಿಮೃತ್ಯುರಮೃತ್ಯುತಃ ।'
–ಸಾಮ ಸಂಹಿತಾ (ಛಾಂ. ಉ. ಭಾ)

5 ಜಾಯತೇ ನೈವ ಕುತ್ರಾಪಿ ಮ್ರಿಯತೇ ಕುತ ಏವ ತು ।
–ಮ. ಭಾರ. ತಾ. ನಿ. 2-79

ಮೃತದೇಹ ಹೇಗೆ ತಾನೇ ಇರಲು ಸಾಧ್ಯ? ಆದ್ದರಿಂದ ಕೃಷ್ಣಾವತಾರದಲ್ಲಿ ಸ್ವೇಚ್ಛೆಯಿಂದ ತನ್ನ ದೇಹದಂತಹ ಪ್ರಾಕೃತ ದೇಹವೊಂದನ್ನು ಸೃಷ್ಟಿಸಿ ತೋರಿಸಿರುವನಷ್ಟೇ ಎಂಬುದಾಗಿ ಪ್ರಮಾಣ ವೊಂದು ನಿರ್ಣಯಿಸಿರುವುದು.[1] ಭಗವಂತನು 'ಮೃತ್ಯುವಿಗೂ ಮಾರಕ'ನಾಗಿದ್ದು 'ಮೃತ್ಯು ಮೃತ್ಯು' ಎಂದೆನಿಸಿರುವವನು[2] ಅಂತಹವನಿಗೆ ಮಾರಕನಾದರೂ ಯಾರು?

ಹೀಗೆ ಭಗವಂತನು ಅಪ್ರಾಕೃತ ಶರೀರ ಸ್ವಾತಂತ್ರ್ಯಾದಿಗಳನ್ನು ಹೊಂದಿದ್ದು ಉತ್ಕೃಷ್ಟನಾಗಿ ರುವುದರಿಂದಲೇ ಯಾವುದೇ ರೀತಿಯಾದ ಮರಣಕ್ಕೊಳಗಾಗದೆ 'ನಿತ್ಯರಲ್ಲೂ ನಿತ್ಯ' ಎನಿಸಿರುವನು.

೪ ಪೂರ್ಣನಾದವನು ಮತ್ತು ಸಂಹಾರಕನು[3]

೫ ವಿಲಕ್ಷಣನಾದವನು ಮತ್ತು ಸಂಹಾರಕನು[4]

ಗೀತಾಚಾರ್ಯನು ಪ್ರಳಯಕಾಲದಲ್ಲಿ ಮುಖ್ಯವಾಗಿ ತಾನೇ ಸಂಹಾರಕನಾಗಿರುವುದರಿಂದ 'ಪ್ರಳಯ' ಎಂಬುದಾಗಿಯೂ, ಉಳಿದ ಸಮಯದಲ್ಲೂ ಸ್ವತಂತ್ರವಾಗಿ ತಾನೇ ಮಾರಕನಾಗಿರುವು

---

1 ಜಗತಾಂ ಮೋಹನಾರ್ಥಾಯ ಭಗವಾನ್ ಪುರುಷೋತ್ತಮಃ ।
ದರ್ಶಯೇನ್ಮಾನುಷೀಂ ಚೇಷ್ಟಾಂ ತದಾ ಮೃತಕವದ್ ವಿಭುಃ ।
ಪ್ರಕಾಶಯೇದದೇಹೋऽಪಿ ಮೋಹಾಯ ಚ ದುರಾತ್ಮನಾಮ್ ।
ಮಾಯಯಾ ಮೃತಕಂ ದೇಹಂ ತದಾ ಸೃಷ್ಟ್ವಾ ಪ್ರದರ್ಶಯೇತ್ ।
ಕುತೋ ಹಿ ಮೃತಕಂ ತಸ್ಯ ಮೃತ್ಯಭಾವಾತ್ ಪರಾತ್ಮನಃ

-ಭಾಗ. ತಾ. ನಿ. 11-31-13

2 'ಕ್ರೂರಂ ವೀರಂ...ಪುಂಮೃಗೇಂದ್ರಂ ಭಯಂಕರಂ ಶುಭಂ ಮೃತ್ಯೋಶ್ಚ ಮಾರಕಮ್ ।

-ತಂ. ಸಾರ. ಸಂ. 4-11

* 'ಉಗ್ರಂ ವೀರಂ ... ಮೃತ್ಯುಮೃತ್ಯುಂ ನಮಾಮ್ಯಹಮ್'

-ನೃಸಿಂಹಮಂತ್ರಃ ।

೪ 3 ಪೂರ್ಣತ್ವಾದಃ । ಸಂಹಾರಕತ್ವಾತ್ ಮೃತ್ಯುಃ ।

೫ 4 ಸರ್ವವಿಲಕ್ಷಣತ್ವಾದಃ । ಮಾರಕತ್ವಾನ್ಮೃತ್ಯುಃ ।

ದರಿಂದ 'ಮೃತ್ಯು' ಎಂಬುದಾಗಿಯೂ ತಾನು ಎನಿಸಿರುವೆನೆಂದು ಸಂದೇಶಿಸಿರುವನು[1] ಯಮ ಧರ್ಮರಾಜನು ಮನುಷ್ಯರಿಗೆ ಸಂಹಾರಕನಾಗಿರುವನು ಯಮದೇವನಿಗೆ ಸುದರ್ಶನ ಚಕ್ರಾಭಿ ಮಾನಿಯಾದ ಕಾಮನು ಸಂಹಾರಕನು ಕಾಮನಿಗೆ ರುದ್ರನು ಸಂಹಾರಕನು, ರುದ್ರನಿಗೆ ಚತು ರ್ಮುಖನು ಸಂಹಾರಕನು ಚತುರ್ಮುಖನಿಗೆ ದುರ್ಗೆಯು ಸಂಹಾರಕಳು ಆಕೆ ಚಕ್ರರೂಪಿಣಿಯಾಗಿ ಬ್ರಹ್ಮ ಪ್ರಳಯದಲ್ಲಿ ಸಕಲಲೋಕಗಳನ್ನೂ ಸಂಹರಿಸುವಳು ಸರ್ವೇಶ್ವರನಾದ ಭಗವಂತನು ಆಕೆಗೂ ನಿಯಾಮಕನಾಗಿರುವ ಪ್ರಯುಕ್ತ 'ಪರಃ ಕಾಲ' ಎಂದೆನಿಸಿರುವನು[2] ಹೀಗೆ ಭಗವಂತನು ಯಮಧರ್ಮರಾಜ ಮುಂತಾದ ಸಂಹಾರಕರಿಗಿಂತಲೂ ಪೂರ್ಣನಾದವನು, ವಿಲಕ್ಷಣನಾದವನು

೬ (ಜೀವಾತ್ಮರಿಗೆ) ಮರಣ ಬರದಂತೆ ಅನುಗ್ರಹಿಸುತ್ತಿರುವವನು[3]

ಗೀತಾಚಾರ್ಯನು ತಾನು ಜೀವಾತ್ಮರ ಇಂದ್ರಿಯಗಳಲ್ಲಿದ್ದುಕೊಂಡು ಅವರ ದೇಹವನ್ನು

---

1 ಪಿತಾಽಹಮಸ್ಯ ಜಗತೋ ಪ್ರಭವಃ ಪ್ರಳಯಃ ಅಮೃತಂ ಚೈವ ಮೃತ್ಯುಶ್ಚ....।

-ಗೀತಾ 9-18,19

ಪ್ರಳಯಕಾಲೇ ಸಂಹರ್ತೃತ್ವಾತ್ ಪ್ರಳಯಃ । ಅನ್ಯದಾಽಪೀತಿ ಮೃತ್ಯುಃ ।

-ಗೀ. ತಾ.

'.. ..ಪ್ರವಿಲಾಪಯನ್ । ವಿಶ್ವಂ ಪ್ರಳಯ ಇತ್ಯುಕ್ತೋ ಮೃತ್ಯುರನ್ಯತ್ರ ಮಾರಣಾತ್'

-ಗೀ. ತಾ.

2 'ಯಮಃ ಕಾಲೋ ಮನುಷ್ಯಾಣಾಂ ತಸ್ಯ ಕಾಲಃ ಸುದರ್ಶನಃ। ತಸ್ಯಾಪಿ ರುದ್ರಸ್ತ-ತ್ಕಾಲೋ ಬ್ರಹ್ಮಾ ದುರ್ಗಾಽಪಿ ತಸ್ಯ ತು । ಸಾ ಬ್ರಹ್ಮಪ್ರಳಯೇ ದೇವೀ ವರ್ತತೇ ಚಕ್ರರೂಪಿಣೀ । ಸಂಹರತೀ ಸದಾ ಲೋಕಾನ್ ಸೈವ ಬ್ರಹ್ಮಾದಿಷು ಸ್ಥಿತಾ । ತಸ್ಯಾ ನಿಯಾಮಕೋ ವಿಷ್ಣುಃ ಪರಃ ಕಾಲಃ ಸ ಉಚ್ಯತೇ । ಕಾಲಾಭಿಮಾನಿನೀ ಸೈವ ಪ್ರಭುರ್ನ ಜಗದೀಶಿತುಃ ತಸ್ಯಾಃ ಪ್ರಭುಃ ಸ ಏವೈಕೋ ವಿಷ್ಣುಃ ಸರ್ವೇಶ್ವರೇಶ್ವರಃ'

-ಭಾಗ. ತಾ. ನಿ. 3-12-38

೬ 3 ನ ವಿದ್ಯತೇ ಮೃತ್ಯುರ್ಯಸ್ಮಾತ್ ಸಃ ಅಮೃತ್ಯುಃ।

-ಸ. ಸಂ

ಧರಿಸಿಕೊಂಡು ಅವರಿಗೆ ಮರಣ ಸಂಭವಿಸದಂತೆ ರಕ್ಷಿಸುತ್ತಿರುವುದರಿಂದ 'ಅಮೃತ ಎನಿಸಿರುವನೆಂದು ಸಂದೇಶಿಸಿರುವನು[1]

ಭಗವಂತನು ಜೀವಾತ್ಮನ ಶರೀರದಲ್ಲಿ ಅಪಾನ ಮತ್ತು ಪ್ರಾಣರನ್ನು ನಿಯಮಿಸುವುದರ ಮೂಲಕ ಅವನಿಗೆ ಜೀವನಪ್ರದನಾಗಿ ಮರಣ ಬರದಂತ ಮಾಡುವುದರಿಂದ ಅಮೃತ ಎನಿಸಿರುವನೆಂದು ಐತರೇಯೋಪನಿಷತ್ತೂ ಸಂದೇಶಿಸಿದೆ

೭ ('ಮೃತ್ಯುಮೃತ್ಯು' ಆಗಿದ್ದು) ಮೃತ್ಯುವಿಗೆ ವಿರೋಧಿ ಆಗಿರುವವನು.[3]

## ಜಿಜ್ಞಾಸೆ

[ಮುಖ್ಯ ಅಮರ]

ಪ್ರ – ದೇವತೆಗಳಿಗೆ ಅಮರರು ಎಂದು ಹೆಸರು ಇದೆ ಆದರೆ ಅವರಿಗೆ ಪ್ರಲಯಕಾಲದಲ್ಲಿ ಮೃತ್ಯು ಇದೆ ಅದರಂತೆ ಪರಮಾತ್ಮನಿಗೆ ಅಮೃತ್ಯುಃ ಎಂದು ನಾಮವು ಇದ್ದರೂ ಮೃತ್ಯು ಇದೆಯೋ ಎಂಬ ಶಂಕೆಯು ಉಂಟಾಗುತ್ತದೆ ಇದಕ್ಕೆ ಏನು ಪರಿಹಾರ?

ಉ – ಪ್ರಲಯಕಾಲದಲ್ಲಿ ಎಲ್ಲರಿಗೂ ಮೃತ್ಯುವನ್ನು ಕೊಡತಕ್ಕವನಿಗೆ ಯಾರಿಂದ ಮೃತ್ಯು ಉಂಟಾಗಲು ಸಾಧ್ಯ? ಆದುದರಿಂದ ಅವನು ಸರ್ವಥಾ ಮೃತ್ಯು ರಹಿತನು ಎಂದು ಸಿದ್ಧವಾಗುತ್ತದೆ ಅಮರ ಎಂಬ ನಾಮವು ಮುಖ್ಯವಾಗಿ ಪರಮಾತ್ಮನ ನಾಮ. ದೇವತೆಗಳಿಗೆ ಪರಮಾತ್ಮನ ನಾಮವು ಇಡಲ್ಪಟ್ಟಿದೆ ಒಂದು ಹೊಸ ಮಗುವು ಹುಟ್ಟಿದರೆ ಆ ಮಗುವಿಗೆ ಅಜ್ಜನ ನಾಮವನ್ನು ನಾಮಕರಣ ದಿನದಲ್ಲಿ ತಂದೆಯು ಕೊಡುತ್ತಾನೆ ಅದರಂತೆ ಎಲ್ಲರಿಗೂ ಅಜ್ಜನಾದ ಪರಮಾತ್ಮನ ನಾಮವನ್ನು ಬ್ರಹ್ಮದೇವರು ತನ್ನ ಮಕ್ಕಳಾದ ದೇವತೆಗಳಿಗೆ ಕೊಟ್ಟಿರುವರಷ್ಟೇ



---

1 ಪಿತಾಮಹಮಸ್ಯ ಜಗತೋ ಅಮೃತಂ ಚೈವ –ಗೀತಾ. 9-19.
'ಪ್ರಾಣಿಗಃ ಪ್ರಾಣಧರ್ತಾ ಯದಮೃತಂ . ' –ಗೀ. ತಾ.
ಅಹಮಿಂದ್ರಿಯೇಷು ಸ್ಥಿತ್ವಾ ತೇಷಾಂ ದೇಹಧಾರಣೇನ ಮೃತಿಂ ಪರಿಹರಾಮೀತಿ ಹೇತೋರಮೃತಂ ಅಹಮ್ ।
–ಗೀ ವಿ.

2 'ಸ ಏಷ ಮೃತ್ಯುಶ್ಚೈವಾಮೃತಂ ಚ ...'
–ಐ. ಉ. 1-6-3
ಸ ಏವ ಜೀವನಕರೋ ಯದಾಽಪಾನೇನ ಸಂಯುತಃ । ಪ್ರಾಣಂ ನಿಯಮಯತ್ಯಸ್ಮಿನ್ ಶರೀರೇ ಪುರುಷೋತ್ತಮಃ ' –ಐ. ಉ. ಭಾ.

೭ 3 ಅಮೃತ್ಯುಃ ಮೃತ್ಯುವಿರೋಧೀ । –ಪ. ಭ.

## ೨೦೩ ಸರ್ವದೃಕ್

೧ ಎಲ್ಲವನ್ನೂ ಸಾಕ್ಷಾತ್ಕರಿಸಿರುವವನು.[1]

೨ ಪೂರ್ಣನಾದ ಪ್ರಯುಕ್ತ ಸರ್ವ ಎನಿಸುವ ತನ್ನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಿರು ವವನು[2]

ಭಗವಂತನು ಯಾರ ಅನುಗ್ರಹವೂ ಇಲ್ಲದೆ ತನ್ನ ಸಾಮರ್ಥ್ಯದಿಂದಲೇ ಗುಣಪೂರ್ಣವಾದ ತನ್ನ ಸ್ವರೂಪವನ್ನು ಕಾಣುತ್ತ ಅನುಭವಿಸುತ್ತಿರುವನು. ಉಳಿದ ಜಡಾಜಡಗಳನ್ನೊಳಗೊಂಡ ಪ್ರಪಂಚವನ್ನು ಏನೂ ತಡೆ ಇಲ್ಲದೆ ನೋಡುತ್ತಿರುತ್ತಾನೆ-ಎಂಬ ಅಭಿಪ್ರಾಯದಲ್ಲೇ ಉಷಸ್ತರು ಬ್ರಹ್ಮ ನನ್ನು 'ಸಾಕ್ಷಾದಪರೋಕ್ಷಾತ್-ಎಂದು ಎರಡು ವಿಶೇಷಣಗಳಿಂದ ಸ್ತುತಿಸಿರುವರು[3] ಕ್ಷೀರ ಸಾಗರ ದಲ್ಲಿರುವ ಭಗವಂತನು ಅಡೆತಡೆಯಿಲ್ಲದ ಮನಸ್ಸಿಂದ ಎಲ್ಲವನ್ನೂ ಕಾಣುವನು ಪರಿಪಕ್ವವಾದ

---

೧ 1 ಸರ್ವಂ ಪಶ್ಯತಿ ಸಾಕ್ಷಾತ್ಕರೋತೀತಿ ಸರ್ವದೃಕ್ ।

-ವಿ ರಾ

೨ 2 ಪೂರ್ಣತ್ವಾತ್ ಸರ್ವಃ ಸ್ವಯಂ ಭಗವಾನ್ । ತಾದೃಶಮಾತ್ಮಾನಂ ಪಶ್ಯತಿ ಸಾಕ್ಷಾತ್ಕ-ರೋತೀತಿ ಸರ್ವದೃಕ್ ।

3 ಅಥ ಹೈನಮುಷಸ್ತಶ್ಚಾಕ್ರಾಯಣಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ. '

-ಬೃ ಉ. 5-4-1

ವಿನೈವಾನ್ಯಪ್ರಸಾದೇನ ಪೂರ್ಣಸರ್ವಗುಣಾತ್ಮಕಮ್ । ಪಶ್ಯನ್ನನುಭವತ್ಯೇವ ಸ್ವಂ ರೂಪಂ ಕೇಶವಃ ಪ್ರಭುಃ । ಪಶ್ಯತ್ಯವ್ಯವಧಾನೇನ ಸರ್ವಂ ಚಾನ್ಯಜ್ಜಡಾಜಡಮ್ । ಸಾಕ್ಷಾದೇವಾಪರೋಕ್ಷಾತ್ ಸ ವಿಷ್ಣುರೇವ ತತಃ ಸ್ಮೃತಃ । ಸಾಕ್ಷಾಚ್ಛಬ್ದಃ ಸ್ವತಂತ್ರತ್ವಮಪರೋಕ್ಷಸ್ತ್ವನಾವೃತಿಮ್ । ಅದನಂ ಭೋಗ ಉದ್ದಿಷ್ಟಸ್ತಸ್ಮಾದ್ ವಿಷ್ಣುಸ್ತಥಾ ಸ್ಮೃತಃ'

-ಬೃ. ಉ. ಭಾ.

ಮನಸ್ಸಿಂದ ಎಲ್ಲವನ್ನೂ ಕಾಣುವವನು. ಪರಿಪಕ್ವವಾದ ಮನಸ್ಸಿಂದ ತಾನೆಲ್ಲವನ್ನೂ ಕಾಣುತ್ತಿರುವುದಾಗಿ ಭಗವಂತನೇ ಸಂದೇಶಿಸಿರುವವನು[1]

೩ ಎಲ್ಲೆಡೆ ದೃಷ್ಟಿ ಉಳ್ಳವನು.[2]

'ವಿಶ್ವತಶ್ಚಕ್ಷುಸ್' ಎನಿಸಿರುವ ಭಗವಂತನ ದೃಷ್ಟಿಯು ಎಲ್ಲೆಡೆ ಇರುವುದು

೪ ಪೂರ್ಣವಾದ ಚಕ್ಷುರಿಂದ್ರಿಯ ಉಳ್ಳವನು[3]

ಭಗವದಿಂದ್ರಿಯಗಳು ಅವನಿಂದ ಅತ್ಯಂತಾಭಿನ್ನಗಳಾಗಿದ್ದು, ಅವನಂತೆಯೇ ಪೂರ್ಣವಾದವು.

೫ ಅನಂತ ಕಣ್ಣುಗಳುಳ್ಳವನು.[4]

---

1 'ಏಕಃ ಸುಪರ್ಣಃ ಸ ಸಮುದ್ರಮಾ ವಿವೇಶ ಸ ಇದಂ ವಿಶ್ವಂ ಭುವನಂ ವಿಚಷ್ಟೇ।
ತಂ ಪಾಕೇನ ಮನಸಾऽಪಶ್ಯಂ '

–ಐ. ಉ. -2-7-6-7

ಏಕ ಏವ ಚ ವಿಷ್ಣುಃ ಸಃ ಪ್ರವಿಷ್ಟಃ ಕ್ಷೀರಸಾಗರಮ್ ।
ಸರ್ವಂ ಪಶ್ಯತ್ಯಸೌ ದೇವಃ ಪೂರ್ಣಾಕುಂಠೇನ ಚೇತಸಾ ।
ಪರಿಪಕ್ವೇನ ಮನಸಾऽಪಶ್ಯಮಿತ್ಯಾಹ ತಂ ತ್ವಜಃ ।

–ಐ. ಉ. ಭಾ.

೩ 2 ಸರ್ವತ್ರ ದೃಕ್ ದೃಷ್ಟಿರ್ಯಸ್ಯ ಸಃ ।

–ವಾ. ರಾ.

೪ 3 ಸರ್ವದೃಕ್ ಪೂರ್ಣಚಕ್ಷುಃ ।

–ವಿ. ರಾ

ಸರ್ವಾ ಪೂರ್ಣಾ ದೃಕ್ ನೇತ್ರಂ ಯಸ್ಯ ಸಃ ಪೂರ್ಣದೃಕ್ ।
'ದೃಕ್ ಸ್ತ್ರಿಯಾಂ ದರ್ಶನೇ ನೇತ್ರೇ ಬುದ್ಧೌ ಚ ತ್ರಿಷು ವೀಕ್ಷಕೇ'–ಮೇದಿನೀ

೫ 4 ಸರ್ವಾಃ ಅನಂತಾಃ ದೃಶಃ ನೇತ್ರಾಣಿ ಯಸ್ಯ ಸಃ ಸರ್ವದೃಕ್ । 'ಸರ್ವಂ ಸಮಸ್ತಂ ವಿಶ್ವಂ ಚ ಅನಂತಂ ಪೂರ್ಣಮೇವ ಚ' –ಗೀ. ಭಾ. 11-16

ಭಗವಂತನಿಗೆ ಅನಂತ ಕಣ್ಣುಗಳಿರುವುದಾಗಿ ಶ್ರುತಿಗಳು ಸಾರುತ್ತಿವೆ.[1]

೬ ಪೂರ್ಣವಾದ ಜ್ಞಾನ ಉಳ್ಳವನು[2]

ಸಕಲ ಪ್ರಮಾಣಗಳಿಗೆ ಗೋಚರಿಸುವುದನ್ನೂ ಸಾಕ್ಷಾತ್ತಾಗಿ ಕಾಣುವ ಭಗವಂತನ ಜ್ಞಾನವು[3] ಪರಿಪೂರ್ಣವಾದುದು.

೭ (ಸರ್ವ)ಗತ ಹಾಗೂ (ಎಲ್ಲವನ್ನೂ) ನೋಡುತ್ತಿರುವವನು.[4]

ಭಗವಂತನು ಕ್ಷೀರ ಸಾಗರದಲ್ಲಿರುವ ತನ್ನ ರೂಪದಿಂದ ಎಲ್ಲವನ್ನೂ ನೋಡುತ್ತಿರುವುದಲ್ಲದೆ, ಎಲ್ಲ ಕಡೆ ಇದ್ದು ಆಯಾಯ ರೂಪದಿಂದಲೂ ನೋಡುತ್ತಿರುವನು.

## ಜಿಜ್ಞಾಸೆ

[ಎರಡೂ ಶ್ರುತಿಸಿದ್ಧ]

ಪ್ರ- ಇತರ ಮತದವರು ಪರಮಾತ್ಮನು ಜ್ಞಾನರೂಪನಾದುದರಿಂದ ಅವನು ಸರ್ವದೃಕ್ ಅಲ್ಲ ಎಂದು ಹೇಳುತ್ತಾರೆ, ಇದು ನಿಜವೋ?

---

1 ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ

ಋಗ್ವೇದ (ಗೀ ಭಾ 11-16) ವಿಶ್ವಶಬ್ದಶ್ಚಾನಂತವಾಚೀ । ಗೀ. ಭಾ.

೬ 2 ಸರ್ವದೃಕ್ ಪೂರ್ಣಜ್ಞಾನೀ ।

-ವಿ ರಾ.

ಸರ್ವಾ ಪೂರ್ಣಾ ದೃಕ್ ದರ್ಶನಂ ಜ್ಞಾನಮಿತಿ ಯಾವತ್, ಯಸ್ಯ ಸಃ ಸರ್ವದೃಕ್ ।

3 ಅಶೇಷಮಾನಮೇಯೈಕಸಾಕ್ಷಿಣೇ - ನಮೋ ನಾರಾಯಣಾಯ ತೇ ।

-ಪ್ರ. ಲ.

೭ 4 ಸರ್ವತಿ ಗಚ್ಛತೀತಿ ಸರ್ವಃ । 'ಷರ್ವ ಗತೌ' । ಪಶ್ಯತೀತಿ ದೃಕ್ ಸರ್ವಶ್ಚಾಸೌ ದೃಕ್ ಚ ಸರ್ವದೃಕ್ । ಅಸಾಧಾರಣ್ಯೇನ ವ್ಯಪದೇಶಾತ್ ಸರ್ವತ್ರ ಗಚ್ಛತಿ ಸರ್ವಂ ಪಶ್ಯತೀತಿ ಫಲತಿ ।

ಉ – ಪರಮಾತ್ಮನು ಸರ್ವದೃಕ್ ಆದ್ದರಿಂದ ಅವನು ಜ್ಞಾನರೂಪನು ಅಲ್ಲ ಎಂದು ಇತರ ಮತದವರನ್ನು ಕುರಿತು ಪ್ರತಿಪಾದಿಗಳು ಹೇಳಿದರೆ ಇತರ ಮತದವರು ಏನು ಹೇಳುತ್ತಾರೆ? ಪರಮಾತ್ಮನಿಗೆ ಜ್ಞಾನರೂಪತ್ವವು ಶ್ರುತಿ ಸಿದ್ಧವಾದಂತೆ ಸರ್ವದೃಕ್ತ್ವವೂ ಶ್ರುತಿ ಸಿದ್ಧವಾಗಿದೆ ಶ್ರುತಿಯಲ್ಲಿ ಹೇಳಿದ್ದು ಎರಡೂ ಸತ್ಯವೇ ಆಗಬೇಕಷ್ಟೇ ಆದುದರಿಂದ ಪರಮಾತ್ಮನಿಗೆ ಜ್ಞಾನರೂಪತ್ವವನ್ನು ಒಪ್ಪಿ ಸರ್ವದೃಕ್ತ್ವವನ್ನು ಪರಮತದವರು ನಿರಾಕರಿಸುವದು ಯುಕ್ತವಲ್ಲ



## ೨೦೪ ಸಿಂಹಃ

೧ ಅತಿಶಯವಾಗಿ ಸಹಿಸಿಕೊಳ್ಳುವವನು[1]

ಭಕ್ತವತ್ಸಲನಾದ ಭಗವಂತನು ತನ್ನ ಬಗ್ಗೆ, ತನ್ನ ಆಜ್ಞೆಯಾಗಿ ಇರುವ ಶಾಸ್ತ್ರದ ಬಗ್ಗೆ ಭಕ್ತರು ಏನಾದರೂ ಅಪರಾಧವನ್ನೆಸಗಿದರೆ ಅದನ್ನು ಸಹಿಸಿಕೊಳ್ಳುವನು. ಆ ಕುರಿತು ತೀವ್ರವಾದ ಪ್ರತಿಕ್ರಿಯೆಯನ್ನು ತೋರಿಸುವುದಿಲ್ಲ[2]

೨ ಅತಿಶಯವಾಗಿ (ಶತ್ರುಗಳನ್ನು) ಎದುರಿಸುವವನು.[3]

೩ (ಭಕ್ತರ ಪಾಲಿಗೆ) ಸಂಸಾರ ಸಾಗರವನ್ನು ನಾಶಪಡಿಸುವವನು[4]

---

೧ 1 ಮಂಥನಾನ್ನಿಧಿಲೋ ಜಾತಃ ಸಹನಾತ್ ಸಿಂಹ ಉಚ್ಯತೇ (ಐ. ಉ ಭಾ. 2-2-5-4 ಉಲ್ಲಿಖಿತಮ್) ಇತಿ ಪ್ರಮಾಣಾನುಸಾರೇಣ ಸಹತೇ ಇತಿ ಸಂಹಃ, 'ತೃತೀಯೋಽತಿಶಯೇ' ಇತಿ ಸೂತ್ರೇಣ ಅತಿಶಯಾರ್ಥೇ ಅಕಾರಸ್ಯೇಕಾರೇ ಸತಿ ಚ ಸಿಂಹಃ ಇತಿ ಸಿದ್ಧ್ಯತಿ।

2 ಭಗವತಃ ಭಕ್ತಾಪರಾಧಸಹನಮಧಿಕೃತ್ಯ ಅಧಿಕವಿಚಾರಾಃ ೧೪೮ ತಮಸ್ಯ 'ಸಹಿಷ್ಣು' ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಾಃ।

೨ 3 ಅತಿಶಯೇನ ಸಹತೇ ಶತ್ರೂನ್ ಅಭಿಭವತೀತಿ ಸಿಂಹಃ।

೩ 4 ಸಿಂಶಬ್ದಃ ಸಿಂಧುವಾಚೀ। ಸಂಸಾರಸಿಂಧುಂ ಹಂತೀತಿ ಸಿಂಹಃ।

–ವಿ. ರಾ.

೪ ಪ್ರಲಯಸಾಗರದಲ್ಲಿ ಇರುವವನು.[1]

೫ (ಪ್ರಲಯ ಕಾಲದಲ್ಲಿ) ಸಾಗರವನ್ನು ನಾಶ ಮಾಡುವವನು[2]

ತನ್ನ ಅತ್ಯಂತ ಸಾಮರ್ಥ್ಯದಿಂದ ಸರ್ವಸಂಹಾರದಲ್ಲಿ ತೊಡಗಿರುವ ನೃಸಿಂಹನು ಸಮುದ್ರದ ಮಧ್ಯದಲ್ಲಿದ್ದು ಸಮುದ್ರದ ಅಗಾಧ ಜಲರಾಶಿಯನ್ನು ಭಸ್ಮವನ್ನಾಗಿಸುವನು. ಅಂತಹ ನೃಸಿಂಹನನ್ನು 'ವಾಡವಾಗ್ನಿ' ಎಂದು ಧ್ಯಾನಿಸಬೇಕೆಂದು 'ವೈಹಾಯಸ ಸಂಹಿತೆ' ಸಂದೇಶಿಸಿದೆ[3]

೬ (ಮಳೆ) ಸುರಿಸುವವನು.[4]

೭ (ಭಕ್ತರ ಕಾಮನೆಗಳನ್ನು) ಸುರಿಸುವವನು[5]

[ಅರ್ಥವಿಶೇಷಗಳನ್ನು ೪೮೮ನೆಯ 'ಸಿಂಹಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು ]

---

೪ 1 ಪ್ರಳಯಸಿಂಧೌ ಗಚ್ಛತೀತಿ ಸಿಂಹಃ । (ಹನಧಾತುಃ ಗತ್ಯರ್ಥಕೋಽಪಿ)
—ವಿ. ರಾ.

೫ 2 ಸಿಂ ಪ್ರಳಯಕಾಲೇ ಸಿಂಧುಂ, ಸಿಂಧುಗತಜಲಮಿತಿ ಯಾವತ್, ಹಿನಸ್ತೀತಿ ಸಿಂಹಃ ।

3 'ಭೂತಾದಿಭೂತೋಽಂಬುನಿಧಾನಮಧ್ಯೇ ಭೂತ್ವಾ ಹರಿಸ್ಸರ್ವಹರೋಽತಿಧಾಮ್ನಾ ।
ಅಗಾಧಮಂಭೋ ವಿದಧಾತಿ ಭಸ್ಮ ಯೋ ವಾಡವಾಗ್ನಿರ್ನೃಹರಿರ್ವಿಚಿಂತ್ಯಃ'
—ವೈಹಾಯಸ ಸಂಹಿತಾ (ಕ. ನಿ )

ಭೂತಾನಾಂ ಕಾರಣಭೂತಃ । ಭೂತ್ವಾ ಸ್ಥಿತ್ವಾ ।
—ಕ. ನಿ ಟೀ. ।

೬ 4 ವೃಷ್ಟಿರೂಪೇಣ ಜಲಂ ಸಿಂಚತೀತಿ ಸಿಂಹಃ ।

೭ 5 ಸ್ವಭಕ್ತಾನಾಂ ಕಾಮಾನ್ ಸಿಂಚತೀತಿ ಸಿಂಹಃ ।

* * * *

ಚತುರ್ಣಾಂ ಪದಾನಾಂ ಯಥಾಸಂಭವಂ ನಾಮವಿಶೇಷಣತಯಾ ಯೋಜನೇನ ಶತಸಂಖ್ಯಾ ಪೂರಣೀಯಾ। ತಥಾಚ 'ಸಂಧಾತಾ' ಇತಿ ನಾಮ ಏಕಾಧಿಕದ್ವಿಶತತಮನಾಮತಯಾ ಪರಿಗಣ್ಯತೇ ।

## ಜಿಜ್ಞಾಸೆ

[ಅಪರಾಧಸಹನೆ]

ಪ್ರ – ಶಿಶುಪಾಲನು ಶ್ರೀಕೃಷ್ಣನ ದ್ವೇಷಿಯಾಗಿದ್ದನು. ಅವನು ಶ್ರೀಕೃಷ್ಣನ ನೂರು ನಿಂದೆಗಳನ್ನು ಮಾಡಿದನು ಶ್ರೀಕೃಷ್ಣನು ಅವನ ತೊಂಭತ್ತೊಂಭತ್ತು ನಿಂದೆಗಳನ್ನು ಸಹಿಸಿದನು ಭಕ್ತನಾಗದ ಶಿಶುಪಾಲನ ತೊಂಭತ್ತೊಂಭತ್ತು ನಿಂದೆಗಳನ್ನು ಸಹಿಸಿದ್ದರಿಂದ ಇದೇ ರೀತಿ ಸಹಸ್ರಾರು ಅಭಕ್ತರ ಅಪರಾಧಗಳಿಗೆ ಕೂಡಲೆ ಶಿಕ್ಷೆಯನ್ನು ಕೊಡದೆ ಅವುಗಳನ್ನು ಸಹಿಸಿದ್ದರಿಂದ ಭಕ್ತರ ಅಪರಾಧ ಗಳನ್ನು ಮಾತ್ರ ಸಹಿಸುತ್ತಾನೆ ಪರಮಾತ್ಮನು ಎಂದು ಹೇಗೆ ಹೇಳುವರು?

ಉ – ಪರಮಾತ್ಮನು ದ್ವೇಷಿಗಳ ಅಪರಾಧಗಳನ್ನು ಸಹಿಸಲಿಲ್ಲ. ಅವರ ಅಧೋಗತಿಗೆ ಸಾಧನ ಪೂರ್ತಿಯಾಗಲಿ ಎಂದು ಸುಮ್ಮನೆ ಇದ್ದಾನೆ ಅದನ್ನು ಸಹನೆ ಎಂದು ಹೇಳುವಂತಿಲ್ಲ ಭಕ್ತರು ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಕೊಟ್ಟರೂ ದ್ವೇಷಿಗಳಿಗೆ ಅಧೋಗತಿ ಯನ್ನು ಕೊಡುವಂತೆ ಅಧೋಗತಿಯನ್ನು ಭಕ್ತರಿಗೆ ಕೊಡುವುದಿಲ್ಲ ಆದುದರಿಂದ ಅದು ಅವರ ಅಪರಾಧ ಸಹನೆ ಎಂದು ಹೇಳಬಹುದು.



## ೨೦೧ ಸಂಧಾತಾ

೧ ಚೆನ್ನಾಗಿ ಧಾರಣೆ ಮತ್ತು ಪೋಷಣೆ ನಡೆಸುವವನು.[1]

ಭಗವಂತನು ತಂದೆ, ತಾಯಿಯೇ ಮೊದಲಾದ ಇತರರಿಗಿಂತ ಅಧಿಕವಾಗಿ ನಮ್ಮ ಧಾರಣೆ ಪೋಷಣೆಗಳನ್ನು ನಡೆಸುವನು. ಅಲ್ಲದೆ ಅವರೆಲ್ಲ ಭಗವಂತನ ಪ್ರೇರಣೆಗೊಳಗಾಗಿ ನಮ್ಮ ಧಾರಕರು, ಪೋಷಕರು ಅನಿಸಿದ್ದರೆ, ಭಗವಂತನು ಸ್ವತಂತ್ರನಾಗಿ ಸ್ವೇಚ್ಛೆಯಿಂದ ನಮ್ಮನ್ನು ಧರಿಸುವನು ಹಾಗೂ ಪೋಷಿಸುವನು.[2]

ಬೇರೆ ಬೇರೆ ರೀತಿಯಿಂದ ನಮ್ಮನ್ನು ಪೋಷಿಸುತ್ತಿರುವ ಭಗವಂತನು ಅನಿರುದ್ಧರೂಪ ದಿಂದ ಮೇಘ ಹಾಗೂ ಮೇಘಾಭಿಮಾನಿಯಲ್ಲಿದ್ದು ಮಳೆ ಬರಿಸುವುದರ ಮೂಲಕ ಭೂಲೋಕ

---

೧ 1 ಸಮ್ಯಗ್ ಧಾರಣಪೋಷಣಕರ್ತೃತ್ವಾತ್ ಸಂಧಾತಾ ।

-ವಿ. ರಾ.

2 ಭಗವತಃ ಧಾರಣಪೋಷಣಯೋಃ ಸಮ್ಯಕ್ತ್ವಮಧಿಕೃತ್ಯ ವಿವರಣಂ 'ವಿಧಾತಾ' ನಾಮ್ನಃ (44) ವ್ಯಾಖ್ಯಾನೇ ದ್ರಷ್ಟವ್ಯಮ್ ।

ದಲ್ಲಿರುವ ನಮ್ಮನ್ನೂ, ಅಂತರಿಕ್ಷ ಲೋಕದವರನ್ನೂ ಪೋಷಿಸುತ್ತಿರುವನು ಆದ್ದರಿಂದ ಅವನು 'ಸಂಧಾತಾ' ಎಂದೆನಿಸಿರುವನೆಂದು ಐತರೇಯೋಪನಿಷತ್ತು ಸಂದೇಶಿಸಿದೆ[1]

೨ ಮಳೆ ಬರಿಸುವುದರ ಮೂಲಕ ಅಂತರಿಕ್ಷ ಹಾಗೂ ಪೃಥ್ವಿಯು ಸೇರಿಕೊಳ್ಳುವಂತೆ ಮಾಡುವವನು.[2]

ಐತರೇಯ ಉಪನಿಷತ್ತಿನಲ್ಲಿ ಸಂಹಿತಾ ವಿದ್ಯೆಯನ್ನು ವಿವರಿಸುತ್ತ, ಶಾಕಲ್ಯ ಋಷಿಯ ಪ್ರಕಾರ ಸಂಹಿತಾ ಘಟಕಗಳಾದ ಪೂರ್ವೋತ್ತರಪದಾರ್ಥಾದಿಗಳಲ್ಲಿ ಇರುವ ಭಗವದ್ರೂಪಗಳನು ಹೇಳುವ ಸಂದರ್ಭದಲ್ಲಿ ಪರ್ಜನ್ಯ ಎನಿಸುವ ಅನಿರುದ್ಧನು 'ಸಂಧಾತೃ' ಎಂದೆನಿಸಿ ಸಂಧಿಯನ್ನು ಉಚ್ಚಾರಣೆ ಮಾಡುವ ಪುರುಷನಲ್ಲಿ ಇರುವವನು ಎಂದು ಸಂದೇಶಿಸಲಾಗಿದೆ[3]

ಮೇಘ ಹಾಗೂ ಮೇಘಾಭಿಮಾನಿ ಪರ್ಜನ್ಯನಲ್ಲಿರುವ ಅನಿರುದ್ಧರೂಪಿ ಭಗವಂತನು ಮಳೆಗಾಲದಲ್ಲಿ ರಾತ್ರಿ ಹಗಲೆನ್ನದೆ ಮಳೆ ಬರಿಸಿದನೆಂದರೆ, ಆಗ ಆ ಮಳೆಯ ಮೂಲಕ ಭೂಮಿ ಮತ್ತು ಅಂತರಿಕ್ಷಗಳು ಜೊತೆಗೂಡುವವು[4] ಹೀಗೆ ಮಳೆ ಬರಿಸುವ ಮೂಲಕ ಭೂಮಿ ಮತ್ತು ಅಂತರಿಕ್ಷ

---

1 'ಪರ್ಜನ್ಯಃ ಸಂಧಾತಾ' (ಐ ಉ. 2-7-2-1)
ಸಮ್ಯಗ್ ಧಾರಣಾತ್ ಸಂಧಾತಾ । ವರ್ಷಣಮೇವ ದ್ಯಾವಾಪೃಥಿವ್ಯೋಃ ಸಂಧಾನಮ್ ।
ಪರ್ಜನ್ಯಸ್ಥೋ ಭಗವಾಂಸ್ತತ್ಕರ್ತಾ ।

—ಐ. ಉ ಭಾ

೨ 2 ವರ್ಷಣಕ್ರಿಯಯಾ ದ್ಯಾವಾಪೃಥಿವ್ಯೋಃ ಸಂಯೋಗಲಕ್ಷಣಸಂಧಾನಕರ್ತೃತ್ವಾತ್ ಸಂಧಾತಾ ।

3 ಅಥ ಶಾಕಲ್ಯಸ್ಯ ಪರ್ಜನ್ಯಃ ಸಂಧಾತಾ '

—ಐ. ಉ. 2-7-2-1

ಪರಂ ಸಸ್ಯಾದಿಕಂ ಜನಯತೀತಿ ಪರ್ಜನ್ಯನಾಮಾ ಪರ್ಜನ್ಯಸ್ಥೋಽನಿರುದ್ಧಃ ಸಂಧಾತಾ ಉಚ್ಚಾರಯಿತೃಪುರುಷಸ್ಥಃ ।

—ತಾವ್ರಪರ್ಣೀಯ

4 . . ತದುತಾಪಿ ಯತ್ರೈತದ್ ಬಲವದನುಗೃಹ್ಣನ್ ಸಂದಧದಹೋರಾತ್ರೇ ವರ್ಷತಿ। ದ್ಯಾವಾಪೃಥಿವ್ಯಾ ಸಮಧಾತಾಮಿತ್ಯುತಾಹುಃ . '

—ಐ. ಉ. 2-7-2-2

ಲೋಕಗಳನ್ನು ಜೊತೆಗೂಡಿಸುವ ಪ್ರಯುಕ್ತ ಮೇಘ ಮತ್ತು ಮೇಘಾಭಿಮಾನಿ ಪರ್ಜನ್ಯ ಇವರಲ್ಲಿರುವ ಅನಿರುದ್ಧರೂಪಿ ಭಗವಂತನು 'ಸಂಧಾತಾ' ಎನಿಸಿರುವನು

೨. ಸಂಧಿಯನ್ನು ಉಚ್ಚಾರಣೆ ಮಾಡುವವನು[1]

ವಿಷ್ಣುನಾಮದ ಸಂಧಿಯನ್ನು ಹಾಗೂ ವಿಷ್ಣುನಾಮದ ವ್ಯಾಖ್ಯಾನ ರೂಪದಲ್ಲಿರುವ ಸಮಗ್ರ ವಾಙ್ಮಯದ ಸಂಧಿಯನ್ನು ಉಚ್ಚಾರಣೆ ಮಾಡುವವನಲ್ಲಿ ಅನಿರುದ್ಧರೂಪಿ ಭಗವಂತನಿರುವನೆಂದು ಸಂದೇಶಿಸುವ[2] ಶಾಕಲ್ಯರು, ಯಾವುದೇ ಸಂಧಿಯ ಉಚ್ಚಾರಣೆ ಅನಿರುದ್ಧನಿಂದ ನಿಯಮಿಸಲ್ಪಡುತ್ತಿರುವ ಪ್ರಯುಕ್ತ ಸ್ವತಂತ್ರವಾಗಿ ಪ್ರತಿಯೊಂದು ಸಂಧಿಯನ್ನೂ ಅನಿರುದ್ಧನೇ ಉಚ್ಚರಿಸುವವನೆಂಬುದಾಗಿ ಸೂಚ್ಯವಾಗಿ ತಿಳಿಸಿರುವರು

೩. ಬೇರೆ ಬೇರೆ ಆಕಾರದಿಂದ ವಿಶ್ವವನ್ನು ಸಂಯೋಜಿಸುವವನು.[3]

---

ಯತ್ರ ಯದಾ ಏತತ್ ಏಷ ಪರ್ಜನ್ಯಃ ಬಲವದನುಗೃಹ್ಣನ್ ಬಲವದ್ ಯಥಾ ಭವತಿ ತಥಾ ಅನು ವರ್ಷಕಾಲಾನುಸಾರೇಣ । ಉದ್ಗೃಹ್ಣನ್ ಉದ್ಗರ್ಜನ್ನಪಿ ಅಹೋರಾತ್ರೇ ಸಂದಧತ್ ಸಂಮೇಲಯನ್ನುತ ಸಮ್ಮೇಲಯನ್ನಪಿ ವರ್ಷತಿ ತತ್ತದಾ ದ್ಯಾವಾಪೃಥಿವ್ಯಾವಪಿ ಸಮಧಾತಾಂ ಸಂಧಿತೇ ಅಭೂತಾಮಿತ್ಯಾಹುರುತ ಆಹುಃ ಸ್ಮ ತಸ್ಮಾದ್ ವೃಷ್ಟಿಃ ಸಂಧಿಃ ಪರ್ಜನ್ಯಃ ಸಂಧಾತೇತಿ ಭಾವಃ ॥

–ತಾಮ್ರಪರ್ಣೀಯ

೨. 1 'ಪರ್ಜನ್ಯಃ ಸಂಧಾತಾ' (ಐ. ಉ. 2-7-2-1) ಇತ್ಯತ್ರ ಸಂಧಾತೃಶಬ್ದಃ ಉಚ್ಚಾರಯಿತರಿ ಪ್ರಯುಕ್ತಃ ।

2 ಅಥ ಶಾಕಲ್ಯಸ್ಯ . .ಪರ್ಜನ್ಯಃ ಸಂಧಾತಾ.. .

–ಐ ಉ. 2-7-1

' ...ಶಾಕಲ್ಯೋ ವಾಸುದೇವಾದಿರೂಪಿಣಮ್ ।
ತೇಷು ಚೋಚ್ಚಾರಕೇ ಚೈವ ಸ್ಥಿತಮಾಹ ಚತುರ್ವಿಧಮ್ ।

–ಐ. ಉ. ಭಾ.

೩ 3 ವಿವಿಧಾಕಾರೇಣ ವಿಶ್ವಂ ಸಂಯೋಜಯತೀತಿ ಸಂಧಾತಾ।

–ಬ ಗೋ. ಆಧಾರೇಣ (ಭಾ. ತಾ. ನಿ. ಟಿ. 10-94-30)

ವಿಶ್ವದ ಬೇರೆ ಬೇರ ಪದಾರ್ಥಗಳಿಗೆ ಆಯಾಯ ಆಕಾರವನ್ನು ನೀಡಿರುವವನು ಭಗವಂತನು. ಹೀಗೆ ವಿಶ್ವವನ್ನು ವಿವಿಧಾಕಾರದಿಂದ ಸಂಯೋಜಿಸಿರುವ ಪ್ರಯುಕ್ತ ಭಗವಂತನನ್ನು ಮಹಾಶಾಲೀನ ಶ್ರುತಿ 'ಸಂಧಿನ್'—ಎಂದು ಸಂಬೋಧಿಸಿದೆ[1]

ಳ ರಾಮಾದಿರೂಪಗಳಲ್ಲಿ ಅಹಲ್ಯಾದಿಗಳನ್ನು ಗೌತಮಾದಿಗಳಿಂದ ಜೊತೆಗೂಡಿಸಿದವನು[2]

ಶಿ (ಶುಭಾಶುಭಕರ್ಮಗಳನ್ನು ಮಾಡುವವರು) ಆಯಾಯ ಕರ್ಮದ ಶುಭಾಶುಭ ಫಲಗಳನ್ನು ಪಡೆಯುವಂತೆ ಸಂಯೋಜಿಸುವವನು[3]

ಜೀವಾತ್ಮನನ್ನು ಅವನ ಶುಭಾಶುಭ ಕರ್ಮಫಲಗಳಿಂದ ಸಂಯೋಜಿಸುವವನು ಭಗವಂತನೇ ಎಂದು ಪೈಂಗಿಶ್ರುತಿ ಸಂದೇಶಿಸಿದೆ.[4]

ಭಗವಂತನು ಮೂಲರೂಪದಿಂದ ಫಲದಾತೃ ಆಗಿರುವುದಲ್ಲದೆ ತನ್ನ ಅವತಾರಗಳಲ್ಲೂ, ರಾಮಾವತಾರದಲ್ಲಿ ಸುಗ್ರೀವ, ವಿಭೀಷಣಾದಿಗಳು ರಾಜ್ಯಾದಿಗಳನ್ನು ಹೊಂದುವಂತೆಯೂ, ಕೃಷ್ಣಾವತಾರದಲ್ಲಿ ಭಗದತ್ತ, ಉಗ್ರಸೇನಾದಿಗಳು ರಾಜ್ಯಾದಿಗಳನ್ನು ಹೊಂದುವಂತೆಯೂ ಸಂಯೋಜಿಸಿ ತನ್ನ ಸಂಧಾತೃತ್ವಗುಣವನ್ನು ಅಭಿವ್ಯಕ್ತೀಕರಿಸಿರುವನು

---

1 ತವ ಸ್ವತಂತ್ರೋ ನಾಪರೋ.. . ಸಂಧಿನ್ ।
—ಮಹಾಶಾಲೀನ ಶ್ರುತಿ (ಭಾಗ ತಾ. ನಿ. 10-94-30)

ಅಸ್ಯಾ ಏವ ಚಾಶಯಃ 'ನ ಹಿ ಪರಮಸ್ಯ ಕಶ್ಚಿದಪರೋ... .ಯಸ್ಯ ಚ ಶೂನ್ಯತುಲ ಸಂದಧತಃ' ಇತಿ ಭಾಗವತಪದ್ಯೇ ((10-94-30) ಸಂಗೃಹೀತಃ ।

ಳ 2 ರಾಮಾದಿರೂಪೇಣಾಹಲ್ಯಾದೀನಾಂ ಗೌತಮಾದಿಭಿಃ ಸಂಧಾನಕರ್ತೃತ್ವಾತ್ ।
- ಸ. ಸಂ.

ಶಿ 3 ಕರ್ಮಫಲೈಃ ಪುರುಷಾನ್ ಸಂಧತ್ತ ಇತಿ ಸಂಧಾತಾ ।
—ಶಾಂ. ಭಾ.

ಸಂಧತ್ತೇ ಸಂಯೋಜಯತಿ ಕರ್ಮಫಲೈಃ ಪುರುಷಾನಿತಿ ಸಂಧಾತಾ ।
—ಶಾಂ. ಭಾ. ವಿವೃತಿ

4 'ಏಷ ಉ ಏವ ಶುಭಾಶುಭೈಃ ಕರ್ಮಫಲೈರೇನಂ ಸಂಯೋಜಯತಿ....'
—ಪೈಂಗಿಶ್ರುತಿ (ಗೀ. ತಾ. 2-47)

೬ (ನಿರ್ದುಷ್ಟನಾಗಿರುವ ಪ್ರಯುಕ್ತ) ಸಂ ಎನಿಸಿರುವ ತನ್ನನು ತಾನೇ ಧರಿಸಿಕೊಂಡಿರುವವನು[1]

ಭಗವಂತನು ತನ ಪ್ರಭಾವದಿಂದಲೇ ಪ್ರತಿಷ್ಠಿತನಾಗಿರುವನೆಂಬುದಾಗಿ ಛಾಂದೋಗ್ಯೋಪನಿಷತ್ತು ಸಂದೇಶಿಸಿದೆ[2]

೭ ನಿರ್ದುಷ್ಟನಾಗಿರುವವನು ಮತ್ತು ಉಳಿದವರ ಧಾರಣ ಪೋಷಣೆಗಳನ್ನು ನಡೆಸುವವನು[3]

೮ (ಪ್ರಹ್ಲಾದಾದಿ ಭಕ್ತರು ತನ್ನನ್ನು) ಜೊತೆಗೂಡುವಂತೆ ಮಾಡುವವನು[4]

೯ ನಿರ್ದುಷ್ಟನಾಗಿದ್ದು 'ಸಂ' ಎನಿಸಿರುವ ತನ್ನನ್ನೇ (ಏಕಾಂತ ಭಕ್ತರಿಗೆ) ನೀಡುವವನು[5]

ಅಶೋಕವನದಲ್ಲಿದ್ದ ಸೀತಾದೇವಿಗೆ ಶ್ರೀರಾಮನ ಸಂದೇಶವನ್ನು ತಲುಪಿಸಿ, ಸೀತಾದೇವಿಯ ಚೂಡಾಮಣಿಯನ್ನು ಅವನ ಪಾದಾರವಿಂದದಲ್ಲಿಟ್ಟು ನಮಿಸಿದ ಹನುಮಂತನನ್ನು ಆಲಿಂಗಿಸಿಕೊಂಡ ಶ್ರೀರಾಮಚಂದ್ರನು ಅವನಿಗೆ 'ಸ್ವಾತ್ಮಪ್ರದಾನ'ವನ್ನೇ ಅಧಿಕವಾಗಿ ಮಾಡುವನು ಎಂದು

---

೬ 1 'ಅಕಯುಪ್ರವಿಸಂಭೂಮಸಖಹಾ ವಿಷ್ಣುವಾಚಕಾಃ' (ಬೃ ಉ. ಭಾ 5-7-3) ಇತಿ ಶಬ್ದನಿರ್ಣಯಾನುಸಾರೇಣ ನಿರ್ದುಷ್ಟತ್ವಾತ್ ಸಂ ಭಗವಾನ್ । ತಂ ಧತ್ತ ಇತಿ ಸಂಧಾತಾ ।

2 ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ... ’
-ಛಾಂ. ಉ. 7-2-9

೭ 3 ಸಮೀಚೀನತ್ವಾತ್ ಸಮ್ । ಸಕಲಂ ಧತ್ತೇ ಧಾರಯತಿ ಪೋಷಯತಿ ಚೇತಿ ಧಾತಾ । ಸಂ ಚಾಸೌ ಧಾತಾ ಚ ಸಂಧಾತಾ ।

೮ 4 ಪ್ರಣೇಯಾನಾಂ ಪ್ರಹ್ಲಾದಪ್ರಭೃತೀನಾಂ ಸಂಶ್ಲೇಷಯಿತಾ ।
-ಪ ಭ.

೯ 5 ಸಮೀಚೀನಸ್ವರೂಪತಯಾ 'ಸಂ' ನಾಮಕಂ ಸ್ವಾತ್ಮಾನಂ ಏಕಾಂತಭಕ್ತೇಭ್ಯಃ ಧತ್ತೇ ದದಾತೀತಿ ಸಂಧಾತಾ । 'ದಾನೇಽಪಿ ಕೇಚಿತ್' ಇತಿ ಧಾಞ್ಧಾತೋಃ ದಾನಾರ್ಥಕತ್ವಮಭ್ಯುಪಗತಮ್ ।

ಶ್ರೀಮದಾಚಾರ್ಯರು ನಿರೂಪಿಸಿರುವರು[1]

೧೦ (ಮುಕ್ತಿ ಯೋಗ್ಯರಿಗೆ) ಸಮೀಚೀನವಾದ ಮೋಕ್ಷಸುಖವನ್ನು ನೀಡುವವನು[2]

೧೧ (ಸಂಸಾರ ಯೋಗ್ಯರಿಗೆ ತಮೋಯೋಗ್ಯರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಸಂಸಾರವನ್ನೋ ತಮಸ್ಸನ್ನೋ) ನಿಯತವಾಗಿ ನೀಡುವವನು[3]

## ಜಿಜ್ಞಾಸೆ

### [ಕರ್ತಾ ಕಾರಯಿತಾ ಚೈವ]

ಪ್ರ - ಸಂಧಾತಾ ಎಂದು ಅನಿಸಿಕೊಳ್ಳುವ ಪರಮಾತ್ಮನು ತಂದೆ ತಾಯಿಗಳಲ್ಲಿ ಅಂತರ್ಯಾಮಿಯಾಗಿದ್ದು ಅವರ ದ್ವಾರಾ ಎಲ್ಲರ ಧಾರಣ ಪೋಷಣಗಳನ್ನು ಮಾಡುವದಲ್ಲದೆ ಏತದತಿರಿಕ್ತವಾಗಿ ತಾನು ಸ್ವತಃ ಕೂಡ ಧಾರಣ ಪೋಷಣಗಳನ್ನು ಮಾಡುತ್ತಾನೆಂದು 'ಕರ್ತಾ ಕಾರಯಿತಾ ಚೈವ' ಎಂಬ ಪ್ರಮಾಣದಿಂದ ಸಿದ್ಧವಾಗುತ್ತದೆ. ಇಲ್ಲಿ ಸಂಶಯ—ಪಿತೃಕರ್ತೃಕ ಧಾರಣಪೋಷಣಕ್ಕಿಂತ ಅತಿರಿಕ್ತ ಧಾರಣಪೋಷಣಗಳು ಪರಮಾತ್ಮಕರ್ತೃಕಗಳೋ? ಅಥವಾ ಒಂದೇ ಧಾರಣ ಪೋಷಣ, ಉಭಯಕರ್ತೃಕವೋ?

ಉ - ಪಿತೃಕರ್ತೃಕಧಾರಣಪೋಷಣಗಳಿಗೆ ಪರಮಾತ್ಮನು ಕರ್ತನಾಗಿ ತದತಿರಿಕ್ತ ಧಾರಣ ಪೋಷಣಗಳಿಗೂ ಕರ್ತಾ ಆಗಿದ್ದಾನೆ ಪಿತೃಗಳು ನಿದ್ರಾದಿ ಅವಸ್ಥೆಗಳಲ್ಲಿ ಪರವಶರಾಗಿದ್ದಾಗ ಅವರಿಂದ ಮಗುವಿಗೆ ಧಾರಣ ಪೋಷಣಗಳು ಆಗುವುದಿಲ್ಲ. ಆಗ ಇರುವ ಮಗುವಿನ ಧಾರಣ ಪೋಷಣಗಳು ಪರಮಾತ್ಮನಿಂದ ಆಗುವವು ಮತ್ತು ಗರ್ಭದಲ್ಲಿ ಮಗುವು ಇರುವಾಗ ಅದರ ಧಾರಣಪೋಷಣಗಳು ತಂದೆ ತಾಯಿಗಳಿಂದ ಮಾಡಲು ಅಸಾಧ್ಯವಾದುದರಿಂದ ಆ ಧಾರಣ ಪೋಷಣಗಳನ್ನು ಪರಮಾತ್ಮನು ಮಾಡುತ್ತಾನೆ ಬ್ರಹ್ಮರಥವನ್ನು ಸಹಸ್ರಾರು ಜನರು ಸೇರಿ ಎಳೆಯುವಂತೆ ಮಗುವಿನ ಧಾರಣ ಪೋಷಣಗಳನ್ನು ತಂದೆ ತಾಯಿಗಳು ಮತ್ತು ತತ್ತ್ವಾಭಿಮಾನಿ

---

1 'ಸ್ವಾತ್ಮಪ್ರದಾನಮಧಿಕಂ ಪಿತುರಾತ್ಮಜಸ್ಯ ಕುರ್ವನ್ ಸಮಾಶ್ಲಿಷದಮುಂ ಪರಮಾಭಿತುಷ್ಟಃ'

–ಮ ಭಾರ. ತಾ. ನಿ. 7 50

೧೦ 2 ಮುಕ್ತಿಯೋಗ್ಯೇಭ್ಯಃ ಸಂ ಸಮೀಚೀನಂ ದುಃಖಾಮಿಶ್ರಿತಂ ಪೂರ್ಣಂ ಚ ಸುಖಂ ಧತ್ತೇ ದದಾತೀತಿ ಸಂಧಾತಾ ।

೧೧ 3 ನಿತ್ಯಸಂಸಾರಿಭ್ಯಃ ತಮೋಯೋಗ್ಯೇಭ್ಯಶ್ಚ ತತ್ತದ್ಯೋಗ್ಯತಾಮನತಿಕ್ರಮ್ಯ ಸಮ್ಯಕ್ ನಿಯತತಯಾ ಸಂಸಾರಂ ತಮಶ್ಚ ಧತ್ತೇ ದದಾತೀತಿ ಸಂಧಾತಾ ।

ದೇವತೆಗಳಿಂದ ಮಾಡಿಸುತ್ತಾ ಲೀಲೆಯಿಂದ ಪರಮಾತ್ಮನು ತಾನೂ ಕೂಡ ಧಾರಣಪೋಷಣ ಗಳನ್ನು ಮಾಡುತ್ತಾನೆ ಈ ವಿಷಯವನ್ನೇ 'ಕರ್ತಾ ಕಾರಯಿತಾ ಚೈವ' ಎಂಬ ಪ್ರಮಾಣವು ಹೇಳುತ್ತದೆ



## ೨೦೨ ಸಂಧಿಮಾನ್

೧ ಅಕ್ಷರ ದ್ವಯ ಸಮಾಯೋಗ ರೂಪವಾದ ಸಂಧಿಯಿಂದ ಪ್ರತಿಪಾದ್ಯನಾಗಿರುವವನು[1]

ತೈತ್ತಿರೀಯೋಪನಿಷತ್ತಿನ ಶೀಕ್ಷಾಧ್ಯಾಯದಲ್ಲಿ ವೇದಸಂಹಿತೆಯ ರಹಸ್ಯವನ್ನು ಪ್ರತಿಪಾದಿಸುತ್ತ ಆಕಾಶದಲ್ಲಿರುವ ಆಕಾಶನಾಮಕನಾದ ನಾರಾಯಣಪ್ರದ್ಯುಮ್ನರೂಪಿ ಭಗವಂತನೂ ಜಲದಲ್ಲಿರುವ ಅಮ್ನಾಮಕನಾದ ವಾಸುದೇವ ಪ್ರದ್ಯುಮ್ನರೂಪಿ ಭಗವಂತನೂ ವಿದ್ಯೆಯಲ್ಲಿರುವ ವಿದ್ಯಾನಾಮಕನಾದ ಸಂಕರ್ಷಣಪ್ರದ್ಯುಮ್ನರೂಪಿ ಭಗವಂತನೂ ಪ್ರಜೆಗಳಲ್ಲಿರುವ ಪ್ರಜಾನಾಮಕನಾದ ಪ್ರದ್ಯುಮ್ನ ರೂಪಿ ಭಗವಂತನೂ ವಾಗಿಂದ್ರಿಯದಲ್ಲಿರುವ ವಾಙ್ನಾಮಕನಾದ ಅನಿರುದ್ಧಪ್ರದ್ಯುಮ್ನ ರೂಪಿ ಭಗವಂತನೂ ಸಂಧಿಪ್ರತಿಪಾದ್ಯನೆಂದು ಹೇಳಲಾಗಿದೆ.[2]

---

೧ 1 ಅಕ್ಷರದ್ವಯಸಮಾಯೋಗರೂಪಃ ಸಂಧಿಃ ಪ್ರತಿಪಾದಕತಯಾ ಅಸ್ಯಾಸ್ತೀತಿ ಸಂಧಿಮಾನ್ ।

2 ಅಥಾತಃ ಸಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಂಚಸ್ವಧಿಕರಣೇಷು । ಅಧಿಲೋಕಮಧಿಜ್ಯೌತಿಷಮಧಿವಿದ್ಯಮಧಿಪ್ರಜಮಧ್ಯಾತ್ಮಮ್ । ..ಅಥಾಧಿಲೋಕಮ್। ...ಆಕಾಶಃ ಸಂಧಿಃ । ...ಅಥಾಧಿಜ್ಯೌತಿಷಮ್ । ...ಆಪ: ಸಂಧಿಃ । ಅಥಾಧಿವಿದ್ಯಮ್ । ..ವಿದ್ಯಾ ಸಂಧಿಃ । .ಅಥಾಧಿಪ್ರಜಮ್ । ...ಪ್ರಜಾ ಸಂಧಿಃ । . .ಅಥಾಧ್ಯಾತ್ಮಮ್ । . ವಾಕ್ ಸಂಧಿಃ...।

-ತೈ ಉ. 1-3 .6

ನಾರಾಯಣಾದಿರೂಪಾಣಿ ಲೋಕಾದಿಷು ಚ ಪಂಚಸು । ಅನಿರುದ್ಧಾವಸಾನಾನಿ ಧ್ಯೇಯಾನಿ ಚತುರಾತ್ಮನಾ । ವಾಸುದೇವಾದಿಕಾನ್ಯೇವ ತಾನಿ ಪೂರ್ವೋತ್ತರಾರ್ಣಯೋಃ। ಸಂಹಿತಾಯಾಸ್ತಥಾ ಸಂಧೌ ಸಂಧಾನೇ ಚಾಪಿ ಕೃತ್ಸ್ನಶಃ ।

-ತೈ. ಉ. ಭಾ.

ಹಾಗೆಯೇ ಐತರೇಯೋಪನಿಷತ್ತಿನಲ್ಲಿ 'ಸಂಹಿತಾ' ಎನಿಸಿರುವ ಅಕ್ಷರದ್ವಯಸಂಯೋಗರೂಪವಾದ ಸಂಧಿಯ ರಹಸ್ಯವನ್ನು ತಿಳಿಸುತ್ತ ಯಾರು ವಿಷ್ಣು ಶಬ್ದದ ಣಕಾರದಿಂದ ಪ್ರತಿಪಾದ್ಯವಾದ ವಿಷ್ಣುವಿನ ಪೂರ್ಣ ಬಲವನ್ನೂ, ಷಕಾರದಿಂದ ಪ್ರತಿಪಾದ್ಯವಾದ ದೇಶತಃ ಕಾಲತಃ ಹಾಗೂ ಗುಣತಃ ವ್ಯಾಪ್ತಿಯನ್ನೂ, ಸರ್ವಪ್ರೇರಕತ್ವವನ್ನೂ ಸಕಲ ವೈದಿಕ ಸಂಧಿಗಳಿಂದಲೂ ಪ್ರತಿಪಾದ್ಯವನ್ನಾಗಿ ತಿಳಿಯುವನೋ ಅವನು ಸಂಪೂರ್ಣಬಲ ಸರ್ವಪ್ರೇರಕತ್ವ, ಸಾಮರ್ಥ್ಯಾದಿಗಳಿಂದ ಕೂಡಿದ ಶ್ರೀ ಹರಿಯನ್ನು ತಿಳಿಯುವನು—ಎಂದು ಸಂದೇಶಿಸುವುದರ ಮೂಲಕ ಸಕಲ ವೈದಿಕ ಸಂಧಿಗಳಿಂದಲೂ ವಿಷ್ಣು ಶಬ್ದಾರ್ಥವೇ ಪ್ರತಿಪಾದ್ಯವಾಗಿದೆ ಎಂದು ಸಾರಲಾಗಿದೆ.[1]

ಸಕಲ ವೇದಗಳೂ ವಿಷ್ಣುನಾಮಾರ್ಥಗಳಾಗಿರುವ ಪ್ರಯುಕ್ತ ವೇದದ ಸಕಲ ಶಬ್ದಗಳ ಸಂಧಿಗಳೂ ಶ್ರೀ ವಿಷ್ಣುವಾಚಕಗಳೇ ಆಗುವವು ಎಂದು ಐತರೇಯ ಸಂಹಿತೆ ಸಮರ್ಥಿಸಿದೆ[2]

ವಿಷ್ಣುನಾಮದ ಸಂಹಿತೆಯಿಂದ ಅನೇಕ ಭಗವದ್ರೂಪಗಳು ವಾಚ್ಯಗಳಾಗಿವೆ. ಐತರೇಯೋಪನಿ

---

1 ತಸ್ಯೈ ವಾ ಏತಸ್ಯೈ ಸಂಹಿತಾಯೈ ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ ಸ ಯೋ ಹೈತೌ ಣಕಾರಷಕಾರಾವನುಸಂಹಿತಮೃಚೋ ವೇದ ॥

-ಐ ಉ 2-8-7-3

ಯಃ ಏತೇನ ಣ ಇತಿ ಶಬ್ದೇನಾಕ್ರಿಯಮಾಣಂ ವಿಷ್ಣೋಃ ಪೂರ್ಣಬಲಂ ಷಶಬ್ದೇನಾಽಕ್ರಿಯಮಾಣಂ ದೇಶತಃ ಕಾಲತೋ ಗುಣತಶ್ಚಾಽತತತ್ವಂ ಚರ್ಚಾಂ ಸರ್ವಸಂಹಿತಾಮನು ತದರ್ಥತ್ವೇನ ವೇದ, ಅಕ್ಷರದ್ವಯಸಂಯೋಗರೂಪಯಾ ಸಂಹಿತಯೈತದೇವ ಸರ್ವತ್ರೋಚ್ಯತ ಇತಿ ಸ ಸಂಪೂರ್ಣಬಲಂ ಸರ್ವಪ್ರಣೇತೃತ್ವಶಕ್ತ್ಯಾದಿಯುಕ್ತಂ ಚ ವಿಷ್ಣುಂ ವೇದ । ಅಥೇತ್ಯಾದಿಕಾ ಅಪಿ ಸಂಹಿತಾರೂಪಾ ಏವ ಪದವರ್ಣಯೋಃ ಪೃಥಗನಭಿವ್ಯಾಹಾರಾತ್ ।

-ಐ ಉ ಭಾ.

* ವಿಷ್ಣುನಾಮಾರ್ಥರೂಪತ್ವಂ ಸಂಹಿತಾದೇರಥಾಬ್ರವೀತ್ ।
ಣಕಾರಂ ಚ ಷಕಾರಂ ಚ ಬಲಚೇಷ್ಟಾತ್ಮಕಂ ವದನ್ ।
ತಜ್ಜ್ಞಾನ ಪೂರ್ವಕತ್ವೇನ ಸಂಹಿತಾಧ್ಯಯನಂ ತಥಾ

-ಅನು. ವ್ಯಾ 1-4-38, 39

2 ವಿಷ್ಣುನಾಮಾರ್ಥ ರೂಪತ್ವಾದ್ ವೇದಾನಾಮಪಿ ಸರ್ವಶಃ ।
ಅನ್ಯೇಷಾಮಪಿ ಶಬ್ದಾನಾಂ ಸಂಹಿತಾ ವಿಷ್ಣುವಾಚಕಾಃ ।

-ಐತರೇಯ ಸಂಹಿತಾ (ಐ. ಉ. ಭಾ. 2-7-1-1)

ಷತ್ತಿನ ಸಂಹಿತೋಪನಿಷ್ಮತಿನಲ್ಲಿ ಬೇರೆ ಬೇರೆ ಋಷಿಗಳು ವಿಷ್ಣುನಾಮದ ಸಂಹಿತಾದಿಂದ ಪ್ರತಿಪಾದ ಗಳಾಗಿ ನರಸಿಂಹ ಪ್ರದ್ಯುಮ್ನಾದಿ ಬೇರೆ ಬೇರೆ ಭಗವದ್ರೂಪಗಳನ್ನು ಉಲ್ಲೇಖಿಸಿರುವುದನ್ನು ತೋರಿಸಿ ಕೊಡಲಾಗಿದೆ.[1]

ಹೀಗೆ ಭಗವಂತನು ಸಕಲಶಬ್ದಗಳ ಸಂಹಿತಾರೂಪಗಳಾದ ಸಂಧಿಗಳಿಂದ ಪ್ರತಿಪಾದ್ಯನಾಗಿ ರುವ ಪ್ರಯುಕ್ತ 'ಸಂಧಿಮಾನ್' ಎನಿಸುವನು.

೨ ವರ್ಣದ್ವಯ ಸಮಾಯೋಗ ರೂಪಗಳಾದ ಸಂಧಿಗಳಲ್ಲಿ ಇರುವವನು.[2]

ಸಂಧಿಗಳಿಂದ ಪ್ರತಿಪಾದ್ಯಗಳಾದ ಭಗವದ್ರೂಪಗಳು ಸಂಧಿಗಳಲ್ಲಿ ಇರುವವು ಕೂಡಾ.[3]

೩ ಗೆಳೆಯನಾಗಿರುವವನು[4]

---

1 ಅಥಾತಃ ಸಂಹಿತಾಯಾ ಉಪನಿಷತ್. ।

—ಐ. ಉ. 2-7-1-1

ವಿಷ್ಣುನಾಮ್ನಿ ಷಕಾರಸ್ಯ ಣಕಾರಸ್ಯ ಚ ಸಂಹಿತಾಮ್ ।
ವಿಷ್ಣೋಸ್ತು ಬಹುರೂಪಾಣಾಂ ವಾಚಕಾಮೃಷಯೋ ವಿದುಃ ।

-ಐತರೇಯ ಸಂಹಿತಾ (ಐ. ಉ. ಭಾ.)

೨ 2 ವರ್ಣದ್ವಯಸಮಾಯೋಗರೂಪಸಂಧಿಃ ಅವಸ್ಥಿತ್ಯಾಧಾರತಯಾಽಸ್ಯಾಸ್ತೀತಿ ಸಂಧಿಮಾನ್ ।

3 ..ತಾನಿ ಪೂರ್ವೋತ್ತರಾರ್ಣಯೋಃ । ಸಂಹಿತಾಯಾಸ್ತಥಾ ಸಂಧೌ ಸಂಧಾನೇ ಚಾಪಿ ಕೃತ್ಸ್ನಶಃ । ಯೋ ವೇದೈತಾನಿ ರೂಪಾಣಿ.. ।

-ತೈ. ಉ. ಭಾ. 1-3

ವರಾಹೋ ವಾಮನಃ ಸಿಂಹ ಇತಿ ರೂಪತ್ರಯಂ ಹರೇಃ ।
ಪೂರ್ವೋತ್ತರಾರ್ಣಮಧ್ಯೇಷು ಸ್ಥಿತಮುಕ್ತಂ ಸನಾತನಮ್ ।
ಮಾಂಡೂಕೇಯೈರ್ಹಿ ಶಾಕಲ್ಯೋ ವಾಸುದೇವಾದಿರೂಪಿಣಮ್ ।
ತೇಷು ಚೋಚ್ಚಾರಕೇ ಚೈವ ಸ್ಥಿತಮಾಹ ಚತುರ್ವಿಧಮ್ ॥

-ಐ. ಉ. ಭಾ. 2-7-2-1

೩ 4 ಸಂಧಿಃ ಸಂಧಾನಂ ಸಖ್ಯಮ್, ತದ್ವಾನ್ ಸಂಧಿಮಾನ್ ।

-ವಿ. ರಾ.

ಭಗವಂತನು ಜೀವಾತ್ಮರ ಜೊತೆಗೇ ಇರುವ ಸಖನು ಆದರೆ ಅವನು ತನ್ನ ಗೆಳೆಯನೆಂಬುದು ಜೀವಾತ್ಮನಿಗೆ ತಿಳಿದಿಲ್ಲ. ಹೇಗೆ ರಾಜನು ತನಗೆ ಪ್ರಿಯನೆಂಬುದು ಭೃತ್ಯನಿಗೆ ತಿಳಿದಿರುವುದಿಲ್ಲವೋ ಅಂತೆಯೇ ಎಂದು ದಕ್ಷಪ್ರಜಾಪತಿ ಭಗವಂತನನ್ನು ಸ್ತುತಿಸಿರುವನು[1]

೪ ಜ್ಞಾನಿಗಳು ನಿವೇದಿಸುವ ಕರ್ಮಾರ್ಪಣೆ ಉಳ್ಳವನು[2]

೫ ರಾಮಾವತಾರದಲ್ಲಿ ಸುಗ್ರೀವ ವಿಭೀಷಣಾದಿಗಳ ಜೊತೆ ಸಂಧಾನ ಉಳ್ಳವನು.[3]

೬ ಜೀವಾತ್ಮರ ಜೊತೆ ನಿತ್ಯ ಸಂಬಂಧ ಉಳ್ಳವನು

ಭಗವಂತನು ಜೀವಾತ್ಮರ ಶರೀರದಲ್ಲೇ ಯಾವತ್ತೂ ಅವರ ಜೊತೆಗೇ ಇರುವನು

೭ ಮುಕ್ತ ಜೀವಾತ್ಮರ ಸೇರುವಿಕೆ ಉಳ್ಳವನು[5]

ಭಗವಂತನ ಅನುಗ್ರಹದಿಂದಾಗಿ ಜೀವಾತ್ಮನು ಲಿಂಗದೇಹವನ್ನು ತ್ಯಜಿಸಿ ಭಗವಂತನನ್ನು

---

1 ನ ಯಸ್ಯ ಸಖ್ಯಂ ಪುರುಷೋ ವೇತ್ತಿ ಸಖ್ಯುಃ ಸಖಾ ವಸನ್ ಸಂವಸತಃ ಪುರೇಽಸ್ಮಿನ್ ।
ಗುಣೋ ಯಥಾ ಗುಣಿನೋಽವ್ಯಕ್ತದೃಷ್ಟಿಸ್ತಸ್ಮೈ ಮಹೇಶಾಯ ನಮಸ್ಕರೋಮಿ ॥
—ಭಾಗ. 6 4-24

'ಯಥಾ ರಾಜ್ಞಃ ಪ್ರಿಯತ್ವಂ ತು ಭೃತ್ಯಾ ವೇದ ನ ಚಾಽತ್ಮನಃ ।
ತಥಾ ಜೀವೋ ನ ಯತ್ಸಖ್ಯಂ ವೇತ್ತಿ ತಸ್ಮೈ ನಮೋಽಸ್ತು ತೇ'
—ಸ್ಕಾಂದ (ಭಾಗ ತಾ. ನಿ)

೪ 2 ಸಂಧಿಃ ಜ್ಞಾನಿಕೃತಂ ಕರ್ಮಾರ್ಪಣಮ್ । ತದ್ವಾನ್ ।
—ವಿ ರಾ

೫ 3 ಸುಗ್ರೀವ ವಿಭೀಷಣಾದಿಭಿಃ ಸಂಧಿವಿಶಿಷ್ಟತ್ವಾತ್ ಸಂಧಿಮಾನ್ ।
—ಸ. ಸಂ.

೬ 4 ಜೀವಾತ್ಮಭಿಃ ನಿತ್ಯಂ ಶ್ಲೇಷಯುಕ್ತತ್ವಾತ್ ಸಂಧಿಮಾನ್ । 'ಸತ್ಯಯೋಗೇ ಮತುಪ್' ।

೭ 5 ಮುಕ್ತ ಜೀವಾತ್ಮನಾಂ ಸಂಧಾನವಿಶಿಷ್ಟತ್ವಾತ್ ಸಂಧಿಮಾನ್ ।

ಸೇರಿ ತನ್ನ ಸಹಜರೂಪವನ್ನು ಹೊಂದುವನೆಂದು ಉಪನಿಷತ್ತು ಸಂದೇಶಿಸಿದೆ[1]

೮ ಪ್ರಲಯಕಾಲದಲ್ಲಿ ತನ್ನ ಉದರದಲ್ಲಿ ಎಲ್ಲ ಪದಾರ್ಥಗಳ ಸೇರುವಿಕೆ ಉಳ್ಳವನು.[2]

೯ ಪ್ರಹ್ಲಾದಾದಿ ಭಕ್ತರ ಜೊತೆ ವಿಶೇಷವಾಗಿ ನಿತ್ಯ ಸೇರಿಕೊಂಡಿರುವವನು.[3]

೧೦ ಇಂದ್ರನ ಜೊತೆಗೇ ಇರುವ ಗೆಳೆಯನು.[4]

ಭಗವಂತನು ಇಂದ್ರನ ಜೊತೆಗೇ ಇರುವ ಗೆಳೆಯನೆಂಬುದಾಗಿ ವಿಷ್ಣುಸೂಕ್ತವು ಸಂದೇಶಿಸಿದೆ[5]

## ಜಿಜ್ಞಾಸೆ

### [ಅನೇಕ ಪ್ರಕಾರದ ಬಲಚೇಷ್ಟೆಗಳು]

ಪ್ರ – ವೇದದ ಎಲ್ಲ ಅಕ್ಷರದ್ವಯ ಸಂಧಿ ಸ್ಥಳಗಳಲ್ಲಿ ವಿಷ್ಣುನಾಮದಲ್ಲಿರುವ ಣ ಕಾರಾರ್ಥ ಬಲವು ಮತ್ತು ಷ ಕಾರಾರ್ಥಚೇಷ್ಟಕತ್ವಗಳು ಹೇಳಲ್ಪಡುವವಾದರೆ ವೇದದ ಎಲ್ಲ ಸಂಧಿಗಳು ಹೇಳಿದ್ದನ್ನೇ ಹೇಳುತ್ತವೆಂದು ಆಗಿ ಪುನರುಕ್ತಿದೋಷವು ಪ್ರಾಪ್ತವಾಯಿತಲ್ಲವೇ?

---

1 ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।

–ಛಾಂ. ಉ. 8-4-2

೮ 2 ಪ್ರಲಯಕಾಲೇ ಸ್ವೋದರೇ ಸರ್ವೇಷಾಂ ಪದಾರ್ಥಾನಾಂ ಸಂಧಾನೇನ ವಿಶಿಷ್ಟತ್ವಾತ್ ಸಂಧಿಮಾನ್ ।

೯ 3 . ...ತೈಸ್ಸಂಧಿರ್ನಿತ್ಯೋಽಸ್ಯೇತಿ ಸಂಧಿಮಾನ್ । ನಿತ್ಯಯೋಗೇ ಮತುಪ್ ॥

–ಪ. ಭ.

೧೦ 4 ಇಂದ್ರೇಣ ಸಾಕಂ ಸಂಧಿಃ ಸಾಹಿತ್ಯಂ ಸಖ್ಯಂ ಚ ಅಸ್ಯಾಸ್ತೀತಿ ಸಂಧಿಮಾನ್ ।

5 ಇಂದ್ರಸ್ಯ ಯುಜ್ಯಃ ಸಖಾ ।

–ಋ. ವೇ. 22-19

......ಇಂದ್ರಸ್ಯ ಸಹಿತಃ ಸಖಾ ।

–ಋ. ಭಾ.

೬ – ಚೇಷ್ಟೆಗಳು ಅನಂತ ಪ್ರಕಾರವುಳ್ಳವುಗಳು. ಹೇಗೆಂದರೆ ಉತ್ಪತ್ತ್ಯನುಕೂಲ ಚೇಷ್ಟೆ, ಶಿಕ್ಷಣಾರ್ಥ ಚೇಷ್ಟೆ, ನಾಶಾರ್ಥ ಚೇಷ್ಟೆ, ಜ್ಞಾನಾರ್ಥ ಚೇಷ್ಟೆ ಇತ್ಯಾದಿಗಳು ಅನೇಕ ಪ್ರಕಾರದ್ದು ಇರುವದರಿಂದ ಆ ಚೇಷ್ಟೆಗೆ ಅನುಕೂಲವಾದ ಬಲಗಳು ಅನೇಕ ಪ್ರಕಾರದ್ದು ಇರುವದರಿಂದ ವೇದದ ಸಂಧಿಗಳು ಆ ಅನೇಕ ಪ್ರಕಾರವುಳ್ಳ ಬಲಚೇಷ್ಟೆಗಳನ್ನು ಪ್ರತಿಪಾದಿಸುವದರಿಂದ ಪುನರುಕ್ತಿ ದೋಷವು ಇರುವದಿಲ್ಲ



## ೨೦೩ ಸ್ಥಿರಃ

೧ ಸ್ವರೂಪತಃ ನಿರ್ವಿಕಾರನಾಗಿ ಇರುವವನು ಮಾನಸಿಕವಾಗಿ ಅಚಂಚಲ.[1]

ಭಗವಂತನು ಯಾವುದೇ ವಿಕಾರಕ್ಕೆ ಒಳಗಾಗುವುದಿಲ್ಲ ಹೀಗೆ ಸ್ವರೂಪತಃ ಸ್ಥಿರನಾದ ಅವನ ಸ್ವರೂಪಾತ್ಮಕವಾದ ಮನಸ್ಸು ಯಾವಾಗಲೂ ಅಚಂಚಲವಾಗಿಯೇ ಇರುವಂತಹದ್ದು

ಭಗವಂತನಲ್ಲದೆ ಮತ್ತೊಬ್ಬನು ಈ ಸಮಸ್ತ ಪ್ರಪಂಚಕ್ಕೆ ಕರ್ತೃ ಎಂಬುದು ಕೂಡಲಾರದ ಪ್ರಯುಕ್ತ ಭಗವಂತನೇ ಸರ್ವಕರ್ತೃ ಎಂದು ಒಪ್ಪಲೇಬೇಕು ಆನಂದಾತಿಶಯದಿಂದಷ್ಟೇ ಇಂತಹ ಮಹಾ ಪ್ರವೃತ್ತಿಯಲ್ಲಿ ಭಗವಂತನು ತೊಡಗಬಹುದಾದ್ದರಿಂದ ಸರ್ವಕರ್ತೃ ಆದ ಅವನು ಸುಖಿ, ಪೂರ್ಣನೂ ಆಗಿದ್ದಿರಲೇಬೇಕು ಗುಣಪೂರ್ಣವಾದವನಷ್ಟೇ ಸುಖಪೂರ್ಣನಾಗಲು ಸಾಧ್ಯವಾದುದರಿಂದ ಅವನು ಗುಣಪೂರ್ಣನೂ ಆಗಿದ್ದಿರಬೇಕು ಸ್ವರೂಪತ ಹಾಗೂ ಮಾನಸಿಕವಾಗಿ ಸುಸ್ಥಿರನಾಗಿರುವವನಷ್ಟೇ ಸರ್ವಕರ್ತೃ ಆಗಬಹುದಾದ್ದರಿಂದ ಸರ್ವಕರ್ತೃ ಆದ ಭಗವಂತನು ಸುಸ್ಥಿರನು. ಸ್ವರೂಪತಃ ನಿರ್ವಿಕಾರನಾಗಿದ್ದು, ಮಾನಸಿಕವಾಗಿ ಅಚಂಚಲನಾಗಿದ್ದು ಸುಸ್ಥಿರನಾಗಿರುವುದರಿಂದಲೇ ಭಗವಂತನು ಆಸ್ತಿಕ – ವಸ್ತುಗಳ ಅಸ್ತಿತ್ವದ ಬಗ್ಗೆ ದೃಢನಂಬಿಕೆ ಉಳ್ಳವನು ಆಸ್ತಿಕನಾಗಿರುವುದರಿಂದಲೇ ಮುಖ್ಯವಾಗಿ ಮನನ ನಡೆಸುತ್ತಿರುವವನು, ಮನನ ನಡೆಸುತ್ತಿರುವುದರಿಂದಲೇ ವಿಜ್ಞಾತೃ–ವಿಶೇಷತಃ ಜ್ಞಾನಿಯಾಗಿರುವವನು ವಿಜ್ಞಾತೃ ಆಗಿರುವುದರಿಂದಲೇ ನಿರ್ದೋಷ ಹಾಗೂ ಸರ್ವನಿಯಾಮಕ'— ಹೀಗೆ ಸನತ್ಕುಮಾರರು ನಾರದರಿಗೆ ಭಗವಂತನಲ್ಲಿ ಪರಸ್ಪರಸಾಪೇಕ್ಷ ಗುಣಗಳನ್ನು ಪ್ರತಿಪಾದಿಸಿ, ಅವನನ್ನು ಆಯಾಯ ಗುಣಸ್ವರೂಪಿಯನ್ನಾಗಿ ಉಪಾಸಿಸಬೇಕೆಂದು ಸಂದೇಶಿಸಿದಾಗ,[2] ಅವನ ಸರ್ವಕರ್ತೃತ್ವ

---

೧ 1 ನಿರ್ವಿಕಾರತಯಾ ತಿಷ್ಠತೀತಿ ಸ್ಥಿರಃ ।

ನಿಶ್ಚಲತ್ವಾತ್ ಸ್ಥಿರಃ । -ವಿ. ರಾ.

2 ಸ ಕರ್ತಾ ಭಗವಾನ್ ವಿಷ್ಣುರ್ಯನ್ನಿರ್ದೋಷೋ ನಿಯಾಮಕಃ । ವಿಶಿಷ್ಟಜ್ಞಾನರೂಪಶ್ಚ ಸಾಮಾನ್ಯಜ್ಞಾನರೂಪಕಃ । ನಿತ್ಯಶ್ರದ್ಧಾಸ್ವರೂಪಶ್ಚ ತಥೈವ ಸ್ಥೈರ್ಯ-

ದಿಂದ ಸಿದ್ಧವಾಗುವ ಹಾಗೂ ಅವನು ಆಸ್ತಿಕನೆನ್ನಲು ಅವನಲ್ಲಿ ಅವಶ್ಯವಾಗಿ ಒಪ್ಪಬೇಕಾದ ಸ್ಥಿರತ್ವ ಗುಣವು ಅವನ ಸ್ವರೂಪಾತ್ಮಕವೆಂದು ಉಪಾಸಿಸಲು ಬೋಧಿಸಿರುವರು[1]

ಋಗ್ವೇದದಲ್ಲಿ, ಇಂದ್ರನಾಮಕ ಭಗವಂತನು ತನ್ನ ಅರಾಧನೆಯಿಂದ ವಿಮುಖರಾದ ಅಸುರರನ್ನು ಅಂತರಿಕ್ಷ ಹಾಗೂ ಪೃಥಿವಿಯಿಂದ ಕೆಳಗಟ್ಟುವನೆಂದು ತಿಳಿಸುವಾಗ ಅವನಲ್ಲಿಯು ಸ್ಥೈರ್ಯ ಗುಣವನ್ನು ಉಲ್ಲೇಖಿಸಲಾಗಿದೆ[2] ಧರಣೀ ದೇವಿ ಭಗವಂತನ ಅಸಾಧಾರಣ ಗುಣಗಳಾಗಿ ಉಲ್ಲೇಖಿಸಿದ ಗುಣಗಳಲ್ಲಿ ಸ್ಥೈರ್ಯವೂ ಒಂದು[3]

೨ ಸ್ಥಿರಗಳೆಂದೆನಿಸಿರುವ ಭೂಮಿ, ಪರ್ವತ ಹಾಗೂ ವೃಕ್ಷಗಳು ಸ್ಥಿರಗಳಾಗಿರುವಂತೆ

---

ರೂಪಕಃ । ಸ ಏವ ಸರ್ವಕರ್ತಾ ಚ ಸಂಪೂರ್ಣಾನಂದರೂಪಕಃ । ಸ ಚ ಸರ್ವಗುಣೈಃ ಪೂರ್ಣೋ ಭೂಮೇತ್ಯುಚ್ಯತೇ ತತಃ । ಯದಧೀನಂ ವಿನಾ ನಾನ್ಯತ್ ಕಿಂಚಿದಸ್ತಿ ಕುತಶ್ಚನ । ಪೂರ್ಣತ್ವಾತ್ ಸುಖರೂಪೋಽಸೌ ಸರ್ವಕರ್ತಾ ಸುಖತ್ವತಃ । ಕರ್ತೃತ್ವಾತ್ ಸುಸ್ಥಿರಶ್ಚಾಸೌ ಸ್ಥಿರತ್ವಾದಾಸ್ತಿಕಸ್ತಥಾ । ಅಸ್ತಿಕತ್ವಾಚ್ಚ ಮಂತಾಽಸೌ ವಿಜ್ಞಾತಾ ಚ ತತೋ ಹರಿಃ ವಿಜ್ಞಾತೃತ್ವಾಚ್ಚ ನಿರ್ದೋಷಃ ಸರ್ವಸ್ಯಾಪಿ ನಿಯಾಮಕಃ । ’

–ಪರಮಸಾರ (ಛಾಂ ಉ. ಭಾ. 7–2–8)

1 ಯದಾ ವೈ ನಿಸ್ತಿಷ್ಠತ್ಯಥ ಶ್ರದ್ಧಧಾತಿ ನಾನಿಸ್ತಿಷ್ಠನ್ ಶ್ರದ್ದಧಾತಿ ನಿಸ್ತಿಷ್ಠನ್ನೇವ ಶ್ರದ್ದಧಾತಿ ನಿಷ್ಠಾ ತ್ವೇವ ವಿಜಿಜ್ಞಾಸಿತವ್ಯೇತಿ... ’

–ಛಾಂ. ಉ. (7–2–5)

‘ಸ ಭಗವಾನ್ ವಿಷ್ಣುಃ.. .ತಥೈವ ಸ್ಥೈರ್ಯ ರೂಪಕಃ । ...ಸ್ಥಿರತ್ವಾದಾಸ್ತಿಕಸ್ತಥಾ ।’

–ಪರಮಸಾರ (ಛಾಂ. ಉ. ಭಾ.)

2 ಪ್ರಯದ್ದಿವೋ ಹರಿವ ಸ್ಥಾತರುಗ್ರ ನಿರವ್ರತಾ ಅಧಮೋ ರೋದಸ್ಯೋಃ ।

–ಋ. ವೇ. 33-5

‘ತಾನವ್ರತಾನ್ ಸ್ವರ್ಗತಃ ಖಾತ್ ಪೃಥಿವ್ಯಾ ನಿರಧಮಸ್ತ್ವಂ ಸ್ಥೈರ್ಯವಾನಿಂದ್ರಿಯೇಶಃ’

–ಋ. ಭಾ.

3 ‘ಗಾಂಭೀರ್ಯಂ ಸ್ಥೈರ್ಯಮಾಸ್ತಿಕ್ಯಂ.... ನಿತ್ಯಾ ಯತ್ರ ಮಹಾಗುಣಾಃ’

–ಭಾಗ. 1-16-28

* ಸ್ಥೈರ್ಯಂ ಸ್ಥಿರಚಿತ್ತತಾ–ಇತಿ ಪ್ರಾಚೀನವ್ ।

ಅನುಗ್ರಹಿಸುವವನು[1]

ಭೂಮಿ, ಪರ್ವತಗಳು ಹಾಗೂ ಮೋಕ್ಷ ಸ್ಥಿರವೆನಿಸಿವೆ[2] ಇವುಗಳಿಗೆ ಸ್ಥಿರತ್ವವನ್ನು ನೀಡಿರುವವನು ಭಗವಂತನೇ ಭೂಮಿಯು ಸ್ಥಿರವಾಗಿ ಇರುವಂತೆ ನೋಡಿಕೊಳ್ಳುತ್ತಿರುವವು 'ಭೂಧರ' ಎಂದೇ ಎನಿಸಿರುವ ಪರ್ವತಗಳು ಆ ಪರ್ವತಗಳ ಸ್ಥೈರ್ಯವಾದರೂ ತನ್ನ ವಿಭೂತಿರೂಪದಿಂದ ನಿಯಂತ್ರಿತವಾಗಿರುವಂತಹದ್ದೆಂದು ಶ್ರೀ ಕೃಷ್ಣನು ಸಂದೇಶಿಸಿರುವನು[3] ಅಲ್ಲದೆ ಭೂಮಿಯನ್ನೊಳಗೊಂಡ ಬ್ರಹ್ಮಾಂಡವನ್ನು ಕೂರ್ಮರೂಪಿ ಭಗವಂತನು ಸ್ಥಿರವಾಗಿ ಹೊತ್ತುಕೊಂಡಿರುವುದರಿಂದಲೇ[4], ಅಂತಹ ಕೂರ್ಮನನ್ನು ಆಶ್ರಯಿಸಿರುವ ವಾಯುವಿನ ಆಧಾರ ಪಡೆದು ಶೇಷನು ಭೂಮಿಯನ್ನು ಸ್ಥಿರವಾಗಿ ಹೊತ್ತುಕೊಳ್ಳಲು ಸಾಧ್ಯವಾಗಿದೆ ಹೀಗೆ ಶೇಷನು ಸ್ಥಿರವಾಗಿ ಹೊತ್ತುಕೊಂಡಿರುವುದರಿಂದಲೇ ಪೃಥ್ವಿಯು ಸ್ಥಿರವಾಗಿ ಇದೆ ಹಾಗೆಯೇ ಮೋಕ್ಷವೆನಿಸುವ ಅನಂತಾಸನ, ವೈಕುಂಠ ಹಾಗೂ ನಾರಾಯಣಪುರ ಎಂಬ ಮೂರು ಲೋಕಗಳನ್ನೂ ಮೂರು ತಲೆಗಳುಳ್ಳ ಶ್ರೀ ಹರಿಯು ತನ್ನ ಮೂರು ತಲೆಗಳಲ್ಲಿ ಸ್ಥಿರವಾಗಿ ಧರಿಸಿಕೊಂಡಿರುವ[5] ಪ್ರಯುಕ್ತ ಮೋಕ್ಷಲೋಕವು ಸ್ಥಿರವೆನಿಸಿದೆ

---

1 ಭೂಮ್ಯಾದೀನ್ ಸ್ಥಿರಾನ್ ಕರೋತೀತಿ ಸ್ಥಿರಯತಿ । ಸ್ಥಿರಯತೀತಿ ಸ್ಥಿರಃ ।

2 'ಸ್ಥಿರಾಃ ಭೂಶೈಲಪಕ್ಷ್ಮಾಣೋ ಧನಾ ಮೋಕ್ಷೋಽಚಲೋ ತ್ರಿಷು'

3 'ಭೂಧರಾಣಾಮಹಂ ಸ್ಥೈರ್ಯಂ . .'

-ಭಾಗ. 11-16-33

4 ಬಿಭರ್ತ್ಯಂಡಂ ಹರಿಃ ರೂರ್ಮಸ್ತ್ವಂಡೇ ಚಾಪ್ಯುದಕಂ ಮಹತ್ ।
ಉದಕೇ ಕೂರ್ಮಕೂಪಸ್ಯ ವಾಯೋಃ ಪುಚ್ಛಂ ಸಮಾಶ್ರಿತಮ್ ।
ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್ ।
ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್ ।

-ವೈಭವ (ಬೃ. ಉ. ಭಾ. 3-2-3)

5 ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋಽಧಾಯಿ ಮೂರ್ಧಸು ।

-ಭಾಗ. 2 6-18

'ತ್ರಿಮೂರ್ಧಾ ಸನ್ ಹರಿರ್ಧತ್ತೇ ದ್ಯುತ್ರಯಂ ಮೂರ್ಧಭಿಸ್ತ್ರಿಭಿಃ ।
ಅನಂತಾಸನವೈಕುಂಠನಾರಾಯಣಪುರಾಣಿ ತು'

-ಮಾತ್ಸ್ಯ (ಭಾಗ. ತಾ. ನಿ.)

ಅಲ್ಲದೆ ಸತ್ಯಲೋಕವೇ ಮೊದಲಾದ ಇತರ ಪ್ರತಿಯೊಂದು ಲೋಕಕ್ಕೆ ಹೋದವರೂ ಪುನಃ ಮರಳಿಬರುವಂತೆ ಮಾಡುವ ಭಗವಂತನು ತನ್ನ ಲೋಕವೆನಿಸಿದ ಮೋಕ್ಷಕ್ಕೆ ಬರುವವರು ಮರಳಿ ಹೋಗದೆ ಅಲ್ಲಿಯೇ ಇರುವಂತೆ ಅನುಗ್ರಹಿಸಿ, ಅವರ ಪಾಲಿಗೆ ಮೋಕ್ಷವು ಸ್ಥಿರವೆನಿಸುವಂತೆ ಮಾಡುವನು

## ಜಿಜ್ಞಾಸೆ

[ಪರಿಣಾಮ ಇಲ್ಲ]

ಪ್ರ – ಪರಮಾತ್ಮನು ಸದಾ ಸರ್ವಕರ್ತನು ಅಲ್ಲ, ಕ್ರಮದಿಂದ ಸರ್ವಕರ್ತನು ಆಗಿದ್ದಾನೆ. ಒಂದು ಪದಾರ್ಥದ ಕರ್ತೃತ್ವದ ನಂತರ ಇನ್ನೊಂದು ಪದಾರ್ಥದ ಕರ್ತೃತ್ವವು ವಿಕಾರ ರೂಪವಾಗುವದು ಹೀಗೆ ಕ್ರಮದಿಂದ ಕರ್ತೃತ್ವರೂಪ ವಿಕಾರವು ಪರಮಾತ್ಮನಿಗೆ ಇರುವದರಿಂದ ಅವನು ನಿರ್ವಿಕಾರತ್ವರೂಪವಾದ ಸ್ಥಿರತ್ವವುಳ್ಳವನು ಹೇಗೆ?

ಉ – ಸದಾ ಸರ್ವಕರ್ತೃತ್ವವು ಪರಮಾತ್ಮನಿಗೆ ಇದೆ. ಸೂರ್ಯನಿಗೆ ಸದಾ ಸರ್ವಪ್ರಕಾಶತ್ವವು ಇದ್ದಂತೆ ಇದು ಕೂಡುತ್ತದೆ. ಸದಾ ಸರ್ವವಸ್ತುಗಳು ಇಲ್ಲವಾದುದರಿಂದ ಆ ಸರ್ವವಸ್ತುಗಳಿಗೆ ಕ್ರಮೇಣ ಸೂರ್ಯಪ್ರಕಾಶದಿಂದ ಸಂಬಂಧವು ಆಗುತ್ತದೆ ಪ್ರಕಾಶಕತ್ವವು ಸೂರ್ಯಸ್ವರೂಪವಾದುದರಿಂದ ಸದಾ ಸೂರ್ಯನಲ್ಲಿ ಇದೆ ಅದರಂತೆ ಕರ್ತೃತ್ವ ಶಕ್ತಿಯು ಪರಮಾತ್ಮನ ಸ್ವರೂಪವಾದುದರಿಂದ ಅವನಲ್ಲಿ ಸದಾ ಇದೆ ಸದಾ ಇರುವ ಆ ಶಕ್ತಿಗೆ ಯಾವ ವಸ್ತುವು ಯಾವಾಗ ವಿಷಯವಾಗುತ್ತದೋ ಆವಾಗ ಆ ವಸ್ತುವಿನಲ್ಲಿ ಪರಿಣಾಮವು ಆಗಿ ಪದಾರ್ಥೋತ್ಪತ್ತಿಯಾಗುತ್ತದೆ. ಸೂರ್ಯನಲ್ಲಿ ಇರುವ ಪ್ರಕಾಶಕತ್ವಕ್ಕೆ ಹೇಗೆ ಪರಿಣಾಮವು ಇಲ್ಲವೋ ಹಾಗೇ ಪರಮಾತ್ಮನ ಕರ್ತೃತ್ವಕ್ಕೆ ಪರಿಣಾಮವು ಇಲ್ಲ.



೨೦೪ ಅಜಃ

೧ ಯಜ್ಞಕ್ಕೆ ಕಾರಣನಾಗಿರುವವನು[1]

೨ ಮೋಕ್ಷವನ್ನು ಹೊಂದಿಸಿ ಮತ್ತೆ ಹುಟ್ಟದಿರುವುದಕ್ಕೆ ಕಾರಣನಾಗಿರುವವನು[2]

---

೧ 1 **ಇಜ್ಯತೇಽನೇನೇತಿ ಯಜ್ಞಹೇತುತ್ವಾತ್ ಅಜಃ । ಇಕಾರಸ್ಯಾಕಾರಃ ।**

೨ 2 **ಉದ್ಗಮಯ್ಯ (ಮೋಕ್ಷಂ ಪ್ರಾಪಯ್ಯ) ನ ಜಾಯತೇಽನೇನೇತ್ಯಜನಿಹೇತುತ್ವಾದ್ ಅಜಃ ।**

ಐದು ವಿಧದ ಪಶುಗಳಲ್ಲಿ ಐದು ರೂಪದ ಭಗವಂತನನ್ನು ಉಪಾಸಿಸಬೇಕೆಂದು ಸಂದೇಶಿಸಿದ ಛಾಂದೋಗ್ಯೋಪನಿಷತ್ತು 'ಅಜ' ಎನಿಸುವ ಆಡುಗಳಲ್ಲಿ ಯಜ್ಞಕ್ಕೆ ಕಾರಣವಾಗಿರುವ ಪ್ರಯುಕ್ತ ಹಾಗೆಯೇ ಮತ್ತೆ ಜನ್ಮವನ್ನು ಪಡೆಯದಂತೆ ಮಾಡುವ ಪ್ರಯುಕ್ತ 'ಅಜ' ನಾಮಕನಾಗಿ ಪ್ರದ್ಯುಮ್ನ ರೂಪಿ ಭಗವಂತನಿರುವನೆಂದು ಬೋಧಿಸಿದೆ[1]

ಯೋಗ್ಯಜೀವಾತ್ಮರಿಂದ ಒಳ್ಳೆಯ ಕರ್ಮಗಳನ್ನು ನಡೆಸಿ, ಅವುಗಳಿಗೆ ಫಲವಾಗಿ ಉತ್ತಮ ಲೋಕಗಳನ್ನು ಅನುಗ್ರಹಿಸುವವನೂ ಭಗವಂತನೆ[2] ಭಕ್ತಿಯಿಂದ ಪ್ರಸನ್ನನಾದ ಭಗವಂತನು ನಿರ್ದುಷ್ಟ ಜ್ಞಾನವನ್ನು ಅನುಗ್ರಹಿಸಿ, ಅದರಿಂದ ತನ್ನ ಸಾಕ್ಷಾತ್ಕಾರ ನೀಡಿ ಮುಕ್ತಿಯನ್ನು ಕರುಣಿಸುವನು[3] ಇದರಿಂದಾಗಿ ಮತ್ತೆ ಸಂಸಾರಕ್ಕೆ ಮರಳುವ ಪ್ರಸಂಗವಿಲ್ಲ[4]

[ಅರ್ಥವಿಶೇಷಗಳನ್ನು ೯೬ನೆಯ ಮತ್ತು ೫೨೧ ನೆಯ 'ಅಜ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

---

1 'ಪಶುಷು ಪಂಚವಿಧಂ ಸಾಮೋಪಾಸೀತಾಜಾ ಹಿಂಕಾರೋ '

–ಛಾಂ ಉ. 2-1-6

'ಯಜ್ಞೋದಜನಿಹೇತುತ್ವಾದಜನಿಸ್ಥೋ ಭಗವಾನಜಃ ।'

-ಛಾಂ. ಉ. ಭಾ.

ಇಜ್ಯತೇऽನೇನೇತಿ ಯಜ್ಞಹೇತುತ್ವಾದಜಃ । ಇಕಾರಸ್ಯಾಕಾರಃ। ಉದ್ಗಮಯ್ಯ ಮೋಕ್ಷಂ ಪ್ರಾಪಯ್ಯ ನ ಜಾಯತೇऽನೇನೇತ್ಯಜನಿಹೇತುತ್ವಾದ್ ವಾ ಅಜಃ ।

–ಬ, ಗೋ. (ಛಾಂ. ಉ. ಭಾ. ಟಿ.)

2 'ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ.. '

–ಬ್ರ ಸೂ. ಭಾ 2-1-36

3 ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾದ್ ಜ್ಞಾನಮನಾಕುಲಮ್ ।
ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ।

–ಅನು. ವ್ಯಾ. 3-4-216

4 ' ಬ್ರಹ್ಮಲೋಕಮಭಿಸಂಪದ್ಯತೇ ನಚ ಪುನರಾವರ್ತತೇ ನ ಚ ಪುನರಾವರ್ತತೇ'

–ಛಾಂ. ಉ. 8-1-3

## ಜಿಜ್ಞಾಸೆ

[ಪರೋಕ್ಷಪ್ರಿಯರು]

ಪ್ರ – ಅಜಃ ಎಂಬ ನಾಮವು ಪರಮಾತ್ಮನಿಗೆ ಯಜ್ಞಹೇತುತ್ವವನ್ನು ಹೇಳುತ್ತದೆಂದು ತಿಳಿಯುವದು ಅಜಃ ಎಂಬಲ್ಲಿ ಇಕಾರಕ್ಕೆ ಅಕಾರವು ಬಂದಿದೆ ಎಂದು ತಿಳಿದಾಗ ಇಷ್ಟು ಗೂಢವಾಗಿ ಭಗವನ್ನಾಮವು ಏಕೆ ಇದೆ?

ಉ – 'ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ' ಎಂಬ ಶ್ರುತಿಯು ದೇವತೆಗಳಿಗೆ ಅಸ್ಪಷ್ಟವಾಗಿ ಪರಮಾತ್ಮನನ್ನು ಹೇಳುವದರಲ್ಲಿ ಪ್ರೀತಿಯು ಇದೆ ಸ್ಪಷ್ಟವಾಗಿ ಪರಮಾತ್ಮನನ್ನು ಹೇಳಿದರೆ ಪರಮಾತ್ಮನ ಜ್ಞಾನಾಯೋಗ್ಯರಿಗೂ ಜ್ಞಾನೋದಯವಾದೀತು ಅವರಿಗೆ ಜ್ಞಾನೋದಯವಾಗುವದು ದೇವತೆಗಳಿಗೆ ಅಪ್ರಿಯ ಆದುದರಿಂದ ಪರಮಾತ್ಮನ ಗುಣಗಳನ್ನು ಅಸ್ಪಷ್ಟನಾಮದಿಂದ ಹೇಳಬೇಕು ಎಂದು ಹೇಳುತ್ತದೆ



## ೨೦೫ ದುರ್ಮರ್ಷಣಃ

೧ ಯಾರಿಂದಲೂ ಎದುರಿಸಲು ಅಶಕ್ಯನಾದವನು [1]

ಸಮಸ್ತ ಜಗತ್ತೂ ಒಂದೆಡೆ, ಮತ್ತೊಂದೆಡೆ ಜನಾರ್ದನ ಎಂದಾದರೆ ಜನಾರ್ದನನೇ ಸಮಸ್ತ ಜಗತ್ತನ್ನೂ ಮೀರಿಸುವನು [2] ಎಂದು ಧೃತರಾಷ್ಟ್ರನಿಗೆ ಶ್ರೀಕೃಷ್ಣಪರಮಾತ್ಮನ ಸಾಮರ್ಥ್ಯವನ್ನು ಪರಿಚಯಿಸಿಕೊಡುತ್ತಿದ್ದ ಸಂಜಯನು, ಶ್ರೀಕೃಷ್ಣನು ಮನಸ್ಸಿಂದಲೇ ಸಮಸ್ತ ಜಗತ್ತನ್ನೂ ಭಸ್ಮ ಮಾಡಬಲ್ಲನಾದರೆ, ಇಡೀ ಜಗತ್ತು ಒಟ್ಟಾದರೂ ಶ್ರೀಕೃಷ್ಣ ಪರಮಾತ್ಮನ ಬಗ್ಗೆ ಏನೂ ಮಾಡಲಾರದು [3] ಎಂದು–ತಿಳಿಸುವನು

---

೧ 1 ಕೇನಾಪಿ ಮರ್ಷಯಿತುಂ ಸೋಢುಂ ನ ಶಕ್ಯತ ಇತಿ ದುರ್ಮರ್ಷಣಃ ।

2 ಏಕತೋ ವಾ ಜಗತ್ಕೃತ್ಸ್ನಮೇಕತೋ ವಾ ಜನಾರ್ದನಃ ।
ಸಾರತೋ ಜಗತಃ ಕೃತ್ಸ್ನಾದತಿರಿಕ್ತೋ ಜನಾರ್ದನಃ ॥

–ಮ. ಭಾರ. ಉದ್ಯೋಗ 68-7

3 ಭಸ್ಮ ಕುರ್ಯಾಜ್ಜಗದಿದಂ ಮನಸೈವ ಜನಾರ್ದನಃ ।
ನತು ಕೃತ್ಸ್ನಂ ಜಗಚ್ಛಕ್ತಂ ಭಸ್ಮಂ ಕರ್ತುಂ ಜನಾರ್ದನಮ್ ॥

-ಮ. ಭಾರ. ಉದ್ಯೋಗ 68-8

ಸಂಧಾನಕ್ಕಾಗಿ ಕೌರವರಲ್ಲಿಗೆ ಹೋಗುವ ಶ್ರೀಕೃಷ್ಣನ ಬಗ್ಗೆ ಅಲ್ಲಿ ಏನಾದರೂ ಅನಿಷ್ಟವನ್ನು ಮಾಡಬಲ್ಲರೇ?—ಎಂದು ಧರ್ಮರಾಜನು ಶ್ರೀಕೃಷ್ಣನೆದುರೇ ಶಂಕೆಯನ್ನು ಪ್ರಕಟಿಸಿದಾಗ ಶ್ರೀಕೃಷ್ಣನು ತನ್ನ ಬಗ್ಗೆ ಹೀಗೆ ಹೇಳಿಕೊಳ್ಳುವನು—'ಸಿಟ್ಟುಗೊಂಡ ಸಿಂಹದೆದುರು ನಿಲ್ಲಲು ಇತರ ಮೃಗಗಳು ಹೇಗೆ ಸಮರ್ಥವಾಗಲಾರವೋ ಅಂತೆಯೇ ಯುದ್ಧದಲ್ಲಿ ನನ್ನ ಮುಂದೆ ಎಲ್ಲ ರಾಜರೂ ಒಟ್ಟಾಗಿಯೂ ಸಹ ನಿಲ್ಲಲಾರರು[1]

ಧೃತರಾಷ್ಟ್ರನು ದುರ್ಯೋಧನನಿಗೆ ಎಚ್ಚರಿಕೆಯನ್ನು ನೀಡುತ್ತ 'ದೇವತೆಗಳಿಂದಾಗಲೀ, ಮನುಷ್ಯರಿಂದಾಗಲೀ, ಗಂಧರ್ವರಿಂದಾಗಲೀ, ಅಸುರರಿಂದಾಗಲೀ ಸರ್ಪಗಳಿಂದಾಗಲೀ ಯಾರು ಯುದ್ಧದಲ್ಲಿ ಎದುರಿಸಲು ಶಕ್ಯನಲ್ಲವೋ ಅಂತಹ ಕೇಶವನನ್ನು ನೀನು ತಿಳಿದಿಲ್ಲ'-ಎಂದು ದುರ್ಯೋಧನನ್ನು ನಿಂದಿಸುವನು.

ಹೀಗೆ ಭಗವಂತನು ಯಾರಿಂದಲೂ ಎದುರಿಸಲು ಅಶಕ್ಯನಾದವನೆಂಬುದಾಗಿ ಅಲ್ಲಲ್ಲಿ ಪ್ರತಿಪಾದಿಸಲಾಗಿದೆ.

೨ (ಭಕ್ತರು) ದುಃಖವನ್ನು ಸಹಿಸಿಕೊಳ್ಳುವಂತೆ ಅನುಗ್ರಹಿಸುವವನು[3]

ಭಗವಂತನು ಜೀವಾತ್ಮರ ಪ್ರಾರಬ್ಧಕರ್ಮಾನುಸಾರವಾಗಿ ಭಕ್ತಾಭಕ್ತರೆನ್ನದೆ ಎಲ್ಲರಿಗೂ ನಿಯತವಾಗಿ ಸುಖ ದುಃಖಗಳನ್ನು ನೀಡುವನಾದರೂ ಭಕ್ತರಿಗೆ ದುಃಖವನ್ನು ನೀಡುವುದರ ಜೊತೆಗೆ ಆ ದುಃಖವನ್ನು ಸಹಿಸುವ ಸಾಮರ್ಥ್ಯವನ್ನೂ ನೀಡುವನು

---

1 ನ ಚಾಪಿ ಮಮ ಪರ್ಯಾಪ್ತಾಃ ಸಹಿತಾಃ ಸರ್ವಪಾರ್ಥಿವಾಃ ।
ಕ್ರುದ್ಧಸ್ಯ ಸಂಯುಗೇ ಸ್ಥಾತುಂ ಸಿಂಹಸ್ಯೇವೇತರೇ ಮೃಗಾಃ ॥

-ಮ. ಭಾರ. ಉದ್ಯೋಗ. 72-86

2 ದೇವೈರ್ಮನುಷ್ಯೈರ್ಗಂಧರ್ವೈರಸುರೈರುರಗೈಶ್ಚ ಯಃ ।
ನ ಸೋಢುಂ ಸಮರೇ ಶಕ್ಯಸ್ತಂ ನ ಬುಧ್ಯಸಿ ಕೇಶವಮ್ ॥

-ಮ. ಭಾರ. ಉದ್ಯೋಗ. 130-38

೨ 3 'ದುಃಖಂ ದುರಿತಿ ಸಂಪ್ರೋಕ್ತಂ....' ಇತಿ ಶಬ್ದನಿರ್ಣಯಾ (ಗೀ. ತಾ. 14-16) ನುಸಾರೇಣ ದುಶ್ಶಬ್ದಃ ದುಃಖವಾಚಕಃ । ದುಃ ದುಃಖಸ್ಯ ಮರ್ಷಣಂ ಸಹನಂ ಯಸ್ಮಾತ್ ಸಃ ದುರ್ಮರ್ಷಣಃ ।

೩. ದುಃಖವನ್ನು ಸಹಿಸಿಕೊಳ್ಳುವ ಜ್ಞಾನಿಗೆ ಸುಖವನ್ನು ಅನುಗ್ರಹಿಸುವವನು[1]

ದೇಹಾದಿಗಳು ತನ್ನವು ಎಂಬ ಭ್ರಮವೇ ಸುಖದುಃಖಗಳಿಗೆ ಕಾರಣ ಇದನ್ನು ವಿವೇಚಿಸಿ ಕೊಂಡ ಜ್ಞಾನಿ ದುಃಖವನ್ನೂ ಸುಖದಂತೆಯೇ ಕಂಡು ಸಹಿಸಿಕೊಳ್ಳುವನು ದುಃಖಪ್ರಯುಕ್ತ ಯಾವುದೇ ವಿಕಾರಕ್ಕೊಳಗಾಗಲಾರ. ಅಂತಹ ಧೀರನು ಮೋಕ್ಷಸುಖಕ್ಕೆ ಯೋಗ್ಯನೆನಿಸುವನೆಂದು ಗೀತಾಚಾರ್ಯನು ಸಂದೇಶಿಸಿರುವನು[2]

## ಜಿಜ್ಞಾಸೆ

[ಪಾಪ ಇಲ್ಲದ ಪ್ರಯುಕ್ತ ದುಃಖ ಇಲ್ಲ]

ಪ್ರ – ಬ್ರಹ್ಮದೇವರುವಾಯುದೇವರುಗಳಿಗೆ ದೇಹಾಭಿಮಾನವು ಇಲ್ಲವಾದ್ದರಿಂದ ದುಃಖವು ಇಲ್ಲ ಎಂದುಹೇಳಬೇಕು. ಆದರೆ ಸುಖ ದುಃಖಗಳಿಗೆರಡಕ್ಕೂ ದೇಹಾಬಿಮಾನವು ಕಾರಣವಾದುದ ರಿಂದ ಆ ದೇಹಾಭಿಮಾನವಿಲ್ಲದ ಬ್ರಹ್ಮ ವಾಯುಗಳಿಗೆ ಸುಖವೂ ಇಲ್ಲ ಎಂದು ಹೇಳ ಬೇಕಾಗುತ್ತದೆ ಇದು ಬಾಧಿತವಲ್ಲವೇ?

ಉ – ದತ್ತಸ್ವಾತಂತ್ರ್ಯ ಜ್ಞಾನದಿಂದ ದೇಹಾಭಿಮಾನ, ಮುಖ್ಯಸ್ವಾತಂತ್ರ್ಯಜ್ಞಾನದಿಂದ ದೇಹಾ ಭಿಮಾನ ಎಂದು ದೇಹಾಭಿಮಾನವು ಎರಡು ಪ್ರಕಾರವುಳ್ಳದ್ದು, ಬ್ರಹ್ಮ ವಾಯುಗಳಿಗೆ ಪ್ರಥಮಾ ಭಿಮಾನವು ಮಾತ್ರ ಇದೆ. ಆದುದರಿಂದ ಅವರಿಗೆ ಸುಖಾನುಭವವು ಕೂಡುತ್ತದೆ ಈ ಅಭಿಮಾ ನವು ಇದ್ದ ಮಾತ್ರದಿಂದ ಸುಖದಂತೆ ದುಃಖವೂ ಅವರಿಗೆ ಬರಲಿ ಎಂದು ಶಂಕೆಗೆ ಅವಕಾಶವು ಇಲ್ಲ ದುಃಖಕ್ಕೆದೇಹಾಭಿಮಾನ ಮಾತ್ರ ಕಾರಣವಲ್ಲ ಪಾಪ ಮತ್ತು ದೇಹಾಭಿಮಾನಗಳು ಎರಡೂ ಮಿಲಿತವಾಗಿ ಕಾರಣ. ಅವರಲ್ಲಿ ದೇಹಾಭಿಮಾನವು ಇದ್ದರೂ ಪಾಪವು ಇಲ್ಲವಾದುದರಿಂದ ದುಃಖವು ಇಲ್ಲ



---

೩. 1 ದುಃ ದುಃಖಂ ಮೃಷ್ಯತಿ ಅಭಿಮಾನನಿಮಿತ್ತಮೇವ ನ ಸ್ವತಃ ಜೀವಾತ್ಮನಃ ದುಃಖಾಸಂ- ಬಂಧಃ ಇತಿ ವಿವಿಚ್ಯ ಸಹತೇ ಇತಿ ದುರ್ಮರ್ಷಃ। ತಸ್ಯ ಣಃ ಸುಖಂ ಯಸ್ಮಾತ್ಸಃ ದುರ್ಮ ರ್ಷಣಃ । 'ಣೋ ಹಿ ನಿರ್ವೃತಿವಾಚಕಃ' (ಮ. ಭಾ 3-12)

2 ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥
–ಗೀ. 2-15

## ೨೦೬ ಶಾಸ್ತಾ

೧ ಆದೇಶಿಸುವವನು[1]

ಚತುರ್ಮುಖನೇ ಮೊದಲಾದ ಪ್ರತಿಯೊಬ್ಬರನ್ನೂ ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸುವಂತೆ ಆದೇಶಿಸುವವನು ಭಗವಂತನು 'ಸಾಮಂತ ರಾಜರು ಚಕ್ರವರ್ತಿಯ ಆದೇಶವನ್ನು ಹೇಗೆ ಪಾಲಿಸುವರೋ ಹಾಗೆಯೇ ಚತುರ್ಮುಖರುದ್ರಾದಿಗಳೆಲ್ಲರೂ ನಿನ್ನ ಆಜ್ಞೆಯನ್ನು ಪಾಲಿಸುವರೆಂಬುದಾಗಿ ಉದರ ಶಾಂಡಿಲ್ಯ ಶ್ರುತಿಯು ಭಗವಂತನನ್ನು ಕೊಂಡಾಡುತ್ತಿದೆ.'[2]

ಆಕಾಶ ನಾಮಕ ಲಕ್ಷ್ಮೀದೇವಿಯಲ್ಲಿ ಸರ್ವವೂ ಆಶ್ರಯಿಸಿಕೊಂಡಿದೆ ಎಂದು ಗಾರ್ಗಿಗೆ ಉಪದೇಶಿಸಿದ ಯಾಜ್ಞವಲ್ಕ್ಯರು. ಅಂತಹ ಲಕ್ಷ್ಮೀದೇವಿಯೂ ಅಕ್ಷರ ನಾಮಕ ಭಗವಂತನ ಪ್ರಶಾಸನೆಗೆ ಒಳಗಾಗಿ ಎಲ್ಲವನ್ನೂ ಧರಿಸಿರುವಳೆಂದು ಸಂದೇಶಿಸಿರುವರು[3] ಅಲ್ಲದೆ, ಅಕ್ಷರ ನಾಮಕ ಭಗವಂತನ ಪ್ರಶಾಸನೆಗೆ ಒಳಗಾಗಿಯೇ ಶ್ರೀದೇವಿಯೂ, ಭೂದೇವಿಯೂ, ಚತುರ್ಮುಖನೂ, ರುದ್ರನೂ ತಮ್ಮ ಧಾರಣೆ ಪೋಷಣೆಗಳನ್ನು ಪಡೆದಿರುವರು ಕಾಲಚಕ್ರ ಉರುಳುವುದು, ನದಿಗಳು ಬೇರೆ ಬೇರೆ ದಿಕ್ಕುಗಳಿಗೆ ಹರಿಯುವುದು, ಮನುಷ್ಯರು ದಾನಿಯನ್ನು ಅಭಿನಂದಿಸುವುದು, ದೇವತೆಗಳು ಯಜ್ಞ ಮಾಡುವವನನ್ನು ಶ್ಲಾಘಿಸುವುದು ಹಾಗೂ ಪಿತೃಗಳು ದರ್ವೀಹೋಮವನ್ನು ಅನುಸರಿಸುವುದು ಅವನ ಪ್ರಶಾಸನೆಗೊಳಗಾಗಿಯೇ—ಎಂದು ಸಂದೇಶಿಸುವುದರ ಮೂಲಕ ಯಾಜ್ಞವಲ್ಕ್ಯರು ವಿಶ್ವದಲ್ಲಿ ನಡೆಯುವ ಎಲ್ಲ ಆಗುಹೋಗುಗಳೂ ಅಕ್ಷರನಾಮಕ ಭಗವಂತನ ಪ್ರಶಾಸನೆಗೊಳಗಾಗಿಯೇ

---

೧ 1 ಶಾಸ್ತಿ ಆದಿಶತೀತಿ ಶಾಸ್ತಾ । 'ಸಾ ಚ ಪ್ರಶಾಸನಾತ್' ಇತ್ಯಾದೌ ಶಾಸ್ತಿಃ ಆಜ್ಞಾರ್ಥೇ ಪ್ರಯುಕ್ತಃ ।

2 ಖಂಡಾಧೀಶಾಃ ಸಾರ್ವಭೌಮಸ್ಯ ಯದ್ವದ್ ಬ್ರಹ್ಮೇಶಾದ್ಯಾಃ ಕುರ್ವತೇ ತೇऽನುಶಾಸ್ತಿವತ್ ।

-ಉದರಶಾಂಡಿಲ್ಯ ಶ್ರುತಿ (ಭಾಗ. ತಾ. ನಿ. 10-94-29)

3 . ಕಸ್ಮಿನ್ ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ । ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ'

-ಬೃ. ಉ. 5-8-11

ಆಧಾರತ್ವಂ ಶ್ರಿಯೋ ಯಚ್ಚ ತಚ್ಚ ವಿಷ್ಣೋಃ ಪ್ರಶಾಸನಾತ್ ।

-ಮಹಾಮೀಮಾಂಸಾ (ಬೃ. ಉ. ಭಾ.)

ಎಂದು ಸಾರಿರುವರು[1]

ಬ್ರಹ್ಮಾಂಡಕ್ಕೆ ಆವರಣಭೂತರಾದ ಮಹತ್ತತ್ತ್ವವೇ ಮೊದಲಾದ ಏಳು ತತ್ತ್ವಗಳಿಗೆ ಅಭಿಮಾನಿಗಳಾದ, ಶ್ರೀಹರಿಯ ಮಕ್ಕಳಾಗಿರುವ ಚತುರ್ಮುಖಾದಿಗಳು ಶ್ರೀಹರಿಯ ಆದೇಶಾನುಸಾರವಾಗಿಯೇ ವಿವಿಧ ವಿಶ್ವದ ಧಾರಣೆಯಲ್ಲಿ ತೊಡಗಿರುವರೆಂದು ಋಗ್ವೇದವೂ ಸಂದೇಶಿಸಿದೆ.[2] ಲಕ್ಷ್ಮೀದೇವಿಯವರೆಗೆ ಎಲ್ಲವನ್ನೂ ಅಕ್ಷರ ನಾಮಕ ಭಗವಂತನು ಧರಿಸುತ್ತಿರುವುದು ಬರೇ ತನ್ನ

---

1 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತ್ಯೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತಿಚ್ಯೋಽನ್ಯಾ ಯಾಂ ಯಾಂ ಚ ದಿಶಮನ್ವೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಂಸಂತಿ ಯಜಮಾನಂ ದೇವಾ ದರ್ವೀಂ ಪಿತರೋಽನ್ವಾಯತ್ತಾಃ'

-ಬೃ ಉ 5-8-9

ದ್ಯಾವಾಪೃಥಿವ್ಯೌ ಶ್ರೀಭೂಮೀ ಕೇಶೌ ಸೂರ್ಯವಿಧೂ ಮತೌ ।
ದೀಪ್ತೇಃ ಪೃಥುತ್ವಾಜ್ಜ್ಞಾನಾಚ್ಚ ತಥಾಽಹ್ಲಾದವಿಧೇರಪಿ । ತದಾಧಾರೋ ಹರಿರ್ನಿತ್ಯಂ ಸ್ವಾತಂತ್ರ್ಯೇಣ ಪ್ರಶಾಸಕಃ ।

-ಮಹಾಮೀಮಾಂಸಾ (ಬೃ. ಉ. ಭಾ.)

2 'ಸಪ್ತಾಽರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ'

-ಋ. ವೇ. 1-164-36

ಸಪ್ತ ಮಹದಾದಿದೇವತಾ ಬ್ರಹ್ಮಾದಯಃ 'ಆರ್ಧಾ' ಆ ಸಮಂತಾದ್ ಋದ್ಧಾ ಗರ್ಭಾ ಗರಣೇನ ಭ್ರಿಯಂತ ಇತಿ । ಭೂಮಾ ವನನೀಯಶ್ಚೇತಿ ಭುವನಃ ಭುವನಸ್ಯ ವಿಷ್ಣೋಃ ರೇತೋರೂಪಾಶ್ಚ ತೇ ತಸ್ಯೈವ ಪ್ರದಿಶಾ ಪ್ರದೇಶೇನಾಽಜ್ಞಯಾ ವಿವಿಧ-ಧರ್ಮಣಿ ತಿಷ್ಠಂತಿ

-ತತ್ತ್ವ ದೀಪಿಕಾ(ಬ್ರ. ಸೂ ಭಾ. 1-3-11)

ಪ್ರಶಾಸನೆಯ ಮೇರೆಗೇ ಎಂದು ಶ್ರೀ ವೇದವ್ಯಾಸರು ಬ್ರಹ್ಮಸೂತ್ರವೊಂದರಲ್ಲಿ ಸಿದ್ಧಾಂತಿಸಿರುವರು.[1]

ಶ್ರುತಿಸ್ಮೃತಿಗಳೇ ಭಗವಂತನ ಆಜ್ಞೆಗಳಂತಿದ್ದು,[2] ಅವುಗಳ ಮೂಲಕ ಭಗವಂತನು ಎಲ್ಲರಿಗೂ ಶಾಸಕನಾಗಿರುವನು ಅಜಾಮಿಳನ ಪ್ರಸಂಗದಲ್ಲಿ ಯಮಭಟರು ಯಮನಲ್ಲಿ ನಿಜವಾಗಿ ಶಾಸಕ ಯಾರು? ಎಂದು ವಿಚಾರಿಸಲು[3] ಚರಾಚರ ಪ್ರಪಂಚಕ್ಕೆ ಆಧಾರನಾದ ಶ್ರೀಹರಿಯನ್ನೇ ಶಾಸಕನನ್ನಾಗಿ ತಿಳಿಸಿಕೊಟ್ಟು ಯಮನು, ಭಗವಂತನು ಶಾಸನೆ ಮಾಡುವ ಕ್ರಮವನ್ನು ತಿಳಿಸುತ್ತ, 'ಹಗ್ಗಗಳಿಂದ ಎತ್ತುಗಳನ್ನು ಬಂಧಿಸುವಂತೆ ಶ್ರುತಿಸ್ಮೃತಿಗಳೆಂಬ ತನ ಮಾತಿನಿಂದ ಬ್ರಹ್ಮಾದಿ ಜೀವಾತ್ಮರನ್ನು ಭಗವಂತನು ಬಂಧಿಸಿರುವನು ಅರ್ಥಾತ್ ಬ್ರಹ್ಮಾದಿ ಜೀವಾತ್ಮರ ನಾಮಗಳನ್ನು ಸಾಮೂಹಿಕವಾಗಿ ಅದವಾ ವೈಯುಕ್ತಿಕವಾಗಿ ಉಲ್ಲೇಖಿಸಿ, ಅವರವರು ಆಯಾಯ ಕರ್ತವ್ಯವನ್ನು ನಿರ್ವಹಿಸಬೇಕು ಎಂದು ವಿಧಿಸಿರುವನು. ಬ್ರಹ್ಮಾದಿಗಳಾದರೂ ಅವನ ಆದೇಶಕ್ಕನುಗುಣವಾಗಿ ಅವನ ಆರಾಧನಾರೂಪ ದಲ್ಲಿ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುವರು[4]'—ಎಂದು ಭಗವಂತನು ಶ್ರುತಿಸ್ಮೃತಿಗಳ ಮೂಲಕ ಶಾಸಕನಾಗಿರುವನೆಂಬುದನ್ನು ಸೂಚಿಸಿರುವನು.

ದ್ವಾದಶಸ್ತೋತ್ರದಲ್ಲಿ, ಚತುರ್ಮುಖ ಹಾಗೂ ರುದ್ರರನ್ನು ಪ್ರವರ್ತಿಸುವವನೆಂಬ ಅಭಿಪ್ರಾಯ ದಲ್ಲಿ ಭಗವಂತನನ್ನು 'ಕೇಶವ' ಎಂದು ಸಂಬೋಧಿಸಿದ ಶ್ರೀಮದಾಚಾರ್ಯರು ತಮ್ಮ ಆ ಅಭಿ ಪ್ರಾಯಕ್ಕೆ ಪೋಷಕವಾಗುವಂತೆ 'ಶಾಸಕ' ಎಂದೂ ಸಂಬೋಧಿಸಿ ಭಗವಂತನು ಚತುರ್ಮುಖನೇ ಮೊದಲಾದ ಪ್ರತಿಯೊಬ್ಬರನ್ನೂ ಶಾಸನೆ ಮಾಡಿ ನಡೆಸುವವನೆಂದು ಸ್ತುತಿಸಿರುವರು[5]

---

1 'ಸಾ ಚ ಪ್ರಶಾಸನಾತ್'

-ಬ್ರ. ಸೂ 1-3-11

ಸಾ ಚ ಧೃತಿಃ ಪ್ರಶಾಸನಾದುಚ್ಯತೇ ।

-ಬ್ರ ಸೂ ಭಾ.

2 'ಶ್ರುತಿಸ್ಮೃತೀ ಹರೇರಾಜ್ಞೇ '

3 'ಕತಿ ಸಂತೀಹ ಶಾಸ್ತಾರೋ ಜೀವಲೋಕಸ್ಯ ವೈ ಪ್ರಭೋ'

-ಭಾಗ. 6-3-4

4 ಯೋ ನಾಮಭಿರ್ವಾಚಿ ಜನಾನ್ನಿಜಾಯಾಂ ಬಧ್ನಾತಿ ತಂತ್ರ್ಯಾಮಿವ ದಾಮಭಿರ್ಗಾಃ ।
ಯಸ್ಮೈ ಬಲಿಂ ತ ಇಮೇ ನಾಮಕರ್ಮನಿಬಂಧಬದ್ಧಾಶ್ಚಕಿತಾ ವಹಂತಿ ॥

-ಭಾಗ. 6-3-13

5 'ಕೇಶವ ಕೇಶವ ಶಾಸಕ ವಂದೇ .

-ದ್ವಾ ಸ್ತೋ.

೨ ದಂಡಿಸುವವನು[1]

ದುಷ್ಟರನ್ನೂ, ಸಜ್ಜನರನ್ನೂ ಭಗವಂತನೇ ದಂಡಿಸುವನು ಭಗವಂತನ ದಂಡನೆಗೊಳಗಾದ ಭಕ್ತರು ತಮ್ಮನ್ನು ತಿದ್ದಿಕೊಂಡು ಶ್ರೇಯಸ್ಸು ಪಡೆಯುವರು ದುಷ್ಟರಾದರೂ ಭಗವಂತನ ದಂಡನೆಗೊಳಗಾದರೂ ಆ ಬಗ್ಗೆ ಪಶ್ಚಾತ್ತಾಪ ಪಡದೆ ವಿಪರೀತವಾಗಿಯೇ ನಡೆದುಕೊಳ್ಳುವರು, ಆದ್ದರಿಂದಲೇ ದುರ್ಗತಿಯನ್ನು ಹೊಂದುವರು—ಎಂದು 'ಆಗ್ನೇಯ' ಸಂದೇಶಿಸಿದೆ[2]

೩ ಉಪದೇಶಿಸುವವನು[3]

ಶ್ರೀಹರಿಗೆ ನಮಿಸುವುದೇ ತಾನು ಕಲಿತ ಸಾರಭೂತಪ್ರಮೇಯ ಎಂಬುದಾಗಿ ಪ್ರಹ್ಲಾದನು ಹಿರಣ್ಯಕಶಿಪುವಿನ ಎದುರು ತಿಳಿಸಿದಾಗ, ಕ್ರುದ್ಧನಾದ ಹಿರಣ್ಯಕಶಿಪು, 'ನಿನಗೆ ಈ ಶಿಕ್ಷಣ ನೀಡಿದವರು ಯಾರು?'[4]—ಎಂದು ಪ್ರಹ್ಲಾದನನ್ನು ಕೇಳುವನು ಅದಕ್ಕೆ ಪ್ರಹ್ಲಾದನು ಹೀಗೆ ಉತ್ತರಿಸುವನು—'ಯಾರು ಎಲ್ಲರ ಹೃದಯದೊಳಗಿದ್ದು ಶಿಕ್ಷಣ ನೀಡುತ್ತಿರುವನೋ ಅಂತಹ ಪರಮಾತ್ಮನನ್ನು ಹೊರತಾಗಿ ಯಾರು ತಾನೇ ಯಾರಿಂದ ಶಿಕ್ಷಣ ಪಡೆದಾರು?'[5]

---

೨ 1 ಶಾಸ್ತಿ ದಂಡಯತೀತಿ ಶಾಸ್ತಾ । ಉಪರಿ ಉದಾಹ್ರಿಯಮಾಣೇ ಆಗ್ನೇಯೇ ಶಾಸ್ತಿಃ-ದಂಡನಾರ್ಥೇ ಪ್ರಯುಕ್ತಃ ।

2 'ಅಸತಾಂ ಚ ಸತಾಂ ಚೈವ ಹರಿರೇವಾನುಶಾಸಕಃ । ಸತಾಂ ತು ಶ್ರೇಯಸೇ ಸ್ವೈವ ಹ್ಯನುಶಾಸ್ತಿರ್ಭವಿಷ್ಯತಿ । ಅಸತಾಂ ವಿಪರೀತಾಯ ಲಂಘಯಿತ್ವಾಽನುಶಾಸನಮ್ ।

-ಆಗ್ನೇಯ (ಭಾಗ. ತಾ. ನಿ. 10-24-7)

೩ 3 ಶಾಸ್ತಿ ಉಪದಿಶತೀತಿ ಶಾಸ್ತಾ । ಉಪರಿ ಉದಾಹ್ರಿಯಮಾಣೇ ಪ್ರಮಾಣೇ ಶಾಸ್ತಿಃ ಉಪದೇಶಾರ್ಥೇ ವರ್ತತೇ ।

4 ಅನುಶಿಷ್ಟೋಽಸಿ ಕೇನೇದೃಗ್ ವತ್ಸ ಪ್ರಹ್ಲಾದ ಕಥ್ಯತಾಮ್ ।

–ವಿ. ಪು. 1–17–19

5 ಶಾಸ್ತಾ ವಿಷ್ಣುರಶೇಷಸ್ಯ ಜಗತೋ ಯೋ ಹೃದಿ ಸ್ಥಿತಃ ।
ತಮೃತೇ ಪರಮಾತ್ಮಾನಂ ತಾತ ಕಃ ಕೇನ ಶಾಸ್ಯತೇ ॥

–ವಿ. ಪು. 1-17-20

೪ ಅಂತರ್ಯಾಮಿಯಾಗಿರುವವನು[1]

ವಾಮದೇವ ಋಷಿಯು ತನ್ನ ಅಂತರ್ಯಾಮಿ ಭಗವಂತನನ್ನು ದೃಷ್ಟಿಯಲ್ಲಿಟ್ಟುಕೊಂಡು ತಾನು ಮನು, ಸೂರ್ಯ ಆಗಿರುವನೆಂದು ಹೇಳಿಕೊಂಡಿರುವಂತೆ ದೇವೇಂದ್ರನೂ ತನ್ನ ಅಂತರ್ಯಾಮಿ ಭಗವಂತನನ್ನು ದೃಷ್ಟಿಯಲ್ಲಿಟ್ಟುಕೊಂಡು ತನ್ನ ನಾಮಗಳಾಗಿ 'ಅಹಂ' ತ್ವಂ' 'ಪ್ರಾಣ' 'ಸರ್ವಾಣಿ' 'ಭೂತಾನಿ' ಇತ್ಯಾದಿಗಳನ್ನು ವಿಶ್ವಾಮಿತ್ರರಿಗೆ ಉಪದೇಶಿಸಿರುವನೆಂದು ಶ್ರೀವೇದವ್ಯಾಸರು ಬ್ರಹ್ಮಸೂತ್ರವೊಂದರಲ್ಲಿ ನಿರ್ಣಯಿಸಿರುವರು[2] ಇಲ್ಲಿ ಅಂತರ್ಯಾಮಿ ಎಂಬ ಅರ್ಥದಲ್ಲಿ 'ಶಾಸ್ತ್ರ' ಶಬ್ದವನ್ನೇ ಉಪಯೋಗಿಸಲಾಗಿದೆ ಭಗವಂತನು ಎಲ್ಲರಿಗೂ ಶಾಸ್ತೃ ಅರ್ಥಾತ್ ಅಂತರ್ಯಾಮಿ ಆದ್ದರಿಂದ ಎಲ್ಲರ ನಾಮಗಳಿಂದಲೂ ಅವನು ವಾಚ್ಯನಾಗುವನೆಂದು ಪಾದ್ಮ ಪ್ರತಿಪಾದಿಸಿದೆ[3] ನಾರದರೂ ಭಗವಂತನನ್ನು ಅಂತರ್ಯಾಮಿ ಎಂಬ ಅರ್ಥದಲ್ಲಿ 'ಶಾಸ್ತೃ' ಎಂದು ಹೆಸರಿಸಿರುವರು[4]

ವಿದುರನು ಸಭೆಯಲ್ಲಿ ನೆರೆದಿದ್ದ ರಾಜರೂ ಧೃತರಾಷ್ಟ್ರನೂ ಪಾಂಡವರ ಜೊತೆ ದ್ಯೂತವಾಡುವುದನ್ನು ನಿಲ್ಲಿಸುವಂತೆ ದುರ್ಯೋಧನನಿಗೆ ಉಪದೇಶಿಸಬೇಕೆಂದು ಹೇಳಿದಾಗ, ಇದರಿಂದ ಕ್ರುದ್ಧನಾದ ದುರ್ಯೋಧನನು ತನ್ನ ಅನುಭವಾಧಾರದಿಂದ ಭಗವಂತನ ಅಂತರ್ಯಾಮಿತ್ವನನ್ನು "ಶಾಸ್ತೃ"

---

೪ 1 ಶಾಸ್ತಿ ಅಂತರ್ಯಚ್ಛತೀತಿ ಶಾಸ್ತಾ । 'ಶಾಸ್ತ್ರದೃಷ್ಟ್ಯಾ ' ಇತಿ ಬ್ರಹ್ಮಸೂತ್ರೇ ಅಂತರ್ಯಾಮ್ಯರ್ಥೇ ಏವ ಶಾಸ್ತ್ರಿಃ ಪ್ರಯುಕ್ತಃ ।

2 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್'

-ಬ್ರ ಸೂ 1-1 30

ಶಾಸ್ತ್ರಮಂತರ್ಯಾಮೀ -ಬ್ರ ಸೂ ಭಾ.

* 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' ಇತಿ ಶಾಸ್ತುರಂತರ್ಯಾಮಿಣೋ ವಿಷ್ಣೋಃ ಸರ್ವಶರೀರೇ ಸ್ಥಿತತ್ವಾತ್ ಸರ್ವನಾಮಾಭಿಧೇಯತ್ವಂ ಚೋಕ್ತಮ್ – 'ಅಹಂ ಮನುರಭವಂ ಸೂರ್ಯಶ್ಚ' ಇತ್ಯಾದಿವತ್'

-ಐ. ಉ. ಭಾ. 2-1-2-15

3 ಶಸ್ತ್ರನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ ।

-ಪಾದ್ಮ (ಬ್ರ. ಸೂ. ಭಾ. 1-1-30)

4 . .ಸಂವಿಚ್ಛಾಸ್ತ್ರಂ ಪರಂ ಪದಮ್ ।

-ಭಾಗವತ (ಬ್ರ. ಸೂ. ಭಾ. 1-1-30)

ಶಬ್ದವನ್ನು ಪ್ರಯೋಗಿಸಿಯೇ ಸಾರಿರುವನು— ತಾಯಿಯ ಗರ್ಭದಲ್ಲಿದ್ದಾಗ ಯಾರು ಜೀವಾತ್ಮನನ್ನು ಶಾಸನೆ ಮಾಡುತ್ತಿರುವನೋ, ಅವನೊಬ್ಬನೇ ಎಲ್ಲರನ್ನೂ ಶಾಸನೆ ಮಾಡುತ್ತಿರುವನು ಮತ್ತೊಬ್ಬ ಶಾಸಕ ಮಾಡುವವನಿಲ್ಲ ನಾನೂ ಅವನ ಶಾಸನಗೊಳಗಾದವನೇ ನೀರು ಇಳಿಜಾರಾದ ಪ್ರದೇಶಕ್ಕೆ ದುಮುಕುವಂತೆ ಅವನ ಪ್ರೇರಣೆಗೊಳಗಾಗಿ ನಾನೂ ನಡೆದುಕೊಳ್ಳುವೆನು'[1] ಶ್ರೀಕೃಷ್ಣನು ಅರ್ಜುನನಿಗೆ ಇತಿಹಾಸವಾಗಿ ಬೋಧಿಸಿದ ಬ್ರಾಹ್ಮಣ—ಬ್ರಾಹ್ಮಣಿಯರ ಸಂವಾದದಲ್ಲೂ ಇದೇ ರೀತಿಯ ಉಪದೇಶ ಬಂದಿದೆ[2]

## ಜಿಜ್ಞಾಸೆ

### [ಶಾಸ್ತ್ರದೃಷ್ಟಿ]

ಪ್ರ — ಶಂಕರರು ಬ್ರಹ್ಮಸೂತ್ರಭಾಷ್ಯದಲ್ಲಿ 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾ ಸಕಲ ಶಾಸ್ತ್ರ ಮುಖ್ಯತಾತ್ಪರ್ಯ ವಿಷಯವಾದ ಅದ್ವೈತವನ್ನು ಸೂತ್ರಕಾರರು ಈ ಸೂತ್ರದಲ್ಲಿ ಹೇಳುತ್ತಾರೆ ಎಂದು ಹೇಳುತ್ತಾರೆ.

'ಶಾಸ್ತ್ರದೃಷ್ಟ್ಯಾ' ಎಂದರೆ 'ಅಹಂ ಬ್ರಹ್ಮಾಸ್ಮಿ' ಎಂಬ ಶಾಸ್ತ್ರದ ದೃಷ್ಟಿಯಿಂದ ಎಂದು ಅವರು ಹೇಳುವ ಅರ್ಥ ಸೂತ್ರದಲ್ಲಿರುವ ಉಪದೇಶ ಪದಕ್ಕೆ ಪ್ರತರ್ದನನ್ನು ಕುರಿತು ಇಂದ್ರದೇವರು ಕೌಷೀತಕೀ ಉಪನಿಷತ್ತಿನಲ್ಲಿ 'ಪ್ರಾಣೋಸ್ಮಿ ಪ್ರಜ್ಞಾತ್ಮಾ' ನಾನು ಪ್ರಾಣನಾಗಿದ್ದೇನೆ ಆ ಪ್ರಾಣನು ಪ್ರಕೃಷ್ಟಜ್ಞಾನವುಳ್ಳವನು ಎಂಬ ಅರ್ಥವುಳ್ಳ ಉಪದೇಶವನ್ನು ಮಾಡುತ್ತಾರೆ ಎಂದು ಅರ್ಥ 'ವಾಮದೇವವತ್' ಎಂದರೆ ಋಗ್ವೇದದಲ್ಲಿ ಗರ್ಭಸ್ಥರಾದ ವಾಮದೇವ ಋಷಿಗಳು 'ಅಹಂ ಮನುರಭವಂ ಸೂರ್ಯಶ್ಚ' ನಾನು ಸೂರ್ಯನು ನಾನು ಮನುವು ಎಂದು ಉಪದೇಶಿಸಿದಂತೆ ಎಂದು ಶಾಂಕರ ಬ್ರಹ್ಮಸೂತ್ರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ. ಈ ಸೂತ್ರಾರ್ಥವು ಯುಕ್ತವೋ?

ಉ — ಉಪದೇಶ ಕೊಡುವವನು ಅದ್ವೈತದೃಷ್ಟಿಯುಳ್ಳವನಾದರೆ ಉಪದೇಶಕ ಮತ್ತು ಉಪದೇಶ್ಯರುಗಳು ಇಬ್ಬರೂ ಒಂದೇ ಎಂದು ತಿಳಿದು ತನಗೆ ತಾನೇ ಉಪದೇಶವನ್ನು ಕೊಟ್ಟಂತೆ ತಿಳಿಯುತ್ತಾನೆ ಅಲ್ಲವೆ? ತನಗೆ ತಾನು ಉಪದೇಶಕನು ಆಗಬಹುದೇ? ಅದುದರಿಂದ ಅದ್ವೈತ ದೃಷ್ಟಿ ರೂಪವಾದ ಶಾಸ್ತ್ರದೃಷ್ಟಿಯಿಂದ ಉಪದೇಶವೆಂದು ಸೂತ್ರಾರ್ಥವನ್ನು ಹೇಳಬಾರದು



---

1 **ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ಗರ್ಭೇ ಶಯಾನಂ ಪುರುಷಂ ಶಾಸ್ತಿ ಶಾಸ್ತಾ ।
ತೇನಾನುಶಿಷ್ಟಃ ಪ್ರವಣಾದಿವಾಂಭೋ ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ ॥
–ಮ. ಭಾರ. ಸಭಾ. 64-8**

2 **ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ಯಥಾ ನಿಯುಕ್ತೋಽಸ್ಮಿ ತಥಾ ಚರಾಮಿ ।
ಹೃದ್ಯೇಷ ತಿಷ್ಠನ್ ಪುರುಷಃ ಶಾಸ್ತಿ ಶಾಸ್ತಾ ತೇನೈವ ಯುಕ್ತಃ ಪ್ರವಣಾದಿವೋದಕಮ್॥
–ಮ. ಭಾ. ಆಶ್ವಮೇಧಿಕ. 26-1**

೨೦೭ ವಿಶ್ರುತಾತ್ಮಾ

೧ (ಶಾಸ್ತ್ರಗಳಲ್ಲಿ) ಪ್ರಸಿದ್ಧನಾದ ಸ್ವಾಮಿಯು.[1]

೨ ಶ್ರುತಿಗಳಲ್ಲಿ ವಿಶಿಷ್ಟವಾಗಿ ಪ್ರತಿಪಾದಿಸಲ್ಪಟ್ಟ ಸ್ವರೂಪ ಉಳ್ಳವನು.[2]

ಸಕಲ ವೇದಗಳೂ ಓಂಕಾರ ಪ್ರತಿಪಾದ್ಯ ಭಗವಂತನ ಸ್ವರೂಪವನ್ನೇ ಪ್ರತಿಪಾದಿಸುತ್ತಿವೆ ಎಂಬುದನ್ನು ಯಮದೇವನು ಉಪದೇಶಿಸಿರುವನು.[3] ಗೀತಾಚಾರ್ಯನು ತಾನು ಪೌರುಷೇಯಾ ಪೌರುಷೇಯಾತ್ಮಕವಾದ ಸಮಗ್ರ ವೈದಿಕ ವಾಙ್ಮಯದಲ್ಲೂ ಪ್ರಸಿದ್ಧನಾಗಿರುವೆನೆಂದು ಸಂದೇಶಿಸಿರುವನು[4] ಇಂದಿರಾದೇವಿಗೂ ಆಧಾರವಾದ, ಬ್ರಹ್ಮೇಂದ್ರಾದಿಗಳಿಂದ ಅಭಿವಂದಿತವಾದ, ಉತ್ಕೃಷ್ಟವಾದ ಭಗವಂತನ ಸ್ವರೂಪವು ವೇದದ ಪ್ರತಿಯೊಂದು ಪದದಿಂದಲೂ ಉತ್ಕೃಷ್ಟವಾಗಿ ಸ್ತುತಿಸಲ್ಪಟ್ಟಿದೆ ಎಂದು ಸ್ತುತಿಸಿರುವರು.[5]

೩ (ಆಪಾತತಃ) ವಿರುದ್ಧವಾಗಿ ಶ್ರುತಿಗಳಲ್ಲಿ ಪ್ರತಿಪಾದಿಸಲ್ಪಟ್ಟ ಸ್ವರೂಪ ಉಳ್ಳವನು.[6]

---

೧ 1 ವಿಶ್ರುತಃ ಪ್ರಸಿದ್ಧಃ ಆತ್ಮಾ ಸರ್ವಂ ಆತ್ಮೀಯತಯಾ ಅದತ್ತೇ ಇತಿ ಸ್ವಾಮೀ। ಸರ್ವೇಷಾಂ ಶ್ರವಣಗೋಚರತ್ವೇ ಏವ ವಿಶ್ರುತತ್ವಮಿತಿ ವಿಶ್ರುತಶಬ್ದಃ ಪ್ರಸಿದ್ಧಾರ್ಥಕತಯಾ ಪ್ರಯುಜ್ಯತೇ।

೨ 2 ವಿಶ್ರುತಃ ವಿಶಿಷ್ಟತಯಾ ಶ್ರುತಿಪ್ರತಿಪಾದಿತಃ ಆತ್ಮಾ ಸ್ವರೂಪಂ ಯಸ್ಯ ಸಃ ವಿಶ್ರುತಾತ್ಮಾ।

3 ಸರ್ವೇ ವೇದಾ ಯತ್ಪದಮಾಮನಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮಿ। ಓಮಿತ್ಯೇತತ್।

-ಕಾ. ಉ. 1-6-1

4 ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ।

-ಗೀ. 15-18

5 ಸರ್ವವೇದಪದೋದ್ಗೀತಮಿಂದಿರಾಧಾರಮುತ್ತಮಮ್। ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್।

-ದ್ವಾ. ಸ್ತೋ.

೩ 6 ವಿಶ್ರುತಃ ಆಪಾತತಃ ವಿರುದ್ಧತಯಾ ಶ್ರುತಿಪ್ರತಿಪಾದಿತಃ ಆತ್ಮಾ ಸ್ವರೂಪಂ ಯಸ್ಯ ಸಃ।

ವೇದಾದಿಗಳಲ್ಲಿ ಕೆಲವೆಡೆ ಜೀವಾತ್ಮ ಪರಮಾತ್ಮರಿಗೆ ಅಭೇದವನ್ನು ಹೇಳಿದಂತೆಯೂ, ಮತ್ತೆ ಕೆಲವೆಡೆ ಶ್ರೀಹರಿಗೆ ದೇಹಯೋಗ ವಿಯೋಗಗಳನ್ನು ಹೇಳಿದಂತೆಯೂ, ಇನ್ನು ಕೆಲವೆಡೆ ದುಃಖ, ಗಾಯಾದಿಗಳು, ಪರಾಭವ, ಅಸ್ವಾತಂತ್ರ್ಯ ಹೇಳಿದಂತೆಯೂ ಆಪಾತತಃ ಕಾಣುವುದು ದುರಾತ್ಮರಾದ ದೈತ್ಯರ ಮೋಹಕ್ಕಾಗಿಯೇ ಹಾಗೆ ಹೇಳಲಾಗಿದೆ—ಎಂದು ಬ್ರಹ್ಮಾಂಡ ಸಂದೇಶಿಸಿದೆ[1]

ಳಿ ಸರ್ವವಿಲಕ್ಷಣನಾಗಿ ನಿರ್ಧಾರಿತವಾದ ಸ್ವರೂಪ ಉಳ್ಳವನು[2]

ಭಗವಂತನು ಲಕ್ಷ್ಮೀದೇವಿಯಂತೆ ಅಸ್ವಾತಂತ್ರ್ಯನಲ್ಲ, ಬ್ರಹ್ಮಾದಿಗಳಂತೆಯೂ ಅಲ್ಲ ಮುಕ್ತ ರಂತೆಯೂ ಅಲ್ಲ ಅಂದಮೇಲೆ ಜಡಗಳಂತೆ ಅಲ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ ತಾನೆ?—ಹೀಗೆ ಬೃಹದಾರಣ್ಯಕೋಪನಿಷತ್ತಲ್ಲಿ ಸರ್ವವಿಲಕ್ಷಣನಾಗಿ ಭಗವಂತನು ಪ್ರತಿಪಾದಿತ ನಾಗಿರುವನು[3]

೫ (ಸಮಗ್ರವಾಗಿ, ಅಥವಾ ಅವನ ಅನುಗ್ರಹಕ್ಕೆ ಪಾತ್ರರಾಗದವರಿಂದ) ನಿರ್ಧರಿಸಲ್ಪ ಡದ ಸ್ವರೂಪವುಳ್ಳವನು[4]

---

1 'ಜೀವವಿಷ್ಣೋರಭೇದಶ್ಚ ದೇಹಯೋಗವಿಯೋಜನೇ । ವಿಷ್ಣೋರ್ದುಃಖಂ ವ್ರಣಿತ್ವಾದಿ ಪರಾಭವಸ್ತಥೈವ ಚ । ಅಸ್ವಾತಂತ್ರ್ಯಂ ಚ ವೇದಾದಾವುಕ್ತವದ್ ಭಾಸತೇ ವಿಭೋಃ । ಕ್ವಚಿತ್ ಕ್ವಚಿದ್ ವಿಮೋಹಾಯ ದೈತ್ಯಾದೀನಾಂ ದುರಾತ್ಮನಾಮ್'
-ಬ್ರಹ್ಮಾಂಡ (ಭಾಗ. ತಾ. ನಿ 12-3-9)

ಳಿ 2 ವಿಲಕ್ಷಣತಯಾ ಶ್ರುತಃ ಅವಧೃತ ಆತ್ಮಾ ಸ್ವರೂಪಂ ಯಸ್ಯ ಸಃ ।
'ಶ್ರುತಂ ಶಾಸ್ತ್ರಾವಧೃತಯೋಃ' -ಅ ಕೋ.

3 ಸ ಏಷ ನೇತಿ ನೇತ್ಯಾತ್ಮಾ
-ಬೃ. ಉ. 5-9-26

ಸ ಏಷ ಭಗವಾನ್ ನೈವಂ ಶ್ರೀವದನ್ಯಾಶ್ರಯೋ ಹರಿಃ । ನ ಚ ಬ್ರಹ್ಮಾದಿವದ್ ವಿಷ್ಣು-ರ್ನೈವಾಸೌ ಬದ್ಧವತ್ ಕ್ವಚಿತ್ । ನಚ ಮುಕ್ತವದೀಶೇಶಃ ಕುತ ಏವ ಜಡೋಪಮಃ . ಅತಸ್ತಸ್ಯಾತಿವೈಷಮ್ಯಾನ್ನೇತಿ ನೇತ್ಯಾಹ ತಂ ಶ್ರುತಿಃ
-ಬೃ. ಉ. ಭಾ.

೫ 4 ಸಮಗ್ರತಯಾ ಅಪ್ರಾಪ್ತತದನುಗ್ರಹೇಣ ವಾ ವಿಶ್ರುತಃ ಅಶ್ರುತಃ ಆತ್ಮಾ ಸ್ವರೂಪಂ ಯಸ್ಯ ಸಃ ವಿಶ್ರುತಾತ್ಮಾ । 'ವಿಪ್ರಿಯಂ' ಇತ್ಯಾದಾವಿವ ವಿವರ್ಣಸ್ಯ ನಞರ್ಥಕತ್ವಮ್ ।

ಭಗವಂತನು ಅನಂತನಾಗಿರುವುದರಿಂದ ಅವನ ಸ್ವರೂಪವನ್ನು ಸಮಗ್ರವಾಗಿ ತಿಳಿಯಲಾಗದು. ಆದುದರಿಂದಲೇ ಚತುರ್ಮುಖನು ರುದ್ರನಿಗೆ—ಭಗವಂತನ ಸ್ವರೂಪವನ್ನು ಚೆನ್ನಾಗಿ ಬಲ್ಲೆ ಎಂದು ತಿಳಿದಿ ಎಂದಾದರೂ ನೀನು ಇನ್ನೂ ಸ್ವಲ್ಪವೇ ತಿಳಿದಿ ಎಂದೇ ಅರ್ಥ ಯಾಕೆಂದರ ಭಗವಂತನ ಸ್ವರೂಪದ ಬಗ್ಗೆ ದೇವತೆಗಳಿಗೂ ಜಿಜ್ಞಾಸ ನಡೆಸಬೇಕಾದ ಅಂಶಗಳು ಇದ್ದೇ ಇವೆ—ಎಂದು ಸಂದೇಶಿಸಿರುವನು[1]

ಅವರವರ ಯೋಗ್ಯತೆಗೆ ತಕ್ಕಂತೆ ಭಗವಂತನ ಸ್ವರೂಪವನ್ನು ತಿಳಿದುಕೊಳ್ಳಬೇಕಾದರ ಅವನ ಅನುಗ್ರಹ ಬೇಕೇ ಬೇಕು ಅವನು ಯಾರನ್ನು ತನ್ನ ಭಕ್ತನನ್ನಾಗಿ ಸ್ವೀಕರಿಸುವನೋ ಅವನಿಗಷ್ಟೇ ತನ್ನ ಸ್ವರೂಪವನ್ನು ಪ್ರಕಾಶಿಸುವನೆಂದು ಯಮದೇವರು ಸಂದೇಶಿಸುವರು[2]

೬ ವಿಶಿಷ್ಟನಾಗಿರುವ ಪ್ರಯುಕ್ತ 'ವಿ' ಎನಿಸುವ ತನ್ನಿಂದಲ್ಲೇ ನಿರ್ಧರಿಸಲ್ಪಟ್ಟಿರುವ ಸ್ವರೂಪವುಳ್ಳವನು[3]

ಸರ್ವಜ್ಞತಮನಾದ ಭಗವಂತನು ಇತರ ವಿಶ್ವವನ್ನು ತಿಳಿದಿರುವಂತೆ ತನ್ನ ಸ್ವರೂಪವನ್ನೂ ಚೆನ್ನಾಗಿ ಬಲ್ಲನು ಆದ್ದರಿಂದಲೇ ಅರ್ಜುನನು ಶ್ರೀಕೃಷ್ಣಪರಮಾತ್ಮನಲ್ಲಿ—ನಿನ್ನನ್ನು ನೀನೇ ಬಲ್ಲವನಾಗಿರುವಿ'—ಎಂದು ನಿವೇದಿಸಿಕೊಂಡಿರುವನು[4]

೭ ವಿವಿಧ ಶಾಸ್ತ್ರಗಳಲ್ಲಿ ಪ್ರತಿಪಾದ್ಯನಾಗಿ ವ್ಯಾಪಿಸಿರುವವನು[5]

---

1 ಯದಿ ಮನ್ಯಸೇ ಸುವೇದೇತಿ ದಹರಮೇವಾಪಿ ನೂನಂ ತ್ವಂ ವೇತ್ಥ ಬ್ರಹ್ಮಣೋ ರೂಪಮ್ । ಯದಸ್ಯ ತ್ವಂ ಯದಸ್ಯ ದೇವೇಷ್ವಥ ನು ಮೀಮಾಂಸ್ಯಮೇವ ತೇ ॥

-ತ. ಉ. 3-1

2 'ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈವ ಆತ್ಮಾ ವಿವೃಣುತೇ ತನೂಂ ಸ್ವಾಮ್'

-ಕಾ ಉ. 1-6-9

೬ 3 'ವಿಃ ಪಕ್ಷಿಪರಮಾತ್ಮನೋಃ' ಇತಿ ವಿನಾ ಪರಮಾತ್ಮನಾ ಸ್ವೇನೈವ ಶ್ರುತಃ ಅವಧೃತಃ ಆತ್ಮಾ ಸ್ವರೂಪಂ ಯಸ್ಯ ಸಃ ।

4 ಸ್ವಯಮೇವಾಽಽತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।

-ಗೀತಾ. 10-15

೭ 5 ವಿವಿಧಾನಿ ಶ್ರುತಾನಿ ಶಾಸ್ತ್ರಾಣಿ ವಿಶ್ರುತಾನಿ । 'ಶ್ರುತಂ ಶಾಸ್ತ್ರಾವಧೃತಯೋಃ'। ವಿಶ್ರುತೇಷು ಆ ತನೋತಿ ಪ್ರತಿಪಾದ್ಯತಯಾ ವ್ಯಾಪ್ನೋತೀತಿ ವಿಶ್ರುತಾತ್ಮಾ ।

ನಾಲ್ಕು ವೇದಗಳು, ಮಹಾಭಾರತ, ಪಂಚರಾತ್ರ, ಮೂಲರಾಮಾಯಣ ಹಾಗೂ ಇವುಗಳಿಗೆ ಅನುಕೂಲಗಳಾದ ಗ್ರಂಥಗಳಷ್ಟೇ ಶಾಸ್ತ್ರವೆನಿಸಿದ್ದು[1], ಇಂತಹ ಶಾಸ್ತ್ರದಲ್ಲಿ ಭಗವಂತನು ಪ್ರತಿಪಾದ್ಯನಾಗಿರಲೇಬೇಕು ಭಗವಂತನ ಸರ್ವೋತ್ತಮತ್ವದ ಸಮರ್ಥನೆಗಾಗಿಯೇ ಶಾಸ್ತ್ರ ಹೊರಟದ್ದು, ಅದನ್ನು ಸಮರ್ಥಿಸದಿದ್ದದ್ದು ಶಾಸ್ತ್ರ ಎಂದೇ ಎನಿಸದು—ಎಂದಿದೆ ಬ್ರಹ್ಮಾಂಡ[2]

೮ ಶ್ರುತಿಯಲ್ಲಿ ವಿಶೇಷವಾಗಿ ಪ್ರತಿಪಾದಿತರಾದ ಅಗ್ನ್ಯಾದಿಗಳಿಗ ಅಂತರ್ಯಾಮಿ ಆಗಿರುವವನು.[3]

ಶ್ರುತಿಯು ಅಗ್ನಿಸೂಕ್ತಾದಿಗಳಿಂದ ಭಗವಂತನ ಅಗ್ನ್ಯಾದಿನಾಮಕಗಳಾದ ಪ್ರತ್ಯೇಕರೂಪಗಳು ಪ್ರತಿಪಾದಿತಗಳಾದಂತೆ, ಅಗ್ನ್ಯಾದಿದೇವತೆಗಳಲ್ಲಿ ಅಂತರ್ಯಾಮಿಗಳಾಗಿರುವ ರೂಪಗಳೂ ಪ್ರತಿಪಾದಿತಗಳಾಗಿವೆ-ಎಂದಿರುವ ಶ್ರೀಮದಾಚಾರ್ಯರು ಅಗ್ನ್ಯಾದಿಸೂಕ್ತಗಳಿಂದ ಪ್ರತಿಪಾದಿತಗಳಾದ ಅಗ್ನ್ಯಾದಿದೇವತೆಗಳಲ್ಲಿ ಭಗವಂತನು ಅಂತರ್ಯಾಮಿಯಾಗಿರುವನೆಂಬುದನ್ನು ಸೂಚ್ಯವಾಗಿ ಸಂದೇಶಿಸಿರುವರು.[4]

೯ ವಿವಿಧ ಶಾಸ್ತ್ರಗಳಿಗೆ ಕಾರಣನಾದವನು ಮತ್ತು ಎಲ್ಲರ ಒಡೆಯನು.[5]

---

1 ಋಗ್ಯಜುಃಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಮ್ । ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ । ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ । -ಸ್ಕಾಂದ (ಬ್ರ ಸೂ. ಭಾ 1-1-3)

2 'ವಿಷ್ಣೋಃ ಸರ್ವೋತ್ತಮತ್ವಸ್ಯ ಜ್ಞಾನಾರ್ಥಂ ಶಾಸ್ತ್ರಮಿಷ್ಯತೇ । ಅತಸ್ತತ್ಸಾಧಕಂ ಶಾಸ್ತ್ರಂ ದುಶ್ಶಾಸ್ತ್ರಂ ತದ್ವಿರೋಧಿ ಯತ್'
-ಬ್ರಹ್ಮಾಂಡ (ಬ್ರ ಉ. ಭಾ. 3-5-4)

೮ 3 ವಿಶ್ರುತಾಃ ವಿಶೇಷೇಣ ಶ್ರುತಿಪ್ರತಿಪಾದಿತಾಃ ಅಗ್ನ್ಯಾದಯಃ ದೇವಾಃ । ತೇಷಾಂ ಆತ್ಮಾ ಅಂತರ್ಯಾಮೀ ವಿಶ್ರುತಾತ್ಮಾ ।
'ಆತ್ಮಾ ಸರ್ವನಿಯಂತೃತಃ' -ಬ್ರ ಉ ಭಾ. 5-5-1

4 'ಪೃಥಗ್ ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ಚ ಅಗ್ನ್ಯಾದಿಸೂಕ್ತವಾಚ್ಯಾನಿ. .'
-ಋ. ಭಾ. 1-83

೯ 5 ವಿವಿಧಾನಿ ಶ್ರುತಾನಿ ಶಾಸ್ತ್ರಾಣಿ ಯಸ್ಮಾತ್ಸಃ ವಿಶ್ರುತಃ । ವಿಶ್ರುತಶ್ಚಾಸಾವಾತ್ಮಾ ಚ ವಿಶ್ರುತಾತ್ಮಾ ।

ಭಗವಂತನು ವೇದವ್ಯಾಸಾದಿ ರೂಪಗಳಿಂದ ವಿವಿಧ ಶಾಸ್ತ್ರಗಳಿಗೂ ಕಾರಣನಾಗಿರುವನು

೧೦ ವಿಶಿಷ್ಟನಾಗಿರುವವನು, ಪ್ರಸಿದ್ಧನಾಗಿರುವವನು ಹಾಗೂ ಎಲ್ಲೆಡೆ ವ್ಯಾಪಿಸಿರುವವನು.[1]

## ಜಿಜ್ಞಾಸೆ

[ಮೋಹನಾರ್ಥವಾಗಿ]

ಪ್ರ - ಜೀವೇಶ್ವರಭೇದವನ್ನು ಶಾಸ್ತ್ರದಲ್ಲಿ ಹೇಳುವದು ಅಸುರಮೋಹನಾರ್ಥವಾಗಿ ಎಂದು ಸಿದ್ಧಾಂತಿಗಳು ಹೇಳುವಂತೆ ಜೀವೇಶ್ವರ ಭೇದವನ್ನು ಶಾಸ್ತ್ರದಲ್ಲಿ ಹೇಳುವದು ಅಸುರ ಮೋಹನಾರ್ಥವಾಗಿ ಎಂದು ಪ್ರತಿಬಂದಿಯಾಗಿ ಇತರರು ಹೇಳಿದರೆ ಸಿದ್ಧಾಂತಿಗಳು ಏನು ಹೇಳುವರು?

ಉ - ಶಾಸ್ತ್ರಗಳಿಗೆ ಜಗತ್ಪ್ರಭುವಿನ ಗುಣಗಾನವನ್ನು ಮಾಡಿ ಸಜ್ಜೀವರಿಗೆ ಭಕ್ತಿಯನ್ನುಂಟು ಮಾಡುವದು ಹೇಗೆ ಅಭಿಪ್ರೇತವೋ ಹಾಗೆಯೇ ದುಷ್ಟಜೀವರಿಗೆ ಜಗತ್ಪ್ರಭುವಿನಲ್ಲಿ ದೋಷ ಜ್ಞಾನವನ್ನುಂಟು ಮಾಡಿ ಅವನಲ್ಲಿ ದ್ವೇಷವನ್ನು ಬೆಳೆಸುವುದು ಕೂಡ ಇಷ್ಟ ಹೀಗೆ ಮಾಡಿದರೆ ಆ ಆ ಜೀವರಿಗೆ ತತ್ತದ್ಯೋಗ್ಯ ಗತಿಯು ಸಿಗಲು ಅನುಕೂಲವಾಗುತ್ತದೆ. ಜೀವ ರಲ್ಲಿ ಅನಂತ ದೋಷಗಳು ಇರುವವರಿಂದ ಅಂತಹ ಎಲ್ಲ ಜೀವರು ಪರಮಾತ್ಮಸ್ವರೂಪರು ಎಂದು ಹೇಳುವದು ಪರಮಾತ್ಮನಲ್ಲಿ ದೋಷಜ್ಞಾನಕ್ಕೆ ಕಾರಣವಾಗುತ್ತದೆ. ಅದರಿಂದ ದುಷ್ಟಜೀವರಿಗೆ ಪರಮಾತ್ಮನಲ್ಲಿ ದ್ವೇಷವು ಅಭಿವೃದ್ಧವಾಗುತ್ತದೆ ಪರಮಾತ್ಮನು ದೋಷ ಪೂರ್ಣರಾದ ಜೀವರಿಗಿಂತ ಭಿನ್ನನು ಎಂದು ತಿಳಿದಾಗ ಪರಮಾತ್ಮನು ನಿರ್ದೋಷನು ಎಂದು ಜ್ಞಾನವು ಉಂಟಾಗಿ ಅವನಲ್ಲಿ ಭಕ್ತಿಯು ಹೆಚ್ಚುತ್ತದೆ. ಭಕ್ತಿದ್ವಾರಾ ಮುಕ್ತಿ ಸಾಧನವಾದ ಜ್ಞಾನವು ಮೋಹರೂಪವಾಗಲಾರದು ದ್ವೇಷದ್ವಾರಾ ಅಧೋಗತಿ ಸಾಧನ ವಾದ ಜ್ಞಾನವು ಮೋಹರೂಪವಾಗದೆ ಇರದು ಆದುದರಿಂದ ಜೀವೇಶ್ವರಾಭೇದವನ್ನು ಶಾಸ್ತ್ರದಲ್ಲಿ ಹೇಳುವದು ಅಯೋಗ್ಯ ಜೀವರ ಮೋಹಾರ್ಥವಾಗಿ ಎಂದು ಸಿದ್ಧಿಸುತ್ತದೆ



೨೦೮ ಸುರಾರಿಹಾ

೧ ದೇವತೆಗಳ ಶತ್ರುಗಳನ್ನು ಸಂಹರಿಸುವವನು.[2]

---

೧೦ 1 ವಿಶಿಷ್ಟತ್ವಾತ್ ವಿ। ಪ್ರಸಿದ್ಧತ್ವಾತ್ ಶ್ರುತಃ । ಆ ತನೋತೀತಿ ಆತ್ಮಾ ।
ವಿ ಶ್ರುತಃ ವಿಶ್ರುತಃ । ವಿಶ್ರುತಶ್ಚಾಸಾವಾತ್ಮಾ ಚ ವಿಶ್ರುತಾತ್ಮಾ ।

೧ 2 ಸುರಾಣಾಂ ಅರಯಃ ಸುರಾರಯಃ । ತಾನ್ ಹಂತೀತಿ ಸುರಾರಿಹಾ ।

ದೇವತೆಗಳಿಗೆ ಎರಡು ವಿಧದ ಶತ್ರುಗಳಿರುವರು — ಅಜ್ಞಾನ, ಅಹಂಕಾರಾದಿ ಆಂತರಿಕ ಶತ್ರುಗಳು ಮತ್ತು ಬಾಹ್ಯ ಶತ್ರುಗಳಾದ ರಾಕ್ಷಸರು. ಈ ಎರಡು ವಿಧದ ಶತ್ರುಗಳನ್ನೂ ಭಗವಂತನೇ ಸಂಹರಿಸುವನು. ಋಗ್ವೇದದಲ್ಲಿ ಇಂದ್ರನಾಮಕ ಭಗವಂತನನ್ನು ಸಂಬೋಧಿಸಿ ಜಗತ್ತಲ್ಲಿ ಸತ್ತ್ವಗುಣ ಪ್ರವೃದ್ಧವಾಗಬೇಕಾದಾಗ ನೀನು ರಾಕ್ಷಸರ ಜೊತೆ ಕಾದಾಡಿ ಅವರನ್ನು ನರಕಾದಿಗಳಲ್ಲಿ ಬೀಳಿಸುವಿ. ಹಾಗೆಯೇ ದೇವಗಳಲ್ಲಿ ಸತ್ತ್ವಗುಣ ಪ್ರವೃದ್ಧವಾಗಬೇಕಾದಾಗ ಜ್ಞಾನ ಕೊಟ್ಟು ಅಜ್ಞಾನಾದಿಗಳನ್ನು ನಾಶಪಡಿಸುವಿ—ಎಂದು ಸ್ತುತಿಸಲಾಗಿದೆ[1]

ಭಗವಂತನು ದೇವತೆಗಳ ಅಜ್ಞಾನಾಹಂಕಾರಾದಿಗಳನ್ನು ತಾನೇ ಉಪದೇಶಿಸುವ ಮೂಲಕವಾಗಲೀ, ಅವರವರ ನಿಯತ ಗುರುಗಳ ಮೂಲಕ ಉಪದೇಶವನ್ನು ತಲುಪಿಸುವ ಮೂಲಕವಾಗಲೀ, ನಾಶಪಡಿಸುವನು[2] ಬಲಕಾರ್ಯಕ್ಕಾಗಿ ತಾಳುವ ತನ್ನ ರಾಮಕೃಷ್ಣಾದ್ಯವತಾರಗಳಲ್ಲಿ ಅಸುರರನ್ನು ಸಂಹರಿಸುವನು[3]. ಅವನ ಅವತಾರಗಳ ಉದ್ದೇಶಗಳಲ್ಲಿ ಇದೂ ಒಂದು[4] ಅಸುರರನ್ನು ಬರೇ ದೈಹಿಕ

---

1 ತ್ವಮೇತಾನ್ರುದತೋ ಜಕ್ಷತಶ್ಚಾಯೋಧಯೋ ರಜಸ ಇಂದ್ರ ಪಾರೇ ।
ಅವಾದಹೋ ದಿವ ಆದಸ್ಯುಂ
—ಋ. ವೇ. 33-7

ರಕ್ಷೋಗಣಾನ್ ಭಕ್ಷಯತೋ ಮುನೀಂಶ್ಚ ಸಂಪೀಡಿತಾನ್ ರುದತಶ್ಚ ತ್ವಮೇವ । ಆಯೋಧಯೋ ರಜಸೋಽಂತೇ ಸುಸತ್ತ್ವವೃದ್ಧಿರ್ಯದಾ ಜಗತಃ ಸ್ಯಾತ್ತದೈವ । ಪುಂದೋಷಾನ್ ವಾ ಗುಣಭಕ್ಷಾನ್ ನೃಸತ್ತ್ವವೃದ್ಧ್ಯೈ ದಿವೋ ಜಾನತೋಽವಾದಹಶ್ಚ । ಅಜ್ಞಾನದಸ್ಯುಂ ।
—ಮ. ಭಾ.

2 ಯಥಾ ತಲವಕಾರೋಕ್ತದಿಶಾ ಕದಾಚಿತ್ ದೈತ್ಯದಾನವವಿಜಯವಿಷಯೇ ಅಹಂಕಾರಯುಕ್ತಾನಾಂ ದೇವತಾನಾಂ ಪ್ರಬೋಧಃ ಯಕ್ಷರೂಪೇಣ ಭಗವತಾ ಕೃತಃ । ಅನಂತರಂ ಉಮಯಾ ದೇವೇಂದ್ರಾಯ ತತ್ತ್ವೋಪದೇಶಃ ದಾಪಿತಶ್ಚ ।

3 ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ ।
—ಮ. ಭಾರ. ತಾ ನಿ. 2-24

ಬಲಕಾರ್ಯಃ ಬಲಸ್ಯೈವ ಕಾರ್ಯಂ ದೈತ್ಯಹನನಭೂಭಾರಹರಣಾದಿ ಸ್ವಾವತಾರಪ್ರಯೋಜನಂ ಯಸ್ಯ ತಥೋಕ್ತಃ ।
—ಭಾವಪ್ರಕಾಶಿಕಾ (ಮ. ಭಾರ. ತಾ. ನಿ. ಟಿ.)

4 ‘. . ವಿನಾಶಾಯ ಚ ದುಷ್ಕೃತಾಮ್ । . . . ಸಂಭವಾಮಿ ಯುಗೇಯುಗೇ’
—ಗೀ. 4-8

ವಾಗಿ ಕೊಲ್ಲುವುದಷ್ಟೇ ಅಲ್ಲ, ಅವರು ನಿಯತವಾಗಿ ತಮಸ್ಸಲ್ಲಿ ಬೀಳುವಂತೆ ಮಾಡುವ ಮೂಲಕವೂ ಸಂಹರಿಸುವನು ಶರೀರವನ್ನು ನಾಶಪಡಿಸುವ ಸಂಹಾರವನ್ನು ಭಗವಂತನು ಎಲ್ಲರ ವಿಷಯದಲ್ಲೂ ಮಾಡುವನು ಆದುದರಿಂದ ಶಾಸ್ತ್ರದಲ್ಲಿ ಅಲ್ಲಲ್ಲಿ 'ದೈತ್ಯನಾಶಕ' 'ಅಸುರಸಂಹಾರಿನ್' ಎಂದೆಲ್ಲ ವಿಶೇಷವಾಗಿ ಭಗವಂತನು ಉಲ್ಲೇಖಿಸಲ್ಪಟ್ಟಿರುವುದು—ಅವನು ಅಸುರರಿಗೆ, ದೈತ್ಯರಿಗೆ ವಿಶೇಷವಾಗಿ ತಮಸ್ಸನ್ನು ನೀಡುವನೆಂಬ ಅಭಿಪ್ರಾಯದಲ್ಲಿ—ಎಂದು ಶ್ರೀಮದಾಚಾರ್ಯರು ನಿರ್ಣಯಿಸಿರುವರು[1] ಶ್ರೀ ವೇದವ್ಯಾಸರು ಮಹಾಭಾರತವನ್ನು ನಿರೂಪಿಸುವಾಗ ದುರ್ಯೋಧನನನ್ನು ಪರಪಕ್ಷದವನನ್ನಾಗಿ ತೋರಿಸಿ ಅವನ ಪರಾಜಯವನ್ನು ವರ್ಣಿಸುವುದರ ಮೂಲಕ ದೈತ್ಯರಿಗೆ ಅನಿಷ್ಟ ಸಾಧಿಸುವುದೇ ತಮಗೆ ಪ್ರಿಯವಾದುದೆಂಬುದನ್ನು ತೋರಿಸಿಕೊಟ್ಟಿರುವರೆಂದು ಶ್ರೀಮದಾಚಾರ್ಯರು ಪ್ರತಿಪಾದಿಸಿರುವರು[2]

ಭಗವಂತನಿಗೆ ಸ್ವಾರ್ಥಕ್ಕಾಗಿ ಯಾರೂ ವಧ್ಯರೂ ಅಲ್ಲಿ, ರಕ್ಷಣೀಯರೂ ಅಲ್ಲ[3] ಆದರೆ ಅನುಗ್ರಹಕ್ಕೆ ಯೋಗ್ಯರಾಗಿರುವುದರಿಂದಷ್ಟೇ ದೇವತೆಗಳು ರಕ್ಷಣೀಯರೆನಿಸುವರೆಂದು ನಿರ್ಣಯಿಸಿರುವ[4] ಶ್ರೀಮದಾಚಾರ್ಯರು ನಿಗ್ರಹಕ್ಕೆ ಯೋಗ್ಯರಾಗಿರುವುದರಿಂದಷ್ಟೇ ಅಸುರರು ಭಗವಂತನಿಗೆ ವಧ್ಯರೆನಿಸಿರುವರೆಂಬುದನ್ನು ಸೂಚಿಸಿರುವರು

---

**ಅತ್ರ ದುಷ್ಕೃತ್‌ಶಬ್ದೇನ ಪ್ರಧಾನತಃ ಅಸುರಾ ಏವ ಅಭಿಪ್ರೇತಾಃ ।**

1 **ಸೃಷ್ಟ್ವಾ ಬ್ರಹ್ಮಾದಯೋ ದೇವಾ ನಿಹತಾ ಯೇನ ದಾನವಾಃ ।**

**ತಸ್ಮೈ ದೇವಾಧಿದೇವಾಯ ನಮಸ್ತೇ ಶಾಂರ್ಗಧಾರಿಣೇ ॥**

**ಅಥ ಚ ದೈತ್ಯಹತಿಸ್ತಮಸಿ ಸ್ಥಿರಾ ನಿಯತಸಂಸ್ಥಿತಿರೇವ ನ ಚಾನ್ಯಥಾ ।**

**ತನುವಿಭಾಗಕೃತಿಸ್ಸಕಲೇಷ್ವಿಯಂ ನಹಿ ವಿಶೇಷಕೃತಾ ಸುರದೈತ್ಯಗಾ ॥**

**–ಮ. ಭಾರ. ತಾ. ನಿ. 2-63,64**

2 **ತಮಿಮಮೇವ ಸುರಾಸುರಸಂಚಯೋ ಹರಿಕೃತಂ ಪ್ರವಿಶೇಷಮುದೀಕ್ಷಿತುಮ್ ।**

**ಪ್ರತಿವಿಭಜ್ಯ ಚ ಭೀಮಸುಯೋಧನೌ ಸ್ವಪರಪಕ್ಷಭಿದಾ ಕಥಿತಾ ಕಥಾ ॥**

**-ಮ. ಭಾರ. ತಾ. ನಿ. 2–6**

3 **'ನ ಯಸ್ಯ ವಧ್ಯೋ ನ ಚ ರಕ್ಷಣೀಯೋ ನೋಪೇಕ್ಷಣೀಯಾದರಣೀಯಪಕ್ಷಃ'**

**–ಭಾಗ. 8–5–22**

4 **'ಅನುಗ್ರಾಹ್ಯತಯಾ ಪಕ್ಷ್ಯಾ ದೇವಾ ನಾತ್ಮತಾರ್ಥತೋ ಹರೇಃ'**

**–ಭಾಗ. ತಾ. ನಿ.**

೨ ಅಸುರರಲ್ಲೂ ನಿಯಾಮಕನಾಗಿ ಆಯಾಯ ರೂಪದಿಂದ ಪ್ರವೇಶಿಸಿರುವವನು[1]

ಭಗವಂತನು ಎಲ್ಲರಲ್ಲೂ ಆಯಾಯ ರೂಪದಿಂದ ನಿಯಾಮಕನಾಗಿ ಪ್ರವೇಶಿಸುವನು ಸಮುದ್ರ ಮಥನ ಕಾಲದಲ್ಲಿ ಭಗವಂತನು ವಿಶೇಷವಾಗಿ ದೇವತೆಗಳನ್ನು ದೈವರೂಪದಿಂದ ಪ್ರವೇಶಿಸಿದಂತೆ ದೈತ್ಯರನ್ನೂ ಅಸುರರೂಪದಿಂದ ಪ್ರವೇಶಿಸಿ ಅವರ ಬಲ, ವೀರ್ಯಗಳನ್ನು ಪ್ರಚೋದಿಸಿದನು.[2]

೩ ಜ್ಞಾನಕ್ಕೆ ವೈರಿಯಂತಿರುವ ಕಾಮವನ್ನು ನಿಗ್ರಹಿಸುವವನು[3]

ಕಾಮವು ಭಗವಂತನ ಹಾಗೂ ತನ್ನ ಜ್ಞಾನವು ಜೀವಾತ್ಮನಿಗೆ ಬರದಂತೆ ಮಾಡುವುದು ಅಗ್ನಿಯು ಪ್ರಕಾಶಸ್ವರೂಪಿ ಆದರೆ ಅದು ಧೂಮದಿಂದ ಆವೃತವಾದಾಗ ಉಳಿದವರಿಗೆ ಕಾಣಿಸಲಾರದು. ಇಲ್ಲಿ ಧೂಮವು ಹೇಗೆ ಅಗ್ನಿಯನ್ನು ಸಂಪರ್ಕಿಸದೆಯೇ ಪರದೆಯ ರೂಪದಲ್ಲಿ ಆವರಿಸುವುದರ ಮೂಲಕ, ಅಗ್ನಿಯ ಪ್ರಕಾಶ ಉಳಿದವರಿಗೆ ದೊರಕದಂತೆ ಮಾಡುವುದೋ ಅಂತೆಯೇ ಕಾಮವು ಪ್ರಕಾಶ ಸ್ವರೂಪಿ ಭಗವಂತನನ್ನು ಸ್ಪರ್ಶಿಸದೆಯೇ ಅವನನ್ನು ಆವರಿಸಿ ಜೀವಾತ್ಮನಿಗೆ ಅವನ ತಿಳುವಳಿಕೆ ಬಾರದಂತೆ ಮಾಡುವುದು ಕನ್ನಡಿ ತನ್ನ ಮೂಲಕ ಪದಾರ್ಥವನ್ನು ತೋರಿಸಿಕೊಡಬಲ್ಲ ಪದಾರ್ಥ, ಆದರೆ ಅಂತಹ ಕನ್ನಡಿ ಮಾಲಿನ್ಯದ ಸಂಪರ್ಕಕ್ಕೊಳಗಾದಾಗ, ಇನ್ನೊಂದು ಪದಾರ್ಥವನ್ನು ತೋರಿಸಿ ಕೊಡಲಾರದೋ ಅಂತೆಯೇ ಜೀವಾತ್ಮನ ಅಂತಃಕರಣ ಕಾಮದ ಸಂಪರ್ಕಕ್ಕೊಳಗಾಗಿ ಜೀವಾತ್ಮನ ಅಥವಾ ಪರಮಾತ್ಮನ ಜ್ಞಾನವು ಜೀವಾತ್ಮನಿಗೆ ಉಂಟುಮಾಡಿಕೊಡಲಾರದು ಚರ್ಮದ ಚೀಲದಿಂದ ಆವೃತನಾದ ಗರ್ಭಸ್ಥ ಜೀವಾತ್ಮನು, ಆ ಚೀಲದಿಂದ ಪೂರ್ಣವಾಗಿ ಆವರಿಸಲ್ಪಟ್ಟು ಪ್ರಯುಕ್ತ ತನ್ನ ಯಾವುದೇ ಚೇಷ್ಟೆಗೆ ಅಸಮರ್ಥನಾಗಿರುವಂತೆ ಕಾಮದಿಂದ ಪೂರ್ಣವಾಗಿ ಆವೃತನಾದ ಜೀವಾತ್ಮ ತನ್ನನ್ನಾಗಲೀ,

---

೨ 1 ಸುರಾಣಾಂ ಅರಯಃ ಸುರಾರಯಃ । ತಾನ್ ನಿಯಾಮಕತಯಾ ಹಂತಿ ಗಚ್ಛತಿ, ಪ್ರವಿಶತೀತಿ ಯಾವತ್, ಸುರಾರಿಹಾ । 'ಹನ ಹಿಂಸಾಗತ್ಯೋಃ' ಇತಿ ಹಂತಿಃ ಗತ್ಯರ್ಥೇಽಪಿ ವರ್ತತೇ ।

2 ತಥಾಽಽಸುರಾನಾವಿಶದಾಸುರೇಣ ರೂಪೇಣ ತೇಷಾಂ ಬಲವೀರ್ಯಮೀರಯನ್ । ಉದ್ದೀಪಯನ್ ದೇವಗಣಾಂಶ್ಚ ವಿಷ್ಣುರ್ದೈವೇನ ..

ಭಾಗ. 3-7-11

೩ 3 ಸುಷ್ಠು ರಮಂತೇ ಅನೇನೇತಿ ಸುರಂ ಜ್ಞಾನಮ್। ತಸ್ಯಾರಿಃ ಕಾಮಃ । ತಂ ಹಂತಿ ನಿರಸ್ಯತೀತಿ ಸುರಾರಿಹಾ ।

ಪರಮಾತ್ಮನನ್ನಾಗಲೀ ತಿಳಿದುಕೊಳ್ಳಲು ಅಶಕ್ತನಾಗುವನು[1]

ಶಾಸ್ತ್ರಾದಿಗಳಿಂದ ಪರೋಕ್ಷಜ್ಞಾನವನ್ನು ಹೇಗಾದರೂ ಮಾಡಿ ಸಂಪಾದಿಸಿಕೊಂಡರೂ, ಅದು ಕಾಮದಿಂದ ತಡೆಹಿಡಿಯಲ್ಪಟ್ಟದ್ದಾಗಿ ಅಪರೋಕ್ಷ ಜ್ಞಾನವನ್ನು ಉಂಟು ಮಾಡಲು ಅಶಕ್ತವಾಗುವುದು[2]

ಇಂತಹ 'ಸುರಾರಿ'ಯ ಸಂಹಾರ ಭಗವಂತನಿಂದಲೇ ಸಾಧ್ಯ ತಾರತಮ್ಯ ಪೂರ್ವಕವಾಗಿ ದೇವತೆಗಳನ್ನೂ, ಸರ್ವೋತ್ತಮನಾದ ಭಗವಂತನನ್ನೂ ತಿಳಿದಾಗಲೇ ಭಗವಂತನು ಕಾಮವನ್ನು ಸಂಹರಿಸುವುದರ ಮೂಲಕ ಜೀವಾತ್ಮರು ಅದನ್ನು ಜಯಿಸುವಂತೆ ಮಾಡುವನು.[3]

ಳ ಸಮೀಚೀನ ಸುಖರೂಪವಾದ ಮೋಕ್ಷಸುಖಕ್ಕೆ ಪ್ರತಿಬಂಧಕವಾಗಿದ್ದು ಶತ್ರುಗಳಂತಿರುವ ಅವಿದ್ಯಾ ಕಮರ್ಾದಿಗಳನ್ನು ನಾಶಪಡಿಸುವವನು[4]

ಭಗವಂತನು ಜೀವಾತ್ಮನ ಅವಿದ್ಯಾಕಾಮಕರ್ಮಾದಿಗಳನ್ನು ತನ್ನ ಅಪರೋಕ್ಷ ಜ್ಞಾನದಿಂದಾಗಿ

---

1 ಧೂಮೇನಾऽವ್ರಿಯತೇ ವಹ್ನಿರ್ಯಥಾऽऽದರ್ಶೋ ಮಲೇನ ಚ ।
ಯಥೋಲ್ಬೇನಾऽವೃತೋ ಗರ್ಭಸ್ತಥಾ ತೇನೇದಮಾವೃತಮ್ ॥
-ಗೀ 3-38

2 ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ... ।
-ಗೀತಾ. 3-39

ಜ್ಞಾನಸ್ಯ ಬ್ರಹ್ಮಣಶ್ಚಾಗ್ನೇರ್ಧೂಮೋ ಬುದ್ಧೇರ್ಮಲಂ ತಥಾ ।
ಆದರ್ಶಸ್ಯಾಥ ಜೀವಸ್ಯ ಗರ್ಭೋಲ್ಬೋऽಪಿ ಹಿ ಕಾಮಕಃ ।
-ಗೀ. ಭಾ.

3 'ಅವಿಜ್ಞಾಯ ಪರಂ ಮತ್ತೋ ಜಯಃ ಕಾಮಸ್ಯ ನೈ ಕುತಃ'
-ಗೀ. ಭಾ.

ಳ 4 ಸುಷ್ಠು ರಂ ಸುಖಂ ಸುರಂ ಮೋಕ್ಷಸುಖಮ್ । ತಸ್ಯ ಅರಯಃ ಪ್ರತಿಬಂಧಕತ್ವೇನ ಶತ್ರುಸ್ಥಾನೀಯಾಃ ಅವಿದ್ಯಾಕಾಮಕರ್ಮಾದಯಃ । ತಾನ್ ಸ್ವದರ್ಶನಮಾತ್ರೇಣ ಹಂತಿ ನಾಶಯತೀತಿ ಸುರಾರಿಹಾ ।

ನಾಶಪಡಿಸಿ ಮುಕ್ತಿಗೆ ಯೋಗ್ಯವಾದ ರೂಪವನ್ನು ಜೀವಾತ್ಮನಿಗೆ ನೀಡುವವನು.[1]

೫ ಚನ್ನಾಗಿ ಕ್ರೀಡಿಸುವವನು ಹಾಗೂ ಸಜ್ಜೀವರಿಗೆ ಶತ್ರುಗಳಾದ ಅಜ್ಞಾನಾದಿಗಳನ್ನು ನಾಶಪಡಿಸುವವನು.[2]

೬ ಚೆನ್ನಾಗಿ ಕ್ರೀಡಿಸುವವನು ಹಾಗೂ ತನ್ನ ಸುದರ್ಶನ ಚಕ್ರದಿಂದ (ಶಿಶುಪಾಲಾದಿಗಳನ್ನು) ಸಂಹರಿಸುವವನು[3]

ಭಗವಂತನು ತಾನು ಆನಂದ ಸ್ವರೂಪಿ. ತನ್ನ ಭಕ್ತರಿಗೂ ಸುಖವನ್ನು ನೀಡುವುದಕ್ಕಾಗಿ ಅವರಿಗೆ ತೊಂದರೆ ಕೊಡುತ್ತಿರುವ ದುಷ್ಟರನ್ನು ತನ್ನ ಚಕ್ರಾಯುಧದ ಮೂಲಕ ಸಂಹರಿಸುವನು

೭ ದೇವತೆಗಳ ಶತ್ರುಗಳಾದ ಅಸುರರನು ತ್ಯಜಿಸುವವನು.[4]

ಭಗವಂತನು ಸಾತ್ತ್ವಿಕರಾದ ದೇವತೆಗಳ ಪಕ್ಷದಲ್ಲೇ ಇದ್ದು ಅಸುರಸ್ವಭಾವದ ಅಸುರರನ್ನು ದೂರೀಕರಿಸುವನು

## ಜಿಜ್ಞಾಸೆ

### [ಗುಣರೂಪದ ಪಕ್ಷಪಾತ]

ಪ್ರ - ಪರಮಾತ್ಮನು ದೇವತೆಗಳ ಶತ್ರುಗಳನ್ನು ನಾಶ ಮಾಡುವದರಿಂದ ಸುರಾರಿಹಾ ಎಂಬ ಪವಿತ್ರ ಪ್ರಸಿದ್ಧ ನಾಮವುಳ್ಳವನು ಎಂದು ಹೇಳುವಾಗ ಪರಮಾತ್ಮನು ದೇವತೆಗಳ ಪಕ್ಷಪಾತಿ ಎಂದು ಶಂಕೆಯು ಬರುತ್ತದಲ್ಲ?

---

1 ಸ ಭಗವಾನ್ ವಿಷ್ಣುರ್ಜೀವಸ್ಯ ಯನ್ಮಲಮ್ । ಅವಿದ್ಯಾಕಾಮಕರ್ಮಾದ್ಯಮಾತ್ಮಾಗ್ನೌ ನಾಶ್ಯ ಸರ್ವಕೃತ್ । ಸ್ವೇಚ್ಛಯಾ ಕುರುತೇ ರೂಪಂ ಯದ್ ಯೋಗ್ಯಂ ತಸ್ಯ ಮುಕ್ತಿಗಮ್'

ಬೃ. ಉ. ಭಾ. 6-4-4

೫ 2 ಸುಷ್ಠು ರಮಂತ ಇತಿ ಸುರಃ । ಅರೀನ್ ಭಕ್ತಾನಾಂ ಅಜ್ಞಾನಾದಿಶತ್ರೂನ್ ಹಂತೀತಿ ಅರಿಹಾ । ಸುರಶ್ಚಾಸಾವರಿಹಾ ಚ ಸುರಾರಿಹಾ ।

೬ 3 ಸುಷ್ಠು ರಮತೇ ಇತಿ ಸುರಃ । ಅರಿಣಾ ಚಕ್ರೇಣ ಶತ್ರೂನ್ ಹಂತೀತಿ ಅರಿಹಾ । ಸುರಶ್ಚಾಸಾವರಿಹಾ ಚ ಸುರಾರಿಹಾ ।

೭ 4 ಸುರಾರೀನ್ ಜಹಾತೀತಿ ಸುರಾರಿಹಾ ।

ಉ - ಸ್ವಾಭಾವಿಕಗುಣ ನಾಂಸರ್ಗಿಕಗುಣ ಎಂದು ಎರಡು ಪ್ರಕಾರದ ಗುಣಗಳು ಇರುವವು. ಅವುಗಳಲ್ಲಿ ಸಾಂಸರ್ಗಿಕ ಗುಣಗಳು ಸಾರವನ್ನು ಹೊಂದುತ್ತವೆ ಸ್ವಾಭಾವಿಕ ಗುಣವು ಅದರ ಆಶ್ರಯವು ಇರುವವರಗೆ ಇರುತ್ತದೆ ಅವರ ಆಶ್ರಯವು ಅನಾದಿನಿತ್ಯವಾದರ ಆ ಗುಣವೂ ಅನಾದಿನಿತ್ಯವಾಗಿ ಇರುವದು ಅಂತಹ ಸ್ವಾಭಾವಿಕ ಗುಣವು ಪರಮಾತ್ಮನಿಗೆ ಅತಿಪ್ರಿಯ ಆ ಗುಣವು ದೇವತೆಗಳಲ್ಲಿ ಇದೆ ಈ ಕಾರಣದಿಂದ ಪರಮಾತ್ಮನು ದೇವತಾ ಪಕ್ಷಪಾತಿಯಾಗಿದ್ದಾನೆ ಈ ಪಕ್ಷಪಾತವು ಸ್ವಾಭಾವಿಕಗುಣ ಪಕ್ಷಪಾತರೂಪವಾದುದರಿಂದ ಗುಣ ರೂಪವಾಗಿದೆ ಆದ್ದರಿಂದ ಇದು ದೇವರಿಗೆ ದೋಷವೆಂದು ಶಂಕಿಸುವದು ಯುಕ್ತವಲ್ಲ



ಗುರುರ್ಗುರುತಮೋ ಧಾಮ ಸತ್ಯಃ ಸತ್ಯಪರಾಕ್ರಮಃ ।
ನಿಮಿಷೋऽನಿಮಿಷಃ ಸ್ರಗ್ವೀ ವಾಚಸ್ಪತಿರುದಾರಧೀಃ ॥ ೨೩ ॥

೨೦೯ ಗುರುಃ

೧ ವಿದ್ಯೋಪದೇಶ ನೀಡುವವನು, ಅಜ್ಞಾನವನ್ನು ಹೋಗಲಾಡಿಸುವವನು[1]

ಗುರು ಎನಿಸಬೇಕಾದವನ ವ್ಯಕ್ತಿತ್ವಕ್ಕೆ ಎರಡು ಮುಖಗಳು ಉಪದೇಶಿಸುವುದು ಒಂದು ಮುಖವಾದರೆ, ಶಿಷ್ಯನ ಅಜ್ಞಾನವನ್ನು ತೊಲಗಿಸುವುದು ಮತ್ತೊಂದು ಮುಖ ಈ ಎರಡು ಅಂಶಗಳೂ ಮುಖ್ಯವಾಗಿ ಭಗವಂತನಲ್ಲೇ ಇರುವವು.

ಇತರ ಗುರುಗಳಲ್ಲೂ ಇದ್ದು ಅವರು ಉಪದೇಶಿಸುವಂತೆ ಅವರ ಬುದ್ಧಿಯನ್ನು, ಮಾತನ್ನು ಪ್ರಚೋದಿಸುವವನು ಅವನೇ[2] ಎಲ್ಲರಿಗೂ ಜ್ಞಾನೋಪದೇಶ ನೀಡುವ ಚತುರ್ಮುಖನಿಗೂ ಭಗವಂತನೇ ಜ್ಞಾನವನ್ನ ನೀಡುವವನು.[3] ಶಿಷ್ಯನ ಅಜ್ಞಾನವನ್ನು ತೊಲಗಿಸುವವನೂ ಭಗವಂತನೇ ತಿಳುವಿನ ಸೆಲೆ

---

೧ 1 ಗೃಣಾತಿ ವಿದ್ಯಾಃ ಉಪದಿಶತೀತಿ. ಗುರುಃ । 'ಗೃ ಶಬ್ದೇ' । ಅಥವಾ ಗಿರತಿ ಅಜ್ಞಾನಂ ನಾಶಯತೀತಿ ಗುರುಃ । 'ಗೃ ನಿಗರಣೇ' ।

2 ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಮ್ ।
-ಋ. ವೇ. 3-11

* ಸುವಾಚಾಂ ಪ್ರೇರಕಾ ಸದಾ । ಸುಬುದ್ಧಿಜ್ಞಾಪಿಕಾ ಸೈವ ।
-ಋ ಭಾ.

3 ..ತೇಷಾಂ ತು ಜ್ಞಾನದೋ ವಿಷ್ಣುರೇವ ಹಿ ।
–ಗುರುವಿವೇಕ (ಭಾ. ತಾ. ನಿ. 11-10-31)

ಚಿಮ್ಮಿದಾಗಷ್ಟೇ ಅಜ್ಞಾನ ತೊಲಗೀತು ಜ್ಞಾನ ಸ್ಫೂರ್ತಿಯನ್ನು ನೀಡುವವನು ಭಗವಂತ ಲಕ್ಷ್ಮೀ ದೇವಿ, ಚತುರ್ಮುಖ, ರುದ್ರ, ಇಂದ್ರಾದಿಗಳಿಗೂ ಜ್ಞಾನಸ್ಫೂರ್ತಿ ಯಾರಿಂದ ಉಂಟಾಗುವುದೋ ಅಂತಹ ಹರಿಯೇ ನಿಜವಾದ ಗುರುವಾಗಿದ್ದು, ಅವನಿಗೆ ಪ್ರಣಾಮ ಎಂದಿರುವರು ಶ್ರೀಮದಾ-ಚಾರ್ಯರು[1] ಶ್ರೀ ಬಾದರಾಯಣರು ಎಲ್ಲರ ಹೃದಯದಲ್ಲಿದ್ದು ಓಂಕಾರಪೂರ್ವಕಗಳಾದ ವಿದ್ಯೆಗಳನ್ನು ಯಾವಾಗಲೂ ಪ್ರೇರಿಸುತ್ತಿರುವರು ಚತುರ್ಮುಖನಿಗೆ ಸೃಷ್ಟಿಯ ಆದಿಯಲ್ಲಿ ವಿಶೇಷವಾಗಿ ವಿದ್ಯೆಯ ಪ್ರೇರಣೆಯನ್ನು ಅವರೇ ನೀಡಿದ್ದರು—ಎಂದು ಸಾತ್ತ್ವತ ಸಂಹಿತೆ ಸಂದೇಶಿಸಿದೆ ಮಹಾಭಾರತದ ಅನುಗೀತಾ ಪರ್ವದಲ್ಲಿ ಬ್ರಾಹ್ಮಣನು, ಹೃದಯದಲ್ಲಿರುವ ಭಗವಂತನೊಬ್ಬನೇ ಗುರು ಎಂದಿರುವುದೂ ಈ ಅಭಿಪ್ರಾಯದಲ್ಲೇ[3]

ಅಲ್ಲದೆ, ಮುಕ್ತಿಗೆ ಕಾರಣವಾದ ವಿದ್ಯೆಯನ್ನು ಕೊಡುವವನೇ ಮುಖ್ಯಗುರು ಬೇರೆ ವಿದ್ಯೆಯನ್ನು ನೀಡುವವರು ಏಕದೇಶ ಗುರುಗಳಷ್ಟೇ[4] ಆದ್ದರಿಂದ ನಮ್ಮ ಅವಿದ್ಯೆಯನ್ನು ಹೋಗಲಾಡಿಸಿ ತತ್ಪ್ರಯುಕ್ತವಾದ ಸಂಸಾರಬಂಧನವನ್ನು ತೊಲಗಿಸಿ ಮುಕ್ತಿಯನ್ನು ಕೊಡುವವನು ಭಗವಂತನೇ ಅಂದಮೇಲೆ ಅವನೇ ನಿಜವಾದ ಗುರು ಸತ್ಯವ್ರತರಾಜನು ಮತ್ಸ್ಯರೂಪಿ ಭಗವಂತನನ್ನು ಸ್ತುತಿಸುತ್ತಾ ಈ ಅಭಿಪ್ರಾಯದಲ್ಲೇ ಭಗವಂತನೇ ನಿಜವಾದ ಗುರು ಎಂದು ಸಾರಿರುವನು[5].

---

1 ಯಸ್ಮಾದ್ ಬ್ರಹ್ಮೇಂದ್ರರುದ್ರಾದಿದೇವತಾನಾಂ ಶ್ರಿಯೋಽಪಿ ಚ ।
ಜ್ಞಾನಸ್ಫೂರ್ತಿಸ್ಸದಾ ತಸ್ಮೈ ಹರಯೇ ಗುರವೇ ನಮಃ ॥
—ಮಂಗಲಪದ್ಯ (ಈಶ. ಉ)

2 ' ಹೃದಿಸ್ಥೋ ಬಾದರಾಯಣಃ। ಓಂಕಾರಪೂರ್ವಿಕಾ ವಿದ್ಯಾಃ ಪ್ರೇರಯತ್ಯಖಿಲೇಷ್ವಪಿ ಸದೈವ ಬ್ರಹ್ಮಣೇ ಪೂರ್ವಮ್'
—ಸಾತ್ತ್ವತಸಂಹಿತಾ (ಖಂ ಭಾ 1-27)

3 ಏಕೋ ಗುರುರ್ನಾಸ್ತಿ ತತೋ ದ್ವಿತೀಯೋ
ಯೋ ಹೃಚ್ಛಯಸ್ತಮಹಮನುಬ್ರವೀಮಿ ।
—ಮಹಾ. ಭಾ. ಅಶ್ವಮೇಧಿಕ 26-2

4 ಯಯಾ ಯಸ್ಯ ವಿಮುಕ್ತಿಃ ಸ್ಯಾತ್ ತದ್ದಾತಾ ಮುಖ್ಯತೋ ಗುರುಃ । ಏಕದೇಶ-ಗುರುತ್ವಂ ಸ್ಯಾದನ್ಯವಿದ್ಯಾಪ್ರದಸ್ಯ ತು'
—ಬೃ. ಉ. ಭಾ 6-1-5

5 ಅನಾದ್ಯವಿದ್ಯೋಪಹತಾತ್ಮಸಂವಿದಸ್ತನ್ಮೂಲಸಂಸಾರಪರಿಶ್ರಮಾತುರಾಃ । ಯದೃಚ್ಛಯೇಹೋಪಸೃತಾ ಯಮಾಪ್ನುಯುರ್ವಿಮುಕ್ತಿದೋ ನಃ ಪರಮೋ ಗುರುರ್ಭವಾನ್ ॥

ಉಳಿದೆಲ್ಲ ಗುರುಗಳು ಸೇರಿಯೂ ಭಗವಂತನ ಅನುಗ್ರಹದ ಹತ್ತುಸಾವಿರದ ಒಂದಂಶವನ್ನೂ ನೀಡಲಾರರು—ಎಂದು ಭಗವಂತನ ಗುರುತ್ವದ ಮಹತ್ತ್ವವನ್ನು ಸಾಧಿಸಿರುವನು[1] ಅಲ್ಲದೆ, ಅಜ್ಞರಿಗೆ ಅಜ್ಞಗುರುಗಳೆಂದರೆ ಕುರುಡನೊಬ್ಬನನ್ನು ಮತ್ತೊಬ್ಬ ಕುರುಡ ಕರೆಯೊಯ್ಯುವಂತಾಗುವುದೆಂದು ಸತ್ಯವ್ರತರಾಜ, ಆದ್ದರಿಂದ ಸೂರ್ಯಚಕ್ಷುಸ್ಸುಳ್ಳ ಭಗವಂತನನ್ನೇ ಸ್ವಗತಿಯನ್ನು ಪಡೆಯಲು ಗುರುವನ್ನಾಗಿ ಆರಿಸಿಕೊಂಡಿರುವುದಾಗಿ ಅಭಿಪ್ರಾಯ ಪಟ್ಟಿರುವನು[3]

ಭಗವಂತನು ಅವಿದ್ಯೆಯನ್ನು ತೊಲಗಿಸಿ ಮುಕ್ತಿಯನ್ನು ನೀಡುವವನಾದರೂ ನಮಗೆಲ್ಲ ನೇರವಾಗಿ ವಿದ್ಯೋಪದೇಶ ನೀಡುವುದಿಲ್ಲ ನಮಗೆ ಅವನು ಅಗಮ್ಯನಾಗಿರುವುದರಿಂದ ನಮ್ಮ ನಿಯತ ಗುರುಗಳಲ್ಲಿ ಆವಿಷ್ಟನಾದವನಾಗಿ ಅವರ ಮೂಲಕವಷ್ಟೇ ನಮಗೆ ಮುಕ್ತಿಯನ್ನು ನೀಡುವನು[3] ಚತುರ್ಮುಖನ ಪದವಿಗೆ ಬರಲು ಯೋಗ್ಯನಾದವನಿಗಷ್ಟೇ ತಾನೇ ನೇರವಾಗಿ ಉಪದೇಶಿಸಿ, ಜ್ಞಾನವನ್ನು ಅನುಗ್ರಹಿಸಿ ಆ ಮೂಲಕ ಮುಕ್ತಿ ನೀಡುವನು[4] ಆದ್ದರಿಂದ ಭಗ

---

* ಜನೋಽಬುಧೋಽಯಂ ನಿಜಕರ್ಮಬಂಧನಃ ಸುಖೇಚ್ಛಯಾ ಕರ್ಮ ಸಮೀಹತೇಽಸುಖಮ್ । ಯತ್ಸೇವಯಾ ತಾಂ ವಿಧುನೋತ್ಯಸನ್ಮತಿಂ ಗ್ರಂಥಿಂ ಸ ಭಿಂದ್ಯಾದ್ ಹೃದಯಂ ಸ ನೋ ಗುರುಃ ॥

* ಯತ್ಸೇವಯಾಗ್ನೇರಿವ ರುದ್ರರೋದನಂ ಪುಮಾನ್ ವಿಜಹ್ಯಾನ್ಮಲಮಾತ್ಮನಸ್ತಮಃ । ಭಜೇತ ವರ್ಣಂ ನಿಜಮೇಷ ಸೋಽವ್ಯಯೋ ಭೂಯಾತ್ ಸ ಈಶಃ ಪರಮೋ ಗುರೋರ್ಗುರುಃ ।
-ಭಾಗ. 8-24-46, 47, 48

1 ನ ಯತ್ಪ್ರಸಾದಾಯುತಭಾಗಲೇಶಮನ್ಯೇ ಚ ದೇವಾ ಗುರವೋ ಜನಾಃ ಸ್ವಯಮ್ ।
ಕರ್ತುಂ ಸಮೇತಾಃ ಪ್ರಭವಂತಿ ಪುಂಸಃ ।
—ಭಾಗ. 8-24-49

2 ಅಚಕ್ಷುರಂಧಸ್ಯ ಯಥಾಗ್ರಣೀಃ ಕೃತಸ್ತಥಾ ಜನಸ್ಯಾವಿದುಷೋಽಬುಧೋ ಗುರುಃ । ತ್ವಮರ್ಕದೃಕ್ ಸರ್ವದೃಶಾಂ ಸಮೀಕ್ಷಣೋ ವೃತೋ ಗುರುರ್ನಃ ಸ್ವಗತಿಂ ಬುಭುತ್ಸತಾಮ್ ॥
-ಭಾಗ. 8-24-50

3 ಅಗಮ್ಯತ್ವಾದ್ಧರಿಸ್ತಸ್ಮಿನ್ನಾವಿಷ್ಟೋ ಮುಕ್ತಿದೋ ಭವೇತ್ ।
-ಮ. ಭಾರ. ತಾ. ನಿ. 1-126

4 ಸ್ವಯಂ ತೂಪದಿಶನ್ ಜ್ಞಾನಂ ವೈರಿಂಚಪದಯೋಗಿನಿ ।
ಅನುಗ್ರಹಾತ್ ತೇನ ಚಾಪಿ ಜ್ಞಾನಂ ದತ್ವಾ ವಿಮುಕ್ತಿದಃ ।
-ಗುರುವಿವೇಕ (ಭಾಗ. ತಾ. ನಿ. 11-10-31)

ವಂತನು ಗುರು ಎಂಬುದಾಗಿ ಲಕ್ಷ್ಮೀದೇವಿ ಹಾಗೂ ಚತುರ್ಮುಖ ಇವರಿಬ್ಬರೇ ಉಪಾಸಿಸಬೇಕು ಉಳಿದವರಿಗೆ ಭಗವಂತನು ತಮ್ಮ ಗುರು ಎಂದು ಉಪಾಸನೆ ನಡೆಸಲು ಅಧಿಕಾರವಿಲ್ಲ[1]

ಬೇರೆ ಬೇರೆ ರೀತಿಯ ಮದದಿಂದ ಅಂಧರಾದ ಅಸುರರಾದ ತಮಗೆ ಮದವನ್ನು ಹೋಗಲಾಡಿಸಿಕೊಳ್ಳಲು ದೃಷ್ಟಿಯನ್ನು ಕೊಟ್ಟಿರುವ ಪ್ರಯುಕ್ತ ಭಗವಂತನು ತಮಗೆ ಪರೋಕ್ಷವಾಗಿ ಶ್ರೇಷ್ಠ ಗುರು ಆಗಿರುವನೆಂದು ಬಲಿರಾಜನು ಅಭಿಪ್ರಾಯಪಟ್ಟಿರುವನು[2]

೨ (ಪ್ರಳಯಕಾಲದಲ್ಲಿ) ಸಮಸ್ತ ವಿಶ್ವವನ್ನೂ ನುಂಗುವವನು[3]

೩ (ಸೃಷ್ಟಿಕಾಲದಲ್ಲಿ) ಎಲ್ಲವನ್ನೂ ಹೊರಗೆ ಹಾಕುವವನು[4]

ಭಗವಂತನು ಪ್ರಲಯಕಾಲದಲ್ಲಿ ಸಮಸ್ತವನ್ನೂ ನುಂಗುವನು, ಇದೇ ಸಂಹಾರ ಎನಿಸಿದೆ ಹೀಗೆ ನುಂಗಿದ್ದನ್ನೇ ಸೃಷ್ಟಿಕಾಲದಲ್ಲಿ ಹೊರಹೊಮ್ಮಿಸುವನು, ಇದೇ ಸೃಷ್ಟಿ ಎನಿಸಿದೆ[5] ಜೇಡರ ಹುಳದ ದೃಷ್ಟಾಂತಕೊಟ್ಟು ಉಪನಿಷತ್ತು ಇದನ್ನು ಸ್ಪಷ್ಟೀಕರಿಸಿದೆ[6] ಜೇಡರಹುಳುವು ತಾನು ತಿಂದ ಆಹಾರವನ್ನು ನೂಲಾಗಿ ಬದಲಾಯಿಸಿ ಹೊರಹೊಮ್ಮಿಸುವುದು ಹೀಗೆ ನೂಲಾಗಿ ಹೊರಹೊಮ್ಮಿಸಿದ್ದನ್ನು ಮತ್ತೊಮ್ಮೆ ಹೊಟ್ಟೆ ಒಳಗೆ ಸೇರಿಸಿ ಕೊಳ್ಳುತ್ತದೆ ಅಂತೆಯೇ ಭಗವಂತನು

---

1 'ಗುರುಃ ಶ್ರೀರ್ಬ್ರಹ್ಮಣೋರ್ವಿಷ್ಣುಃ. ಇತ್ಯೇವೋಪಾಸನಂ ಕಾರ್ಯಂ ನಾನ್ಯಥಾ ತು ಕಥಂಚನ'

-ವಾರಾಹ (ಭಾಗ. ತಾ. ನಿ. 10-26-15)

2 ತ್ವಂ ನೂನಮಸುರಾಣಾಂ ನಃ ಪಾರೋಕ್ಷ್ಯಃ ಪರಮೋ ಗುರುಃ ।
ಯೋ ನೋಽನೇಕಮದಾಂಧಾನಾಂ ವಿಭ್ರಂಶಂ ಚಕ್ಷುರಾದಿಶತ್ ॥

-ಭಾಗ. 8-22-5

೨ 3 ಪ್ರಲಯಕಾಲೇ ಸರ್ವಂ ನಿಗಿರತೀತಿ ಗುರುಃ । 'ಗೄ ನಿಗರಣೇ' ।

೩ 4 ಸೃಷ್ಟಿಕಾಲೇ ಸರ್ವಂ ಉದ್ಗಿರತೀತಿ ಗುರುಃ । 'ಗೄ ನಿಗರಣೇ' ।

5 ಸೃಷ್ಟಿರ್ನಾಮ ಸ್ವರೂಪಾತ್ತು ಬಹಿರ್ನಿಷ್ಕ್ರಾಮಣಂ ಸ್ಮೃತಮ್ ।

-ಯಜುಃಸಂಹಿತಾ. (ತೈ. ಉ. 2-11)

6 ಯಥೋರ್ಣನಾಭಿಃ ಸೃಜತೇ ಚ ಗೃಹ್ಣತೇ ಚ...ತಥಾಽಕ್ಷರಾತ್ ಸಂಭವತೀಹ ವಿಶ್ವಮ್'

- ಅಥ. ಉ. 1-8

ತಾನು ಪ್ರಳಯಕಾಲದಲ್ಲಿ ನುಂಗಿದ ಜಡಪ್ರಕೃತಿಯನ್ನು ವಿಶ್ವಾಕಾರವಾಗಿ ಸೃಷ್ಟಿಸುವನು ಪುನಃ ಅದನ್ನು ಜಡಪ್ರಕೃತಿರೂಪಕ್ಕೆ ಪರಿವರ್ತಿಸಿಕೊಂಡು ಪ್ರಲಯಕಾಲದಲ್ಲಿ ನುಂಗುವನು

೪ ಹಯಗ್ರೀವ ರೂಪದಿಂದ ಯಾವಾಗಲೂ ವೇದಗಳನ್ನು ಹೊರಹೊಮ್ಮಿಸುತ್ತಿರುವವನು[1]

ಶ್ರೀಮದಾಚಾರ್ಯರು, ಭಗವಂತನ ಕಂಠದಿಂದ ಸಕಲ ವೇದಗಳೂ ಯಾವಾಗಲೂ ಹೊರಹೊಮ್ಮುತ್ತಿರುವವು—ಎಂದು ಸ್ತುತಿಸಿರುವರು[3].

೫ ಆಕಾಶದಲ್ಲಿ (ಧ್ವನ್ಯಾತ್ಮಕ) ಶಬ್ದಗಳನ್ನು ಉಂಟುಮಾಡುವವನು[3]

ಗೀತಾಚಾರ್ಯನು ತಾನು ಆಕಾಶದಲ್ಲಿ ಶಬ್ದನಾಮಕನಾಗಿ ಇದ್ದು, ಅದರಲ್ಲಿ ಧ್ವನ್ಯಾತ್ಮಕ ಶಬ್ದವು ಸಹಜವಾಗಿ ಇರುವಂತೆ ನಿಯಮಿಸುತ್ತಿರುವುದಾಗಿ ಸಂದೇಶಿಸಿರುವನು[4]

೬ ಎಲ್ಲರಿಗೂ ಜನಕನಾಗಿರುವವನು[5]

---

೪ 1 ಹಯಗ್ರೀವರೂಪೇಣ ವೇದಾನ್ ಸರ್ವದಾ ಉದ್ಗಿರತೀತಿ ಗುರುಃ । 'ಗೄ ನಿಗರಣೇ'

2 ಸಂತತಂ ಚಿಂತಯೇತ್ಕಂಠಂ ಭಾಸ್ವತ್ಕೌಸ್ತುಭಭಾಸಕಮ್ ।
ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ ॥
—ದ್ವಾ. ಸ್ತೋ.

೫ 3 ಗೃಣಾತಿ ಆಕಾಶೇ ಶಬ್ದಂ ಕರೋತೀತಿ ಗುರುಃ । 'ಗೄ ಶಬ್ದೇ' ।

4 ' ಶಬ್ದಃ ಖೇ . '
—ಗೀ 7 8

ಖೇ ಸ್ಥಿತಃ ಶಬ್ದನಾಮಾಽಸೌ ಯಚ್ಛಬ್ದಯತಿ ಕೇಶವಃ ।
—ಗೀ. 7-8

೬ 5 ಸರ್ವೇಷಾಂ ಜನಕತ್ವಾತ್ ಗುರುಃ ।
—ಶಾಂ. ಭಾ.

* 'ಅಥ ಸ ನಿಷೇಕಾದಿಕೃದ್ಗುರುಃ' —ಇತಿ ಗರ್ಭಾಧಾನಾದಿಸಂಸ್ಕಾರಕರ್ತರಿ ಪಿತ್ರಾದೌ ಪ್ರಸಿದ್ಧಃ ಗುರುಶಬ್ದಃ, ಜನಕತ್ವೇನ ಪಿತೃತ್ವಾತ್ ಭಗವತ್ಯಪಿ ಪ್ರಯುಜ್ಯತ ಇತಿ ।

ಭಗವಂತನು ನಮ್ಮನ್ನು ರಕ್ಷಣ ಮಾಡುವ ಪಿತೃ, ನಮ್ಮನ್ನು ಹುಟ್ಟಿಸಿರುವ ಜನಕ—ಎಂದು ಶ್ರುತಿಯು ಘೋಷಿಸುತ್ತಿದೆ[1]

೭ ವಿಸ್ತಾರ ಹೊಂದಿರುವವನು[2]

## ಜಿಜ್ಞಾಸೆ

### [ಜ್ಞಾನ ಪ್ರದ]

ಪ್ರ – ಜ್ಞಾನಪ್ರದತ್ವರೂಪ ಗುರುತ್ವವು ಶಾಸ್ತ್ರದಿಂದ ಪರಮಾತ್ಮನಿಗೇನೇ ಇರುವದು ಎಂದು ತಿಳಿಯುತ್ತೇವೆ ಶ್ರವಣಮಾತ್ರದಿಂದ ಈ ತತ್ವದ ನಿರ್ಣಯವು ಆಗುವದಿಲ. ತತ್ವನಿರ್ಣಯ ಕ್ಕಾಗಿ ಮನನವೂ ಬೇಕು ಎಂದು 'ಶ್ರೋತವ್ಯೋ ಮಂತವ್ಯೋ' ಶ್ರುತಿಯು ಹೇಳುತ್ತದೆ ಆದುದರಿಂದ ಮನನವನ್ನು ಆ ವಿಷಯದಲ್ಲಿ ಹೇಗೆ ಮಾಡುವದು?

ಉ - ಈ ವಸ್ತುವಿನ ಜ್ಞಾನವು ನಮಗೆ ಉಂಟಾಗಲಿ ಎಂದು ನಾವು ಇಚ್ಛಿಸಿದಾಗ ಆ ವಸ್ತುವಿನ ಜ್ಞಾನವು ನಮಗೆ ಬಂದರೆ ನಾವು ಆ ವಸ್ತುವಿನ ಜ್ಞಾನವನ್ನು ಸಂಪಾದಿಸಿ ದಂತೆ ಆಗುತ್ತದೆ ಯಾವುದನ್ನು ಇಚ್ಛಿಸಿ ನಾವು ಹೊಂದುತ್ತೇವೋ ಅದಕ್ಕೆ ಸಂಪಾದಕರು ನಾವು ಆಗುವೆವು ಉದಾಹರಣೆ—ಹಣವನ್ನು ಸಂಪಾದಿಸುತ್ತೇನೆಂದು ಇಚ್ಛಿಸಿ ನಾವು ಹಣ ವನ್ನು ಹೊಂದಿದರೆ ನಾವು ಹಣ ಸಂಪಾದಕರಾಗುತ್ತೇವೆ ಅದರಂತೆ ಜ್ಞಾನವನ್ನು ಇಚ್ಛಿಸಿ ಜ್ಞಾನವನ್ನು ನಾವು ಸಂಪಾದಿಸಿದರೆ ನಾವು ನಮ್ಮ ಜ್ಞಾನಕ್ಕೆ ಸಂಪಾದಕರು ಆಗುವೆವು ಆದರೆ ಯಾವ ವಸ್ತುವಿನ ಜ್ಞಾನವು ನಮಗೆ ಸರ್ವಥಾ ಇಲ್ಲವೋ ಆ ವಸ್ತುವಿನ ಜ್ಞಾನವು ಬೇಕು ಎಂದು ನಾವು ಇಚ್ಛಿಸುವಂತೆ ಇಲ್ಲ. ಆದುದರಿಂದ ಯಾವ ವಸ್ತುವಿನ ಜ್ಞಾನವು ನಮಗೆ ಸರ್ವಥಾ ಇಲ್ಲವೋ ಆ ವಸ್ತುವಿನ ಜ್ಞಾನವನ್ನು ನಾವು ಇಚ್ಛಿಸದೆ ಆ ವಸ್ತುವಿನ ಜ್ಞಾನ ವನ್ನು ಹೊಂದುವದರಿಂದ ಆ ಜ್ಞಾನಕ್ಕೆ ನಾವು ಸಂಪಾದಕರು ಅಲ್ಲ. ಅಂತಹ ಜ್ಞಾನವನ್ನು ಅಂದರೆ ನಾವು ಇಚ್ಛಿಸದೆ ನಮಗೆ ಬಂದ ಜ್ಞಾನವನ್ನು ಕೊಟ್ಟವನು ಪರಮಾತ್ಮನು ಎಂದು ಹೇಳಬೇಕು. ಈ ರೀತಿ ಮನನವನ್ನು ಮಾಡಿ ಪರಮಾತ್ಮನಿಗೆ ಜ್ಞಾನಪ್ರದತ್ವ ರೂಪ ಗುರುತ್ವವನ್ನು ನಿರ್ಣೈಸಬೇಕು.



---

1 'ಯೋ ನಃ ಪಿತಾ ಜನಿತಾ..'
-ಋ. ವೇ (10-82-3)

೭ 2 ವಿಸ್ತೃತೋ ಭವತೀತಿ ಗುರುಃ। ಗುರುಶಬ್ದಃ ಮಹದರ್ಥಕಃ। ದೇಶತಃ ಮಹಾನ್ ನಾಮ ವಿಸ್ತೃತಃ । ಅತಃ ಗುರುಶಬ್ದಃ ವಿಸ್ತೃತಾರ್ಥಕೋಽಪಿ । ಅತ ಏವ 'ಗ್ರಂಥಗೌರವ ಭಯಂ' ಇತ್ಯಾದೌ ಗುರುಶಬ್ದಃ ವಿಸ್ತೃತಾರ್ಥೇಽಪ್ರಯುಜ್ಯತೇ ।

## ೨೧೦ ಗುರುತಮಃ

೧ ಉತ್ಕೃಷ್ಟನಾದ ಗುರುವು[1]

ಗುರುಗಳಲ್ಲಿರುವ ತಾರತಮ್ಯವನ್ನು ಹೇಳಹೊರಟ 'ಆಚಾರ್ಯ ಸಂಹಿತೆ'—ಋಷಿಗಳಿಗಿಂತ ದೇವತೆಗಳು ಉತ್ತಮ ಗುರುಗಳೆಂದೂ, ದೇವತೆಗಳಲ್ಲೂ ಇತರ ದೇವತೆಗಳಿಗಿಂತ ವಾಯುದೇವನು ಉತ್ತಮ ಗುರುವೆಂದೂ, ಅವನಿಗಿಂತಲೂ ಶ್ರೀಹರಿಯು ಉತ್ತಮ ಗುರು ಎಂದೂ ತಿಳಿಸಿ, ಅಂತಹ ಶ್ರೀಹರಿಗಿಂತ ಉತ್ತಮನಾದ ಗುರು ಮತ್ತೊಬ್ಬನಿಲ್ಲ ಎಂದು ಸಾರುವುದರ ಮೂಲಕ ಶ್ರೀಹರಿಯ 'ಗುರುತಮತ್ವ'ವನ್ನು ಪ್ರತಿಪಾದಿಸಿದೆ.[2]

ಭಗವಂತನ ಗುರುತ್ವದಲ್ಲಿ ಮುಖ್ಯವಾಗಿ ಎರಡು ಬಗೆಯ ಉತ್ಕರ್ಷಗಳಿವೆ[3] ಉಳಿದ ಯಾರೇ ಗುರುಗಳ ಗುರುತ್ವವೂ ಭಗವದಧೀನವಾಗಿದ್ದರೆ ಭಗವಂತನು ಮಾತ್ರ ಸ್ವತಂತ್ರವಾಗಿಯೇ ಗುರು ಆಗಿರುವನು ಹೀಗೆ ಸ್ವತಂತ್ರವಾಗಿ ಗುರು ಆಗಿರುವವನು ಭಗವಂತನೊಬ್ಬನೇ ಇನ್ನೊಬ್ಬನಿಲ್ಲ[4]

ಹೀಗೆ ಸ್ವಾತಂತ್ರ್ಯ ಪ್ರಯುಕ್ತವಾಗಿ ಅವನು ಉತ್ಕೃಷ್ಟ ಗುರು ಎನಿಸಿದ್ದರೆ, ಉಳಿದೆಲ್ಲ ಗುರುಗಳಿಗೂ ಅವನು ಗುರುವಾಗಿರುವುದರಿಂದಲೂ ಉತ್ಕೃಷ್ಟಗುರು. ನಮಗೆ ನೇರವಾಗಿ ಉಪದೇಶಿಸುವ ಗುರುಗಳಿಂದ ಆರಂಭಿಸಿ ಚತುರ್ಮುಖನವರೆಗೆ ಸಂಪ್ರದಾಯ ಪ್ರವರ್ತಕರಾಗಿ ಜ್ಞಾನ ಯೋಜಕರಾಗಿ ಇರುವವರೆಲ್ಲ ಗುರುಗಳು[5] ಇವರೆಲ್ಲರಿಗೂ ಭಗವಂತನು ಸಾಕ್ಷಾತ್ ಅಥವಾ

---

೧ 1 ಅತಿಶಯೇನ ಗುರುಃ ಗುರುತಮಃ ।
—ಸ. ಸಂ.

2 ಋಷಿಭ್ಯಸ್ತೂತ್ತಮಾ ದೇವಾ ದೇವೇಭ್ಯೋ ವಾಯುರುತ್ತಮಃ ವಾಯೋಶ್ಚ ಭಗವಾನ್ ವಿಷ್ಣುಃ ನ ತಸ್ಮಾದುತ್ತಮೋ ಗುರುಃ
-ಆಚಾರ್ಯ ಸಂಹಿತಾ (ಛಾಂ. ಉ ಭಾ. 4-2 5)

3 ಅತಿಶಯೇನ ಗುರುರಿತ್ಯತ್ರ ಅತಿಶಯೋ ನಾಮ ಸ್ವತಂತ್ರಗುರುತ್ವಂ. ಸಾಕ್ಷಾತ್ ಪರಂಪರಯಾ ವಾ ಸರ್ವೇಷಾಮಪಿ ಗುರುತ್ವಂ ಚೇತಿ ।

4 ಅನೇನಾಭಿಪ್ರಾಯೇಣೈವ 'ಏಕೋ ಗುರುರ್ನಾಸ್ತಿ ತತೋ ದ್ವಿತೀಯೋ ಯೋ ಹೃಚ್ಛಯಸ್ತಮಹಮನುಬ್ರವೀಮಿ' (ಮ. ಭಾರ. ಆಶ್ವಮೇಧಿಕ 16-2) ಇತ್ಯುಪದೇಶಃ ಪ್ರವೃತ್ತಃ ।

5 ತಸ್ಮಾದ್ ವಂದ್ಯಾಶ್ಚ ಪೂಜ್ಯಾಶ್ಚ ಬ್ರಹ್ಮಾದ್ಯಾ ಜ್ಞಾನಯೋಜಕಾಃ ।

ಪರಂಪರಯಾ ಗುರು ಆಗಿರುವನು ಲಕ್ಷ್ಮೀದೇವಿಗೆ, ಚತುರ್ಮುಖನಿಗೆ ಹಾಗೂ ಅವನ ಪದವಿಗೆ ಬರಲಿರುವ ಮುಖ್ಯಪ್ರಾಣನಿಗೆ ಭಗವಂತನು ನೇರವಾಗಿಯೇ ಗುರು. ಇಂದ್ರಾದಿದೇವತೆಗಳಿಗೆ ಅವನು 'ಗುರೋರ್ಗುರು.' ಉಳಿದ ಜನರಿಗೆಲ್ಲ ಮೂಲಭೂತ ಗುರು ಆಗಿರುವನು[1] ಹೀಗೆ ಎಲ್ಲರಿಗೂ ಸಾಕ್ಷಾತ್ ಅಥವಾ ಪರಂಪರಯಾ ಗುರುವಾಗಿರುವುದರಿಂದಲೂ ಅವನು ಗುರುತಮ

ಅರ್ಜುನನು 'ವಿಶ್ವರೂಪ' ಭಗವಂತನಲ್ಲಿ 'ನೀನು ಈ ಲೋಕಕ್ಕೆ ಪೂಜ್ಯನಾದ ದೊಡ್ಡ ಗುರು'— ಎಂದು ನಿವೇದಿಸಿಕೊಂಡಿರುವನು[2] ಶ್ರೀ ಮಧ್ವಾಚಾರ್ಯರು ಭಗವಂತನನ್ನು ಒಂದೆಡೆ 'ಪರಮ ಗುರು' ಎಂದು[3] ಕರೆದಿದ್ದಾರೆ, ಮತ್ತೊಂದೆಡೆ 'ಗುರುಗಳಿಗೂ ಗುರು' ಆದವನೆಂದು ಸ್ತುತಿಸಿರುವರು[4]

೨ ಅತ್ಯಂತ ವಿಸ್ತೃತನಾದವನು[5]

---

ಗುರುತ್ವೇನ ಕ್ರಮೇಣೈವ ವಿಶೇಷೇಣೈವ ಕೇಶವಃ ।
ಆರಭ್ಯ ಸ್ವಗುರುಂ ಯಾವದ್ ವಿಷ್ಣುರೇವೋತ್ತರೋತ್ತರಾಃ ।
—ಮ. ಭಾ 1-105

* ಬ್ರಹ್ಮಾಂತಾ ಗುರವಶ್ಚೈವ ಸಂಪ್ರದಾಯಪ್ರವರ್ತಕಾಃ ॥
-ತಂ. ಸಾ. ಸಂ. 4-101

1 ಗುರುಶ್ಶ್ರೀಬ್ರಹ್ಮಣೋರ್ವಿಷ್ಣುಃ ಸುರಾಣಾಂ ಚ ಗುರೋರ್ಗುರುಃ ।
ಮೂಲಭೂತಗುರುಃ ಸರ್ವಜನಾನಾಂ ಪುರುಷೋತ್ತಮಃ ।
-ವಾರಾಹ (ಭಾಗ ತಾ. ನಿ 10-24-15)

2 ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।
-ಗೀ. 11-43

3 ಜಯತಿ ಹರಿಃ ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಮ್ ।
-ಮ. ಭಾ. ತಾ. ನಿ 2-1

4 ಗುರುರ್ಗುರೂಣಾಂ .ಬಾದರಾಯಣಃ ।
—ಅ ವಾ. 1-4

ಬಾದರಾಯಣೋ ಗುರೂಣಾಂ ಜಗತಸ್ತತ್ತ್ವೋಪದೇಶಕಾನಾಂ ಬ್ರಹ್ಮಾದೀನಾಂ ಗುರುರುಪದೇಷ್ಟಾ ।
ನ್ಯಾಯಸುಧಾ

೨ 5 ಅತಿಶಯೇನ ಗುರುಃ ವಿಸ್ತೃತಃ ಗುರುತಮಃ ।

ಭಗವಂತನ ಪಂಚರಾತ್ರಪ್ರತಿಪಾದ್ಯವಾದ ಮಧ್ಯದೇಹವು ಅತ್ಯಂತ ವಿಸ್ತೃತವಾಗಿರುವುದರಿಂದ ಆದೇಶ ಎನಿಸಿದೆ ಎಂದು ತೈತ್ತಿರೀಯೋಪನಿಷತ್ತಲ್ಲಿ ಪ್ರತಿಪಾದಿಸಲ್ಪಟ್ಟಿದೆ[1]

೩. ಗುರುಗಳಾದ ಬ್ರಹ್ಮಾದಿಗಳಿಂದ ಅಪೇಕ್ಷಿಸಲ್ಪಡುವವನು.[2]

ಏಕಾಂತ ಭಕ್ತರಾದ ಚತುರ್ಮುಖಾದಿಗಳು ಭಗವಂತನನ್ನೇ ಮುಖ್ಯವಾಗಿ ಅಪೇಕ್ಷಿಸುವರು. ಅವರು ಉಳಿದ ಏನನ್ನಾದರೂ ಅಪೇಕ್ಷೆಪಡುವುದಾದರೂ ಭಗವಂತನಿಗಾಗಿಯೇ[3]

೪ ಬೃಹಸ್ಪತ್ಯಾಚಾರ್ಯರಿಗೆ ವಿಸ್ತೃತವಾದ ಜ್ಞಾನವನ್ನು ಅನುಗ್ರಹಿಸಿರುವವನು[4]

೫ ಗುರುವಾಗಿರುವವನು ಹಾಗೂ ಅತಿಶಯವಾಗಿ ವ್ಯಾಪ್ತನಾಗಿರುವವನು.[5]

---

1 ಆದೇಶ ಆತ್ಮಾ ।

-ತೈ ಉ. 2-6

ಪಂಚರಾತ್ರಗತಂ ಮಧ್ಯಮಾದೇಶಾಖ್ಯಂ ಸುವಿಸ್ತೃತೇಃ ।

-ಯಜುಃಸಂಹಿತಾ (ತೈ. ಉ ಭಾ.)

೩ 2 ಗುರುಭಿರ್ಬ್ರಹ್ಮಾದಿಭಿಸ್ತಮ್ಯತೇಽಭಿಕಾಂಕ್ಷ್ಯತ ಇತಿ । 'ತಮು ಕಾಂಕ್ಷಾಯಾಂ'

-ಸ. ಸಂ.

3 .. ಏಕಾಂತಾನಾಂ ನ ಕಸ್ಯಚಿತ್ । ಅರ್ಥೇ ನಾರಾಯಣೋ ದೇವಸ್ತ್ವನ್ಯತ್ ಸರ್ವಂ ತದರ್ಥಕಮ್ ।

-ಗೀತಾಕಲ್ಪ (ಗೀ. ಭಾ. 7-29)

೪ 4 ಗುರೋರ್ಬೃಹಸ್ಪತೇಸ್ತಾ ವಿಸ್ತೃತಾ ಮಾ ಜ್ಞಾನಂ ಯಸ್ಮಾದಿತಿ ।

-ಸ. ಸಂ.

೫ 5 ಅತಿಶಯೇನ ವ್ಯಾಪ್ತಃ ತಮಃ । ಗುರುಶ್ಚಾಸೌ ತಮಶ್ಚೇತಿ ।

-ಸ. ಸಂ.

* ಅತಿಶಯೇನ ತತಃ । ತತತಮಃ । 'ಲೋಪಃ ಸಮಾನೇ' ಇತಿ ಅಕ್ಷರಲೋಪೇ ಸತಿ ತಮ ಇತಿ ಅವಶಿಷ್ಯತೇ ।

೬ (ಎಲ್ಲರಿಗೂ) ಗುರು ಹಾಗೂ (ಎಲ್ಲರಿಂದಲೂ) ಅಪೇಕ್ಷಿಸಲ್ಪಡುವವನು[1]

ಭಗವಂತನ ಸ್ವರೂಪವು ಎಲ್ಲ ಪುರುಷರಿಂದಲೂ ಅಪೇಕ್ಷಿಸಲ್ಪಡುವಂತಹದ್ದೆಂಬ ಅಭಿಪ್ರಾಯದಲ್ಲಿ ರುಗ್ಮಿಣೀದೇವಿಯು ಅವನನ್ನು 'ಸಮಸ್ತಪುರುಷಾರ್ಥಮಯ' ಎಂದು ಕರೆದಿರುವಳು[2]

೭ (ತಾಮಸರಿಗೆ) ಅಧಿಕವಾದ ತಮೋಗುಣವನ್ನು ನೀಡುವವನು[3]

## ಜಿಜ್ಞಾಸೆ

### [ಗುರುತಮಗುರು ಅಲ್ಲ]

ಪ್ರ – ಸರ್ವಗುರುವಾದ ವಿರಿಂಚನಿಗೆ ಪರಮಾತ್ಮನು ಗುರುವಾದುದರಿಂದ ಆತನನ್ನು ಗುರುತಮ ಎಂದು ಹೇಳುವದಾದರೆ ಅಂತಹ ಪರಮಾತ್ಮನಿಗೆ ಶ್ರೀಕೃಷ್ಣಾವತಾರದಲ್ಲಿ ಸಾಂದೀಪಿನಿ ಆಚಾರ್ಯರು ಗುರುವಾದುದರಿಂದ ಅವರನ್ನು ಗುರುತಮ ಗುರು ಎಂದು ಹೇಳಬೇಕೇ?

ಉ - ಕೃಷ್ಣನು ಸರ್ವಜ್ಞನಾದುದರಿಂದ ಅವನಿಗೆ ಅಜ್ಞಾತವಾದದ್ದನ್ನು ಸಾಂದೀಪಿನಿ ಆಚಾರ್ಯರು ಉಪದೇಶಿಸಲಿಲ್ಲ ಲೋಕ ವಿಡಂಬನಕ್ಕಾಗಿ ಶ್ರೀಕೃಷ್ಣನು ಲೀಲೆಯಿಂದ ಉಪದೇಶವನ್ನು ಪಡೆದದ್ದು ಆದುದರಿಂದ ಸಾಂದೀಪಿನೀ ಆಚಾರ್ಯರು ಗುರುತಮ ಗುರು ಆಗುವದಿಲ್ಲ

ಪ್ರ - 'ಬ್ರಹ್ಮಣಸ್ತು ಪ್ರಾಯೋ ನಾಪ್ರಾತಿಭಾಸಿತಂ' ಬ್ರಹ್ಮದೇವರಿಗೆ ಯಾವ ತತ್ವವೂ ತಿಳಿಯದೇ ಇದ್ದದ್ದು ಇಲ್ಲ. ಅವರು ಅಜ್ಞಾನವನ್ನು ನಾಲ್ಕು ಸಲ ತನಗೆ ಉಂಟು ಎಂದು ತೋರಿಸಿಕೊಂಡದ್ದು ಶ್ರೀವಿಷ್ಣು ಪ್ರೀತ್ಯರ್ಥವಾಗಿ ನಿಜವಾದ ಪ್ರದರ್ಶನವು ಅದು ಅಲ್ಲ. ಎಂದು ಶಾಸ್ತ್ರವಚನವು ಇದ್ದ ಕಾರಣ ವಿರಿಂಚೋಪದೇಶಕತ್ವವು ಪರಮಾತ್ಮನಿಗೆ,ಶ್ರೀಕೃಷ್ಣೋಪದೇಶಕತ್ವವು ಸಾಂದೀಪಿನಿ ಆಚಾರ್ಯರಿಗೆ ಈ ಎರಡು ಸಮಾನವಾಯಿತಲ್ಲ?

---

೬ 1 ಸರ್ವೇಷಾಂ ಗುರುಃ । ಸರ್ವೈಃ ತಮ್ಯತ ಅಭಿಕಾಂಕ್ಷ್ಯತ ಇತಿ ತಮಃ । ಗುರುಶ್ಚಾಸೌ ತಮಶ್ಚ ಗುರುತಮಃ ।

2 ತ್ವಂ ವೈ ಸಮಸ್ತಪುರುಷಾರ್ಥಮಯಃ. ..

—ಭಾಗ. 10-82-42

ಅತ ಏವ ಪುರುಷೈರರ್ಥ್ಯಸ್ವರೂಪಃ ।

—ಭಾಗ. ತಾ ನಿ.

೭ 3 ತಾಮಸಾನಾಂ ಗುರುಃ ಮಹಾನ್, ಅಧಿಕ ಇತಿ ಯಾವತ್ ತಮಃ ಯಸ್ಮಾತ್ ಸಃ ಗುರುತಮಃ । ಅಕಾರಾಂತೋऽಪಿ ತಮಶಬ್ದಃ ತಮೋಗುಣೇ ಪ್ರಸಿದ್ಧಃ ।

೮ - ಪರಮಾತ್ಮನು ವಿರಿಂಚನಿಗೆ ಅಜ್ಞಾತವಾದದ್ದನ್ನು ಉಪದೇಶಿಸಿದ್ದಾನೆ. 'ಪ್ರಾಯೋ ನಾಪ್ರಾತಿ ಭಾಸಿತಂ' ಎಂಬ ವಚನಕ್ಕೆ ಇತರ ದೇವತೆಗಳಿಗೆ ತಿಳಿದದ್ದು ಮರೆತು ಹೋಗುವಂತೆ ಬ್ರಹ್ಮದೇವರಿಗೆ ಮರೆತು ಹೋಗುವದಿಲ್ಲ ಎಂದೇ ಅರ್ಥ. ಪರಮಾತ್ಮನು ವಿರಿಂಚನಿಗೆ ಜ್ಞಾತವಾದದ್ದನ್ನು ಉಪದೇಶಿಸಿದ್ದರಿಂದ ಜ್ಞಾತವಾದ ತತ್ವವು ಅವನಿಗೆ ದೃಢವಾಗಿದೆ. ದೃಢವಾದ ತತ್ವವನ್ನು ಪುನಃ ಪರಮಾತ್ಮನಿಂದ ಕೇಳಿದ್ದರಿಂದ ಧರ್ಮವೃದ್ಧಿಯು ಆಗಿದೆ. ಸಾಂದೀಪಿನೀ ಆಚಾರ್ಯರು ಇಂತಹ ಗುರುಗಳು ಅಲ್ಲ. ಆದುದರಿಂದ ಅವರು ಗುರುತಮ ಗುರು ಆಗಲಾರರು.



## ೨೧೧ ಧಾಮ

೧ ಸಮಸ್ತ ಪ್ರಪಂಚಕ್ಕೂ ಮನೆಯಂತೆ ಆಧಾರನಾಗಿರುವವನು[1]

ಭಗವಂತನು ನಿಖಿಲ ವಿಶ್ವಕ್ಕೂ ನಿವಾಸಸ್ಥಾನನಾಗಿರುವನು. ವಸಿಷ್ಠಾದಿ ಋಷಿಗಳೂ, ನಾರದಾದಿಗಳೂ ಭಗವಂತನನ್ನು ಉತ್ತಮ ಆಶ್ರಯ ಎಂಬ ಅಭಿಪ್ರಾಯದಲ್ಲಿ 'ಪರಂ ಧಾಮ' ಎಂದು ಪರಿಗಣಿಸುವರೆಂದು ಅರ್ಜುನನು ಉಲ್ಲೇಖಿಸಿರುವನು.[2] ಗೀತಾಚಾರ್ಯನು ತನಗೂ ಜಗತ್ತಿಗೂ ಇರುವ ಬೇರೆ ಬೇರೆ ಮುಖದ ಸಂಬಂಧವನ್ನು ಉಲ್ಲೇಖಿಸುತ್ತ 'ನಿವಾಸ' ಶಬ್ದದಿಂದ ತಾನು ಜಗತ್ತಿಗೆ ನಿವಾಸ ಆಗಿರುವುದಾಗಿ ಸಂದೇಶಿಸಿರುವನು.[3] ಅಲ್ಲದೆ ಪ್ರಲಯಕಾಲದಲ್ಲಿ ಪ್ರಕೃತಿಯಲ್ಲಿ ಲೀನವಾದ ವಿಶ್ವವು, ಅಂತಹ ಪ್ರಕೃತಿಯ ಮೂಲಕ ತನ್ನಿಂದ ವಿಶೇಷವಾಗಿ ಆಧೃತವಾಗಿರುವ ಪ್ರಯುಕ್ತ ತಾನು ಆಗ ಜಗತ್ತಿಗೆ ವಿಶೇಷವಾಗಿ ಮನೆಯಂತೆ ಇರುವೆನೆಂಬುದನ್ನು ಗೀತಾಚಾರ್ಯನು 'ನಿಧಾನ' ಶಬ್ದದಿಂದ ಉಲ್ಲೇಖಿಸಿರುವನು.[4]

---

೧ 1 ದಧಾತಿ ಧಾರಯತೀತಿ ಧಾಮ। 'ತೇಜಃ ಶಕ್ತಿಃ ಸಮೂಹಶ್ಚ ಗೃಹಂ ಧಾಮೇತಿ ಕಥ್ಯತೇ'
-ಶಬ್ದನಿರ್ಣಯ (ಭಾಗ. ತಾ. ನಿ. 4-8-85)

2 'ಪರಂ ಬ್ರಹ್ಮ ಪರಂ ಧಾಮ ... ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ'
-ಗೀ 10-12, 13

3 'ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ...'
-ಗೀ. 9-18

4 'ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ... .'
-ಗೀ. 9-8

ಸಂಹಾರಕಾಲೇ ಪ್ರಕೃತ್ಯಾ ಜಗದತ್ರ ನಿಧೀಯಂತ ಇತಿ ನಿಧಾನಮ್ ।
-ಗೀ ಭಾ.

ಹೀಗೆ ಗೀತಾಚಾರ್ಯನು ತಾನು ಜಗತ್ತಿಗೆ ಯಾವಾಗಲೂ ಮನೆಯಂತೆ ಇರುವೆನೆಂಬುದನ್ನು 'ನಿವಾಸ' ಶಬ್ದದ ಮೂಲಕವೂ ಪ್ರಲಯ ಕಾಲದಲ್ಲಿ ವಿಶೇಷವಾಗಿ ಮನೆಯಂತೆ ಇರುವೆನೆಂಬುದನ್ನು 'ನಿಧಾನ ಶಬ್ದದ ಮೂಲಕವೂ ಸಂದೇಶಿಸಿರುವನು ವಿಶ್ವರೂಪಿ ಭಗವಂತನಲ್ಲಿ ಸಮಸ್ತ ಜಗತ್ತೂ ಇರುವುದನ್ನು ಸಾಕ್ಷಾತ್ತಾಗಿಯೇ ಕಂಡ ಅರ್ಜುನ ಭಗವಂತನನ್ನು 'ಜಗನ್ನಿವಾಸ' ಎಂದೇ ಸಂಬೋಧಿಸಿರುವನು[1] ಯುಧಿಷ್ಠಿರನು ಶ್ರೀಕೃಷ್ಣನನ್ನು ಸ್ತುತಿಸುತ್ತ, 'ಧಾಮ' ಶಬ್ದವನ್ನು ಉಲ್ಲೇಖಿಸಿಯೇ ಭಗವಂತ ಎಲ್ಲರ ಮನೆಯಂತೆ ಇರುವನೆಂದು ಹೊಗಳಿರುವನು[2]

ಮುಕ್ತಾತ್ಮರು ಭಗವಂತನೇ ತಮ್ಮ ಮನೆ ಎಂದು ವಿಶ್ಲೇಷಿಸಿಕೊಳ್ಳುವದರಿಂದ ಹಾಗೂ ಭಗವಂತನು ಮುಕ್ತರ ಬಗ್ಗೆ ವಿಶೇಷವಾಗಿ ತನ್ನ ಆಧಾರತ್ವಧರ್ಮವನ್ನು ಅಭಿವ್ಯಕ್ತಗೊಳಿಸುವುದರಿಂದಾಗಿ ಮುಕ್ತಾತ್ಮರಿಗೆ ಅವನು ಗೃಹ ಎಂಬುದನ್ನು ವಿಶೇಷವಾಗಿ ಉಲ್ಲೇಖಿಸಲಾಗುವುದು ಸಂಸಾರದಲ್ಲಿ ಅಡ್ಡಾಡುತ್ತಿರುವ ಸಜ್ಜನರೆಂಬ ಪಥಿಕರಿಗೆ ಮನೆ ಆಗಿರುವವನು ಭಗವಂತನೆಂದು ಶ್ರೀಮದಾಚಾರ್ಯರು ದ್ವಾದಶಸ್ತೋತ್ರದಲ್ಲಿ ಸ್ತುತಿಸಿರುವರು[3]

ಲಕ್ಷ್ಮೀದೇವಿಗೆ ಭಗವಂತನ ಎದೆಯು ವಿಶೇಷವಾಗಿ ವಾಸಸ್ಥಾನವೆನಿಸಿದೆ ಆದ್ದರಿಂದಲೇ ಶ್ರೀಮದಾಚಾರ್ಯರು ಭಗವಂತನನ್ನು ಜಗದಂಬೆಗೆ ಮನೆಯಂತಿರುವ ಎದೆ ಉಳ್ಳವನೇ!'' ಎಂದು ಸಂಬೋಧಿಸಿರುವರು.[4]

---

1 ಅನಂತ ದೇವೇಶ ಜಗನ್ನಿವಾಸ . ।

-ಗೀ. 11-37

2 ಅಂಭೋನಿಧಿಸ್ತ್ವಂ ಬ್ರಹ್ಮಾ ತ್ವಂ ಪವಿತ್ರಂ ಧಾಮ ಧಾಮವಿತ್ ।

-ಮ. ಭಾರ. ಶಾಂತಿ 43-15

3 ಸತ್ಪಾಂಥಜನಗೇಹಾಯ ನಮೋ ನಾರಾಯಣಾಯ ತೇ ।

ದ್ವಾ ಸ್ತೋ.

4 'ಜಗದಂಬಾಮಲ ಸುಂದರಿಗೃಹವಕ್ಷೋವರಯೋಗಿನ್ ।'

-ದ್ವಾ. ಸ್ತೋ.

೨ ತೇಜಃ ಸ್ವರೂಪಿ ಆಗಿರುವವನು[1]

ಭಗವಂತನು ಪ್ರಕಾಶಸ್ವರೂಪಿ ಎಂಬುದನ್ನು 'ಖಂ' ಎಂಬ ಶಬ್ದದಿಂದ ಹೇಳಲಾಗಿದೆ[2] ಭಗವಂತನ ಸ್ವರೂಪಾತ್ಮಕ ಪ್ರಕಾಶವೆಂದರೆ ಜ್ಞಾನರೂಪಿಯಾದುದು ಹೊರತು ಲೌಕಿಕ ತೇಜಸ್ಸಿನಂತೆ ಅಲ್ಲ ಎಂದು ಶ್ರುತಿ ಸ್ಪಷ್ಟೀಕರಿಸಿದೆ[3] ಈ ರೀತಿಯ ಪ್ರಕಾಶವನ್ನು ಭಗವಂತನು ವೇದವ್ಯಾಸಾವತಾರದ ಪ್ರಾದುರ್ಭಾವದ ಸಂದರ್ಭದಲ್ಲಿ ವ್ಯಕ್ತಪಡಿಸಿರುವನು ಅನಂತ ಸಹಸ್ರಲಕ್ಷಾಮಿತ ಸಂಖ್ಯೆಯ ಸೂರ್ಯರ ಪ್ರಕಾಶದಷ್ಟು ಪ್ರಕಾಶವುಳ್ಳ ಶ್ರೀ ವೇದವ್ಯಾಸರು ತಮ್ಮ ಪ್ರಾದುರ್ಭಾವದ ಸಮಯದಲ್ಲಿ ತಮ್ಮ ಪ್ರಕಾಶದಿಂದ ಬ್ರಹ್ಮಾಂಡದ ಒಳ ಹಾಗೂ ಹೊರ ಭಾಗಗಳನ್ನು ಬೆಳಗಿಸುತ್ತಿದ್ದರು[4] ಅವರ ಆ ಪ್ರಕಾಶ ಜ್ಞಾನರೂಪವಾದದ್ದೇ ಹೊರತು ಜಡವಾದದ್ದಲ್ಲ ಎಂದು ಸೂಚಿಸುವುದಕ್ಕಾಗಿಯೇ ಶ್ರೀ ಮಧ್ವಾಚಾರ್ಯರು ಶ್ರೀ ವೇದವ್ಯಾಸರನ್ನು 'ಜ್ಞಾನಮರೀಚಿ ಮಂಡಲ' ಎಂದು ವಿಶೇಷಿಸಿರುವರು[5]

೩. ಶಕ್ತಿಸ್ವರೂಪಿ ಆಗಿರುವವನು[6]

---

೨ 1 ಖಾಮಿಶಬ್ದಸ್ಯ ತೇಜೋಽರ್ಥಕತ್ವಂ ಪೂರ್ವಂ ಉದಾಹೃತೇನ ಶಬ್ದನಿರ್ಣಯೇನ ಸಿದ್ಧ್ಯತಿ ।

2 'ಓಂ ಖಂ ಬ್ರಹ್ಮ .'
-ಬೃ ಉ. ಭಾ.

ಖಂ ಪ್ರಕಾಶರೂಪತ್ವಾತ್ ಬ್ರಹ್ಮ . ।
-ಬೃ ಉ ಭಾ.

3 'ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ .'
-ಬ್ರ ಸೂ ಭಾ. 2-2 41

ಜ್ಞಾನಭಾಃ ನತು ತೈಜಸಭಾಃ ।
-ದೀಪಿಕಾ

4 ಪ್ರಕಾಶಯನ್ನಂಡಬಹಿಸ್ತಥಾಽಂತಸ್ಸಹಸ್ರ ಲಕ್ಷಾಮಿತಸೂರ್ಯದೀಧಿತಿಃ ।
-ಮ. ಭಾರ. ತಾ. ನಿ. 10-51

5 ದ್ವೀಪೇ ಭಗಿನ್ಯಾಸ್ಸ ಯಮಸ್ಯ ವಿಶ್ವಕೃತ್ ಪ್ರಕಾಶತೇ ಜ್ಞಾನಮರೀಚಿಮಂಡಲಃ ।
-ಮ ಭಾರ ತಾ. ನಿ. 10-51

೩. 6 ಖಾಮಿಶಬ್ದಸ್ಯ ಶಕ್ತ್ಯರ್ಥಕತ್ವಂ ಪೂರ್ವಂ ಉದಾಹೃತೇನ ಶಬ್ದನಿರ್ಣಯೇನ ಸಿದ್ಧ್ಯತಿ ।
'ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ'—ಇತ್ಯಾದೌ ಪ್ರಸಿದ್ಧಂ ಚ ।

ಕರಣಾದಿಗಳ ಅಪೇಕ್ಷೆ ಇಲ್ಲದವನು, ಸಮಾಧಿಕ ವರ್ಜಿತನಾದವನು, ಭಗವಂತನೆಂಬುದಾಗಿ ಸಾರುತ್ತಿರುವ ಶ್ರುತಿಯು ಅವನ ಶಕ್ತಿಯು ನಾನಾ ವಿಧವಾದದ್ದು, ಶ್ರೇಷ್ಠವಾದದ್ದು ಎಂಬುದಾಗಿ ಅವನ ಶಕ್ತಿಯನ್ನು ಪರಿಚಯಿಸಿಕೊಟ್ಟು, ಅಂತಹ ಶಕ್ತಿಯು ಸ್ವಾಭಾವಿಕವಾದದ್ದು, ಅವನ ಸ್ವರೂಪಾತ್ಮಕವಾದದ್ದು ಎಂದು ಪ್ರತಿಪಾದಿಸಿದೆ[1] ಹಾಗೆಯೇ ಮತ್ತೊಂದು ಪ್ರಮಾಣವು ಭಗವಂತನ ಸ್ವರೂಪ ಎಂತಹದ್ದೆಂದು ವಿಚಾರಿಸಿ, ಭಗವಂತನು ಜ್ಞಾನೈಶ್ವರ್ಯ ಸ್ವರೂಪಿಯಾಗಿರುವಂತೆ, ಶಕ್ತಿ ಸ್ವರೂಪಿಯೂ ಆಗಿರುವನೆಂದು ಸಂದೇಶಿಸಿದೆ[2]

೪ ಎಲ್ಲರಿಗೂ ಆಧಾರಳಾದ ಭೂದೇವಿಯನ್ನು ಸಹಾಯಳನ್ನಾಗಿ ಹೊಂದಿರುವವನು[3]

೫ ಎಲ್ಲವನ್ನೂ ಧಾರಣೆ ಮಾಡಿಕೊಂಡಿರುವ (ಸರ್ವವಿಷಯಕವಾದ) ಪರಿಪೂರ್ಣ ಜ್ಞಾನ ಉಳ್ಳವನು[4]

೬ (ಜ್ಞಾನಿಗಳಿಂದ ತಮ್ಮ ಹೃದಯದಲ್ಲಿ) ಧರಿಸಿಕೊಳ್ಳಲ್ಪಟ್ಟಿರುವವನು[5]

---

1 ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ । ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ...

—ಬ್ರ. ಸೂ. ಭಾ 2-1-32

2 ' ಕಿಮಾತ್ಮಕೋ ಭಗವಾನ್ । ಜ್ಞಾನಾತ್ಮಕ ಐಶ್ವರ್ಯಾತ್ಮಕಃ ಶಕ್ತ್ಯಾತ್ಮಕ ಇತಿ'

—ಬ್ರ. ಸೂ ಭಾ. 2-2-41

ಸ ಏವ ದೇಹೋ ವಿಜ್ಞಾನಮೈಶ್ವರ್ಯಂ ಶಕ್ತಿರೂರ್ಜಿತಾ ।

—ಅನು. ವ್ಯಾ. 2-262

೪ 3 ಧಾ ಧಾರಯಂತೀ ಭೂಃ ಅಮಾ ಸಹಾಯಃ ಯಸ್ಯ ತತ್ ಧಾಮ ।

—ವಾ. ರಾ.

೫ 4 ಸರ್ವಂ ಧಾರಯಂತೀ ವಿಷಯೀಕುರ್ವಂತೀ ಅ ಪರಿಪೂರ್ಣಾ ಮಾ ಜ್ಞಾನಂ ಯಸ್ಯ ತತ್ ಧಾಮ ।

೬ 5 ಧೀಯತೇ ಜ್ಞಾನಿಭಿಃ ಸ್ವಹೃದಿ ಧ್ರಿಯತ ಇತಿ ಧಾಮ ।

ಗರ್ಭಿಣಿ ಸ್ತ್ರೀಯರು ತಮ್ಮ ಗರ್ಭವನ್ನು ಬಹಳ ಜಾಗರೂಕತೆಯಿಂದ ಧರಿಸಿಕೊಳ್ಳುತ್ತಿರುವಂತೆ ಗುರು ಶಿಷ್ಯರು ಭಗವಂತನನ್ನು ಚೆನ್ನಾಗಿ ಧರಿಸಿಕೊಂಡಿರತಕ್ಕವರೆಂದು ಕಾಠಕೋಪನಿಷತ್ತು ಸಂದೇಶಿಸಿದೆ.[1]

ಜಿಜ್ಞಾಸೆ

[ಮನೆಯಂತೆ ಆಶ್ರಯ]

ಪ್ರ - ಬ್ರಹ್ಮನು ಶುಕ್ತಿರಜತಾದ್ಯಧ್ಯಾಸಾಧಿಷ್ಠಾನವಾದಂತೆ ಜಗದಾರೋಪಾಧಿಷ್ಠಾನವೆಂದು ಕೆಲವರು, ಮಣ್ಣು ಮಡಿಕೆಗೆ ಉಪಾದಾನವಾದಂತೆ ಜಗದುಪಾದಾನವೆಂದು ಕೆಲವರು, ನಮ್ಮ ಮನೆಯು ನಮಗೆ ಆಶ್ರಯವಾಗುವಂತೆ ಜಗತ್ತಿಗೆ ಆಶ್ರಯವೆಂದು ಇತರರು ಹೇಳುತ್ತಿರುವಾಗ ನಾವು ಇವುಗಳಲ್ಲಿ ಯಾವ ಪಕ್ಷವನ್ನು ಸರಿ ಎಂದು ನಿರ್ಣಯಿಸಬೇಕು?

ಉ - ವಿಷ್ಣುವಿನ ನಾಮವಾಗಿ ಧಾಮಶಬ್ದವು ಇರುವದರಿಂದ ಧಾಮಶಬ್ದಕ್ಕೆ ಮನೆ ಎಂಬ ಅರ್ಥವು ಇದ್ದದ್ದರಿಂದ ಹಿಂದೆ ಹೇಳಿದ ಮೂರು ಮತಗಳಲ್ಲಿ ಮೂರನೆ ಪಕ್ಷವು ಸರಿ ಎಂದು ನಿರ್ಣಯಿಸುವದು ಯುಕ್ತ. ಅಲ್ಲದೆ ಅರ್ಜುನನಿಗೆ ದಿವ್ಯ ಚಕ್ಷುಸ್ಸಿನಿಂದ ವಿಶ್ವರೂಪದ ಪ್ರತ್ಯಕ್ಷವು ಉಂಟಾದಾಗ ಆ ಪ್ರತ್ಯಕ್ಷದಿಂದ ಭಗವಂತನು ನಮಗೆಲ್ಲರಿಗೂ ಮನೆಯಂತೆ ಆಧಾರನು ಎಂದೇ ತೋರಿದೆ ಆದುದರಿಂದ ಪರಮಾತ್ಮನು ನಮಗೆಲ್ಲರಿಗೂ ಮನೆಯಂತೆ ಆಶ್ರಯನು ಎಂಬ ತತ್ತ್ವವು ತ್ರಿಕಾಲಾಬಾಧಿತ.



೨೧೨ ಸತ್ಯಃ

೧ ಜಗತ್ತನ್ನು ಸೃಷ್ಟಿಸುವವನು.[2]

---

1 ಅರಣ್ಯೋರ್ನಿಹಿತೋ ಜಾತವೇದಾಃ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।

—ಕಾ. ಉ 2-1-8

'ಸರ್ವಜ್ಞೋ ಭಗವಾನ್ ವಿಷ್ಣುರರಣ್ಯೋರ್ಗುರುಶಿಷ್ಯಯೋಃ । ಸುಭೃತಃ . .'

-ಕಾ ಉ. ಭಾ.

೧ 2 ಸತ್ ಸದ್ಭಾವಂ ಜನ್ಮ ಯಾಪಯೇತ್ ಪ್ರಾಪಯೇತ್ ಸ್ವವ್ಯತಿರಿಕ್ತಂ ಸರ್ವಂ ಯಸ್ಮಾತ್ತಸ್ಮಾದ್ ತದ್ ಬ್ರಹ್ಮ ಸತ್ಯಂ ಕಥ್ಯತೇ ...।

ಶ್ರೀಮನ್ನ್ಯಾಯಸುಧಾ (1-1-5)

೧ ಭೂತಗಳನ್ನು ಪ್ರವರ್ತಿಸುವವನು[1]

೨ ಭೂತಗಳಿಗೆ ಜೀವನವನ್ನು ನೀಡುವವನು[2]

೩ ಭೂತಗಳನ್ನು ಸಂಹರಿಸುವವನು[3]

ಸತ್ಯ ಶಬ್ದದಿಂದ ಸತ್ಯತ್ವವನ್ನು ಭಗವಂತನ ಲಕ್ಷಣವನ್ನಾಗಿ ಸಂದೇಶಿಸಿದ ತೈತ್ತಿರೀಯೋಪನಿಷತ್ತು[4], ಜನ್ಮಪ್ರದತ್ವರೂಪವಾದ[5] ಜೀವನ ಪ್ರದತ್ವರೂಪವಾದ ಹಾಗೂ ವಿನಾಶಪ್ರದತ್ವರೂಪವಾದ ಸತ್ಯತ್ವವನ್ನು ಅನ್ನಮಯ ಪ್ರಕರಣದಲ್ಲಿ ಸಮರ್ಥಿಸಿದೆ[6] ಹಾಗೆಯೇ ಪ್ರಾಣಮಯ ಪ್ರಕರಣ

---

೧ 1 ಸತ್ ಸತ್ತ್ವಂ ಗತಿಂ ಭೂತಾನಾಂ ಯಾಪಯತೀತಿ ಸತ್ಯಶಬ್ದೋऽಪಿಗತಿಪ್ರದತ್ವಮಾಹ ।
–ಶ್ರೀಮನ್ನ್ಯಾಯಸುಧಾ (1-1-5)

೨ 2 ಸತ್ ಸತ್ತ್ವಂ ಜೀವನಂ ಭೂತಾನಾಂ ಯಾಪಯತೀತಿ ಸತ್ಯಮಿತ್ಯುಕ್ತಂ ಭವತಿ ।
–ಶ್ರೀಮನ್ನ್ಯಾಯಸುಧಾ (1-1-5)

೩ 3 ಸತ್ ಸತ್ತ್ವಂ ವಿಶರಣಂ ಭೂತಾನಾಂ ಯಾಪಯತೀತಿ ಸತ್ಯಮಿತ್ಯುಕ್ತಂ ಭವತಿ ।
–ಶ್ರೀಮನ್ನ್ಯಾಯಸುಧಾ (1-1-5)

ಏತಚ್ಛ್ರುತ್ಯರ್ಥವ್ಯುತ್ಪತ್ತಿಮಧಿಕೃತ್ಯ ಅಧಿಕವಿಚಾರಾಃ ಆನಂದಮಯಾಧಿಕರಣಸಂಬಂಧಿನ್ಯಾಂ ಶ್ರೀಮನ್ನ್ಯಾಯಸುಧಾಯಾಂ ದ್ರಷ್ಟವ್ಯಾಃ ॥

4 ಸತ್ಯಂ ಜ್ಞಾನಮನಂತಂ ಬ್ರಹ್ಮ ।
–ತೈ. ಉ 2-1

5 'ಸದ್ಭಾವಂ ಯಾಪಯೇದ್ ಯಸ್ಮಾತ್ ಸತ್ಯಂ ತತ್ ತೇನ ಕಥ್ಯತೇ । ಇತಿ ಸೃಷ್ಟಿರಿಹ ಪ್ರೋಕ್ತಾ ಜಗತ್‌ಸದ್ಭಾವಯಾಪಕವತ್ । ಬ್ರಹ್ಮೇತಿ ಸ್ಥಾಪನಾಯೈವ ।
-ಅನು ವ್ಯಾ. (1-1-190)

ಸತ್ಯಶಬ್ದೇನ ಯತ್ ಜಗತ್‌ಸದ್ಭಾವಯಾಪಕಂ ಬ್ರಹ್ಮೇತ್ಯುಕ್ತಂ ತಸ್ಯಾರ್ಥಸ್ಯ ಸ್ಥಾಪನಾಯೈವ ಸೃಷ್ಟಿಃ ಪ್ರೋಕ್ತಾ .
-ಸುಧಾ

6 . . .ಸತ್ತ್ವಂ ಜೀವನಮೇವ ಚ । ವಿಶೀರ್ಣತಾ ಚ ಸತ್ತ್ವಂ ಸ್ಯಾತ್ ಸನ್ನಮಿತ್ಯಾಹುರೇವ ಯತ್ । ಅತೋऽದ್ಯತಾऽತ್ತೃತಾऽನ್ನತ್ವಂ ಸತ್ಯಶಬ್ದಾರ್ಥ ಏವ ಹಿ ।
–ಅನು, ವ್ಯಾ. (1-1-191)

ದಲ್ಲಿ ಜೀವನ ಪ್ರದತ್ವರೂಪವಾದ ಮತ್ತು ಪ್ರವರ್ತಕತ್ವರೂಪವಾದ ಸತ್ಯತ್ವವನ್ನು ಸಮರ್ಥಿಸಿದೆ.[1]

ಹೀಗೆ ಭಗವಂತನ ನಾಲ್ಕು ವಿಧವಾದ ಸತ್ಯತ್ವ ಲಕ್ಷಣವು ತೈತ್ತಿರೀಯೋಪನಿಷತ್ತಿನ ಅನ್ನಮಯ ಮತ್ತು ಪ್ರಾಣಮಯ ಪ್ರಕರಣದಲ್ಲಿ ಸಮನ್ವಯಿಸಲಾಗಿದೆ[2]

೨) ಸ್ವತಂತ್ರನಾಗಿರುವವನು.[3]

ಉಳಿದವರ ಇರವಿಕೆ, ಪ್ರವೃತ್ತಿ ಹಾಗೂ ಪ್ರಮಿತಿ ಭಗವದಧೀನವಾಗಿದ್ದರೆ ಸ್ವತಂತ್ರನಾಗಿರುವ ಭಗವಂತನ ಸ್ವರೂಪ ಯಾರಿಗೂ ಅದೀನವಾಗಿಲ್ಲ ಈ ರೀತಿಯ ಸ್ವಾತಂತ್ರ್ಯ ಭಗವಂತನ ಅಸಾಧಾರಣಗುಣವೆನಿಸಿದ್ದು, ಇದನ್ನೂ ತೈತ್ತಿರೀಯೋಪನಿಷತ್ತು ಸತ್ಯಶಬ್ದದಿಂದ ಭಗವಂತನ

---

ಯಥಾ ಏವಂ ಸಕಲಭೂತಾನಾಂ ಜೀವನವಿನಾಶಹೇತುತ್ವಂ ಸತ್ಯಶಬ್ದೋಕ್ತಂ ಅತಃ ಸತ್ಯಶಬ್ದಾರ್ಥ ಏವಾನ್ನತ್ವಮನ್ನಶಬ್ದಪ್ರವೃತ್ತಿನಿಮಿತ್ತಮ್ । ತತ್ ಕಥಮ್ । ಹಿ ಯಸ್ಮಾದುಪಜೀವ್ಯತ್ವಲಕ್ಷಣಾ ಅದ್ಯತಾ ವಿನಾಶಕತ್ವಲಕ್ಷಣಾ ಅತ್ತೃತಾ ಚ ತದಿತಿ ।

–ಸುಧಾ

1 ಪ್ರಾಣಂ ದೇವಾ ಅನುಪ್ರಾಣಂತಿ ಮನುಷ್ಯಾಃ ಪಶವಶ್ಚ ಯೇ । ಅಯುಃ ಪ್ರಾಣೋ ಹಿ ಭೂತಾನಾಮಿತಿ ಯದ್ ಗತಿಜೀವನೇ । ಉಕ್ತೇ ಸದಿತಿಧಾತ್ವರ್ಥೋ ಗತಿಶ್ಚಾತೋ ಹಿ ಸತ್ಯತಾ । ಪ್ರಾಣತ್ವಂ. . ।

–ಅನು ವ್ಯಾ. (1-1-193)

2 ತತ್ರ ಸತ್ಯತ್ವಂ ಸೃಷ್ಟ್ಯಾಽನ್ನಪ್ರಾಣಯೋರಪಿ । ಉಕ್ತಂ ।

–ಅನು. ವ್ಯಾ (1-1-188)

ತತ್ರ ಲಕ್ಷಣೇಷು ಸತ್ಯತ್ವಂ ಸೃಷ್ಟ್ಯಾ 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ' ಇತಿ ಸೃಷ್ಟಿಪ್ರಕರಣೇನ 'ಸ ವಾ ಏಷ ಪುರುಷೋಽನ್ನರಸಮಯಃ' ಇತಿ 'ತಸ್ಮಾದ್ವಾ ಏತಸ್ಮಾದನ್ನರಸಮಯಾದಿತಿ' ಚಾನ್ನಪ್ರಾಣಯೋರನ್ನಮಯಪ್ರಾಣಮಯಯೋಃ ಪ್ರಕರಣಾಭ್ಯಾಮುಕ್ತಮ್ ।

–ಸುಧಾ

೨ 3 .ಸತ್ಯಂ ಅನನ್ಯಾಧೀನಸ್ವರೂಪಮ್ ।

–ಕರ್ಮನಿರ್ಣಯ ಟೀಕಾ

ಲಕ್ಷಣವಾಗಿ ತಿಳಿಸಿದೆ[1] ಅಥರ್ವಣೋಪನಿಷತ್ತಲ್ಲೂ ಈ ಅಭಿಪ್ರಾಯದಲ್ಲೇ ಭಗವಂತನನ್ನು ಸತ್ಯ ಎಂದು ಉಲ್ಲೇಖಿಸಲಾಗಿದೆ.[2]

– ಜಡದ ಮಿಶ್ರಣವಿಲ್ಲದ ಶುದ್ಧ ಚಿನ್ಮಯರೂಪಿ

ಜೀವಾತ್ಮರೂ ಶುದ್ಧಸ್ವರೂಪರೇ ಆದರೂ ಭೌತಿಕ ಶರೀರದ ಸಂಬಂಧ ಅವರಿಗಿದೆ. ಭಗವಂತನಾದರೂ ಶುದ್ಧಚಿನ್ಮಯರೂಪಿ. ಜಡದ ಸಂಪರ್ಕವೇ ಇಲ್ಲ[3] ಆದ್ದರಿಂದಲೇ ಅವನನ್ನು 'ಸತ್ಯ' ಎಂದು ಭಜಿಸಬೇಕೆಂದು ಶುಕಾಚಾರ್ಯರು ಸಂದೇಶಿಸಿರುವರು.[4]

---

1 ಕರ್ಮನಿರ್ಣಯೇ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತಿ ಶ್ರುತೇಃ ಸತ್ಯಶಬ್ದಾರ್ಥಃ ಏವಮೇವ ವ್ಯಾಖ್ಯಾತಃ ।
–'ಸತ್ಯಮನನ್ಯಾಧೀನಸ್ವರೂಪಂ'
-ಕ ನಿ. ಟೀಕಾ

ಸತ್ಯಶಬ್ದಸ್ಯ ಸಚ್ಛಬ್ದಪರ್ಯಾಯತ್ವಾತ್ ಸಚ್ಛಬ್ದಸ್ಯ ಚ 'ಸತ್ತ್ವಂ ಸ್ವಾತಂತ್ರ್ಯಮುದ್ದಿಷ್ಟಂ ತಚ್ಚ ಕೃಷ್ಣೇ ನಚಾಪರೇ' ಇತಿ ಸ್ಮೃತೇಃ, 'ಅಸಂಭವಸ್ತು ಸತೋಽನುಪಪತ್ತೇಃ' ಇತಿ ಸೂತ್ರೇ ಸತಃ ಇತ್ಯಸ್ಯ ಸ್ವತಂತ್ರಸ್ಯೇತಿ ವ್ಯಾಖ್ಯಾನೇನ ಸ್ವತಂತ್ರೇ ಪ್ರಯೋಗಾಚ್ಚ ಸ್ವತಂತ್ರಾರ್ಥಕತ್ವಮಿತಿ ಭಾವಃ ।
-ಕ. ನಿ ಟೀ. ಟಿಪ್ಪಣೀ

2 ತದೇತತ್ ಸತ್ಯಮ್ ।
-ಅ. ಉ 1-2-1

ಅದೃಶ್ಯತ್ವಾದಿಗುಣಕತಯಾ ಉಕ್ತಮಕ್ಷರಂ ಸತ್ಯಂ ಅಪರಾಧೀನ ಸ್ವರೂಪಮ್ ।
-ಉ ಖಂ.

3 ನಿರ್ದೋಷಪೂರ್ಣಗುಣವಿಗ್ರಹ ಆತ್ಮತಂತ್ರೋ ನಿಶ್ಚೇತನಾತ್ಮಕಶರೀರಗುಣೈಶ್ಚ ಹೀನಃ। ಆನಂದಮಾತ್ರಕರಪಾದಮುಖೋದರಾದಿಃ ಸರ್ವತ್ರ ಚ ಸ್ವಗತಭೇದವಿವರ್ಜಿತಾತ್ಮಾ।
-ಮ. ಭಾರ ತಾ. ನಿ. 1-11

4 ' ..ತಂ ಸತ್ಯಮಾನಂದನಿಧಿಂ ಭಜೇತ ಸರ್ವಾತ್ಮನಾ.. '
-ಭಾಗ. 2-2-7

'....ಸತ್ಯಃ ಕೇವಲ ಸಾರತ್ವಾತ್....'
-ಬೃಹತ್ಸಂಹಿತಾ (ಭಾಗ. ತಾ. ನಿ)

೭ ನಿರ್ದುಷ್ಟನಾಗಿರುವವನು ಮತ್ತು ಸರ್ವನಿಯಾಮಕನು[1]

ಭಗವಂತನು ಯಾವುದೇ ದೋಷಕ್ಕೊಳಗಾಗದವನು ಆದ್ದರಿಂದಲೇ ಸರ್ವನಿಯಾಮಕ ಈ ಅಭಿಪ್ರಾಯದಲ್ಲಿ ಭಗವಂತನನ್ನು 'ಸತ್ಯ ಎಂದು ಉಪಾಸಿಸಲು ಸನತ್ಕುಮಾರರು ನಾರದರಿಗ ಉಪದೇಶಿಸಿರುವರು[2]

೮ ಸದ್ಗುಣಗಳಿಂದ ನಿಬಿಡನಾಗಿರುವವನು ಮತ್ತು (ಎಲ್ಲವನ್ನೂ) ನಿಯಮಿಸುವವನು

ಭಗವಂತನು ಸದ್ಗುಣ ಸಂಪನ್ನನಾಗಿದ್ದು, ವಿಶ್ವ ನಿಯಾಮಕ ಎಗಿರುವನೆಂಬ ಅರ್ಥದಲ್ಲಿ ಅಗ್ನಿ ನಾಮಕ ಭಗವಂತನನ್ನು 'ಸತ್ಯ' ಎಂದು ವಿವೇಚಿಸಲಾಗಿದೆ[3]

೯ ಸತ್ಯ ಪದಾರ್ಥಗಳಿಗೆಲ್ಲ ಸತ್ಯತ್ವವನ್ನು ನೀಡುವವನು[4]

ಸತ್ಯದಲ್ಲಿ ಭಗವಂತನು ವಿಶೇಷವಾಗಿ ಸನ್ನಿಹಿತನು ಸತ್ಯತ್ವವು ಅವನನ್ನು ಆಧರಿಸಿಕೊಂಡಿದೆ

---

.. ಸತ್ಯಂ ಜಡಾವಿಂಶ್ರಸಾರರೂಪವಮ್

—ಪ್ರಾಚೀನವಮ್ ।

೭ 1 ನಿರ್ದುಷ್ಟತ್ವಾತ್ ಸತ್ । ಯಮಯತಿ ನಿಯಮಯತೀತಿ ಯಮ್।
ಸಚ್ಚ ತತ್ ಯಂ ಚ ಸತ್ಯಮ್ ।

2 ....ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮಿತಿ ಸತ್ಯಂ ಭಗವೋ ವಿಜಿಜ್ಞಾಸ ಇತಿ ।

-ಛಾಂ. ಉ 7-2-1

ಸ ಸತ್ಯೋ ಭಗವಾನ್ ವಿಷ್ಣುರ್ಯನ್ನಿರ್ದೋಷೋ ನಿಯಾಮಕಃ ।

-ಪರಮಸಾರ (ಛಾಂ. ಉ ಭಾ.)

೮ 3 'ಅಗ್ನಿಃ. .ಸತ್ಯಃ. .'

-ಋ ವೇ 1-5

....ಸದ್ಗುಣೈಃ ಸಂತತೋಽಖಿಲಮ್ । ಯಮಯತಿ.. .'

-ಋ. ಭಾ.

೯ 4 ಸರ್ವಸತ್ಯತಾಪ್ರದಂ ಚ ।

-ಅ. ಉ. ಖಂಡಾರ್ಥ-1-2-1

ಹೀಗೆ ಸತ್ಯಾತ್ ಸತ್ಯನಾದ ಭಗವಂತನು ಸತ್ಯ ಎನಿಸಿರುವನೆಂದು ಮಹಾಭಾರತ ತಿಳಿಸಿದೆ[1]

೧೦ ಅಧಿಕವಾಗಿ ಹರಡಿರುವ ಪ್ರಯುಕ್ತ ತಿ' ಎನಿಸುವ ಅನ್ಯಥಾ ಜ್ಞಾನವನ್ನು ಅಯೋಗ್ಯರಲ್ಲಿ ಸಾಧಿಸುವವನು ಹಾಗೂ ಯೋಗ್ಯರಲ್ಲಿ ಹೋಗಲಾಡಿಸುವವನು

ಭಗವಂತನು ತಿ ಎನಿಸುವ ಅನ್ಯಥಾ ಜ್ಞಾನವನ್ನು ಅಯೋಗ್ಯರಲ್ಲಿ ಸಾದಿಸುವನು ಹಾಗೂ ಯೋಗ್ಯರಲ್ಲಿ ಹೋಗಲಾಡಿಸುವನು ಆದ್ದರಿಂದಲೇ 'ಸತ್ಯ' ಎಂದೆನಿಸಿರುವನೆಂದು ಬೃಹದಾರಣ್ಯಕೋಪನಿಷತ್ತು ಸಂದೇಶಿಸಿದೆ[2]

[ಅರ್ಥವಿಶೇಷಗಳನ್ನು ೧೮ನೆಯ ಮತ್ತು ೮೬೯ನೆಯ 'ಸತ್ಯ' ಎಂಬ ನಾಮದ ವ್ಯಾಖ್ಯಾನದಲ್ಲಿ ನೋಡಬಹುದು ]

## ಜಿಜ್ಞಾಸೆ

### [ಸತ್ಯ ಶಬ್ದಾರ್ಥ]

ಪ್ರ – 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಈ ಉಪನಿಷದ್ವಾಕ್ಯದಲ್ಲಿ ಸತ್ಯತ್ವವು ಬ್ರಹ್ಮಲಕ್ಷಣವಾಗಿ ಹೇಳಲ್ಪಟ್ಟಿದೆ ಎಂದು ಎಲ್ಲ ಭಾಷ್ಯಕಾರರಿಗೂ ಸಂಮತ ಬ್ರಹ್ಮ ಲಕ್ಷಣವು ಬ್ರಹ್ಮೇತರದಲ್ಲಿ ಬರಬಾರದು. ಆದ್ದರಿಂದ ಈ ಜಗತ್ತು ಸತ್ಯವೆಂದು ಹೇಳುವವರು ಈ ಜಗತ್ತು ಬ್ರಹ್ಮ ಸ್ವರೂಪವೆಂದು ಬ್ರಹ್ಮೇತರವಲ್ಲವೆಂದೂ ಬ್ರಹ್ಮೇತವಾದರೆ ಅದು ಮಿಥ್ಯಾ ಹೊರತು ಸತ್ಯವಲ್ಲವೆಂದೂ ಹೇಳಬೇಕಾಯಿತಲ್ಲ?

---

1 ಸತ್ಯೇ ಪ್ರತಿಷ್ಠಿತಃ ಕೃಷ್ಣಃ ಸತ್ಯಮತ್ರ ಪ್ರತಿಷ್ಠಿತಮ್ ।
ಸತ್ಯಾತ್ ಸತ್ಯಂ ತು ಗೋವಿಂದಃ ತಸ್ಮಾತ್ ಸತ್ಯೋಽಪಿ ನಾಮತಃ ॥

–ಮ. ಭಾರ. ಉದ್ಯೋಗ 70

೧೦ 2 ತದೇತತ್ ತ್ರ್ಯಕ್ಷರಂ ಸತ್ಯಮಿತಿ ಸ ಇತ್ಯೇಕಮಕ್ಷರಂ ತೀತ್ಯೇಕಮಕ್ಷರಂ ಯಮಿತ್ಯೇಕಮಕ್ಷರಂ ಪ್ರಥಮೋತ್ತಮೇ ಅಕ್ಷರೇ ಸತ್ಯಂ ಮಧ್ಯತೋಽನೃತಂ ತದೇತದನೃತಮುಭಯತಃ ಸತ್ಯೇನ ಪರಿಗೃಹೀತಂ.... ।

–ಬೃ. ಉ. 7–5–2

ತತತ್ವಾದನ್ಯಥಾಜ್ಞಾನಂ ತೀತ್ಯೇವ ಸಮುದೀರ್ಯತೇ । ತಸ್ಯಾಧಸ್ತಾತ್ ಸದಾತ್ಮಾ ತು ಸಾಧಯನ್ನನೃತಂ ಹರಿಃ । ಉಪರಿಷ್ಟಾಚ್ಚ ಯನ್ನಾಮಾ ನಾಶಯನ್ನನೃತಂ ಸ್ಥಿತಃ ।

ಆಧಾರ (ಬೃ. ಉ ಭಾ. 7-5-2)

ಉ – ಈ ಉಪನಿಷತ್ತಿನಲ್ಲಿರುವ ಸತ್ಯಶಬ್ದಕ್ಕೆ ಜಗತ್ಸೃಷ್ಟಿಕರ್ತಾ ಎಂದು ಅರ್ಥ ಎಂದು ಶ್ರೀಮದಾಚಾರ್ಯರ ಭಾಷ್ಯದಲ್ಲಿ ಹೇಳಿದ್ದಾರೆ ಆದುದರಿಂದ ಬ್ರಹ್ಮಗೆ ಸತ್ಯತ್ವವು ಲಕ್ಷಣವು ಹೌದು ಆದರೆ ಅದರ ಅರ್ಥ ಜಗತ್ ಸೃಷ್ಟಿಕರ್ತೃತ್ವ ಎಂದು ಅರ್ಥವಾದುದರಿಂದ ಆ ಲಕ್ಷಣವು ಬ್ರಹ್ಮನಲ್ಲಿ ಮಾತ್ರ ಇದ್ದದರಿಂದ ಯಾವ ದೋಷವೂ ಇಲ್ಲ ಈ ಉಪನಿಷತ್ತಿನ ಉತ್ತರ ವಾಕ್ಯದಲ್ಲಿ 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ' ಇತ್ಯಾದಿ ವಾಕ್ಯಗಳಲ್ಲಿ ಸತ್ಯಶಬ್ದಾರ್ಥವಾದ ಜಗತ್ಸೃಷ್ಟಿಕರ್ತೃತ್ವವನ್ನು ವಿವರಿಸುತ್ತಿರುವುದು ಸಂಗತವಾಗುತ್ತದೆ ಇಲ್ಲವಾದರೆ ಈ ಉತ್ತರ ವಾಕ್ಯವು ಅಸಂಗತವಾದೀತು



## ೨೧೩ ಸತ್ಯಪರಾಕ್ರಮಃ

೧ ಪ್ರತಿಬಂಧ, ಅನಿತ್ಯತ್ವ, ಅಪೂರ್ಣತೆ, ಜಾಡ್ಯ ಮೊದಲಾದ ದೋಷಗಳಿಂದ ರಹಿತವಾದ ಶೌರ್ಯವುಳ್ಳವನು.[1]

೨ ನಿರ್ದುಷ್ಟವಾಗಿದ್ದು ಸತ್ಯ ಎನಿಸುವ ತನ್ನ ಸ್ವರೂಪಾತ್ಮಕವಾದ ಶೌರ್ಯವುಳ್ಳವನು[2]

ಭಗವಂತನ ಬಲ, ಜ್ಞಾನಾದಿಗುಣಗಳೆಲ್ಲ ಅವನ ಸ್ವರೂಪಾತ್ಮಕಗಳೇ ಆಗಿರುವಂತೆ[3] ಅವನ ಶೌರ್ಯಗುಣವೂ ಅವನ ಸ್ವರೂಪಾತ್ಮಕವೇ ಆದ್ದರಿಂದಲೇ ಅವನಂತೆಯೇ ನಿರ್ದುಷ್ಟವಾದುದು.

---

೧ 1 ಸತ್ಯಃ ಪ್ರತಿಬಂಧಾದಿದೋಷರಹಿತಃ ಪರಾಕ್ರಮಃ ವಿಕ್ರಮಃ ಯಸ್ಯ ಸಃ ಸತ್ಯಪರಾಕ್ರಮಃ। 'ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ' ಇತಿ (ಗೀ. 17–26) ಗೀತೋಕ್ತದಿಶಾ ಸಾಧುಭಾವಾರ್ಥಕಸ್ಯ ಸಚ್ಛಬ್ದಸ್ಯ ಪರ್ಯಾಯತ್ವಾತ್ ಸತ್ಯಶಬ್ದಸ್ಯ ನಿರ್ದುಷ್ಟತ್ವರೂಪಸಾಧುತ್ವಾರ್ಥಕತ್ವಂ ಸಿಧ್ಯತಿ ।

೨ 2 ನಿರ್ದುಷ್ಟತ್ವಾತ್ ಸತ್ಯಃ ಭಗವಾನ್ । ತತ್ಸ್ವರೂಪಭೂತಃ ಪರಾಕ್ರಮಃ ವಿಕ್ರಮಃ ಯಸ್ಯ ಸಃ ಸತ್ಯಪರಾಕ್ರಮಃ ।

3 ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್
-ಅಥ. ಉ. –1$^{2}$-1

ಭಗವತಃ ಕರ್ಮ ಚೇಷ್ಟಾ ತಪೋ ಜ್ಞಾನಂ ಚ ಬ್ರಹ್ಮ ಪರಾಮೃತಬ್ರಹ್ಮಾಖ್ಯಃ ಪುರುಷೋ ಭಗವಾನೇವ ।
ಯೈಷಾ ಚೇಷ್ಟಾ ಭಗವತೋ ಯಚ್ಚ ಜ್ಞಾನಂ ಪರಾತ್ಮನಃ । ತತ್ ಸರ್ವಂ ಭಗವಾನೇವ ಯೇ ಚ ಧರ್ಮಾ ಬಲಾದಯಃ
-ಅಥ. ಉ. ಭಾ.

ಯಾವ ದೇಶಕಾಲಗಳಲ್ಲೂ ಪ್ರತಿಬಂಧವಿಲ್ಲದದ್ದು ನಿತ್ಯ, ಪೂರ್ಣ ಹಾಗೂ ಚೇತನಾತ್ಮಕ. ವಿಪ್ರರೇ ಪ್ರಧಾನರಾಗಿವುಳ್ಳ ಯಜ್ಞಗಳಲ್ಲಿ ಸುಖವನ್ನು ಉದ್ದೇಶಿಸಿ ತಾನು ಸ್ತುತಿಸುತ್ತಿರುವ ಭಗವಂತನ ಎಲ್ಲ ಮಹಿಮೆಗಳೂ 'ಸತ್ಯ'ವಾದವು ಅಂದರೆ ಯಥಾರ್ಥವಾದವು ಹಾಗೂ ನಿರ್ದುಷ್ಟವಾದವುಗಳು ಎನ್ನುತ್ತಿರುವ[1] ವೇದಪುರುಷನು ಮಹಿಮೆಗಳಲ್ಲಿ ಅಂತರ್ಭೂತಗಳಾದ ಅವನ ಪರಾಕ್ರಮಗಳಿಗೂ ಸತ್ಯತ್ವವನ್ನು ಸೂಚ್ಯವಾಗಿ ಪ್ರತಿಪಾದಿಸಿರುವನು ಭಗವಂತನ ದೇಹ, ಜ್ಞಾನಾದಿಗಳಲ್ಲಿಯ ವೈಶಿಷ್ಟ್ಯವನ್ನು ಹೇಳಹೊರಟ ಪ್ರಮಾಣವೊಂದು 'ಸತ್ಪರಾಕ್ರಮಃ' ಎಂಬುದಾಗಿ ಅವನ ಪರಾಕ್ರಮದಲ್ಲಿರುವ ಸತ್ಯತ್ವವನ್ನು ಸತ್‌ಪದದಿಂದ ತೋರಿಸಿಕೊಟ್ಟಿರುವುದು[2]

ತಮ್ಮ ಜೊತೆಗೆ ಬಾಲಕ ರಾಮಚಂದ್ರನನ್ನು ಕಳುಹಿಸಿಕೊಡಬೇಕೆಂದು ದಶರಥನಲ್ಲಿ ಹೇಳುತ್ತಿದ್ದ ವಿಶ್ವಾಮಿತ್ರರು, ತಾವು, ವಸಿಷ್ಠರು ಹಾಗೂ ತಪಸ್ಸಲ್ಲಿ ಮಗ್ನರಾದ ಇತರ ಋಷಿಗಳಷ್ಟೇ ಶ್ರೀರಾಮನನ್ನು 'ಸತ್ಯಪರಾಕ್ರಮಿ'ಯನ್ನಾಗಿ ಬಲ್ಲವು—ಎಂದು ಹೇಳುವ ಮಾತು[3] ಭಗವಂತನ ಸತ್ಯಪರಾಕ್ರಮತ್ವವನ್ನು ಬಲ್ಲವರು ಋಷಿಗಳಷ್ಟೇ ಎಂದು ಸೂಚಿಸಿಕೊಡುವುದು

೨. ಸಫಲವಾದ ತೊಡಗುವಿಕೆ ಉಳ್ಳವನು[4]

ಸರ್ವಸಮರ್ಥನಾದ, ಸ್ವತಂತ್ರನಾದ, ಸತ್ಯಸಂಕಲ್ಪನಾದ ಭಗವಂತನು ಯಾವ ಚಟುವಟಿಕೆಯಲ್ಲೇ ತೊಡಗಲಿ ಅದು ನಿರರ್ಥಕವೆನಿಸುವುದೆಂದಿಲ್ಲ.

ಳ (ತ್ರಿವಿಕ್ರಮಾವತಾರದಲ್ಲಿ) ಸತ್ಯಪರನಾದ ಬಲಿಚಕ್ರವರ್ತಿಯ ಮೇಲೆ ಚೆನ್ನಾಗಿ

---

1 'ಸತ್ಯಸ್ಸೋ ಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ'

–ಮ ಭಾರ ತಾ. ನಿ. 1–67

2 ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್‌ಪರಾಕ್ರಮಃ ।

–ಬ್ರ ಸೂ ಭಾ. 2-2-41

3 ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಮ್ ।
ವಸಿಷ್ಠೋಽಪಿ ಮಹಾತೇಜಾ ಯೇ ಚೇಮೇ ತಪಸಿ ಸ್ಥಿತಾಃ ।

ವಾ. ರಾ ಬಾಲ. 19-15

೩. 4 ಸತ್ಯಃ ಸಫಲಃ ಪರಾಕ್ರಮಃ ಉದ್ಯಮಃ ಯಸ್ಯ ಸಃ ಸತ್ಯಪರಾಕ್ರಮಃ ।
'ಶೌರ್ಯೋದ್ಯೋಗೌ ಪರಾಕ್ರಮೌ ।'

ಪಾದ ವಿಕ್ಷೇಪ ಮಾಡಿದವನು[1]

೫ ಉತ್ತಮಾನಂದ ಸ್ವರೂಪಿಯಾದವನು ಮತ್ತು ದೇವತೆಗಳ ಶತ್ರು ಆದ ಬಲಿಚಕ್ರವರ್ತಿಯ ಮೇಲೆ ಚೆನ್ನಾಗಿ ಪಾದವಿಕ್ಷೇಪ ಮಾಡಿದವನು[2]

೬ ವಾಯು, ಬ್ರಹ್ಮ ಹಾಗೂ ಸೂರ್ಯ ಇವರಿಗೆ ಪರಾಕ್ರಮವನ್ನು ಅನುಗ್ರಹಿಸುವವನು.[3]

೭ ಸಾಧು ಸ್ವರೂಪಿಗಳಾದ (ಪಾಂಡವರು) ತಮ್ಮ ಶತ್ರುಗಳಾದ ಕೌರವರನ್ನು ಆಕ್ರಮಿಸುವಂತೆ ಅನುಗ್ರಹಿಸಿರುವವನು[4]

---

1 ಸತ್ಯಪರೇ ಸತ್ಯವಚನಾತ್ಮಕೇ ಬಲಿಚಕ್ರವರ್ತಿನಿ ಆ ಸಮ್ಯಕ್ ಕ್ರಮಃ ಪಾದವಿಕ್ಷೇಪೋ ಯಸ್ಯ ಸಃ ।

–ಸ. ಸಂ

೫ 2 'ನಿರ್ದುಃಖಪೂರ್ಣಾನಂದತ್ವಾದ್ ಯಮಾಹುಃ ಸತ್ಯಮಚ್ಯುತಮ್' ಇತಿ ತಂತ್ರಭಾಗವತಾ (ಭಾಗ. ತಾ. ನಿ. 1-1-1) ನುಸಾರೇಣ ಸತ್ಯಃ ನಿರ್ದುಃಖಸುಖಪೂರ್ಣಃ । ಪರೇ ದೇವಶತ್ರೌ ಬಲಿಚಕ್ರವರ್ತಿನಿ ಆ ಸಮ್ಯಕ್ ಕ್ರಮಃ ಪಾದವಿಕ್ಷೇಪಃ ಯಸ್ಯ ಸಃ ಪರಾಕ್ರಮಃ ।

೬ 3 'ವಾಯುಃ ಸದಿತಿ ಸಂಪ್ರೋಕ್ತೋ ಜೀವೇಷು ತು ಸುಪೂರ್ಣತಃ । ತೀತಿ ಬ್ರಹ್ಮಾ ಸಮುದ್ದಿಷ್ಟಃ ಸ ಏವಾನ್ನಾಭಿಮಾನವಾನ್ । ಅನ್ನಂ ಪ್ರಜಾಪತಿರಿತಿ ಶ್ರುತಿರನ್ಯಾಽಪ್ಯಭಾಷತ । ಅತಿನಾದಾತ್ ಸದಾ ವೇದೈರಪ್ಯನ್ನಂ ಚತುರ್ಮುಖಃ । ಯಮಿತ್ಯಾದಿತ್ಯ ಉದ್ದಿಷ್ಟೋ ಯಮಯೇದ್ಯತ್ ಪ್ರಕಾಶಯನ್ । ದೇವತಾತ್ರಯಮೇತತ್ತು ಸಹಿತಂ ಸತ್ಯಮುಚ್ಯತೇ । ಶುಕ್ಲ ಕೃಷ್ಣ ಕನೀನಾಸು ಚಕ್ಷುಷೋಽಪ್ಯೇತ ಆಸ್ಥಿತಾಃ ।... ಇತ್ಯೈತರೇಯಭಾಷ್ಯೋಕ್ತೇಃ ಸತ್ಯಶಬ್ದೋ ವಾಯುಬ್ರಹ್ಮಸೂರ್ಯಸಮುದಾಯಸ್ತೇಷಾಂ ಪರಾಕ್ರಮೋ ಯಸ್ಮಾದಿತಿ ।

–ಸ. ಸಂ.

೭ 4 ಸಾಧುತ್ವಾತ್ ಸತ್ಯಾಃ ಧರ್ಮರಾಜಾದಯಃ । ತೇಷಾಂ ಪರೇಷು ಶತ್ರುಷು ಕೌರವೇಷು ಆಕ್ರಮಃ ಯುದ್ಧಕಾಲೇ ಆಕ್ರಮಣಂ ಯಸ್ಮಾತ್ ಸಃ ಸತ್ಯಪರಾಕ್ರಮಃ ।

ಶ್ರೀಕೃಷ್ಣನ ಪ್ರೇರಣೆಗೊಳಗಾಗಿಯೇ ಪಾಂಡವರು ಕೌರವರನ್ನು ಆಕ್ರಮಿಸಲು ತೊಡಗಿದ್ದು.

೮ ರಾಮಾವತಾರದಲ್ಲಿ (ಸೋಮರಸ ಹಿಂಡುವುದೇ ಮೊದಲಾದ) ಸಮೀಚೀನ ಕರ್ಮದಲ್ಲಿ ತೊಡಗಿದ್ದ ಭರದ್ವಾಜಾದಿಗಳ ಆಶ್ರಮಕ್ಕೆ ಹೋಗಿರುವವನು.[1]

೯ ಸತ್ಯನಾಮಕನಾದ ತನ್ನ ಶತ್ರುಗಳನ್ನು ಅಂಧಂತಮಸ್ಸಲ್ಲಿ ಹಾಕಿ ತುಳಿಯುವವನು[2]

೧೦ ಸ್ವತಂತ್ರನಾದವನು ನಿರ್ದೋಷ ಗುಣಪೂರ್ಣನಾದವನು(ತ್ರಿವಿಕ್ರಮಾವತಾರದಲ್ಲಿ) ವಿಶಿಷ್ಟವಾದ ಪಾದವಿಕ್ಷೇಪ ಉಳ್ಳವನು[3]

೧೧ ಸತ್ಯರೂಪಿ ಭಗವತ್ಪರವಾದ ವೇದಗಳ ವರ್ಣ ಶಬ್ದಾದಿಗಳ ಕ್ರಮವನ್ನು ಚೆನ್ನಾಗಿ ಅಭಿವ್ಯಕ್ತೀಕರಿಸುವವನು[4]

೧೨ ಸಾಧು ಜನರ ಪರನಾಗಿರುವವನು ಮತ್ತು ಸಕಲ ಜಗತ್ತನ್ನೂ ವ್ಯಾಪಿಸಿರುವವನು[5]

---

೮ 1 ಸತ್ಯಂ ಸಮೀಚೀನಂ ಸೋಮಾಭಿಷವಾದಿಕರ್ಮ । ತತ್ಪರಾಃ ಭರದ್ವಾಜಾದಯಃ । ತಾನಾಕ್ರಮತೇ ತದ್ಗೃಹಾನ್ ಪ್ರಾಪ್ನೋತೀತಿ ಸತ್ಯಪರಾಕ್ರಮಃ ।
—ಶೇ. ಚಂ.

೯ 2 ಸತ್ಯಸ್ಯ ಸತ್ಯನಾಮಕಸ್ಯ ಸ್ವಸ್ಯ ಯೇ ಪರಾಃ ಶತ್ರವಃ ಆಸುರೀಸ್ವಭಾವೋಪೇತಾಃ, ತೇಷು ಆಕ್ರಮತೇ ಸಮ್ಯಕ್ ಪಾದವಿಕ್ಷೇಪಂ ಕರೋತಿ, ತಾನ್ ಅಂಧೇತಮಸಿ ನಿಕ್ಷಿಪತೀತಿ ಯಾವತ್ ।

೧೦ 3 ಸತ್ಯಃ ಸ್ವತಂತ್ರಃ । 'ಸತ್ಯಂ ಅನನ್ಯಾಧೀನಸ್ವರೂಪಂ'-ಕ. ನಿ. ಟೀಕಾ । ನಿರ್ದೋಷಗುಣ-ಪೂರ್ಣತ್ವಾತ್ ಪರಂ ಚಾಹುರ್ಜನಾರ್ದನಮ್-ತಂತ್ರಭಾಗವತಮ್ (ಭಾಗ. ತಾ. ನಿ. 1-1-1) ಆ ಕ್ರಮತೇ ತ್ರಿವಿಕ್ರಮಾವತಾರೇ ಸಮ್ಯಕ್ ಪಾದವಿಕ್ಷೇಪಂ ಕರೋತೀತಿ ಆಕ್ರಮಃ ।

೧೧ 4 ಸತ್ಯಃ ಭಗವಾನ್, ತತ್ಪರಃ ವೇದಃ । ತಸ್ಯ ಆಕ್ರಮಃ ಸಮೀಚೀನಾ ವರ್ಣಪದಾದ್ಯಾನುಪೂರ್ವೀ ಯಸ್ಮಾದಭಿವ್ಯಕ್ತಾ ಸಃ ಸತ್ಯಪರಾಕ್ರಮಃ ।

೧೨ 5 ಸತ್ಯಾಃ ಸಾಧವಃ । ಸರ್ವದಾ ತತ್ಪರತ್ವಾತ್ ಸತ್ಯಪರಃ । ಸರ್ವಂ ಜಗತ್ ಆಕ್ರಮತೇ ವ್ಯಾಪ್ನೋತೀತಿ ಆಕ್ರಮಃ ಸತ್ಯಪರಶ್ಚಾಸಾವಾಕ್ರಮಶ್ಚೇತಿ ಸತ್ಯಪರಾಕ್ರಮಃ ।

## ಜಿಜ್ಞಾಸೆ

[ಆಯಾಸವಿಲ್ಲ]

ಪ್ರ – ಸತ್ಯಸಂಕಲ್ಪನು ಎಂದರೆ ಅವನ ಎಲ್ಲ ಸಂಕಲ್ಪವು ನಿಯಮೇನ ಸಫಲವಾಗುವದು ಎಂದು ಅರ್ಥವಾದಂತೆ ಸತ್ಯಪರಾಕ್ರಮ ಎಂದರೂ ಅವನ ಎಲ್ಲ ಶೌರ್ಯವು ಸಫಲವಾಗಿಯೇ ತೀರುತ್ತದೆಂದು ಅರ್ಥ ಸ್ಪಷ್ಟ. ಇದರ 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂದು ಶ್ರುತಿಯಲ್ಲಿ ಹೇಳಿದ್ದರಿಂದ ಕೇವಲ ಇಚ್ಛೆಯಿಂದ ಅವನ ಎಲ್ಲ ಕಾರ್ಯವಾಗುತ್ತದೆಂದು ಸಿದ್ಧವಾದುದರಿಂದ ಅವನ ಶೌರ್ಯಕ್ಕೆ ಅವಸರವೇ ಇಲ್ಲವಲ್ಲ? ಆದುದರಿಂದ ಅವನ ಶೌರ್ಯವು ನಿರರ್ಥಕವಾಯಿತಲ್ಲಾ? ಅವನನ್ನು ಸತ್ಯಪರಾಕ್ರಮ ಎಂದು ಹೇಗೆ ಹೇಳುವದು?

ಉ - ಪರಮಾತ್ಮನು ಎಲ್ಲ ಕಾರ್ಯಗಳನ್ನು ಮಾಡುವಾಗ ಆರಂಭದಲ್ಲಿ ಸಂಕಲ್ಪವನ್ನು ಮಾಡಿ ಆ ಆ ಕಾರ್ಯಾನುಕೂಲವಾದ ಶೌರ್ಯವನ್ನು ಪ್ರಕಟಮಾಡಿಯೇ ಆ ಆ ಕಾರ್ಯವನ್ನು ಮಾಡುತ್ತಾನೆ. ಆದುದರಿಂದ ಅವನು ಸತ್ಯಪರಾಕ್ರಮನು 'ಇಚ್ಛಾಮಾತ್ರಂ' ಎಂಬ ಶ್ರುತಿಯ ಅಭಿಪ್ರಾಯ—ಅವನು ಕಾರ್ಯಾನುಗುಣ ಪರಾಕ್ರಮವನ್ನು ಪ್ರಕಟಮಾಡುವದಿಲ್ಲ ಎಂದು ಅಲ್ಲ. ಲೋಕದಲ್ಲಿ ಇಚ್ಛಾಮಾಡಿ ಕಾರ್ಯಾನುಗುಣಶೌರ್ಯವನ್ನು ಪ್ರಕಟಮಾಡಿ ಕಾರ್ಯವನ್ನು ಸಾಧಿಸಿದಾಗ ಆಯಾಸವಾಗುವದು ಕಂಡಿದೆ. ಇಚ್ಛಾಮಾತ್ರವನ್ನು ಮಾಡಿದವರಿಗೆ ಆಯಾಸವಾಗುವದಿಲ್ಲ. ಭಗವಂತನಿಗೆ ಇಚ್ಛಾಮಾಡಿ ಪರಾಕ್ರಮ ಪ್ರಕಟ ಮಾಡಿದರೂ ಇಚ್ಛಾಮಾತ್ರ ಮಾಡಿದವರಿಗೆ ಹೇಗೋ ಹಾಗೆಯೇ ಆಯಾಸಲೇಶವೂ ಇಲ್ಲ ಎಂದು.



### ೨೧೪ ನಿಮಿಷಃ

೧ (ಯಾವಾಗಲೂ ಕ್ಷೀರ ಸಾಗರದಲ್ಲಿ) ಯೋಗನಿದ್ದೆಯಲ್ಲಿರುವವನು.[1] (ಪ್ರಲಯ ಕಾಲದಲ್ಲಿ) ಯೋಗನಿದ್ದೆಯಲ್ಲಿರುವವನು[2]

ವೈಜಯಂತದಲ್ಲಿ ರುದ್ರನಿಗೆ ಭಗವತ್ತತ್ತ್ವದ ಕುರಿತು ಉಪದೇಶಿಸುತ್ತಿದ್ದ ಚತುರ್ಮುಖನು. ಭಗವಂತನು ಯಾವಾಗಲೂ ಕ್ಷೀರ ಸಾಗರದಲ್ಲಿ ಕಣ್ಣು ಮುಚ್ಚಿ ಯೋಗ ನಿದ್ದೆಯಲ್ಲಿ ಇರುವನೆಂದು

---

೧ 1 ಯೋಗನಿದ್ರಯಾ ನೇತ್ರನಿಮೀಲನಾತ್ ನಿಮಿಷಃ ।
-ವಿ. ರಾ.

2 ನಿಮಿಷತಿ ಪ್ರಲಯೇ ಸ್ವನಯನಮಿತಿ ನಿಮಿಷಃ ।
-ವಾ. ರಾ.

ಸಂದೇಶಿಸಿರುವನು[1]

ಶ್ರೀ ಕೃಷ್ಣನು ಹಸ್ತಿನಾವತಿಯಿಂದ ದ್ವಾರಕೆಗೆ ಹೊರಡುತ್ತಿದ್ದಾಗ ಕೌರವ ರಾಜರ ಅಂತಃಪುರದ ಸ್ತ್ರೀಯರು ಶ್ರೀಕೃಷ್ಣನ ಬಗ್ಗೆ ಮಾತನಾಡಿಕೊಳ್ಳುತ್ತ—ಪ್ರಕೃತಿ ಗುಣಗಳ ಕಾರ್ಯಕ್ಕಿಂತಲೂ ಮೊದಲು ಅಂದರೆ ಸಂಹಾರಕಾಲದಲ್ಲಿ ಕಣ್ಣುಮುಚ್ಚಿ ಯೋಗನಿದ್ರೆಯಲ್ಲಿ ತೊಡಗಿದ್ದ ಪುರಾತನ ಪುರುಷನೇ ಇವನು_ಎಂದು ಸ್ತುತಿಸುವುದರ[3] ಮೂಲಕ ಭಗವಂತನು ಪ್ರಲಯಕಾಲದಲ್ಲೂ ಯೋಗ ನಿದ್ರೆಯಲ್ಲಿ ಇರುವನೆಂಬುದನ್ನು ಸೂಚಿಸಿರುವರು ಚತುರ್ಮುಖನ ನೂರು ವರ್ಷಗಳು 'ಪರ' ಎನಿಸಿದ್ದು ಪ್ರಲಯ ನಡೆಯುವ ಈ ಅವಧಿ ಪೂರ್ತಿ ಭಗವಂತನು ಯೋಗ ನಿದ್ರೆಯಲ್ಲಿ ತೊಡಗಿರುವನೆಂದು ಸೂಚಿಸುವ ಶ್ರೀ ಮಧ್ವಾಚಾರ್ಯರು, ಭಗವಂತನ ಚಕ್ಷುರ್ನಿಮೀಲನವು ಔಪಚಾರಿಕವೇ ಹೊರತು ಸ್ವಾಭಾವಿಕವಲ್ಲ, ಬಾಹ್ಯ ಪದಾರ್ಥಗಳ ದರ್ಶನಕ್ಕೆ ಇದರಿಂದೇನೂ ಪ್ರತಿಬಂಧವಿಲ್ಲ—ಎಂಬುದನ್ನೂ ಸೂಚ್ಯವಾಗಿ ಸಂದೇಶಿಸಿರುವರು.[3]

೨ ಜೀವಾತ್ಮರು ಕಣ್ಣು ಮುಚ್ಚುವಂತೆ ಮಾಡುವವನು[4]

---

1 ತಸ್ಯೈಷ ಆದೇಶೋ ನ್ಯಮೀಮಿಷದಾ೩ ಇತಿ.. ।

-ತಲ. ಉ 5-3.

'ಅಕ್ಷ್ಣೋರ್ನಿಮೀಲನಂ ಕೃತ್ವಾ ಯಃ ಶೇತೇ ಕ್ಷೀರಸಾಗರೇ ।ಸ ಏವೈಕಃ ಪರಂ ಬ್ರಹ್ಮೇ-ತ್ಯೇವ ತಸ್ಯೋಪದೇಶನಮ್'

-ಬ್ರಹ್ಮಸಾರ (ತಲ. ಉ. ಭಾ )

2 ಸ ವೈ ಕಿಲಾಯಂ ಪುರುಷಃ ಪುರಾತನೋ ಯ ಏಕ ಆಸೀದವಿಶೇಷ ಆತ್ಮನಿ ।
ಅಗ್ರೇ ಗುಣೇಭ್ಯೋ ಜಗದಾತ್ಮನೀಶ್ವರೇ ನಿಮೀಲಿತಾತ್ಮನ್ನಿಶಿ ಸುಪ್ತಶಕ್ತಿಷು ।

-ಭಾಗ. 1-10-21

3 . ..ಪರನಾಮ ನಿಮೇಷಕಾಂತೇ ।

-ಮ. ಭಾರ. ತಾ. ನಿ. 1-3

* .. ಸೋಽಯಂ ನಿಮೇಷಃ ಹರೇರುಪಚಾರಾದೇವ ನತು ಸ್ವಭಾವಾದಿತಿ ತಮಿಮಂ ನಿಮೇಷಂ ಕುತ್ಸಯಿತುಂ ಕಶಬ್ದಃ ।

-ಭಾವ ಪ್ರಕಾಶಿಕಾ.

೨ 4 ನಿಮಿಷತಿ ನಿಮೀಲತ್ಯನೇನ ಸರ್ವಂ ಜೀವಜಾತಮಿತಿ ನಿಮಿಷಃ ।

ಜೀವಾತ್ಮರು ಸ್ವಪ್ನಾವಸ್ಥೆಯಲ್ಲಿ, ಸುಷುಪ್ತ್ಯವಸ್ಥೆಯಲ್ಲಿ ಹಾಗೂ ಮರಣಾವಸ್ಥೆಯಲ್ಲಿ ತಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳುವರು ಸ್ವಪ್ನಾದ್ಯವಸ್ಥೆಗಳನ್ನು ಪ್ರೇರಿಸುವ ಭಗವಂತನೇ ಆಯಾಯ ಅವಸ್ಥೆಯಲ್ಲಿ 'ಚಕ್ಷುರ್ನಿಮೀಲನ'ವನ್ನು ಮಾಡಿಸುವನು ಈ ಅಭಿಪ್ರಾಯದಲ್ಲೇ ಅಥರ್ವಣೋಪನಿಷತ್ತು ಕಣ್ಣು ಮುಚ್ಚುವ ಸರ್ವವೂ ಭಗವದಧೀನವೆಂದು ಸಂದೇಶಿಸಿದೆ[1]

೩ (ಭಕ್ತರಿಗೆ ಅಭೀಷ್ಟಗಳನ್ನು) ಚೆನ್ನಾಗಿ ಸುರಿಸುವವನು[2]

೪ (ಇಂದ್ರಿಯಾಭಿಮಾನಿ ದೇವತೆಗಳಿಗೆ) ಒಳ್ಳೆಯ ಸ್ಪರ್ಧೆಯನ್ನು ನೀಡಿರುವವನು[3]

ಇಂದ್ರಿಯಾಭಿಮಾನಿ ದೇವತೆಗಳು ತಮ್ಮಲ್ಲಿ ಯಾರು ಶ್ರೇಷ್ಠರು ಎಂಬುದರ ಬಗ್ಗೆ ಒಮ್ಮೆ ವಿವಾದಕ್ಕೊಳಗಾಗುವರು ವಿವಾದ ಪರಿಹಾರಕ್ಕಾಗಿ ಶ್ರೀ ಹರಿಯಲ್ಲಿಗೆ ಹೋಗಿ ತಮ್ಮ ವಿವಾದವನ್ನು ಹೇಳಿಕೊಳ್ಳುವರು ಭಗವಂತನು ಅವರಲ್ಲೊಂದು ಸ್ಪರ್ಧೆಯನ್ನು ಏರ್ಪಡಿಸುವವನು ಯಾರು ದೇಹವನ್ನು ಬಿಟ್ಟಾಗ ಉಳಿದವರು ಆ ದೇಹದಲ್ಲಿ ಇರಲು ಶಕ್ತರಾಗಲಾರರೋ ಅವನೇ ನಿಮ್ಮಲ್ಲಿ ಶ್ರೇಷ್ಠನೆಂಬುದಾಗಿ ಅದರಂತೆ ಒಬ್ಬೊಬ್ಬರೇ ದೇವತೆಗಳು ಚತುರ್ಮುಖ ದೇಹದಿಂದ ಹೊರಟು ಹೋಗಲು ಆ ದೇಹ ಬೀಳುವುದಿಲ್ಲ ಅಲ್ಲದೆ ಉಳಿದ ತತ್ತ್ವಾಭಿಮಾನಿ ದೇವತೆಗಳು ಆ ದೇಹದಲ್ಲೇ ಇದ್ದರೂ ಪ್ರಾಣದೇವರು ಹೊರಟಾಗ ಮಾತ್ರ ಉಳಿದ ತತ್ತ್ವಾಭಿಮಾನಿಗಳಿಗೆ ಅಲ್ಲಿ ಇರಲು ಆಗಲಿಲ್ಲ. ಇದರಿಂದಾಗಿ ಪ್ರಾಣದೇವನೇ ಶ್ರೇಷ್ಠನೆಂಬುದಾಗಿ ಅವರೆಲ್ಲ ಸಿದ್ಧಾಂತಿಸಿಕೊಂಡರೆಂದು 'ಪವಮಾನ' ಪ್ರತಿಪಾದಿಸುತ್ತಿದೆ.[4]

---

1 '...ಅತ್ರೈತತ್ ಸರ್ವಮರ್ಪಿತಮೇಜತ್ ಪ್ರಾಣನ್ನಿಮಿಷಚ್ಚ ಯತ್'
—ಅಥ ಉ 2-1 1

೩ 2 ನಿತರಾಂ ಮೇಷತಿ ಭಕ್ತಾನಾಮಭೀಷ್ಟಂ ಸಿಂಚತೀತಿ ನಿಮಿಷಃ ।
'ಮಿಷ ಸೇಚನೇ' । ಕಪ್ರತ್ಯಯಃ ।

೪ 3 ಇಂದ್ರಿಯಾಭಿಮಾನಿದೇವಾನಾಂ ನಿತರಾಂ ಮಿಷಃ ಸ್ಪರ್ಧಾ ಯಸ್ಮಾತ್ ಸಃ ನಿಮಿಷಃ ।
'ಮಿಷು ಸ್ಪರ್ಧಾಯಾಂ' ।

4 ಅಹಂ ಶ್ರೇಯೋ ವಿವಾದಂ ತು ಯೇನ ಕೃತ್ವಾಽಖಿಲಾಃ ಸುರಾಃ । ಅಸಮರ್ಥಾಃ ಸ್ವರ-ಕ್ಷಾಯಾಂ ಸ ವಾಯುಃ ಸುರನಾಯಕಃ । ವಿವದಂತೋಽಖಿಲಾ ದೇವಾ ಯಯುರ್ನಾರಾಯಣಂ ಪ್ರಭುಮ್ । ಅಹಂ ಶ್ರೇಯಾನಹಂ ಶ್ರೇಯಾನಿತಿ ವಾಯುಪುರಃಸರಾಃ ।

ಹೀಗೆ ತತ್ತ್ವಾಭಿಮಾನಿ ದೇವತೆಗಳ ಮಧ್ಯೆ ಯಾರು ಶ್ರೇಷ್ಠರೆಂದು ನಿರ್ಣಯಿಸಿಕೊಳ್ಳಲು ಅವರಿಗೆ ಒಳ್ಳೆಯ ಸ್ಪರ್ಧೆಯನ್ನು ನೀಡಿರುವ ಪ್ರಯುಕ್ತ ಭಗವಂತನು 'ನಿಮಿಷ' ಎನಿಸಿರುವನು

೧ (ದೈತ್ಯರ ಜೊತೆಗೆ) ಚೆನ್ನಾಗಿ ಸ್ಪರ್ಧಿಸುವವನು[1]

೨ ನಿಮಿ ಎಂಬ ರಾಜನು ತನ್ನ ವಂಶದಲ್ಲೇ ಶ್ರೇಷ್ಠನಾಗುವಂತೆ ಅನುಗ್ರಹಿಸಿರುವವನು[2]

ಭಗವದನುಗ್ರಹದಿಂದ ನಿಮಿ ರಾಜನು ಜನಕ ವಂಶಕ್ಕೆ ಆದ್ಯಪ್ರವರ್ತಕನಾಗಿದ್ದು ಶ್ರೇಷ್ಠನಾಗಿರುವನು.

೩ ಅಯೋಗ್ಯರ ಬಗ್ಗೆ ತನ್ನ ಕೃಪಾಕಟಾಕ್ಷವನ್ನು ಬೀರದಿರುವವನು[3]

೪ ಚೆನ್ನಾಗಿ ಜಾಗರೂಕನಾಗಿ ಇರುವವನು[4]

---

ಉಕ್ತಂ ಭಗವತಾ ತೇನ ಯೇನ ತ್ಯಕ್ತೇಽಖಿಲಾ ಅಪಿ । ಸ್ಥಾತುಂ ನ ಶಕ್ತಾಃ ಸ ಶ್ರೇಯಾನಿತ್ಯುಕ್ತಾಃ ಪುನರಾಗತಾಃ । ಉತ್ಕ್ರಾಂತಾಶ್ಚ ಪುನಃ ಸರ್ವೇ ತದ್ವಿಜ್ಞಪ್ತ್ಯೈ ಪೃಥಕ್ ಪೃಥಕ್ । ಸುಪರ್ಣಶೇಷರುದ್ರೇಂದ್ರಸೂರ್ಯಾದಿಷು ಪೃಥಕ್ ಪೃಥಕ್ । ಉತ್ಕ್ರಾಂತೇಷು ಬ್ರಹ್ಮದೇಹಾಚ್ಛರೀರಂ ನ ಪಪಾತ ಹ । ಯಂತ ಉತ್ಕ್ರಾಂತಮೇಕಂ ತು ತದನ್ಯೇ ನಿವಸಂತಿ ಚ। ಪ್ರಾಣ ಉಚ್ಚಿಕ್ರಮಿಷತಿ ಸ್ಥಾತುಂ ನಾಶಕ್ನುವನ್ ಪರೇ । ತಸ್ಮಾತ್ ಪ್ರಾಣೋ ವರೋ ದೇವೇಷ್ವಿತಿ ಸರ್ವೇಽಪಿ ಮೇನಿರೇ'

-ಪವಮಾನ (ಬೃ. ಉ. ಭಾ. 8-1)

ಅನೇಕಾಸೂಪನಿಷತ್ಸು ಇಯಮಾಖ್ಯಾಯಿಕಾ ಉಲ್ಲಿಖಿತಾ ।

೧ 1 'ಮಿಷ ಸ್ಪರ್ಧಾಯಾಂ' ಇತಿ ಧಾತೋರ್ನಿತರಾಂ ದೈತ್ಯೈರ್ಮಿಷಃ ಸ್ಪರ್ಧಾ ಯಸ್ಯ ಸಃ ।

-ಸ ಸಂ.

೨ 2 ನಿಮಿಃ ತನ್ನಾಮಕಃ ರಾಜಾ ಷಃ ಜನಕವಂಶಸ್ಯ ಆದ್ಯಪ್ರವರ್ತಕತಯಾ ಶ್ರೇಷ್ಠಃ ಯಸ್ಮಾತ್ ಸಃ ನಿಮಿಷಃ। ಷವರ್ಣಸ್ಯ ಶ್ರೇಷ್ಠಾರ್ಥಕತ್ವಂ ಏಕಾಕ್ಷರಕೋಶೇ ಪ್ರಸಿದ್ಧಮ್।

೩ 3 ಅಯೋಗ್ಯೇಷು ವಿಷಯೇ ನಿಮಿಷತಿ ನ ಕಟಾಕ್ಷಯತೀತಿ ನಿಮಿಷಃ ।

-ಪ. ಭ. ಆಧಾರೇಣ.

೪ 4 ನಿತರಾಂ ಮಿಷನ್ ಜಾಗೃವಾನ್ ನಿಮಿಷಃ ।

-ಶೇ. ಚಂ.

೯ ಚನ್ನಾಗಿ (ಸರ್ವವೇದಗಳಿಂದ ಅಥವಾ ಸರ್ವಶಬ್ದಗಳಿಂದ) ಪ್ರತಿಪಾದ್ಯನಾಗಿರುವವನು[1]

೧೦ (ಸರ್ವದಾ ಸರ್ವರನ್ನೂ) ಪ್ರೇರಿಸುವವನು ಮತ್ತು (ಸರ್ವದಾ) ಜಾಗರೂಕನಾಗಿರುವವನು[2]

ಭಗವಂತನು ಸರ್ವದಾ ಜಾಗರೂಕನಾಗಿದ್ದು ಸರ್ವರನ್ನೂ ಸರ್ವದಾ ಪ್ರೇರಿಸುತ್ತಿರುವವನು

## ಜಿಜ್ಞಾಸೆ

[ಸ್ವಾರ್ಥ ಇಲ್ಲ]

ಪ್ರ - ಚಾತುರ್ಮಾಸ್ಯದಲ್ಲಿ ಮತ್ತು ಪ್ರಲಯದಲ್ಲಿ ಪರಮಾತ್ಮನು ಕಣ್ಣು ಮುಚ್ಚಿ ಮಲಗುವದು ಏಕೆ? ಅವನಿಗೆ ಸ್ವಾರ್ಥವು ಇಲ್ಲ ಇದರಿಂದ ಪರಾರ್ಥ ಇರುವದಾದರೆ ಅದು ಯಾವುದು?

ಉ - ಪರಮಾತ್ಮನಿಗೆ ಜಗತ್ಸೃಷ್ಟ್ಯಾದಿ ವ್ಯಾಪಾರಗಳಿಂದ ಸ್ವಾರ್ಥವು ಇಲ್ಲ. ಪರಾರ್ಥವಾಗಿ ಅದನ್ನು ಅವನು ಮಾಡುತ್ತಾನೆಂದು ತೋರಿಸಬೇಕಾಗಿದೆ. ಅದಕ್ಕಾಗಿ ಅವನು ಮಲಗುತ್ತಾನೆ. ಜಗತ್ ಸೃಷ್ಟ್ಯಾದಿಗಳಿಂದ ಪರಮಾತ್ಮನಿಗೆ ಸ್ವಾರ್ಥ ಇರುವದಾದರೆ ಅವನು ಪ್ರಲಯದಲ್ಲಿ ಮಲಗುತ್ತಿದ್ದಿಲ್ಲ ಧನಪ್ರಾಪ್ತಿಯೇ ಮೊದಲಾದ ಸ್ವಾರ್ಥಕ್ಕಾಗಿ ದುಡಿಯುವ ವ್ಯಕ್ತಿಯು ಅಧಿಕ ವಿಶ್ರಾಂತಿಯಿಲ್ಲದೆ ದುಡಿಮೆಯಲ್ಲಿ ತೊಡಗುತ್ತಿರುತ್ತಾನೆ ತಾನೇ? ಎಂಬ ತರ್ಕದಿಂದ ಅವನಿಗೆ ಸ್ವಾರ್ಥವು ಇಲ್ಲ ಎಂದು ಗೊತ್ತಾಗುತ್ತದೆ ಅದಕ್ಕಾಗಿ ಅವನು ಮಲಗುತ್ತಾನೆ



## ೨೧೫ ಅನಿಮಿಷಃ

೧ ಯಾವಾಗಲೂ ನೋಡುತ್ತಿರುವವನು.[3]

---

೯ 1 ನಿರತಾಂ ಮಿಷ್ಯತೇ ಸರ್ವವೇದೈಃ ಸರ್ವಶಬ್ದೈರ್ವಾ ಉಚ್ಯತ ಇತಿ ನಿಮಿಷಃ । 'ಮಿಷ ಸ್ಪರ್ಧಾಯಾಂ ವಾಚಿ ಚ' ಇತಿ ಮಿಷಿಃ ವಾಚ್ಯಪಿ ಹರ್ಯತೇ ।

೧೦ 2 ನಯತಿ ಸರ್ವಂ ಪ್ರೇರಯತೀತಿ ನಿಃ । ಮಿಷತಿ ಸರ್ವದಾ ಚಕ್ಷುರುನ್ಮೀಲತಿ, ಜಾಗರ್ತೀತಿ ಯಾವತ್, ಮಿಷಃ ।

೧ 3 ನಿಮಿಷ ಇತಿ ಚಕ್ಷುರ್ನಿಮೀಲನಮ್, ಆದರ್ಶನಮಿತಿ ಯಾವತ್, ತದಸ್ಯ ನಾಸ್ತಿ, ಸರ್ವಂ ಸರ್ವದಾ ಸಾಕ್ಷಾದಪರೋಕ್ಷಾತ್ ಪಶ್ಯತೀತಿ ಸ ಏವ ಕಿಲ ಸರ್ವಥಾಽನಿಮಿಷೋ ಭವಿತುಮರ್ಹತಿ ।

–ಬ ಗೋ. (ಭಾಗ, ತಾ. ನಿ ಟಿ. 3-10-17)

೨ ಸತತವಾಗಿ ಹೋಗುತ್ತಿರುವವನು[1]

ಕಣ್ಣು ಮುಚ್ಚಿ ವಿಶ್ರಾಂತಿ ಪಡೆಯುವ ಪ್ರಯುಕ್ತ ಕಣ್ಣುಮುಚ್ಚುವಿಕೆ ಎಂಬ ಅರ್ಥದಲ್ಲಿ ಇರುವ ನಿಮಿಷ ಶಬ್ದಕ್ಕೆ ವಿಶ್ರಾಂತಿ ಎಂಬುದು ಆರ್ಥಿಕಾರ್ಥ ಲೋಕದಲ್ಲಿ ಪ್ರತಿಯೊಂದು ವಸ್ತುವಿಗೂ ತನ್ನ ತನ್ನ ಕಾರ್ಯದ ಮಧ್ಯದಲ್ಲಿ ವಿಶ್ರಾಂತಿ—ನಿಲುಗಡೆ ಇರುವುದುಂಟು ಕಾಲವು ಮಾತ್ರ ಪ್ರತಿಕ್ಷಣ ಲವವೇ ಮೊದಲಾದ ತನ್ನ ಅವಯವಗಳನ್ನು ನಡೆಸುತ್ತ ಇರುವ ಪ್ರಯುಕ್ತ ಎಂದೂ ವಿಶ್ರಾಂತಿ ಹೊಂದುವುದೆಂದಿಲ್ಲ ಅದುವರಗೆ ಕಾಲದ ಪ್ರವೃತ್ತಿ, ಬಳಿಕ ಅದಕ್ಕೆ ವಿಶ್ರಾಂತಿ—ಎಂದು ಹೇಳಲಾಗದು ತಾನೇ? ಆದ್ದರಿಂದಲೇ ಕಾಲವು ಅನಿಮಿಷ ಎನಿಸಿದೆ ವಿಶ್ರಾಂತಿ ಇಲ್ಲದೆ ಕಾರ್ಯಪ್ರವೃತ್ತವಾಗಿದೆ ಎಂಬ ಅಭಿಪ್ರಾಯ ಅಂತಹ ಕಾಲವನ್ನು ನಿಯಮಿಸುವ ಭಗವಂತನಾದರೂ ಕಾಲದ ಲವವೇ ಮೊದಲಾದ ಪ್ರತಿಯೊಂದು ಸೂಕ್ಷ್ಮಾತಿಸೂಕ್ಷ್ಮವಾದ ಅಂಗವನ್ನೂ ತನ್ನ ನಿತ್ಯ ಜ್ಞಾನ ದೃಷ್ಟಿಯಿಂದ ನೋಡುತ್ತಿರುವನು ಹೀಗೆ ತನ್ನ ಕಣ್ಣು ಮುಚ್ಚದೆ ಕಾಲವನ್ನು ನೋಡುತ್ತಿರುವ ಪ್ರಯುಕ್ತ, ಕಾಲನಿಯಾಮಕ ಭಗವಂತನೂ ಅನಿಮಿಷ ಎನಿಸಿರುವನು ಎಂದು ತಂತ್ರಸಾರವು ಸಾರಿದೆ[2]

ಹಾಗೆಯೇ ಕಾಲವು ರಾತ್ರಿಹಗಲೆನ್ನದೆ ಸತತವಾಗಿ ಚಲಿಸುತ್ತಿರುವಂತಹದ್ದು ಅದರಲ್ಲಿದ್ದುಕೊಂಡು ಅದನ್ನು ನಿಯಮಿಸುತ್ತಿರುವ ಭಗವಂತನೂ ಸತತವಾಗಿ ಚಲಿಸುವನು ಆದ್ದರಿಂದಲೂ ಭಗವಂತನು ಅನಿಮಿಷ ಎಂದೆನಿಸಿರುವನು

ಕಾಲ ನಿಯಾಮಕ ಭಗವಂತನ ಮಹಿಮೆಯನ್ನು ವಿದುರನಿಗೆ ವಿವರಿಸುತ್ತಿದ್ದ ಮೈತ್ರೇಯರು, ಕಾಲಾಂತರ್ಯಾಮಿ ಭಗವಂತನು ಗ್ರಹ, ನಕ್ಷತ್ರ, ತಾರೆಗಳ ಮಂಡಲದಲ್ಲಿದ್ದುಕೊಂಡು ಪರಮಾಣು

---

೨ 1 ನಿಮಿಷ ಇತಿ ಚಕ್ಷುರ್ನಿಮೇಷಣಂ ವಿಶ್ರಾಂತಿಃ । ತದಭಾವಾದನಿಮಿಷಃ ಸತತವ್ಯಾಪೃತಃ । ಏತದೇವೋಕ್ತಂ 'ಸತತಂ ಗಮನಾದ್ವಾಽಪಿ' ಇತಿ ।

—ಬ. ಗೋ. (ಭಾಗ. ತಾ. ನಿ ಟಿ. 3-12-13)

2 'ನಿತ್ಯಜ್ಞಾನದೃಶಾ ನಿತ್ಯಂ ಲವಕಾಲಮಪೀಶ್ವರಃ । ಪಶ್ಯೇತ್ ತಾತ್ಕಾಲಿಕಂ ಚೈವ ತಸ್ಮಾದನಿಮಿಷೋ ಹರಿಃ । ಕಾಲಸ್ಯಾನಿಮಿಷತ್ವಂ ಚ ಲವಾದೇರ್ನಿತ್ಯವೀಕ್ಷಣಾತ್'

-ತಂತ್ರಸಾರ (ಭಾಗ. ತಾ ನಿ. 3-10-17)

ನಿತ್ಯಮೇತತ್ ಲವಕಾಲಮಪೀತಿ ವಿವೃತಮ್ । ಸೂಕ್ಷ್ಮಾತಿಸೂಕ್ಷ್ಮಕಾಲೇಽಪ್ಯಸ್ಯಾದರ್ಶನಂ ನಾಮ ನಾಸ್ತೀತ್ಯರ್ಥಃ । ಅತ್ಯಂತಸಂಯೋಗೇ ದ್ವಿತೀಯಾ ।

-ಭಾ. ತಾ. ನಿ.

ಎಂಬ ಕಾಲದ ಪರಿಮಾಣದಿಂದ ಪ್ರಾರಂಭಿಸಿ ಸಂವತ್ಸರ ಪರಿಮಾಣದವರೆಗಿನ ಕಾಲದಿಂದ ಜಗತ್ತನ್ನು ಸುತ್ತ ನಡೆಸುವನು—ಎಂದು ಉಪದೇಶಿಸುವಾಗ, ಕಾಲನಿಯಾಮಕ ಭಗವಂತನು ತನ್ನಿಂದ ನಿಯಮ್ಯನಾದ ಕಾಲವನ್ನು ಸರ್ವದಾ ನೋಡುತ್ತ, ಅದರ ಜೊತೆಗೆ ಅವನೂ ಚಲಿಸುತ್ತ ಇರುವನು ಎಂಬ ಅಭಿಪ್ರಾಯದಲ್ಲಿ ಅವನನ್ನು 'ಅನಿಮಿಷ' ಎಂದೂ ಹೆಸರಿಸಿರುವರು[1]

೨ (ಪ್ರಲಯ ಕಾಲದಲ್ಲೂ ಎಲ್ಲವನ್ನೂ) ತಿಳಿದುಕೊಂಡಿರುವ ಮುಖ್ಯಪ್ರಾಣನು ಯಾರ ಸೇವಕನಾಗಿರುವನೋ ಅಂತಹವನು[2]

೩ (ಪ್ರಲಯ ಕಾಲದಲ್ಲೂ ಎಲ್ಲವನ್ನೂ) ಮುಖ್ಯಪ್ರಾಣನು ತಿಳಿದುಕೊಂಡಿರುವಂತೆ ಅನುಗ್ರಹಿಸಿರುವವನು[3]

ಮುಖ್ಯಪ್ರಾಣನು ಭಗವಂತನ ಅನುಗ್ರಹದಿಂದಾಗಿ ಪ್ರಲಯಕಾಲದಲ್ಲೂ ಪರಾಪರ ತತ್ತ್ವಗಳನ್ನು ಬಲ್ಲವನಾಗಿರುವನು[4]

೫ ಮುಖ್ಯಪ್ರಾಣನ ಭಕ್ತರಲ್ಲಿ ಸನ್ನಿಹಿತನಾಗುವವನು.[5]

---

1 ಗ್ರಹರ್ಕ್ಷತಾರಾಚಕ್ರಸ್ಥಃ ಪರಮಾಣ್ವಾದಿನಾ ಜಗತ್ ।
ಸಂವತ್ಸರಾವಸಾನೇನ ಪರ್ಯೇತ್ಯನಿಮಿಷೋ ವಿಭುಃ ।
-ಭಾಗ. 3-12-13

'ಸರ್ವದಾ ದರ್ಶನಾತ್ ತಸ್ಯಾನಿಮಿಷತ್ವಂ ವಿದುರ್ಬುಧಾಃ । ಸತತಂಗಮನಾದ್ ವಾಽಪಿ ಕಾಲಸ್ಥಸ್ಯ ಮಹಾತ್ಮನಃ'
-ಭಾಗ. ತಾ. ನಿ.

೨ 2 ತದಾಽಪಿ (ಪ್ರಲಯೇಽಪಿ) ಅನಿಃ ಮುಖ್ಯಪ್ರಾಣಃ ಮಿಷನ್ ಪಶ್ಯನ್ ಯಸ್ಯ ಸಃ ।
-ವಾ. ರಾ.

೩ 3 ಪ್ರಲಯೇಽಪಿ ಅನಿಃ ಮುಖ್ಯಪ್ರಾಣಃ ಮಿಷತಿ ಪರಾಪರತತ್ತ್ವಾನ್ಯಧಿಕೃತ್ಯ ಜಾಗರ್ತಿ ಯಸ್ಮಾತ್ಸಃ ಅನಿಮಿಷಃ ।

4 'ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ । ಮುಖ್ಯವಾಯುಃ... '
-ಅನು. ವ್ಯಾ. 2-3-18

೫ 5 ಅನೋ ಯೇಷಾಮಸ್ತೀತ್ಯನಿನೋ ವಾಯುಭಕ್ತಾಸ್ತಾನ್ ಮಿಷತೀತ್ಯನಿಮಿಷಃ । 'ಮಿಷ ಸಂಗಮೇ' ಇತಿ ಧಾತೋಃ ।
-ಸ. ಸ.

೬ ಭಕ್ತರನ್ನು ಯಾವಾಗಲೂ ದಯೆಯಿಂದ ಕಾಣುತ್ತಿರುವವನು[1]

೭ ಮತ್ಸ್ಯಾವತಾರಿ ಅಥವಾ ದೇವ ಶ್ರೇಷ್ಠ[2]

೮ ಮುಖ್ಯಪ್ರಾಣನಲ್ಲಿ (ಭಕ್ತಿ ಜ್ಞಾನ ವೈರಾಗ್ಯಗಳನ್ನು) ಸುರಿಸುವವನು[3]

೯ ಮುಖ್ಯಪ್ರಾಣನ ಮೂಲಕ ಸಾತ್ವಿಕರಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳನ್ನು ಸುರಿಸುವವನು[4]

೧೦ ವಿಶೇಷವಾಗಿ ಚಟುವಟಿಕೆಯನ್ನು ನಡೆಸುವವನು ಹಾಗೂ ಯಾವಾಗಲೂ ಜಾಗರೂಕನಾಗಿ ಇರುವವನು[5]

---

೬ 1 ಸರ್ವದಾ ದಯಯಾ ಭಕ್ತಾನ್ ಪಶ್ಯತೀತಿ ।

-ಸ ಸ.

* ಮತ್ಸ್ಯ ನ ನಿಮಿಷತಿ ಜಾಗರ್ತೀತಿ ಅನಿಮಿಷಃ ।

-ಪ. ಭ.

೭ 2 'ಸುರಮತ್ಸ್ಯಾವನಿಮಿಷೌ' ಇತ್ಯನಿಮಿಷ ಶಬ್ದಸ್ಯ ಮತ್ಸ್ಯವಾಚಕತ್ವಾತ್ ಮತ್ಸ್ಯಾವತಾರೀ ಭಗವಾನಪಿ ತೇನ ಪ್ರತಿಪಾದ್ಯತೇ । ಮತ್ಸ್ಯರೂಪತಯಾಽನಿಮಿಷಃ ಇತಿ ಶಾಂ. ಭಾಷ್ಯೇ ವ್ಯಾಖ್ಯಾತಂ ಚ । ತಥಾ ಸುರಸಾಮಾನ್ಯ ವಾಚಕೇನ ಮತ್ಸ್ಯಶಬ್ದೇನ 'ಗೌಣಮುಖ್ಯಯೋಃ ಮುಖ್ಯ ಏವ ಕಾರ್ಯಸಂಪ್ರತ್ಯಯಃ' ಇತಿ ನ್ಯಾಯಾನುಸಾರೇಣ ಸುರಶ್ರೇಷ್ಠಃ ಭಗವಾನ್ ಮುಖ್ಯತಯಾ ಕಥ್ಯತೇ । ವ್ಯಾಖ್ಯಾತಂ ಚ ಶೇಷಚಂದ್ರಿಕಾಚಾರ್ಯೈಃ-'ದೇವ ಏವ ನ ಮಾನುಷ ಇತಿ' ।

೮ 3 ಅನತಿ ಚೇಷ್ಟತೇ ಇತಿ ಅನಃ । ಅತಿಶಯೇನ ಚೇಷ್ಟತ ಇತಿ 'ತೃತೀಯೋಽತಿಶಯೇ' ಇತಿ ಅಕಾರಸ್ಥಾನೇ ಇಕಾರೇ ಸತಿ ಅನಿಃ ಮುಖ್ಯಪ್ರಾಣಃ ತಸ್ಮಿನ್ ಮೇಷತಿ ಭಕ್ತಿಜ್ಞಾನ-ವೈರಾಗ್ಯಾಣಿ ಸಿಂಚತೀತಿ ಅನಿಮಿಷಃ 'ಮಿಷು ಸೇಚನೇ'

೯ 4 ಅನಿನಾ ಸಾತ್ವಿಕೇಷು ಮಿಷಃ ಭಕ್ತಿಜ್ಞಾನಾದೇಃ ಸೇಚನಂ ಯಸ್ಮಾತ್ ಸಃ ಅನಿಮಿಷಃ ।

೧೦ 5 ಅತಿಶಯೇನ ಅನತಿ ಚೇಷ್ಟತ ಇತಿ ಅನಿಃ । ಸರ್ವದಾ ಮಿಷತಿ ಜಾಗರ್ತೀತಿ ಮಿಷಃ । ಅನಿಶ್ಚಾಸೌ ಮಿಷಶ್ಚ ಅನಿಮಿಷಃ ।

ಭಗವಂತನು ಯಾವಾಗಲೂ ಜಾಗರೂಕನಾಗಿದ್ದು, ವಿಶೇಷವಾಗಿ ಚಟುವಟಿಕಗಳನ್ನು ನಡೆಸುವವನು

### ಜಿಜ್ಞಾಸೆ

[ಭೇದಾಭೇದದಂತೆ]

ಪ್ರ - ನಿಮಿಷ ಎಂಬ ನಾಮದಿಂದ ಯೋಗನಿದ್ರೆಯಲ್ಲಿ ಇರುವವನು ಅಂದರೆ ಸದಾ ಕಣ್ಣು ಮುಚ್ಚಿಕೊಂಡೇ ಇರುವವನು ಎಂದು ಅರ್ಥವು ತಿಳಿಯಲ್ಪಡುತ್ತದೆ. ಅನಿಮಿಷ ಎಂಬ ನಾಮದಿಂದ ಸದಾ ನೋಡುತ್ತಾ ಇದ್ದಾನೆಂದು ಅರ್ಥವು ತಿಳಿಯಲ್ಪಡುತ್ತದೆ ಈ ಎರಡು ಅರ್ಥಗಳು ಪರಸ್ಪರ ವಿರುದ್ಧಗಳಾದುದರಿಂದ ಹೇಗೆ ಅಂಗೀಕಾರಾರ್ಹಗಳಾಗುವವು?

ಉ - ಮಣ್ಣು ಮತ್ತು ಮಡಿಕೆಗಳಿಗೆ ಭೇದಾಭೇದವನ್ನು ಪ್ರತ್ಯಕ್ಷದಿಂದ ನೋಡಿ ಅಲ್ಲಿ ವಿರೋಧವು ಇಲ್ಲ ಎಂದು ನಿರ್ಣಯಿಸುವೆವು. ಅದರಂತೆ ನಿರವಕಾಶ ಪ್ರಮಾಣದಿಂದ ನಿಮಿಷಾನಿಮಿಷ ಶಬ್ದಗಳ ಅರ್ಥಗಳು ಸಿದ್ಧವಾಗಿದ್ದರಿಂದ ವಿರೋಧವು ಇಲ್ಲವೆಂದು ನಿರ್ಣಯಿಸಬಹುದು.



## ೨೧೬ ಸ್ರಗ್ವೀ

೧ ಪ್ರಶಸ್ತಗಳಾದ ವನಮಾಲೆಯೇ ಮೊದಲಾದ ಮಾಲೆಗಳನ್ನು ನಿತ್ಯವೂ ಧರಿಸಿಕೊಂಡಿರುವವನು.[1]

ಭಗವಂತನು ವನಮಾಲೆಯೇ ಮೊದಲಾದ ಉತ್ಕೃಷ್ಟಗಳಾದ ಹಾರಗಳನ್ನು ಧರಿಸಿಕೊಂಡಿರುವವನು. ಶ್ರೀ ಮಧ್ವಾಚಾರ್ಯರು ನಮ್ಮ ಹೃದಯ ಕಮಲದ ಮಧ್ಯದಲ್ಲಿಯ ಪೀರದ ಮಧ್ಯದಲ್ಲಿ ಇರುವ ಪದ್ಮದಲ್ಲಿ ಧ್ಯಾನಿಸಬೇಕಾದ ಭಗವಂತನನ್ನು ತನ್ನ ವಿಸ್ತೃತವಾದ ಎದೆಯಲ್ಲಿ ವನಮಾಲೆ ಹಾಗೂ ಇತರ ವೈಜಯಂತ್ಯಾದಿಹಾರಗಳಿಂದ ಕೂಡಿದವನನ್ನಾಗಿಯೂ ಧ್ಯಾನಿಸಲು ಸಂದೇಶಿಸಿರುವರು.[2]

---

೧ 1 **ಪ್ರಶಸ್ತಾಃ ಸ್ರಜಃ ವನಮಾಲಾದ್ಯಾಃ ಅಸ್ಯ ನಿತ್ಯಂ ಸಂತೀತಿ ಸ್ರಗ್ವೀ । ಪ್ರಾಶಸ್ತ್ಯಾರ್ಥೇ ನಿತ್ಯಯೋಗೇ ಚ ಅರ್ಥವಿಶೇಷೇ ವಿವಕ್ಷಿತೇ ವಿನಿಃ ।**

2 **ವಿಸ್ತಾರಿವಕ್ಷಸಂ ಭ್ರಾಜತ್ಕೌಸ್ತುಭಾಮುಕ್ತಕಂಧರಮ್ ।**
**ವನಮಾಲಾಧರಂ ಹಾರವೈಜಯಂತ್ಯಾದಿಭಿರ್ಯುತಮ್ ॥**

**-ಯತಿಪ್ರಣವಕಲ್ಪ-9**

ಇತರ ಮಾಲೆಗಳಿಗಿಂತಲೂ ವನಮಾಲೆಯು ವೈಶಿಷ್ಟ್ಯಪೂರ್ಣವಾಗಿದೆ. ಮೊಣಕಾಲಿನವರೆಗೂ ಚಾಚಿಕೊಂಡಿರುವ, ಎಲ್ಲ ಋತುಗಳಲ್ಲೂ ಆಗುವ ಕುಸುಮಗಳಿಂದ ಕೂಡಿದ ಎಂದೆಂದೂ ಬಾಡದ ಪಂಕಜಗಳಿಂದ ಸಹಿತವಾದ, ಮಧ್ಯಭಾಗದಲ್ಲಿ ಸ್ಥೂಲವಾದ ಕದಂಬ ಪುಷ್ಪವನ್ನು ಹೊಂದಿರುವ ಮಾಲೆಯೇ ವನಮಾಲೆ ಎನಿಸಿದ್ದು ಇದು ಅತಿ ಸುಂದರವಾದ ಮಾಲೆ ಆಗಿದೆ.[1] ಇಂತಹ ಮಾಲೆಯನ್ನು ಭಗವಂತನು ನಿತ್ಯವೂ ಧರಿಸಿಕೊಳ್ಳುತ್ತಿರುವನು.

ಗಾಯತ್ರೀ ಮಂತ್ರದಿಂದ ಧ್ಯೇಯನಾದ ಸವಿತೃನಾರಾಯಣನು ಹಾರಗಳನ್ನು ಧರಿಸಿರುವನೆಂದು 'ಹಾರೀ' ಎಂದು ವಿಶೇಷಿಸಲಾಗಿದೆ

ಸಿಂಹಾಸನವನ್ನು ಏರಿ ರಾರಾಜಿಸುತ್ತಿದ್ದ ಶ್ರೀರಾಮಚಂದ್ರ ಮಾಲೆಯನ್ನು ಧರಿಸಿಕೊಂಡಿದ್ದನೆಂಬುದಾಗಿ 'ಸ್ರಗ್ವೀ' ಎಂದೇ ಉಲ್ಲೇಖಿಸಲಾಗಿದೆ[3] ಶ್ರೀಕೃಷ್ಣನೂ ವನಮಾಲೆಯನ್ನು ಧರಿಸಿದ್ದನು ಗೋಪಿಯರು ವಿರಹಗೀತೆ ಹಾಡುತ್ತಿರಲು ಪ್ರಾದುರ್ಭವಿಸಿದ ಶ್ರೀಕೃಷ್ಣನನ್ನೂ 'ಸ್ರಗ್ವೀ' ಎಂದು ವಿಶೇಷಿಸಲಾಗಿದೆ[4] ಕಾಲಯವನನಿಗೆ ಶ್ರೀಕೃಷ್ಣನ ಲಕ್ಷಣಗಳನ್ನು ತಿಳಿಸಿದ್ದ ನಾರದರು—ವನಮಾಲೆಯ ಧಾರಣೆಯನ್ನೂ ಅವನ ಲಕ್ಷಣಗಳಲ್ಲೊಂದಾಗಿ ಹೇಳಿದ್ದರು ಶ್ರೀಕೃಷ್ಣನನ್ನು ಕಂಡ ಕಾಲಯವನನು ಅದನ್ನು ಜ್ಞಾಪಿಸಿಕೊಳ್ಳುವನು.[5]

---

1 'ಆಜಾನುಲಂಬಿನೀಂ ಮಾಲಾಂ ಸರ್ವರ್ತುಕುಸುಮೋಜ್ಜ್ವಲಾಮ್ ।
ಮಧ್ಯೇ ಸ್ಥೂಲಕದಂಬಾಢ್ಯಾಂ ವನಮಾಲಾಂ ವಿದುರ್ಬುಧಾಃ ।'

* 'ಅಮ್ಲಾನಪಂಕಜಾಂ ಮಾಲಾಂ ವನಮಾಲಾಂ ವಿದುರ್ಬುಧಾಃ'

2 'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಕಿರೀಟೀ ಹಾರೀ. '
–ನಾರಸಿಂಹ ಪುರಾಣ (ಐ. ಉ. ಭಾ. 2-1-1-1)

3 ಅಭ್ಯಸಿಂಚದ್ ಯಥೈವೇಂದ್ರಂ ಚತುಃಸಿಂಧುಜಲಾದಿಭಿಃ ।
ಏವಂ ಕೃತಶಿರಃಸ್ನಾನಃ ಸುವಾಸಾಃ ಸ್ರಗ್ವ್ಯಲಂಕೃತಃ ।
-ಭಾಗ. 9-10-50.

4 ತಾಸಾಮಾವಿರಭೂಚ್ಛೌರಿಃ . ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ।
–ಭಾಗ. 10-32-2

5 ' ....ವನಮಾಲ್ಯತಿಸುಂದರಃ । ಲಕ್ಷ್ಮೈರ್ನಾರದಪ್ರೋಕ್ತೈರ್ನಾನ್ಯೋ ಭವಿತುಮರ್ಹತಿ । ...ಇತಿ ನಿಶ್ಚಿತ್ಯ ಯವನಃ.....'

೫ (ಜೀವಾತ್ಮರ) ಮುಕ್ತಿಸುಖಕ್ಕೆ ಕಾರಣವಾದ ಅಪರೋಕ್ಷ ಜ್ಞಾನ ಉಳ್ಳವನು[1]

ಸಾಧಕರ ಯೋಗ್ಯತೆಗೆ ಅನುಗುಣವಾದ ಭಗವದ್ದರ್ಶನದಿಂದಲೇ ಮುಕ್ತಿ. ಹೊರತು ಇನ್ನಾವುದೇ ಉಪಾಯದಿಂದ ಮುಕ್ತಿ ದೊರಕಲಾರದೆಂದು 'ಅಧ್ಯಾತ್ಮ' ಸಂದೇಶಿಸಿದೆ.[2]

೬ ಸಮಸ್ತ ಜಗತ್ತಿನ ಜ್ಞಾನವನ್ನು ಅಥವಾ ಆನಂದವನ್ನು ನಿಯಮಿಸುವವನು[3]

೭ (ಜಗತ್ತನ್ನು) ಸೃಷ್ಟಿಸುವವನು ಮತ್ತು ಪ್ರಶಸ್ತವಾದ ಜ್ಞಾನ ಅಥವಾ ಆನಂದವನ್ನು ಅತ್ಯಧಿಕವಾಗಿ ಹೊಂದಿರುವವನು[4]

ಭಗವಂತನು ಜಗತ್ತನ್ನು ಸೃಷ್ಟಿಸಲು ಬೇಕಾದ ಪರಿಪೂರ್ಣ ಜ್ಞಾನವನ್ನು ಹೊಂದಿರುವನು. ಅವನು ಆನಂದ ಪರಿಪೂರ್ಣನಾಗಿರುವುದರಿಂದಲೇ ಜಗತ್ತಿನ ಸೃಷ್ಟ್ಯಾದಿಗಳಲ್ಲಿ ತೊಡಗುವನು

## ಜಿಜ್ಞಾಸೆ

### [ಮಾಲೆ ಪೀತಾಂಬರಗಳು ಪ್ರಾಕೃತ]

ಪ್ರ - ಪರಮಾತ್ಮನು ಹಾಕಿಕೊಳ್ಳುವ ಪುಷ್ಪದ ಮಾಲೆಗಳು ಹಾಗೆಯೇ ಉಟ್ಟುಕೊಳ್ಳುವ ಪೀತಾಂಬರಗಳು ಪ್ರಾಕೃತಗಳೋ ಅಪ್ರಾಕೃತಗಳೋ?

---

೫ 1 ಸೃಜತಿ ಸುಖಮಿತಿ ಸ್ರಕ್ ಮುಕ್ತಿಸುಖಕಾರಣಮ್ । ಸ್ರಕ್ ಚ ತತ್ ವಂ ಅಪರೋಕ್ಷ ಜ್ಞಾನಂ ಸ್ರಗ್ವಮ್ । ಸ್ರಗ್ವಮಸ್ಯಾಸ್ತೀತಿ ಸ್ರಗ್ವೀ ।
' .. ವರಿತಿ ಜ್ಞಾನಮುಚ್ಯತೇ' -ಬೃ. ಉ. ಭಾ.7-7-2

2 'ದರ್ಶನೇನಾಽತ್ಮಯೋಗ್ಯೇನ ಮುಕ್ತಿರ್ನಾನ್ಯೇನ ಕೇನಚಿತ್'
-ಅಧ್ಯಾತ್ಮ (ಬ್ರ. ಸೂ. ಭಾ. 3-3-53)

೬ 3 ಸೃಜ್ಯತೇ ಇತಿ ಸ್ರಕ್ ಸಮಸ್ತಂ ಜಗತ್ । ತಸ್ಯ ವಂ ಜ್ಞಾನಂ ಸುಖಂ ವಾ ನಿಯಮ್ಯತಯಾಽಸ್ಯಾಸ್ತೀತಿ ಸ್ರಗ್ವೀ । ' .. ವರಿತಿ ಜ್ಞಾನಮುಚ್ಯತೇ' (ಬೃ ಉ. ಭಾ.) 'ಸುವಃ' ಇತಿ ವ್ಯಾಹೃತೇಃ ' . ಅನಂತಸುಖೋ ಯದ್ ವ್ಯಾಹೃತೀರಿತಃ'-ಇತಿ ಋಗ್ಭಾಷ್ಯೇ ವ್ಯಾಖ್ಯಾನಪ್ರಸಂಗೇ ವಕಾರಸ್ಯ ಸುಖಾರ್ಥಕತ್ವಮಭ್ಯುಪಗತಮ್ ।

೭ 4 ಸೃಜತೀತಿ ಸ್ರಕ್ । ವಂ ಪ್ರಶಸ್ತಂ ಜ್ಞಾನಂ ಸುಖಂ ವಾ ಸರ್ವಾಧಿಕತಯಾಽಸ್ಯಾಸ್ತೀತಿ ವೀ। ಸ್ರಕ್ ಚಾಸೌ ವೀ ಚ ಸ್ರಗ್ವೀ । ಪ್ರಾಶಸ್ತ್ಯಾರ್ಥೇ ಆಧಿಕ್ಯಾರ್ಥೇ ಚ ವಿನಿಃ ।

ಉ - ಪ್ರಾಕೃತಗಳು

ಪ್ರ - ದೇಹವು ಕೂಡ ಅವರಂತೆ ಪ್ರಾಕೃತಗಳು ಏಕೆ ಆಗಬಾರದು?

ಉ - ಪುಷ್ಪಮಾಲಿಕೆಗಳು, ಪೀತಾಂಬರಗಳು ಭಕ್ತರಿಂದ ಸಮರ್ಪಿತವಾಗುವವು ಆದುದರಿಂದ ಅವುಗಳು ಪ್ರಾಕೃತಗಳು ದೇಹವು ಭಕ್ತರಿಂದ ಸಮರ್ಪಿತವಾಗುವಂತಹದ್ದಲ್ಲ ಆದುದರಿಂದ ದೇಹವು ಪರಮಾತ್ಮನದ್ದು ಸ್ವಾಭಾವಿಕ

ಪ್ರ - ಪರಮಾತ್ಮನ ದೇಹದ ಕೇಶನಖಗಳು ಕೀಳಲ್ಪಡುತ್ತವೆ ಆದುದರಿಂದ ಅವುಗಳು ಪ್ರಾಕೃತಗಳೋ?

ಉ - ಕೇಶನಖಗಳು ಜ್ಞಾನಾನಂದಾತ್ಮಕ ಎಂದು ಪ್ರಮಾಣವು ಇದೆ ಅವುಗಳು ಕೀಳಲ್ಪಡುವಂತೆ ತೋರುವುದು ಭ್ರಾಂತಿಯೋ ಹೊರತು ವಸ್ತುತಃ ಕೀಳಲ್ಪಡುವದಿಲ್ಲ.



## ೨೧೭ ವಾಚಸ್ಪತಿರುದಾರಧೀಃ

೧ ವೇದವಾಣಿಗೆ ಒಡೆಯನಾಗಿರುವವನು ಮತ್ತು ಉತ್ಕೃಷ್ಟವಾದ ಬುದ್ಧಿ ಉಳ್ಳವನು.[1]

ವೇದ ಹಾಗೂ ಇತರ ವೈದಿಕ ವಾಙ್ಮಯವನ್ನು ಸೃಷ್ಟಿಯ ಪ್ರಾರಂಭದಲ್ಲಿ ಪ್ರಕಟಪಡಿಸಿದನೂ, ಮುಂದೆ ಪ್ರಚಾರ ಮಾಡಿದವನೂ ಭಗವಂತನೇ ಸಕಲ ವೈದಿಕ ವಾಙ್ಮಯದಿಂದಲೂ ಮುಖ್ಯವಾಗಿ ಪ್ರತಿಪಾದ್ಯನಾಗಿರುವವನೂ ಅವನೇ ಅಲ್ಲದೆ ಅವನು ಆಗಾಗ್ಗೆ ಅಸುರರ ಆಕ್ರಮಣದಿಂದ ವೈದಿಕ ವಾಙ್ಮಯವನ್ನು ರಕ್ಷಿಸಿರುವನು ಮುಖ್ಯವಾಗಿ ಈ ಮೂರು ಕಾರಣಗಳಿಂದಾಗಿ ಅವನು 'ವಾಚಸ್ಪತಿ' ಎನಿಸಿರುವನು

ಯಾರು ಚತುರ್ಮುಖನನ್ನು ಸೃಷ್ಟಿಸಿದನೋ ಅಂತಹ ಭಗವಂತನೇ ಅವನಿಗೆ ವೇದೋಪದೇಶವನ್ನು ನೀಡಿರುವನು[2] ಹಯಗ್ರೀವರೂಪಿ ಭಗವಂತನ ನಿಶ್ವಾಸರೂಪದಲ್ಲಿ ವೇದ, ವಿದ್ಯೆ,

---

೧ 1 (ವಾಚಃ) ವೇದವಾಣ್ಯಾಃ ಪತಿಃ ವಾಚಸ್ಪತಿಃ । ಪ್ರಕೃಷ್ಟಬುದ್ಧಿತ್ವಾದುದಾರಧೀಃ । ವಾಚಸ್ಪತೇರೇತತ್ ವಿಶೇಷಣಮ್ ।

—ವಿ ರಾ.

2 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ'

—ಶ್ವೇತಾಶ್ವತರಶ್ರುತಿ (6 18)

ಉಪನಿಷತ್ತುಗಳು, ಪಂಚರಾತ್ರ, ಬ್ರಹ್ಮಸೂತ್ರ, ವೇದವ್ಯಾಖ್ಯಾನಗಳು, ಇವುಗಳು ಎಲ್ಲಾ — ಹೀಗೆ ಸಮಸ್ತ ವೈದಿಕ ವಾಙ್ಮಯವೂ ಹೊರಟು ಬಂದಿದೆ—ಎಂದು ಬೃಹದಾರಣ್ಯಕ ಸಂದೇಶಿಸಿದೆ[1] ಚತುರ್ಮುಖನು ತನ್ನ ಯಜ್ಞದಲ್ಲಿ ಪಾಲ್ಗೊಂಡ ಹಯಗ್ರೀವರೂಪಿ ಭಗವಂತನ ಶ್ವಾಸರೂಪದಲ್ಲಿ ಮೂಗಿನ ಮೂಲಕ ಸಕಲ ವಾಙ್ಮಯವೂ ಹೊರಹೊಮ್ಮಿದೆ ಎಂದು ನಾರದನಿಗೆ ಉಪದೇಶಿಸಿರುವನು[2] ಹೀಗೆ ಹಯಗ್ರೀವರೂಪಿ ಭಗವಂತನಿಂದ ಚತುರ್ಮುಖನಿಗೆ ಉಪದಿಷ್ಟಗಳಾದ ವಿದ್ಯೆಗಳು, ರುದ್ರ ಶೇಷ ಗರುಡರಿಂದ ಸ್ವೀಕರಿಸಲ್ಪಟ್ಟವು ಅವರಿಂದ ಶಕ್ರಾದಿಗಳು, ಅವರಿಂದ ದಕ್ಷಾದಿಗಳು, ಅವರಿಂದ ಸನಕಾದಿಗಳು ಹಾಗೂ ಮನುಗಳು ವೈದಿಕ ವಿದ್ಯೆಗಳನ್ನು ಸ್ವೀಕರಿಸಿದರು ಮುಂದೆ ಸನಕಾದಿಗಳು ಎಲ್ಲೆಡೆ ಉಪದೇಶಿಸಿದರು. ಅವರ ಉಪದೇಶದಿಂದಾಗಿ ಜಗತ್ತಲ್ಲಿ ವಿದ್ಯೆಗಳು ವ್ಯಾಪಿಸಿಕೊಂಡವು ಎಂಬುದಾಗಿ ಬ್ರಹ್ಮಾಂಡ ತಿಳಿಸಿದೆ[3] ಹೀಗೆ ವಾಙ್ಮಯದ ಉತ್ಪತ್ತಿಕ್ಕೆ ಮೂಲ ಹಯಗ್ರೀವರೂಪಿ

---

* ತೇನೇ ಬ್ರಹ್ಮ ಹೃದಾ ಯ ಆದಿಕವಯೇ. . ..
ಭಾಗ 1 1 1

1 ' ಅರೇಽಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ ಯದ್ ಋಗ್ವೇದಃ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ನಿಃಶ್ವಸಿತಾನಿ'
ಬೃ. ಉ. 4 4 10

'ತಸ್ಮಾದ್ ವೇದಾಃ ಸಮುತ್ಪನ್ನಾ ವಿದ್ಯಾಖ್ಯಾ [illegible] ಶ್ರುತಿಃ । ಸರ್ವೋಪನಿಷದಶ್ಚೈವ ಪಂಚರಾತ್ರಾಖ್ಯಸಂಹಿತಾಃ ॥ ಬ್ರಹ್ಮಸೂತ್ರಾಣಿ ವೇದಾನಾಂ ವ್ಯಾಖ್ಯಾನಾನಾಂ ಚ ವಿಸ್ತರಃ ।'
–ಹಯಗ್ರೀವ ಸಂಹಿತಾ (ಬೃ. ಉ. ಭಾ.)

2 'ಸತ್ರೇ ಮಮಾಸ ಭಗವಾನ್ ಹಯಶೀರ್ಷ ಏಷಃ. ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ'
–ಭಾಗ 2 7-11

3 ' ಬ್ರಹ್ಮಾಂಡೇಽಪಿ ತಥಾಽಪರಮ್ । ಹಯಗ್ರೀವಾದಿಮಾ ವಿದ್ಯಾಃ ಶ್ವಸಿತತ್ವೇನ ನಿಃಸೃತಾಃ । ಬ್ರಹ್ಮಣಾ ಸ್ವೀಕೃತಾಸ್ತಾಶ್ಚ ರುದ್ರಶೇಷವಿಪಾ ಅಪಿ। ದಕ್ಷಾದ್ಯಾಃ ಸನಕಾದ್ಯಾಶ್ಚ ಶಕ್ರಾದ್ಯಾ ಮನವಸ್ತಥಾ। ಜಗೃಹುಸ್ತೇ ಚ ವಿಶ್ವಸ್ಮಿಂಶ್ಚಕ್ರುರ್ವ್ಯಾಪ್ತಾಸ್ತತೋಽಖಿಲಾಃ ।
–ಮಂ. ಭಾ 1–25

ರುದ್ರಶೇಷವಿಪಾ ಅಪಿ ಬ್ರಹ್ಮಣೋ ಜಗೃಹುಃ । ತೇಭ್ಯಃ ಶಕ್ರಾದ್ಯಾಃ ತೇಭ್ಯೋ ದಕ್ಷಾದ್ಯಾಃ ತೇಭ್ಯಃ ಸನಕಾದ್ಯಾಃ ಮನವಶ್ಚ ।
–ಮಂ ಭಾ. ಟೀ

ಭಗವಂತನೇ. ಇಷ್ಟೇ ಅಲ್ಲದೆ, ಅವನು ವೇದವ್ಯಾಸ, ಕಪಿಲ, ಆತ್ರೇಯಾದಿರೂಪಗಳಿಂದ ವಿಶೇಷವಾಗಿ ವೈದಿಕ ವಿದ್ಯೆಗಳನ್ನು ಪ್ರಚಾರ ಮಾಡಿರುವವನು

ಸಕಲ ವೈದಿಕ ವಿದ್ಯೆಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿರುವವನೂ ಭಗವಂತನೇ[1] ಸಮಗ್ರ ವೇದದಿಂದ ಒಂದು ಭಗವದ್ರೂಪ, ವೇದದ ಅಷ್ಟಕವರ್ಗ-ಸೂಕ್ತ ಇತ್ಯಾದಿ ಪ್ರಭೇದಗಳಿಂದ ಬೇರೆ ಬೇರೆ ಭಗವದ್ರೂಪಗಳು, ಹೀಗೆ ವೇದದ ಪ್ರತಿಯೊಂದು ವರ್ಣದವರೆಗೂ ಬೇರೆ ಬೇರೆ ಭಗವದ್ರೂಪವು ತಾತ್ಪರ್ಯಪೂರ್ವಕವಾಗಿ ಪ್ರತಿಪಾದ್ಯಗಳಾಗಿವೆ ಎಂಬುದನ್ನು ಶ್ರೀವೇದವ್ಯಾಸರು ತಾವು ನಿರ್ಮಿಸಿರುವ ನಿರುಕ್ತದಲ್ಲಿ ಹೇಳಿರುವರು[2] ಸಕಲ ಋಕ್ಕುಗಳೂ, ಸಕಲ ಘೋಷಗಳೂ ಪ್ರಾಣನಾಮಕ ಭಗವಂತನ ನಾಮವೇ ಆಗಿದೆ— ಎಂದು ಐತರೇಯೋಪನಿಷತ್ತು ಘೋಷಿಸಿದೆ[3]

ವೇದ ವಾಙ್ಮಯವನ್ನು ವಿಶೇಷವಾಗಿ ರಕ್ಷಿಸುತ್ತಿರುವವನೂ ಭಗವಂತನೇ ಪ್ರಲಯಕಾಲದಲ್ಲಿ ಎಲ್ಲವೂ ತನ್ನ ಬುದ್ಧಿಯಲ್ಲೇ ಇರುವಂತೆ ಕಾಪಾಡುತ್ತಿರುವವನು ಚತುರ್ಮುಖನ ಮುಖದಿಂದ ಹೊರಹೊಮ್ಮಿದ ವೇದಗಳನ್ನು ಹಯಗ್ರೀವಾಸುರನು ಅಪಹರಿಸಲು ಮತ್ಸ್ಯಾವತಾರದಲ್ಲಿ ಅವನನ್ನು ಸಂಹರಿಸಿ, ವೇದ ವಿದ್ಯೆಯನ್ನು ರಕ್ಷಿಸಿರುವವನು[4]

ಹೀಗೆ ಭಗವಂತನು ಸಮಗ್ರ ವೈದಿಕ ವಾಙ್ಮಯವನ್ನು ಪ್ರಕಟಪಡಿಸಿ, ಅದರಿಂದ ಪ್ರತಿಪಾದ್ಯನಾಗಿ ಅದಕ್ಕೆ ಒಡೆಯನಾಗಿರುವಂತೆ, ಅದನ್ನು ರಕ್ಷಿಸುವುದರ ಮೂಲಕವೂ ಅದಕ್ಕೆ ಪತಿ ಎಂದೆನಿಸಿರುವವನು.

---

1 ದೇವತಾ ಸರ್ವವಿದ್ಯಾನಾಂ ಸ್ವಯಂ ನಾರಾಯಣಃ ಪ್ರಭುಃ ।

-ಋ. ವೇ. ಭಾ. 1-46

2 ವೇದಾದಿವರ್ಣಪರ್ಯಂತ್ಯೈರ್ಮೂರ್ತಯಃ ಕೇಶವಸ್ಯ ತು । ಸಮಾಸವ್ಯಾಸಯೋಗೇನ ವಾಚ್ಯಾಸ್ತಾತ್ಪರ್ಯತಃ ಪೃಥಕ್ ।

-ಋ. ವೇ. ಭಾ 1-53

3 ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ ....'

-ಐ. ಉ 2-1 2-12

4 'ಅಥೋ ವಿಧಾತುರ್ಮುಖತೋ ವಿನಿಸ್ಸೃತಾನ್ ವೇದಾನ್ ಹಯಾಸ್ಯೋ ಜಗೃಹೇಽಸುರೇಂದ್ರಃ । ನಿಹತ್ಯ ತಂ ಮತ್ಸ್ಯವಪುಃ .....'

-ಮ. ಭಾರ. ತಾ. ನಿ. 3-42

ಮಹಾ ನಾರಾಯಣೋಪನಿಷತ್ತು ಮತ್ತು ತೈತ್ತಿರೀಯೋಪನಿಷತ್ತು—ವಿಶ್ವರೂಪನಾದ, ಅಂದರೆ ಎಲ್ಲವನ್ನೂ ರೂಪಿಸಿದ ಹಾಗೂ ಎಲ್ಲದರಲ್ಲೂ ಆಯಾಯ ರೂಪದಿಂದ ಅಂತರ್ಯಾಮಿಯಾಗಿ ಇರುವ ಭಗವಂತನು ವೇದಗಳಿಗೆಲ್ಲ ಒಡೆಯನಾಗಿರುವನೆಂದು ಸಂದೇಶಿಸಿದೆ.[1] ಋಗ್ವೇದ ಭಗವಂತನು ವೇದರಾಶಿಯ ಪತಿ ಎಂಬ ಅರ್ಥದಲ್ಲಿ 'ಬ್ರಹ್ಮಣಸ್ಪತೇ' ಎಂದೇ ಸಂಬೋಧಿಸಿದೆ[2]

ಭಗವಂತನ ಜ್ಞಾನವು ಅವನ ಸ್ವರೂಪಾತ್ಮಕವೇ ಆಗಿದೆ[3] ಆದ್ದರಿಂದ ಅವನಂತೆಯೇ ಅದು ಉತ್ಕೃಷ್ಟವಾಗಿದೆ ಅದು ಎಂದೂ ಅಜ್ಞಾನಮಿಶ್ರಿತವಾಗುವುದಿಲ್ಲ ಎಂದು ಅದನ್ನು 'ಜ್ಞಾನಜ್ಞಾನಃ' ಎಂದೇ ಕರೆಯಲಾಗಿದೆ[4] ಹೀಗೆ ಉದಾರ ಬುದ್ಧಿಯುಳ್ಳವನಾದುದರಿಂದಲೇ ಭಗವಂತನು ವಾಚಸ್ಪತಿ ಆಗಿರುವನು

೨ ವೇದಾಭಿಮಾನಿಗಳಿಗೆಲ್ಲ ಒಡೆಯನಾಗಿರುವವನು ಮತ್ತು (ಅವರಿಗೆ) ಉತ್ಕೃಷ್ಟವಾದ ಬುದ್ಧಿಯನ್ನು ಅನುಗ್ರಹಿಸುವವನು[5]

---

1 ಯಶ್ಛಂದಸಾಮೃಷಭೋ ವಿಶ್ವರೂಪಃ ।

-ತೈ. ಉ. 1-7

ಯೋ ವಿಶ್ವರೂಪೋ ಭಗವಾಂಶ್ಛಂದಸಾಮಧಿಪೋ ಹರಿಃ ।

-ತೈ. ಉ ಭಾ.

2 ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ ।

-ಋ. ವೇ. 18-1

ಸೌಮ್ಯಂ ಶಬ್ದಂ ಕುರು ತ್ವಂ ನೋ ವಿಷ್ಣೋ ವಾಯೋ ಸುವಾಕ್ಪತೇ ।

-ಋ ಭಾ.

3 ಶಿವಮಾತ್ಮಕೋ ಭಗವಾನ್ । ಜ್ಞಾನಾತ್ಮಕಃ. . . .

-ಬ್ರ. ಸೂ. ಭಾ. 2-2-41

4 'ಸದ್ದೇಹಃ ಸುಖಗಂಧಶ್ಚ .ಜ್ಞಾನಜ್ಞಾನಃ ...ಸ ವಿಷ್ಣುಃ ಪರಮಾಕ್ಷರಃ'

ಬ್ರ. ಸೂ. ಭಾ. 2-2-41

ಜ್ಞಾನಜ್ಞಾನಃ ನಾಜ್ಞಾನಮಿಶ್ರಜ್ಞಾನಃ ।

-ತತ್ತ್ವ ದೀಪಿಕಾ

೨ 5 ವಾಕ್‌ಛಬ್ದಃ ತದಭಿಮಾನಿಪರಃ । 'ಅಭಿಮಾನಿವ್ಯಪದೇಶಸ್ತು... ' (ಬ್ರ. ಸೂ. 2-1-6) ಇತಿ ಸೂತ್ರಾತ್ । ತಥಾ ಚ ವೇದವಾಗಭಿಮಾನಿಸಮೂಹಸ್ಯ ಪತಿಃ ವಾಚಸ್ಪತಿಃ । ತೇಷಾಂ ವಾಗಭಿಮಾನಿನಾಂ ಉದಾರಾ ಧೀರ್ಯಸ್ಮಾತ್ ಸಃ ಉದಾರಧೀಃ ।

ವೇದದ ವರ್ಣಾಭಿಮಾನಿ ದೇವತೆಗಳಿಗೆ ಪದಾಭಿಮಾನಿ ದೇವತೆಗಳು ಈಶ್ವರರು ಇವರಿಗೆ ಪಾದಾಭಿಮಾನಿ ದೇವತೆಗಳು ಒಡೆಯರು. ಇವರಿಗೆ ಅರ್ಧ ಋಗಭಿಮಾನಿ ದೇವತೆಗಳು, ಇವರಿಗೆ ವರ್ಗಾಭಿಮಾನಿ ದೇವತೆಗಳು, ಇವರಿಗೆ ಸೂಕ್ತಾಭಿಮಾನಿ ದೇವತೆಗಳು, ಇವರಿಗೆ ಅಧ್ಯಾಯಾಭಿಮಾನಿ ದೇವತೆಗಳು, ಇವರಿಗೆ ಅಷ್ಟಕಾಭಿಮಾನಿದೇವತೆಗಳು, ಇವರಿಗೆ ಶಾಖಾಭಿಮಾನಿದೇವತೆಗಳು ಇವರಿಗೆ ವೇದಾಭಿಮಾನಿ ದೇವತೆಗಳು, ಇವರಿಗೂ ವೇದವಾಚ್ಯರಾದ ದೇವತೆಗಳು, ವೇದವಾಚ್ಯರಿಗೂ ಶ್ರೀ ಹರಿಯೇ ಒಡೆಯನು—ಎಂದು ತಿಳಿಸುತ್ತಿರುವ ಪ್ರಮಾಣವು ಶ್ರೀಹರಿಗೆ ಮತ್ತೊಬ್ಬರಾರೂ ಈಶ್ವರರಿಲ್ಲ—ಎಂದು ಸಾರುತ್ತಿದೆ[1] ಅಭಿಮಾನಿಗಳ ಹೆಸರುಗಳನ್ನು ಉಲ್ಲೇಖಿಸಿಯೂ ಅವರೆಲ್ಲರಿಗಿಂತ ಭಗವಂತನೇ ಶ್ರೇಷ್ಠನೆಂದು ಸಾರುವುದರ ಮೂಲಕ ಅವರೆಲ್ಲರಿಗೂ ಅವನೇ ಒಡೆಯ ಎಂದೂ 'ವೈಶೇಷ್ಯ ಪ್ರತಿಪಾದಿಸುತ್ತಿದೆ-'ಶುಚಿಯೇ ಮೊದಲಾದ ಸರ್ವ ವೇದಾಭಿಮಾನಿನಿಯರಿಗಿಂತ ಲಕ್ಷ್ಮಿಯು ಶ್ರೇಷ್ಠಳು. ಈ ವೇದಾಭಿಮಾನಿನಿಯರಿಗಿಂತ ವೇದವಾಚ್ಯರಾದ ದೇವತೆಗಳು—ತಮ್ಮ ತಮ್ಮ ಪತ್ನಿಯರಿಗಿಂತ ಶ್ರೇಷ್ಠರು ಶಚೀದೇವಿಗಿಂತ ಇಂದ್ರನು ಶ್ರೇಷ್ಠನು ಅವನಿಗಿಂತ ರುದ್ರನು ಶ್ರೇಷ್ಠನು ಅವನಿಗಿಂತಲೂ ಉಮಾದೇವಿ ಶ್ರೇಷ್ಠಳು ಅವಳಿಗಿಂತ ರುದ್ರನು ಶ್ರೇಷ್ಠನು ಅವನಿಗಿಂತ ಭಾರತೀದೇವಿಯು ಶ್ರೇಷ್ಠಳು. ಭಾರತೀದೇವಿಗಿಂತ ಪ್ರಾಣದೇವನು ಶ್ರೇಷ್ಠನು ಅವನಿಗಿಂತಲೂ ಲಕ್ಷ್ಮೀದೇವಿಯು ಶ್ರೇಷ್ಠಳು ಆಕೆಗಿಂತಲೂ ಶ್ರೀಹರಿಯೇ ಶ್ರೇಷ್ಠನು[2]

ಹೀಗೆ ಶ್ರೀಹರಿಯು ಸಕಲ ವೇದಾಭಿಮಾನಿಗಳಿಗಿಂತಲೂ, ತದ್ವಾಚ್ಯರಿಗಿಂತಲೂ ಶ್ರೇಷ್ಠರಾಗಿದ್ದು ಅವರೆಲ್ಲರಿಗೆ ಒಡೆಯನಾಗಿರುವನು

---

1 'ವರ್ಣೇಶಾನಿ ಪದಾನ್ಯಾಹುಃ ಪಾದಾಶ್ಚಾಪಿ ತದೀಶ್ವರಾಃ । ಪಾದಾನಾಮೀಶ್ವರಾರ್ಧರ್ಚಾಸ್ತದೀಶಾ ಋಚ ಏವ ತು । ಋಚಾಮಧೀಶಾ ವರ್ಗಾಶ್ಚ ತೇಷಾಂ ಸೂಕ್ತಮಧೀಶ್ವರಮ್। ಸೂಕ್ತಾಧೀಶಾಸ್ತಥಾಽಧ್ಯಾಯಾಸ್ತೇಷಾಮೀಶಾಸ್ತಥಾಽಷ್ಟಕಾಃ । ತದಧೀಶಾಸ್ತಥಾ ಶಾಖಾ ವೇದಾಶ್ಚಾಪಿ ತದೀಶ್ವರಾಃ । ವೇದಾನಾಮೀಶ್ವರಾ ವಾಚ್ಯಾ ವಾಚ್ಯಾನಾಮೀಶ್ವರೋ ಹರಿಃ । ನ ಹರೇರೀಶ್ವರಃ ಕಶ್ಚಿತ್ ಕದಾಚಿತ್ ಕ್ವಾಪಿ ವಿದ್ಯತೇ'

-ಭಾಗ. ತಾ ನಿ. 11-16-12

2 ಸರ್ವವೇದಾಭಿಮಾನಿನ್ಯೋ ದೇವ್ಯೋ ಲಕ್ಷ್ಮೀಸ್ತತೋಽಧಿಕಾ । . ಏವಂ ವೇದಾಭಿಧಾನಾಭ್ಯೋ ದೇವೀಭ್ಯಃ ಸರ್ವ ಏವ ತು । ತದರ್ಥರೂಪಾಃ ಪತಯಸ್ತಸ್ಯಾಸ್ತಸ್ಯಾಸ್ತಥೋತ್ತಮಾಃ । ಶಚ್ಯಾ ಇಂದ್ರಸ್ತತಶ್ಚೋಮಾ ತಸ್ಯಾ ರುದ್ರಸ್ತತಸ್ತಥಾ । ಭಾರತೀ ಪ್ರಾಣ ಏವಾಸ್ಯಾಸ್ತತಃ ಶ್ರೀಸ್ತದ್ವರೋ ಹರಿಃ'

-ವೈಶೇಷ್ಯ (ಭಾಗ. ತಾ. ನಿ. 11 16-12)

ತತ್ತ್ವಾಭಿಮಾನಿ ದೇವತೆಗಳಿಗೆ ಜ್ಞಾನಸ್ಫೂರ್ತಿ ಭಗವಂತನಿಂದಲೇ ಉಂಟಾಗುವಂತಹದ್ದು.[1]

೩ (ಜೀವಾತ್ಮರ) ವಾಗಿಂದ್ರಿಯಕ್ಕೆ ಒಡೆಯನಾಗಿರುವವನು ಲಕ್ಷ್ಮೀದೇವಿಗೆ ಜ್ಞಾನವನ್ನು ಅನುಗ್ರಹಿಸುವವನು[2]

ವಾಗಿಂದ್ರಿಯಕ್ಕೆ ಅಗ್ನಿಯು ಅಭಿಮಾನಿಯು ಆದರೆ ಅಂತಹ ಅಗ್ನಿಯೂ ತನ್ನಲ್ಲಿ ಇದ್ದು ಕೊಂಡು ಪ್ರೇರಿಸುತ್ತಿರುವ ತನ್ನ ಅಂತರ್ಯಾಮಿಯಾದ ಶ್ರೀಹರಿಗೆ ಶರೀರದಂತ ಅತ್ಯಂತಾಧೀನ ವಾಗಿದ್ದುಕೊಂಡು, ಅವನ ಸಂಪೂರ್ಣ ನಿಯಂತ್ರಣಕ್ಕೊಳಗಾಗಿಯೇ ತನ್ನ ಕರ್ತವ್ಯವನ್ನು ನಿರ್ವಹಿಸು ತ್ತಿರುವನೆಂದು ಅಂತರ್ಯಾಮಿ ಬ್ರಾಹ್ಮಣವು ಸಂದೇಶಿಸಿದೆ[3] ತೈತ್ತಿರೀಯೋಪನಿಷತ್ತು ನಮ್ಮ ಚಕ್ಷು ರಾದಿ ಪಂಚೇಂದ್ರಿಯಗಳಲ್ಲಿ ನಾರಾಯಣಾದಿ ಐದು ಭಗವದ್ರೂಪಗಳಿರುವುದನ್ನು ತಿಳಿಸುತ್ತ ವಾಗಿಂದ್ರಿಯದಲ್ಲಿ ಸಂಕರ್ಷಣರೂಪಿ ಭಗವಂತನು ಇರುವನೆಂದು ಸಂದೇಶಿಸಿದೆ.[4] ಭಗವಂತನ ಈ ಪಂಚರೂಪಗಳಿಂದಲೇ ಪಂಚೇಂದ್ರಿಯಗಳು ತಮ್ಮ ತಮ್ಮ ವ್ಯಾಪಾರವನ್ನು ನಡೆಸಲು ಸಮರ್ಥ

---

1 'ಯಸ್ಮಾದ್ ಬ್ರಹ್ಮೇಂದ್ರರುದ್ರಾದಿ ದೇವತಾನಾಂ ಶ್ರಿಯೋಽಪಿ ಚ ಜ್ಞಾನಸ್ಫೂರ್ತಿಸ್ಸದಾ ತಸ್ಮೈ ಹರಯೇ ಗುರವೇ ನಮಃ ।

—ಈ. ಉ. ಭಾ ಮಂಗಲ ಪದ್ಯ

೩ 2 ವಾಚಃ ಜೀವಾತ್ಮನಾಂ ವಾಗಿಂದ್ರಿಯಸ್ಯ ಪತಿಃ ಸ್ವಾಮೀ । ಉತ್ಕೃಷ್ಟಾಃ ದಾರಾಃ ರಮಾ ಉದಾರಾಃ । ತೇಷಾಂ ಧೀರ್ಯಸ್ಮಾದಿತಿ ಉದಾರಧೀಃ ।

—ಸ. ಸಂ. ಅಥಾರೇಣ

3 'ಯೋ ವಾಚಿ ತಿಷ್ಠನ್ ವಾಚೋಽಂತರೋ ಯಂ ವಾಙ್ ನ ವೇದ ಯಸ್ಯ ವಾಕ್ ಶರೀರಂ ಯೋ ವಾಚಮಂತರೋ ಯಮಯತ್ಯೇಷ ತ ಆತ್ಮಾಽಂತರ್ಯಾಮ್ಯಮೃತಃ'

ಬೃ. ಉ. 5-7-17

' ಅಧ್ಯಾತ್ಮಂ ತಚ್ಛರೀರಗಾಃ । ದೇವತಾಃ. ಇತಿ ಸ್ಮೃತಾಃ' ಇತಿ ಶ್ರೀಮದಾಚಾರ್ಯೈಃ ವಾಗಾದಿಶಬ್ದೈಃ ಜೀವಾತ್ಮಶರೀರಗಾಃ ದೇವತಾ ಏವೋಚ್ಯಂತ ಇತಿ ಸಿದ್ಧಾಂತಿತವತ್ ।

4 ಚಕ್ಷುಃ ಶ್ರೋತ್ರಂ ಮನೋ ವಾಕ್ ತ್ವಕ್ ।

—ತೈ. ಉ. 1-15

ವಾಗಿವೆ—ಎಂಬುದಾಗಿ ತಿಳಿಸುವುದರ[1] ಮೂಲಕ ಸಂಕರ್ಷಣನ ಅನುಗ್ರಹದಿಂದಲೇ ವಾಗಿಂದ್ರಿಯ ತನ್ನ ವ್ಯಾಪಾರಕ್ಕೆ ಶಕ್ತವಾಗಿದೆ—ಎಂದು ಸಂದೇಶಿಸಲಾಗಿದೆ

ತನ್ನ ಒಳಹೊಕ್ಕು ಸುಪ್ತವಾದ ವಾಗಿಂದ್ರಿಯವನ್ನು ಪ್ರಚೋದಿಸಿ ಅದರಿಂದ ಚಟುವಟಿಕೆ ಮಾಡಿಸುವ ಭಗವಂತನಿಗೆ ಪ್ರಣಾಮ[2]—ಎಂಬುದಾಗಿ ಧ್ರುವನು ತಾನು ಅನುಭವಿಸಿದ ಭಗವನ್ಮಹಿಮೆಯನ್ನೇ ಉಲ್ಲೇಖಿಸಿ ಸ್ತುತಿಸಿರುವನು ಸರಸ್ವತೀ ನಾಮಕ ಭಗವಂತನೇ ನಮ್ಮಿಂದ ಒಳ್ಳೆಯ ಮಾತನು ಹೊರಡಿಸುವವನೆಂದು ಋಗ್ವೇದ ಸಂದೇಶಿಸಿದೆ.[3] ಚತುರ್ಮುಖನಿಂದ ಪ್ರಾರಂಭಿಸಿ ಪ್ರತಿಯೊಬ್ಬನ ಶರೀರವೂ ಭಗವಂತನಿಗೆ ಸಂಬಂಧಿಸಿದ ವೀಣೆ—ಎಂದು ನಿರೂಪಿಸಿದ ಐತರೇಯೋಪನಿಷತ್ತು, ಅಂತಹ ವೀಣೆಯಿಂದ ಒಳ್ಳೆಯ ಮಾತು ಹೊರಹೊಮ್ಮಿಸುವವನು ವಾಗಿಂದ್ರಿಯದಲ್ಲಿರುವ ಸ್ತ್ರೀರೂಪದ ಸರ್ವವಾಗೀಶ್ವರನಾದ ಶ್ರೀಹರಿಯೇ ಎಂದು—ಅಭಿಪ್ರಾಯಪಟ್ಟಿದೆ.[4] ಶುಕಾಚಾರ್ಯರು ಭಗವಂತನು ಶ್ರೀಪತಿ, ಯಜ್ಞಪತಿ, ಜಗತ್ಪತಿ ಎಂದೆಲ್ಲ ಎನಿಸಿರುವಂತೆ 'ಗಿರಾಂ ಪತಿ' ಎಂದೂ

---

1 ಪಾಂಕ್ತೇನೈವ ಪಾಂಕ್ತಂಸ್ಪೃಣೋತೀತಿ ।

-ತೈ. ಉ. 1-15

ಪೃಥಿವ್ಯಾದ್ಯಂ ಪಾಂಕ್ತಷಟ್ಕಂ ಪಾಂಕ್ತೇನೈವ ಸ್ವಯಂ ಹರಿಃ ।

ನಾರಾಯಣಾದಿ ರೂಪೇಣ ಬಲಯತ್ಯಂಜಸಾ ವಿಭುಃ ।

-ತತ್ವ ಸಂಹಿತಾ (ತೈ ಉ. ಭಾ.)

2 'ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ'

-ಭಾಗ 4-9-6

3 ಚೋದಯಿತ್ರೀ ಸೂನೃತಾನಾಂ .. -ಋ. ವೇ. 3-11

ಸುವಾಚಾಂ ಪ್ರೇರಕಾ ಸದಾ ॥ -ಋ. ಭಾ.

4 ಅಥ ಖಲ್ವಿಯಂ ದೈವೀ ವೀಣಾ ಭವತಿ ...ಸರ್ವಸ್ಯೈ ವಾಚ ಈಶಾನಾ ಚಾರು ಮಾಮಿಹ ವಾದಯೇತ್ '

'ತಸ್ಯ ವಿಷ್ಣೋರಿಯಂ ದೇಹೋ ವೀಣೋ ಸಾಕ್ಷಾತ್ ಪ್ರಕೀರ್ತಿತಾ . ಸರ್ವವಾಗೀಶ್ವರೋ ವಿಷ್ಣುಃ ಸ್ತ್ರೀರೂಪೋ ಮಾಂ ಸುವಾದಯೇತ್'

-ಐ ಉ. ಭಾ.

ಎನಿಸಿರುವನೆಂದು ಉಲ್ಲೇಖಿಸಿ ಸ್ತುತಿಸಿರುವರು[1] ಹೀಗೆ ಭಗವಂತನೇ 'ವಾಚಸ್ಪತಿ'

ಹಾಗೆಯೇ ಭಗವಂತನೇ ಲಕ್ಷ್ಮೀದೇವಿಗೂ ಬುದ್ಧಿಯನ್ನು ಅನುಗ್ರಹಿಸುವವನು ತನ್ನ ಕಟಾಕ್ಷದಿಂದಲೇ ವಿಶ್ವದ ಸಂಹಾರಾದಿಗಳೆಲ್ಲವನ್ನು ನಿರ್ವಹಿಸುವಷ್ಟು ಉತ್ಕೃಷ್ಟಳಾದ ಲಕ್ಷ್ಮೀದೇವಿಯೂ ಭಗವಂತನ ಕರುಣೆಯ ಕಟಾಕ್ಷಕ್ಕೊಳಗಾಗಿಯೇ ಬೌದ್ಧಿಕ ಬಲವೇ ಮೊದಲಾದ ಬಲಗಳನ್ನು ಪಡೆದಿರುವಳೆಂದು ಶ್ರೀಮದಾಚಾರ್ಯರು ಸಂದೇಶಿಸಿರುವರು[2]

**[ಅರ್ಥವಿಶೇಷಗಳನ್ನು ೫೭೩ನೆಯ 'ವಾಚಸ್ಪತಿರಯೋನಿಜಃ' ಎಂಬ ನಾಮದ ವ್ಯಾಖ್ಯಾನದಲ್ಲಿ ನೋಡಬಹುದು ]**

## ಜಿಜ್ಞಾಸೆ

### [ದೇವತಾತಾರತಮ್ಯೋಕ್ತಿ]

ಪ್ರ – ವೇದಗಳು ಪರಮಾತ್ಮನನ್ನು ಸರ್ವೋತ್ತಮ ಎಂದು ಪ್ರತಿಪಾದಿಸುವಾಗ ಸರ್ವದೇವತೆಗಳಲ್ಲಿ ತಾರತಮ್ಯವನ್ನು ಪ್ರತಿಪಾದಿಸುತ್ತವೆ ದೇವತಾ ತಾರತಮ್ಯವನ್ನು ಹೇಳದೆ ಎಲ್ಲ ದೇವತೆಗಳಿಗಿಂತ ಪರಮಾತ್ಮನು ಶ್ರೇಷ್ಠನು ಎಂದು ಇಷ್ಟು ಮಾತ್ರ ಏಕೆ ಹೇಳಬಾರದು? ದೇವತಾ ತಾರತಮ್ಯವನ್ನು ತಿಳಿಸಿ ಪರಮಾತ್ಮನ ಸರ್ವೋತ್ತಮತ್ವವನ್ನು ತಿಳಿಸಿದ್ದರಿಂದ ಏನು ಪ್ರಯೋಜನದ ಲಾಭವಿದೆ?

ಉ – ಗೀತೆಯಲ್ಲಿ 'ಪಾಂಡವಾನಾಂ ಧನಂಜಯಃ ಪಾಂಡವರಲ್ಲಿ ಅರ್ಜುನನು ಶ್ರೇಷ್ಠನು–ಎಂದು ಹೇಳಿರುತ್ತದೆ ಅರ್ಜುನನು ಭೀಮನಿಗಿಂತ ಶ್ರೇಷ್ಠನು ಅಲ್ಲ 'ವಾಯುರ್ಭೀಮೋ ಭೀಮನಾದೋ ಮಹೌಜಾಃ ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ । ಅನಾವೃತ್ತಿರ್ದೇಹಿನಾಂ ದೇಹಪಾತೇ

---

1 **ಶ್ರಿಯಃ ಪತಿರ್ಯಜ್ಞಪತಿರ್ಜಗತ್ಪತಿರ್ಗಿರಾಂಪತಿರ್ಲೋಕಪತಿರ್ಧರಾಪತಿಃ.. ಪ್ರಸೀದತಾಂ ಮೇ ಭಗವಾನ್ ಸತಾಂ ಪತಿಃ'** –ಭಾಗ. 2–4–20

2 **'ವಿಶ್ವಸ್ಥಿತಿಪ್ರಲಯ ಸರ್ಗಮಹಾವಿಭೂತಿ ವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ'** –ದ್ವಾ. ಸ್ತೋ.

* * * *

**ಸತ್ಯ ಸಂಧೀಯೇ ಪರಾಶರಭಟ್ಟೀಯೇ ಚ 'ವಾಚಸ್ಪತಿಃ' 'ಉದಾರಧೀಃ' ಇತಿ ಪ್ರತ್ಯೇಕ-ನಾಮತಯಾ ಪರಿಗಣಿತೇ ।**

ತಸ್ಮಾದ್ವಾಯುರ್ದೇವದೇವ್ಯೋ ವಿಶಿಷ್ಟಃ' ಎಂಬ ಮಹಾಭಾರತ ವಚನದಲ್ಲಿ ಭೀಮಸೇನನು ಸರ್ವಪಾಂಡವರಿಗಿಂತ ಶ್ರೇಷ್ಠನು ಎಂದು ಹೇಳಿದ್ದರಿಂದ ಗೀತೆಯ ವಾಕ್ಯಕ್ಕೆ ಭೀಮನನ್ನು ಬಿಟ್ಟು ಅವಶಿಷ್ಟ ಪಾಂಡವರಿಗಿಂತ ಅರ್ಜುನನು ಶ್ರೇಷ್ಠ ಎಂದು ಅರ್ಥವನ್ನು ಹೇಳಬೇಕು. ಅದರಂತ ಸರ್ವದೇವತಾ ಶ್ರೇಷ್ಠನು ವಿಷ್ಣು ಎಂದು ಹೇಳಿದಾಗ ರುದ್ರದೇವರನ್ನು ಬಿಟ್ಟು ಇತರ ದೇವತೆಗಳಿಗಿಂತ ಶ್ರೇಷ್ಠನು ಎಂದು ಅರ್ಥವು ತಿಳಿದು ಹೋಗಬಹುದು. ಆ ರೀತಿ ವಿಪರೀತ ಜ್ಞಾನವು ಬರಬಾರದು ಎಂದು ಇತರ ಎಲ್ಲ ದೇವತೆಗಳ ತಾರತಮ್ಯವನ್ನು ಹೇಳಿ ವಿಷ್ಣು ಎಲ್ಲರಿಗಿಂತಲೂ ಶ್ರೇಷ್ಠನು ಎಂದು ಹೇಳುವದು ಆವಶ್ಯಕ ಈ ರೀತಿ ಹೇಳಿದರೆ ರುದ್ರದೇವರು ಸರ್ವಶ್ರೇಷ್ಠರು ಎಂಬ ಮಾತಿಗೆ ಇಂದ್ರಾದಿ ಸರ್ವದೇವ ಶ್ರೇಷ್ಠರು ರುದ್ರದೇವರು ಎಂದು ತಿಳಿವಳಿಕೆ ಆಗಿ ವಿಷ್ಣು ಅಸಂಕುಚಿತ ಸರ್ವಶ್ರೇಷ್ಠನು ಎಂದು ತಿಳಿವಳಿಕೆಯು ಉಂಟಾಗುತ್ತದೆ ಈ ಕಾರಣದಿಂದ ದೇವತಾತಾರತಮ್ಯೋಕ್ತಿಪೂರ್ವಕ ವಿಷ್ಣುಸರ್ವೋತ್ತಮತ್ವವು ವೇದಗಳಲ್ಲಿ ಪ್ರತಿಪಾದಿತವಾಗುತ್ತದೆ



**ಅಗ್ರಣೀರ್ಗ್ರಾಮಣೀಃ ಶ್ರೀಮಾನ್ ನ್ಯಾಯೋ ನೇತಾ ಸಮೀರಣಃ ।**

**ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥೨೪॥**

೨೧೮ ಅಗ್ರಣೀಃ

೧ ಮೊದಲ ಪ್ರವರ್ತಕನಾಗಿರುವವನು.[1]

ನಮಗೆ ಗುರುಹಿರಿಯರು, ತತ್ತ್ವಾಭಿಮಾನಿ ದೇವತೆಗಳು ಹೀಗೆ ಹಲವಾರು ಪ್ರವರ್ತಕರಿರುವರು ಆದರೆ ಇವರಿರೆಲ್ಲರಿಗಿಂತ ಮೊದಲು ನಮ್ಮಲ್ಲಿ ಪ್ರವೃತ್ತಿಯನ್ನುಂಟು ಮಾಡುವವನು ಭಗವಂತನು ಬಳಿಕ ಉಳಿದವರೆಲ್ಲ ಅವನ ಪ್ರೇರಣೆಗನುಗುಣವಾಗಿ ನಮ್ಮನ್ನು ಪ್ರವರ್ತಿಸುವರಷ್ಟೇ ಹಾಗೆಯೇ ಪ್ರವರ್ತಕರಲ್ಲೆಲ್ಲ ಶ್ರೇಷ್ಠನಾದವನೂ ಅವನೇ ಭಗವಂತನಲ್ಲಿ ಅಗ್ನಿಶಬ್ದದ ಪ್ರವೃತ್ತಿಗೆ ಇದೂ ಒಂದು ನಿಮಿತ್ತ ಎನಿಸಿದೆ[2] ಅಗ್ನಿಶಬ್ದವು ಭಗವಂತನಿಗೆ ಈ ರೀತಿಯ ಅಗ್ರನೇತೃತ್ವವನ್ನು ಹೇಳುತ್ತಿ

---

೧ 1 ಅಗ್ರೇ ಪ್ರಥಮತ ಏವ ನಯತಿ ಪ್ರಣಯತೀತಿ ತಥಾ ಅಗ್ರ್ಯಃ ಸನ್ ಪ್ರಧಾನಃ ಸನ್ ಪ್ರಣಯತೀತಿ ಅಗ್ರಣೀರಿತಿ ಆದ್ಯಪ್ರವರ್ತಕಃ ಪ್ರವರ್ತಕೇಷು ಪ್ರಧಾನಶ್ಚೇತ್ಯಭಿಪ್ರಾಯದ್ವಯಮ್ ।

2 '...ಅಗ್ನಿಶಬ್ದೋಽಯಂ....ಅಗ್ರನೇತೃತ್ವಂ....ಆಹ...'

–ಮ. ಭಾ. 1-9

ವುದರಿಂದಲೇ ಅಂತಹ ಅಗ್ನಿನಾಮದ ಉಲ್ಲೇಖದೊಂದಿಗೇ ಋಗ್ವೇದವು ಪ್ರಾರಂಭವಾಗಿದೆ—ಎಂದು ಶ್ರೀಮಧ್ವಾಚಾರ್ಯರು ಅಭಿಪ್ರಾಯಪಟ್ಟಿರುವರು[1] ಬರೇ ಯಾವುದೋ ಒಂದು ಕಾಲದ ಜನರಿಗಷ್ಟೇ ಅಲ್ಲ, ಮೂರು ಕಾಲದ ಜನರಿಗೂ ಶ್ರೀ ವಿಷ್ಣುವೇ 'ಅಗ್ರಣೀ' ಆಗಿರುವನೆಂದು ಮಹಾಭಾರತ ಸಂದೇಶಿಸಿದೆ.[2]

'ಗ್ರಾಮಪನೊಳಗ್ರಣಿಯು ಎನಿಸುವ'—ಎಂದಿರುವರು ಜಗನ್ನಾಥದಾಸರು[3]

೨ (ಯೋಗ್ಯರನ್ನು) ಅಗ್ರ ಸ್ಥಾನವಾದ ಮುಕ್ತಿಗೆ ಕೊಂಡೊಯ್ಯುವವನು[4]

ಅಗ್ನಿಯು ತನ್ನನ್ನು ಚೆನ್ನಾಗಿ ಆರಾಧಿಸುತ್ತಿರುವವರನ್ನು 'ಅಗ್ರಗತಿ'ಗೆ ಕೊಂಡೊಯ್ಯುವುದರಿಂದಲೇ 'ಅಗ್ನಿ' ಎನಿಸುವನೆಂದು[5] ಸಂದೇಶಿಸುವ ಶ್ರೀಕೃಷ್ಣನು, ಅಗ್ನಿ ನಿಯಾಮಕ ಭಗವಂತನೇ ನಿಜವಾಗಿ ಅಗ್ನಿ ಎನಿಸುತ್ತಿದ್ದು, ಅವನಲ್ಲಿ ಈ ಧರ್ಮವು ಪೂರ್ಣಪ್ರಮಾಣದಲ್ಲಿರುವುದೆಂಬುದನ್ನು ಸೂಚಿಸಿಕೊಟ್ಟಿರುವನು ಈಶಾವಾಸ್ಯದಲ್ಲಿ ಭಗವಂತನನ್ನೇ 'ಅಗ್ನೇ' ಎಂದು ಸಂಬೋಧಿಸಿ ಒಳ್ಳೆಯ

---

1 ಅಗ್ರಣೀತ್ವಂ ಯದಗ್ನಿತ್ವಮಿತ್ಯಗ್ರೇ ನಾಮ ತದ್ ಭವೇತ್

—ಋ. ಭಾ, (1 7)

ಯತ್ ಯಸ್ಮಾತ್ ಅಗ್ರಣೀತ್ವಂ ಅಗ್ನಿತ್ವಂ ಅಗ್ನಿಶಬ್ದಾಭಿಧೇಯಂ ಇತಿ ತಸ್ಮಾತ್ ತನ್ನಾಮ ಅಗ್ರೇ ಪ್ರಥಮಸೂಕ್ತೇ ಪ್ರಯುಕ್ತಂ ಭವೇತ್ ।

—ಋ. ಭಾ ಟೀ

2 ಭವಿಷ್ಯತಾಂ ವರ್ತತಾಂ ಚ ಭೂತಾನಾಂ ಚೈವ ಭಾರತ ।
ಸರ್ವೇಷಾಮಗ್ರಣೀರ್ವಿಷ್ಣುಃ ...ನಿತ್ಯಶಃ ॥

—ಮ ಭಾರ. ಶಾಂತಿ 341-31

3 ಹರಿಕಥಾಮೃತಸಾರಸ್ಯ ಭಕ್ತಾಪರಾಧಸಹಿಷ್ಣುಸಂಧೇಃ ಚತುರ್ವಿಂಶತಿತಮೋ ಪದ್ಯೇ ।

೨ 4 ಅಗ್ರಂ ಪ್ರಕೃಷ್ಟಂ ಪದಂ ನಯತಿ ಯೋಗ್ಯಾನಿತಿ ಅಗ್ರಣೀಃ ।

—ಶಾ. ಭಾ. ಆಧಾರೇಣ

5 ಯಸ್ಮಾಚ್ಚ ತು ನಯತ್ಯಗ್ರ್ಯಾಂ ಗತಿಂ ವಿಪ್ರಾನ್ಸುಪೂಜಿತಃ ।
ತಸ್ಮಾಚ್ಚ ನಯನಾದಗ್ರ್ಯಜನ್ ದೇವೇಷ್ವಗ್ನೀತಿ ಕಥ್ಯತೇ ॥

—ಮ. ಭಾರ. ಆಶ್ವಮೇಧಿಕ 93-927

ಮಾರ್ಗದಲ್ಲಿ ಕರದೊಯ್ಯು ಮುಕ್ತಿಗೆ ತಲುಪಿಸಲು ಪ್ರಾರ್ಥಿಸಲಾಗಿದೆ.[1]

೨ (ಭಕ್ತರನ್ನು) ತನಗಿಂತ ಮುಂದೆ ನಡೆಸುವವನು[2]

ಭಕುತ ಜನ ಮುಂದೆ ನೀನವರ ಹಿಂದೆ'—ಎಂದಿರುವಂತ ಭಗವಂತನು ಬೇಕಾಗಿ ತಾನು ಅವ ತರಿಸುವಾಗ ಮೊದಲು ಭಕ್ತರು ಅವತರಿಸುವಂತೆ ಮಾಡಿ ಬಳಿಕ ತಾನು ಅವತರಿಸುವನು

ಶ್ರೀ ಕೃಷ್ಣನು ಉದ್ಧವನೆದುರು ತನಗೆ ಭಕ್ತಶ್ರೇಷ್ಠರ ಬಗ್ಗೆ ಇರುವ ಆದರವನ್ನು ಅಭಿವ್ಯಕ್ತ ಗೊಳಿಸುತ್ತ 'ನಾನು ಅಂತಹ ಭಕ್ತನನ್ನು ಅನುಸರಿಸಿ ಹೋಗುವೆನು ಹೊರತು ಅವನಿಗಿಂತ ಮುಂದೆ ಹೋಗಲಾರೆ ಯಾಕೆಂದರೆ ನನ್ನ ಪಾದರೇಣುಗಳು ಹಾಯುವಿನಿಂದ ಮುಂದೆ ಒಯ್ಯಲ್ಪಡುತ್ತಿದ್ದು— ಆ ಧೂಳಿಯ ಸಂಪರ್ಕದಿಂದಾಗಿ ಭಕ್ತನು ಪವಿತ್ರನಾಗಲಿ ಎಂಬ ದೃಷ್ಟಿಯಿಂದ ಹಾಗೂ ನಾನು ಮುಂದೆ ಹೋದನೆಂದರೆ ನನ್ನ ಪಾದದಿಂದ ಧೂಳಿಯನ್ನು ತುಳಿದೆ ಬರುತ್ತಿರುವ ಭಕ್ತನು ತನ್ನ ಪಾದದಿಂದ ತುಳಿಯಬೇಕಾಗುತ್ತದೆ ಹೀಗಾಗಬಾರದೆಂದೂ ನಾನು ನನ್ನ ಭಕ್ತನ ಮುಂದೆ ಹೋಗು ವಂತೆ ಮಾಡುವೆನು-ಎಂಬುದಾಗಿ ತಿಳಿಸಿರುವನು[3]

---

1 ಅಗ್ನೇ ನಯ ಸುಪಥಾ ರಾಯೇ..

-ಈ ಉ 2 5

ನಯ ನೋ ಮೋಕ್ಷವಿತ್ತಾಯ . ।

ಸ್ಕಾಂದ (ಈ. ಉ. ಭಾ )

2 ಭಕ್ತಾನ್ ಅಗ್ರೇ ಸ್ವಪುರಸ್ತಾತ್ ನಯತೀತಿ ಅಗ್ರಣೀಃ ।

3 ನಿರಪೇಕ್ಷಂ ಮುನಿಂ ಶಾಂತಂ ನಿರ್ವೈರಂ ಪ್ರಿಯದರ್ಶನಮ್ ।
ಅನುವ್ರಜಾಮ್ಯಹಂ ನಿತ್ಯಂ ಪೂಯೇಯೇತ್ಯಂಘ್ರಿರೇಣುಭಿಃ ॥

-ಭಾಗ. 11 14-16

ಅನುಗಚ್ಛತಿ ವಿಷ್ಣುಸ್ತು ಸ್ವಭಕ್ತಂ ತಸ್ಯ ಶುದ್ಧಯೇ । ತಸ್ಯಾಂಘ್ರಿರೇಣುಭಿರ್ವಾತನೀತೈರ-ಗ್ರೇಸರಃ ಶುಚಿಃ । ಅಗ್ರತೋ ಗಮನೇ ವಿಷ್ಣೋಃ ಪಾದಸ್ಪೃಷ್ಟಂ ರಜೋ ಭವೇತ್ । ಅತಃ ಸ್ವಭಕ್ತಂ ಪೂಯೇಯೇತ್ಯನುವ್ರಜತಿ ಕೇಶವಃ ।

ಸಂಖ್ಯಾನ (ಭಾಗ. ತಾ. ನಿ. 11-14-16)

೪ ಜೀವ ಪ್ರಧಾನನಾದ ಮುಖ್ಯಪ್ರಾಣನನ್ನು ವಿಶೇಷವಾಗಿ ನಡೆಸುವವನು[1]

'ಪ್ರಾಣಪ್ರಾಣ —ಎಂದೇ ಎನಿಸಿರುವ ಪರಮಾತ್ಮನು ಮುಖ್ಯಪ್ರಾಣನನ್ನು ವಿಶೇಷವಾಗಿ ಪ್ರೇರಿಸಿ ಅವನ ಮೂಲಕ ಜಗತ್ತಿನ ಪ್ರವೃತ್ತಿಗಳನ್ನು ನಡೆಸುವವನು[2]

೫ (ಪುಣ್ಯ ಮಾಡಿದವರನು) ಮೇಲಕ್ಕೆ ಕರೆದೊಯ್ಯುವವನು[3]

ಭಗವಂತನೇ ಯೋಗ್ಯ ಜೀವರಿಂದ ಒಳ್ಳೆಯ ಕರ್ಮವನ್ನು ಮಾಡಿಸಿ, ಅದಕ್ಕೆ ಅನುಗುಣವಾಗಿ ಅವರನ್ನು ಮೇಲಿನ ಲೋಕಗಳಿಗೆ ಕೊಂಡೊಯ್ಯುವನು-ಎಂದು ಪ್ರಮಾಣ ಸಂದೇಶಿಸಿದೆ.[4]

೬ (ಸರ್ವ) ಪ್ರಧಾನನು ಹಾಗೂ (ಸರ್ವ) ಪ್ರವರ್ತಕ[5]

## ಜಿಜ್ಞಾಸೆ

[ಅಗ್ನಿಯ ದೃಷ್ಟಾಂತಕ್ಕಾಗಿ]

ಪ್ರ- ಋಗ್ವೇದದಲ್ಲಿ ಆರಂಭದ ಮಂತ್ರವು 'ಅಗ್ನಿಮೀಳೇ' ಇತ್ಯಾದಿಯಾಗಿ ಇದೆ. ಇಲ್ಲಿ ಅಗ್ನಿ ಶಬ್ದದಿಂದ ನಾರಾಯಣ ದೇವರು ಎಂಬ ಅರ್ಥವನ್ನು ತಿಳಿಯುತ್ತೇವೆ. ಇಲ್ಲಿ ನಾರಾಯಣ ಎಂಬ ಪ್ರಸಿದ್ಧನಾಮವನ್ನು ಉಪಯೋಗಿಸದೆ ಇರಲು ಏನು ಕಾರಣ?

---

೪ 1 ಅಗ್ರಂ ಜೀವೇಷು ಪ್ರಧಾನಂ ಮುಖ್ಯಪ್ರಾಣಂ ನಯತಿ ಪ್ರಣಯತಿ ವಿಶೇಷತಃ ಪ್ರೇರಯತೀತಿ ಯಾವತ್ ಅಗ್ರಣೀಃ । 'ಅಗ್ರಂ ಪುರಸ್ತಾದುಪರಿ ಪರಿಮಾಣೇ ಪಲಸ್ಯ ಚ... ಅಧಿಕೇ ಚ ಪ್ರಧಾನೇ ಚ ಪ್ರಥಮೇ ಚಾಭಿಧೇಯವತ್' ಮೇದಿನೀ ।

2 'ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ । ಪ್ರಾಣಪ್ರಾಣಮತಃ ಪ್ರಾಹುರ್ವಿಷ್ಣುಂ ವಾಯೋರಪಿ ಪ್ರಭುಮ್'
-ಭಾಗ ತಾ. ನಿ. 10-15-50

೫ 3 ಅಗ್ರಂ ಪುಣ್ಯಕೃತಃ ಜೀವಾನ್ ಉಪರಿ ನಯತೀತಿ ಅಗ್ರಣೀಃ ।

4 'ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ.. .'
-ಬ್ರ ಸೂ. ಭಾ. 2-1-36

೬ 5 ಅಗ್ರಃ ಸರ್ವಪ್ರಧಾನಃ । ನಯತಿ ಸರ್ವಂ ಪ್ರಣಯತೀತಿ ನೀಃ ಅಗ್ರಶ್ಚಾಸೌ ನೀಶ್ಚ ಅಗ್ರಣೀಃ ।

ಉ - ನಾರಾಯಣನೆಂಬ ಪರದೇವತೆಯನ್ನು ಯಾರೂ ನೋಡುತ್ತಾ ಇಲ್ಲ ಆದುದರಿಂದ ಅವನು ಇದ್ದಾನೆಂದು ಏಕೆ ಒಪ್ಪಬೇಕು ಎಂದು ಮಕ್ಕಳು ಪ್ರಶ್ನೆ ಮಾಡಿದರೆ ಅದಕ್ಕೆ ಉತ್ತರವನ್ನು ಹೀಗೆ ಹೇಳಬೇಕು ಕಟ್ಟಿಗೆಯ ಮಥನದಿಂದ ಕಟ್ಟಿಗೆಯಲ್ಲಿ ಅಡಗಿದ ಅಗ್ನಿಯು ಪ್ರಕಟವಾಗುವದು ಅದರಂತೆ ಬ್ರಹ್ಮಾದಿ ಜೀವಸಮುದಾಯದ ಹೃದಯದಲ್ಲಿ ಅಡಗಿದ ನಾರಾಯಣನು ಅವನ ಕುರಿತಾದ ಶ್ರವಣ ಮನನ ಧ್ಯಾನಗಳಿಂದ ಆಜೀವಸಮುದಾಯಕ್ಕೆ ಪ್ರಕಟನಾಗುತ್ತಾನೆ ನಾವು ಅವರಂತೆ ಶ್ರವಣ ಮನನ ಧ್ಯಾನ ಮಾಡಿದರೆ ನಮಗೂ ಪ್ರಕಟ ವಾಗುತ್ತಾನೆಂದು ಬ್ರಹ್ಮಾದಿ ದೇವತೆಗಳು ಮತ್ತು ಋಷಿಗಳು ಹೇಳುತ್ತಾ ಇದ್ದಾರೆ ಆದುದ ರಿಂದ ಕಟ್ಟಿಗೆಯಲ್ಲಿ ಅಡಗಿ ಇರುವ ಅಗ್ನಿಯನ್ನು ಪ್ರಕಟವಾಗುವ ಮೊದಲು ಎಲ್ಲರೂ ಒಪ್ಪುವಂತೆ ನಮ್ಮೆಲ್ಲರ ಹೃದಯಗಳಲ್ಲಿ ಅಡಗಿ ಇರುವ ನಾರಾಯಣಾಖ್ಯ ಪರದೇವತೆಯನ್ನು ಎಲ್ಲರೂ ಒಪ್ಪಬೇಕು ಎಂದು ತತ್ವವನ್ನು ತಿಳಿಸುವುದಕ್ಕೋಸ್ಕರ ಅಗ್ನಿನಾಮದಿಂದ ನಾರಾಯಣನನ್ನು ಹೇಳಲಾಗಿದೆ ಎಂದು ತಿಳಿಯಬೇಕು



## ೨೧೯ ಗ್ರಾಮಣೀಃ

೧ ಶ್ರೇಷ್ಠನಾಗಿರುವವನು[1]

೨ ಗ್ರಾಮಗಳಿಗೆ ನೇತಾರನಾಗಿರುವವನು[2]

ಗ್ರಾಮಾಧಿಪತಿಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿ ಅವರ ಮೂಲಕ ಗ್ರಾಮಗಳನ್ನು ನಡೆಸು ವವನು. 'ಗ್ರಾಮಣಿಯು ಎನಿಸುವನು ಜನರೊಳು'—ಎಂದಿರುವರು ಜಗನ್ನಾಥದಾಸರು.[3]

೩ ದೈತ್ಯರನ್ನು (ಅವರ ಸ್ವಭಾವಕ್ಕೆ ಅನುಗುಣವಾಗಿ) ಪ್ರೇರಿಸುವವನು.[4]

---

೧ 1 'ಗ್ರಾಮಣೀರ್ನಾಪಿತೇ ಪುಂಸಿ ಶ್ರೇಷ್ಠೇ ಗ್ರಾಮಾಧಿಪೇ ತ್ರಿಷು' —ಅ. ಕೋ.

೨ 2 ಗ್ರಾಮಾನ್ ಸಂವಸಥಾನ್ ನಯತೀತಿ ಗ್ರಾಮಣೀಃ ।

3 ಹರಿಕಥಾಮೃತಸಾರಸ್ಯ ಭಕ್ತಾಪರಾಧಸಹಿಷ್ಣುಸಂಧೇಃ ಚತುರ್ವಿಂಶತಿತಮೇ ಪದ್ಯೇ ।

೩ 4 'ಗ್ರಾಮಾಖ್ಯಾ ಬಹುಲತ್ವಾತ್ತು ದೈತ್ಯಾ ಏವ ಪ್ರಕೀರ್ತಿತಾಃ' ಇತಿ ಐತರೇಯ ಸಂಹಿ ತಾಯಾಂ (ಐ. ಉ. 2-8-4-15) ಗ್ರಾಮಶಬ್ದಸ್ಯ ದೈತ್ಯವಾಚಕತ್ವಮುಕ್ತಮ್ । ತಥಾಚ ಗ್ರಾಮಾನ್ ದೈತ್ಯಾನ್ ನಯತಿ ಪ್ರೇರಯತೀತಿ ಗ್ರಾಮಣೀಃ ।

ಐತರೇಯೋಪನಿಷತ್ತು ದೈತ್ಯರನ್ನು ನಿತ್ಯಸಂಸಾರಿಗಳಿಗಿಂತ ಬೇರೆಯವರೆಂಬ ದೃಷ್ಟಿಯಿಂದ ಇತರರು ಎಂದೇ ಉಲ್ಲೇಖಿಸಿ ಅಂತಹವರನ್ನು ಪ್ರಜ್ಞಾನಾತ್ಮಕ ಭಗವಂತನೇ ಪ್ರೇರಿಸುವವನೆಂದು ಸಂದೇಶಿಸಿದೆ[1]

೪ ದೈತ್ಯರನ್ನು ಅಂಧಂತಮಸ್ಸಿಗೆ ಕೊಂಡೊಯ್ಯುವವನು[2]

೫ ಸ್ವರವನ್ನು ಪ್ರೇರಿಸುವವನು[3]

ನಮ್ಮ ದೇಹವು ಭಗವಂತನಿಗೆ ವೀಣೆ ಆದ್ದರಿಂದಲೇ ಅದು 'ದೈವೀ ವೀಣಾ' ಎನಿಸಿದೆ ಈ ವೀಣೆಗೆ ಅನುಗುಣವಾಗಿಯೇ ಮನುಷ್ಯರು ವಾದಿಸುವ ವೀಣೆ ಇರುವುದು ದೈವೀ ವೀಣೆಯಲ್ಲಿ ಅಂದರೆ ಮನುಷ್ಯನ ಶರೀರದಲ್ಲಿ ತಲೆ ಉದರಗಳು ಇರುವಂತೆ ಲೌಕಿಕ ವೀಣೆಯಲ್ಲೂ ಇದೆ. ದೈವೀ ವೀಣೆಯಲ್ಲಿ ನಾಲಗೆಯು ಗಾನ ಮಾಡುವುದಕ್ಕೆ ಸಾಧನವಾದರೆ ಲೌಕಿಕ ವೀಣೆಯಲ್ಲಿ 'ಕುದುರೆ' ಎಂದು ಕರೆಯುವ ಭಾಗವಿದೆ ದೈವೀ ವೀಣೆಯಲ್ಲಿ ಬೆರಳುಗಳಿರುವಂತೆ ಲೌಕಿಕ ವೀಣೆಯಲ್ಲಿ ತಂತಿಗಳಿವೆ ಧ್ವನಿ ಹೊರಡಿಸುವ ವಿಚಾರದಲ್ಲೂ ಎರಡೂ ವೀಣೆಗಳಲ್ಲಿ ಸಾಮ್ಯವಿದೆ ಈ ದೈವೀ ವೀಣೆಯು ಚರ್ಮವೆಂಬ ಧಾತುವಿನಿಂದ ಮುಚ್ಚಲ್ಪಟ್ಟು ಚಳಿ ಬಿಸಿಲುಗಳಿಂದ ರಕ್ಷಿಸಲ್ಪಡುವಂತೆ ಲೌಕಿಕ ವೀಣೆಯೂ 'ರುರೂ' ಎಂಬ ಮೃಗಚರ್ಮದಿಂದ ಆವೃತವಾಗಿ ರಕ್ಷಿತವಾಗುವುದು ಹೀಗೆ ನಮ್ಮ ದೇಹವನ್ನು 'ದೈವೀ ವೀಣೆ' ಎಂದು ಕರೆದ ಐತರೇಯೋಪನಿಷತ್ತು—ಹೀಗೆ ಈ ದೇಹವು ಯಾರಿಗೆ ಸೇರಿದ ವೀಣೆಯಾಗಿದೆಯೋ ಅಂತಹ ಸರ್ವವಾಗೀಶ್ವರನಾದ ಭಗವಂತನು ಸ್ತ್ರೀ ರೂಪದಿಂದ ವಾಗಿಂದ್ರಿಯದಲ್ಲಿದ್ದು

---

1 '. ಏತೇ ಸರ್ವೇ ದೇವಾಃ ಚೇತರಾಣಿ ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ '

-ಐ. ಉ 2-5-1-3

'ಕ್ಷುದ್ರಾತ್ಮಾನಸ್ತು ಯೇ ಮರ್ತ್ಯಾ ಇತರೇ ಅಸುರಾ ಅಪಿ । ಸರ್ವಂ ಜಗದಿದಂ ವಿಷ್ಣೋರ್ವಶೇ ತಿಷ್ಠತಿ ಸರ್ವದಾ । ತೇನೈವ ನೀಯತೇ ನಿತ್ಯಂ ತಸ್ಮಿನ್ನೇವ ಪ್ರತಿಷ್ಠಿತಮ್'

-ಐತರೇಯಸಂಹಿತಾ (ಐ. ಉ. ಭಾ.)

೪ 2 ಗ್ರಾಮಾನ್ ದೈತ್ಯಾನ್ ಅಂಧಂತಮಃ ಪ್ರತಿ ನಯತೀತಿ ಗ್ರಾಮಣೀಃ ।

೫ 3 ಗ್ರಾಮಂ ಸ್ವರಂ ನಯತಿ ಪ್ರಣಯತಿ ಪ್ರೇರಯತೀತಿ ಯಾವತ್, ಗ್ರಾಮಣೀಃ ।
'ಗ್ರಾಮಃ ಸ್ವರೇ ಸಂವಸಥೇ ವೃಂದೇ ಶಬ್ದಾದಿಪೂರ್ವಕಃ' —ವಿಶ್ವಃ ।

ತಿಂದ ಆಹಾರವು ಮೂರು ವಿಭಾಗವಾಗಿ ಪರಿಣಾಮಗೊಳ್ಳುವುದು. ಆಹಾರದ ಬಹಳಷ್ಟು ಸ್ಥೂಲವಾದ ಭಾಗವು ಮಲವಾಗುವುದಾದರೆ, ಸಾಮಾನ್ಯವಾಗಿ ಸಾರವಾದ ಭಾಗವು ಮಾಂಸವಾಗಿ ಪರಿಣಾಮ ಗೊಳ್ಳುವುದು. ಆಹಾರದಲ್ಲಿ ಬಹಳಷ್ಟು ಸೂಕ್ಷ್ಮವಾದ, ಸಾರವಾದ ಭಾಗವು ಮನಸ್ಸಾಗಿ ಪರಿಣಾಮಗೊಳ್ಳುವುದೆಂದು ಛಾಂದೋಗ್ಯೋಪನಿಷತ್ತು ಸಂದೇಶಿಸಿದೆ[1] ಹೀಗೆ ಆಹಾರವನ್ನು ಬೇರೆ ಬೇರೆ ವಿಭಾಗವಾಗಿ ಪರಿಣಮಿಸುವಂತೆ ಮಾಡುವವನು ಪ್ರಾಣನಾಮಕ ಭಗವಂತನೇ ಎಂಬುದಾಗಿ ಪ್ರಮಾಣವೊಂದು ಸಾರಿದೆ[2]

೮ ಪ್ರಾಣಿಗಳ ಸಮೂಹವನ್ನು ಪ್ರೇರಿಸುವವನು[3]

೯ ಇಂದ್ರಿಯ ಸಮೂಹವನ್ನು ಪ್ರೇರಿಸುವವನು[4]

ಋಗ್ವೇದದಲ್ಲಿ ಭಗವಂತನನ್ನು ಇಂದ್ರಿಯ ಸಮೂಹಕ್ಕೆ ಸ್ವಾಮಿ ಎಂಬ ಅರ್ಥದಲ್ಲಿ 'ಗಣಪತೇ' ಎಂದು ಸಂಬೋಧಿಸಿ ಇಂದ್ರಿಯಾದಿ ಗಣಗಳಲ್ಲಿದ್ದು ನಿನ್ನನ್ನು ನೀನೇ ಅರ್ಚಿಸಿಕೊಳ್ಳು ಎಂದು ಪ್ರಾರ್ಥಿಸಲಾಗಿದೆ[5]

೧೦ ಸಾತ್ವಿಕಜೀವ ಸಮೂಹವನ್ನು ಮೋಕ್ಷವನ್ನು ಕುರಿತೂ, ಸಂಸಾರಯೋಗ್ಯ ಜೀವ ಸಮೂಹವನ್ನು ಸಂಸಾರವನ್ನು ಕುರಿತೂ, ತಾಮಸ ಜೀವಸಮೂಹವನ್ನು ಅಂಧಂತ-

---

1 ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತತ್ ಪುರೀಷಂ ಭವತಿ ಯೋ ಮಧ್ಯಮಸ್ತನ್ಮಾಂಸಂ ಯೋಽಣಿಷ್ಠಸ್ತನ್ಮನಃ.. .'

-ಛಾಂ. ಉ 6-2-8

2 'ಅನ್ನಂ ರಸಾದಿರೂಪೇಣ ಪ್ರಾಣಃ ಪರಿಣಯತ್ಯಸೌ'

—ಬ್ರ. ಸೂ. ಭಾ. 2-1-25

೮ 3 ಭೂತಗ್ರಾಮಸ್ಯ ನೇತೃತ್ವಾತ್ ಗ್ರಾಮಣೀಃ ।

-ಶಾಂ. ಭಾ.

೯ 4 ಗ್ರಾಮಂ ಇಂದ್ರಿಯಗ್ರಾಮಂ ನಯತೀತಿ ಗ್ರಾಮಣೀಃ ।

5 'ನಿಷುಸೀದ ಗಣಪತೇ ಗಣೇಷು. ... '

—ಋ. ವೇ. (10-113-9)

ಇಂದ್ರಿಯಾದಿಗಣೇಷು ತ್ವಂ ನಿಷುಸೀದ ..

-ತತ್ತ್ವ ದೀಪಿಕಾ

ಮನಸ್ಸನ್ನು ಕುರಿತೂ ಕೊಂಡೊಯ್ಯುವವನು.[1]

೧೧ ಗುಣಗಳ ಸಮೂಹವನ್ನು (ಸಜ್ಜನರಲ್ಲಿ) ಹೊಂದಿಸುವವನು.[2]

೧೨ (ದುರ್ಜನರಲ್ಲಿ) ಗುಣ ಸಮೂಹವನ್ನು ತೊಲಗಿಸುವವನು[3]

೧೩ (ಪೃಥಿವ್ಯಾದಿ ಪಂಚಭೂತಗಳ) ಸಮೂಹವನ್ನು (ಬ್ರಹ್ಮಾಂಡವಾಗಿ) ಪರಿಣಮಿಸುವಂತೆ ಮಾಡಿರುವವನು.[4]

೧೪ (ಪ್ರಲಯ ಕಾಲದಲ್ಲಿ ಎಲ್ಲವನ್ನೂ) ಸಂಹರಿಸುವವನು. (ಸ್ಥಿತಿಕಾಲದಲ್ಲಿ ಎಲ್ಲವನ್ನೂ ಪ್ರೇರಿಸುವವನು[5])

## ಜಿಜ್ಞಾಸೆ

[ಸಕಲಸಮುದಾಯನಿಯಾಮಕ]

ಪ್ರ:- ಗ್ರಾಮಣೀಃ ಎಂಬ ನಾಮವು ಪರಮಾತ್ಮನಿಗೆ ಸಮುದಾಯ ನಿಯಾಮಕತ್ವವನ್ನು ಹೇಳುತ್ತದೆ ಗ್ರಾಮ ಎಂದರೆ ಸಮುದಾಯ ಣೀಃ ಎಂದರೆ ನಿಯಾಮಕ ಈ ರೀತಿಯಾದ

---

1 ಗ್ರಾಮಂ ಸಾತ್ತ್ವಿಕಜೀವಸಮೂಹಂ ಸಂಸಾರಯೋಗ್ಯಜೀವಸಮೂಹಂ ತಮೋಯೋಗ್ಯಜೀವಸಮೂಹಂ ಚ ಮೋಕ್ಷಂ ಪ್ರತಿ, ಸಂಸಾರಂ ಪ್ರತಿ, ತಮಃ ಪ್ರತಿ ಚ ನಯತೀತಿ ಗ್ರಾಮಣೀಃ ।

೧೧ 2 ಗ್ರಾಮಂ ಗುಣಸಮೂಹಂ ಸಜ್ಜನೇಷು ನಯತೀತಿ ಗ್ರಾಮಣೀಃ ।

೧೨ 3 ಗ್ರಾಮಂ ಗುಣಸಮೂಹಂ ದುರ್ಜನೇಷು ನಯತಿ ಅಪನಯತೀತಿ ಗ್ರಾಮಣೀಃ ।

೧೩ 4 ಗ್ರಾಮಂ ಪಂಚಭೂತ ಸಮುದಾಯಂ ನಯತಿ ಬ್ರಹ್ಮಾಂಡಾತ್ಮಕತ್ವೇನ ಪರಿಣಯತೀತಿ ಗ್ರಾಮಣೀಃ ।

೧೪ 5 ಗ್ರಸತೇ ಪ್ರಲಯೇ ಸರ್ವಂ ಸಂಹರತೀತಿ ಗ್ರಾಮಃ । ನಯತಿ ಸ್ಥಿತಿಕಾಲೇ ಸರ್ವಂ ಪ್ರೇರಯತೀತಿ ನೀಃ । ಗ್ರಾಮಶ್ಚಾಸೌ ನೀಶ್ಚ ಗ್ರಾಮಣೀಃ ।

ಮಹಿಮೆಯು ಇತರ ದೇವತೆಗಳಿಗೆ ಸಹ ಇದೆ. ವಿಘ್ನೇಶನಿಗೆ ಗಣಪತಿ ಎಂದು ಹೆಸರು ಇದೆ. ಈ ಹೆಸರಿನಿಂದ ಅವನು ಸಮುದಾಯಕ್ಕೆ ನಿಯಾಮಕನು ಎಂದು ತಿಳಿಯುತ್ತದೆ. ಈ ರೀತಿ ಇತರ ದೇವತಾ ಸಾಧಾರಣಗುಣವನ್ನು ಹೇಳುವ ಗ್ರಾಮಣೀಃ ಎಂಬ ನಾಮವು ಪರಮಾತ್ಮನಿಗೆ ಯಾವ ವೈಶಿಷ್ಟ್ಯವನ್ನೂ ಹೇಳುವುದಿಲ್ಲವಲ್ಲ?

ಉ - ಸೂರ್ಯನು ಎಲ್ಲರ ಚಕ್ಷುಸ್ಸಿಗೆ ನಿಯಾಮಕನು ಅಶ್ವಿನೀ ದೇವತೆಗಳು ಘ್ರಾಣೇಂದ್ರಿಯಕ್ಕೆ ನಿಯಾಮಕರು ಅಗ್ನಿಯು ವಾಗಿಂದ್ರಿಯಕ್ಕೆ ನಿಯಾಮಕನು. ವರುಣನು ನಾಲಿಗೆ ಇಂದ್ರಿಯಕ್ಕೆ ನಿಯಾಮಕನು ಈ ರೀತಿ ಇತರ ದೇವತೆಗಳು ಒಂದೊಂದು ಇಂದ್ರಿಯ ಗುಂಪುಗಳಿಗೆ ಮಾತ್ರ ನಿಯಾಮಕರು ಎಲ್ಲ ಇಂದ್ರಿಯ ಗುಂಪಿಗೆ ಯಾವ ದೇವತೆಯೂ ನಿಯಾಮಕ ಅಲ್ಲ ಪರಮಾತ್ಮ ಎಲ್ಲ ಇಂದ್ರಿಯ ಗುಂಪುಗಳಿಗೆ ನಿಯಾಮಕನು ಈ ಅರ್ಥವನ್ನು ಗ್ರಾಮಣೀಃ ಎಂಬ ನಾಮವು ಹೇಳುತ್ತದೆ ಗಣಪತಿ ಎಂಬ ನಾಮವು ಪರಮಾತ್ಮನು ಇಂದ್ರಿಯಗಣಕ್ಕೆ ನಿಯಾಮಕನು ಎಂದು ಹೇಳುತ್ತಾ, ಗ್ರಾಮಣೀಃ ಗಣಪತಿ ಈ ಎರಡೂ ನಾಮಗಳು ಏಕಾರ್ಥಗಳು. ಆದುದರಿಂದ ಗಣಪತಿ ಎಂಬ ನಾಮವು ಸಹಸ್ರನಾಮಗಳಲ್ಲಿ ಸೇರಲಿಲ್ಲ. ವಿಘ್ನೇಶನಿಗೆ ಗಣಪತಿ ಎಂಬ ನಾಮವು ಇದ್ದರೂ ಅದು ಪ್ರಮಥಾಧಿಪತಿತ್ವವನ್ನು ಮಾತ್ರ ಅವನಿಗೆ ಹೇಳುತ್ತದೆ ಸಕಲ ಸಮುದಾಯ ನಿಯಾಮಕತ್ವವನ್ನು ಅವನಿಗೆ ಹೇಳುವದಿಲ್ಲ



## ೨೨೦ ಶ್ರೀಮಾನ್

೧ ವಿದ್ಯಾಸಂಪತ್ತನ್ನು ಅತ್ಯಧಿಕವಾಗಿ, ನಿತ್ಯವಾಗಿ ಹೊಂದಿರುವವನು [1]

೨ ಧನ ರೂಪದ ಪ್ರಶಸ್ತವಾದ ಸಂಪತ್ತನ್ನು ಅತ್ಯಧಿಕವಾಗಿ, ನಿತ್ಯವಾಗಿ ಹೊಂದಿರುವವನು.[2]

---

೧ 1 'ಶ್ರೀರ್ವೇಷರಚನಾ ಶೋಭಾ ಭಾರತೀಸರಲದ್ರುಮೇ । ....' ಇತಿ ಕೋಶಾನುಸಾರೇಣ ಭಾರತೀವಾಚಕಃ ಶ್ರೀಶಬ್ದಸ್ತದಭಿಮಾನ್ಯಮಾನಾಂ ವಿದ್ಯಾಮಪಿ ಪ್ರತಿಪಾದಯತಿ । ತಥಾ ಚ ಶ್ರೀಃ ವಿದ್ಯಾ ಸಂಪತ್ । ಸಾ ಸರ್ವಾಧಿಕ್ಯೇನ ನಿತ್ಯಮಸ್ಯಾಸ್ತೀತಿ ಶ್ರೀಮಾನ್ । ಆಧಿಕ್ಯೇ ನಿತ್ಯಯೋಗೇ ಚ ಮತುಪ್ ।

೨ 2 ಶ್ರೀಃ ಪ್ರಶಸ್ತಾ ಅರ್ಥರೂಪಾ ಸಂಪತ್, ಸರ್ವಾಧಿಕ್ಯೇನ ನಿತ್ಯಮಸ್ಯಾಸ್ತೀತಿ ಶ್ರೀಮಾನ್ । ಪ್ರಾಶಸ್ತ್ಯಾರ್ಥೇ, ಆಧಿಕ್ಯಾರ್ಥೇ, ನಿತ್ಯಯೋಗೇ ಚ ಮತುಪ್ ।

೩ (ಉಳಿದವರಲ್ಲಿರುವ) ವಿದ್ಯಾ ಸಂಪತ್ತಿಗೂ, ಧನರೂಪದ ಸಂಪತ್ತಿಗೂ, ನಿಯಾಮಕನಾಗಿ ಇರುವವನು.[1]

'ಬ್ರಹ್ಮಣಃ ಕೋಶ' ಎಂದೇ ಎನಿಸಿರುವ ಭಗವಂತನಲ್ಲಿ ವೇದವಿದ್ಯೆ ಮಾತ್ರವಲ್ಲ.[2] ಸಕಲ ವಿದ್ಯೆಗಳೂ ಇವೆ. ಸರ್ವಜ್ಞತಮನಾದ ಅವನಿಗೆ ಅವು ಎಂದೆಂದೂ ಮರೆತುಹೋಗಬಾರದವು. ಮುಖ್ಯವಾಗಿ 'ಇಂದ್ರ' 'ಭಗವಾನ್'—ಎಂದೆಲ್ಲ ಎನಿಸುವ ಅವನಲ್ಲಿ ಅರ್ಥರೂಪವಾದ ಸಂಪತ್ತೂ ಪೂರ್ಣಪ್ರಮಾಣದಲ್ಲಿದೆ. ಉಪನಿಷತ್ತು ಅವನ ಸಂಪತ್ತನ್ನು 'ಪರಮಾ' ಎಂದು ವಿಶೇಷಿಸಿ ಅದರ ಪರಿಪೂರ್ಣತ್ವವನ್ನು ತಿಳಿಸಿದೆ.[3] ಸಂಪದಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ನಿತ್ಯವೂ ತನ್ನ ಎದೆಯಲ್ಲಿ ಇಟ್ಟುಕೊಂಡಿರುವ ಅವನ ಸಂಪತ್ತಿಗೆ ಎಂದಾದರು ವಿಯೋಗ ಇರಲು ಸಾಧ್ಯವೇ?

ಹೀಗೆ ಭಗವಂತನು ವಿದ್ಯಾಸಂಪತ್ತಿನಿಂದಲೂ, ಅರ್ಥರೂಪದ ಸಂಪತ್ತಿನಿಂದಲೂ ತಾನು ಪರಿಪೂರ್ಣನಾಗಿರುವುದಲ್ಲದೆ, ಉಳಿದವರಲ್ಲಿರುವ ಆ ಸಂಪತ್ತುಗಳಿಗೆ ನಿಯಾಮಕನೂ ಆಗಿರುವನು ಆದ್ದರಿಂದಲೇ ಇಂದ್ರನಾಮಕ ಭಗವಂತನಲ್ಲಿ ನಮಗೆ ವಿದ್ಯಾರೂಪವಾದ ಆಂತರಿಕಸಂಪತ್ತನ್ನೂ ಅನ್ನ ಮೊದಲಾದ ಬಾಹ್ಯಸಂಪತ್ತನ್ನೂ ನೀಡಲು ಮತ್ತೆ ಮತ್ತೆ ಪ್ರಾರ್ಥಿಸಲಾಗಿದೆ.[4] ಅಗ್ನಿನಾಮಕ

---

1 ಶ್ರೀಃ ವಿದ್ಯಾರೂಪಾ ಅರ್ಥರೂಪಾ ಚ ನಿಯಮ್ಯತಯಾಽಸ್ಯಾಸ್ತೀತಿ ಶ್ರೀಮಾನ್ ।

2 'ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ'

-ತೈ. ಉ 1-7

ವೇದಾವಾಸತ್ವತೋ ವಿಷ್ಣುರ್ಬ್ರಹ್ಮಕೋಶ ಇತಿ ಸ್ಮೃತಃ ।

-ಪ್ರಕ್ಲಸ್ತು (ತೈ. ಉ ಭಾ)

3 '...ಅಸ್ಯ ಪರಮಾ ಸಂಪತ್ '

-ಬೃ. ಉ. 6-3-32

ಪೂರ್ಣೈಶ್ವರ್ಯಾದಸ್ಯ ಸಂಪತ್ ಪರಮಾ ಸಂಪ್ರಕೀರ್ತಿತಾ ।

-ಬೃ. ಉ. ಭಾ.

4 ಅಸ್ಮೇ ಧೇಹಿ ಶ್ರವೋ ಬೃಹತ್ ದ್ಯುಮ್ನಂ ಸಹಸ್ರಸಾತಮಮ್ ।

ಇಂದ್ರ ತಾ ರಥಿನೀರಿಷಃ ॥

-ಋ. ವೇ. 9-8

ಭಗವಂತನ ಅನುಗ್ರಹದಿಂದಲೇ ಈ ಎರಡು ವಿಧದ ಸಂಪತ್ತನ್ನೂ ಪಡೆದಿರುವುದೆಂದು ವೇದದಲ್ಲಿ ಹೇಳಲಾಗಿದೆ[1]

೪ ಧರ್ಮಾರ್ಥಕಾಮಪುರುಷಾರ್ಥಗಳಿಗೆ ನಿಯಾಮಕನಾಗಿರುವವನು[2]

೫ ಮೋಕ್ಷವೆಂಬ ಮಹಾಸಂಪತ್ತಿಗೆ ನಿಯಾಮಕನಾಗಿರುವವನು.[3]

ನಾಲ್ಕು ವಿಧ ಪುರುಷಾರ್ಥಗಳಿಗೂ ಮುಖ್ಯ ನಿಯಾಮಕನು ಭಗವಂತನೇ ಆದ್ದರಿಂದಲೇ ಮಾರ್ಕಂಡೇಯರು ಸಂದೇಶಿಸಿರುವರು—ಧರ್ಮಾರ್ಥ ಕಾಮಮೋಕ್ಷ ಪುರುಷಾರ್ಥಗಳ ಗಳಿಕೆಗೆ ಹೃಷೀಕೇಶನ ಆರಾಧನೆಯನ್ನು ಬಿಟ್ಟರೆ ಮತ್ತೊಂದು ಉಪಾಯವೇ ಇಲ್ಲ ಎಂಬುದಾಗಿ.[4]

---

ಇಂದ್ರ ಅಸ್ಮೇ ಅಸ್ಮಾಸು ಬೃಹತ್ ಶ್ರವಃ ಮಹತೀಂ ವಿದ್ಯಾಂ ಸಹಸ್ರಸಾತಮಂ ಅತಿಶಯೇನ ಸಹಸ್ರಲಾಭಸಹಿತಮ್, ಬಹುಲಾಭಪ್ರದಮ್ । ದ್ಯುಮ್ನಂ ಕೀರ್ತಿಮ್ । ತಾಃ ಪ್ರಸಿದ್ಧಾಃ ರಥಿನೀಃ ರಥೋ ದೇಹ ಅಸಾಮಸ್ತೀತಿ ರಥಿನ್ಯಸ್ತಾ ರಥಿನೀಃ । ಇಷಃ ಅನ್ನಾನಿ ಅವಿಕಲೇನ ದೇಹೇನ ಯುಕ್ತಮನ್ನಂ ಧೇಹಿ ದೇಹಿ ।

-ಮಂ ಮಂ.

1 ಅಗ್ನಿನಾ ರಯಿಮಶ್ನವತ್ ...।

-ಋಂ 1-3

ತೇನೈವ ರಯಿಮಾಪ್ನೋತಿ ವಿತ್ತಂ ವಿದ್ಯಾಧನಾತ್ಮಕಮ್ ।

-ಋ. ಭಾ.

೪ 2 'ಲಕ್ಷ್ಮೀಸರಸ್ವತೀಧಾತ್ರಿವರ್ಗಸಂಪದ್ವಿಭೂತಿಶೋಭಾಸು.. ಶ್ರೀರಿತಿ ಪ್ರಥಿತಾ'-ಇತಿ ಶ್ರೀಃ ತ್ರಿವರ್ಗಸಂಪತ್ । ಸಾ ನಿಯಮ್ಯತಯಾಽಸ್ಯಾಸ್ತೀತಿ ಶ್ರೀಮಾನ್ ।

೫ 3 ಮೋಕ್ಷಪುರುಷಾರ್ಥಸ್ಯಾಪಿ 'ಅಗ್ನೇ ನಯ ಸುಪಥಾ ರಾಯೇ (ಈ. ಉ) ಇತ್ಯಾದೌ ಸಂಪತ್ತ್ವೇನ ವ್ಯಪದೇಶಾತ್ ಶ್ರೀಃ ಮೋಕ್ಷಾಖ್ಯಾ ಸಂಪತ್ ನಿಯಮ್ಯತಯಾಽಸ್ಯಾಸ್ತೀತಿ ಶ್ರೀಮಾನ್ ।

4 ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಪಾಯಸ್ತು ವಿದ್ಯತೇ ।
ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ ॥

-ಕೃ ಮಂ. 21

೬ (ಕೆಲವು ಪದಾರ್ಥಗಳು ಶ್ರೇಷ್ಠವೆನಿಸುವಂತೆ ಅವುಗಳ ಶ್ರೈಷ್ಠ್ಯಕ್ಕೆ ಪ್ರಯೋಜಕ ಗಳಾದ) ವಿಭೂತಿರೂಪಗಳನ್ನು ಹೊಂದಿರುವವನು[1]

ಯಾವ ಭಗವಂತನ ರೂಪಗಳ ಸನ್ನಿಧಾನದಿಂದಾಗಿ ವಸ್ತುಗಳಲ್ಲಿ ತಮ್ಮ ಜಾತಿಯ ಅಥವಾ ತಮ್ಮ ಪಂಗಡದ ಇತರ ವಸ್ತುಗಳಿಗಿಂತೆಲ್ಲ ಆಧಿಕ್ಯ ಉಂಟಾಗುವುದೋ ಅಂತಹ ಭಗವದ್ರೂಪಗಳು ವಿಭೂತಿರೂಪಗಳೆನಿಸುವವು[2] ಇವುಗಳಲ್ಲಿ ಪ್ರತ್ಯಕ್ಷ ವಿಭೂತಿರೂಪಗಳೆಂದೂ ತಿರೋಹಿತ ವಿಭೂತಿರೂಪಗಳೆಂದೂ ಎರಡು ಪ್ರಭೇದಗಳಿವೆ[3] ಕಪಿಲ ವ್ಯಾಸ ಕೃಷ್ಣಾದಿಗಳು ಪ್ರತ್ಯಕ್ಷ ರೂಪಗಳೆನಿಸಿದರೆ, ಬ್ರಹ್ಮಾದಿ ಜೀವಗಳಿಗೆ ಮತ್ತು ವಜ್ರಾದಿ ಜಡಪದಾರ್ಥಗಳಿಗೆ ಆಯಾಯ ಜಾತಿಯಲ್ಲಿ, ಪಂಗಡದಲ್ಲಿ ಆಧಿಕ್ಯಸಂಪಾದಕವಾಗಿ ಇರುವ ಭಗವದ್ರೂಪಗಳು ತಿರೋಹಿತವಿಭೂತಿರೂಪ ಗಳೆನಿಸಿವೆ[4]

[ಅರ್ಥವಿಶೇಷಗಳನ್ನು ೨೨ನೆಯ ೧೮೨ನೆಯ ಹಾಗೂ ೬೧೩ನೆಯ 'ಶ್ರೀಮಾನ್' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

---

೬ 1 ' .ವಿಭೂತಿ ಶೋಭಾಸು...ಶ್ರೀರಿತಿ ಪ್ರಥಿತಾ'- ಇತಿ 'ವ್ಯಾಡಿಃ' ವಿಭೂತೇರಪಿ ಶ್ರೀಶಬ್ದ-ವಾಚ್ಯತ್ವಂ ವದತಿ । ತಥಾಚ ಶ್ರೀಃ ವಿಭೂತಿಃ ಅಸ್ಯಾಸ್ತೀತಿ ಶ್ರೀಮಾನ್ ।

2 ಯೇಷಾಂ ವಿಷ್ಣುಸ್ವರೂಪಾಣಾಂ ಸನ್ನಿಧೇರನ್ಯವಸ್ತುಷು । ವಿಶಿಷ್ಟತ್ವಂ ಸ್ವಜಾತೇಃ ಸ್ಯಾದ್ ವಿಭೂತ್ಯಾಖ್ಯಾನಿ ತಾನಿ ತು ।

–ವಿಭೂತಿತತ್ತ್ವ (ಗೀ. 10-20)

* 'ಸ್ವಯೂಥಾನಾಮಥಾಧಿಕ್ಯೇ ಸ್ವಜಾತೀನಾಮಥಾಽಪಿ ವಾ । ಯತ್ ಕಾರಣಂ ವಿಭೂತ್ಯಾಖ್ಯಂ ವಿಷ್ಣೋಸ್ತದ್ ರೂಪಮುಚ್ಯತೇ'

-ಪ್ರಾಧಾನ್ಯ (ಭಾಗ. ತಾ. ನಿ 11-16-12)

3 ದ್ವಿವಿಧಂ ವೈಭವಂ ರೂಪಂ ಪ್ರತ್ಯಕ್ಷಂ ಚ ತಿರೋಹಿತಮ್ ।

–ಗೀ. ತಾ 10–20

4 ಕಪಿಲವ್ಯಾಸಕೃಷ್ಣಾದ್ಯಂ ಪ್ರತ್ಯಕ್ಷಂ ವೈಭವಂ ಸ್ಮೃತಮ್ । ಭಿನ್ನಂ ಬ್ರಹ್ಮಾದಿ ಜೀವೇಭ್ಯೋ ಜಡೇಭ್ಯಶ್ಚಾಪಿ ತದ್ಗತಮ್ । ಸ್ವಜಾತ್ಯಾಧಿಕ್ಯದಂ ತೇಷಾಂ ತತ್ ತಿರೋಹಿತವೈಭವಮ್।

-ಗೀ. ತಾ. 10-26

ವಿಭೂತಿರೂಪಾಣ್ಯಧಿಕೃತ್ಯಾಧಿಕವಿಚಾರಃ ಭಗವದ್ಗೀತಾಯಾಃ ದಶಮಾಧ್ಯಾಯೇ ಭಾಗವತಸ್ಯ ಏಕಾದಶಸ್ಕಂಧಸ್ಯ ಷೋಡಶಾಧ್ಯಾಯೇ ಚ ದ್ರಷ್ಟವ್ಯಃ ।

## ಜಿಜ್ಞಾಸೆ

[ಮೋಕ್ಷ ನಿಯಾಮಕತ್ವ]

ಪ್ರ - ಶ್ರೀಮಾನ್ ಎಂಬ ನಾಮವು ಮೋಕ್ಷವೆಂಬ ಮಹಾಸಂಪತ್ತಿಗೆ ನಿಯಾಮಕನು ಎಂದು ಹೇಳು ತ್ತದೆ ಈ ನಾಮದಿಂದ ಹೇಳಲ್ಪಡುವ ಮೋಕ್ಷಸಂಪನ್ನಿಯಾಮಕತ್ವವು ವಿಷ್ಣುವಿಗೆ ಮಾತ್ರ ಇರುತ್ತದೆ. ಇತರರಿಗೆ ಇಲ್ಲ ಎಂದು ಹೇಳುವದು ಯಾವ ಆಧಾರದಿಂದ?

ಉ – ಭಾಗವತದಲ್ಲಿ 'ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ। ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ' ಎಂಬ ಶ್ಲೋಕವು ಇದೆ ವಿಷ್ಣುವನ್ನು ಹೊರತು ಇನ್ನು ಯಾರೂ ಮೋಕ್ಷಪ್ರದರು ಇಲ್ಲ ಇದು ದೇವತೆಗಳ ಮಾತು ಆಗಿದೆ. ಇದರಿಂದ ಮೋಕ್ಷನಿಯಾಮಕತ್ವ ಮಹಿಮೆಯು ವಿಷ್ಣುವಿನಲ್ಲಿ ಅಸಾಧಾರಣ ಎಂದು ತಿಳಿಯುತ್ತದೆ ಇನ್ನೂ ಈ ವಿಷಯದಲ್ಲಿ ಬಹು ಪ್ರಮಾಣಗಳು ಇವೆ.



೨೨೧ ನ್ಯಾಯಃ

೧ (ಜೀವಾತ್ಮರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಶುಭಾಶುಭಕರ್ಮಗಳಲ್ಲಿ) ಪ್ರೇರಿಸುವವನು ಹಾಗೂ (ಅವರ ಕರ್ಮಗಳಿಗನುಗುಣವಾಗಿ) ಶುಭಾಶುಭ ಫಲಗಳನ್ನು ಹೊಂದಿಸುವವನು[1]

ಭಗವಂತನು ಯಾರನ್ನು ಸ್ವರ್ಗಾದಿ ಮೇಲಿನ ಲೋಕಗಳಿಗೆ ಕೊಂಡೊಯ್ಯಲು ಬಯಸುವನೋ ಅವರಿಂದ ಒಳ್ಳೆಯ ಕರ್ಮಗಳನ್ನು ಮಾಡಿಸುವನು ಯಾರನ್ನು ನರಕಾದಿ ಕೆಳಲೋಕಗಳಿಗೆ ಒಯ್ಯಲು ಬಯಸುವನೋ ಅವರಿಂದ ಕೆಟ್ಟ ಕೆಲಸಗಳನ್ನು ಮಾಡಿಸುವನು.[2] ಅಶೇಷಜೀವರಲ್ಲಿರುವ ಅಸಂಖ್ಯ

---

೧ 1 ನಯತಿ ಜೀವಾತ್ಮನಃ ತತ್ತದ್ಯೋಗ್ಯತಾನುಸಾರೇಣ ಶುಭಾಶುಭಕರ್ಮಸು ಪ್ರಣಯತೀತಿ ನೀಃ। ಅಗ್ನಿರಿತ್ಯತ್ರ 'ನೀಃ' ಇತ್ಯಸ್ಯ ಪ್ರಣೇತ್ರರ್ಥಕತ್ವಮಂಗೀಕೃತಮ್ । ಆಯಯತಿ ತತ್ತತ್ಕರ್ಮಾನುಸಾರೇಣ ಫಲಂ ಪ್ರಾಪಯತೀತಿ ಆಯಃ। 'ಆಯಸ್ತು ಫಲಮುದ್ದಿಷ್ಟಂ ಪ್ರೋಕ್ತಂ ಮಾಯೇತಿ ನಿಷ್ಫಲಮ್ । .ಮಹಾಫಲಪ್ರದತ್ವಾತ್ತು ವಿಷ್ಣುರಾಯ ಇತೀರಿತಃ' ಇತಿ ನಿರುಕ್ತೇಽಪಿ (ಭಾಗ ತಾ. ನಿ. 11-18-27) ಆಯಶಬ್ದಸ್ಯ ಮಹಾಫಲ-ಪ್ರದಾರ್ಥಕತ್ವಮುಕ್ತಮ್ ।

2 'ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತ ಏಷ ಉ ಏವಾಸಾಧುಕರ್ಮ ಕಾರಯತಿ ತಂ ಮಯಧೋ ನಿನೀಷತೇ'
-ಬ್ರ. ಸೂ. ಭಾ. 2-1-36

ಗಳಾದ ಅನಾದಿಕಾಲೀನಗಳಾದ ಧರ್ಮಾಧರ್ಮಗಳನ್ನು ನೋಡುತ್ತ, ಅವುಗಳಲ್ಲಿ ಕೆಲವನ್ನು ಪ್ರಚೋದಿಸಿ ಅವುಗಳಿಗೆ ಅನುಗುಣವಾದ ಫಲವನ್ನೂ ಭಗವಂತನೇ ಅನುಗ್ರಹಿಸುವನು.[1]

೨ ಚೆನ್ನಾಗಿ ಲಾಭ ಉಳ್ಳವನು[2]

ಪ್ರತಿಯೊಬ್ಬನೂ ತನ್ನ ಬೇರೆ ಬೇರೆ ಇಂದ್ರಿಯಗಳ ಮೂಲಕ ಭೋಗಿಸುವಾಗ ಅದರ ಸಾರಭಾಗವು ಭಗವಂತನಿಗೇ ಸೇರುವುದು ಹೀಗೆ ಅವನ ಪಾಲಿಗೆ ತುಂಬ ಲಾಭವು ಸಂದಾಯ ವಾಗುವುದು

೩. ಚೆನ್ನಾಗಿ ಫಲಗಳನ್ನು ಹೊಂದಿಸುವವನು[3]

ಪಕ್ಷಪಾತ ದೋಷದಿಂದ ದೂರನಾದ ಭಗವಂತನು ಅವರವರ ಕರ್ಮಕ್ಕನುಗುಣವಾಗಿಯೇ ಫಲವನ್ನು ನೀಡುವನು

೪ ಚೆನ್ನಾಗಿ ಎಲ್ಲೆಡೆ ಸಂಚರಿಸುತ್ತಿರುವವನು.[4]

---

1 'ಫಲಮತ ಉಪಪತ್ತೇಃ'

-ಬ್ರ. ಸೂ. ಭಾ. 3-2-39

ಸ ಏವಾಶೇಷಜೀವಸ್ಥನಿಸ್ಸಂಖ್ಯಾನಾದಿಕಾಲಿಕಾನ್ । ಧರ್ಮಾಧರ್ಮಾನ್ ಸದಾ ಪಶ್ಯನ್ ಸ್ವೇಚ್ಛಯಾ ಬೋಧಯತ್ಯಜಃ । ಕಾಂಶ್ಚಿತ್ ತೇಷಾಂ ಫಲಂ ಚೈವ ದದಾತಿ ಸ್ವಯಮಚ್ಯುತಃ ।

—ಅ ವ್ಯಾ. 3-2-202

೨ 2 ನಿತರಾಮಯಾಯೋ ಲಾಭೋ ಯಸ್ಯ ಸಃ ।

—ಸ. ಸಂ.

ನಿತರಾಮಯಾಯೋ ಯಸ್ಯ ಸಃ ।

—ವಾ. ರಾ.

೩ 3 ನಿತರಾಂ ಅಯಯತೀತಿ ಫಲಂ ಪ್ರಾಪಯತೀತಿ ನ್ಯಾಯಃ ।

೪ 4 ನಿತರಾಂ ಆ ಸಮಂತಾತ್ ಏತಿ ಗಚ್ಛತೀತಿ ನ್ಯಾಯಃ । 'ಇಣ್ ಗತೌ' ।

೫ ಎಲ್ಲವನ್ನೂ ಜನಾಗಿ ಸಮಗ್ರವಾಗಿ ಬಲ್ಲವನು[1]

೬ ಚೆನ್ನಾಗಿ ತಿಳಿಯಲ್ಪಡುವವನು[2]

೭ ಚೆನ್ನಾಗಿ ಪೊಂದಲ್ಪಡುವವನು.[3]

ಅದಿಕ ಸಾದನಾನುಷ್ಠಾನ ನಡೆಸಿದ, ಅಲ್ಪ ಸಾಧನಾನುಷ್ಠಾನ ನಡೆಸಿದ ಸಾಧಕರೆಲ್ಲರಿಗೂ ಭಗವಂತನು ಒಂದೇ ರೀತಿಯಾಗಿ ಅಭಿವ್ಯಕ್ತನಾಗಲಾರ ಮತ್ತೆ, ಸಾಧಕರ ಸಾಧನಾನುಷ್ಠಾನಕ್ಕೆ ಅನುಗುಣವಾಗಿ ತಾರತಮ್ಯದಿಂದ ತನ್ನ ರೂಪವನ್ನು ಅಭಿವ್ಯಕ್ತಗೊಳಿಸುವನು. ಭಗವದ್ರೂಪದ ಅಭಿವ್ಯಕ್ತಿಯಲ್ಲಿಯು ಮೂರು ವಿಧದ ತಾರತಮ್ಯವನ್ನು ತೈತ್ತಿರೀಯೋಪನಿಷತ್ತು ಗುರುತಿಸಿ ತೋರಿಸಿದೆ

ಸಾಧಕನು ತನ್ನ ಬಾಲ್ಯಾವಸ್ಥೆಯಿಂದಲೇ ಪ್ರಾರಂಭಿಸಿ ತೀವ್ರೋಪಾಸನೆಯಿಂದ ಭಗವಂತನನ್ನು ತಿಳಿದನೆಂದರೆ, ಅವನಿಗೆ ಭಗವಂತನ ರೂಪವು ಅಡಿಯಿಂದ ಮುಡಿಯವರೆಗೂ ಅಭಿವ್ಯಕ್ತವಾಗುವುದು ಸಾಧಕನು ತನ್ನ ಮಧ್ಯವಯಸ್ಸಿನಿಂದ ಭಗವಂತನ ಉಪಾಸನೆಯಲ್ಲಿ ತೊಡಗಿ ಅವನನ್ನು ತಿಳಿದನೆಂದರೆ ಅಂತಹವನಿಗೆ ಭಗವಂತನ ಮಧ್ಯದ ಅವಯವಗಳಷ್ಟೇ ಕಂಡು ಉಳಿದ ಅವಯವಗಳು ತೇಜೋಮಂಡಳದಂತೆ ಕಾಣುವವು. ಸಾಧಕನು ತನ್ನ ಕೊನೆವಯಸ್ಸಿನಲ್ಲಷ್ಟೇ ಭಗವಂತನ ಉಪಾಸನೆಯಲ್ಲಿ ತೊಡಗಿ ಅವನನ್ನು ತಿಳಿದನೆಂದರೆ, ಅಂತಹವನಿಗೆ ಭಗವಂತನ ಕಾಲುಗಳಷ್ಟೇ ಕಂಡು ಉಳಿದ ಭಾಗ ಬರೇ ತೇಜೋಮಂಡಲದಂತೆ ಕಾಣಿಸುವುದು.[4]

---

೫ 1 ನಿತರಾಂ ಆ ಸಮಂತಾತ್ ಏತಿ ಜಾನಾತೀತಿ ನ್ಯಾಯಃ ।

೬ 2 ನಿತರಾಂ ಆ ಸಮ್ಯಕ್ ಈಯತೇ ಜ್ಞಾಯತೇ ಅಭಿವ್ಯಜ್ಯತ ಇತಿ ಯಾವತ್ ನ್ಯಾಯಃ ।

೭ 3 ನಿತರಾಂ ಆ ಸಮ್ಯಕ್ ಈಯತೇ ಪ್ರಾಪ್ಯತ ಇತಿ ನ್ಯಾಯಃ ।
ಭಗವತಃ ಸ್ವರೂಪಾಭಿವ್ಯಕ್ತೌ ತತ್ಪ್ರಾಪ್ತೌ ವಾ ಸಾಧಕಾನಾಂ ಸಾಧನಾನುಷ್ಠಾನ-ಪ್ರಮಾಣಾನುಗುಣ್ಯಂ ನಿತರಾಮಿತಿ ವಿಶೇಷಣಂ ಬೋಧಯತಿ ।

4 ಏತದ್ವೈ ಮುಖತೋಽನ್ನಗ್ಂ ರಾದ್ಧಮ್ । ಮುಖತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವೈ ಮಧ್ಯತೋಽನ್ನಗ್ಂ ರಾದ್ಧಮ್ । ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ ವಾ ಅಂತತೋಽನ್ನಗ್ಂ ರಾದ್ಧಮ್ । ಅಂತತೋಽಸ್ಮಾ ಅನ್ನಗ್ಂ ರಾಧ್ಯತೇ

—ತೈ ಉ. 3-10

ಹೀಗೆಯೇ ಭಗವಂತನ ಪ್ರಾಪ್ತಿರೂಪವಾದ ಮೋಕ್ಷದಲ್ಲೂ ಸಾಧಕರ ಸಾಧನಾನುಷ್ಠಾನಕ್ಕೆ ಅನುಸಾರವಾಗಿ ತಾರತಮ್ಯವಿದೆ[1] ಸಾಯುಜ್ಯ, ಸಾಮೀಪ್ಯ, ಸಾರೂಪ್ಯ ಹಾಗೂ ಸಾಲೋಕ್ಯ ಎಂಬುದಾಗಿ ಮೋಕ್ಷದಲ್ಲಿಯು ಈ ತಾರತಮ್ಯವು ಮುಖ್ಯವಾಗಿ ಭಗವಂತನ ಪ್ರಾಪ್ತಿಯ ತಾರತಮ್ಯವನ್ನೇ ಅವಲಂಬಿಸಿ ಇರುವಂತಹದ್ದು

೮ ಗುರುವಿನಿಂದ ಶಿಷ್ಯರಲ್ಲಿ ತಲುಪಿಸಲ್ಪಡುವವನು[2]

೯ (ಜಯಿಸಲು ಬಯಸುವವರಿಗೆ) ಉಪಾಯವನ್ನು ನೀಡುವವನು[3]

ಗೀತಾಚಾರ್ಯನು ತನ್ನ ವಿಭೂತಿರೂಪಗಳನ್ನು ತಿಳಿಸುತ್ತ ಜಯ ಬಯಸುವವರಿಗೆ ಉಪಾಯವನ್ನು ಅನುಗ್ರಹಿಸುತ್ತ ಅವರಲ್ಲಿ 'ನೀತಿ' ಎಂಬ ವಿಭೂತಿರೂಪದಿಂದ ತಾನು ಇರುವುದಾಗಿ ಸಂದೇಶಿಸಿರುವನು.[4]

### ಜಿಜ್ಞಾಸೆ

[ಆರಂಭದ ಕರ್ಮ]

ಪ್ರ – ಆಯಾಯ ಜೀವರ ಯೋಗ್ಯತಾನುಸಾರ ಆಯಾಯ ಜೀವರಿಗೆ ಶುಭ ಅಶುಭ ಕರ್ಮಗಳನ್ನು ಪರಮಾತ್ಮನು ಪ್ರೇರಿಸುತ್ತಾನೆಂದು ಹೇಳಿ ಪರಮಾತ್ಮನಿಗೆ ವೈಷಮ್ಯದೋಷ ಪರಿಹಾರ ಮಾಡುವ

---

'ಯಸ್ಯ ತದ್ ಬ್ರಹ್ಮ ಸಂಸಿದ್ಧಂ ಪೂರ್ವಂ ತೇಽನಾಪ್ಯತೇಽಗ್ರತಃ ।
ಮಧ್ಯೇ ವಯಸಿ ಚೇತ್ ಸಿದ್ಧಂ ಮುಕ್ತೋ ಮಧ್ಯಂ ಪ್ರಪಶ್ಯತಿ ।
ವಾರ್ಧಕ್ಯೇ ಚೇದ್ ವಿಜಾನಾತಿ ಮುಕ್ತಃ ಪಾದೌ ಪ್ರಪಶ್ಯತಿ ।
ತೇಜೋಮಂಡಲಮೇವಾನ್ಯತ್ ಕ್ರಮಣಾಂಗಂ ಪ್ರಪಶ್ಯತಿ'
-ಯಜುಃ ಸಂಹಿತಾ (ತೈ. ಉ. ಭಾ.)

1 ತಾರತಮ್ಯಾದ್ಧಿ ತಿಷ್ಠಂತಿ ತಾರತಮ್ಯಂ ಹಿ ಸಾಧನೇ ।
-ಅ. ವ್ಯಾ. 3-4-61

೮ 2 ನೀಯತೇ ಶಿಷ್ಯೇಷು ಗುರುಣೇತಿ ನ್ಯಾಯಃ ।
-ವಿ. ರಾ.

೯ 3 ನ್ಯಾಯಃ ನೀತಿಃ, ಉಪಾಯ ಇತಿ ಯಾವತ್, ದೇಯತ್ವೇನಾಸ್ಯಾಸ್ತೀತಿ ನ್ಯಾಯಃ ।
'ಅರ್ಶ ಆದ್ಯಚ್' ।

4 '.....ನೀತಿರಸ್ಮಿ ಜಿಗೀಷತಾಮ್'
-ಗೀತಾ. 10 38

ಬದಲಿಗೆ ಎಲ್ಲಾ ಜೀವರು ಮಾಡುವ ಆರಂಭದ ಕರ್ಮದಲ್ಲಿ ಪರಮಾತ್ಮನು ಉದಾಸೀನನಾಗಿರುತ್ತಾನೆ ಜೀವರಿಗೆ ಆರಂಭದ ಕರ್ಮವನ್ನು ಮಾಡುವದರಲ್ಲಿ ಸ್ವಾತಂತ್ರ್ಯವನ್ನು ಕೊಡುತ್ತಾನೆ ಜೀವರು ಭಗವದ್ದತ್ತಸ್ವಾತಂತ್ರ್ಯವನ್ನು ದುರುಪಯೋಗ ಮಾಡಿ ಅಶುಭ ಕರ್ಮವನ್ನು ಆರಂಭದಲ್ಲಿ ಮಾಡಿದರೆ ಅದನ್ನು ನಿಮಿತ್ತವಾಗಿ ಇಟ್ಟುಕೊಂಡು ಪರಮಾತ್ಮನು ಮುಂದೆ ಆ ಜೀವರಿಂದ ಅಶುಭಕರ್ಮ ಪರಂಪರೆಯನ್ನು ಮಾಡಿಸುತ್ತಾನೆ ಜೀವರು ಆರಂಭದಲ್ಲಿ ಸತ್ಕರ್ಮವನ್ನು ಮಾಡಿದರೆ ಅದನ್ನು ನಿಮಿತ್ತವಾಗಿ ಇಟ್ಟುಕೊಂಡು ಮುಂದೆ ಅವರಿಂದ ಸತ್ಕರ್ಮ ಪರಂಪರೆಯನ್ನು ಮಾಡಿಸುತ್ತಾನೆ ಈ ರೀತಿಯಾಗಿ ಶುಭಾಶುಭ ಕರ್ಮಗಳನ್ನು ಮಾಡಿಸುವ ಪರಮಾತ್ಮನಿಗೆ ವೈಷಮ್ಯದೋಷವು ಇಲ್ಲ ಎಂದು ರಾಮಾನುಜಾಚಾರ್ಯರು ತಮ್ಮ ಗ್ರಂಥಗಳಲ್ಲಿ ಹೇಳುತ್ತಾರೆ ಅದರಂತೆ ಸಿದ್ಧಾಂತಿಗಳು ಏಕೆ ಸ್ವೀಕರಿಸಲಿಲ್ಲ?

ಉ – 'ಏಷ ಹ್ಯೇವ ಸಾಧು ಕರ್ಮ ಕಾರಯತಿ ಏಷ ಹ್ಯೇವ ಅಸಾಧುಕರ್ಮ ಕಾರಯತಿ' ಎಂದು ಶ್ರುತಿಯು ಪರಮಾತ್ಮನೇ ಸಾಧು ಅಸಾಧು ಕರ್ಮಗಳನ್ನು ಮಾಡಿಸುತ್ತಾನೆಂದು ಹೇಳುತ್ತದೆ ಆದುದರಿಂದ ಅವನು ಆರಂಭ ಕರ್ಮದಲ್ಲಿ ಉದಾಸೀನನಾಗಿರುತ್ತಾನೆಂದು ರಾಮಾನುಜಾಚಾರ್ಯರು ಹೇಳುವದು ಈ ಶ್ರುತಿಗೆ ವಿರುದ್ಧವಾಗುತ್ತದೆ.

ಪ್ರ – ಈ ಶ್ರುತಿಯ ವಿರೋಧವನ್ನು ರಾಮಾನುಜಾಚಾರ್ಯರು ಶಂಕಿಸಿಕೊಂಡು ಈ ವಿರೋಧ ಪರಿಹಾರಕ್ಕಾಗಿ ತಮ್ಮ ಗ್ರಂಥದಲ್ಲಿ ಬರೆದದ್ದು ಏನೆಂದರೆ ಆರಂಭದ ಸಾಧು ಅಸಾಧು ಕರ್ಮಗಳನ್ನು ಮಾಡುವದಕ್ಕೆ ಬೇಕಾದ ಶರೀರ ಇಂದ್ರಿಯಗಳನ್ನು ಪರಮಾತ್ಮನು ಕೊಟ್ಟಿದ್ದಾನೆ. ಆದುದರಿಂದ ಪರಮಾತ್ಮನು ಆರಂಭದ ಶುಭಾಶುಭಕರ್ಮಗಳನ್ನು ಮಾಡಿಸತಕ್ಕವನು ಎಂದು ಶ್ರುತಿ ಹೇಳುತ್ತದೆ ತಂದೆಯು ತನ್ನ ಮಗನಿಗೆ ಸಂಧ್ಯಾವಂದನೆ ವೇದಾಧ್ಯಯನಗಳಿಗೆ ಬೇಕಾದ ಉಪನಯನವನ್ನು ಮಾತ್ರ ಮಾಡಿಸಿ ಸಂಧ್ಯಾವಂದನೆ ವೇದಾಧ್ಯಯನವನ್ನು ಮಾಡಿಸದೆ ಅದರಲ್ಲಿ ಉದಾಸೀನನಾಗಿ ಇರುವಂತೆ ಪರಮಾತ್ಮನು ಜೀವನ ಆರಂಭದ ಕರ್ಮಕ್ಕೆ ಅವಶ್ಯ ಬೇಕಾದ ದೇಹೇಂದ್ರಿಯಗಳನ್ನು ಕೊಟ್ಟು ಆರಂಭದ ಶುಭಾಶುಭ ಕರ್ಮಗಳನ್ನು ಮಾಡಿಸುವ ವಿಷಯದಲ್ಲಿ ಉದಾಸೀನನೂ ಕೂಡ ಆಗಿದ್ದಾನೆ, ಎಂದು... .

ಉ – ಪರಮಾತ್ಮನು ತನ್ನ ಕರ್ತವ್ಯದಲ್ಲಿ ಉದಾಸೀನನು ಅಲ್ಲ. ಕರ್ತವ್ಯದಲ್ಲಿ ಉದಾಸೀನತೆಯು ಸೋಮಾರಿತನ ಎಂಬ ದೋಷವಲ್ಲವೆ? ಮತ್ತು ಪರಮಾತ್ಮನನ್ನು 'ಉದಾಸೀನವತ್ ಆಸೀನಂ' ಎಂದು ಉದಾಸೀನ ಸದೃಶನು ಎಂದು ಹೇಳಿದ್ದಾರೆ. ಹೊರತು ಅವನು ಉದಾಸೀನನು ಎಂದು ಹೇಳಲಿಲ್ಲ.



## ೨೨೨ ನೇತಾ

೧ ಎಲ್ಲರಿಗೂ ಪ್ರಭು ಆಗಿರುವವನು[1]

---

೧ 1 'ಅಧಿಭೂರ್ನಾಯಕೋ ನೇತಾ ಪ್ರಭುಃ ....' ಅ. ಕೋ. ಇತಿ ಪ್ರಭುಪರ್ಯಾಯಶಬ್ದೇಷು ನೇತೃಶಬ್ದಃ ಪಠ್ಯತೇ ।

೨ ಸಮಸ್ತ ಪ್ರಪಂಚವನೂ ಪ್ರೇರಿಸುವವನು[1]

ಭಗವಂತನ ಪ್ರೇರಣೆ ಇಲ್ಲದೆ ಬ್ರಹ್ಮಾದಿ ಸಮಸ್ತ ಪ್ರಪಂಚವೂ ಸ್ವತಃ ಚಲಿಸುವ ಸಾಮರ್ಥ್ಯ ವಿಲ್ಲದ ಪ್ರಯುಕ್ತ 'ಅಗ' ಎನಿಸುವುದು ಇದಕ್ಕೆ ಚಾಲನೆ ಕೊಟ್ಟು ಆಯಾಯ ಕಾರ್ಯದಲ್ಲಿ ಪ್ರೇರಿಸುವ ಪ್ರಯುಕ್ತ ಭಗವಂತನು 'ಅಗ್ನಿ' ಎಂದೆನಿಸುವನು[2] ಸತ್ಯವಾದ ಜಗತ್ತಿಗೆ ನೇತೃ ಆಗಿರುವುದರಿಂದ ಭಗವಂತನು 'ಸತ್ಯನೇತಾ' ಎಂದೆನಿಸಿರುವನೆಂದು ತಂತ್ರಭಾಗವತ ಸಂದೇಶಿಸಿದೆ[3] ಎಲ್ಲ ಪ್ರಾಣಿಗಳ ಮನಸ್ಸಿಗೆ ನೇತಾರನಾಗಿರುವ ಪ್ರಯುಕ್ತ 'ಚೇತನಾ' ಎಂಬ ವಿಭೂತಿರೂಪದಿಂದ ಸರ್ವ ಪ್ರಾಣಿಗಳಲ್ಲೂ ತಾನು ಇರುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು[4] ಭಗವಂತನ ಸ್ವರೂಪಾತ್ಮಕವಾದ ಶರೀರವು ಜಗತ್ತನ್ನು ಸೃಷ್ಟಿಸುವಂತೆ, ಜಗತ್ತಿನ ನೇತೃ—ಪ್ರೇರಕವೂ ಆಗಿರುವುದೆಂದು ಶ್ರುತಿಯು ಬೋಧಿಸುತ್ತಿದೆ[5]

---

೨ 1 ನಯತಿ ಸರ್ವಂ ಪ್ರಣಯತಿ, ಪ್ರೇರಯತೀತಿ ಯಾವತ್, ನೇತಾ ।

2 . ಅಗ್ನಿಶಬ್ದೋಽಯಂ ಅಗನೇತೃತಾವನ್ । ಅಹ. .

-ಬ್ರ ಭಾ. 1-9

3 'ಜಗನ್ನೇತೃತ್ವತಃ ಸತ್ಯನೇತಾ ವಿಷ್ಣುಃ ಪ್ರಕೀರ್ತಿತಃ'

-ತಂತ್ರ ಭಾಗವತ (ಭಾಗ. ತಾ. ನಿ. 10-3-26)

4 ... ಭೂತಾನಾಮಸ್ಮಿ ಚೇತನಾ ।

-ಗೀ. 10-22

... ಚೇತೋನೇತಾ ತು ಚೇತನಾ ।

ವಿಭೂತಿತತ್ತ್ವ (ಗೀ ತಾ )

5 ತಕ್ಷ್ಟೋ ನೇತಾ ತದಿದ್ವಪುರುಪಮಾ ಯೋ ಅಮುಂಚ್ಯತ

-ಕ. ನಿ.

ಯಸ್ತು ತಕ್ಷ್ಟೋ ಜಗತ್ಕರ್ತಾ ನೇತಾ ಚಾಶೇಷಸ್ಯ ಯಶ್ಶ್ಯೋಪಮಾ ಉಪಮಾಯಾಂ ವಿಷಯೋಽಮುಂಚ್ಯತ ನಿರುಪಮಃ ಸ ಭಗವಾನ್ ತದಿತ್ ತದೇವ ಜಗತ್ಕರ್ತೃ ನೇತೃರೂಪಂ ವಪುರೇವ....

-ರಾ. ಟಿ. (ಕ. ನಿ. ಟಿ.)

ತನ್ನನ್ನು ಹೇಗೆ ಉಪಾಸಿಸಬೇಕೆಂಬುದನ್ನು ಲಕ್ಷ್ಮೀದೇವಿಗೆ ಉಪದೇಶಿಸುತ್ತಿದ್ದ ಮಹಿದಾಸ ರೂಪಿ ಭಗವಂತನು ತಾನು ಮುಕ್ತಾಮುಕ್ತ ಪ್ರಪಂಚಕ್ಕೆ 'ನೇತಾರ' ಆಗಿರುವನೆಂಬುದನ್ನು ವಿವರವಾಗಿ ತಿಳಿಸಿರುವನು.[1]

ಚತುರ್ಮುಖ, ಇಂದ್ರ, ರುದ್ರ, ಇತರ ದೇವತೆಗಳು ಮುಂತಾದ ಮುಕ್ತಿಯೋಗ್ಯ ಜೀವರು, ಪೃಥಿವ್ಯಾದಿ ಪಂಚ ಮಹಾಭೂತಗಳು, ನಿತ್ಯಸಂಸಾರಿಗಳು, ಅಸುರ ಸ್ವಭಾವದ ಜೀವರು, ಅಂಡಜ, ಉದ್ಭಿಜ್ಜ, ಜರಾಯುಜ ಹಾಗೂ ಸ್ವೇದಜ ಪ್ರಭೇದದ ಪ್ರಾಣಿಗಳು ಮತ್ತು ಅವುಗಳ ಅಂಡಜತ್ವಾದಿ ಧರ್ಮಗಳು, ದೇವತೆಗಳೇ ಮೊದಲಾದವರ ಮನಸ್ಸು ಮುಂತಾದವುಗಳಿಂದ ಹುಟ್ಟಿದ ಕುದುರೆ, ಹಸು, ಪುರುಷ, ಆನೆ ಮೊದಲಾದವುಗಳು, ಕಲ್ಲು, ತೃಣ, ಕಾಷ್ಠ ಮುಂತಾದ ಪ್ರಾಣಿಗಳು, ಪ್ರಾಣಿಗಳಲ್ಲಿರುವ ಗಮನ, ಪತನ, ಸ್ಥಿರತ್ವಾದಿ ಧರ್ಮಗಳು—ಹೀಗೆ ಅಮುಕ್ತ ಪ್ರಪಂಚಕ್ಕೆ ಸೇರಿದ ಪ್ರತಿಯೊಂದೂ ಪ್ರಜ್ಞಾನಾಮಕ ಭಗವಂತನಲ್ಲೇ ಆಶ್ರಿತವಾಗಿದ್ದು, ಅವನಿಂದಲೇ ಪ್ರೇರಿಸಲ್ಪಡುವಂತಹದ್ದು ಬರೇ ಅಮುಕ್ತ ಪ್ರಪಂಚಕಷ್ಟೇ ಅಲ್ಲ, ಮುಕ್ತಪ್ರಪಂಚಕ್ಕೂ ಅವನೇ ನೇತೃ-ಮುಕ್ತಾತ್ಮನೂ ಪ್ರಜ್ಞಾನಾಮಕ ಭಗವಂತನಿಂದಲೇ ಪ್ರೇರಿತನಾಗಿ ಅವನ ಪ್ರಸಾದದಿಂದಲೇ ಲಿಂಗ ದೇಹದಿಂದ ಬಿಡುಗಡೆ ಹೊಂದಿ ವಿಷ್ಣುಲೋಕದಲ್ಲಿ ಸಕಲ ಕಾಮಗಳನ್ನು ಅನುಭವಿಸುವನು.[2]

---

1 ಕೋಯಮಾತ್ಮೇತಿ ವಯಮುಪಾಸ್ಮಹೇ ।

—ಐ ಈ. 2-5-1-1

'ಅಯಂ ವಿಷ್ಣುರ್ಹಿ ಕಿಂರೂಪ ಉಪಾಸ್ಯೋಽಸ್ಮಾಭಿರಚ್ಯುತಃ । ಇತ್ಯಪೃಚ್ಛತ್ ರಮಾ ದೇವೀ ಮಹಿದಾಸಂ ಜನಾರ್ದನಮ್ । ಆಹ ತಾಂ ಮಹಿದಾಸೋಽಥ....'

—ಐತರೇಯ ಸಂಹಿತಾ (ಐ. ಉ ಭಾ)

2 'ಏತೇ ಸರ್ವೇ ದೇವಾ ಇಮಾನಿ ಚ ಪಂಚಭೂತಾನಿ ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ಬೀಜಾನೀತರಾಣಿ ಚೇತರಾಣಿ ಚಾಂಡಜಾನಿ ಚ ಜಾರುಜಾನಿ ಚ ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ ಕಿಂಚೇದಂ ಪ್ರಾಣಿ ಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋಽಲೋಕಃ । ಸ ಏತೇನ ಪ್ರಜ್ಞೇನಾತ್ಮನಾಽಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್...'

—ಐ ಉ. 2-5-1-3, 4

೩ ಬದುಕಿಸುವವನು[1]

ಯಾವ ನೀನು ಒಂಭತ್ತು ತತ್ತ್ವಾಭಿಮಾನಿ ದೇವತೆಗಳನ್ನೂ, ತದುಪಲಕ್ಷಿತರಾದ ಸಕಲ ಪ್ರಾಣಿಗಳನ್ನೂ ಬದುಕಿಸುವಿಯೋ ಆ ಕಾರಣದಿಂದ ನೀನೇ ಮುಖ್ಯವಾಗಿ ಪ್ರಾಣ ಎಂದೆನಿಸಿರುವವ

---

ಪ್ರಥಮೋತರಾಣೀತಿಶಬ್ದೋ ಮಾನುಷಾಣಾಂ। ದ್ವಿತೀಯೋಽಸುರಾದೀನಾಮ್ । 'ಅಂಡಜಾನೀತಿ ಚ' ಇತ್ಯಾದ್ಯುಕ್ತ್ವಾ ಪುನಃ 'ಅಶ್ವಾ ಗಾವಃ' ಇತ್ಯಾದಿ ದೇವಾದೀನಾಂ ಮನಆದೇರೇವ ಜಾತಾನಾಮಪಿ ಸ್ವೀಕಾರಾರ್ಥಮ್ । ಅಂಡಜತ್ವಾದ್ಯುತ್ಪತ್ತಿಪ್ರಕಾರೋಽಪಿ ವಿಷ್ಣ್ವಧೀನ ಇತಿ ಜ್ಞಾಪಯಿತುಂ ತತ್ಕಥನಮ್ । 'ತಥಾಽಶ್ವಾನಸ್ತೃಣಕಾಷ್ಠಾಶ್ಚ ಸರ್ವೇ ದಿಷ್ಟಕ್ಷಯೇ ಸ್ವಾಂ ಪ್ರಕೃತಿಂ ಭಜಂತೇ' ಇತಿ ಭಾರತವಚನಾದಶ್ವಾದೀನಾಮಪಿ ಪ್ರಾಣಿತ್ವಾತ್ ತತ್ ಸ್ವೀಕಾರಾರ್ಥಂ ಪ್ರಾಣೀತಿ । ಗಮನಪತನ ಸ್ಥಿರತ್ವಾದಯೋಽಪಿ ಭಾವಾ ವಿಷ್ಣ್ವಧೀನಾ ಇತಿ ಜ್ಞಾಪಯಿತುಂ ಜಂಗಮಮಿತ್ಯಾದಿವಚನಮ್।' ಪ್ರಜ್ಞಾನೇತ್ರೋಽ ಲೋಕಃ' ಇತ್ಯುಕ್ತೇ ಕಥಂ ಪ್ರಜ್ಞಾನೇತ್ರೋ ಮುಕ್ತ ಇತ್ಯಾಕಾಂಕ್ಷಾಯಾಂ ತಸ್ಯೈವ ವ್ಯಾಖ್ಯಾನಮ್—'ಸ ಏತೇನ ಪ್ರಜ್ಞೇನಾಽತ್ಮನಾ' ಇತ್ಯಾದಿ ॥

ಐ. ಉ. ಭಾ.

ಬ್ರಹ್ಮಾ ಶಿವಶ್ಚ ಶಕ್ರಶ್ಚ ದೇವಾಶ್ಚಾನ್ಯೇ ಸಮಸ್ತಶಃ । ತಥೈವ ಪಂಚಭೂತಾನಿ ಪುಣ್ಯಪಾಪವಿಮಿಶ್ರಿತಾಃ । ಕ್ಷುದ್ರಾಶ್ಚಾನ್ಯಾಸ್ತು ಯೇ ಮರ್ತ್ಯಾ ಇತರೇ ಅಸುರಾ ಅಪಿ । ಸರ್ವಂ ಜಗದಿದಂ ವಿಷ್ಣೋರ್ವಶೇ ತಿಷ್ಠತಿ ಸರ್ವದಾ । ತೇನೈವ ನೀಯತೇ ನಿತ್ಯಂ ತಸ್ಮಿನ್ನೇವ ಪ್ರತಿಷ್ಠಿತಮ್ । ಮುಕ್ತಾ ಯೇಽತ್ರಲೋಕನಾಮಾನೋ ನೀಯಂತೇ ತೇಽಪಿ ವಿಷ್ಣುನಾ ।

ಸೋಽಲೋಕನಾಮಾ ಮುಕ್ತಸ್ತು ಚಿತಿಮಾತ್ರಸ್ವರೂಪತಃ । ಪ್ರಕೃಷ್ಟಜ್ಞಾನರೂಪಸ್ಯ ಪ್ರಸಾದಾತ್ ಪರಮಾತ್ಮನಃ । ಅಸ್ಮಾದ್ದೇಹಾತ್ ಸಮುತ್ಕ್ರಮ್ಯ ಗತ್ವೋರ್ಧ್ವಂ ಲೋಕಮುತ್ತಮಮ್ । ಅಮೃತಃ ಸನ್ ವಿಷ್ಣುಲೋಕೇ ಭೋಗಾನ್ ಸಂಪ್ರಾಪ್ಯ ಪುಷ್ಕಲಾನ್ । ಭುಂಕ್ತೇ ಯಥೇಷ್ಟತೋ ನಿತ್ಯಂ. '

–ಐತರೇಯ ಸಂಹಿತಾ (ಐ. ಉ. 2-5-1-3,4)

೩ 1 'ಪ್ರಣೇತಾ . ವಿಷ್ಣುರೇವೈಕಃ' ಇತ್ಯಣುಭಾಷ್ಯೇ (1-2) ಪ್ರಯುಕ್ತಸ್ಯ ಪ್ರಣೇತೃಶಬ್ದಸ್ಯ ಜೀವನಹೇತ್ವರ್ಥಕತ್ವಂ ತತ್ತ್ವಮಂಜರ್ಯಾಮುಕ್ತಮ್—'ಪ್ರಣೇತಾ ಜೀವನಹೇತುಃ'

ನೆಂದು ಶ್ರುತಿ ಸಾರುತ್ತಿದೆ[1] ಪ್ರಾಣ ಅಪಾನಾದಿ ಸ್ವರೂಪ ಭೇದವುಳ್ಳ ಪ್ರಾಣದೇವನೂ ಶ್ರೀಹರಿಯನ್ನು ಆಶ್ರಯಿಸಿಕೊಂಡೇ ಜೀವಾತ್ಮರನ್ನು ಬದುಕಿಸುತ್ತಿರುವನೇ ಹೊರತು ಸ್ವತಂತ್ರವಾಗಿ ಅಲ್ಲ—ಎಂದು ಯಮದೇವ ಸಂದೇಶಿಸಿರುವನು[2]

೪ (ಜೀವಿಗಳ ಪುಣ್ಯಪಾಪಕರ್ಮಾನುಗುಣವಾಗಿ ಸ್ವರ್ಗಾದಿ ಲೋಕಗಳಿಗೆ ಕೊಂಡೊಯ್ಯುವವನು[3]

ಪುಣ್ಯಶಾಲಿ ಜೀವಾತ್ಮನ ಪುಣ್ಯವನ್ನಿಟ್ಟುಕೊಂಡು ಅವನನ್ನು ಸ್ವರ್ಗಾದಿ ಪುಣ್ಯ ಲೋಕಗಳಿಗೂ ಪಾಪಿ ಜೀವಾತ್ಮನ ಪಾಪಕರ್ಮಾನುಗುಣವಾಗಿ ಅವನನ್ನು ದುಃಖಪೂರ್ಣ ನರಕಾದಿಲೋಕಗಳಿಗೂ ಭಗವಂತನು ಕೊಂಡೊಯ್ಯುವನು[4]

೫ (ಮಹಾಭಾರತ ಯುದ್ಧದಲ್ಲಿ ಪಾಂಡವರ ಸೇನೆಗೆ) ನೇತಾರನಾಗಿದ್ದವನು

ಶ್ರೀಕೃಷ್ಣನೆದುರು ಕರ್ಣನು,—ಯಾವ ಯುಧಿಷ್ಠಿರನಿಗೆ ನೇತಾರ ಹೃಷೀಕೇಶನಾಗಿರುವನೋ,

---

1 'ತವ ಸ್ಯೈ ತ್ವಂ ಪ್ರಾಣೋ ಅಭವಃ ಯೇನ ವೇದಾನ್ ಪ್ರಾಣಯಸೇ ನವ'
–ತೈ ಆ 3-14 (ಬ್ರ ಸೂ. ಭಾ. 1-1-23)

2 ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ । ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ
ಕಾ. ಉ 2-2-5

ನ ಕೇವಲಂ ಪ್ರಾಣ ಏವ ಚೇತನಾನಾಂ ವಿಧಾರಕಃ । ಕಿಂತು ವಿಷ್ಣುಂ ಸಮಾಶ್ರಿತ್ಯ ಪ್ರಾಣೋ ಜೀವಾನ್ ಬಿಭರ್ತ್ಯಯಮ್ ।
–ಮಹಾಕೌರ್ಮ (ಕಾ. ಉ. ಭಾ)

೪ 3 ನೇತಾ ತತ್ತದ್ಯೋಗ ಫಲನಿಯಾಮಕಃ ।
–ಸ. ಸಂ.

ನಯತಿ ಜೀವಾತ್ಮನಃ ತತ್ತತ್ಕೃತಪುಣ್ಯಪಾಪಾನುಗುಣ್ಯೇನ ಸ್ವರ್ಗಾದಿಲೋಕಾನ್ ಪ್ರಾಪಯತೀತಿ ನೇತಾ ।

4 'ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ..'
–ಬ್ರ. ಸೂ. ಭಾ. 2-1-35

ಅರ್ಜುನನೇ ಯೋದ್ಧಾರನಾಗಿರುವನೋ ಅಂತಹ ಧರ್ಮರಾಜನು ಶಾಶ್ವತವಾಗಿ ರಾಜನಾಗಿ ಇರಲಿ—ಎಂದು ಹಾರೈಸುವನು[1]

## ಜಿಜ್ಞಾಸೆ

### [ನಿಯಮನವನ್ನು ಬಿಡಲಿಕ್ಕೆ ಕಾರಣ]

ಪ್ರ – 'ವಿಶ್ವೋತ್ಪತ್ತಿ ಸ್ಥಿತಿ ಧ್ವಂಸಕಾರಣಂ ರಮಣಂ ಶ್ರಿಯಃ' ಇದೇ ಮೊದಲಾದ ಗ್ರಂಥಗಳಲ್ಲಿ ಪರಮಾತ್ಮನು ವಿಶ್ವದ ಉತ್ಪತ್ತಿ ಪಾಲನ ನಾಶಗಳಿಗೆ ಕಾರಣನು ಎಂದು ವರ್ಣಿಸಿದ್ದಾರೆ. ಜನ್ಮಾದ್ಯಷ್ಟಕದಲ್ಲಿ ಉತ್ಪತ್ತಿಸ್ಥಿತಿಧ್ವಂಸಗಳು ಸರ್ವಪದಾರ್ಥಸಂಬಂಧಿಗಳು ಜ್ಞಾನಾಜ್ಞಾನಬಂಧ ಮೋಕ್ಷಗಳು ಸರ್ವಸಂಬಂಧಿಗಳು ಅಲ್ಲ. ಈ ಕಾರಣದಿಂದ ಉತ್ಪತ್ತಿಸ್ಥಿತಿಧ್ವಂಸಗಳನ್ನು ಮಾತ್ರ ಹೇಳುವದು ಎಂದು ಸಮಾಧಾನವು ಜ್ಞಾನಾಜ್ಞಾನಬಂಧಮೋಕ್ಷಗಳನ್ನು ಬಿಡಲಿಕ್ಕೆ ಮಾತ್ರ ಕಾರಣವಾಗುತ್ತದೆ ನಿಯಮನವನ್ನು ಬಿಡಲಿಕ್ಕೆ ಕಾರಣವಾಗುವದಿಲ್ಲ. ಉತ್ಪತ್ತ್ಯಾದಿ ಮೂರು ಹೇಗೆ ಸರ್ವಸಂಬಂಧಿಗಳೋ ಹಾಗೆಯೇ ನಿಯಮನವೂ ಸರ್ವಸಂಬಧಿಯೇ ಆಗಿರುತ್ತದೆ ಆದುದರಿಂದ ನಿಯಮನವನ್ನು ಸೇರಿಸಿಕೊಂಡು ಉತ್ಪತ್ತ್ಯಾದಿಕಾರಣನು ಪರಮಾತ್ಮನು ಎಂದು ಹೇಳುವದೇ ಯುಕ್ತವಲ್ಲವೇ? ಉತ್ಪತ್ತ್ಯಾದಿತ್ರಯ ಮಾತ್ರ ಕಾರಣತ್ವವನ್ನು ಗ್ರಂಥಗಳಲ್ಲಿ ಹೇಳಲಿಕ್ಕೆ ಏನು ಕಾರಣ?

ಉ – ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ ಬ್ರಹ್ಮನು ಮಾತ್ರ ಸೃಷ್ಟಿಕರ್ತ ವಿಷ್ಣು ಸೃಷ್ಟಿಕರ್ತನೂ ಅಲ್ಲ, ಸಂಹಾರಕರ್ತನೂ ಅಲ್ಲ. ಕೇವಲ ಪಾಲನಕರ್ತ ಅವನು ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ ಸೃಷ್ಟಿಸಂಹಾರಗಳ ವಿಷಯದಲ್ಲಿ ಬ್ರಹ್ಮರುದ್ರರು ನಿಮಿತ್ತ ಮಾತ್ರರು. ಅವುಗಳಿಗೆ ಮುಖ್ಯ ಕಾರಣನು ವಿಷ್ಣುವೇ ಆಗಿದ್ದಾನೆ. ಈ ವಿಷಯವು 'ನಿಮಿತ್ತಮಾತ್ರಮೀಶಸ್ಯ ವಿಶ್ವಸರ್ಗ ನಿರೋಧಯೋಃ ಹಿರಣ್ಯಗರ್ಭಃ ಶರ್ವಶ್ಚ' ಈ ಭಾಗವತದಲ್ಲಿ ಸ್ಪಷ್ಟ ಈ ವಿಷಯವನ್ನು ತಿಳಿಸುವದಕ್ಕೋಸ್ಕರ'ವಿಶ್ವೋತ್ಪತ್ತಿ ಸ್ಥಿತಿಧ್ವಂಸಕಾರಣಂ'ಎಂದು ಹೇಳಿದ್ದು ಜಗನ್ನಿಯಾಮಕರು ಇನ್ನೊಬ್ಬರು ಎಂದು ಯಾವ ವಾದಿಗಳೂ ಹೇಳುತ್ತಾ ಇಲ್ಲ. ಆದುದರಿಂದ ನಿಯಾಮಕತ್ವವನ್ನು ಬಿಟ್ಟು ಹೇಳಿದ್ದು ಕೂಡುತ್ತದ.

---

1 ಸ ಏವ ರಾಜಾ ಧರ್ಮಾತ್ಮಾ ಶಾಶ್ವತೋಽಸ್ತು ಯುಧಿಷ್ಠಿರಃ ।

**ನೇತಾ ಯಸ್ಯ ಹೃಷೀಕೇಶೋ ಯೋದ್ಧಾ ಯಸ್ಯ ಧನಂಜಯಃ ॥**

**–ಮ. ಭಾರ. ಉದ್ಯೋಗ 141-23**

## ೨೨೩ ಸಮೀರಣಃ

೧ (ಎಲ್ಲರನ್ನೂ) ಚೆನ್ನಾಗಿ ಪ್ರೇರಿಸುವವನು[1]

ಗುರುಹಿರಿಯರೇ ಮೊದಲಾದವರು ಉಪದೇಶಾದಿಗಳಿಂದ ನಮ್ಮ ಬಾಹ್ಯ ಚಟುವಟಿಕಗಳನ್ನು ಪ್ರೇರಿಸಬಹುದು ಆದರೆ ಆಂತರಿಕವಾಗಿ ಅವರು ಪ್ರೇರಿಸಲಾರರು ತತ್ತ್ವಾಭಿಮಾನಿ ದೇವತೆಗಳು, ಹಾಗೂ ಕಾಮಾದಿಗಳಿಗೆ ಅಭಿಮಾನಿಗಳಾದ ಅಸುರರು ಆಂತರಿಕಪ್ರೇರಣೆಯನ್ನೇ ನೀಡಬಲ್ಲರಾದರೂ ಸ್ವತಂತ್ರವಾಗಿ ಅವರು ಪ್ರೇರಿಸಲಾರರು ಅಖಿಲ ಪ್ರೇರಕನಾದ ಭಗವಂತನ ಪ್ರೇರಣೆಗನುಗುಣವಾಗಿ ಯಷ್ಟೇ ಅವರೂ ಪ್ರೇರಿಸುವುದು[2] ಆದ್ದರಿಂದ ಒಳಗಿಂದ ಹಾಗೂ ಹೊರಗಿಂದ ಸ್ವತಂತ್ರವಾಗಿ ಲಕ್ಷ್ಮೀ ದೇವಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರನ್ನೂ ಪ್ರೇರಿಸಬಲ್ಲವನು ಭಗವಂತನೊಬ್ಬನೇ ಪ್ರತಿಯೊಬ್ಬರ ಸ್ವಭಾವ, ಸತ್ತಾದಿಗಳನ್ನೂ ಅನುಗ್ರಹಿಸಿರುವ[3] ಅವನು ಪ್ರತಿಯೊಬ್ಬರಿಗೂ ಅಂತರ್ಯಾಮಿಯಾಗಿ ಪ್ರೇರಿಸುವವನು[4]

೨ ಪಕ್ಷಪಾತವಿಲ್ಲದೆ, ಫಲಾಭಿಲಾಷೆ ಇಲ್ಲದೆ, ಅನಾಯಾಸವಾಗಿ ಪ್ರೇರಿಸುವವನು.[5]

---

೧ 1 ಸರ್ವಂ ಸಮೀರಯತಿ ಪ್ರೇರಯತೀತಿ ಸಮೀರಣಃ । 'ಈರ ಗತೌ'

2 ಅಖಿಲಪ್ರೇರಕೋ ವಿಷ್ಣುರ್ಬ್ರಹ್ಮಾದ್ಯಾಸ್ತದನಾಂತರಾಃ । ಅಸುರಾ ಅಶುಭೇಷ್ವೇವ ಕಾಮಾ-ದೇರಭಿಮಾನಿನಃ ।

-ಬ್ರಹ್ಮತರ್ಕ (ಗೀ. ತಾ 3-37)

* ತಥಾ ಜೀವೇಷು ಸರ್ವೇಷು ಪ್ರವಿಷ್ಟಃ ಪ್ರೇರಣೇಚ್ಛಯಾ ।
ಕೋ ಹನ್ಯಸ್ತ್ವನ್ಯತೇ ವಿಷ್ಣೋರೇತತ್ ಕರ್ಮ ಕರಿಷ್ಯತಿ ।

-ಐತರೇಯ ಸಂಹಿತಾ (ಐ. ಉ ಭಾ. 2-3-3-9)

3 ಸ್ವಭಾವಸತ್ತಾದಾತೃತ್ವಂ ಯಂತೃತ್ವಮಿತಿ ಕಥ್ಯತೇ ।

-ಬ್ರಹ್ಮತರ್ಕ (ಬೃ. ಉ ಭಾ-5-7)

4 'ಸ್ವತಂತ್ರಃ ಸನ್ ನಿಯಂತಾಽಸಾವಂತರ್ಯಾಮೀತಿ ತತ್ ಸ್ಮೃತಃ । ದೇವತಾನಾಂ ಸ್ವಭಾವೋಽಪಿ ಸ್ವರೂಪಮಪಿ ಸರ್ವದಾ । ತದಧೀನಂ ತತೋ ಯಾಮೀ ವಾಸುದೇವಃ ಪ್ರಕೀರ್ತಿತಃ'

-ಬ್ರಹ್ಮತರ್ಕ (ಬೃ. ಉ. ಭಾ. 5-7)

೨ 5 ಸಮ್ಯಕ್ ಈರಯತಿ ಪ್ರೇರಯತೀತಿ ಸಮೀರಣಃ । ಈರಣೇ ಸಮ್ಯಕ್ತ್ವಂ ಚ ಪಕ್ಷಪಾತ-ರಾಹಿತ್ಯಂ, ಫಲಾಭಿಲಾಷರಾಹಿತ್ಯಂ, ಪ್ರಯತ್ನರಾಹಿತ್ಯಂ ಚ ।

ಜೀವಾತ್ಮರ ಅನಾದಿಸಿದ್ಧವಾದ ಸ್ವರೂಪಯೋಗ್ಯತೆಗೆ ಅನುಗುಣವಾಗಿಯೇ ಪ್ರೇರಿಸುವ ಭಗವಂತನು ಯಾರ ಪ್ರೇರಣೆಯಲ್ಲೂ ಸ್ವರೂಪ ಯೋಗ್ಯತೆಯನ್ನು ಮೀರಿ ಪ್ರೇರಿಸುವ ಮೂಲಕ ಪಕ್ಷಪಾತವನ್ನು ತೋರಿಸುವುದಿಲ್ಲ ಆನಂದ ಪರಿಪೂರ್ಣನಾಗಿ ಉಳಿದವರ ಪ್ರೇರಣೆಯಲ್ಲಿ ತೊಡಗುವ ಅವನ ಪ್ರವೃತ್ತಿಗೆ ಯಾವುದೇ ಸ್ವಪ್ರಯೋಜನವು ಉದ್ದೇಶವಾಗಿರುವುದಿಲ್ಲ. ಸರ್ವಸಮರ್ಥ ಹಾಗೂ ಸ್ವತಂತ್ರನಾದ ಅವನು ಕಿಂಚಿತ್ತೂ ಪ್ರಯಾಸವಿಲ್ಲದೆ ರಮಾ ಬ್ರಹ್ಮಾದಿಗಳೆಲ್ಲರನ್ನೂ ಪ್ರೇರಿಸುವವನು

೩. (ಪ್ರೇರಕನಾಗಿ ಎಲ್ಲದರಲ್ಲಿ) ಚೆನ್ನಾಗಿ ಪ್ರವೇಶಿಸಿರುವವನು[1]

೪ (ಎಲ್ಲವನ್ನೂ) ಚೆನ್ನಾಗಿ ಬಲ್ಲವನು.[2]

ಭಗವಂತನು ಪ್ರತಿಯೊಂದು ಪದಾರ್ಥವನ್ನೂ ಪ್ರೇರಿಸುವುದಕ್ಕಾಗಿ ಪ್ರತಿಯೊಂದು ಪದಾರ್ಥದಲ್ಲೂ ಪ್ರವೇಶಿಸಿರುವನು. ಹಾಗೆ ಪ್ರವೇಶಿಸಿದರೂ ಆ ಪದಾರ್ಥದ ದೋಷಗಳ ಲೇಪ ಅವನಿಗಿಲ್ಲ ಹಾಗೆಯೇ ಭಗವಂತನು ಎಲ್ಲವನ್ನೂ ಕೂಲಂಕಷವಾಗಿ ಬಲ್ಲವನಾದುದರಿಂದಲೇ ಆಯಾಯ ಪದಾರ್ಥದ ಸ್ವರೂಪಯೋಗ್ಯತೆಗೆ ತಕ್ಕಂತೆ ಅದನ್ನು ಪ್ರೇರಿಸಲು ಸಮರ್ಥನಾಗಿರುವನು

೫ (ದೋಷದೂರನಾಗಿರುವ ಪ್ರಯುಕ್ತ) 'ಸಂ' ಎನಿಸುವ ತನ್ನನ್ನೂ ಬಲ್ಲವನು[3]

ಭಗವಂತನು ಉಳಿದ ಪದಾರ್ಥಗಳನ್ನಷ್ಟೇ ಅಲ್ಲದೆ, ಪರಿಪೂರ್ಣನಾದ, ಅನಂತನಾದ ತನ್ನನ್ನೂ ಬಲ್ಲವನಾಗಿರುವನು. ಆದ್ದರಿಂದಲೇ ಸರ್ವಪ್ರೇರಕತ್ವರೂಪವಾದ ಅಸಾಧಾರಣ ಮಹಿಮೆ ಅವನಲ್ಲಿ ಸಂಭಾವಿತ

೬ ಇತರ ಜೀವಾತ್ಮರಿಗೆ ಪ್ರೇರಕರಾಗಿರುವ ಚತುರ್ಮುಖ, ಪ್ರಾಣದೇವರು ಮೊದ

---

೩ 1 ಸಮ್ಯಕ್ ಈರ್ತೇ ಸರ್ವತ್ರ ಗಚ್ಛತಿ ಪ್ರವಿಶತೀತಿ ಯಾವತ್, ಸಮೀರಣಃ। 'ಈರ ಗತೌ'। ಪ್ರವೇಶೇ ಸಮ್ಯಕ್ತ್ವಂ ತತ್ತತ್ಪ್ರವೇಶಪ್ರಯುಕ್ತತತ್ತದ್ದೋಷಲೇಶಾಭಾವಃ ।

೪ 2 ಸಮ್ಯಕ್ ಈರ್ತೇ ಸರ್ವಂ ಗಚ್ಛತಿ ಜಾನಾತೀತಿ ಸಮೀರಣಃ । ಗತ್ಯರ್ಥಾನಾಂ ಜ್ಞಾನಾರ್ಥಕತ್ವಂ ಚ ಪ್ರಾಜ್ಞಸಮ್ಮತಮ್ । ಸರ್ವಜ್ಞಾನೇ ಸಮ್ಯಕ್ತ್ವಂ ಭ್ರಮಾದಿರಾಹಿತ್ಯಮ್ ।

೫ 3 ಸಮೀಚೀನತ್ವಾತ್ ಸಂ ಭಗವಾನ್ । ತಾದೃಶಂ ಸ್ವಂ ಈರ್ತೇ ಅವಗಚ್ಛತೀತಿ ಸಮೀರಣಃ ।

ಲಾದವರಿಗೆ ಜಗತ್ತಿನ ಬಗ್ಗೆ ಹಾಗೂ ತನ್ನ ಬಗ್ಗೆ ನಿಶ್ಚಯಾತ್ಮಕ ಜ್ಞಾನವನ್ನು ಅನುಗ್ರಹಿಸು ವವನು[1]

೭ ತನ್ನನ್ನು ಚೆನ್ನಾಗಿ ಬಲ್ಲ ಚತುರ್ಮುಖ, ಪ್ರಾಣದೇವರೇ ಮೊದಲಾದವರಿಗೆ ಸುಖವನ್ನು ಅನುಗ್ರಹಿಸುವವನು[2]

೮ ಚೆನ್ನಾಗಿ ಪ್ರೇರಿಸುವ ಪ್ರಾಣದೇವರಿಗೆ ಸುಖವನ್ನು ಅನುಗ್ರಹಿಸುವವನು[3]

೯ ಸಮೀಚೀನನಾಗಿರುವವನು: ಎಲ್ಲೆಡೆ ಇರುವವನು ಅಥವಾ ಎಲ್ಲವನ್ನೂ ಬಲ್ಲವನು ಹಾಗೂ ಸುಖ ಸ್ವರೂಪಿ.[4]

೧೦ ಲಕ್ಷ್ಮೀದೇವಿಯ ಸಮೀಚೀನವಾದ ಸ್ತುತಿರೂಪವಾದ ಶಬ್ದಕ್ಕೆ ವಿಷಯನಾಗಿರು ವವನು.[5]

---

1 ಜೀವಾನ್ ಸಮ್ಯಕ್ ಈರಯಂತಿ ಪ್ರೇರಯಂತೀತಿ ಸಮೀರಾಃ ಬ್ರಹ್ಮಾದಯಃ । ತೇಷಾಂ ಣಃ ಜಗದ್ವಿಷಯೇ ಭಗವದ್ವಿಷಯೇ ಚ ನಿಶ್ಚಯಾತ್ಮಕಂ ಜ್ಞಾನಂ ಯಸ್ಮಾತ್ಸಃ ಸಮೀರಣಃ । 'ಣಕಾರಃ ಸೂಕರೇ ಜ್ಞಾನೇ ನಿಶ್ಚಯೇ ನಿರ್ಣಯೇಽಪಿ ಚ'-ಏಕಾಕ್ಷರಕೋಶಃ ।

೭ 2 ಸಂ ಸಮ್ಯಕ್ ಈರತೇ ಸ್ವಂ ಜಾನಂತೀತಿ ಸಮೀರಾಃ ಚತುರ್ಮುಖ ವಾಯ್ವಾದಯಃ । ತೇಷಾಂ ಣಃ ಸುಖಂ ಯಸ್ಮಾತ್ಸಃ ಸಮೀರಣಃ। '. ಣೋ ಹಿ ನಿವೃತಿವಾಚಕಃ'-ಋ.ಭಾ.

೮ 3 'ಸಮೀರಮಾರುತಮರುಜ್ಜಗತ್ಪ್ರಾಣಸಮೀರಣಾಃ' -ಇತಿ ಸಮೀರಃ ಮುಖ್ಯಪ್ರಾಣಃ ತಸ್ಯ ಣಃ ಸುಖಂ ಯಸ್ಮಾತ್ಸಃ ಸಮೀರಣಃ ।

೯ 4 ಸಮೀಚೀನತ್ವಾತ್ ಸಮ್ । ಈರ್ತೇ ಸರ್ವತ್ರ ಗಚ್ಛತಿ, ಸರ್ವಂ ಅವಗಚ್ಛತಿ, ವಾ ಈರಃ । ಸುಖರೂಪತ್ವಾತ್ ಣಃ ।

೧೦ 5 ಸಂ ಸಮ್ಯಕ್ ಯಾಃ (ಈ ಶಬ್ದವಾಚ್ಯಯಾಃ) ಲಕ್ಷ್ಮ್ಯಾಃ ರಣೋ 'ಜಯ ಜಯ ಜಹ್ಯಜಾಮಿ'ತಿ ಸ್ತುತಿರೂಪಶಬ್ದೋ ಯಸ್ಮಿನ್ಸ ಇತಿ ।

-ಸ. ಸಂ.

ಶ್ರೀ, ಭೂ ಹಾಗೂ ದುರ್ಗಾ ಎಂಬುದಾಗಿ ಲಕ್ಷ್ಮೀದೇವಿಯು ಮೂರು ರೂಪಗಳಿಂದ ಇರುವಳು. ಈ ಮೂರು ರೂಪಗಳ ಜೊತೆ ಪ್ರಳಯ ಕಾಲದಲ್ಲಿ ಮಲಗಿರುವ ಭಗವಂತನನ್ನು ಶ್ರುತಿರೂಪಳಾದ ಲಕ್ಷ್ಮೀದೇವಿಯು ಹೀಗೆ ಸ್ತುತಿಸುವಳು—ಜೀವಾಚ್ಛಾದಿಕವಾದ ಪ್ರಕೃತಿಯನ್ನು ನಾಶಮಾಡು ಪರಮಾಚ್ಛಾದಿಕವಾದ ಪ್ರಕೃತಿಯನ್ನು ಸರಿಸು. ಇದರಿಂದಾಗಿ ನಿನ್ನ ಸ್ವರೂಪವನ್ನು ಪ್ರಕಾಶಗೊಳಿಸು ಜೀವಾತ್ಮನ ಗುಣಗಳು ಪ್ರಕಟವಾಗುವಂತೆ ಮಾಡು—ಎಂಬುದಾಗಿ ತಂತ್ರ ಭಾಗವತ ನಿರೂಪಿಸಿದೆ.[1]

೧೧ (ಉಳಿದೆಲ್ಲರೂ ತನ್ನ ಬಗ್ಗೆ) ಕಂಪಿಸುವಂತೆ ಮಾಡುವವನು.[2]

ಉಳಿದೆಲ್ಲವೂ ಭಗವಂತನ ದೆಸೆಯಿಂದ ಭಯಪಡುವುದು, ಆದ್ದರಿಂದಲೇ ಕಂಪಿಸುವುದು, ಎಂದು ಈಶಾವಾಸ್ಯೋಪನಿಷತ್ತು ಸಂದೇಶಿಸಿದೆ[3]

## ಜಿಜ್ಞಾಸೆ

[ಅಂತಃ ಪ್ರೇರಣೆ ಮಾಡುವುದಿಲ್ಲ]

ಪ್ರ - ಪಾಂಡವರು ವನಕ್ಕೆ ಹೋದ ಮೇಲೆ ಆ ಪಾಂಡವರನ್ನು ಕೊಲ್ಲುವದಕ್ಕೋಸ್ಕರ ಧಾರ್ತರಾಷ್ಟ್ರರು ವನಕ್ಕೆ ಹೋಗಲು ಉದ್ಯೋಗ ಮಾಡಿದಾಗ ಶ್ರೀ ವೇದವ್ಯಾಸರೂಪಿ ಪರಮಾತ್ಮನು ಧೃತರಾಷ್ಟ್ರನ ಹತ್ತಿರ ಬಂದು ನಿನ್ನ ಮಕ್ಕಳನ್ನು ವಿನಾಶೋದ್ಯೋಗದಿಂದ ನಿವೃತ್ತರನ್ನು ಮಾಡು ಎಂದು ಹೇಳಿದರೆ ಧೃತರಾಷ್ಟ್ರನು ನೀವೇ ನನ್ನ ಮಕ್ಕಳಿಗೆ ಹೇಳಬೇಕು ಎಂದು ಕೇಳಿಕೊಂಡನು ಆಗ ಶ್ರೀವೇದವ್ಯಾಸರು ತಾನು ದುರ್ಯೋಧನಾದಿಗಳಿಂದ ಸಂವಾದ ಮಾಡಲಾರೆ

---

1 ಶ್ರೀರ್ಭೂರ್ದುರ್ಗೇತಿ ಯಾ ಭಿನ್ನಾ ಪ್ರಕೃತಿಃ ಶಕ್ತಿರುಚ್ಯತೇ । . ತಾಭಿಃ ಶಯಾನಂ ಪುರುಷಂ ಸ್ತೌತಿ ತು ಶ್ರುತಿರೂಪಿಣೀ । ಅಸ್ತ್ಯಾತ್ ಪ್ರಕಾಶಯಾತ್ಮಾನಂ ಪ್ರಕೃತಿಂ ಜೀವಬಂಧನಾಮ್ । ಜಹಿ ದೋಷೈರ್ಯಯಾ ಸರ್ವೇ ಗುಣಾ ಜೀವಸ್ಯ ಸಂವೃತಾಃ'

-ತಂತ್ರ ಭಾಗವತ (ಭಾಗ. ತಾ. ನಿ. 10-94-12)

೧೧ 2 ಸಮ್ಯಕ್ ಈರಯತಿ ಕಂಪಯತೀ ಇತಿ ಸಮೀರಣಃ । 'ಈರ ಗತೌ ಕಂಪನೇ ಚ'

3 'ತದೇಜತಿ......'

ಈ. ಉ. 1-5

ತದೇಜತಿ ತತ ಏಜತ್ಯನ್ಯತ್ ।

'ತತೋ ಬಿಭೇತಿ ಸರ್ವೋಽಪಿ....'

-ತತ್ತ್ವಸಂಹಿತಾ (ಈ. ಉ. ಭಾ.)

ಅವರು ದುಷ್ಟರು ಎಂದು ಹೇಳಿ ಹೋದರು. ಇಲ್ಲಿ ಒಂದು ಪ್ರಶ್ನೆ - ಸರ್ವರಿಗೂ ಅಂತಃ ಪ್ರೇರಕನಾದ ಪರಮಾತ್ಮನು ಧಾರ್ತರಾಷ್ಟ್ರರಿಗೆ ಪಾಂಡವರ ವಿನಾಶೋದ್ಯೋಗವನ್ನು ಮಾಡದಂತೆ ಅಂತಃ ಪ್ರೇರಣವನ್ನು ಮಾಡಬಹುದಿತ್ತು. ಹಾಗೆ ಏಕೆ ಮಾಡಲಿಲ್ಲ?

ಉ:- 'ಸರ್ವಾಶ್ಚ ಚೇಷ್ಟಾಃ ಭಗವನ್ನಿಯುಕ್ತಾಃ ಸದಾ ಸಮಸ್ತಸ್ಯ ಚಿತೋಽಚಿತಶ್ಚ । ತಥಾಪಿ ವಿಷ್ಣುರ್ವಿನಿವರ್ತಯೇತ್ ಕ್ವಚಿತ್ ವಾಚಾ ವಿಧತ್ತೇ ಚ ಜನಾನ್ ವಿಡಂಬಯನ್' ಎಂದು ತಾತ್ಪರ್ಯ ನಿರ್ಣಯ ಗ್ರಂಥದಲ್ಲಿ ಈ ಪ್ರಶ್ನೆಗೆ ಸಮಾಧಾನವನ್ನು ಹೇಳಿದ್ದಾರೆ. ಅದೇನೆಂದರೆ ಪರಮಾತ್ಮನು ಮೂಲರೂಪದಿಂದ ಅಂತಃಪ್ರೇರಣವನ್ನು ಮಾಡತಕ್ಕವನಾದರೂ ಅವತಾರ ರೂಪಗಳಲ್ಲಿ ಲೋಕವಿಡಂಬವನ್ನು ಮಾಡುತ್ತಾ ಅಂತಃಪ್ರೇರಣ ಮಾಡುವದಿಲ್ಲ ಎಂದು



## ೨೨೪ ಸಹಸ್ರಮೂರ್ಧಾ

೧ ಸಾವಿರಾರು ತಲೆಗಳು ಉಳ್ಳವನು[1]

ಪೂರ್ಣನಾಗಿರುವ ಪ್ರಯುಕ್ತ ಪುರುಷ ಎನಿಸುವ ಭಗವಂತನ ಕುರಿತು ಹೊರಟಿರುವ ಪುರುಷ ಸೂಕ್ತವು, ಭಗವಂತನು ಸಾವಿರಾರು ತಲೆಗಳನ್ನು ಪೊಂದಿರುವವನು—ಎಂದು ಪ್ರಾರಂಭದಲ್ಲೇ ಘೋಷಿಸುತ್ತಿದೆ[2] ಭಗವಂತನ ವಿಶ್ವರೂಪವನ್ನು ಸಾಕ್ಷಾತ್ಕರಿಸಿಕೊಂಡ ಅರ್ಜುನನು, ಆ ರೂಪದಲ್ಲಿ ಅನಂತ ಬಾಹು, ಅನಂತ ಉದರ, ಅನಂತ ಮುಖಾದಿಗಳಿರುವುದನ್ನು ಉಲ್ಲೇಖಿಸಿರುವನು.[3] ಭಗವಂತನು ಪಾಣಿಪಾದಾದಿ ಅವಯವಗಳನ್ನೊಳಗೊಂಡ ಅನಂತ ಅಣುರೂಪಗಳಿಂದ ವಿಶ್ವ

---

೧ 1 ಸಹಸ್ರಂ ಮೂರ್ಧಾನಃ ಯಸ್ಯ ಸಃ ಸಹಸ್ರಮೂರ್ಧಾ । ಅತ್ರ ಸಹಸ್ರಶಬ್ದಃ 'ತತ್ ಸಹಸ್ರಂ ತತ್ ಸರ್ವಂ . ' (ಐ. ಉ. 2-2-4-5) 'ಸಹಸ್ರಶಬ್ದೋಽಪ್ಯಮಿತಂ ಯತೋ ವಕ್ತಿ .' (ಐ ಉ. ಭಾ.) ಇತ್ಯುಕ್ತದಿಶಾ ಅಮಿತವಾಚಕಃ । ತಥಾಚ ಸಹಸ್ರಂ ಅನಂತಾಃ ಮೂರ್ಧಾನಃ ಯಸ್ಯ ಸಃ ಸಹಸ್ರಮೂರ್ಧಾ ಅನಂತಮೂರ್ಧಾ ಇತ್ಯಭಿಪ್ರಾಯಃ ।

2 'ಸಹಸ್ರಶೀರ್ಷಾ ಪುರುಷಃ . . '

-ಪು. ಸೂ.

3 ಅನೇಕಬಾಹೂದರವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।

-ಗೀ. 11-16

ಅನೇಕಶಬ್ದೋಽನಂತವಾಚೀ ।

-ಗೀ. ಭಾ.

ವನ್ನು ವ್ಯಾಪಿಸಿದ್ದು, ಆ ರೂಪಗಳ ವಿವಕ್ಷೆಯಿಂದಲೂ ಅವನು ಸಹಸ್ರಮೂರ್ಧಾ.[1] ಅನಂತ ಜೀವಾತ್ಮರ ಅನಂತ ಶಿರಸ್ಸುಗಳು ಮುಖ್ಯವಾಗಿ ಅವನಿಗೇ ಸೇರಿರುವುದರಿಂದಲೂ ಅವನು ಸಹಸ್ರ ಮೂರ್ಧಾ

೨ ಅನಂತಗುಣಗಳ ಜೊತೆಗೆ ಇರುವ—ಅನಂತಗುಣ ಪರಿಪೂರ್ಣಗಳಾದ ತಲೆಗಳು ಉಳ್ಳವನು[2]

ಭಗವಂತನ ಅನಂತ ಶಿರಸ್ಸುಗಳೂ ಸ್ವರೂಪಾತ್ಮಕಗಳಾಗಿದ್ದು[3], ಅವುಗಳಲ್ಲೊಂದೊಂದೂ ಅವ ನಂತೆಯೇ ಗುಣಪೂರ್ಣವಾಗಿದೆ[4]

೩ (ಪ್ರತಿಯೊಂದು ರೂಪದಲ್ಲೂ ಅನಂತ ಗುಣಗಳ) ಜೊತೆಗೆಯೇ ಇರುವವನು ಹಾಗೂ (ಯಾರ ವಿಷಯದಲ್ಲಿ ಜ್ಞಾನಿಗಳೂ) ಮೋಹಕ್ಕೊಳಗಾಗುವರೋ ಅಂತಹವನು.[5]

---

1 ಅಣೋರಣುತತ್ವೈ ರೂಪೈಃ ಪಾಣಿಪಾದಾದಿಸಂಯುತೈಃ ।
ಸರ್ವತ್ರ ಸಂಸ್ಥಿತತ್ವಾದ್ ವಾ ಸರ್ವತಃ ಪಾಣಿಪಾದವಾನ್ ।
-ಗೀ. ತಾ 13-4

೨ 2 ಸಹೈವಾನಂತರೂಪೈಸ್ತು ಸರಣೇನ ಸಹಸ್ರಕವತ್ । ನಾಮ್ನಾಂ ಸಹ ಸ್ಮೃತೇರೇವ ರೂಪಾಣಾಂ ವಾ ಸಹಸ್ರತಾ'(ಐ. ಉ. ಭಾ. 2-2-4-5) ಇತಿಭಗವತಃ ಅನಂತನಾಮ್ನಾಂ ಅನಂತರೂಪಾಣಾಂ ಚ ಯಥಾ ಸಹಸ್ರತೋಪಪಾದ್ಯತೇ ತಥಾ ಅನಂತಗುಣೈಃ ಸಹ ಸರಂತಿ ಗಚ್ಛಂತಿ, ವರ್ತಂತ ಇತಿ ಯಾವತ್ ಸಹಸ್ರಾಣಿ ಅನಂತಗುಣಸಹಿತಾಃ ಇತಿ ಸಿಧ್ಯತಿ । ತಾದೃಶಾಃ ಮೂರ್ಧಾನಃ ಯಸ್ಯ ಸಃ ಸಹಸ್ರಮೂರ್ಧಾ ।

3 ಶಿರೋ ನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವ ಚ । ಅಂಗಾಂಗಿತ್ವೇನ ಭಗವಾನ್ ಕ್ರೀಡತೇ ಪುರುಷೋತ್ತಮಃ ।
-ಬ್ರಹ್ಮತ್ಸಂಹಿತಾ (ಬ್ರ. ಸೂ ಭಾ. 1-1-15)

4 ಬ್ರಹ್ಮತಾಽವಯವೇಽಪಿ ಸ್ಯಾತ್ ತಥಾಽವಯವಿನಿ ಸ್ಫುಟಃ ।
-ಅ. ವ್ಯಾ. 1-1-161

೩ 5 ಪ್ರತ್ಯೇಕಂ ಸ್ವಕೀಯೇ ರೂಪೇಽಪಿ ಅನಂತಗುಣೈಃ ಸಹ ಸರತಿ ಗಚ್ಛತಿ ವರ್ತತ ಇತಿ ಯಾವತ್, ಸಹಸ್ರಃ । ಯಸ್ಮಿನ್ ವಿಷಯೇ ಸೂರಯೋಽಪಿ ಮುಹ್ಯಂತಿ ಸ ಮೂರ್ಧಾ । ಸಹಸ್ರಶ್ಚಾಸೌ ಮೂರ್ಧಾ ಚ ।

ಭಗವಂತನು ಅವನ ಪ್ರತಿಯೊಂದು ರೂಪದಲ್ಲೂ ಗುಣಪೂರ್ಣನಾಗಿಯೇ ಇರುವನು[1] ಅವನ ಅನುಗ್ರಹವಿಲ್ಲದೆ ವಿದ್ವಾಂಸರೂ ಅವನನ್ನು ಸಂಪೂರ್ಣವಾಗಿ ತಿಳಿಯಲಾರರು—ಎಂಬುದಾಗಿ ಭಾಗವತ ಸಂದೇಶಿಸಿದೆ[2]

ಳ (ಪ್ರಾಣದೇವನ) ಜೊತೆಗೇ ಜೀವಾತ್ಮರ ದೇಹಗಳಿಗೆ ಹೋಗುವವನು ಮತ್ತು ಉತ್ತಮನಾಗಿರುವವನು[3]

'ಪರಿಸರ ಪದ್ಧತಿ'[4] ಎನಿಸಿರುವ ಭಗವಂತನು ಎಲ್ಲಿಡೆ ಸಂಚರಿಸುವ ಪ್ರಾಣನ ಜೊತೆಗೇ ಜೀವಾತ್ಮರ ಶರೀರವನ್ನು ಪ್ರವೇಶಿಸುವನು ಭಗವಂತನು ಸಕಲ ಭೂತಗಳಿಗೂ ಅಧಿಕನಾಗಿರುವವನೆಂದು ಸಂದೇಶಿಸುವ ಬೃಹದಾರಣ್ಯಕೋಪನಿಷತ್ತು 'ಮೂರ್ಧಾ'—ಎಂಬ ಶಬ್ದದ ಉಲ್ಲೇಖದಿಂದಲೇ ಭಗವಂತನ ಸರ್ವೋತ್ತಮತ್ವವನ್ನು ತಿಳಿಸಿದೆ[5]

---

1 ತಸ್ಮಾತ್ ಸರ್ವಾವತಾರಾಶ್ಚ ಸರ್ವಜೀವೇಷು ಚ ಸ್ಥಿತಾಃ। ಪ್ರಾದುರ್ಭಾವಾಃ ಸರ್ವಗುಣೈಃ ಪೂರ್ಣಾ ಏವ ಸದಾ ಸ್ಥಿತಾಃ'

–ಐತರೇಯ ಸಂಹಿತಾ (ಐ. ಉ ಭಾ 2-2-3-10)

2 . ಮುಹ್ಯಂತಿ ಯಂ ಸೂರಯಃ ।

–ಭಾಗ 1-1-1

ಆತ್ಮತ ಏವ ಹಿ ಬುದ್ಧಿಪ್ರಕಾಶಃ । ನಚ ಪ್ರಸಾದಂ ವಿನಾ ಜ್ಞಾತುಂ ಶಕ್ಯಃ-ಮುಹ್ಯಂತಿ ಯಂ ಸೂರಯಃ

–ಭಾಗ. ತಾ. ನಿ.

ಳ 3 ಪ್ರಾಣೇನ ಸಹ ಸರತಿ ಜೀವಾತ್ಮನಾಂ ಶರೀರಾಣಿ ಗಚ್ಛತೀತಿ ಸಹಸ್ರಃ । ಉತ್ತಮತ್ವಾನ್ಮೂರ್ಧಾ

–ಬೃ. ಉ. ಭಾ. 4-1-2-1

4 ಪರಿಸರಃ ಪ್ರಾಣಃ ಪದ್ಧತಿರ್ಮಾರ್ಗೋ ಯಸ್ಯ ಸಃ ಪರಿಸರಪದ್ಧತಿಃ ।

–ಭಾಗ. ತಾ. ನಿ. 10-94-18

5 ಸಃ... ..ಸರ್ವೇಷಾಂ ಭೂತಾನಾಂ ಮೂರ್ಧಾ ರಾಜಾ ಭವತಿ ।

ಬೃ. ಉ. 4-1-2

ಉತ್ತಮತ್ವಾನ್ಮೂರ್ಧಾ ।

ಬೃ. ಉ. ಭಾ.

## ಜಿಜ್ಞಾಸೆ

[ಪ್ರಾಕೃತ ಆಕಾರ ರಹಿತ]

ಪ್ರ - ಪರಮಾತ್ಮನು 'ಯತ್ತತದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದ-ಪಾಣಿಪಾದಂ' ಎಂದು ಉಪನಿಷತ್ತಿನಲ್ಲಿ ನಿರಾಕಾರನು ಎಂದು ಹೇಳಿದ್ದರಿಂದ ಅವನು ಸಹಸ್ರ ಮೂರ್ಧಾ—ಸಾವಿರ ತಲೆವುಳ್ಳವನು ಎಂದು ಹೇಳುವದು ಶ್ರುತಿ ವಿರುದ್ಧವಾಗುದಿಲ್ಲವೇ?

ಉ - ಈ ಶ್ರುತಿಯಲ್ಲಿ ಪರಮಾತ್ಮನು ಅದೃಶ್ಯನು ಎಂದು ಹೇಳಿರುತ್ತದೆ. ಆದರೆ ಅವನು ದಿವ್ಯ ಪ್ರತ್ಯಕ್ಷ ವಿಷಯನಾಗುತ್ತಾನೆ ಗೀತೆಯಲ್ಲಿ ವಿಶ್ವರೂಪದ ದರ್ಶನವು ಅರ್ಜುನನಿಗೆ ದಿವ್ಯಚಕ್ಷುಸ್ಸಿನಿಂದ ಆದದ್ದು ಹೇಳಲ್ಪಟ್ಟಿದೆ ಆದ್ದರಿಂದ ಅದೃಶ್ಯ ಎಂದರೆ ಪ್ರಾಕೃತ ಚಕ್ಷುಸ್ಸಿನಿಂದ ವೇದ್ಯನಲ್ಲ ಎಂದು ಅರ್ಥವನ್ನು ಹೇಳಿ ಶ್ರುತಿ ವಿರೋಧವನ್ನು ಪರಿಹರಿಸುವಂತೆ ಪ್ರಾಕೃತ ಚಕ್ಷುರಾದಿ ಆಕಾರ ರಹಿತನು ಅಪ್ರಾಕೃತ ಜ್ಞಾನಾನಂದಾತ್ಮಕ ಆಕಾರವುಳ್ಳವನು ಎಂದು ಅರ್ಥವನ್ನು ಸ್ವೀಕರಿಸಿ ಶ್ರುತಿ ವಿರೋಧವನ್ನು ಪರಿಹರಿಸಬೇಕು.



### ೨೨೫ ವಿಶ್ವಾತ್ಮಾ

೧ ಪೂರ್ಣನಾದ ಆತ್ಮನು [1]

ಇಂದ್ರನಾಮಕ ಭಗವಂತನು ಸುಪೂರ್ಣರಲ್ಲಿ ಪೂರ್ಣತಮನಾಗಿರುವನೆಂದು ಋಗ್ವೇದ ಸಂದೇಶಿಸಿದೆ [2]

೨ ಎಲ್ಲ ವಸ್ತುಗಳಲ್ಲೂ ಅಂತರ್ಯಾಮಿಯಾಗಿರುವವನು [3]

---

೧ 1 ವಿಶ್ವಃ ಪೂರ್ಣಃ । 'ಜಗತ್ ಸಮಸ್ತಂ ವಿಶ್ವಂ ಚ ನಿಖಿಲಂ ಪೂರ್ಣಮುಚ್ಯತೇ'- ಅಭಿಧಾನಮ್ (ಭಾಗ. ತಾ. ನಿ.4-19-20) ಏವಂ ಚ ವಿಶ್ವಶ್ಚಾಸೌ ಆತ್ಮಾ ಚ ವಿಶ್ವಾತ್ಮಾ।

2 ಪುರೂತಮಂ ಪುರೂಣಾಂ...ಇಂದ್ರಂ . ।

-ಋ. 5-2

ಸಂಪೂರ್ಣಾನಾಂ ಪೂರ್ಣತಮಂ...ಗಾಯತ ತಂ ಪ್ರಭುಮ್ ।

-ಋ. ಭಾ.

೨ 3 ವಿಶ್ವೇಷು ಆತ್ಮಾ ಅಂತರ್ಯಾಮೀ ವಿಶ್ವಾತ್ಮಾ।

ಭಗವಂತನು ಸಕಲ ವಸ್ತುಗಳಲ್ಲೂ ಅಂತರ್ಯಾಮಿಯಾಗಿದ್ದು ಅವುಗಳನ್ನು ರಕ್ಷಿಸುತ್ತಿರುವನು—ಎಂಬುದಾಗಿ ಭಾಗವತವು ಸಂದೇಶಿಸುವಾಗ ಭಗವಂತನ ಸಮಸ್ತಾಂತರ್ಯಾಮಿತ್ವವನ್ನು 'ವಿಶ್ವಾತ್ಮ' ಶಬ್ದದಿಂದಲೇ ಉಲ್ಲೇಖಿಸಿದೆ.[1]

೩ ಪೂರ್ಣಗಳಾದ ದೇಹಗಳು ಉಳ್ಳವನು[2]

ವಿಶ್ವರೂಪಿ ಭಗವಂತನ ಎಲ್ಲೆಡೆ ತುಂಬಿದ್ದ ಅನಂತರೂಪಗಳನ್ನು ಕಂಡ ಅರ್ಜುನನು ಆ ರೂಪಗಳು ಪೂರ್ಣಗಳಾಗಿದ್ದವು ಎಂಬ ಅಭಿಪ್ರಾಯದಲ್ಲಿ ಭಗವಂತನನ್ನು 'ವಿಶ್ವರೂಪ' ಎಂದೇ ಸಂಬೋಧಿಸಿರುವನು[3]

೪ ಎಲ್ಲೆಡೆ ವ್ಯಾಪಿಸಿರುವವನು[4]

ಭಗವಂತನು ಎಲ್ಲೆಡೆ ವ್ಯಾಪಿಸಿರುವುದರಿಂದ 'ವಿಶ್ವಾತ್ಮ' ಎನಿಸಿರುವನು. ಇಂತಹವನೂ ತನ್ನ ಕೃಷ್ಣಕೇಶಾಂಶ ಭಾಗದಿಂದ ವಸುದೇವನ ಮನಸ್ಸನ್ನು ಪ್ರವೇಶಿಸಿದನು—ಎಂದು ಭಾಗವತ ತಿಳಿಸಿದೆ.[5]

---

1 ತ್ರಾಯತೇ ತಪ್ರತಿ ವಿಶ್ವಾತ್ಮಾ

-ಭಾಗ 11-28-6

ವಿಶ್ವೇಷು ವಸ್ತುಷು ಆತ್ಮಾನಃ ಅಂತರ್ಯಾಮಿಮೂರ್ತಯೋ ಯಸ್ಯ ಸಃ ವಿಶ್ವಾತ್ಮಾ ವಿಶ್ವಂ ತ್ರಾತಿ । -ಯಾದವೇಂದ್ರತೀರ್ಥಾಃ (ಭಾಗ ತಾ ನಿ. ಟೀ 11-28-6)

೩ 2 ವಿಶ್ವಾಃ ಗುಣಪೂರ್ಣಾ ಆತ್ಮಾನಃ ದೇಹಾಃ ಯಸ್ಯ ಸಃ ವಿಶ್ವಾತ್ಮಾ।

3 ಅನಂತಬಾಹೂದರವಕ್ತ್ರನೇತ್ರಂ ಪಶ್ಯಾಮಿ ತ್ವಾ ಸರ್ವತೋಽನಂತರೂಪಮ್ ।

.. ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ।

-ಗೀ. 11-16

ಹೇ ವಿಶ್ವರೂಪ ಪೂರ್ಣರೂಪ 'ಸರ್ವಂ ಸಮಸ್ತಂ ವಿಶ್ವಂ ಚ ಅನಂತಂ ಪೂರ್ಣಮೇವ ಚ ಇತ್ಯುಕ್ತೇಃ ।

-ಗೀ. ವಿ.

೪ 4 ವಿಶ್ವಸ್ಮಿನ್ ಆ ತನೋತಿ ವ್ಯಾಪ್ನೋತೀತಿ ವಿಶ್ವಾತ್ಮಾ।

5 ಭಗವಾನಪಿ ವಿಶ್ವಾತ್ಮಾ ಭಕ್ತಾನಾಮ ಭಯಂಕರಃ ।

ಆ ವಿವೇಶಾಂಶಭಾಗೇನ ಮನ ಆನಕದುಂದುಭೇಃ ॥

-ಭಾಗ. 10-3-16

೫ ವಿಶ್ವಕ್ಕೆ ಒಡೆಯನಾಗಿರುವವನು[1]

೬ ಪೂರ್ಣನಾದ ಸ್ವಾಮಿ[2]

ಉಳಿದವರೆಲ್ಲ ಒಂದು ದೇಶದಲ್ಲಿ ಒಂದು ಕಾಲದಲ್ಲಿ, ಸ್ವಲ್ಪ ಭಾಗಕ್ಕೆ ಒಡೆಯರೆನಿಸಿದರೆ, ಸರ್ವೇಶ್ವರನೆನಿಸಿರುವ ಭಗವಂತನು ಎಲ್ಲ ಕಾಲದಲ್ಲೂ, ಎಲ್ಲ ದೇಶದಲ್ಲೂ ಸಕಲ ಪದಾರ್ಥಗಳಿಗೂ ಒಡೆಯನೆನಿಸಿರುವನು ಹೀಗೆ ಅವನೊಬ್ಬನೇ ಪೂರ್ಣಪ್ರಮಾಣದ ಸ್ವಾಮಿತ್ವವನ್ನು ಪಡೆದಿರುವವನು. ಈ ಅಭಿಪ್ರಾಯದಲ್ಲೇ ಜಡಭರತನು ರಹೂಗಣರಾಜನಿಗೆ ಉಪದೇಶಿಸುತ್ತ—ಸ್ವಾಮಿ-ಭೃತ್ಯ ಭಾವವು ನಿರ್ದಿಷ್ಟವಾಗಿ ಅಚ್ಯುತನ ವಿಷಯದಲ್ಲಷ್ಟೇ ಇರುವಂತಹದ್ದೆಂದು ತಿಳಿಸಿ,[3] ಆದ್ದರಿಂದಲೇ ಉಳಿದವರಲ್ಲಿ ಯಾರು ಒಡೆಯರು? ಯಾರು ಸೇವಕರು?[4]—ಎಂದು ನಿರ್ದಿಷ್ಟವಾಗಿ ಗುರುತಿಸಲು ಆಗಲಾರದು—ಎಂದು ಅಭಿಪ್ರಾಯಪಟ್ಟಿರುವನು.

೭ ವಿಶ್ವವನ್ನು ಸಂಹರಿಸುವವನು.[5]

೮ ಎಲ್ಲ ವಿಷಯಪದಾರ್ಥಗಳನ್ನೂ (ಮುಖ್ಯವಾಗಿ) ಭೋಗಿಸುವವನು.[6]

---

ವಿಶ್ವಸ್ಮಿನ್ ವ್ಯಾಪ್ತಃ ವಿಶ್ವಾತ್ಮಾ । ಅಥಾಪಿ ಕೃಷ್ಣಕೇಶಾಂಶಭಾಗೇನಾಽನಕದುಂದುಭೇರ್ಮನ ಆವಿವೇಶ ।

–ಬ ಗೋ. (ಭಾಗ. ೪)

೫ 1 ವಿಶ್ವಸ್ಯ ಜಗತಃ ಆತ್ಮಾ ಸ್ವಾಮೀ ವಿಶ್ವಾತ್ಮಾ ।

೬ 2 ವಿಶ್ವಃ ಪೂರ್ಣಃ । ಆತ್ಮಾ ಸರ್ವಂ ಆತ್ಮೀಯತಯಾಽಽದತ್ತ ಇತಿ ಸ್ವಾಮೀ । ವಿಶ್ವೇತಿ ವಿಶೇಷಣಂ ಚ ಆತ್ಮಪದಾರ್ಥೈಕದೇಶೇ ಸ್ವಾಮಿತ್ವೇ ಅನ್ವೇತಿ । ತಥಾ ಚ ಪೂರ್ಣಸ್ವಾಮಿತ್ವವಾನಿತಿ ಫಲತಿ ।

3 ಸ್ವಸ್ವಾಮಿಭಾವೋ ಧ್ರುವ ಈಶ ಯತ್ರ ತರ್ಹ್ಯಚ್ಯುತೇಽಸೌ ...।

–ಭಾಗ. 5-10-11

4 ಕ ಈಶ್ವರಸ್ತತ್ರ ಕಿಮೀಶಿತವ್ಯಂ ....।

–ಭಾಗ. 5-10-11

೭ 5 ವಿಶ್ವಂ ಅತ್ತಿ ಪ್ರಲಯಕಾಲೇ ಸಂಹರತೀತಿ ವಿಶ್ವಾತ್ಮಾ ।

೮ 6 ವಿಶ್ವಂ ಸಮಸ್ತಭೋಗ್ಯಜಾತಂ ಅತ್ತೀತಿ ವಿಶ್ವಾತ್ಮಾ ।

೯ (ಪ್ರಲಯಕಾಲದಲ್ಲಿ ಸಂಹೃತವಾದ) ಜಗತ್ತನ್ನು ಜಠರದೊಳಗೆ ತೆಗದುಕೊಳ್ಳುವವನು[1]

೧೦ (ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ) ಪೂರ್ಣರಾದ ಮುಕ್ತಾತ್ಮರನ್ನು ತನ್ನೊಳಗೆ ಸೇರಿಸಿಕೊಳ್ಳುವವನು[2]

ಈ ಎಲ್ಲ ಅಭಿಪ್ರಾಯಗಳನ್ನಿಟ್ಟುಕೊಂಡು ಚತುರ್ಮುಖಾದಿಗಳು ಭಗವಂತನಿಗೆ ಸಲ್ಲಿಸಿದ ಗರ್ಭಸ್ತುತಿಯಲ್ಲಿ ಅವನನ್ನು 'ಸತ್ಯಾತ್ಮಕ' ಎಂದು ವಿಶೇಷಿಸಿರುವರು[3]

೧೧ ವಿಶ್ವವು ಯಾರ ಶರೀರದಂತೆ ಇರುವುದೋ ಅಂಥವನು.[4]

ಮೂರು ಕಾಲಕ್ಕೆ ಸಂಬಂಧಿಸಿದ ವಿಶ್ವವು ಎಲ್ಲಿ ಕಾಣಿಸುವುದೋ ಅಂತಹ ಬ್ರಹ್ಮಾಂಡವು ಭಗವಂತನ ಶರೀರದಂತೆ ಇದೆ—ಎಂದು ಶುಕಾಚಾರ್ಯರು ಸಂದೇಶಿಸಿರುವರು[5] ಆಕಾಶ, ವಾಯು,

---

೯ 1 ಪ್ರಲಯೇ ಸಂಹೃತಂ ವಿಶ್ವಂ ಜಠರಾಂತಃ ಆದತ್ತ ಇತಿ ವಿಶ್ವಾತ್ಮಾ।

೧೦ 2 ಸ್ವಸ್ವಯೋಗ್ಯತಾನುಸಾರೇಣ ಪೂರ್ಣತ್ವಾದ್ವಿಶ್ವಾಃ ಮುಕ್ತಾತ್ಮಾನಃ। ತಾನ್ ಸ್ವಾಂತಃ ಆದತ್ತ ಇತಿ ವಿಶ್ವಾತ್ಮಾ।

3 .ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ।
—ಭಾಗ. 10-3-26

'ಅತ್ತೃತ್ವಾಚ್ಚ ತದಾದಾನಾತ್ ಸತ್ಯಾತ್ಮಾ ಚೋಚ್ಯತೇ ವಿಭುಃ'
—ತಂತ್ರಭಾಗವತ (ಭಾಗ. ತಾ. ನಿ)

ಸತ್ಯಂ ಜಗದತ್ತೀತಿ ಸತ್ಯಾತ್ಮಾ। ಆತ್ಮೈವಾತ್ಮಕಃ ಸತ್ಯೇ ಜಗತಿ ವಿಷಯಾನತ್ತೀತಿ ವಾ। ಪ್ರಲಯಕಾಲೇ ಸಂಹೃತಂ ಚ ಜಗತ್ ಆದತ್ತೇ ಜಠರಾಂತರಿತಿ ಚ ಸತ್ಯಾತ್ಮಾ।
-ಬ ಗೋ. (ಭಾಗ ತಾ. ಟಿ.)

ವಿಶ್ವಶಬ್ದಸ್ಯ ಸತ್ಯಶಬ್ದಸ್ಯ ಸಮಾನಾರ್ಥಕ ಇತಿ ಸತ್ಯಾತ್ಮಕಶಬ್ದವ್ಯಾಖ್ಯಾನೇನ ವಿಶ್ವಾತ್ಮಶಬ್ದೋಽಪಿ ವ್ಯಾಖ್ಯಾತೋ ಭವತಿ।

೧೧ 4 ವಿಶ್ವಂ ಆತ್ಮಾ ಇವ ಶರೀರಮಿವ ಯಸ್ಯ ಸಃ ವಿಶ್ವಾತ್ಮಾ।

5 ವಿಶೇಷಸ್ತಸ್ಯ ದೇಹೋಽಯಂ ಸ್ಥವಿಷ್ಠಶ್ಚ ಸ್ಥವೀಯಸಾಮ್।
ಯತ್ರೇದಂ ದೃಶ್ಯತೇ ವಿಶ್ವಂ ಭೂತಂ ಭವ್ಯಂ ಭವಚ್ಚ ಯತ್॥
-ಭಾಗ. 2-1-24

ಅಗ್ನಿ, ಜಲ, ಭೂಮಿ, ನಕ್ಷತ್ರಾದಿಗಳು, ಪ್ರಾಣಿಗಳು, ದಿಕ್ಕು ಮರಾದಿಗಳು, ನದಿಗಳು, ಸಮುದ್ರಗಳು—ಹೀಗೆ ಇವೆಲ್ಲ ಶ್ರೀಹರಿಗೆ ಅತ್ಯಂತಾಧೀನಗಳಾಗಿರುವ ಪ್ರಯುಕ್ತ ಅವನ ಶರೀರ ದಂತೆ ಇವೆ ಎಂದು ಭಾವಿಸಿ ನಮಿಸಬೇಕು[1]—ಎಂದು ನಿಮಿರಾಜನಿಗೆ ಕವಿಮುನಿ ತಿಳಿಸಿರುವನು

೧೨ ಪೂರ್ಣವಾದ ಮಧ್ಯದೇಹ ಉಳ್ಳವನು[2]

ಭಗವಂತನ ದೇಹದ ಮಧ್ಯಭಾಗವೂ ಅವನ ಸ್ವರೂಪವೇ ಆಗಿದ್ದು ಅವನಂತೆಯೇ ಗುಣಪೂರ್ಣ

೧೩ ಪೂರ್ಣವಾದ ಮನಸ್ಸು ಉಳ್ಳವನು[3]

೧೪ ಪೂರ್ಣವಾದ ಬುದ್ಧಿ ಉಳ್ಳವನು[4]

---

ಶಿಲಾವತ್ ತಸ್ಯ ದೇಹೋಽಯಮವಾಂಡಕೋಶಸ್ತು ಸಾವೃತಿಃ ।
ತತ್ತಂತ್ರತ್ವಾನ್ನ ತತ್ರಸ್ಥದುಃಖಭೋಗೇನ ತು ಕ್ವಚಿತ್ ।
—ಬ್ರಹ್ಮವೈವರ್ತ (ಭಾಗ. ತಾ. ನಿ.)

1 ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ ಜ್ಯೋತೀಂಷಿ ಸತ್ತ್ವಾನಿ ದಿಶೋ ದ್ರುಮಾದೀನ್ । ಸರಿತ್ಸಮುದ್ರಾಂಶ್ಚ ಹರೇಃ ಶರೀರಂ ಯತ್ಕಿಂ ಚ ಭೂತಂ ಪ್ರಣಮೇ-ದನನ್ಯಃ ॥
—ಭಾಗ. 11-2-41

ಸರ್ವಂ ಹರೇರ್ವಶತ್ವೇನ ಶರೀರಂ ತಸ್ಯ ಭಣ್ಯತೇ ।
—ಹರಿವಂಶ (ಭಾಗ. ತಾ. ನಿ.)

೧೨ 2 ವಿಶ್ವ ಪೂರ್ಣಃ ಆತ್ಮಾ ಸಂದೇಹಃ ಯಸ್ಯ ಸಃ ವಿಶ್ವಾತ್ಮಾ ।

೧೩ 3 ವಿಶ್ವಃ ಪೂರ್ಣಃ ಆತ್ಮಾ ಮನಃ ಯಸ್ಯ ಸಃ ವಿಶ್ವಾತ್ಮಾ ।

೧೪ 4 ವಿಶ್ವಃ ಪೂರ್ಣಃ ಆತ್ಮಾ ಬುದ್ಧಿಃ ಯಸ್ಯ ಸಃ ವಿಶ್ವಾತ್ಮಾ ।
'ಆತ್ಮಶಬ್ದಸ್ಯ ಮುಖ್ಯಾರ್ಥೋ ವಿಷ್ಣುರೇಕಃ ಸನಾತನಃ । ಸಂದೇಹದೇಹಮನಸೋಬುದ್ಧಿಜೀವಾಃ ಸ್ವಯಂ ತಥಾ । ಬ್ರಹ್ಮಾತ್ಮಹ್ಯಮುಖ್ಯಾಃ ಕ್ರಮಶ ಉತ್ಕರ್ಷೋಹ್ಯಾತ್ಮತಾ ಭವೇತ್'
—ಪ್ರಕಾಶ ಸಂಹಿತಾ (ಭಾಗ. ತಾ. ನಿ. 3-10-23)

ಭಗವಂತನು ಪ್ರಶಸ್ತವಾದ ಬುದ್ಧಿ ಉಳ್ಳವನು, ಪ್ರಶಸ್ತವಾದ ಮನಸ್ಸು ಉಳ್ಳವನು, ಪ್ರಶಸ್ತ ಗಳಾದ ಅಂಗಪ್ರತ್ಯಂಗಗಳನ್ನೆಲ್ಲ ಹೊಂದಿರುವವನೆಂದು ಪ್ರಮಾಣವೊಂದು ಸಂದೇಶಿಸಿದೆ.[1]

೧೫ ಜೀವಾತ್ಮರು (ತಮ್ಮ ತಮ್ಮ ಶರೀರವನ್ನು) ಪ್ರವೇಶಿಸುವಂತೆ ಅನುಗ್ರಹಿಸಿರು ವವನು.[2]

ಮುಖ್ಯವಾಗಿ ಶರೀರದಲ್ಲಿದ್ದು ಪುರುಷ ಎನಿಸುವ ಭಗವಂತನ ಅನುಗ್ರಹಕ್ಕೊಳಗಾಗಿಯೇ ಜೀವಾತ್ಮರು ತಮ್ಮ ತಮ್ಮ ಶರೀರವನ್ನು ಪ್ರವೇಶಿಸಿ ಇರುವರು

೧೬ ಚತುರ್ಮುಖನು (ಜೀವಾತ್ಮರಲ್ಲೆಲ್ಲ ಅಧಿಕ) ಗುಣಪೂರ್ಣನಾಗಿರುವಂತೆ ಅನುಗ್ರಹಿ ಸಿರುವವನು.[3]

೧೭ (ಜೀವ ಸಮುದಾಯದಲ್ಲಿ ಅಧಿಕ ಪೂರ್ಣನಾಗಿದ್ದು) ವಿಶ್ವ ಎನಿಸುವ ವಾಯು ದೇವನನ್ನು (ತನ್ನ ಸಾಕ್ಷಾತ್ ಪುತ್ರನನ್ನಾಗಿ) ಸ್ವೀಕರಿಸಿರುವವನು.[4]

೧೮ ವಾಯುದೇವನೇ ಅಂತರಂಗ ಸುಹೃತ್ ಆಗಿ ಉಳ್ಳವನು[5]

---

1 ಬುದ್ಧಿಮನೋಽಂಗಪ್ರತ್ಯಂಗವತ್ತ್ವಂ ಭಗವತೋ ಲಕ್ಷಯಾಮಹೇ । ಬುದ್ಧಿಮಾನ್ ಮನೋವಾನಂಗಪ್ರತ್ಯಂಗವಾನಿತಿ

-ಬ್ರ. ಸೂ. ಭಾ. 2-2-41

ಪ್ರಾಶಸ್ತ್ಯಾರ್ಥೇ ಮತುಪ್ ।

೧೫ 2 ವಿಶಂತಿ ಸ್ವಸ್ವಶರೀರಂ ಪ್ರವಿಶಂತೀತಿ ವಿಶ್ವಾಃ । ವಿಶ್ವಾ ಆತ್ಮಾನಃ ಜೀವಾತ್ಮಾನಃ ಯಸ್ಮಾತ್ ಸಃ ।

೧೬ 3 ವಿಶ್ವಃ ಗುಣಪೂರ್ಣಃ ಆತ್ಮಾ ಚತುರ್ಮುಖಃ ಯಸ್ಮಾತ್ಸಃ ವಿಶ್ವಾತ್ಮಾ ।

೧೭ 4 'ವಿಶೋ ವಾಯುಃ ಸಮುದ್ದಿಷ್ಟಃ ಪೂರ್ಣತ್ವಾಜ್ಜೀವಸಂಘತಃ' (ಬೃ. ಉ. ಭಾ. 6-4-13) ಇತಿ ವಿಶ್ವಂ ವಾಯುಂ ಆದತ್ತೇ ಸಾಕ್ಷಾತ್ ಪುತ್ರತಯಾ ಸ್ವೀಕರೋತೀತಿ ವಿಶ್ವಾತ್ಮಾ ।

೧೮ 5 ವಿಶ್ವಃ ವಾಯುಃ ಆತ್ಮಾ ಆತ್ಮೇತಿ ವ್ಯವಹ್ರಿಯಮಾಣಃ ಅಂತರಂಗಸುಹೃತ್ ಯಸ್ಯ ಸಃ ವಿಶ್ವಾತ್ಮಾ ।

ತನಗೆ ಜ್ಞಾನಿಯು ತಾನೇ (ಆತ್ಮಾ) ಎನಿಸುವಷ್ಟು ಆತ್ಮೀಯನೆಂದಿರುವನು ಗೀತಾಚಾರ್ಯ.[1] ಆದ್ದರಿಂದ ಜ್ಞಾನಿಶ್ರೇಷ್ಠರಾದ ವಾಯುದೇವರೂ ಅವನಿಗೆ ಅತ್ಯಂತ ಆತ್ಮೀಯರು.

೧೯ ವಾಯುದೇವನೇ ಮುಖ್ಯ ಪ್ರತೀಕ ಆಗಿ ಉಳ್ಳವನು[2]

ವಾಯುದೇವನನ್ನು ತನ್ನ ಮುಖ್ಯ ಪ್ರತೀಕವನ್ನಾಗಿ ತಿಳಿದುಕೊಂಡು ಅವನಲ್ಲಿ ತನ್ನನ್ನು ಆರಾಧಿಸಬೇಕೆಂದು ಶ್ರೀಕೃಷ್ಣನು ಸಂಗೇಶಿಸಿರುವನು.[3]

೨೦ (ಪರತಂತ್ರ ಜೀವರಲ್ಲೆಲ್ಲ ಗುಣಪೂರ್ಣಗಳಾಗಿದ್ದು) ವಿಶ್ವ ಎನಿಸುವ ಲಕ್ಷ್ಮೀದೇವಿಗೆ (ಮುಖ್ಯವಾಗಿ) ಸ್ವಾಮಿ ಆಗಿರುವವನು.[4]

೨೧ (ಎಲ್ಲರಲ್ಲಿ) ಪ್ರವೇಶಿಸಿರುವವನು ಮತ್ತು (ಎಲ್ಲದಕ್ಕೂ) ಅಂತರ್ಯಾಮಿ ಆಗಿರುವವನು[5]

---

1 . ಜ್ಞಾನೀ ತ್ವಾತ್ಮೈವ ಮೇ ಮತಮ್ ।
-ಗೀ. 7 18

೧೯ 2 ವಿಶ್ವಃ ವಾಯುಃ ಆತ್ಮಾ ದೇಹಸದೃಶಃ ಪ್ರತೀಕಃ ಯಸ್ಯ ಸಃ ವಿಶ್ವಾತ್ಮಾ ।

3 'ವಾಯೌ ಮುಖ್ಯಧಿಯಾ . ಯುಜೀತ ಮಾಮ್'
-ಭಾಗ. 11-11-43

ಉದ್ಗೀಥಾಖ್ಯವಿಷ್ಣೋರ್ವಿಶಿಷ್ಟಪ್ರತೀಕೋ ವಾಯುರೇವ । ಅತಸ್ತಸ್ಯ ಸರ್ವೋತ್ತಮತ್ವ-ಜ್ಞಾನಪೂರ್ವಕಂ ತಸ್ಮಿಂಸ್ತತೋಽಪ್ಯುತ್ತಮತ್ವೇನೋಪಾಸಿತ ಏವ ಭಗವಾನ್ ಸಮ್ಯಕ್ ಫಲಂ ದದಾತೀತಿ ದರ್ಶಯತಿ (ಛಾಂ. ಉ. ಭಾ. 1-2-1) ಇತ್ಯುಕ್ತಪ್ರಮೇಯೇ 'ವಾಯೌ ಮುಖ್ಯಧಿಯಾ' ಇತಿ ಚ ಭಗವದ್ವಚನಮಿತಿ ಸಂವಾದತ್ವೇನ ಪ್ರದರ್ಶಿತಮಿತಿ ಉದಾಹೃತವಚನಸ್ಯ ವರ್ಣಿತಾಭಿಪ್ರಾಯ ಆಚಾರ್ಯಸಮ್ಮತ ಇತಿ ಜ್ಞಾಯತೇ ।

೨೦ 4 'ಪೂರ್ಣತ್ವಾದ್ ವಿಶ್ವತಾ ವಿಷ್ಣೋಃ ರಮಾಯಾಃಸ್ತ್ರೀಷುಪೂರ್ಣತಃ...' (ಬೃ.ಉ.ಭಾ. 4-2-3) ಇತ್ಯುಕ್ತದಿಶಾ ವಿಶ್ವಾ ರಮಾ । ತಸ್ಯಾ ಆತ್ಮಾ ಭರ್ತಾ ವಿಶ್ವಾತ್ಮಾ ।

೨೧ 5 ವಿಶತಿ ಸರ್ವಮಿತಿ ವಿಶ್ವಃ । ಆತ್ಮಾ ಅಂತರ್ಯಾಮೀ । ವಿಶ್ವಶ್ಚಾಸಾವಂತರ್ಯಾಮೀ ಚ ವಿಶ್ವಾತ್ಮಾ ।

ಭಗವಂತನು ಎಲ್ಲದರ ಒಳಗೆ ಇದ್ದು, ಅಂತರ್ಯಾಮಿಯಾಗಿರುವವನು.

ಜಿಜ್ಞಾಸೆ

[ತಾನೇ ವಿವರಿಸುವುದು]

ಪ್ರ ವಿಶ್ವಾತ್ಮಾ ಎಂದರೆ ಪರಮಾತ್ಮನು ಸಮಸ್ತ ಪ್ರಪಂಚ ಸ್ವರೂಪನು ಎಂದು ಅರ್ಥವನ್ನು ಹೇಳಬಹುದಲ್ಲವೇ? 'ವಿಶ್ವಮೇವೇದಂ ಪುರುಷಃ' ಎಂಬ ಶ್ರುತಿಯು ಸ್ಪಷ್ಟವಾಗಿ ಪರಮಾತ್ಮನು ವಿಶ್ವ ಸ್ವರೂಪನು ಎಂದು ಹೇಳುತ್ತದೆಯಲ್ಲವೇ?

ಉ – ವಿಶ್ವಮೇವೇದಂ ಪುರುಷಸ್ತದ್ವಿಶ್ವಮುಪಜೀವತಿ' ಎಂಬ ಶ್ರುತಿಯು ವಿಶ್ವವು ಪರಮಾತ್ಮನನ್ನು ಉಪಜೀವಿಸಿ ಇರುವದರಿಂದ ಈ ಅಭಿಪ್ರಾಯವನ್ನು ಇಟ್ಟುಕೊಂಡು ಪರಮಾತ್ಮನು 'ವಿಶ್ವಮೇವೇದಂ' ಎಂದು ಹೇಳುವದು ಎಂದು ಹೇಳುತ್ತದೆ. ತನ್ನ ಮಾತಿನ ಅರ್ಥವನ್ನು ತಾನೇ ವಿವರಿಸಿದ್ದರಿಂದ ಪರಮಾತ್ಮನು ವಿಶ್ವಸ್ವರೂಪನು ಎಂಬುದಕ್ಕೆ ಈ ಶ್ರುತಿಯು ಬಾಧಕವೇ ಆಗಿರುತ್ತದೆ.



೨೨೬ ಸಹಸ್ರಾಕ್ಷಃ

೧ ಸಾವಿರಾರು ಕಣ್ಣುಗಳುಳ್ಳವನು.[1]

೨ ಸಾವಿರಾರು ಇಂದ್ರಿಯಗಳುಳ್ಳವನು[2]

೩ (ಸಕಲ ಇಂದ್ರಿಯಗಳ ಸಾಮರ್ಥ್ಯವನ್ನು) ಒಳಗೊಂಡ ಇಂದ್ರಿಯಗಳುಳ್ಳವನು[3]

ಭಗವಂತನ ಪ್ರತಿಯೊಂದು ಇಂದ್ರಿಯವೂ ಸಕಲೇಂದ್ರಿಯಗಳ ಸಾಮರ್ಥ್ಯವನ್ನೂ ಒಳಗೊಂಡಿದೆ.

---

೧ 1 ಸಹಸ್ರಂ ಅಮಿತಾನಿ ಅಕ್ಷೀಣಿ ಯಸ್ಯ ಸಃ ಸಹಸ್ರಾಕ್ಷಃ । ಸಹಸ್ರಶಬ್ದಃ ಅಮಿತಾರ್ಥಕಃ ಸಹಸ್ರಮೂರ್ಧಾ (೨೨೪) ಇತ್ಯತ್ರೇವ ।

೨ 2 ಸಹಸ್ರಂ ಅಮಿತಾನಿ ಅಕ್ಷಾಣಿ ಇಂದ್ರಿಯಾಣಿ ಯಸ್ಯ ಸಃ ಸಹಸ್ರಾಕ್ಷಃ ।

೩ 3 ಸಕಲೇಂದ್ರಿಯಸಾಮರ್ಥ್ಯೇನ ಸಹ ಸರಂತೀತಿ ಸಹಸ್ರಾಣಿ, ಸಹಸ್ರಾಣಿ ಅಕ್ಷಾಣಿ ಇಂದ್ರಿಯಾಣಿ ಯಸ್ಯ ಸಃ । ಸಹ ಸರತೀತ್ಯರ್ಥೇ ಸಹಸ್ರೇತಿ ನಿಷ್ಪತ್ತಿಃ ಸಹಸ್ರಮೂರ್ಧಾ(೨೨೪) ಇತಿ ನಾಮ್ನಃ ವ್ಯಾಖ್ಯಾನೇ ದರ್ಶಿತಾ ।

ಕಣ್ಣುಗಳು ನೋಡುವುದಷ್ಟೇ ಅಲ್ಲದೆ ಕೇಳುವವೂ ಕೂಡಾ ಕಿವಿ ಕೇಳುವುದಷ್ಟೇ ಅಲ್ಲದೆ ಗಂಧವನ್ನೂ ಆಘ್ರಾಣಿಸಬಲ್ಲದು ಹೀಗೆ ಒಂದೊಂದು ಇಂದ್ರಿಯಕ್ಕೂ ಇಂತಹ ಸಾಮರ್ಥ್ಯವಿದೆ. ಈ ಅಭಿಪ್ರಾಯದಿಂದಲೂ ಗೀತಾಚಾರ್ಯನು ತನ್ನ ಪಾಣಿಪಾದಾದಿಗಳು ಎಲ್ಲೆಡೆ ಇವೆ—ಎಂದು ಸಂದೇಶಿಸಿರುವನು.[1]

[illegible] ಇರುವ ಲಕ್ಷ್ಮೀದೇವಿಯಿಂದ ಸಹಿತನಾಗಿ ಯಾವಾಗಲೂ ಎಲ್ಲೆಡೆ ವ್ಯಾಪಿಸಿರುವವನು.[2]

ದೇಶತಃ ಹಾಗೂ ಕಾಲತಃ ವ್ಯಾಪ್ತಿಯಿಂದ ತನಗೆ ಶ್ರೀಹರಿಯು ಸಮಾನನಾಗಿರುವ ಪ್ರಯುಕ್ತ 'ಸಮನಾ' ಎಂದೇ ಎನಿಸಿರುವಳು ಲಕ್ಷ್ಮೀದೇವಿ[3] ಆದ್ದರಿಂದ ಭಗವಂತನು ಎಲ್ಲೆಡೆ ಯಾವಾಗಲೂ ಲಕ್ಷ್ಮೀದೇವಿಯಿಂದ ಸಹಿತನಾಗಿಯೇ ವ್ಯಾಪಿಸಿರುವನು

೫ (ಎಲ್ಲ ದೇಶ ಕಾಲಗಳಲ್ಲೂ) ಗುಣಗಳಿಂದ ಸಹಿತನಾಗಿಯೇ ಇರುವವನು ಮತ್ತು ವ್ಯಾಪಿಸಿರುವವನು.[4]

ಭಗವಂತನು ಗುಣಪೂರ್ಣನಾಗಿಯೇ ಎಲ್ಲೆಡೆ ವ್ಯಾಪಿಸಿರುವನು

೬ ಅನಂತ ರೂಪಗಳಿಂದ ವ್ಯಾಪಿಸಿರುವವನು.[5]

---

1 ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ।
-ಗೀ. 13-14

'ಸರ್ವತಃ ಪಾಣಿಪಾದಾದಿರ್ಯತಃ ಪಾಣ್ಯಾದಿಶಕ್ತಿಮಾನ್ । ಕೇಶಾದಿಷ್ವಪಿ ಸರ್ವತ್ರ .'
-ಗೀ. ತಾ-

೪ 2 ಭಗವತಾ ಸಹೈವ ಸರತೀತಿ ಸಹಸ್ರಾ ಲಕ್ಷ್ಮೀಃ ॥ ತಯಾ ಸಹ ಅಕ್ಷ್ಣೋತಿ ವ್ಯಾಪ್ನೋತೀತಿ ಸಹಸ್ರಾಕ್ಷಃ । 'ಅಕ್ಷೂ ವ್ಯಾಪ್ತೌ' ।

3 ದೇಶತಃ ಕಾಲತಶ್ಚ ವ್ಯಾಪ್ತ್ಯಾ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮನಾ ।
-ಬ್ರ. ಸೂ. ಭಾ. (4-2-7)

೫ 4 ಸಕಲದೇಶಕಾಲಯೋಃ ಸರ್ವಗುಣೈಃ ಸಹೈವ ಅನುಸರತೀತಿ ಸಹಸ್ರಃ । ಸಹಸ್ರಃ ಸನ್ ಸರ್ವತ್ರ ಅಕ್ಷ್ಣೋತಿ ವ್ಯಾಪ್ನೋತೀತಿ ಸಹಸ್ರಾಕ್ಷಃ ।

೬ 5 ಸಹಸ್ರೇಣ ಅನಂತೈಃ ರೂಪೈಃ ಅಕ್ಷ್ಣೋತಿ ವ್ಯಾಪ್ನೋತೀತಿ ಸಹಸ್ರಾಕ್ಷಃ ।

ಭಗವಂತನು ತನ್ನ ಅನಂತಗಳಾದ ಅಣುರೂಪಗಳಿಂದ ಎಲ್ಲೆಡೆ ವ್ಯಾಪಿಸಿರುವನೆಂದು ಗೀತಾಚಾರ್ಯನು ಸೂಚಿಸಿರುವನು[1]

## ಜಿಜ್ಞಾಸೆ

[ವಿರೂಪ ಅಲ್ಲ]

ಪ್ರ:- ಪರಮಾತ್ಮನು 'ಸಹಸ್ರಾಕ್ಷ' 'ಸಹಸ್ರಪಾತ್' ಎಂದು ಹೇಳಿದರೆ ಅವನು ವಿರೂಪನು ಎಂದು ಹೇಳಿದಂತಾಗುವದಿಲ್ಲವೇ? ಅವನು ಪರಮ ಸುಂದರನು. ಆದುದರಿಂದ ಲಕ್ಷ್ಮೀದೇವಿಯು ಅವನನ್ನೇ ವರಿಸಿದಳು ಎಂದು ಶಾಸ್ತ್ರದಲ್ಲಿ ಹೇಳುವ ಪ್ರಮೇಯವು ವಿರೂಪವಿದ್ದಲ್ಲಿ ಹೇಗೆ ಸತ್ಯವಾಗುವದು?

ಉ - ಪರಮಾತ್ಮನಿಗೆ ಅನಂತ ರೂಪಗಳು ಇವೆ. ಅವುಗಳಲ್ಲಿ ರಾಮ ಕೃಷ್ಣ ಮೊದಲಾದ ರೂಪಗಳು ಎರಡು ಕಣ್ಣು ಎರಡು ಕಾಲುಗಳುಳ್ಳ ರೂಪಗಳು. ಆ ರೂಪಗಳು ಮನುಷ್ಯರಿಗೆ ಪರಮ ಸುಂದರಗಳಾಗಿ ಇವೆ. ಸಹಸ್ರಾಕ್ಷನಾದ ಇಂದ್ರನಿಗೆ ಸಹಸ್ರಾಕ್ಷವಾದ ಪರಮಾತ್ಮನ ರೂಪವು ಪರಮ ಸುಂದರ. ಲಕ್ಷ್ಮೀದೇವಿಯು ಅನಂತ ರೂಪವುಳ್ಳವಳು. ಅವಳಿಗೆ ಎರಡು ಕಣ್ಣು ಉಳ್ಳ ರೂಪವು ಇರುವಂತೆ ಸಹಸ್ರ ಕಣ್ಣುವುಳ್ಳ ರೂಪವೂ ಇವೆ. ಅಂತಹ ಸಹಸ್ರ ಕಣ್ಣುವುಳ್ಳ ಪರಮ ಸುಂದರಿಯಾದ ಲಕ್ಷ್ಮೀದೇವಿಗೆ ಸಹಸ್ರಾಕ್ಷನಾದ ಪರಮಾತ್ಮನು ಪರಮ ಸುಂದರನೇ ಹೊರತು ವಿರೂಪನು ಅಲ್ಲ



## ೨೨೭ ಸಹಸ್ರಪಾತ್

೧ ಸಾವಿರಾರು ಪಾದಗಳು ಉಳ್ಳವನು[2]

---

1 ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ।

—ಗೀ. 13-14

'ಅಣೋರಣುತರೈ ರೂಪೈಃ ಪಾಣಿಪಾದಾದಿಸಂಯುತೈಃ । ಸರ್ವತಃ ಸಂಸ್ಥಿತತ್ವಾದ್ವಾ ಸರ್ವತಃ ಪಾಣಿಪಾದವಾನ್'

-ಗೀ. ತಾ.

೧ 2 ಸಹಸ್ರಂ ಪಾದಾ ಯಸ್ಯ ಸಃ ಸಹಸ್ರಪಾತ್ ।

-ಸ. ಸಂ.

ಸಹಸ್ರಮೂರ್ಧಾ ಇತ್ಯಾದಾವಿವ ಸಹಸ್ರಶಬ್ದಃ ಅಮಿತಾರ್ಥಕತಯಾ ವ್ಯಾಖ್ಯಾತವ್ಯಃ ।

ಭಗವಂತನ ವಿರಾಟ್‌ರೂಪವು ಸಾವಿರಾರು ತಲೆಗಳನ್ನೆಲ್ಲ ಹೊಂದಿರುವಂತೆ ಸಾವಿರಾರು ಪಾದಗಳನ್ನೂ ಹೊಂದಿರುವುದು.[1] ಹಾಗೆಯೇ ಎಲ್ಲೆಡೆ ವ್ಯಾಪ್ತನಾಗಿರುವ ಭಗವಂತನ ಲೀಲಾ ಪ್ರಮಾಣದ ಅನಂತರೂಪಗಳು ಎಲ್ಲೆಲ್ಲು ಪಾದಗಳನ್ನು ಹೊಂದಿರುವುದರಿಂದಲೂ ಭಗವಂತನು 'ಸಹಸ್ರಪಾತ್' ಇಷ್ಟೇ ಅಲದೆ, ಅನಂತ ಜೀವಿಗಳು ಪಡೆದಿರುವ ಪಾದಗಳು ಮುಖ್ಯವಾಗಿ ಭಗವಂತನಿಗೇ ಸೇರಿದವು.[3] ಭಗವಂತನು ಜೀವಾತ್ಮರ ಅಪೇಕ್ಷೆಯಂತೆ ಅವುಗಳನ್ನು ನಡೆಸುವುದರಿಂದಷ್ಟೇ ಅವು ಜೀವಾತ್ಮರ ಪಾದಗಳೆನಿಸಿವೆ.[4] ಎಲ್ಲ ಪ್ರಾಣಿಗಳಲ್ಲಿ ನಿಯಾಮಕನಾಗಿರುವ ಭಗವಂತನೇ ಆ ಎಲ್ಲ ಪ್ರಾಣಿಗಳ ಇಂದ್ರಿಯಗಳಿಗೆ ಒಡೆಯನಾಗಿರುವನೆಂದು 'ಸರ್ವೇಂದ್ರಿಯ ಮಯ' ಎಂದು ಅವನನ್ನು ವಿಶೇಷಿಸಿದೆ ಸ್ಕಾಂದ.[5] ಆದ್ದರಿಂದ ಎಲ್ಲ ಪ್ರಾಣಿಗಳ ಪಾದಗಳೂ ಮುಖ್ಯವಾಗಿ ಆಯಾಯ ಪ್ರಾಣಿಯ ನಿಯಾಮಕನಾದ ಭಗವಂತನಿಗೇ ಸೇರಿರುವುದರಿಂದಲೂ ಅವನು 'ಸಹಸ್ರಪಾತ್'

---

1 'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ।

-ಪು. ಸೂ.

2 'ಅಣೋರಣುತರೈ ರೂಪೈಃ ಪಾಣಿಪಾದಾದಿಸಂಯುತೈಃ । ಸರ್ವತಃ ಸಂಸ್ಥಿತತ್ವಾದ್' ವಾ ಸರ್ವತಃ ಪಾಣಿಪಾದವಾನ್ (ಗೀ. ಭಾ. 13-14) ಇತ್ಯುಕ್ತದಿಶಾ ಸರ್ವತಃ ಪಾಣಿ-ಪಾದವತ್ತ್ವಾದೇವ ಸಹಸ್ರಪಾದಪಿ ।

3 ಬ್ರಹ್ಮಣೋ ವಾ ಏತಾನಿ ಕರಣಾನಿ....

-ಕಾಷಾಯಣಶ್ರುತಿ (ಬ್ರ. ಸೂ. ಭಾ)

4 'ಕರಣೈಃ ಕಾರಣಂ ಬ್ರಹ್ಮ ಪುರುಷಾಪೇಕ್ಷಯಾಖಿಲಮ್ । ಶ್ರೋತ್ರಾದಿಭಿಃ ಕಾರಯತಿ ಕರಣಾನೀತ್ಯತೋ ವಿದುಃ'

-ವಾರಾಹ (ಬ್ರ. ಸೂ. ಭಾ. 2-4-14)

5 ಸರ್ವೇಂದ್ರಿಯಮಯೋ ವಿಷ್ಣುಃ ಸರ್ವಪ್ರಾಣಿಷು ಚ ಸ್ಥಿತಃ ।

-ಸ್ಕಾಂದ (ಬ್ರ. ಸೂ. ಭಾ. 1,2-7)

ಪ್ರಾಣಿಷು ಸ್ಥಿತ ಇತ್ಯನೇನ ಸ್ವ್ಯತಾವಿಂದ್ರಿಯಮಯತ್ವೇ ತತ್ಸ್ವಾಮಿತ್ವಂ ಹೇತುರುಕ್ತ ಇತಿ ಭಾವಃ । ತಥಾಚ ಸರ್ವಪ್ರಾಣಿಷು ಪ್ರಾಣಾದಿಪ್ರೇರಕತ್ವೇನ ಸ್ಥಿತತ್ವಾತ್ ಸರ್ವೇಂದ್ರಿಯಮಯೋ ವಿಷ್ಣುರಿತಿ ಯೋಜನಾ ದರ್ಶಿತಾ । ಮಯಟೋ ವಿಕಾರಾದಿರಿವ ಸ್ವಾರ್ಥತ್ವಾತ್ ಸ್ವಾಮಿತ್ವಮುಖ್ಯಾರ್ಥ ಇತಿ ದರ್ಶಿತಮ್ ।

-ಭಾ. ದೀ.

೨ ಸಾವಿರಾರು ಕಿರಣಗಳುಳ್ಳವನು

ಭಗವಂತನು ಅಮಿತ ಕಿರಣಗಳುಳ್ಳವನು ಒಬ್ಬ ಬ್ರಾಹ್ಮಣನ ಮೃತ ಮಕ್ಕಳನ್ನು ಅರ್ಜುನನ ಮೂಲಕ ತಲುಪಿಸಿಕೊಡಲು, ಅರ್ಜುನನನ್ನು ಹಾಗೂ ಆ ಬ್ರಾಹ್ಮಣನನ್ನು ಕರಕೊಂಡು ವೈಕುಂಠಕ್ಕೆ ತೆರಳಿದ ಶ್ರೀಕೃಷ್ಣನು—ತನ್ನ ಮೂಲರೂಪದಲ್ಲಿ ಐಕ್ಯವನ್ನು ಹೊಂದುವನು—ಎಂದು ನಿರೂಪಿಸುವಾಗ ಮೂಲರೂಪವು 'ಅಮಿತ ಸೂರ್ಯರ ಕಿರಣಗಳಂತೆ ಕಿರಣವುಳ್ಳದ್ದು' —ಎಂದು ವಿಶೇಷಿಸಲಾಗಿದೆ[2]

೩ (ಸೂರ್ಯಾದಿಗಳಿಗೆ) ಸಾವಿರಾರು ಕಿರಣಗಳನ್ನು ಅನುಗ್ರಹಿಸಿರುವವನು.[3]

ಬ್ರಹ್ಮಾಂಡದ ಮಧ್ಯದಲ್ಲಿರುವ ಭಗವಂತನು ಪ್ರಕಾಶ ಪದಾರ್ಥಗಳಿಗೆಲ್ಲ ಪ್ರಕಾಶವನ್ನು ನೀಡುತ್ತಿರುವನೆಂದು ಅಥರ್ವಣೋಪನಿಷತ್ತು ಸಂದೇಶಿಸಿದೆ.[4]

೪ ಅಮಿತ ಜೀವಾತ್ಮರನ್ನು ರಕ್ಷಿಸುವ 'ಸಹಸ್ರಪ' ಎನಿಸುವ ಚತುರ್ಮುಖನನ್ನು ಅಥವಾ ಅನೇಕ ಕಿರಣಗಳಿಂದ ನೀರನ್ನು ಸ್ವೀಕರಿಸುವ ಪ್ರಯುಕ್ತ 'ಸಹಸ್ರಪ' ಎನಿಸುವ ಸೂರ್ಯನನ್ನು ಪ್ರಲಯಕಾಲದಲ್ಲಿ ಸಂಹರಿಸುವವನು[5]

---

೨ 1 ಸಹಸ್ರಾಣಿ ಪಾದಾಃ ಕಿರಣಾಃ ಯಸ್ಯ ಸಃ ಸಹಸ್ರಪಾತ್ ।

'ಪಾದೋ ಬುಧ್ನೇ ತುರೀಯಾಂಶೇ ಶೈಲಪ್ರತ್ಯಂತಪರ್ವತೇ । ಚರಣೇ ಚ ಮಯೂಖೇ ಚ'

-ಮೇದಿನೀ ।

2 'ಸಹಸ್ರಮೂರ್ಧನ್ಯುರುಶೇಷಭೋಗ ಆಸೀನರೂಪೇಽಮಿತಸೂರ್ಯದೀಧಿತೌ'

ಮ. ಭಾರ. ತಾ. ನಿ. 21-32

೩ 3 ಸಹಸ್ರಾಣಿ ಪಾದಾಃ ಕಿರಣಾಃ ಸೂರ್ಯಾದೀನಾಂ ಯಸ್ಮಾತ್ಸಃ ಸಹಸ್ರಪಾತ್ ।

4 ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ ।
ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ ...

-ಅಥ. ಉ. 2-1-11

೪ 5 ಸಹಸ್ರಂ ಅಮಿತಾನ್ ಜೀವಾತ್ಮನಃ ಪಾತಿ ರಕ್ಷತೀತಿ 'ಸಹಸ್ರಪಃ' ಚತುರ್ಮುಖಃ । ಪ್ರಲಯೇ ತಮಪಿ ಅತ್ತೀತಿ ಸಹಸ್ರಪಾತ್ । ಅಥವಾ ಸಹಸ್ರೇಣ ಅನೇಕೈಃ ಕಿರಣೈಃ ಜಲಂ ಪಿಬತೀತಿ ಸಹಸ್ರಪಃ ಸೂರ್ಯಃ । ಪ್ರಲಯೇ ತಮಪ್ಯತ್ತೀತಿ ಸಹಸ್ರಪಾತ್ ।

೧ ಅನಂತ ಸ್ವರೂಪಾಂಶಗಳನ್ನು ಹೊಂದಿರುವವನು[1]

೨ ಗುಣಪೂರ್ಣಗಳಾದ ಸ್ವರೂಪಾಂಶಗಳುಳ್ಳವನು[2]

೩ ಅನಂತ ಜೀವಾತ್ಮರು ತನ್ನ ಭಿನ್ನಾಂಶರಾಗಿ ಉಳ್ಳವನು[3]

ಅಂಶಿಗೆ ಇರುವಷ್ಟು ಸಾಮರ್ಥ್ಯವನ್ನೆಲ್ಲ ಒಳಗೊಂಡಿದ್ದು, ಅದರಷ್ಟೇ ಸ್ವರೂಪವುಳ್ಳ, ಅದಕ್ಕಿಂತ ಅಭಿನ್ನವಾದ ಅಂಶವು ಸ್ವರೂಪಾಂಶವೆನಿಸಿದರೆ, ಅಂಶಿಯ ಸಾಮರ್ಥ್ಯದ ಸ್ವಲ್ಪ ಅಂಶವನ್ನಷ್ಟೇ ಪಡೆದಿದ್ದು, ಅದಕ್ಕೆ ಕಿಂಚಿತ್ ಸದೃಶವಾದ ಅಂಶವು ಭಿನ್ನಾಂಶ ಎನಿಸುವುದು.[4] ಮತ್ಸ್ಯಕೂರ್ಮಾದಿಗಳು ಭಗವಂತನ ಸ್ವರೂಪಾಂಶರೆನಿಸಿದರೆ, ಜೀವಾತ್ಮರು ಪರಮಾತ್ಮನ ಭಿನ್ನಾಂಶರು.[5] ಈ ಅಭಿಪ್ರಾಯದಲ್ಲೇ ಪುರುಷಸೂಕ್ತವು ಸಮಸ್ತ ಜೀವಾತ್ಮರೂ ಪುರುಷನಾಮಕ ಭಗವಂತನ 'ಪಾದ'[6]—ಎಂದಿದೆ.

---

೧ 1 ಸಹಸ್ರಂ ಅನಂತಾಃ ಪಾದಾಃ ಸ್ವರೂಪಾಂಶಾಃ ಯಸ್ಯ ಸಃ ಸಹಸ್ರಪಾತ್ ।

೨ 2 ಗುಣೈಃ ಸಹ ಸರಂತೀತಿ ಸಹಸ್ರಾಃ, ಗುಣಪೂರ್ಣಾಃ ಪಾದಾಃ ಸ್ವರೂಪಾಂಶಾಃ ಯಸ್ಯ ಸಃ ಸಹಸ್ರಪಾತ್ ।

೩ 3 ಸಹಸ್ರಂ ಅಮಿತಾಃ ಜೀವಾತ್ಮಾನಃ ಪಾದಃ ಭಿನ್ನಾಂಶಃ ಯಸ್ಯ ಸಃ ಸಹಸ್ರಪಾತ್ ।

4 ಅಂಶಸ್ತು ದ್ವಿವಿಧೋ ಜ್ಞೇಯಃ ಸ್ವರೂಪಾಂಶೋಽನ್ಯ ಏವ ಚ । ವಿಭಿನ್ನಾಂಶೋಽಲ್ಪಶಕ್ತಿಃ ಸ್ಯಾತ್ ಕಿಂಚಿತ್ ಸಾದೃಶ್ಯಮಾತ್ರಯುಕ್ । ಅಂಶಿನೋ ಯತ್ತು ಸಾಮರ್ಥ್ಯಂ ಯತ್ ಸ್ವರೂಪಂ ಯಥಾ ಸ್ಥಿತಿಃ । ಸ ಏವ ಚೇತ್ ಸ್ವರೂಪಾಂಶಃ ..।

-ಅ. ವ್ಯಾ. 2-3-42

5 'ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ. . . .'

-ಬ್ರ. ಸೂ. 2-3-42

6 'ಮಂತ್ರವರ್ಣಾತ್' (ಬ್ರ. ಸೂ. 2-3-43) ಇತಿ ಸೂತ್ರಂ ಜೀವಾತ್ಮನಾಂ ಪರಮಾತ್ಮನಃ ವಿಭಿನ್ನಾಂಶತ್ವೇ 'ಪಾದೋಽಸ್ಯ ವಿಶ್ವಾ ಭೂತಾನಿ' - ಇತಿ ಪುರುಷಸೂಕ್ತಂ ಸಂವಾದತಯಾ ಉಲ್ಲಿಖತಿ ।

# ಜಿಜ್ಞಾಸೆ

["ಸರ್ವತ ಪಾಣಿಪಾದಂ ತತ್"]

ಪ್ರ – ಪರಮಾತ್ಮನ ಪಾದವು ಪರಮಾತ್ಮನ ಶರೀರದ ಅಧೋಭಾಗದಲ್ಲಿಯೇ ಇರಬೇಕು. ಮೇಲು ಭಾಗದಲ್ಲಿ ಇರಬಾರದು ಹಾಗಾದರೆ ಅವನ ಪ್ರತಿಯೊಂದು ಪಾದಾದಿ ಅವಯವಗಳು ಸರ್ವತ್ರ ಇವೆ ಎಂದು 'ಸರ್ವತಃ ಪಾಣಿಪಾದಂ ತತ್' ಎಂದು ಶಾಸ್ತ್ರದಲ್ಲಿ ಹೇಳಿದ್ದನ್ನು ಹೇಗೆ ಕೂಡಿಸುವದು?

ಉ – ಪರಮಾತ್ಮನ ಅಣುರೂಪಕ್ಕೂ ವ್ಯಾಪ್ತರೂಪಕ್ಕೂ ಅಭೇದವು ಇದ್ದದ್ದರಿಂದ ಅಣುರೂಪವು ಕೂಡ ವ್ಯಾಪ್ತವೆಂದು ಹೇಳಲ್ಪಡುವಂತೆ ಪರಮಾತ್ಮನ ಪಾದಕ್ಕೂ ಅವನ ಇತರ ಅವಯವ ಗಳಿಗೂ ಅಭೇದವು ಇದ್ದದ್ದರಿಂದ ಪರಮಾತ್ಮನ ಶಿರಸ್ಸು ಊರ್ಧ್ವ ಭಾಗದಲ್ಲಿ ಇದ್ದರೆ ಅವನ ಪಾದ ಮತ್ತು ಅವನ ಶಿರಸ್ಸು ಅಭಿನ್ನವಾದ್ದರಿಂದ ಪಾದವೂ ಊರ್ಧ್ವ ಭಾಗದಲ್ಲಿ ಇದೆ ಎಂದು ಒಪ್ಪಬಹುದು ಆದುದರಿಂದ 'ಸರ್ವತಃ ಪಾಣಿಪಾದಂ ತತ್' ಎಂಬ ಮಾತು ಕೂಡುತ್ತದೆ



ಆವರ್ತನೋ ನಿವೃತ್ತಾತ್ಮಾ ಸಂವೃತಃ ಸಂಪ್ರಮರ್ದನಃ ।
ಅಹಃ ಸಂವರ್ತಕೋ ವಹ್ನಿರನಿಲೋ ಧರಣೀಧರಃ ॥ ೨೫ ॥

೨೨೮ ಆವರ್ತನಃ

೧ ಜಗಚ್ಚಕ್ರವನ್ನು ತಿರುಗಿಸುವವನು.[1]

'ಪ್ರಕೃತಿಯಿಂದ ಪ್ರೇರಿಸಲ್ಪಡುವ ಜಗಚ್ಚಕ್ರವು ಮನಃಪ್ರಧಾನವಾದುದು. ಈ ಚಕ್ರದಲ್ಲಿ ಪೃಥಿವ್ಯಾದಿ ಪಂಚಭೂತಗಳೂ ದಶೇಂದ್ರಿಯಗಳೂ—ಹೀಗೆ ಒಟ್ಟು ಹದಿನೈದು ಅಲಗುಗಳು. ಪ್ರಕೃತಿಯ ಸತ್ವ, ರಜಸ್ತಮೋ ಗುಣಗಳೇ ಅದರ ಮಧ್ಯದ ಭಾಗ- ದೇವ, ಅಸುರ, ಮನುಷ್ಯ ಗಂಧರ್ವ, ರಾಕ್ಷಸ, ಪಿಶಾಚ, ತಿರ್ಯಕ್ ಪ್ರಾಣಿಗಳು ಹಾಗೂ ಸ್ಥಾವರಗಳು—ಹೀಗೆ ಎಂಟು ಸುತ್ತು ಗಳು ಆ ಚಕ್ರಕ್ಕೆ. ಪ್ರಕಾಶಸ್ವರೂಪಿಯಾಗಿದ್ದು 'ವಿದ್ಯುತ್' ಎನಿಸುವ ಭಗವಂತನೇ ಆ ಚಕ್ರಕ್ಕೆ ಬಲಪ್ರದನು. ಹಾಗೆಯೇ ಅವನೇ ಆ ಚಕ್ರಕ್ಕೆ ಅಚ್ಚು ಆಗಿರುವನು'—ಎಂಬುದಾಗಿ ಚತುರ್ಮುಖನು

---

೧ 1 ಆವರ್ತಯತಿ ಜಗಚ್ಚಕ್ರಂ ಪರಿವರ್ತಯತೀತಿ ಆವರ್ತನಃ ।

೩. ಶಿಂಶುಮಾರ ರೂಪದಿಂದ ನಕ್ಷತ್ರಾದಿಜ್ಯೋತಿಶ್ಚಕ್ರವನ್ನು ತಿರುಗಿಸುವವನು[1]

ನಕ್ಷತ್ರಗಣದಲ್ಲಿ ಎಲ್ಲದಕ್ಕಿಂತಲೂ ಎತ್ತರದಲ್ಲಿರುವ ಧ್ರುವಮಂಡಲದಲ್ಲಿರುವ ಶಿಂಶುಮಾರ ರೂಪಿ ಭಗವಂತನನ್ನು ಆಶ್ರಯಿಸಿಕೊಂಡು ಜ್ಯೋತಿಶ್ಚಕ್ರವು ತಿರುಗುತ್ತಿದೆ—ಎಂಬುದಾಗಿ ಬ್ರಹ್ಮಾಂಡವು ಸಂದೇಶಿಸಿದೆ[2]

೪ ಮನುಷ್ಯರನ್ನು ಸಂಸಾರದಲ್ಲಿ ಅಡ್ಡಾಡಿಸುವವನು[3]

ಭಗವಂತನು ಮನುಷ್ಯರನ್ನು ಸಂಸಾರದಲ್ಲಿ ಮತ್ತೆ ಮತ್ತೆ ಅಡ್ಡಾಡಿಸುವನೆಂದು ಭವಿಷತ್ಪರ್ವ ಸಂದೇಶಿಸಿದೆ[4]

೫ ಜೀವರನ್ನು ನಾನಾಕರ್ಮಗಳಲ್ಲಿ ತೊಡಗಿಸುವವನು[5]

---

ವಾಸುದೇವಾದಿನಾಮವದ್ಭಿಃ ರೂಪೈರ್ವ್ಯರ್ತೀನ್ ವಿಶೇಷತೋऽಧಿಕಾನ್ನವತಿಂ ಸಾಕಂ ಯುಗಪದೇವ ಅವಿನಿಪತ್ ಪರ್ಯವರ್ತಯತ್, 'ವಿಪ ಪರಿವರ್ತನ' ಇತಿ ಧಾತೋಃ ಕಿಮುಂತಾನ್ಯಾನ್ । ಪ್ರಧಾನವಾಯುನಾ ಸಹ ಪಂಚಾಶನ್ಮರುತೋ, ವಸವೋ, ರುದ್ರಾದಿತ್ಯಾ ಏಕಾದಶ, ಪ್ರಜಾಪತಯಶ್ಚ ಬ್ರಹ್ಮದಶಮಾ ನವತಿದೇವಾಃ ।

-ತತ್ತ್ವದೀಪಿಕಾ

೩ 1 ಶಿಂಶುಮಾರರೂಪೇಣ ಗ್ರಹನಕ್ಷತ್ರಾದಿಜ್ಯೋತಿಶ್ಚಕ್ರಂ ಆವರ್ತಯತಿ ಪರಿವರ್ತಯತೀತಿ ಆವರ್ತನಃ ।

2 ಜ್ಞಾನಾನಂದಾತ್ಮಕೇ ವಿಷ್ಣೌ ಶಿಂಶುಮಾರವಪುಷ್ಯಥ । ಊರ್ಧ್ವಲೋಕೇಷು ಸಂವ್ಯಾಪ್ತ ಆದಿತ್ಯಾದ್ಯಾಃ ಸಮಾಶ್ರಿತಾಃ'

—ಬ್ರಹ್ಮಾಂಡ (ಭಾಗ. ತಾ. ನಿ. 5-20-37)

೪ 3 ಆವರ್ತಯತಿ ಮಾನುಷಾನ್ ಸೃತೌ ಭ್ರಾಮಯತೀತಿ ಆವರ್ತನಃ ।

4 ಪುನಃ ಪುನರ್ಮಾನುಷಾಂಸ್ತು ಸೃತಾವಾವರ್ತಯತ್ಯಸೌ ।

—ಭವಿಷ್ಯತ್ಪರ್ವ (ಬ್ರ. ಸೂ. ಭಾ. 3-4 38)

೫ 5 ಆವರ್ತಯತಿ ಜೀವಾನ್ ನಾನಾ ಕರ್ಮಸು ಪ್ರವರ್ತಯತೀತಿ ಆವರ್ತನಃ ।

ಈಶ್ವರನು ಸಕಲ ಜೀವಿಗಳ ಹೃದಯದಲ್ಲಿದ್ದುಕೊಂಡು ದೇಹಗಳಲ್ಲಿರುವ ಜೀವಿಗಳನ್ನು ಸ್ವೇಚ್ಛಾನುಸಾರವಾಗಿ ನಾನಾಕರ್ಮಗಳಲ್ಲಿ ತೊಡಗಿಸುವನೆಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[1]

೬ (ಅಜಿತ ರೂಪದಿಂದ ಅಮೃತಕ್ಕಾಗಿ ಕ್ಷೀರಸಾಗರವನ್ನು ಕಡೆಯುತ್ತ ಅದರ ನೀರನ್ನು) ಸುತ್ತ ತಿರುಗಿಸಿರುವವನು.[2]

ಸುರಾಸುರರು ಮಥನದಲ್ಲಿ ಅಸಮರ್ಥರಾಗಲು ಅಜಿತನಾಮಕ ಭಗವಂತನೇ ಕ್ಷೀರಸಾಗರವನ್ನು ಮಥಿಸಿರುವನು.[3]

೭ ಎಲ್ಲೆಡೆ ಇರುವವನು.[4]

೮ (ನದಿಮೊದಲಾದವುಗಳ ನೀರಲ್ಲಿ) ಸುಳಿಯನ್ನುಂಟು ಮಾಡುವವನು.[5]

---

1 ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
-ಗೀ. 18-61

೬ 2 ಆವರ್ತಯತಿ ಸುಧಾರ್ಥಂ ಕ್ಷೀರಸಾಗರಂ ಮಥ್ನನ್ ಅಜಿತನಾಮಕಃ ಭಗವಾನ್ ತದು-ದಕಂ ಪರಿವರ್ತಯತೀತಿ ಆವರ್ತನಃ ।

3 ಮಥ್ಯಮಾನಾತ್ ತಥಾ ಸಿಂಧೋರ್ದೇವಾಸುರವರೂಥಪೈಃ ।
ಯದಾ ಸುಧಾ ನ ಜಾಯೇತ ನಿರ್ಮಮಂಥಾಜಿತಃ ಸ್ವಯಮ್ ॥
-ಭಾಗ. 8-7-16

* ಶ್ರಾಂತೇಷು ತೇಷ್ವೇಕ ಉರುಕ್ರಮಸ್ತ್ವಂ ಸುಧಾರಸಾಪ್ತ್ಯೈ ಮುದಿತೋ ಹ್ಯಮಂಥ್ನಾಃ ।
-ಮ. ಭಾರ. ತಾ. ನಿ. 10-13

೭ 4 ಆ ಸಮಂತಾದ್ ವರ್ತನಮಸ್ಯೇತ್ಯಾವರ್ತನಃ ।
-ವಿ. ರಾ.

೮ 5 ಆವರ್ತಂ ನದ್ಯಾದಿಗತಾಂಭಸಾಂ ಭ್ರಮಂ ನಯತೀತಿ ಆವರ್ತನಃ ।
-ಪ. ಸಂ.

೯ (ಸಂಸಾರ-ಸಾಗರದಲ್ಲಿ) 'ಅಹಂಕಾರ' 'ಮಮಕಾರ'ಗಳೆಂಬ ಸುಳಿಯನ್ನು ನಿರ್ಮಿಸುವವನು[1]

ಜಿಜ್ಞಾಸೆ

[ಪ್ರತಿಯುಕ್ತಿ ಇಲ್ಲದ ಯುಕ್ತಿ]

ಪ್ರ - ಶ್ರುತಿಗಳು ಸ್ಮೃತಿಗಳು ಯುಕ್ತಿಗಳು ಈಶ್ವರನ [illegible] ಯಾರು [illegible] ನರಾಧಮರೋ ಅವರು ಮಾತ್ರ ಈಶ್ವರನು ಇಲ್ಲ ಎಂದು [illegible] 'ಶ್ರುತಿಃ ಸ್ಮೃತಿರ್ಯುಕ್ತಿರೇವ ಯುಕ್ತ್ಯುಪೇತಾ ಪರಂ ಪದಂ । ವದಂತಿ [illegible] ಚಾಧಮಃ' ಎಂಬ ಸ್ಮೃತಿಯು [illegible] '[illegible] ದೇವ ಏಕಃ' ಎಂಬ ಶ್ರುತಿಯು ಎಲ್ಲ ಲೋಕಗಳನ್ನು ಸೃಷ್ಟಿ ಮಾಡುವ ಒಬ್ಬ ದೇವನು ಇದ್ದಾನೆ ಎಂದು ಹೇಳುತ್ತದೆ 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ' ಎಂಬ ಸ್ಮೃತಿಯು ಸರ್ವ ನಿಯಾಮಕನಾದ ನಾರಾಯಣನು ಇದ್ದಾನೆಂದು ಹೇಳುತ್ತದೆ. ಈ ಶ್ರುತಿ ಸ್ಮೃತಿಗಳಿಗೆ ಬೇರೆ ಅರ್ಥವನ್ನು ಹೇಳಲಿಕ್ಕೆ ಬರುವುದಿಲ್ಲ ಆದರೆ ಯುಕ್ತಿಗಳನ್ನು ಹೇಳಿದಾಗ ಪ್ರತಿಯುಕ್ತಿಗಳನ್ನು ಹೇಳಿ ಯುಕ್ತಿಯನ್ನು ಖಂಡಿಸಲು ಸಾಧ್ಯವಾಗುತ್ತದೆ. ಆದುದರಿಂದ ಯುಕ್ತಿಗಳಿಂದ ಈಶ್ವರ ಸಿದ್ಧಿಯನ್ನು ಅಂಗೀಕರಿಸಬಹುದೇ?

ಉ - ಸೂರ್ಯ ಚಂದ್ರ ಮೊದಲಾದ ಜ್ಯೋತಿಶ್ಚಕ್ರವು ಸರಿಯಾಗಿ ತಿರುಗುತ್ತಿರುವ ಸುವ್ಯವಸ್ಥೆಯು ವ್ಯವಸ್ಥಾಪಕನಾದ ಈಶ್ವರನು ಇಲ್ಲವಾದರೆ ಕೂಡಲಾರದು. ಸುವ್ಯವಸ್ಥೆಯನ್ನು ಮಾಡತಕ್ಕ ರಾಜನು ಇಲ್ಲವಾದರೆ ಸುವ್ಯವಸ್ಥೆಯಿಂದ ನಡೆಯುತ್ತಿರುವ ರಾಜ್ಯವು ಹೇಗೆ ಕೂಡಲಾರದೋ ಹಾಗೆಯೇ ಸುವ್ಯವಸ್ಥೆಯಿಂದ ಸೂರ್ಯಾದಿ ಜ್ಯೋತಿಶ್ಚಕ್ರಭ್ರಮಣವು ಜಗದೀಶ್ವರನು ಇಲ್ಲವಾದರೆ ಕೂಡಲಾರದು ಈ ಯುಕ್ತಿಗೆ ಪ್ರತಿಯುಕ್ತಿಯು ಇಲ್ಲ.

೨೨೯ (ಅ) ನಿವೃತ್ತಾತ್ಮಾ

೧ ಸಂಸಾರ ಬಂಧನದಿಂದ ದೂರವಾದ ಸ್ವರೂಪ ಉಳ್ಳವನು.[2]

---

೯ 1 ಆವರ್ತಂ ಸಂಸಾರಸಾಗರೇ ಅಹಂಕಾರಮಮಕಾರಾತ್ಮಕಂ ಭ್ರಮಂ ನಯತೀತಿ ಆವರ್ತನಃ ।

೧ 2 ನಿವೃತ್ತಃ ಸಂಸಾರಬಂಧನಾನ್ನಿವೃತ್ತಃ ಆತ್ಮಾ ಸ್ವರೂಪಂ ಯಸ್ಯ ಸಃ ।

ಭಗವಂತನು ಎಂದೆಂದೂ ಸಂಸಾರಬಂಧನಕ್ಕೊಳಗಾಗದವನು. ಹೀಗೆ ನಿತ್ಯಮುಕ್ತನಾಗಿರುವುದರಿಂದಲೇ ಅವನು ಯಾವಾಗಲೂ ಮುಕ್ತ ಎಂದೆನಿಸುವನು[1] ಹೊರತು ಮೊದಲು ಸಂಸಾರಬದ್ಧನಾಗಿದ್ದು ಮತ್ತೆ ಅದರ ನಾಶ ಹೊಂದಿದ ಪ್ರಯುಕ್ತ 'ಮುಕ್ತ' ಎಂದೆನಿಸಿರುವುದಲ್ಲ[2] ಅಂತೆಯೇ ಸಂಸಾರ ಬಂಧನದಿಂದ ಯಾವಾಗಲೂ ದೂರನಾಗಿಯೇ ಇರುವುದರಿಂದ 'ನಿವೃತ್ತಾತ್ಮಾ' ಎಂದೆನಿಸಿರುವನೇ ಹೊರತು ಮೊದಲು ಸಂಸಾರ ಬಂಧನದ ಸಂಬಂಧವಿದ್ದು ಮತ್ತೆ ಅದನ್ನು ಕಳೆಕೊಂಡ ಪ್ರಯುಕ್ತ ಅಲ್ಲ[3]

೨ ಚೆನ್ನಾಗಿ ಇರುವ ಸ್ವರೂಪ ಉಳ್ಳವನು.[4]

ಯಾವಾಗಲೂ ದೋಷದೂರನಾಗಿ ಗುಣಪೂರ್ಣನಾಗಿಯೇ ಇರುವ ಭಗವಂತನು ಚೆನ್ನಾಗಿ ಇರುವವನು

೩ ಜೀವಾತ್ಮರು ಸಂಸಾರ ಬಂಧನದಿಂದ ನಿವೃತ್ತರಾಗುವಂತೆ ಅನುಗ್ರಹಿಸುವವನು.[5]

'ಅಹಂಕಾರ' 'ಮಮಕಾರ'ಗಳ ಮೂಲಕ ಜೀವಾತ್ಮರು ಸಂಸಾರದಲ್ಲಿ ಪ್ರವೃತ್ತರಾಗುವಂತೆ

---

1 ನಿತ್ಯಮುಕ್ತಸ್ತತೋ ವಿಷ್ಣುರ್ಮುಕ್ತನಾಮಾ ಸದೋದಿತಃ ।
-ಬ್ರಹ್ಮಸಂಹಿತಾ (ಭಾಗ. ತಾ. ನಿ. 11-11-5)

2 ಮುಕ್ತಸ್ಯ ತು ನ ಮೋ ಮೋಕ್ಷೋ ಬಂಧಾಭಾವಾತ್ ಕಥಂಚನ । ಮುಕ್ತ ಇತ್ಯಪಿ ನಾಮಸ್ಯೈತತ್ ದೀಪ್ಯತೇಽಸೌ ದಿವಾಕರಃ । ಇತಿವದ್ ಬಂಧರಾಹಿತ್ಯಾನ್ನತು ವೃಕ್ಷಾದಿ-ದೀಪ್ತಿವತ್ । ಕಾದಾಚಿತ್ಕತಯಾ ವಾಚ್ಯಂ ಬಂಧಾಭಾವಾದಮೋಕ್ಷತಃ ।
-ತತ್ತ್ವೋದಯಾ (ಭಾಗ. ತಾ. ನಿ. 11-11-4)

3 ಯಥಾ 'ಕಾಲೋಽಸ್ಮಿ ಲೋಕೇ ಕ್ಷಯಕೃತ್ಪ್ರವೃದ್ಧಃ ।' (ಗೀ. 11-32) ಇತ್ಯತ್ರ 'ಪ್ರವೃದ್ಧಃ' ಇತಿ ಭೂತಾಧಿಕಾರೇ ವಿಹಿತಸ್ಯಾಪಿ ಕ್ತಪ್ರತ್ಯಯಸ್ಯ ಪ್ರಯೋಗದರ್ಶನಾತ ಸಾರ್ವಕಾಲಿಕತ್ವಾರ್ಥಕತ್ವಮಭ್ಯುಪಗಮ್ಯ 'ಅನಾದಿನಿತ್ಯಃ' ಇತ್ಯರ್ಥಃ ನಿರೂಪಿತಃ ತಥಾಽತ್ರಾಪಿ ।

೨ 4 ನಿತರಾಂ ವರ್ತತ ಇತಿ ನಿವೃತ್ತಃ । ನಿವೃತ್ತಃ ಆತ್ಮಾ ಸ್ವರೂಪಂ ಯಸ್ಯ ಸಃ ।

೩ 5 ನಿವೃತ್ತಾಃ ಆತ್ಮಾನಃ ಜೀವಾಃ ಯಸ್ಮಾತ್ಸ ನಿವೃತ್ತಾತ್ಮಾ ।

ಮಾಡುವ ಭಗವಂತನೇ,[1] ಜೀವಾತ್ಮರ ಜ್ಞಾನಭಕ್ತ್ಯಾದಿಗಳಿಂದ ಪ್ರಸನ್ನನಾಗಿ ಅವರ ಅಭಿಮಾನವನ್ನು ಹೋಗಲಾಡಿಸಿ ಕ್ರಮೇಣ ಅವರನ್ನು ಸಂಸಾರಬಂಧನದಿಂದ ನಿವೃತ್ತರನ್ನಾಗಿಸುವನು[2]

೪ ಜೀವಾತ್ಮರು ಚನ್ನಾಗಿ ಇರುವಂತ ಅನುಗ್ರಹಿಸುವವನು.[3]

ಮುಕ್ತರಾದ ಜೀವಾತ್ಮರು ಅವಿದ್ಯಾಕಾಮಕರ್ಮಾದಿಗಳಿಂದ ದೂರರಾಗಿ ಜ್ಞಾನಾನಂದ ಸ್ವರೂಪಿಗಳಾಗಿ ಇರುವಂತೆ ಅನುಗ್ರಹಿಸುವನು.

೫ ಪ್ರಲಯಕಾಲದಲ್ಲಿ ಜೀವಾತ್ಮರು ಯಾರಿಂದ ಅಥವಾ ಯಾರಲ್ಲಿಗೆ ಹಿಂತಿರುಗು

---

1 ಜೀವಸ್ತ್ವದೇಹಧರ್ಮಾರ್ತೋಪಿ ಪರತೋ ದೇಹಧರ್ಮವಾನ್ । ಸ್ವಯಂ ತ್ವನಭಿಮಾನಃ ಸನ್ ಜ್ಞಾನಾದೇವ ದರ್ಶಯೇತ್ । ವಿಷ್ಣುರ್ಜೀವಸ್ತ್ವಭಿಮಾನೀ ಯಾವನ್ಮುಕ್ತಿಪದಂ ವ್ರಜೇತ್

—ವಿಷ್ಣು ಸಂಹಿತಾ (ಭಾಗ. ತಾ. ನಿ 11-10 10)

'ಆತ್ಮಶಬ್ದಸ್ಯ ಸಂದೇಹದೇಹಮನಸೋ ಬುದ್ಧಿಜೀವಾಃ ಸ್ವಯಂ ತಥಾ...ಹ್ಯಮುಖ್ಯಾಃ ಕ್ರಮಶಃ'

—ಪ್ರಕಾಶ ಸಂಹಿತಾ (ಭಾಗ. ತಾ. ನಿ. 3 10-23)

2 ಯೇಷಾಂ ಸ ಏವ ಭಗವಾನ್ ದಯಯೇದನಂತಃ ಸರ್ವಾತ್ಮನಾ ಶ್ರಿತಪದೋ ಯದಿ ನಿರ್ವ್ಯಲೀಕಮ್ । ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ ನೈಷಾಂ ಮಮಾಹಮಿತಿ ಧೀಃ ಶ್ವಸೃಗಾಲಭಕ್ಷ್ಯೇ'

ಭಾಗ. 2-7-42

ಯದಿ ನಿರ್ವ್ಯಲೀಕಂ ಛದ್ಮನಾ ವಿನಾ ಸರ್ವಾತ್ಮನಾ ಸರ್ವಪ್ರಕಾರೇಣ ಶ್ರಿತಪದೋ ಭಗವಾನ್ ಯೇಷಾಂ ದಯಯೇತ್ ದಯಾಂ ಕುರ್ಯಾತ್ ತರ್ಹ್ಯೇಷಾಂ ಶ್ವಸೃಗಾಲ ಭಕ್ಷ್ಯೇ ದೇಹೇ ಮಮಾಹಮಿತಿ ಧೀರ್ನ ಭವತಿ ತೇ ದೇವಮಾಯಾಂ ದೇವಮಹಿಮಾನಂ ವಿದಂತಿ, ಅತಿತರಂತಿ ಚ ಸಂಸಾರಮಿತ್ಯರ್ಥಃ ।

—ಪ್ರಮೇಯ ದೀಪಿಕಾ (ಗೀ. ಭಾ. ಟೀ. 2-24)

೪ 3 ನಿತರಾಂ ವರ್ತಂತ ಇತಿ ನಿವೃತ್ತಾಃ । ಆತ್ಮಾನಃ ಜೀವಾಃ ಯಸ್ಮಾತ್ತೇ ನಿವೃತ್ತಾತ್ಮಾ ।

ಪರೋ ಅಂತರಾತ್ಮಾ[1]

ಸೃಷ್ಟಿಕಾಲದಲ್ಲಿ ಭಗವಂತನಿಂದಲೇ ಸೃಷ್ಟಿ ಮಾಡಲ್ಪಟ್ಟ ಜೀವಾತ್ಮರು ಪ್ರಲಯ ಕಾಲದಲ್ಲಿ ಭಗವಂತನಲ್ಲಿಗೆ ಹಿಂತಿರುಗುವರು[2]

೨ ತನಗೆ ಮತ್ತೊಬ್ಬ ಅಂತರ್ಯಾಮಿ ಇಲ್ಲದಿರುವವನು.[3]

ಭಗವಂತನು ಲಕ್ಷ್ಮೀದೇವಿಗೂ ಅಂತರ್ಯಾಮಿಯಾಗಿರುವನು ಅಂತಹ ಭಗವಂತನಿಗೆ ಮಾತ್ರ ಎಂದೂ ಎಲ್ಲೂ ಯಾರೂ ಅಂತರ್ಯಾಮಿ ಇಲ್ಲ—ಎಂದು ಬೃಹತ್ತರ್ಕ ಸಾರಿದೆ[4]

೩ ಪ್ರಾಕೃತಗಳಾದ ದೇಹ, ಮನಸ್ಸು ಸ್ನೇಹ, ಬುದ್ಧಿ ಮನಸ್ಸು—ಇವುಗಳ ಸಂಪರ್ಕ ಇಲ್ಲದವನು[5]

ಭಗವಂತನಿಗೆ ದೇಹ, ಎದೆ, ಬುದ್ಧಿ, ಮನಸ್ಸು—ಮೊದಲಾದವುಗಳೆಲ್ಲ ಇವೆ[6] ಆದರೆ ಅವು

---

1 ಪ್ರಲಯೇ ನಿವೃತ್ತಾಃ ಆತ್ಮಾನಃ ಜೀವಾಃ ಯಸ್ಮಿನ್ ಸಃ ನಿವೃತ್ತಾತ್ಮಾ ।
ಲಯೇ ನಿವೃತ್ತಾಃ ಸಂಹೃತಾಃ ಆತ್ಮಾನಃ ಜೀವಾಃ ಯೇನ ಸಃ । —ಸ. ಸು

2 'ಯತೋ ವಾ ಇಮಾನಿ ಭೂತಾನಿ ಜಾಯಂತೇ......, ಯತ್ ಪ್ರಯಂತಿ......
'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮೇತಿ.. ...'
—ತೈ. ಉ 3-1

೨ 3 ನಿವೃತ್ತಃ ಅವಿದ್ಯಮಾನಃ ಆತ್ಮಾ ಅಂತರ್ಯಾಮೀ ಯಸ್ಮಾತ್ ಸಃ ನಿವೃತ್ತಾತ್ಮಾ ।

4 ಅಂತರ್ಯಾಮೀ ಶ್ರಿಯಶ್ಚಾಪಿ ವಿಷ್ಣುರೇವ ನ ಸಂಶಯಃ ।
ನಾಂತರ್ಯಾಮೀ ಕಶ್ಚಿದಸ್ತಿ ವಿಷ್ಣೋಃ ಕ್ವಾಪಿ ಕಥಂಚನ ।
ಬೃಹತ್ತರ್ಕ (ಭಾಗ. ತಾ. ನಿ. 6-19-12)

೩ 5 ನಿವೃತ್ತ ಆತ್ಮಾ ಪ್ರಾಕೃತಃ ದೇಹಃ ಸಂದೇಹಃ ಬುದ್ಧಿರ್ವಾ ಯಸ್ಮಾತ್ ಸಃ ನಿವೃತ್ತಾತ್ಮಾ ।
'ಆತ್ಮಶಬ್ದಸ್ಯ......ಸಂದೇಹ ದೇಹ ಮನಸೋ ಬುದ್ಧಿಜೀವಾಃ ಸ್ವಯಂ ತಥಾ......
ಹ್ಯಮುಖ್ಯಾಃ ಕ್ರಮಶಃ' —ಪ್ರಕಾಶಸಂಹಿತಾ

6 'ಬುದ್ಧಿಮನೋಽಂಗಪ್ರತ್ಯಂಗವತ್ತಾಂ ಭಗವತೋ ಲಕ್ಷಯಾಮಹೇ । ಬುದ್ಧಿಮಾನ್ ಮನೋವಾನಂಗಪ್ರತ್ಯಂಗವಾನಿತಿ'
—ಬ್ರ. ಸೂ. ಭಾ. 2-2-41

ಅವನ ಸ್ವರೂಪಾತ್ಮಕಗಳು ಹೊರತು ಪ್ರಾಕೃತಗಳಲ್ಲ. ಈ ಅಭಿಪ್ರಾಯದಿಂದಲೇ ಶಾಸ್ತ್ರದಲ್ಲಿ ಕೆಲವೆಡೆ ಭಗವಂತನಿಗೆ ಶರೀರವಿಲ್ಲ,[1] ಇಂದ್ರಿಯಗಳಿಲ್ಲ,[2] ಮನಸ್ಸು ಇಲ್ಲ, ಬುದ್ಧಿ ಇಲ್ಲ—ಎಂಬ ವ್ಯವಹಾರ ಹೊರಟಿರುವುದು.[3]

ಲ ನಿವೃತ್ತ ಕರ್ಮದವನು ಮೆಚ್ಚಿಕೊಳ್ಳುವವನು ಅಥವಾ ನಿವೃತ್ತ ಕರ್ಮಗಳನ್ನು ವಿಶೇಷವಾಗಿ ಸ್ವೀಕರಿಸುವವನು.[4]

ಬಾಹ್ಯ ಕಾಮನೆಯನ್ನಿಟ್ಟುಕೊಂಡು ಮಾಡುವ ಕರ್ಮ ಪ್ರವೃತ್ತಕರ್ಮ ಎನಿಸಿದರೆ, ನಿಷ್ಕಾಮವಾಗಿ, ಜ್ಞಾನಪೂರ್ವಕವಾಗಿ ಆಚರಿಸಲ್ಪಡುವ ಕರ್ಮ ನಿವೃತ್ತಕರ್ಮ ಎನಿಸುವುದು. ಇದು ಭಗವಂತನ ವಿಶೇಷ ಮೆಚ್ಚುಗೆಗೆ ಪಾತ್ರವಾಗಿರುವುದರಿಂದಲೇ, ಬ್ರಹ್ಮಪ್ರಾಪ್ತಿಗೂ ಕಾರಣವಾಗಿರುವುದು.[5]

---

1 'ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂ . .'
ಈ. ಉ. 1 8

ಸ್ಥೂಲದೇಹಸ್ಯ ರಾಹಿತ್ಯಾದಸ್ನಾವಿರಮುದಾಹೃತಮ್ ।
-ಕೌರ್ಮ (ಈ. ಉ. ಭಾ.)

2 '.. ..ಸರ್ವೇಂದ್ರಿಯವಿವರ್ಜಿತಮ್'
-ಗೀ. 13 15

* . . ಅಚಕ್ಷುಃಶ್ರೋತ್ರಂ ತದಪಾಣಿಪಾದಂ. . .'
—ಅಥ. ಉ. 1-2-6

3 ಅದೇಹೋ ದೇಹವಾಂಶ್ಚೈಕಃ ಪ್ರೋಚ್ಯತೇ ಪರಮೇಶ್ವರಃ ।
ಅಪ್ರಾಕೃತಶರೀರತ್ವಾದದೇಹ ಇತಿ ಕಥ್ಯತೇ । ಶಿರಶ್ಚರಣಬಾಹ್ವಾದಿವಿಗ್ರಹೋಽಯಂ ಸ್ವಯಂ ಹರಿಃ । ಸ್ವಸ್ಮಾನ್ನಾನ್ಯೋ ವಿಗ್ರಹೋಽಸ್ಯ ತತಶ್ಚಾದೇಹ ಉಚ್ಯತೇ ।
-ಪರಮಶ್ರುತಿ (ಗೀ. ತಾ. 2-25)

ಲ 4 ನಿವೃತ್ತೇ ಆತ್ಮಾ ಮನಃ ಯಸ್ಯ ಸಃ ನಿವೃತ್ತಾತ್ಮಾ । ನಿವೃತ್ತಂ ವಿಶೇಷತಃ ಅದತ್ತೇ ಇತಿ ವಾ ನಿವೃತ್ತಾತ್ಮಾ ।

5 ನಿಷ್ಕಾಮಂ ಜ್ಞಾನಪೂರ್ವಂ ಚ ನಿವೃತ್ತಮಿಹ ಚೋಚ್ಯತೇ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ।
-ವ್ಯಾಸಸ್ಮೃತಿ (ಗೀ. ತಾ. 5-6)

೯ ನಿವೃತ್ತಿ ಮಾರ್ಗದಲ್ಲಿರುವ ಸಾಧಕರಿಗೆ ಪ್ರಿಯನಾದವನು ಅಥವಾ ಅಂತಹ ಸಾಧಕರೇ ಪ್ರಿಯರಾಗಿ ಉಳ್ಳವನು[1]

೧೦ (ಎಂದೆಂದೂ ಹೋಗದಿರುವ) ದೇಹ ಉಳ್ಳವನು[2]

ಭಗವಂತನ ದೇಹವು ಸ್ವರೂಪಾತ್ಮಕವಾಗಿದ್ದು. ಅದು ಎಂದೆಂದೂ ನಿವೃತ್ತಿ ಹೊಂದುವುದಿಲ್ಲ.

೧೧ ಪ್ರಾಣಿಗಳಲ್ಲಿ ಇರುವ ಆತ್ಮನು[3]

ಭಗವಂತನು ಎಲ್ಲರ ಹೃದಯದಲ್ಲಿ ಮುಖ್ಯವಾಗಿ ಇರುವನು

## ಜಿಜ್ಞಾಸೆ

### [ಪ್ರವೃತ್ತಕರ್ಮ ವಿಹಿತವಲ್ಲ]

ಪ್ರ.- ಪರಮಾತ್ಮನು ನಿವೃತ್ತಕರ್ಮವನ್ನು ಮೆಚ್ಚಿಕೊಳ್ಳುವವನು ಎಂದು ಹೇಳಬಾರದು ಶಾಸ್ತ್ರವು ಪ್ರವೃತ್ತಕರ್ಮವನ್ನು ವಿಧಿಸುತ್ತಿರುವದು ಕಂಡಿದೆ. ಶಾಸ್ತ್ರವು ಪರಮಾತ್ಮನ ಮೆಚ್ಚುಗೆಗೆ ವಿರುದ್ಧವಾಗಬಹುದೇ?

ಉ.- ಶಾಸ್ತ್ರದಲ್ಲಿ ಪ್ರವೃತ್ತ ಕರ್ಮಕ್ಕೆ ವಿಧಿಯು ಇಲ್ಲ ಅದು ವಿಹಿತ ಎಂದು ಹೇಳಬೇಕಾದರೆ ಅದನ್ನು ಮಾಡದೆ ಇದ್ದರೆ ಅನರ್ಥವನ್ನು ಶಾಸ್ತ್ರವು ಹೇಳುವದು ಆವಶ್ಯಕ ಪ್ರವೃತ್ತ ಕರ್ಮವನ್ನು

---

೯ 1 ನಿವೃತ್ತಾನಾಂ ನಿವೃತ್ತಿಮಾರ್ಗಸ್ಥಿತಾನಾಂ ಸಾಧಕಾನಾಂ ಆತ್ಮಾ ಮನಃ ಯಸ್ಮಿನ್ ಸಃ ನಿವೃತ್ತಾತ್ಮಾ । ಅಥವಾ ನಿವೃತ್ತೇಷು ನಿವೃತ್ತಿಮಾರ್ಗಾವಲಂಬಿಷು ಸಾಧಕೇಷು ವಿಷಯೇ ಆತ್ಮಾ ಮನಃ ಯಸ್ಯ ಸಃ ನಿವೃತ್ತಾತ್ಮಾ ।

೧೦ 2 ಅನಿವೃತ್ತಃ ವಿನಾಶಹೀನಃ ಆತ್ಮಾ ದೇಹಾದಿರಸ್ಯೇತ್ಯನಿವೃತ್ತಾತ್ಮಾ ।

—ವಿ. ರಾ.

ಅನಿವೃತ್ತ ಆತ್ಮಾ ದೇಹೋ ಯಸ್ಯ ಸಃ ।

—ಸ. ಸಂ.

೧೧ 3 ಅನಿಷು ವೃತ್ತಾತ್ಮಾ ।

—ವಿ. ರಾ.

ಅಂತಿಮಮರ್ಥದ್ವಯಂ ತು 'ಅನಿವೃತ್ತಾತ್ಮಾ' ಇತಿ ಪದಚ್ಛೇದಮಂಗೀಕೃತ್ಯೋಕ್ತಮ್ ॥

ಮಾಡದೆ ಇದ್ದರೆ ಅನರ್ಥವನ್ನು ಶಾಸ್ತ್ರದಲ್ಲಿ ಹೇಳಲಿಲ್ಲ. ಕರ್ಮಗಳಿಗೆ ಸ್ವರ್ಗಾದಿ ಫಲವನ್ನು ಹೇಳುವದು ಸಾಮಾನ್ಯ ಜನರಿಗೆ ಕರ್ಮದಲ್ಲಿ ಅಭಿರುಚಿಯು ಉಂಟಾಗುವುದಕ್ಕೋಸ್ಕರ. ಬಾಲಕನಿಗೆ ಕಹಿಯಾದ ಔಷಧಿಯನ್ನು ತಾಯಿಯು ಕುಡಿಸುವದಕ್ಕಾಗಿ ಸಕ್ಕರೆಯನ್ನು ಮೊದಲು ಬಾಲಕನ ಬಾಯಿಗೆ ಇಡುವಂತೆ ಶಾಸ್ತ್ರದಲ್ಲಿ ಪ್ರವೃತ್ತಕರ್ಮದ ವಚನವು ಕೇವಲ ಪ್ರರೋಚನ.



## ೨೩೦ ಸಂವೃತಃ

೧ (ಪ್ರಲಯಕಾಲದಲ್ಲಿ ಉಳಿದವರಿಗೆ ಕಾಣದಂತೆ ತಮಸ್ಸಿನಿಂದ) ಆಚ್ಛಾದಿತನಾಗಿರುವವನು.[1]

ಭಗವಂತನು ಪ್ರಲಯಕಾಲದಲ್ಲಿ ಎಲ್ಲವನ್ನೂ ಸಂಹರಿಸಿ ತಾನು ಪ್ರಕೃತಿರೂಪದ ತಮಸ್ಸಿನಲ್ಲಿ ಅಡಗಿ ಇರುವನು. ಪ್ರಲಯಕಾಲದ ಕೊನೆಯಲ್ಲಿ ಆ ತಮಸ್ಸನ್ನು ಸರಿಸಿ, ತಾನು ಪ್ರಾದುರ್ಭವಿಸುವನು. ಬಳಿಕ ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸುವನು.[2] ಭಗವಂತನು ಪ್ರಲಯಕಾಲದಲ್ಲಿ ಪ್ರಕೃತಿರೂಪದ ತಮಸ್ಸಿನಿಂದ ಆವೃತನಾಗಿರುವನೆಂಬುದು ಋಗ್ವೇದದಲ್ಲೂ ಇದೆ.[3] ತಮಸ್ಸಿನ ಈ ಆಚ್ಛಾದನೆ ಭಗವಂತನನ್ನು ಉಳಿದವರು ಕಾಣದಂತೆ ಮಾಡುವುದೇ ಹೊರತು ಭಗವಂತನು ನೋಡಲು ತಡೆಒಡ್ಡದು. ಅವನು ತಮಸ್ಸಿನಲ್ಲಿ ಗೂಢನಾಗಿ ಪ್ರಕೃತಿ, ಪುರುಷ ಮತ್ತು ಕಾಲ ಇವುಗಳನ್ನು ನೋಡುತ್ತ

---

೧ 1 ಸಂವ್ರಿಯತೇ ಪ್ರಲಯೇ ಇತರೇಷಾಂ ದರ್ಶನಂ ಯಥಾ ನ ಸ್ಯಾತ್ತಥಾ ತಮಸಾ ಆಚ್ಛಾದ್ಯತೇ ಇತಿ ಸಂವೃತಃ ।

2 'ಸ ಇದಂ ಸರ್ವಂ ವಿಲಾಪ್ಯಾಂತಸ್ತಮಸಿ ನಿಲೀನಸ್ತದ್ ವಿಲಾಪ್ಯ ವ್ಯಕ್ತೀಸ್ಸ್ಯತೇ ಸ ಇದಂ ಸರ್ವಂ ವಿಸೃಜತಿ... .'

-ಬ್ರ. ಸೂ. ಭಾ. 2-3-17

ನಿಲೀನಶಬ್ದೇನಾಪಿಹಿತತ್ವಮುಚ್ಯತೇ ।

-ಬ್ರ. ಸೂ. ಭಾ.

3 '. . ತಮ ಆಸೀತ್ತಮಸಾ ಗೂಢಮಗ್ರೇ ಪ್ರಕೇತಂ ಸಲಿಲಂ ಸರ್ವಮಾ ಇದಮ್ ।
ತುಚ್ಛ್ಯೇನಾಭ್ವಪಿಹಿತಂ ಯದಾಸೀತ್. . .'

-ಋ. 10-129-3

ಇರುವ... ಆದರೆ ಅವನನ್ನು ಪೂರ್ತಿ ಯಾರೂ ಕಾಣಲಾರರು—ಎಂದು ಪೈಂಗಿಶ್ರುತಿ ಸಂದೇಶಿಸಿದೆ[1]

೨ (ಅಜ್ಞಾನಿಗಳಿಗೆ ಕಾಣದಂತೆ) ಪರಮಾಚ್ಛಾದಿಕಾ ಎಂಬ ಪ್ರಕೃತಿಯಿಂದ ಆಚ್ಛಾದಿತನಾಗಿರುವವನು[2]

ಭಗವಂತನು ಪ್ರಳಯಕಾಲದಲ್ಲಷ್ಟೇ ಅಲ್ಲದೆ, ಉಳಿದ ಕಾಲದಲ್ಲೂ ಜ್ಞಾನಿಗಳಲ್ಲದವರಿಗೆ ಕಾಣಿಸುವುದಿಲ್ಲ. ಪರಮಾಚ್ಛಾದಿಕಾ ಎಂಬ ಪ್ರಕೃತಿಯು ಭಗವಂತನನ್ನು ಆವರಿಸಿ ಅವನ ಜ್ಞಾನವು ಸಾಮಾನ್ಯರಿಗೆ ಬರದಂತೆ ಮಾಡುವುದು[3]. ಈ ಪರಮಾಚ್ಛಾದಿಕೆ ಭಗವಂತನ ಜ್ಞಾನ ಉಳಿದವರಿಗೆ ಬರದಂತೆ ತಡೆಯುವುದೇ ಹೊರತು ಭಗವಂತನಿಗೆ ಪ್ರಪಂಚವನ್ನು ತಿಳಿಯಲು ತಡೆ ಆಗಲಾರದು[4]. ಅಪರೋಕ್ಷ ಜ್ಞಾನಿಗಳಾದ ಚತುರ್ಮುಖನೇ ಮೊದಲಾದ ದೇವತೆಗಳಿಗೆ ಈ ಪರಮಾಚ್ಛಾದಿಕೆಯು ಇರುವುದಿಲ್ಲ[5]

---

1 'ಸ ವಿಶಸ್ಮಿಂಸ್ತಮಸಿ ನಿಲೀನಃ ಪ್ರಕೃತಿಂ ಪುರುಷಂ ಕಾಲಂ ಚಾಪ್ಯನುಪಶ್ಯತಿ ನೈನಂ ಪಶ್ಯತಿ ಕಶ್ಚನ'

–ಪೈಂಗಿಶ್ರುತಿ (ಬ್ರ. ಸೂ. ಭಾ. 2-3-1-7)

೨ 2 ಮೇಘಾಂತರ್ಹಿತಾದಿತ್ಯವತ್ ಯೋಗಮಾಯಾವೃತತ್ವೇನ ಮೂಢಜ್ಞಾನಾವಿಷಯತ್ವಾತ್ ಸಂವೃತಃ ।

–ವಿ. ರಾ.

3 ....ಪರಮಾಚ್ಛಾದಿಕಾ ಪರಾ ।

–ಭಾಗ. ತಾ. ನಿ. 10-94-12

* ಜೀವಂ ಪ್ರತಿ ಮಹಾವಿಷ್ಣುಂ ಯಯಾ ತ್ವಾಚ್ಛಾದಯತಿ ಪ್ರಭೋ ।
ಸಾಽಪರಾ ಪ್ರಕೃತಿರ್ಜ್ಞೇಯಾ ಪರಮಾಚ್ಛಾದಿಕಾ ಸ್ಮೃತಾ ।

–ವಿಷ್ಣುರಹಸ್ಯ

4 ನ ವಿಷ್ಣುಂ ಛಾದಯತ್ಯೇಷಾ ತಜ್ಜ್ಞಾನಂ ಛಾದಯೇತ್ ಪರಮ್ । ಜೀವಸ್ಯೈವ..।

–ಮಹಾತತ್ತ್ವವಿವೇಕ (ಭಾಗ. ತಾ. ನಿ. 10-94-12)

5 ..ನ ತತ್ರಾಪಿ ಬ್ರಹ್ಮಾದೇರಸ್ತಿ ಸಾ ಕ್ವಚಿತ್ ।

–ಮಹಾತತ್ತ್ವ ವಿವೇಕ.

೩. ಜೀವನಲ್ಲಿರುವ ಕಾಮದಿಂದ ಅವನಿಗೆ ತಿಳಿಯದಂತೆ ಆಚ್ಛಾದಿತನಾಗಿರುವವನು[1]

ಹೊಗೆಯಿಂದ ಅಗ್ನಿಯು ಆವೃತವಾಗುವುದು. ಪ್ರಕಾಶ ಸ್ವರೂಪಿಯಾದ ಅಗ್ನಿಗೆ ಹೊಗೆಯು ಸ್ಪರ್ಶವಿಲ್ಲ ಇತರರು ಮಾತ್ರ ಅಗ್ನಿಯನ್ನು ಕಾಣಲಾರರು. ಅಂತೆಯೇ ಜೀವನಲ್ಲಿರುವ ಕಾಮವು ಭಗವಂತನ ಕುರಿತು ಪರದೆಯಂತೆ ಆವರಣವಾಗುವುದು. ಪರಮಾತ್ಮನಿಗೇನೂ ಕಾಮದ ಸ್ಪರ್ಶವಿಲ್ಲ. ಕಾಮದ ಆವರಣದಿಂದಾಗಿ ಜೀವನು ಪರಮಾತ್ಮನನ್ನು ತಿಳಿಯಲಾರನೆಂಬ ಈ ಅಭಿಪ್ರಾಯದಲ್ಲಿ ಗೀತಾಚಾರ್ಯನು ಕಾಮದ ಆವರಣಕ್ಕೆ ಹೊಗೆಯ ಆವರಣದ ದೃಷ್ಟಾಂತವನ್ನು ನೀಡಿರುವನು[2]

೪ ಚೆನ್ನಾಗಿ ಗುಣಗಳಿಂದ ಕೂಡಿರುವವನು[3]

ಭಗವಂತನ ಆನಂದಾದಿಗುಣಗಳು ಅವನ ಸ್ವರೂಪಾತ್ಮಕಗಳಾಗಿದ್ದು[4] ಅವುಗಳಿಂದ ಎಂದೆಂದೂ ವಿಯೋಗ ಹೊಂದದಂತೆ ಅವನು ಅವುಗಳನ್ನು ಹೊಂದಿರುವನು.

೫ ಲಕ್ಷ್ಮೀದೇವಿಯಿಂದ ಹಾಗೂ ಅವಳ ಸ್ವರೂಪಾತ್ಮಕರಾದ ಸೀತಾದೇವಿ ಮತ್ತು ರುಕ್ಮಿಣಿಯರಿಂದ ಚೆನ್ನಾಗಿ, ತಮ್ಮ ಪತಿಯಾಗಿ ಸ್ವೀಕೃತನಾಗಿರುವವನು[5].

---

೩ 1 ಜೀವಸ್ಥಿತೇನ ಕಾಮೇನ ತಸ್ಯ ಜ್ಞಾತೋ ಯಥಾ ನ ಭವತಿ ತಥಾ ಸಂವ್ರಿಯತೇ ಆಚ್ಛಾದ್ಯತ ಇತಿ ಸಂವೃತಃ ।

2 ಧೂಮೇನಾವ್ರಿಯತೇ ವಹ್ನಿಃ.. ತಥಾ ತೇನೇದಮಾವೃತಮ್''
-ಗೀ. 3-38

ಯಥಾ ಧೂಮೇನಾಗ್ನಿರಾವೃತಃ ಪ್ರಕಾಶರೂಪೋಽಪ್ಯನ್ಯೇಷಾಮದರ್ಶನಾಯ ತಥಾ ಪರಮಾತ್ಮಾ ।
-ಗೀ. ಭಾ.

೪ 3 ಸಮ್ಯಗ್ಗುಣೈರ್ವೃತಃ ।
-ಸ. ಸಂ.

4 ಯೈಷಾ ಚೇಷ್ಟಾ ಭಗವತೋ ಯಚ್ಚ ಜ್ಞಾನಂ ಪರಾತ್ಮನಃ । ತತ್ ಸರ್ವಂ ಭಗವಾನೇವ ಯೇ ಚ ಧರ್ಮಾ ಬಲಾದಯಃ ।
-ಐ. ಉ. ಭಾ. 1-3-10.

೫ 5 ಲಕ್ಷ್ಮ್ಯಾ ತತ್ಸ್ವರೂಪಭೂತಯಾ ಸೀತಯಾ ರುಕ್ಮಿಣ್ಯಾ ಚ ಸಂವ್ರಿಯತೇ ಪತಿತ್ವೇನ ಸ್ವೀಕ್ರಿಯತೇ ಇತಿ ಸಂವೃತಃ ।

ಲಕ್ಷ್ಮೀದೇವಿಯು ನಿತ್ಯಮುಕ್ತಳಾದರೂ ಶ್ರೀಹರಿಯನ್ನೇ ತನ್ನ ಪತಿಯನ್ನಾಗಿ ಆಶ್ರಯಿಸಿ ಕೊಂಡಿರುವಳಾದರೂ ಇತರ ಸಾತ್ವಿಕರಿಗೆ ಶ್ರೀಹರಿಯ ಸರ್ವೋತ್ತಮತ್ವವನ್ನು ತಿಳಿಸುವುದಕ್ಕಾಗಿ ಸಮುದ್ರಮಥನಕಾಲದಲ್ಲಿ ಪ್ರಾದುರ್ಭವಿಸಿದ ಅವಳು ಸುರಾಸುರಾದಿಗಳೆಲ್ಲರ ಎದುರು ಮಾಲೆ ಯನ್ನರ್ಪಿಸುವುದರ ಮೂಲಕ ಶ್ರೀಹರಿಯನ್ನು ತನ್ನ ಪತಿಯನ್ನಾಗಿ ವರಿಸಿಕೊಳ್ಳುವಳು[1]

ಜನಕರಾಜನ ಅರಮನೆಯಲ್ಲಿದ್ದ ರುದ್ರಧನುಸ್ಸನ್ನು ಭಂಜಿಸಿದ ಶ್ರೀರಾಮನನ್ನು ಸೀತಾದೇವಿಯು ಮಾಲೆಯನ್ನು ಸಮರ್ಪಿಸುವುದರ ಮೂಲಕ ತನ್ನ ಪತಿಯನ್ನಾಗಿ ವರಿಸಿಕೊಳ್ಳುವಳು[2] ಭೀಷ್ಮಕನ ಮಗಳು ರುಕ್ಮಿಣೀದೇವಿ ಶ್ರೀಕೃಷ್ಣನ ಗುಣಗಳನ್ನು ಕೇಳಿಯೇ ತನಗೆ ಅವನೇ ಪತಿ ಎಂದು ನಿರ್ಧರಿಸಿದ್ದಳು.[3]

## ೬. ಏಕಾಂತ ಭಕ್ತರಿಂದ ಚೆನ್ನಾಗಿ ವರಿಸಲ್ಪಡುವವನು[4]

ಶ್ರೀಕೃಷ್ಣನು ಉದ್ಧವನಿಗೆ ತನ್ನ ಏಕಾಂತ ಭಕ್ತರನ್ನು ಪರಿಚಯಿಸುತ್ತ—ನನ್ನಲ್ಲಿ ಅತ್ಯಧಿಕ ಆದರವನ್ನು ತೋರಿಸುವ ಭಕ್ತರು ಸತ್ಯಲೋಕಾಧಿಪತ್ಯವನ್ನಾಗಲೀ, ಸ್ವರ್ಗಾಧಿಪತ್ಯವನ್ನಾಗಲೀ

---

1 ವವ್ರೇ ವರಂ ಸರ್ವಗುಣೈರಪೇಕ್ಷಿತಂ ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್ ।

-ಭಾಗ. 8-8-23

ಅನಾದ್ಯನಂತಕಾಲೇಽಪಿ ವಿಷ್ಣುನೈವಾಶ್ರಿತಾ ರಮಾ । ಅನ್ಯೇಷಾಂ ಜ್ಞಾಪನಾರ್ಥಾಯ ದೋಷಾನ ತ್ಯಕ್ತ್ವೇತರಾನ್ ಜಹೌ ।

-ಭಾಗ. ತಾ. ನಿ

2 'ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾಮಮ್ಲಾನಪದ್ಮಾಂ ಜಲಜಾಯತಾಕ್ಷೀ ।
ಉಪೇತ್ಯ ಮಂದಂ ಲಲಿತೈಃ ಪದೈಸ್ತಾಂ ತದಂಸ ಆಸಜ್ಯ ಚ ಪಾರ್ಶ್ವತೋಽಭವತ್' ।

-ಮ. ಭಾರ. ತಾ. ನಿ. 4-28

3 ಸೋಪಶ್ರುತ್ಯ ಮುಕುಂದಸ್ಯ ರೂಪವೀರ್ಯಗುಣಶ್ರಿಯಃ ।
ಗೃಹಾಗತೈರ್ಗೀಯಮಾನಾಸ್ತಂ ಮೇನೇ ಸದೃಶಂ ಪತಿಮ್ ॥

-ಭಾಗ. 10-52-23

೬. 4 ಸಂವ್ರಿಯತೇ ಏಕಾಂತಭಕ್ತೈಃ ಸಮ್ಯಕ್ ಸ್ವೀಕ್ರಿಯತ ಇತಿ ಸಂವೃತಃ ।

* ಸಮ್ಯಕ್ ದೇವಾದಿಭಿಃ ಪುರುಷಾರ್ಥತಯಾ ವೃತ ಇತಿ ಸಂವೃತಃ ।

ವಿ. ರಾ.

ಅಖಂಡಭೂಮಿಯ ಚಕ್ರವರ್ತಿ ಪದವಿಯನ್ನಾಗಲೀ, ಪಾತಾಳಾಧಿಪತ್ಯವನ್ನಾಗಲೀ, ಯೋಗಸಿದ್ಧಿಗಳನ್ನಾಗಲೀ, ಯಾಕೆ, ಮೋಕ್ಷಕ್ಕಾಗಿ ಮೋಕ್ಷವನ್ನಾಗಲೀ ಅಪೇಕ್ಷಿಸುವುದಿಲ್ಲ. ನನ್ನನ್ನಷ್ಟೇ ಬಯಸುವ ಅವನು ನನ್ನ ಹೊರತಾಗಿ ಇನ್ನೇನನ್ನೂ ಅಪೇಕ್ಷಿಸುವುದಿಲ್ಲ—ಎನ್ನುವನು[1]

೭ ನಿರ್ದೋಷಿಯಾಗಿರುವವನು ಮತ್ತು ಎಲ್ಲರಿಂದಲೂ ಪ್ರೀತಿಸಲ್ಪಡುವವನು[2]

ಭಗವಂತನು ನಿರ್ದುಷ್ಟನಾಗಿದ್ದು ಸುಖಸ್ವರೂಪನಾಗಿರುವುದರಿಂದ ಎಲ್ಲರನ್ನು ನಲಿಸುವವನು. 'ನೀನು ಸುಖಸ್ವರೂಪಿಯಾಗಿರುವುದರಿಂದ ಎಲ್ಲರಿಗಲೂ ಅಪೇಕ್ಷಿತನಾಗಿರುವೆ' ಎಂದು ರುಕ್ಮಿಣೀ ದೇವಿಯು ಶ್ರೀಕೃಷ್ಣನನ್ನು ಸ್ತುತಿಸಿರುವಳು[3]

## ಜಿಜ್ಞಾಸೆ

[ಮುಕ್ತರನ್ನು ಕುರಿತು ಆಚ್ಛಾದನೆ]

ಪ್ರ – ಪ್ರಲಯ ಕಾಲದಲ್ಲಿ ಪ್ರಕೃತಿಯಿಂದ ಪರಮಾತ್ಮನು ಆಚ್ಛಾದಿತನಾಗಿದ್ದಾನೆ ಎಂದು ಹೇಳುವಾಗ ಆಚ್ಛಾದ್ಯರು ಯಾರು? ಎಂದು ಪ್ರಶ್ನೆ ಪ್ರಲಯಕಾಲದಲ್ಲಿ ಎಲ್ಲ ಜೀವರು ನಿದ್ರೆಯಲ್ಲಿ ಇರುವಾಗ ಅವರು ಆಚ್ಛಾದ್ಯರು ಆಗಲಾರರು ಆಚ್ಛಾದ್ಯರು ಇಲ್ಲದೆ ಆಚ್ಛಾದನೆಯು ಕೂಡುವದಿಲ್ಲ

ಉ – ಮುಕ್ತಜೀವರು ನಿದ್ರೆಯು ಇಲ್ಲದೆ ಪರಮಾತ್ಮನ ಧ್ಯಾನವನ್ನು ಮಾಡುತ್ತಾ ಎಚ್ಚರಿಕೆಯಲ್ಲಿ ಇರುತ್ತಾರೆ. ಅವರನ್ನು ಕುರಿತು ಪರಮಾತ್ಮನು ಪ್ರಕೃತಿಯಿಂದ ಪ್ರಲಯದಲ್ಲಿ ಆಚ್ಛಾದಿತನು ಆಗುತ್ತಾನೆ



---

1 'ನ ಪಾರಮೇಷ್ಠ್ಯಂ ನ ಮಹೇಂದ್ರಧಿಷ್ಣ್ಯಂ ನ ಸಾರ್ವಭೌಮಂ ನ ರಸಾಧಿಪತ್ಯಮ್ ।
ನ ಯೋಗಸಿದ್ಧಿರಪುನರ್ಭವಂ ವಾ ಮಯ್ಯರ್ಪಿತಾತ್ಮೇಚ್ಛತಿ ಮದ್ವಿನಾನ್ಯತ್'

–ಭಾಗ. 11-14-14

೭ 2 ನಿರ್ದುಷ್ಟತ್ವಾತ್ ಸಮ್ । ಪ್ರಿಯತೇ ಸರ್ವೈರುಪಾದೀಯತ ಇತಿ ಪ್ರಿಯಃ ।

3 ತ್ವಂ ವೈ ಸಮಸ್ತಪುರುಷಾರ್ಥಮಯಃ ಫಲಾತ್ಮಾ....।

–ಭಾಗ. 10-82-42

ಫಲಾತ್ಮಾ ಸುಖಾತ್ಮಾ । ಅತ ಏವ ಪುರುಷೈರರ್ಥ್ಯಸ್ವರೂಪಃ ।

–ಭಾಗ. ತಾ. ನಿ.

## ೨೪೧ ಸಂಪ್ರಮರ್ದನಃ

೧ ಪ್ರಳಯಕಾಲದಲ್ಲಿ ಎಲ್ಲವನ್ನೂ ಸಂಹರಿಸುವವನು[1]

ಸೃಷ್ಟಿಕಾಲದಲ್ಲಿ ಅಚಿತ್ಪ್ರಕೃತಿಯನ್ನು ಉಪಾದಾನವನ್ನಾಗಿ ಇಟ್ಟುಕೊಂಡು ಪ್ರಪಂಚವನ್ನಾಗಿ ರೂಪುಗೊಳಿಸಿದ ಭಗವಂತನು ಪ್ರಳಯಕಾಲದಲ್ಲಿ ಪ್ರಪಂಚವು ತನ್ನ ವಿಸ್ತೃತರೂಪವನ್ನು ಕಳಕೊಂಡು ಪುನಃ ಸೂಕ್ಷ್ಮರೂಪಕ್ಕೆ ಮರಳುವಂತೆ, ಅಚಿತ್ಪ್ರಕೃತಿಯಾಗಿ ಪರಿಣಾಮಗೊಳ್ಳುವಂತೆ ಮಾಡುವನು

೨ ಯಮಾದಿಗಳ ಮೂಲಕ ಮನುಷ್ಯ ಮುಂತಾದವರ ಸಂಹಾರವನ್ನು ಚೆನ್ನಾಗಿ ನಡೆಸುವವನು[2]

ಮನುಷ್ಯರ ಸಂಹಾರಕನು ಯಮದೇವನು. ಸುದರ್ಶನ ಚಕ್ರಾಭಿಮಾನಿ ಕಾಮನು ಯಮದೇವನಿಗೆ ಸಂಹಾರಕನು, ಕಾಮನಿಗೆ ರುದ್ರನು ಸಂಹಾರಕನು, ರುದ್ರದೇವನಿಗೆ ಚತುರ್ಮುಖನು ಸಂಹಾರಕನು, ಚತುರ್ಮುಖನಿಗೆ ಚಕ್ರರೂಪದಲ್ಲಿರುವ ದುರ್ಗಾದೇವಿ ಸಂಹಾರಕಳು. ದುರ್ಗಾದೇವಿಗೂ ನಿಯಾಮಕನು 'ಪರಕಾಲ' ಎನಿಸುವ ಶ್ರೀವಿಷ್ಣುವು. ಅವನೊಬ್ಬನೇ ಸರ್ವೇಶ್ವರ ಎನಿಸಿರುವವನು.[3] ಇವನೇ ಯಮಾದಿಗಳ ಮೂಲಕ ಸಂಹಾರವನ್ನು ನಡೆಸುವವನು ಸಂಹಾರ ಪ್ರಯುಕ್ತ ತನಗೆ ಪಾಪಲೇಪವಿಲ್ಲದಂತೆ, ಸ್ವತಂತ್ರವಾಗಿ ಸಂಹಾರವನ್ನು ಏರ್ಪಡಿಸುವನು.

೩ ನಿರ್ದುಷ್ಟನಾಗಿರುವವನು, ಪ್ರಕೃಷ್ಟನಾಗಿರುವವನು, ಜೀವಾತ್ಮರ ಲಿಂಗದೇಹವನ್ನು ಭಂಜಿಸುವವನು.[4]

---

೧ 1 ಸಂಪ್ರಮರ್ದಯತಿ ಪ್ರಳಯೇ ಸರ್ವಂ ಸಂಹರತೀತಿ ಸಂಪ್ರಮರ್ದನಃ। 'ಮೃದ ಮರ್ದನೇ'

೨ 2 ಯಮಾದಿಭಿಃ ಮನುಷ್ಯಾದೀನ್ ಸಂಪ್ರಮರ್ದಯತಿ ವಿನಾಶಯತೀತಿ ಸಂಪ್ರಮರ್ದನಃ।

3 ಯಮಃ ಕಾಲೋ ಮನುಷ್ಯಾಣಾಂ ತಸ್ಯ ಕಾಲಃ ಸುದರ್ಶನಃ। ತಸ್ಯಾಪಿ ರುದ್ರಸ್ತತ್ಕಾಲೋ ಬ್ರಹ್ಮಾ ದುರ್ಗಾಽಪಿ ತಸ್ಯ ತು। ಸಾ ಬ್ರಹ್ಮಪ್ರಳಯೇ ದೇವೀ ವರ್ತತೇ ಚಕ್ರರೂಪಿಣೀ। ....ತಸ್ಯಾ ನಿಯಾಮಕೋ ವಿಷ್ಣುಃ ಪರಃ ಕಾಲಃ ಸ ಉಚ್ಯತೇ। ....ತಸ್ಯಾಃ ಪ್ರಭುಃ ಸ ಏವೈಕೋ ವಿಷ್ಣುಃ ಸರ್ವೇಶ್ವರೇಶ್ವರಃ'
-ಭಾಗ. ತಾ. ನಿ. 3-12-38

೩ 4 ಸಮೀಚೀನತ್ವಾತ್ ಸಂ, ಪ್ರಕೃಷ್ಟತ್ವಾತ್ ಪ್ರ; ಸ್ವಾಪರೋಕ್ಷಜ್ಞಾನೇನ ಜೀವಾತ್ಮನಾಂ ಲಿಂಗದೇಹಂ ಮರ್ದಯತಿ ನಾಶಯತೀತಿ ಸಂಪ್ರಮರ್ದನಃ।

ಭಗವಂತನು ತಾನು ಯಾವಾಗಲೂ ನಿರ್ದುಷ್ಟನಾಗಿ, ಪ್ರಕೃಷ್ಟನಾಗಿ ಇರುವನು ಅಲ್ಲದೆ ಲಿಂಗದೇಹದ ಸಂಬಂಧ ಪ್ರಯುಕ್ತವಾಗಿ ಸಂಸಾರದಲ್ಲಿ ದುಃಖಿಸುತ್ತಿರುವ ಯೋಗ್ಯ ಜೀವಾತ್ಮರ ದುಃಖಾಜ್ಞಾನಾದಿ ದೋಷಗಳನ್ನು ಹೋಗಲಾಡಿಸುವುದಕ್ಕಾಗಿ ಅವರಿಗೆ ಲಿಂಗದೇಹದ ಸಂಪರ್ಕವನ್ನೂ ಬಿಡಿಸುವನು

೮ ಸಂಸಾರಕ್ಕೆ ಕಾರಣವಾದ ಅವಿದ್ಯೆಯನ್ನು ತನ್ನ ಜ್ಞಾನದಿಂದ ನಾಶಪಡಿಸುವವನು[1]

ವಾಸುದೇವರೂಪಿ ಭಗವಂತನಲ್ಲಿ, ನೀನು ನನ್ನ ಸಂಸಾರ ಬಂಧನವನ್ನು ಚೆನ್ನಾಗಿ ನಾಶ ಪಡಿಸು ನಿನ್ನ ಜ್ಞಾನವನ್ನು ನೀಡಿ ಆ ಮೂಲಕ ಅವಿದ್ಯೆಯ ಆವರಣವನ್ನು ಛೇದಿಸು—ಎಂದು ಪ್ರಾರ್ಥಿಸಲಾಗಿದೆ[2]

೫ ದೈತ್ಯರನ್ನು ಚೆನ್ನಾಗಿ ಸಂಹರಿಸುವವನು[3]

ಶ್ರೀಮದಾಚಾರ್ಯರು ಮಧುಸೂದನರೂಪಿ ಭಗವಂತನನ್ನು ಸಂಬೋಧಿಸಿ, ನೀನು ದೇವತೆ ಗಳಿಗೆ ಆನಂದಪಡಿಸುವವನಾದುದರಿಂದಲೇ ಅವರಿಗೆ ತೊಂದರೆಯನ್ನುಂಟು ಮಾಡುವ ದಾನವ ರನ್ನು ದಂಡಿಸುವಿ—ಎಂಬ ಅಭಿಪ್ರಾಯದಲ್ಲಿ 'ದಾನವಸಾದನ' 'ದೈವತಮೋದನ'—ಎಂದು ವಿಶೇಷಿಸಿರುವರು[4]

೮ (ಸಮುದ್ರಮಥನ ಸಂದರ್ಭದಲ್ಲಿ ಕಡಗೋಲಾಗಿ ಒಳಸಲ್ಪಟ್ಟ) ಮಂದರ ಪರ್ವತವು ಪುಡಿಪುಡಿಯಾಗದಂತೆ ಅನುಗ್ರಹಿಸಿರುವವನು[5]

---

೪ 1 ಸಂವರಣಂ ತಮಃ ಸ್ವವಿದ್ಯಯಾ ಸಂಪ್ರಮರ್ದಯತೀತಿ ಸಂಪ್ರಮರ್ದನಃ ।

-ವ. ಭ.

2 ಅಧಿಕಬಂಧಂ ರಂಧಯ ಬೋಧಾಚ್ಛಿಂಧಿ ಪಿಧಾನಂ ಬಂಧುರಮದ್ಧಾ ।

-ದ್ವಾ. ಸ್ತೋ. 5-1

೫ 3 ಸಮ್ಯಕ್ ಪ್ರಮರ್ದಯತಿ ದೈತ್ಯಾನಿತಿ ಸಂಪ್ರಮರ್ದನಃ ।

-ಸ. ಸಂ

4 ಮಧುಸೂದನ ದಾನವಸಾದನ ವಂದೇ ದೈವತಮೋದನ ವೇದಿತಪಾದ ।

-ದ್ವಾ ಸ್ತೋ. 5-7

೮ 5 ಸಂಪ್ರಮರ್ದಂ ಮಂದರಪರ್ವತಸ್ಯ ಕ್ಷೋದಂ ನಯತಿ ಆಪನಯತೀತಿ ಸಂಪ್ರಮರ್ದನಃ ।

ಅಮೃತಕ್ಕಾಗಿ ಸಮುದ್ರಮಥನದಲ್ಲಿ ತೊಡಗಿದ ಸುರಾಸುರರು ಕಡಗೋಲಾಗಿ ಮಂದರ ಪರ್ವತವನ್ನು ಬಳಸಿಕೊಳ್ಳುವರು ಅದಕ್ಕೆ ವಾಸುಕಿಯನ್ನು ಸುತ್ತಿ ಸುರಾಸುರರು ಮಥಿಸುತ್ತಿದ್ದಾಗ ಮಥನದ ಆ ರಭಸಕ್ಕೆ ಮಂದರ ಪರ್ವತವು ಪುಡಿಪುಡಿಯಾಗದಿರಲೆಂದು ಭಗವಂತನು ಆ ಪರ್ವತ ವನ್ನು ಪ್ರವೇಶಿಸುವನು[1] ಇದರಿಂದಾಗಿಯೇ ಮಂದರ ಪರ್ವತವು ಮಥನಕ್ಕೆ ಸಮರ್ಥವಾಗುವುದು.

೭ (ಶಿಂಶುಮಾರರೂಪದಿಂದ) ಗ್ರಹನಕ್ಷತ್ರಾದಿಗಳು ಪರಸ್ಪರ ಘರ್ಷಣೆಗೊಳಗಾಗಿ ಪುಡಿ ಪುಡಿಯಾಗದಂತೆ ಅನುಗ್ರಹಿಸುತ್ತಿರುವವನು[2]

## ಜಿಜ್ಞಾಸ

### [ಪ್ರಲಯ ಕಾಲದಲ್ಲಿ ವಿರಾಮ]

ಪ್ರ – ಪ್ರಲಯಕಾಲದಲ್ಲಿ ಮೋಕ್ಷಸಾಧನಾನುಷ್ಠಾನವನ್ನು ಮಾಡುತ್ತಾ ಇದ್ದ ಜೀವರನ್ನು ಸಂಹರಿಸಿ ಆ ಸಾಧನಾನುಷ್ಠಾನವನ್ನು ನಿಲ್ಲಿಸುತ್ತಾನೆ ಪರಮಾತ್ಮನು ಇದರಿಂದ ಆ ಜೀವಿಗಳಿಗೆ ಪ್ರಲಯಕಾಲವು ವ್ಯರ್ಥವಾಯಿತು ಹೀಗೆ ಪರಮಾತ್ಮನು ಮಾಡುವದು ಅವನ ಗುಣವಾಗು ವದೇ ?

ಉ - ಪರಮಾತ್ಮನು ಜೀವಸ್ವಭಾವವನ್ನು ಅನುಸರಿಸಿ ಜೀವರಿಂದ ಸಾಧನವನ್ನು ಮಾಡಿಸುತ್ತಾನೆ ಎಲ್ಲ ಜೀವರಿಗೆ ಪ್ರಲಯ ಕಾಲದಲ್ಲಿಯೂ ಸಾಧನಾನುಷ್ಠಾನವನ್ನು ಮಾಡುವ ಯೋಗ್ಯತೆಯು ಇಲ್ಲ ಉದಾಹರಣೆಗೆ ವಿದ್ಯಾರ್ಥಿಗಳಿಗೆ ರಾತ್ರಿ ಹಗಲು ವಿದ್ಯಾಭ್ಯಾಸ ಮಾಡುವ ಯೋಗ್ಯತೆಯು ಇಲ್ಲ ಅವರಿಗೆ ರಾತ್ರಿ ಹೊತ್ತು ಚೆನ್ನಾಗಿ ನಿದ್ದೆ ಬಂದರೆ ಮರುದಿನ ಚೆನ್ನಾಗಿ ಪುನಃ ವಿದ್ಯಾಭ್ಯಾಸವನ್ನು ಮಾಡುತ್ತಾರೆ ಅಂತಹ ವಿದ್ಯಾರ್ಥಿಗಳಿಗೆ ರಾತ್ರಿ ಕಾಲದಲ್ಲಿ ನಿದ್ದೆ ಬರಲಿಕ್ಕೆ ಅನುಕೂಲ ಮಾಡಬೇಕು. ಅದರಂತೆ ಸಾಧನಾನುಷ್ಠಾನ ಮಾಡುವ ಜೀವರಿಗೆ ಪ್ರಲಯ ಕಾಲದಲ್ಲಿ ವಿರಾಮವನ್ನು ಕೊಟ್ಟರೆ ಅವರು ಪುನಃ ಪ್ರಪಂಚ ಸೃಷ್ಟಿಯಾದ ಮೇಲೆ ಚೆನ್ನಾಗಿ ಸಾಧನವನ್ನು ಮಾಡುತ್ತಾರೆ. ಅದಕ್ಕೋಸ್ಕರ ಸೃಷ್ಟಿಯನ್ನು ನಿಲ್ಲಿಸುವುದು ಭಗವಂತನ ಗುಣವೇ ಆಗುತ್ತದೆ



---

1 ಉಪರ್ಯಧಶ್ಚಾತ್ಮನಿ ನೇತ್ರಗೋತ್ರಯೋಸ್ತ್ವಯಾ ಪರೇಣಾವಿಶತಾ ಸಮೇಧಿತಾಃ ಮಮಂಥುರಬ್ಧಿಂ. . .

-ಮ. ಭಾರ ತಾ. ನಿ. 10-12

ಚೂರ್ಣೀಭಾವಪರಿಹಾರಾಯ ಗೋತ್ರೇ ಗಿರೌ ಪ್ರವೇಶ ಇತಿ ಭಾವಃ ।

-ಭಾವ ಪ್ರಕಾಶಿಕಾ

೭ 2 ಸಂಪ್ರಮರ್ದಂ ಗ್ರಹನಕ್ಷತ್ರಾದೀನಾಂ ಪರಸ್ಪರ ಕ್ಷೋದಂ ನಯತಿ ಶಿಂಶುಮಾರರೂಪೇಣ ಅಪನಯತೀತಿ ಸಂಪ್ರಮರ್ದನಃ ।

೨೩೨ ಅಹಃಸಂವರ್ತಕಃ

೧ ದಿನಗಳನ್ನು ನಡೆಸುವವನು

ಹಗಲು ಹಾಗೂ ರಾತ್ರಿ ಎಂಬ ಎರಡು ದಲಗಳನ್ನೊಳಗೊಂಡ ದಿನಕ್ಕೆ ಸೂರ್ಯನೇ ಅಧಿಪತಿಯಾಗಿದ್ದು[2], ಅವನ ಚಲನೆಯನ್ನವಲಂಬಿಸಿಯೇ 'ದಿನವು 'ನಡೆಯುವುದು ಆದರೆ ಅಂತಹ ಸೂರ್ಯನನ್ನು ಗಗನದಲ್ಲಿ ಏರಿಸಿರುವವನು ಇಂದ್ರನಾಮಕ ಭಗವಂತನು[3] ಅಲ್ಲದೆ, ವರುಣ ನಾಮಕ ಭಗವಂತನು ತನ್ನ ಆದೇಶಾನುಸಾರವಾಗಿ ಸೂರ್ಯನಿಗೆ ಅಂತರಿಕ್ಷದಲ್ಲಿ ಸಂಚರಿಸಲು ಅನುಕೂಲವಾಗುವಂತೆ ಅಂತರಿಕ್ಷವನ್ನು ಯಾವುದೇ ಪದಾರ್ಥದ ಪ್ರತಿಘಾತದಿಂದ ರಹಿತವನ್ನಾಗಿ ಮಾರ್ಪಡಿಸಿರುವವನು[4] ಸೂರ್ಯನು ಹಗಲು ಹೊತ್ತಲ್ಲಿ ಬೆಳಗುವಂತೆ ಮಾಡುವವನೂ ಸೂರ್ಯಾಂತ

---

೧ 1 ಸಮ್ಯಕ್ ವರ್ತಯತಿ ಪ್ರವರ್ತಯತೀತಿ ಸಂವರ್ತಕಃ । ಅಹ್ನಾಂ ದಿನಾನಾಂ ಸಂವರ್ತಕಃ ಅಹಃಸಂವರ್ತಕಃ । 'ಅಹರಿತ್ಯಯಂ ದಿವಾನಕ್ತಮಿತ್ಯುಭಯೋರೇಕಂ ವಚನಮ್ । ಸ ಶಬ್ದಃ ಉಭಯೋಃ ಸಹೈವ ವಾಚಕ ಇತಿ ಯಾವತ್' ಬ ಗೋ. (ಭಾಗ ತಾ. ನಿ. ಟೀ. 3-12-10)

2 'ದಿನಾನಾಮಧಿಪಃ ಸೂರ್ಯಃ . . .'

–ಮ. ಭಾರ ತಾ ನಿ 23-58

3 ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ ।

–ಋ. ವೇ. 7-3

ದೀರ್ಘಕಾಲಂ ದರ್ಶನಾಯ ಸೂರ್ಯಮಾರೋಹಯದ್ದಿವಿ ।

–ಋ. ವೇ. ಭಾ.

'. .ಸೂರ್ಯಂ ದಿವ್ಯಾಽರೋಹಯೋ ದೃಶೇ'

–ಐ. ಉ. ಭಾ. 2-1-1-1

4 ಉರುಂ ಹಿ ರಾಜಾ ವರುಣಶ್ಚಕಾರ ಸೂರ್ಯಾಯ ಪಂಥಾಮನ್ವೇತವಾ ಉ ।

–ಋ. ವೇ 24 8

'ಉರುಂ ರಾಜಾ ರಂಜನಾದ್ ರಾಜನಾದ್ ವಾ ಸೂರ್ಯಾಯ ಪಂಥಾನಮಸೌ ಚಕಾರ। ಸ್ವಾಜ್ಞಾನುಸಾರೇಣ ಸದ್ಯೈವ ಗತ್ಯೈ...'

–ಋ. ವೇ. ಭಾ.

ರ್ಗತನಾದ ಸೂರ್ಯನಾರಾಯಣನೇ[1] ಆದ್ದರಿಂದ ಸೂರ್ಯನ ಮೂಲಕ ರಾತ್ರಿಹಗಲುಗಳನ್ನು ನಿಯಮಿಸುವವನು ಭಗವಂತನೇ ಈ ಅಭಿಪ್ರಾಯದಲ್ಲೇ ಸೂರ್ಯಾಂತರ್ಗತನಾದ ಸವಿತೃನಾಮಕ ಭಗವಂತನೇ ತಮಸ್ಸನ್ನೂ ಪ್ರಕಾಶವನ್ನೂ ಧರಿಸಿಕೊಂಡಿರುವವನೆಂದು ಋಗ್ವೇದ ಸಂದೇಶಿಸಿದೆ.[2]

ಕಾಲನಿಯಾಮಕನಾದ ಭಗವಂತನು ಗ್ರಹ ನಕ್ಷತ್ರ ತಾರಾದಿಗಳ ಮಂಡಲದಲ್ಲಿ 'ಅನಿಮಿಷ' ನಾಗಿ ಇದ್ದುಕೊಂಡು, ಕಾಲದ ಸಂವತ್ಸರಾದಿ ಪ್ರಭೇದಗಳನ್ನು ನಡೆಸುತ್ತಿರುವನೆಂದು ಬೋಧಿಸುತ್ತಿದ್ದ ಮೈತ್ರೇಯರು, ಭಗವಂತನು ಮುನ್ನೂರ ಅರುವತ್ತು ದಿನಗಳ ಸಮೂಹದಲ್ಲಿ ವತ್ಸರ ನಾಮಕನಾಗಿ ಇದ್ದುಕೊಂಡು ದಿನಗಳನ್ನು ನಿಯಮಿಸುತ್ತಿರುವನೆಂದು ಸಂದೇಶಿಸಿರುವರು[3]

೨ ಜ್ಞಾನರೂಪಿಯಾದ ವಾಯುದೇವನನ್ನು ಚೆನ್ನಾಗಿ ಪ್ರೇರಿಸುವವನು.[4]

---

1 ಯ ಏಷ ತಪತಿ

-ಐ. ಉ 2-1-1-1

ಯ ಏಷ ಸೂರ್ಯಮಂಡಲೇ ಸ್ಥಿತ್ವಾ ತಪತಿ ಸ ಭಗವಾನ್ ನಾರಾಯಣಃ ।

-ಐ. ಉ. ಭಾ.

2 . ಸವಿತಾ ಚಿತ್ರಭಾನುಃ ಕೃಷ್ಣಾ ರಜಾಂಸಿ ತವಿಷೀಂ ದಧಾನಃ ।

-ಋ ವೇ 35-4

ತಮಃ ಪ್ರಕಾಶೌ ಉದಧೀ ನೌ ಯತಸ್ತೌ ದಧಾನ ಇತ್ಯುಚ್ಯತೇ ವಾಸುದೇವಃ ।

-ಋ. ವೇ. ಭಾ.

3 ಗ್ರಹರ್ಕ್ಷತಾರಾಚಕ್ರಸ್ಥಃ ಪರಮಾಣ್ವಾದಿನಾ ಜಗತ್ ।
ಸಂವತ್ಸರಾವಸಾನೇನ ಪರ್ಯೇತ್ಯನಿಮಿಷೋ ವಿಭುಃ ॥
ವತ್ಸರಶ್ಚ ವಿದುರ್ನೈವಂ ಪ್ರಭಾಷ್ಯತೇ ॥

-ಭಾಗ. ತಾ. ನಿ. 3-12-14

'ವತ್ಸರೋ ಯಃ ಸ್ಥಿತಸ್ತ್ವಹ್ನಾಂ ಷಷ್ಟ್ಯುತ್ತರಶತತ್ರಯೇ ।.. ಏವಂ ಸ ಕಾಲನಾಮಾಽಪಿ ಕಾಲಸ್ಥಃ ಪರಮೇಶ್ವರಃ'

-ಬೃಹತ್ತರ್ಕ (ಭಾಗ. ತಾ. ನಿ 3-12-14)

೨ 4 ಸಂವರ್ತಯತಿ ಪ್ರವರ್ತಯತೀತಿ ಸಂವರ್ತಕಃ । 'ಅಹರಿತ್ಯುಚ್ಯತೇ ವಾಯುಃ ಜ್ಞಾನಾತ್ಮತ್ವಾತ್ ತಥೈವ ಚ' (ಐತರೇಯ ಸಂಹಿತಾ ಐ. ಉ. ಭಾ. 2-2-7-7) ಇತಿ ಜ್ಞಾನರೂಪತ್ವಾತ್ ಅಹಃ ವಾಯುಃ । ತಸ್ಯ ಸಂವರ್ತಕಃ । ಅಹಃ ಸಂವರ್ತಕಃ ।

ಇಂದ್ರನಾಮಕ ಭಗವಂತನು ಅವರಯೋಗ್ಯನಾದ ವಾಯುದೇವನಿಗೆ ಜ್ಞಾನಕೊಟ್ಟು ಅವನನ್ನು ಚೆನ್ನಾಗಿ ಪ್ರೇರಿಸುವನೆಂದು ಋಗ್ವೇದ ಸಂದೇಶಿಸಿದೆ.[1]

೩ ನಿತ್ಯಾಹೇಯಸ್ವರೂಪಿಣಿಯಾದ ಭಾರತೀದೇವಿಯನ್ನು ಚನ್ನಾಗಿ ಪ್ರೇರಿಸುವವನು[2]

೪ ಮಾಸವನ್ನು ನಡೆಸುವವನು.[3]

೫ ಮುಹೂರ್ತವನ್ನು ನಡೆಸುವವನು[4]

ಕಾಲದ ಅತಿ ಸೂಕ್ಷ್ಮ ಪರಿಮಾಣವಾದ ಪರಮಾಣುವಿನಿಂದ ಪ್ರಾರಂಭಿಸಿ, ಅತಿ ದೊಡ್ಡ ಪರಿಮಾಣವಾದ ಸಂವತ್ಸರದವರೆಗಿನ ಪ್ರತಿಯೊಂದು ಪರಿಮಾಣವನ್ನೂ ನಿಯಮಿಸುತ್ತಿರುವ ಕಾಲನಿಯಾಮಕ ಭಗವಂತನು ಮಾಸ ಹಾಗೂ ಮುಹೂರ್ತ ಎಂಬ ಕಾಲ ಪರಿಮಾಣಗಳನ್ನೂ ನಿಯಮಿಸುವವನು

೬ ಪ್ರಕಾಶವನ್ನು ಪ್ರೇರಿಸುವವನು[5]

---

1 ವಿಗೋಭಿರದ್ರಿಮೈರಯತ್ ।

-ಋ. ವೇ. 7-3

ಜ್ಞಾನೈರಾದರಯೋಗ್ಯಂ ಚ ಪ್ರಾಣಾತ್ಮಾನಂ ಸಮೈರಯತ್ ।

-ಋ. ಭಾ.

೩ 2 'ಅಹರಾಖ್ಯಾ ಭಾರತೀ ತು ನಿತ್ಯಾಹೇಯಸ್ವರೂಪತಃ' (ಐತರೇಯ ಸಂಹಿತಾ –ಐ. ಉ. ಭಾ 2-2-7-2) ಇತ್ಯುಕ್ತದಿಶಾ ನಿತ್ಯಾಹೇಯಸ್ವರೂಪತಃ ಅಹಃ ಭಾರತೀ, ತಸ್ಯ ಸಂವರ್ತಕಃ ।

೪ 3 ಅಹರ್ಮುಹೂರ್ತಂ ವಿಜ್ಞೇಯಮಹರ್ಮಾಸೋಽಪಿ ಭಣ್ಯತೇ । ಅಹರ್ದಿನಂ ಪ್ರಕಾಶಶ್ಚ ಕ್ವಚಿದ್ ಜ್ಞಾನಂ ಬಲಂ ತಥಾ' -ಬೃ. ಉ. ಭಾ 5-3-2 ಇತ್ಯಹಶ್ಶಬ್ದಸ್ಯ ಮಾಸ-ವಾಚಕತ್ವಮಪಿ ಸಿದ್ಧಮ್ ।

೫ 4 'ಅಹರ್ಮುಹೂರ್ತಂ ' ಇತ್ಯಾದಿ ಪ್ರಮಾಣೇನ ಅಹಶ್ಶಬ್ದೇನ ಮುಹೂರ್ತೋಽಪಿ ಭಣ್ಯತೇ ।

೬ 5 'ಅಹರ್ದಿನಂ ಪ್ರಕಾಶ್ಚ.. ' ಇತ್ಯಹಶ್ಶಬ್ದಸ್ಯ ಪ್ರಕಾಶವಾಚಕತ್ವಮಪಿ ।

ಪ್ರಕಾಶರೂಪಿಯಾದ ಭಗವಂತನು ತನಗಿಂತ ಅಲ್ಪರಾದ ಸೂರ್ಯಾದಿಗಳ ತೇಜಸ್ಸಿಗೆ ಪ್ರೇರಕನಾಗಿರುವವನೆಂಬುದಾಗಿ ಚತುರ್ವೇದಶಿಖೆಯು ಸಂದೇಶಿಸಿದೆ[1]

೭ ಜ್ಞಾನವನ್ನು ಪ್ರೇರಿಸುವವನು[2]

೮ ಬಲವನ್ನು ಪ್ರೇರಿಸುವವನು

ಜ್ಞಾನಬಲ ಹಾಗೂ ಬಾಹ್ಯಬಲ—ಎಂಬ ದಾಗಿ ಎರಡು ವಿಧದ[3] ಬಲವನ್ನೂ ಭಗವಂತನೇ ಪ್ರೇರಿಸುವವನು

೯ ಭಕ್ತರನ್ನು ಎಂದೆಂದೂ ಬಿಟ್ಟಿರಲಾರದವನು ಮತ್ತು ಜಗತ್ತಿಗೆ ಆಧಾರನಾಗಿರುವವನು.[4]

---

1 ಅಹಂ ತತ್ತೇಜೋ ರಶ್ಮೀತ್.

-ಚತುರ್ವೇದ ಶಿಖಾ (ಬ್ರ. ಸೂ ಭಾ 1-3-22)

ಅಹಂ ತತ್ತೇಜೋ ರಶ್ಮೀದಿತಿ ನಾರಾಯಣಭಾಸಾ ಹಿ ಸರ್ವಂ ಭಾತಿ ।

–ಬ್ರ. ಸೂ. ಭಾ.

ಅಹಂ ತತ್ತೇಜೋ ಮದಪೇಕ್ಷಯಾ ರಶ್ಮಿರೂಪಾಣಾಮಲ್ಪಾನಾಮನ್ಯೇಷಾಂ ತೇಜಸಾಂ ಪ್ರೇರಕವತ್ ।

–ತತ್ತ್ವ ದೀಪಿಕಾ

೭ 2 'ಅಹರ್ದಿನಂ ಪ್ರಕಾಶಶ್ಚ ಕ್ವಚಿದ್ ಜ್ಞಾನಂ ಬಲಂ ತಥಾ' ।
'ಅಹಲ್ಲಿಕೇತಿ ಹೋವಾಚ' (ಬೃ ಉ. 5-9-25) ಇತ್ಯತ್ರ ಜ್ಞಾನಾರ್ಥೇ ಅಹಶ್ಶಬ್ದಃ ಪ್ರಯುಕ್ತಃ ಇತಿ ಶ್ರೀಮಧ್ವಾಚಾರ್ಯೈಃ ವ್ಯಾಖ್ಯಾತಂ-'ಅಹಜ್ಞಾನಮಸ್ಯ ಲೀನಮಿತ್ಯಹಲ್ಲಿಕಏವಾಹಲಿಕ.. '

೮ 3 ಬಲಂ ಜ್ಞಾನಬಲಂ ಚೈವ ಬಾಹ್ಯಂ ಚೇತಿ ದ್ವಿಧಾ ಮತಮ್ ।

–ತತ್ತ್ವಸಾರ (ಛಾಂ. ಉ. ಭಾ. 7–2–2)

೯ 4 ನ ಜಹಾತಿ ಭಕ್ತಾನಿತ್ಯಹಃ । ಸಂವರ್ತತೇ ಜಗದತ್ರೇತಿ ಸಂವರ್ತಕಃ । ಅಹಶ್ಚಾಸೌ ಸಂವರ್ತಕಶ್ಚೇತಿ ।

–ಸ. ಸಂ.

ಭಗವಂತನು ಸಕಲ ಜಗದಾಧಾರನಾಗಿರುವನಾದರೂ ತನ್ನ ಭಕ್ತರಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನು

೧೦ ಅಜ್ಞಾನದಿಂದಾಗಲೀ, ಅಂಧಕಾರದಿಂದಾಗಲೀ ಆವರಿಸಲ್ಪಡದಿರುವವನು ಮುಕ್ತಾತ್ಮ (ಮುಕ್ತಾತ್ಮರು) ಅಜ್ಞಾನ ದುಃಖಾದಿಗಳಿಗೊಳಗಾಗದೆ. ಚೆನ್ನಾಗಿ ಇರುವಂತೆ ನಡೆಸುವವನು[1]

ಜ್ಞಾನಸ್ವರೂಪಿಯಾದ, ಗುಣಸ್ವರೂಪಿಯಾದ ಭಗವಂತನು ಅಜ್ಞಾನಾದಿ ದೋಷಗಳಿಗೆಂದೂ ಒಳಗಾಗಲಾರನು ತನ್ನ ಅನುಗ್ರಹದಿಂದ ಮುಕ್ತರಾದ ಜೀವಾತ್ಮರೂ ಅಜ್ಞಾನ ದುಃಖಾದಿ ದೋಷಗಳಿಗೆ ಒಳಗಾಗದಂತೆ ಅನುಗ್ರಹಿಸುತ್ತಿರುವನು

೧೧ ಯಾರಿಂದಲೂ ಹೀನನಲ್ಲದೆ, ಸಮೀಚೀನನಾಗಿ ಇರುವವನು ಹಾಗೂ ಸರ್ವ ಪ್ರವರ್ತಕ.[2]

ರಮಾದೇವಿಯೇ ಮೊದಲಾದ ಪ್ರತಿಯೊಬ್ಬರೂ ಭಗವದಪೇಕ್ಷಯಾ ಹೀನರಾಗಿಯೇ ಇರುವರು ಸರ್ವೋತ್ತಮನಾದ ಭಗವಂತನು ಮಾತ್ರ ಯಾರಿಂದಲೂ ಹೀನನಲ್ಲ ಗುಣಪರಿಪೂರ್ಣನಾಗಿ ಇರುವ ಅವನು ಸರ್ವರನ್ನೂ ಪ್ರೇರಿಸುವನು

೧೨ ದಿನದಿಂದ ಉಪಲಕ್ಷಿತವಾದ ಕಾಲದ ಭ್ರಮಣೆಗೆ ಕಾರಣನಾಗಿರುವವನು.[3]

೧೩ ತ್ಯಜಿಸಲು ಆಗದಿರುವವನು. (ಜಗತ್ತನ್ನು) ಚೆನ್ನಾಗಿ ನಡೆಸುವವನು[4]

---

೧೦ 1 'ತಮಸಾತಹನನೀಯತ್ವಾದಹಃ ' ಸಾಮಸಂಹಿತಾ (ಛಾಂ. ಉ ಭಾ. 5–2 6) । ಮುಕ್ತಾನ್ ಸಂವರ್ತಯತಿ ಪ್ರವರ್ತಯತೀತಿ ಸಂವರ್ತಕಃ । ಅಹಶ್ಚಾಸೌ ಸಂವರ್ತಕಶ್ಚ ಅಹಃಸಂವರ್ತಕಃ । ಸಾಮಸಂಹಿತಾಯಾಂ ನಕಾರಾಂತಃ ಅಹನ್‌ಶಬ್ದ ಏವ ತಮಸಾತ ಹನನೀಯತಾರ್ಥಕತಯಾ ವ್ಯಾಖ್ಯಾತಃ ।

೧೦ 2 ಅಹೀನತ್ವಾದಹಃ । (ಬೃ. ಉ. ಭಾ. 8-2 8) ಗುಣಪೂರ್ಣತ್ವೇನ ಸಮೀಚೀನತ್ವಾತ್ ಸಂ, ವರ್ತಯತಿ ಸರ್ವಂ ಪ್ರವರ್ತಯತೀತಿ ವರ್ತಕಃ ।

೧೨ 3 ಅಹರುಪಲಕ್ಷಿತಕಾಲಪರಿವೃತ್ತಿಹೇತುಃ ಅಹಸ್ಸಂವರ್ತಕಃ ।

–ಪ. ಭ.

೧೩ 4 ನ ಹೀಯತ ಇತ್ಯಹಃ । ಸಂವರ್ತಕಃ ಸಮ್ಯಕ್ ಪ್ರವರ್ತಕಃ ।

–ವಾ. ರಾ

ವಾದಿರಾಜೀಯೇ 'ಅಹಃ' 'ಸಂವರ್ತಕಃ' ಇತಿ ಭಿನ್ನನಾಮತಯಾ ಪರಿಗಣಿತಮಿವ ಭಾಸತೇ।

೧೪ (ಭಯಪರಿಹಾರಾದಿಗಳನ್ನು ನಿರ್ವಹಿಸುವುದರ ಮೂಲಕ) ಜ್ಞಾನಿಗಳನ್ನು ಚೆನ್ನಾಗಿ ನಡೆಸುವವನು[1]

೧೫ ಚೇತನರಿಗೆ ಬಲವನ್ನು ಅಥವಾ ಜ್ಞಾನವನ್ನು ನೀಡಿ ಪ್ರೇರಿಸುವವನು[2]

೧೬ ಪ್ರಕಾಶರೂಪಿಗಳಾದ ಸೂರ್ಯಾದಿಗಳಿಂದ ಜಗತ್ತನ್ನು ನಡೆಸುವವನು[3]

೧೭ ಪ್ರಕಾಶದ ಮೂಲಕ ಬ್ರಹ್ಮಾಂಡವನ್ನೇ ಆವರಿಸಿರುವವನು[4]

ಶ್ರೀ ವೇದವ್ಯಾಸರು ತಮ್ಮ ವಿಜ್ಞಾನ—ಪ್ರಕಾಶದ ಮೂಲಕ ಬ್ರಹ್ಮಾಂಡದ ಹೊರಗೂ ಒಳಗೂ ವ್ಯಾಪಿಸಿರುವರೆಂದು ಧ್ಯಾನಿಸಲಾಗುವುದು[5]

---

೧೪ 1 ಅಹರ್ದಿನಂ ಪ್ರಕಾಶಶ್ಚೇತ್ಯುಕ್ತೇಃ ಪ್ರಕಾಶವಾಚಿನೋಽಹಃಶಬ್ದಾತ್ ಮತ್ವರ್ಥೀಯಃ। ತಸ್ಯ ಲುಕ್ । ಅಹಃ ಜ್ಞಾನಿನಂ ಭಕ್ತಜನಂ ಸಂ ಸಮ್ಯಕ್ ಭಯಪರಿಹಾರಾದಿನಾ ವರ್ತಯತೀತಿ ಅಹಃಸಂವರ್ತಕಃ ।

–ಶೇ. ಚಂ.

೧೫ 2 ಅಹ್ನಾ ಬಲೇನ ಜ್ಞಾನೇನ ವಾ ಬಲಂ ಜ್ಞಾನಂ ವಾ ದತ್ವೇತಿ ಯಾವತ್ ಸಂವರ್ತಯತಿ ಚೇತನಾನ್ ಪ್ರವರ್ತಯತೀತಿ ಅಹಃಸಂವರ್ತಕಃ ।

೧೬ 3 ಅಹ್ನಾ ಪ್ರಕಾಶರೂಪೇಣ ಸೂರ್ಯಾದಿನಾ ಸಂವರ್ತಯತಿ ಜಗತ್ ಪ್ರವರ್ತಯತೀತಿ ಅಹಃಸಂವರ್ತಕಃ ।

೧೭ 4 ಅಹ್ನಾ ಪ್ರಕಾಶೇನ ಸಂವೃತ್ಯತೇ ಬ್ರಹ್ಮಾಂಡಂ ಅವೃಣೋತೀತಿ ಅಹಃಸಂವರ್ತಕಃ । 'ವೃತು ವರಣೇ'

5 'ವಿಜ್ಞಾನರೋಚಿಃಪರಿಪೂರಿತಾಂತರ್ಬಾಹ್ಯಾಂಡಕೋಶಂ......ಅನತೋಽಸ್ಮಿ'

–ತಂ. ಸಾ. ಸಂ. 4-44

## ಜಿಜ್ಞಾಸೆ

### [ಸವಿತೃಶಬ್ದದ ಪ್ರಯೋಗ]

ಪ್ರ – ಗಾಯತ್ರಿಯು ಸರ್ವ ವೇದಗಳಿಗೆ ಮೂಲ ಇಂತಹ ಗಾಯತ್ರಿಯಲ್ಲಿ ನಾರಾಯಣ ಎಂಬ ಶ್ರೇಷ್ಠ ನಾಮವನ್ನು ಹಾಕದೆ ಸವಿತೃ ಶಬ್ದವನ್ನು ಪ್ರಯೋಗಿಸಲಿಕ್ಕೇನು ಕಾರಣ?

ಉ - ಕೆಲವು ನಾಸ್ತಿಕರು ಈಶ್ವರನು ತಮಗೆ ಕಾಣುವದಿಲ್ಲವಾದ್ದರಿಂದ ಈಶ್ವರನನ್ನು ಒಪ್ಪುವದಿಲ್ಲ ಅವರನ್ನು ಕುರಿತು ಸೂರ್ಯದೃಷ್ಟಾಂತದಿಂದ ಈಶ್ವರನನ್ನು ಒಪ್ಪಿಸಬೇಕು ಎಂದು ತಿಳಿಸುವದಕ್ಕಾಗಿ ಸೂರ್ಯವಾಚಕ ಸವಿತೃಶಬ್ದವನ್ನು ಪ್ರಯೋಗಿಸಿದ್ದು ಸೂರ್ಯನನ್ನು ಜಾತ್ಯಂಧರು ನೋಡುವದಿಲ್ಲ ಆದರೂ ಎಲ್ಲ ಜನರು ಸೂರ್ಯನು ಇದ್ದಾನೆಂದು ಹೇಳಿದರೂ ನನಗೆ ಸೂರ್ಯನು ತೋರುವದಿಲ್ಲವಾದ್ದರಿಂದ ನಾನು ಸೂರ್ಯನನ್ನು ಒಪ್ಪುವದಿಲ್ಲ ಎಂದು ಜಾತ್ಯಂಧನು ಹೇಳಿದರೆ ಅವನನ್ನು ಎಲ್ಲರೂ ಮೂರ್ಖ ಎಂದು ಹೇಳುತ್ತಾರೋ ಹಾಗೆಯೇ ಶ್ರುತಿಗಳು ಸ್ಮೃತಿಗಳು ಯುಕ್ತಿಗಳು ಯೋಗಿ ಪ್ರತ್ಯಕ್ಷಗಳು—ಈ ರೀತಿ ಎಲ್ಲ ಪ್ರಮಾಣಗಳಿಂದ ಈಶ್ವರನು ಸಿದ್ಧನಾದರೂ ನಾಸ್ತಿಕನು ತನಗೆ ಈಶ್ವರನು ತೋರುವದಿಲ್ಲವಾದ್ದರಿಂದ ಈಶ್ವರನನ್ನು ನಾನು ಒಪ್ಪುವದಿಲ ಎಂದು ಹೇಳಿದರೆ ಅವನ್ನು ಪರಮಮೂರ್ಖ ಎಂದು ಹೇಳಬೇಕು ಸೂರ್ಯನನ್ನು ಒಪ್ಪದ ಜಾತ್ಯಂಧನನ್ನು ಎಲ್ಲರೂ ನೀನು ಪರಮಮೂರ್ಖ ಎಂದು ಹೇಳಿದಾಗ ಜಾತ್ಯಂದನು ಹೇಗ ಸೂರ್ಯನನ್ನು ಒಪ್ಪಲೇಬೇಕಾಗುತ್ತದೋ ಹಾಗೆಯೇ ಈಶ್ವರನು ನನಗೆ ಕಾಣುವದಿಲ್ಲ. ಆದ್ದರಿಂದ ನಾನು ಈಶ್ವರನನ್ನು ಒಪ್ಪುವದಿಲ್ಲ ಎಂದು ಹೇಳಿದಾಗ ಅವನನ್ನು ಆ ಜಾತ್ಯಂಧನಂತೆ ಪರಮ ಮೂರ್ಖನು ನೀನು. ಶ್ರುತಿ ಸ್ಮೃತಿ ಯುಕ್ತಿ ಯೋಗಿ ಪ್ರತ್ಯಕ್ಷಗಳು ಇರುವಾಗ ಅದಕ್ಕೆ ವಿರುದ್ಧವಾಗಿ ನೀನು ಹೇಳುತ್ತಿ ಎಂದು ಹೇಳಬೇಕು ಇಷ್ಟನ್ನು ತಿಳಿಸುವದಕ್ಕಾಗಿ ಸವಿತೃ ಶಬ್ದವನ್ನು ಗಾಯತ್ರಿಯಲ್ಲಿ ಪ್ರಯೋಗಿಸಲಾಗಿದೆ



### ೨೩೩ ವಹ್ನಿಃ

೧ ಜಗತ್ತನ್ನು ನಡೆಸುವವನು [1]

ಸ್ವತಂತ್ರನಾದ ಭಗವಂತನೇ ಬೇರೆ ಬೇರೆ ವ್ಯಕ್ತಿ, ಪದಾರ್ಥಗಳ ಮೂಲಕ ಜಗತ್ತನ್ನು ನಡೆಸುವವನು ಋಗ್ವೇದದಲ್ಲಿ'ವಿಶ್ವೇ ದೇವ' ಎನಿಸುವ ಭಗವದ್ರೂಪಗಳನ್ನು ಈ ಅಭಿಪ್ರಾಯದಲ್ಲೇ'ವಹ್ನಯಃ'

---

೧ 1 ವಹತಿ ಪ್ರವರ್ತಯತೀತಿ ವಹ್ನಿಃ । 'ವಹ ಪ್ರಾಪಣೇ' ಇತ್ಯತಃ ಔಣಾದಿಕೋ ನಿಪ್ರತ್ಯಯಃ ।

ಎಂದು ವಿಶೇಷಿಸಲಾಗಿದೆ.[1]

೨ (ಅಗ್ನಿಮುಖದಲ್ಲಿ ಸಮರ್ಪಿಸಿದ) ಹವಿಸ್ಸನ್ನು ಆಯಾಯ ದೇವತೆಗಳಿಗೆ ತಲುಪಿಸುವವನು.[2]

ದೇವತೆಗಳು ಅಗ್ನಿಮುಖರು—ಅಗ್ನಿಯ ಮೂಲಕ ಸಮರ್ಪಿಸಿದ್ದನ್ನು ಸ್ವೀಕರಿಸಿರುವವರು ಅಗ್ನಿಯು ತನ್ನಲ್ಲಿ ಸಮರ್ಪಿಸಿದ್ದನ್ನು ಆಯಾಯ ದೇವತೆಗಳಿಗೆ ತಲುಪಿಸುವವನೆಂದು 'ವಹ್ನಿ ಎಂದು ಕರೆಸಿಕೊಳ್ಳಲ್ಪಟ್ಟಿರುವನು[3] ಆದರೆ ದೇವತೆಗಳಿಗೆ ಹವಿಸ್ಸನ್ನು ಮುಖ್ಯವಾಗಿ ತಲುಪಿಸುವವನು ಅಗ್ನ್ಯಂತರ್ಗತ ಪರಮಾತ್ಮನು ಮುಖ್ಯವಾಗಿ ಅಗ್ನ್ಯಂತರ್ಗತ ಭಗವಂತನ ಮುಖದಲ್ಲೇ ಹೋಮವನ್ನು ನಡೆಸುವ ಪ್ರಯುಕ್ತ ಭಗವಂತನನ್ನು 'ಜುಹ್ವಾಸ್ಯ' ಎಂದೂ, ಹಾಗೆ ಸಮರ್ಪಿಸಿದ್ದನ್ನು ಭಗವಂತನು ಆಯಾಯ ದೇವತೆಗಳಿಗೆ ತಲುಪಿಸುವುದರಿಂದ ಹವ್ಯವಾಟ್' ಎಂದೂ ಋಗ್ವೇದವು ಉಲ್ಲೇಖಿಸಿದೆ.[4] ಹೀಗೆ ಹವಿಸ್ಸನ್ನು ದೇವತೆಗಳಿಗೆ ಮುಖ್ಯವಾಗಿ ತಲುಪಿಸುವವನು ಭಗವಂತನೇ ಆಗಿರುವ ಪ್ರಯುಕ್ತ ಅವನೇ ಮುಖ್ಯವಾಗಿ 'ವಹ್ನಿ'ಯು

೩ ಬ್ರಹ್ಮಾಂಡವನ್ನು ಕೂರ್ಮರೂಪದಿಂದ ಹೊತ್ತಿರುವವನು[5]

---

1 'ವಿಶ್ವೇ ದೇವಾಸೋ ಅಸ್ರಿಧಃ ..ಮೇಧಂ ಜುಷಂತ ವಹ್ನಯಃ'
-ಋ. ವೇ. 3-9

ವಹ್ನಯೋ ವಹನಾದಸ್ಯ ।
-ಋ. ಭಾ

ಅಸ್ಯ ಜಗತೋ ವಹನಾತ್ ಪ್ರವರ್ತನಾತ್ ।
-ಋ ಭಾ. ಟೀ.

೨ 2 ವಹತಿ ಅಗ್ನಿಮುಖೇ ಹುತಂ ಹವಿಃ ತತ್ತದ್ದೇವಾನ್ ಪ್ರತಿ ಪ್ರಾಪಯತೀತಿ ವಹ್ನಿಃ ।

3 ಹವ್ಯಂ ವಹತೀತಿ ವಹ್ನಿಃ ।

4 ಹವ್ಯವಾಡ್ ಜುಹ್ವಾಸ್ಯಃ ।
-ಋ. ವೇ. 12-6

ಯಸ್ಮಾತ್ಸ್ಯೇ ಹವಿರ್ಹೂಯತೇ ಸ ಜುಹ್ವಾಸ್ಯಃ ।
-ಸಂ. ಸಂ.

೩ 5 ವಹತಿ ಕೂರ್ಮರೂಪೇಣ ಬ್ರಹ್ಮಾಂಡಂ ಧಾರಯತೀತಿ ವಹ್ನಿಃ। 'ಭಾರಂ ವಹತಿ' ಇತ್ಯಾದೌ ಧಾರಣಾರ್ಥೇಽಪಿ ಪಠ್ಯತೇ ।

೪ ಆಯಾಯರೂಪದಿಂದ ಪ್ರತಿಯೊಂದು ಪದಾರ್ಥವನ್ನೂ ಹೊತ್ತಿರುವವನು[1]

ಭಗವಂತನು ಸಾಮಾನ್ಯವಾಗಿ ಜಗತ್ತನ್ನು ಹೊತ್ತಿರುವುದಲ್ಲದೆ, ಪ್ರತಿಯೊಂದು ಪದಾರ್ಥವನ್ನೂ ಅಂತರ್ಯಾಮಿರೂಪದಿಂದ ವಿಶೇಷವಾಗಿ ಹೊತ್ತಿರುವನೆಂಬುದಾಗಿ ಬೃಹದಾರಣ್ಯಕೋಪನಿಷತ್ತು ಸಂದೇಶಿಸಿದೆ[2]

೫ ಖಾಂಡವ ವನವನ್ನು (ಅರ್ಜುನನ ಮೂಲಕ) ಸುಟ್ಟಿರುವವನು.[3]

೬ (ಅಸುರರ) ಜ್ಞಾನವನ್ನು ಅಥವಾ ಆನಂದವನ್ನು ನಾಶಪಡಿಸುವವನು[4]

೭ ಜಗತ್ಪ್ರವರ್ತಕರಾದ ತತ್ತ್ವಾಭಿಮಾನಿದೇವತೆಗಳನ್ನು ಪ್ರೇರಿಸುವವನು[5]

---

೪ 1 ಪ್ರತಿ ಪ್ರತಿ ಸ್ಥಿತ್ಯೈ ರೂಪೈಃ ಸರ್ವಾನ್ ಪದಾರ್ಥಾನ್ ಪ್ರತ್ಯೇಕಂ ವಹತೀತಿ ವಹ್ನಿಃ ।

2 ಯಸ್ಮಾನ್ ಪುರುಷಾನ್ ನಿರೂಹ್ಯ ಪ್ರತ್ಯೂಹ್ಯಾತ್ಯಕ್ರಾಮತ್

—ಬೃ ಉ 5–9–26

'ತದಪೇಕ್ಷಾಂ ವಿನೈವಾಸೌ ನಿರ್ಗತ್ಯ ಪುರುಷೋತ್ತಮಃ । ವಹತ್ಯೇವಾನಿಶಂ ಸರ್ವಂ ನಿರೂಢಂ ತೇನ ತಜ್ಜಗತ್। ಪ್ರತಿ ಪ್ರತಿ ಸ್ಥಿತ್ಯೈ ರೂಪೈರ್ಯಸ್ಮಾದ್ ಧತ್ತೇ ಹರಿಃ ಸದಾ । ಅತಃ ಪ್ರತ್ಯೂಹ್ಯತೇ ತೇನ ವ್ಯಕ್ತಾವ್ಯಕ್ತಮಿದಂ ಜಗತ್'

—ಬ್ರಹ್ಮತರ್ಕ (ಬೃ ಉ. ಭಾ.)

೫ 3 (ವಂ) ವನಂ ಖಾಂಡವವನಂ ಹಿನಸ್ತೀತಿ ವಹ್ನಿಃ ।

—ವಾ. ರಾ.

೬ 4 ವಂ ಅಸುರಾಣಾಂ ಜ್ಞಾನಂ ಆನಂದಂ ವಾ ಹಿನಸ್ತಿ ಹಂತೀತಿ ವಾ ವಹ್ನಿಃ ।

೭ 5 ವಹಂತಿ ಧಾರಯಂತಿ ಜಗದಿತಿ ವಹಾಸ್ತತ್ತ್ವಾಭಿಮಾನಿನಃ । ತಾನ್ ನಯತಿ ಪ್ರಣಯತೀತಿ ವಹ್ನಿಃ। ಅಗಂ ನಯತೀತ್ಯತ್ರ ಅಂತ್ಯಾಕಾರಸ್ಯ ಲೋಪೇ ಸತಿ ಯಥಾ ಅಗ್ನಿರಿತಿ ಸಿಧ್ಯತಿ ತಥಾತ್ರಾಪಿ ನಿರುಕ್ತತ್ವಾತ್ ಹಕಾರೋತ್ತರಾಕಾರಸ್ಯ ಲೋಪೇ ಸತಿ ವಹ್ನಿರಿತಿ ಸಿಧ್ಯತಿ ।

೮ ಮುಖ್ಯವಾಗಿ ಜಗತ್ಪ್ರವರ್ತಕರಾದ ವಾಯುದೇವರನ್ನು ವಿಶೇಷವಾಗಿ ಪ್ರೇರಿಸುವವನು[1]

ದೇವ, ಋಷಿ, ಪಿತೃ, ಯಕ್ಷ, ಗಂಧರ್ವ, ಮನುಷ್ಯ ಹಾವು ಹಾಗೂ ಅಸುರರು—ಎಂಬ ಎಂಟು ಪ್ರಭೇದದ ಜೀವರಾಶಿಯನ್ನು ಪ್ರೇರಿಸುವ ಪ್ರಯುಕ್ತ ವ್ಯಷ್ಟಿ ಎಂಬುದಾಗಿಯೂ, ಸಂಪೂರ್ಣರಾದ ಸುಪರ್ಣ, ರುದ್ರ, ಶೇಷ ಹಾಗೂ ದೇವೇಂದ್ರ ಮತ್ತು ಅವರ ಪತ್ನಿಯರನ್ನು ಪ್ರೇರಿಸುವ ಪ್ರಯುಕ್ತ 'ಸಮಷ್ಟಿ' ಎಂಬುದಾಗಿಯೂ ಅನಿಸುವ[2] ವಾಯುದೇವರನ್ನೂ ಜ್ಞಾನವನ್ನು ನೀಡುವುದರ ಮೂಲಕ ಭಗವಂತ ಚೆನ್ನಾಗಿ ಪ್ರೇರಿಸುವನೆಂಬುದಾಗಿ ಋಗ್ವೇದ ಸಂದೇಶಿಸಿದೆ[3]

೯ ಪ್ರವಹಿಸುವ ನೀರನ್ನು ನಿಯಮಿಸುವವನು[4]

ಅಕ್ಷರನಾಮಕ ಭಗವಂತನ ಪ್ರಶಾಸನೆಗೊಳಗಾಗಿಯೇ ಬೇರೆ ಬೇರೆ ನದಿಗಳು ಬೇರೆ ಬೇರೆ ದಿಕ್ಕಿಗೆ ಹರಿಯುತ್ತಿವೆ—ಎಂದು ಯಾಜ್ಞವಲ್ಕ್ಯರು ಸಂದೇಶಿಸಿರುವರು[5]

---

೮ 1 ವಹತಿ ವಿಶೇಷೇಣ ಧಾರಯತಿ ಜಗದಿತಿ ವಾಯುಃ ವಹಃ । ತಂ ನಯತಿ ವಿಶೇಷೇಣ ಪ್ರಣಯತೀತಿ ವಹ್ನಿಃ ।

2 ' ತಸ್ಮಾದ್ ವಾಯುರೇವ ವ್ಯಷ್ಟಿರ್ವಾಯುರೇವ ಸಮಷ್ಟಿಃ . '
-ಬೃ. ಉ. 5-3-2

'ತಸ್ಮಾತ್ ಸರ್ವೋತ್ತಮೋ ವಾಯುರ್ವಿವಿಧಂ ತು ಯದಷ್ಟಕಮ್ । ದೇವಾನೃಷೀನ್ ಪಿತೄನ್ ಯಕ್ಷಾನ್ ಗಂಧರ್ವಾನ್ ಮಾನುಷೋರಗಾನ್ । ಅಸುರಾಂಶ್ಚೈವ ವಶೇ ನಿತ್ಯಂ ನಯತ್ಯಮಿತಪೌರುಷಃ । ಸಂಪೂರ್ಣಾಂಶ್ಚ ಸುಪರ್ಣೇಶಶೇಷೇಂದ್ರಾಸ್ತತ್‌ಸ್ತ್ರಿಯೋಽಪಿ ಚ । ಅಷ್ಟೌ ನಯತ್ಯನ್ಯಯತಿ ವಶೀಕೃತ್ಯ ಸ್ವಯಂ ಪ್ರಭುಃ । ಅತೋ ವ್ಯಷ್ಟಿಃ ಸಮಷ್ಟಿಶ್ಚ ವಾಯುರೇವಾಭಿಧೀಯತೇ'-ಪರಮ ಸಂಹಿತಾ (ಬೃ ಉ ಭಾ )

3 ವಿಗೋಭಿರದ್ರಿಮೈರಯತ್ ।
-ಋ ವೇ 7-3

ಜ್ಞಾನೈರಾದರಯೋಗ್ಯಂ ಚ ಪ್ರಾಣಾತ್ಮಾನಂ ಸಮೈರಯತ್

೯ 4 ವಹತಿ ಪ್ರವಹತೀತಿ ವಹಂ ಜಲಂ ತನ್ನಯತೀತಿ ವಹ್ನಿಃ ।

5 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನು ...'
-ಬೃ. ಉ. 5-8-9

೧೦ ತನ್ನನ್ನು ಹೊರುವ ಗರುಡನನ್ನು ಪ್ರೇರಿಸುವವನು[1]

ತಾನು ಗರುಡನಲ್ಲಿ 'ವೈನತೇಯ' ಎಂಬ ವಿಭೂತಿರೂಪದಿಂದ ಇದ್ದು ಅವನು ಸಾಮರ್ಥ್ಯ ವಿಶೇಷವನ್ನು ಹೊಂದುವಂತೆ ಅನುಗ್ರಹಿಸುತ್ತಿರುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು[3]

೧೧ ಭಾರವನ್ನು ಹೊರುವ ಎತ್ತು ಮೊದಲಾದವುಗಳನ್ನು ಪ್ರೇರಿಸುತ್ತಿರುವವನು.[3]

ನಾರಾಯಣ ಮತ್ತು ಅನಿರುದ್ಧ ನಾಮಕ ಭಗವಂತನು ಎತ್ತು ಅಶ್ವ ಮೊದಲಾದ ಭಾರ ಹೊರುವ ಪ್ರಾಣಿಗಳಲ್ಲಿ ಆಯಾಯ ರೂಪದಿಂದಲೇ ಇದ್ದು ವಿಶೇಷವಾಗಿ ಪ್ರೇರಿಸುವನು[4]

## ಜಿಜ್ಞಾಸೆ

[ಅಗ್ನಿಯ ಪ್ರಾಧಾನ್ಯಬೋಧನೆ]

ಪ್ರ – ಋಗ್ವೇದದ ಆದಿಯಲ್ಲಿ ಅಗ್ನಿಮೀಳೇ ಎಂದು ಅಗ್ನಿಶಬ್ದದಿಂದ ಪರಮಾತ್ಮನನ್ನು ನಿರ್ದೇಶ ಮಾಡಲಿಕ್ಕೆ ಏನಾದರೂ ಕಾರಣ ಇದ್ದೀತು ಅದೇನು?

ಉ – ಐತರೇಯೋಪನಿಷದ್ಭಾಷ್ಯದಲ್ಲಿ 'ಅಗ್ನೌ ಕರ್ಮಾಣಿ ಕೃತ್ವೈವ ಮಾನುಷಾ ಮುಕ್ತಿಭಾಗಿನಃ' ಅಗ್ನ್ಯಂತರ್ಗತ ಪರಮಾತ್ಮನಲ್ಲಿ ಹವಿಸ್ಸನ್ನು ಅರ್ಪಿಸಿಯೇ ಮನುಷ್ಯರು ಮುಕ್ತಿ ಭಾಗಿಗಳಾಗುವರು ಎಂದು ಹೇಳಿರುತ್ತದೆ ಆದುದರಿಂದಲೇ ಮನುಷ್ಯರು ನಿತ್ಯ ವೈಶ್ವದೇವಯಜ್ಞವನ್ನು ಮಾಡದೆ ಊಟ ಮಾಡುವದಿಲ್ಲ ಆದುದರಿಂದ ಅಗ್ನಿಯು ಮನುಷ್ಯರಿಗೆ ಪ್ರಧಾನ ಇದನ್ನು ತಿಳಿಸುವುದಕ್ಕಾಗಿ ಋಗ್ವೇದದ ಆದಿಯಲ್ಲಿ ಅಗ್ನಿಶಬ್ದವನ್ನು ಪ್ರಯೋಗಿಸಿದ್ದು



---

೧೦ 1 ವಹತಿ ಸ್ವಾತ್ಮಾನಮಿತಿ ವಹಃ ಗರುಡಃ । ತಂ ನಯತೀತಿ ವಹ್ನಿಃ ।

2 'ವೈನತೇಯಶ್ಚ ಪಕ್ಷಿಣಾಮ್

–ಗೀ 10-30

೧೧ 3 ವಹಂತಿ ಭಾರಮಿತಿ ವಹಾಃ ಬಲೀವರ್ದಾದಯಸ್ತಾನ್ ನಯತೀತಿ ವಹ್ನಿಃ ।

4 ನಾರಾಯಣಾನಿರುದ್ಧೌ ತು ತಥಾऽನ್ಯಪಶುಷು ಸ್ಥಿತೌ । ವೃಷಭಾಶ್ವಾದಿರೂಪೇಣ ತೃಪ್ತಿದಾವಖಿಲಸ್ಯ ಚ । –ಐತರೇಯ ಸಂಹಿತಾ (ಐ ಉ ಭಾ 2-2-1-5)

* * *

ಪ್ರಾಪಣಾರ್ಥಕಾತ್ ಣೀಞ್ ಧಾತೋಃ ನಿಷ್ಪನ್ನಸ್ಯ ನೇತೃನಾಮ್ನಃ (221) ಉಕ್ತಾ ಅರ್ಥಾ ಅತ್ರಾಪ್ಯನುಸಂಧೇಯಾಃ ।

## ೨೩೪ ಅನಿಲಃ

೧ ಇತರರನ್ನು ಆಶ್ರಯಿಸದೆ ಇರುವವನು[1]

೨ ತನಗೆ ತಾನೇ ಆಶ್ರಯನಾಗಿ ಇರುವವನು[2]

ಭಗವಂತನು ತನ್ನ ಮಹಿಮೆಯಲ್ಲೇ ಪ್ರತಿಷ್ಠಿತನಾಗಿರುವವನು ಹೀಗೆ ಸ್ವತಂತ್ರನಾದ ಅವನಿಗೆ ಮತ್ತೊಂದು ಆಧಾರವಿಲ್ಲ[3] ಈ ಅಭಿಪ್ರಾಯದಲ್ಲಿಯೇ ತೈತ್ತಿರೀಯೋಪನಿಷತ್ತು ಅವನನ್ನು 'ಅನಿಲಯನ' ಎಂದು ಉಲ್ಲೇಖಿಸಿದೆ[4] ಸಕಲ ಚರಾಚರಗಳೂ ನನ್ನನ್ನು ಆಧರಿಸಿಕೊಂಡಿವೆ ನಾನು ಮಾತ್ರ ಯಾರನ್ನೇ ಆಧರಿಸಿಕೊಂಡಿಲ್ಲ—ಎಂದು ಗೀತಾಚಾರ್ಯನು ಸಂದೇಶಿಸಿರುವನು[5]

---

೧ 1 ನ ವಿದ್ಯತೇ ಸ್ವತೋಽನ್ಯತ್ ನಿಲಯನಂ ಯಸ್ಯ ಸಃ ಅನಿಲಃ ।

೨ 2 ಅಃ ಬ್ರಹ್ಮೈವ ನಿಲಯನಂ ಯಸ್ಯ ಸಃ ಅನಿಲಃ । ವಾಯುರಪಿ ಅನಿಲ ಇತಿ ಅನೇನೈವಾ-ಭಿಪ್ರಾಯೇಣ ವ್ಯವಹ್ರಿಯತ ಇತಿ ಶ್ರೀಮದಾಚಾರ್ಯೈಃ ಪ್ರದರ್ಶಿತಮ್-'ಅಃ ಬ್ರಹ್ಮೈವ ನಿಲಯನಂ ಯಸ್ಯ ವಾಯೋಃ ಸೋಽನಿಲಮ್'

3 'ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ '

-ಛಾಂ ಉ 7-2-9

4 ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇ. .ಅನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ'

-ತೈ ಉ. 2-12

' ನಿಜಾಶ್ರಯಾತ್ । ಅನಿಲಾಯನೇಽಭಯತ್ವೇನ ಯದಾ ಜ್ಞಾನೇನ ತಿಷ್ಠತಿ ।

-ಯಜುಃ ಸಂಹಿತಾ (ತೈ. ಉ. ಭಾ )

ನಿಜಾಶ್ರಯಾತ್ ಸ್ವಸ್ಯೈವ ಸ್ವಾಶ್ರಯಾತ್ ನ ವಿದ್ಯತೇ ಸ್ವತೋಽನ್ಯತ್ ನಿಲಯನಂ ತಥಾ ಅಕಾರವಾಚ್ಯಃ ಸ್ವಯಮೇವ ನಿಲಯನಂ ಯಸ್ಯೇತ್ಯರ್ಥದ್ವಯಮ್ ।

—ಬ. ಗೋ. (ತೈ ಉ ಭಾ. ಟೀ.)

5 'ಮತ್ಸ್ಥಾನಿ ಸರ್ವಭೂತಾನಿ ನಚಾಹಂ ತೇಷ್ವವಸ್ಥಿತಃ'

-ಗೀ. ವಿ. 9-4

ಮದಾಧಾರತಯೈವ ಸರ್ವಭೂತಾನಿ ಸಜಡಜೀವಜಾತಾನಿ । ತೇಷು ಚಾಹಂ ನಾವಸ್ಥಿತಃ ತದಾಧಾರತಯಾ ತದುಪಜೀವನೇನ ನ ವರ್ತ ಇತ್ಯರ್ಥಃ ।

೩ ತನಗೆ ಮತ್ತೊಬ್ಬ ಪ್ರೇರಕನಿಲ್ಲದವನು[1]

ಮುಕ್ತಾಮುಕ್ತ ಪ್ರಪಂಚವನ್ನೆಲ್ಲ ಭಗವಂತನು ಪ್ರೇರಿಸುತ್ತಿರುವನೆಂದು ಸಂದೇಶಿಸಿರುವ ಐತರೇಯೋಪನಿಷತ್ತು, ಅಂತಹ ಭಗವಂತನು ಮಾತ್ರ ಯಾರಿಂದಲೂ ಪ್ರೇರಿತನಲ್ಲ, ಯಾರನ್ನೂ ಆಶ್ರಯಿಸಿಕೊಂಡಿಲ್ಲ—ಎಂದು ಬೋಧಿಸಿದೆ[2] ಶ್ರೀ ಹರಿಯು ಲಕ್ಷ್ಮೀದೇವಿಗೂ ಅಂತರ್ಯಾಮಿ ಅಂತಹ ಶ್ರೀಹರಿಗೆ ಯಾರೂ ಎಂದೂ ಅಂತರ್ಯಾಮಿ ಆದವನಿಲ್ಲ—ಎಂದು ಬ್ರಹ್ಮತರ್ಕ ಸಂದೇಶಿಸಿದೆ[3]

೪ ಆಧಾರವಾಗಿ ಭೂಮಿಯ ಅಪೇಕ್ಷೆ ಇಲ್ಲದವನು[4]

ಸ್ವರೂಪಸಾಮರ್ಥ್ಯದಿಂದಲೇ ಜಗತ್ತಿನ ಸೃಷ್ಟಿಯನ್ನು ಮಾಡಬಲ್ಲ ಭಗವಂತನಿಗೆ, ಸೃಷ್ಟಿಗೆ

---

೩ 1 ಏಲಯತೀತಿ ಇಲಃ ಪ್ರೇರಕಃ । 'ಇಲ ಪ್ರೇರಣೇ' । ನ ವಿದ್ಯತೇ ಇಲಃ ಯಸ್ಯ ಸಃ ಅನಿಲಃ ।
ಇಲತಿ ಪ್ರೇರಯತೀತಿ ಇಲಃ । ತದ್ರಹಿತತ್ವಾದನಿಲಃ ।
—ವಿ. ರಾ

2 . .ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋಽಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ॥
—ಐ. ಉ 2 5.1–4

ಸರ್ವಂ ಜಗದಿದಂ ವಿಷ್ಣೋರ್ವಶೇ ತಿಷ್ಠತಿ ಸರ್ವದಾ । ತೇನೈವ ನೀಯತೇ ನಿತ್ಯಂ ತಸ್ಮಿನ್ನೇವ ಪ್ರತಿಷ್ಠಿತಮ್ । ಮುಕ್ತಾ ಯೇಽಲೋಕನಾಮನೋ ನೀಯಂತೇ ತೇಽಪಿ ವಿಷ್ಣುನಾ । ಸ್ವಯಂ ಚಾನನ್ಯನಿಷ್ಠತ್ವಾತ್ ಪ್ರತಿಷ್ಠೇತ್ಯಭಿಧೀಯತೇ ।
—ಐತರೇಯಸಂಹಿತಾ (ಐ. ಉ. ಭಾ )

3 ಅಂತರ್ಯಾಮೀ ಶ್ರಿಯಶ್ಚಾಪಿ ವಿಷ್ಣುರೇವ ನ ಸಂಶಯಃ ।
ನಾಂತರ್ಯಾಮೀ ಕಶ್ಚಿದಸ್ತಿ ವಿಷ್ಣೋಃ ಕ್ವಾಪಿ ಕುತಶ್ಚನ ।
—ಬ್ರಹ್ಮತರ್ಕ (ಭಾಗ. ತಾ. ನಿ 6-19-12)

೪ 4 ನ ವಿದ್ಯತೇ ಇಲಾ ಆಧಾರಭೂತಾ ಭೂಮಿರ್ಯಸ್ಯ ಸಃ ಅನಿಲಃ ।
—ವಾ. ರಾ.

ಸ್ವತಂತ್ರಾಧಾರವಾಗಿ ಭೂಮಿ ಯ ಅಪೇಕ್ಷೆ ಇಲ್ಲ[1] ಆದರೂ ತನ್ನ ಐಶ್ವರ್ಯದ ಪ್ರಕಟಣೆಗಾಗಿಯಷ್ಟೇ ತನಗೆ ಅಧೀನಗಳಾದ ಭೂಮ್ಯಾದಿಗಳನ್ನು ಬಳಸಿಕೊಂಡು ಅವನು ಸೃಷ್ಟಿಸುವನು[2] ಜಗತ್ಕರ್ತನಾದ ಭಗವಂತನು ಸೃಷ್ಟಿಕಾಲದಲ್ಲಿ ಯಾವ ಅಧಿಷ್ಠಾನಾದಿಗಳಿಂದ ಭೂಮಿ ಮತ್ತು ಅಂತರಿಕ್ಷಗಳನ್ನು ಸೃಷ್ಟಿಸಿದನೋ, ಸ್ವಮಹಿಮೆಯಿಂದ ಪ್ರಲಯಕಾಲದಲ್ಲಿ ಭೂಮಿ ಮತ್ತು ಅಂತರಿಕ್ಷಗಳನ್ನು ಆವರಿಸಿರುವನೋ—ಅಂತಹ ಸ್ವತಂತ್ರಗಳಾದ ಅಧಿಷ್ಠಾನಾದಿಗಳು ಯಾವವು ತಾನೇ ಇವೆ?—ಎಂದು ಆಕ್ಷೇಪಿಸುತ್ತಿರುವ ಋಗ್ವೇದವು ಸ್ವತಂತ್ರ ಅಧಿಷ್ಠಾನಾದಿಗಳ ಅಪೇಕ್ಷೆ ಭಗವಂತನಿಗೆ ಇಲ್ಲ[3]—ಎಂದು ಸೂಚಿಸಿದೆ

೫ ಚಟುವಟಿಕೆಗಳನ್ನು ನಡೆಸುವವನು[4]

ಮುಖ್ಯವಾಗಿ 'ಪ್ರಾಣ' ಎನಿಸುವ ಭಗವಂತನೇ ಸ್ವತಂತ್ರವಾಗಿ ಎಲ್ಲರಿಂದಲೂ ಚಟುವಟಿಕೆಗಳನ್ನು ನಡೆಸುವವನು

---

1 ಸ್ವತಂತ್ರಬಹು ಸಾಧನಾ ಸೃಷ್ಟಿರ್ಲೋಕೇ ದೃಷ್ಟಾ । ನೈವಂ ಬ್ರಹ್ಮಣಃ । ಸ್ವರೂಪ-ಸಾಮರ್ಥ್ಯಾದೇವ ತಸ್ಯ ಸೃಷ್ಟಿಃ ।

-ಬ್ರ. ಸೂ. ಭಾ (2-1-15)

2 ಸಾಧನಾನಾಂ ಸಾಧನತ್ವಂ ಯದಾತ್ಮಾಧೀನಮಿಷ್ಯತೇ । ತದಾ ಸಾಧನಸಂಪತ್ತಿರೈಶ್ವರ್ಯ-ದ್ಯೋತಿಕಾ ಭವೇತ್—ಬ್ರ ಸೂ ಭಾ. (2-1-19)

3 ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ ಸ್ವಿತ್ ಕಥಾಸೀತ್ ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ।

—ಋ. ವೇ 10-81-2

'ವಿಶ್ವಕರ್ಮಾ ಜಗತ್ಕರ್ತಾ ಹರಿಃ ಸೃಷ್ಟಿಕಾಲೇ 'ಯತೋ' ಯೇನಾಧಿಷ್ಠಾನಾದಿನಾ ಭೂಮಿಂ ದ್ಯಾಂ ಚ ಜನಯನ್ ವಿಶೇಷೇಣ ಬಭೂವ । ಯೇನ ಚಾಧಿಷ್ಠಾನಾದಿನಾ 'ಮಹಿನಾ' ಸ್ವಮಹಿಮ್ನಾ ವಿಶ್ವಚಕ್ಷಾಃ ಸರ್ವಾವಯವೈಃ ಸರ್ವೇಂದ್ರಿಯೈರ್ವಾ ದರ್ಶನ ಶಕ್ತಿಮಾನ್ ಹರಿಃ ಭೂಮಿಂ ದ್ಯಾಂ ಚ ಔರ್ಣೋತ್ ಪ್ರಲಯೇ ಆವೃಣೋತ್ ತದಧಿ-ಷ್ಠಾನಂ ಅಧಿಕರಣಂ ಕಿಂ ಸ್ವಿದಾಸೀತ್ ಕಿಮಾಸೀತ್ ನ ಕಿಮಪಿ......

-ಭಾಷ್ಯ ದೀಪಿಕಾ

೫ 4 ಅನಿತಿ ಚೇಷ್ಟತೇಽನೇನೇತ್ಯನಿಲಃ ।

-ವಿ. ರಾ.

೧ ಅನಾದಿಯಾಗಿರುವವನು[1]

೨ (ಶುಭಾಶುಭಕರ್ಮಗಳನ್ನು ಮಾಡಿಸುವ ಪ್ರಯುಕ್ತ) ಪುಣ್ಯ ಪಾಪಗಳನ್ನು ಸ್ವೀಕರಿಸದವನು[2]

ಭಗವಂತನಿಗೆ ಪುಣ್ಯಪಾಪಗಳ ಲೇಪವಿಲ್ಲ[3]

೩ ಚೇತರಿಕೆ ನೀಡುವವನು[4]

೪ ಮುಖ್ಯಪ್ರಾಣನ ಉಪಾಸಕರಲ್ಲಿ ಆದರ ಉಳ್ಳವನು[5]

---

೧ 1 ಅನಾದಿತ್ವಾತ್–ಅನಿಲಃ ।

–ಶಾಂ ಭಾ.

ಅನಾದಿಭಾವತ್ವಾನ್ನ ನಿಲೀಯತೇ ನ ವಿನಶ್ಯತೀತ್ಯನಿಲಃ ।

–ವಿವೃತಿಃ

೨ 2 ಅನಾದಾತಾ–ಅನಿಲಃ ।

–ಶಾಂ ಭಾ.

ನಿಪೂರ್ವಾತ್ 'ಲಾ ಆದಾನೇ' ಇತ್ಯಸ್ಮಾತ್ ಕ ಪ್ರತ್ಯಯೇ ನಿಲ ಇತಿ ರೂಪಮ್ ।
ನಿಲೋ ನ ಭವತೀತ್ಯನಿಲಃ ।

–ವಿವೃತಿಃ ।

3 ತೀರ್ಣೋ ಹಿ ವರ್ತತೇ ನಿತ್ಯಂ ಪುಣ್ಯಪಾಪೇ ಜನಾರ್ದನಃ ।
ನೈನಂ ಕದಾಚಿತ್ ತಪತಃ ಪುಣ್ಯಪಾಪೇ ಜನಾರ್ದನಮ್ ।

–ಬೃ. ಉ. ಭಾ. 6-4-22

೩ 4 ಏವಮೇಷಾಮನನಾತ್–ಉಜ್ಜೀವನಾದ್ ಅನಿಲಃ ।

–ಪ. ಭ

೪ 5 ಅನಿಷು ಮುಖ್ಯಪ್ರಾಣೋಪಾಸಕೇಷು ಲಃ ಸ್ನೇಹಃ ಯಸ್ಯ ಸಃ ಅನಿಲಃ ।
'ಲಃ ಶ್ಲೇಷೇ ...'–ಏಕಾಕ್ಷರಕೋಶಃ ।

[ಅರ್ಥವಿಶೇಷಗಳನ್ನು ಆರನೆಯ 'ಅನಿಲಃ' ಎಂಬ ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

ಜಿಜ್ಞಾಸೆ

[ಪರಮಾತ್ಮನ ವೈಶಿಷ್ಟ್ಯ]

ಪ್ರ - ಸೂರ್ಯ ಚಂದ್ರಾದಿಗಳೂ ಪರಾಶ್ರಯರಹಿತರಾಗಿದ್ದಾರೆ ಆದುದರಿಂದ ಪರಮಾತ್ಮನು ಪರಾಶ್ರಯವಿಲ್ಲದವನು ಎಂಬುದು ಏನು ವಿಶೇಷ?

ಉ - ಸೂರ್ಯಚಂದ್ರಾದಿಗಳ ಒಳಗೆ ಪರಮಾತ್ಮನು ಅವರಿಗೆ ಆಶ್ರಯನಾಗಿ ಇದ್ದಾನೆ. ಮಣಿಗಳ ಒಳಗೆ ಇರುವ ಸೂತ್ರವು ಮಣಿಗಳಿಗೆ ಆಧಾರವಾಗುವಂತೆ ಸೂರ್ಯಚಂದ್ರಾದಿಗಳ ಒಳಗೆ ಇರುವ ಪರಮಾತ್ಮನು ಅವರಿಗೆ ಆಶ್ರಯನು ಆಗುವನು. ಪರಮಾತ್ಮನ ಒಳಗೂ ಹೊರಗೂ ಇದ್ದು ಅವನಿಗೆ ಆಶ್ರಯರು ಯಾರೂ ಇಲ್ಲ ಇದು ಅವನಲ್ಲಿ ಇರುವ ವೈಶಿಷ್ಟ್ಯ



## ೨೩೫ ಧರಣೀಧರಃ

೧ ಭೂದೇವಿಯನ್ನು ಧರಿಸಿಕೊಂಡಿರುವವನು[1]

ಭೂಮಿಗೆ ಮುಖ್ಯಾಭಿಮಾನಿಯಾದ ಲಕ್ಷ್ಮೀದೇವಿಯು ಭೂಮಿವಾಚಕಗಳಾದ ಭೂಮಿ, ಧರಾ, ಭೂ ಮೊದಲಾದ ಶಬ್ದಗಳಿಂದ ಹೇಗೋ ಹಾಗೆಯೇ ಧರಣೀ ಶಬ್ದದಿಂದಲೂ ಮುಖ್ಯವಾಗಿ ವಾಚ್ಯಳಾಗಿರುವಳು. ನಿತ್ಯಾವಿಯೋಗಿನಿಯಾದ ಲಕ್ಷ್ಮೀದೇವಿಯ ಆ ರೂಪವನ್ನು ಭಗವಂತನು ನಿತ್ಯವೂ ಧರಿಸಿಕೊಂಡು ಇರುವನು. ನಾರಾಯಣಾಷ್ಟಾಕ್ಷರ ಮಂತ್ರದ ಧ್ಯಾನಶ್ಲೋಕದಲ್ಲಿ ಲಕ್ಷ್ಮೀದೇವಿಯ ಲಕ್ಷ್ಮೀ ಮತ್ತು ಧರಾ ರೂಪಗಳಿಂದ ಆಲಿಂಗಿತನಾದ ಭಗವಂತನನ್ನು ಧ್ಯಾನಿಸಬೇಕೆಂದು ಸಂದೇಶಿಸಲಾಗಿದೆ[2] ಪ್ರಲಯ ಕಾಲದಲ್ಲಿ ಲಕ್ಷ್ಮೀದೇವಿಯು ಶ್ರೀ, ಭೂ ಹಾಗೂ ದುರ್ಗಾ ಎಂಬ ಮೂರು ರೂಪಗಳಿಂದ ಭಗವಂತನ ಜೊತೆಗೆ ಪವಡಿಸಿರುವಳೆಂದು ಜ್ಯೋತಿಃಸಂಹಿತೆ ತಿಳಿಸಿದೆ.[3]

---

೧ 1 ಧರತೀತಿ ಧರಃ ಧರಣ್ಯಾಃ ಭೂದೇವ್ಯಾಃ ಧರಃ ।

2 'ಉದ್ಯದ್ಭಾಸ್ವತ್ಸಮಾಭಾಸಃ...ಧ್ಯೇಯೋಽಷ್ಟಮೀಶ್ವರಃ। ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ...'
-ತಂ. ಸಾ ಸಂ 1-17

3 ಶ್ರೀ ಭೂರ್ಮಹೀರಿತಿ ರೂಪಾಭ್ಯಾಂ ಪ್ರಕೃತಿರ್ವಿಷ್ಣುನಾ ಸಹ ಶೇತೇ, ..।
-ಜ್ಯೋತಿಃಸಂಹಿತಾ (ಭಾಗ. ತಾ. ನಿ 10-94-12)

ಅಕ್ಷರನಾಮಕ ಭಗವಂತನ ಪ್ರಶಾಸನೆಯ ಮೇರೆಗೆ ಲಕ್ಷ್ಮೀದೇವಿಯು ಶ್ರೀರೂಪ ಹಾಗೂ ಭೂಮಿ ರೂಪಗಳು ದ್ಯುತಿಗಳಾಗಿವೆ ಎಂದು ಯಾಜ್ಞವಲ್ಕ್ಯರು ಗಾರ್ಗಿಗೆ ಉಪದೇಶಿಸಿರುವರು[1]

೨ ಭೂಲೋಕದ ಅವಾಂತರ ಅಭಿಮಾನಿದೇವತೆಯನ್ನು ಧರಿಸಿಕೊಂಡಿರುವವನು[2]

ಭೂಲೋಕಕ್ಕೆ ಮುಖ್ಯಾಭಿಮಾನಿನಿ ಲಕ್ಷ್ಮೀದೇವಿಯಾದರೆ ಅವಾಂತರ ಅಭಿಮಾನಿನಿ ಹದಿನೆಂಟನೆಯ ಕಕ್ಷೆಯಲ್ಲಿ ಬರುವ ಪೃಥಿವೀ ಹೆಸರಿನ ದೇವತೆ ಆಕೆಗೂ ಭಗವಂತನೇ ಧಾರಕ ಕೃಷ್ಣಾವತಾರದ ಹಿನ್ನೆಲೆಯಲ್ಲಿ ಈ ಧರಣೀದೇವಿ ಮೇರುಪರ್ವತದ ಸಭೆಯಲ್ಲಿ ಶ್ರೀವಿಷ್ಣುವಿನಲ್ಲಿ ಹೀಗೆ ಪ್ರಾರ್ಥಿಸಿಕೊಳ್ಳುವಳು—'ನಿನ್ನಿಂದ ನಾನು ಧರಿಸಲ್ಪಟ್ಟಿರುವೆ ಜಗತ್ತೂ ಧರಿಸಲ್ಪಟ್ಟಿದೆ.'[3]

೩ ಭೂಲೋಕವನ್ನು ಧರಿಸಿಕೊಂಡಿರುವವನು[4]

ಭೂಮಿಯನ್ನು ಶೇಷನು ಧರಿಸಿಕೊಂಡಿರುವನು. ಆದರೆ ಶೇಷನಲ್ಲಿ ಅನಂತ ಎಂಬ ಹೆಸರಿನ ವಿಭೂತಿರೂಪದಿಂದ ಇದ್ದು ಶೇಷನಿಗೆ ಭೂಧಾರಣೆಗೆ ಬೇಕಾದ ವಿಶಿಷ್ಟ ಸಾಮರ್ಥ್ಯವನ್ನು ಅನುಗ್ರಹಿಸುವವನು ಭಗವಂತನೇ[5] ಅಲ್ಲದೆ, ಬ್ರಹ್ಮಾಂಡವನ್ನೂ, ಬ್ರಹ್ಮಾಂಡದೊಳಗಿನ ನೀರನ್ನೂ ಭಗವಂತನು ಕೂರ್ಮ ರೂಪದಿಂದ ಧರಿಸಿಕೊಂಡಿರುವನು ಈ ಕೂರ್ಮರೂಪದ ಪುಚ್ಛವನ್ನು ಆಶ್ರಯಿಸಿಕೊಂಡು

---

ದುರ್ಗಾರೂಪಸ್ಯಾಪ್ಯುಪಲಕ್ಷಣಮಿದಮ್ ।
—ಬ ಗೋ (ಭಾಗ. ತಾ. ನಿ. ಟೀ)

1 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ '
—ಬೃ. ಉ. 5-8-9

ದ್ಯಾವಾಪೃಥಿವ್ಯೌ ಶ್ರೀಭೂಮೀ ತದಾಧಾರೋ ಹರಿರ್ನಿತ್ಯಂ ಸ್ವಾತಂತ್ರ್ಯೇಣ ಪ್ರಶಾಸಕಃ ।
—ಮಹಾಮೀಮಾಂಸಾ (ಬೃ. ಉ. ಭಾ.)

೨ 2 ಧರಣ್ಯಾಃ ಭೂಲೋಕಸ್ಯ ಅವಾಂತರಾಭಿಮಾನಿನ್ಯಾಃ ಪೃಥಿವೀನಾಮ್ನ್ಯಾಃ ದೇವತಾಯಾಃ ಧರಃ ಧರಣೀಧರಃ ।

3 ತ್ವಯಾ ಧಾರ್ಯಾ ತ್ವಹಂ ದೇವ ತ್ವಯಾ ವೈ ಧಾರ್ಯತೇ ಜಗತ್ ।
—ಹ. ವಂ. ಹರಿವಂಶಪರ್ವ 52-14

೩ 4 ಧರತೀತಿ ಧರಃ । ಧರಣ್ಯಾಃ ಭೂಮ್ಯಾಃ ಧರಃ ಧರಣೀಧರಃ ।

5 ಅನಂತಶ್ಚಾಸ್ಮಿ ನಾಗಾನಾಂ.. ।
—ಗೀತಾ. 10-29

ಕೂರ್ಮರೂಪದಲ್ಲಿ ವಾಯುದೇವನಿರುವನು ಇವನ ಪುಚ್ಛವನ್ನು ಆಶ್ರಯಿಸಿಕೊಂಡು ಶೇಷನು ಸರ್ವಾಧಾರವಾದ ಪೃಥಿವಿಯನ್ನು ಧರಿಸಿಕೊಂಡಿರುವನು—ಎಂದು 'ವೈಭವ' ಸಂದೇಶಿಸಿದೆ[1] ಆದ್ದರಿಂದ ಪೃಥಿವಿಯನ್ನು ಮುಖ್ಯವಾಗಿ ಶ್ರೀಹರಿಯೇ ಧರಿಸಿಕೊಂಡಿರುವನು. ಪೃಥಿವೀದೇವಿಯೇ ಶ್ರೀವಿಷ್ಣುವಿನಲ್ಲಿ ಹೀಗೆ ನಿವೇದಿಸಿಕೊಂಡಿರುವಳು—ಸಕಲ ಭುವನಗಳನ್ನು ನೀನೇ ಧರಿಸಿರುವಿ ನೀನು ಸ್ವಮಹಿಮೆಯಿಂದ ಧರಿಸಿರುವುದನ್ನೇ ನಿನ್ನ ಅನುಗ್ರಹದಿಂದ ಯತ್ನ ಪಟ್ಟು ನಾನು ಧರಿಸಿರುವೆನಷ್ಟೇ ನಿನ್ನಿಂದ ಧರಿಸಲ್ಪಟ್ಟಿದ್ದನ್ನೇ ನಾನೂ ಧರಿಸಿಕೊಂಡಿರುವೆನೇ ಹೊರತು ನಿನ್ನಿಂದ ಧೃತವಾಗಲಾರದ್ದನ್ನು ನಾನು ಧರಿಸಲಾರೆ[2]

ಹಾಗೆಯೇ ಭೂಮಿಯು ಕಂಪಿಸದೆ ಸ್ಥಿರವಾಗಿ ನಿಲ್ಲುವಂತೆ ಮಾಡಿರುವವು ಪರ್ವತಗಳು. ಆದ್ದರಿಂದಲೇ 'ಭೂಧರ' ಎಂದೇ ಎನಿಸಿರುವ ಇವುಗಳಿಗೂ ಸ್ಥೈರ್ಯವನ್ನು ಕೊಟ್ಟು[3] ಅವುಗಳ ಮೂಲಕ ಭೂಮಿಯನ್ನು ಧರಿಸಿರುವವನು ಭಗವಂತನೇ.

ಳ (ತನ್ನ ಕಕ್ಷ್ಯೆಯಿಂದ ಕಳಚಿ ಬಿದ್ದ) ಭೂಮಿಯನ್ನು ವರಾಹರೂಪದಿಂದ ಧರಿಸಿರುವವನು[4]

ಹಿರಣ್ಯಾಕ್ಷನು ಭೂಮಿಯನ್ನು ಅದರ ಕಕ್ಷ್ಯೆಯಿಂದ ಉರುಳಿಸಿದಾಗ, ಅದು ಕೆಳಗೆ ಬೀಳುತ್ತಿರಲು ಭಗವಂತನು ವರಾಹರೂಪದಿಂದ ಭೂಮಿಯ ಉದ್ಧಾರವನ್ನು ನಡೆಸಿರುವನು ಭೂದೇವಿ

---

1 'ಬಿಭರ್ತ್ಯಂಡಂ ಹರಿಃ ಕೂರ್ಮಸ್ತ್ವಂಡೇ ಚಾಪ್ಯುದಕಂ ಮಹತ್ । ಉದಕೇ ಕೂರ್ಮರೂಪಸ್ಯ ವಾಯೋಃ ಪುಚ್ಛಂ ಸಮಾಶ್ರಿತಮ್ । ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್ । ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್'
—ವೈಭವ (ಬೃ ಉ. ಭಾ.3–2–3)

2 ತ್ವಂ ಧಾರಯಸಿ ಭೂತಾನಿ ಭುವನಾನಿ ಬಿಭರ್ಷಿ ಚ ।
ಯತ್ ತ್ವಯಾ ಧಾರ್ಯತೇ ಕಿಂಚಿತ್ ತೇಜಸಾ ಚ ಬಲೇನ ಚ ।
ತತಸ್ತವ ಪ್ರಸಾದೇನ ಮಯಾ ಯತ್ನಾಚ್ಚ ಧಾರ್ಯತೇ ।
ತ್ವಯಾ ಧೃತಂ ಧಾರಯಾಮಿ ನಾಧೃತಂ ಧಾರಯಾಮ್ಯಹಮ್ ॥
—ಹ. ವಂ. ಹರಿವಂಶ ಪರ್ವ 52-14,15,16

3 'ಭೂಧರಾಣಾಮಹಂ ಸ್ಥೈರ್ಯಂ .'
—ಭಾಗ 11–16–33

ಳ 4 ಸ್ವಕಕ್ಷ್ಯಾತಃ ಭ್ರಷ್ಟಾಂ ಧರಣೀಂ ಭೂಮಿಂ ಉದ್ಧರತೀತಿ ಧರಣೀಧರಃ ।

ಯನ್ನು ಪ್ರಾರ್ಥಿಸುವಾಗ ವರಾಹರೂಪಿ ಭಗವಂತನ ನೂರಾರು ಕೈಗಳಿಂದ ಉದ್ಧೃತಳಾದಳೆಂಬು ದಾಗಿ ಉಪನಿಷತ್ತಿನಲ್ಲಿ ಉಲ್ಲೇಖಿಸಲಾಗಿದೆ[1]

೫ ಜಗದ್ಧಾರಕರಾದ ವಾಯ್ವಾದಿದೇವತೆಗಳನ್ನು ಧರಿಸಿಕೊಂಡಿರುವವನು[2]

ಭಗವಂತನ ತ್ರಿವಿಕ್ರಮತ್ವ ಮೊದಲಾದ ಮಹಿಮೆಗಳನ್ನು ಉಲ್ಲೇಖಿಸಿದ ವಿಷ್ಣುಸೂಕ್ತವು ಭಗವಂತನು ಹೀಗೆ ಮಹಿಮಾನ್ವಿತನಾಗಿರುವುದರಿಂದಲೇ ಜಗದ್ಧಾರಕರಾದ ವಾಯ್ವಾದಿ ದೇವತೆಗಳನ್ನು ಧರಿಸಿಕೊಂಡಿರುವನೆಂದು ಸಂದೇಶಿಸಿದೆ[3]

ಜಿಜ್ಞಾಸೆ

[ಪತಿವ್ರತಾಧರ್ಮ]

ಪ್ರ.- ಪರಮಾತ್ಮನು ಸರ್ವಧಾರಕನು ಆದುದರಿಂದ ಅವನನ್ನು ಧರಣೀಧರಃ ಎಂದು ಸ್ತೋತ್ರ ಮಾಡುವಂತೆ ಬ್ರಹ್ಮಧರಃ ರುದ್ರಧರಃ ಇಂದ್ರಧರಃ ಇತ್ಯಾದಿಯಾಗಿ ಏಕೆ ಸ್ತೋತ್ರವನ್ನು ಮಾಡುವದಿಲ್ಲ? ಕೇವಲ ಧರಣೀಧರಃ ಎಂದು ಸ್ತೋತ್ರವನ್ನು ಮಾಡುವ ಅಭಿಪ್ರಾಯವೇನು?

ಉ.- ಎಲ್ಲರ ಮನಸ್ಸುವಾಕ್‌ಗಳ ವ್ಯಾಪಾರವು ಧರಣೀಶಬ್ದವಾಚ್ಯಳಾದ ಲಕ್ಷ್ಮೀದೇವಿಯ ಆಧೀನ ಅವಳ ಅನುಗ್ರಹ ಇದ್ದರೆ ನಾವು ಮನಸ್ಸಿನಿಂದ ಏನನ್ನಾದರೂ ತಿಳಿಯ ಬಹುದು. ಏನನ್ನಾದರೂ ಮಾತಾಡಬಹುದು ಅವಳ ಅನುಗ್ರಹಕ್ಕಾಗಿ ಅವಳನ್ನು ಪ್ರತ್ಯೇಕವಾಗಿ ಸ್ತೋತ್ರವನ್ನು ಮಾಡಿದರೆ ಅವಳು ಸಂತುಷ್ಟಳಾಗುವುದಿಲ್ಲ 'ವಿಷ್ಣುನಾ ಸಹಿತಾ ಧ್ಯಾತಾ ಸಾತಿ ತುಷ್ಟಿಂ ಪರಾಂ ವ್ರಜೇತ್' ಎಂಬ ಪ್ರಮಾಣಾನುಸಾರ ವಿಷ್ಣುವಿನಿಂದ ಕೂಡಿಯೇ ಅವಳನ್ನು ಸ್ತೋತ್ರಮಾಡಬೇಕು ಇದು ಎಲ್ಲ ಪತಿವ್ರತೆಯರಿಗೆ ಧರ್ಮ. ಲೋಕದ ಎಲ್ಲ ಪತಿವ್ರತಾ ಸ್ತ್ರೀಯರು ತಮ್ಮ ಗಂಡಂದಿರ ಸಹಿತವಾಗಿ ತಮ್ಮನ್ನು ಪೂಜಿಸಿದರೆ ತಾವು ಸಂತೋಷ

---

1 ಉದ್ಧೃತಾಽಸಿ ವರಾಹೇಣ ಕೃಷ್ಣೇನ ಶತಬಾಹುನಾ ।

-ಮ. ನಾ. ಉ

೫ 2 ಜಗತ್ ಧರಂತೀತಿ ಧರಣ್ಯಃ ವಾಯ್ವಾದಿದೇವತಾಃ । ತಾಸಾಂ ಧರಃ ಧರಣೀಧರಃ ।

3 ಅತೋ ಧರ್ಮಾಣಿ ಧಾರಯನ್ ।

-ಋ ಸೇ. 22-18

ಧಾರಕಾಂಶ್ಚೈವ ವಾಯ್ವಾದೀನ್ ಧಾರಯನ್ ವರ್ತತೇ ತತಃ ।

-ಋ. ಭಾ.

ಪಡಬೇಕು ಕೇವಲ ತನ್ನನ್ನು ಪೂಜಿಸಿದಾಗ ಅವರು ಸಂತುಷ್ಟರಾಗಬಾರದು. ಈ ರೀತಿ ಪತಿವ್ರತಾ ಧರ್ಮವನ್ನು ಲೋಕಕ್ಕೆ ತೋರಿಸತಕ್ಕವಳು ಧರಣೀದೇವಿಯು ಆದುದರಿಂದ ಧರಣೀ ದೇವಿಯ ಅನುಗ್ರಹವನ್ನು ಸಾಧಿಸುವುದಕ್ಕಾಗಿ ಪರಮಾತ್ಮನಿಂದ ಕೂಡಿ ಅವಳನ್ನು ಸ್ತೋತ್ರ ಮಾಡುವುದಕ್ಕಾಗಿ ಧರಣೀಧರಃ ಎಂದು ಲಕ್ಷ್ಮೀಸಹಿತ ಪರಮಾತ್ಮನ ಸ್ತೋತ್ರವನ್ನು ಮಾಡಿದು



ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಧೃಗ್ ವಿಶ್ವಭುಗ್ ವಿಭುಃ।
ಸತ್ಕರ್ತಾ ಸತ್ಕೃತಃ ಸಾಧುರ್ಜಹ್ನುರ್ನಾರಾಯಣೋ ನರಃ ॥ ೨೬ ॥

೨೪೬ ಸುಪ್ರಸಾದಃ

೧ ಶೋಭನವಾದ ಅನುಗ್ರಹ ಉಳ್ಳವನು[1]

'ಅನಂತನೆನಿಸಿರುವ ಭಗವಂತನು ಪ್ರಸನ್ನನಾದನೆಂದರೆ ಯಾವುದು ತಾನೇ ದುರ್ಲಭವೆನಿಸೀತು? —ಎನ್ನುವ ಭಕ್ತಪ್ರಹ್ಲಾದನ ಮಾತು ಭಗವಂತನ ಪ್ರಸಾದವು ಚತುರ್ವಿಧ ಪುರುಷಾರ್ಥಗಳಲ್ಲಿ ಯಾವುದನ್ನೂ ಸಂಪಾದಿಸಿಕೊಡಬಲ್ಲನೆಂಬುದನ್ನು ಸೂಚಿಸುವುದು.[2] ಭಗವಂತನು ಸೇವಕರ ಸೇವೆಗನುಗುಣವಾಗಿಯೇ ಪ್ರಸನ್ನನಾಗುವನು. 'ಕಲ್ಪವೃಕ್ಷ ಹೇಗೆ ತನ್ನನ್ನು ಸೇವಿಸಿದವರಿಗೆ ಅವರ ಸೇವಾ ಪ್ರಮಾಣಕ್ಕೆ ಅನುಗುಣವಾಗಿಯೇ ಫಲವನ್ನು ನೀಡುವುದೋ ಅಂತೆಯೇ ಭಗವಂತನ ಪ್ರಸಾದವೂ ಸೇವಕರ ಸೇವೆಗನುಗುಣವಾಗಿಯೇ ಉದಯಿಸುವುದೆಂದು ಉದ್ಧವನು ಸ್ತುತಿಸಿರುವನು[3]

---

೧ 1 ಶೋಭನಃ ಪ್ರಸಾದಃ ಅನುಗ್ರಹಃ ಯಸ್ಯ ಸಃ ಸುಪ್ರಸಾದಃ ।
ಪ್ರಸಾದೇ ಶೋಭನತ್ವಂ ಸರ್ವಪುರುಷಾರ್ಥಪ್ರಯೋಜಕತ್ವಂ, ವಿಶೇಷತಃ ಮೋಕ್ಷ-ಸಾಧಕತ್ವಂ ತಾರಕಮ್ಯೇನ ಅಭಿವ್ಯಕ್ತತ್ವಂ ಫಲದಾಯಿತ್ವಂ, ಇತ್ಯಾದಿ

2 'ತುಷ್ಟೇ ಚ ಯತ್ರ ಕಿಮಲಭ್ಯಮನಂತ ಆದ್ಯೇ
-ಭಾಗ. 7-6-31

* 'ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ . '
-ಗೀ. ಭಾ. 2-24

3 ಸಂಸೇವತಾಂ ಸುರತರೋರಿವ ತೇ ಪ್ರಸಾದಃ ಸೇವಾನುರೂಪಮುದಯೋ ನ ವಿಪರ್ಯ-ಯೋಽತ್ರ ।
-ಭಾಗ. 10-72-6

ನಾರದೀಯದಲ್ಲಿ ಯಾವ ಯಾವ ಸಾಧನದಿಂದ ಎಂತೆಂತಹ ಮಟ್ಟದ ಭಗವತ್ಪ್ರಸಾದವನ್ನು ಸಂಪಾದಿಸಬಹುದು, ಅದು ಯಾವ ಯಾವ ಫಲಕ್ಕೆ ಸಾಧನವಾಗುವುದೆಂಬುದನ್ನು ಸ್ಪಷ್ಟೀಕರಿಸಿದೆ—ಬರೇ ಯಜ್ಞಯಾಗಾದಿ ಕರ್ಮದಿಂದಾಗಿ ಕನಿಷ್ಠ ಮಟ್ಟದ ಭಗವತ್ಪ್ರಸಾದವು ಲಭಿಸುವುದು. ಅದು ಸ್ವರ್ಗಲೋಕಕ್ಕೆ ಕಾರಣವಾಗುವುದು. ಶ್ರವಣಾದಿಗಳಿಂದ ಮಧ್ಯಮಮಟ್ಟದ ಭಗವತ್ಪ್ರಸಾದವು ಸಿದ್ಧಿಸುವುದು, ಇದು ಜನಲೋಕಾದಿಗಳ ಪ್ರಾಪ್ತಿಗೆ ಕಾರಣವಾಗಬಲ್ಲದು. ಜ್ಞಾನಸಂಪತ್ತಿನಿಂದ ಉತ್ತಮಮಟ್ಟದ ಭಗವತ್ಪ್ರಸಾದವು ದೊರಕುವುದು. ಈ ಉತ್ತಮ ಪ್ರಸಾದವು ಮೋಕ್ಷಪುರುಷಾರ್ಥದಗಳಿಕೆಯ ಸಾಧನವಾಗುವುದು.[1] ಪರಮಪುರುಷಾರ್ಥವಾದ ಮೋಕ್ಷವು ಭಗವಂತನ ಪ್ರಸಾದದಿಂದಲೇ ದೊರಕುವಂತಹದ್ದು. ಸಾಧಕನು ಶಾಸ್ತ್ರದ ಶ್ರವಣ-ಮನನ-ನಿದಿಧ್ಯಾಸನಗಳಿಂದ ಭಗವಂತನ ಪರೋಕ್ಷಜ್ಞಾನ ಸಂಪಾದಿಸಲು, ರಜೋಗುಣದಿಂದ ಹುಟ್ಟಿಕೊಳ್ಳುವ ಕಾಮಕ್ರೋಧಾದಿಗಳು ಪ್ರತಿಬಂಧಕಗಳಾಗಿದ್ದು ಇವುಗಳನ್ನು ಹತ್ತಿಕ್ಕಿ ಪರೋಕ್ಷ ಜ್ಞಾನವನ್ನು ಗಳಿಸಲು ಭಗವಂತನ ಅನುಗ್ರಹಬೇಕು.[2] ಭಗವಂತನ ಪರೋಕ್ಷಜ್ಞಾನದಿಂದ ಅವನ ಅಪರೋಕ್ಷಜ್ಞಾನ ಸಂಪಾದಿಸಲೂ ಅವನ ಪ್ರಸಾದ ಅತ್ಯಾವಶ್ಯಕ. ಅವ್ಯಕ್ತೈಕಸ್ವಭಾವದ ಭಗವಂತನು ಪ್ರಸನ್ನನಾದಾಗಷ್ಟೇ ತನ್ನ ಸಾಮರ್ಥ್ಯದಿಂದಲೇ ತನ್ನ ರೂಪವನ್ನು ವ್ಯಕ್ತಗೊಳಿಸುವನು.[3] ಹೀಗೆ ಸಾಧಕನು ಭಗವಂತನ ಪ್ರಸಾದದಿಂದಲೇ ಅವನ ಅಪರೋಕ್ಷ ಜ್ಞಾನವನ್ನು ಸಂಪಾದಿಸಿದನೆಂದರೆ ಅದರಿಂದಾಗಿ ಇನ್ನಷ್ಟು ಪ್ರಸನ್ನನಾಗುವ ಭಗವಂತನು

---

ರಮಾದೀನಾಮಧಿಕೋದಯೋಽಪಿ ಸೇವಾಧಿಕತ್ವಾದೇವ ॥

ಭಾಗ ತಾ. ನಿ 7-9 27

1 ಕರ್ಮಣಾ ತ್ವಧಮಃ ಪ್ರೋಕ್ತಃ ಪ್ರಸಾದಃ ಶ್ರವಣಾದಿಭಿಃ । ಮಧ್ಯಮೋ ಜ್ಞಾನಸಂಪತ್ತ್ಯಾ ಪ್ರಸಾದಸ್ತೂತ್ತಮೋ ಮತಃ । ಪ್ರಸಾದಾತ್ತ್ವಧಮಾದ್ ವಿಷ್ಣೋಃ ಸ್ವರ್ಗಲೋಕಃ ಪ್ರಕೀರ್ತಿತಃ । ಮಧ್ಯಮಾಜ್ಜನಲೋಕಾದಿರುತ್ತಮಸ್ತ್ವೇವ ಮುಕ್ತಿದಃ ।

—ನಾರದೀಯ (ಬ್ರ ಸೂ ಭಾ. 1-1-1)

2 'ಅವಿಜ್ಞಾಯ ಪರಂ ಮತ್ತೋ ಜಯಃ ಕಾಮಸ್ಯ ವೈ ಕುತಃ'

—ಗೀ. ತಾ. 4-43

3 'ಅತೋಽನಂತೇನ ತಥಾ ಹಿ ಲಿಂಗಮ್'

—ಬ್ರ. ಸೂ. 3-2-27

'ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ । ತಮೃತೇ ಪರಮಾತ್ಮಾನಂ ಕಃ ಪಶ್ಯೇತಾಮಿತಂ ಪ್ರಭುಮ್'

—ನಾರಾಯಣಾಧ್ಯಾತ್ಮ (ಬ್ರ. ಸೂ. ಭಾ.)

ಅವನಿಗೆ ಮುಕ್ತಿಯನ್ನು ಅನುಗ್ರಹಿಸುವನು[1] ಹೀಗೆ ಮೋಕ್ಷವು ಪೂರ್ಣವಾಗಿ ಭಗವದಧೀನವೇ ಆಗಿರುವುದರಿಂದ ಅವನಿಂದ ಅನುಗೃಹೀತರಾದವರಷ್ಟೇ ದೇಹದಲ್ಲಿ ಅಭಿಮಾನವನ್ನು ಬಿಟ್ಟು, ಅವನ ಮಹಿಮೆಯನ್ನು ತಿಳಿದುಕೊಂಡು ಸಂಸಾರವನ್ನು ದಾಟಬಹುದೆಂದು ಚತುರ್ಮುಖನು ಸಂದೇಶಿಸಿರುವನು[2] ಭಗವಂತನ ಪರಮ ಪ್ರಸಾದಕ್ಕೆ ಪಾತ್ರನಾಗಿ ಮುಕ್ತನಾಗಿದ್ದಂತೆಯೇ, ಅಲ್ಲಿ ನೈಜಾನಂದವನ್ನು ಅನುಭವಿಸುವನು ಕೂಡ[3]—ಎಂದು ಸಂದೇಶಿಸುವ ಉಪನಿಷತ್ತು ಮುಕ್ತನ ನೈಜಾನಂದದ ಅನುಭವಕ್ಕೂ ಭಗವಂತನ ಪರಮಪ್ರಸಾದದ ಆವಶ್ಯಕತೆಯನ್ನು ಸೂಚಿಸುವುದು

ಈ ರೀತಿಯಾಗಿ ಭಗವತ್ಪ್ರಸಾದವು ಜೀವಾತ್ಮನಿಗೆ ಸಂಸಾರ ಬಂಧನದಿಂದ ಬಿಡುಗಡೆಯನ್ನು ನೀಡಿ, ನೈಜಾನಂದವನ್ನು ಅನುಭವಿಸುವಂತೆ ಮಾಡುವ ಅಸಾಧಾರಣವಾದ ಮಹತ್ತ್ವವನ್ನು ಒಳಗೊಂಡಿರುವುದರಿಂದಲೇ ಸತ್ಯವ್ರತರಾಜನು ಮತ್ಸ್ಯರೂಪಿ ಭಗವಂತನನ್ನು ಸ್ತುತಿಸುತ್ತ—ಉಳಿದ ದೇವತೆಗಳು, ಗುರುಗಳು, ಜನರು ಇವರೆಲ್ಲ ಸೇರಿಯೂ ಭಗವತ್ಪ್ರಸಾದದ ಹತ್ತು ಸಾವಿರದ ಒಂದು ಪಾಲಿನಷ್ಟು ಪ್ರಸಾದವನ್ನು ಮಾಡಲಾರರು—ಎಂದಿರುವನು[4]

---

1 ಶ್ರವಣಾದಿತ್ರಯೋತ್ಪನ್ನದೃಷ್ಟ್ಯೈವ ಸ್ವೇಚ್ಛಯಾ ಹರಿಃ । ಪ್ರಸನ್ನೋ ಮುಕ್ತಿದೋ ನಿತ್ಯಮನ್ಯಥಾ ನ ಕಥಂಚನ

-ನ್ಯಾಯ ವಿವರಣ 3-3-24

2 'ಯೇಷಾಂ ಸ ಏವ ಭಗವಾನ್ ದಯಯೇದನಂತಃ ಸರ್ವಾತ್ಮನಾ ಶ್ರಿತಪದೋ ಯದಿ ನಿರ್ವ್ಯಲೀಕಮ್। ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ ನೈಷಾಂ ಮಮಾಹಮಿತಿ ಧೀಃ ಶ್ವಸೃಗಾಲಭಕ್ಷ್ಯೇ'

-ಭಾಗ 2-7-42

3 ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ।

-ಛಾಂ ಉ 8-4-2

ಏವಂ ಸಮ್ಯಕ್ ಪ್ರಸಾದೇನ ವಿಷ್ಣೋರ್ಮುಕ್ತೋಽಪಿ ಯೋಽಪರಃ ।
ಯಂ ಪ್ರಾಪ್ಯ ತೇ ನಿಜಾನಂದಮಾಪ್ನುವಂತಿ ಸ ಕೇಶವಃ ।

-ಸಾಮಸಂಹಿತಾ (ಛಾಂ. ಉ. ಭಾ.)

4 'ನ ಯತ್ಪ್ರಸಾದಾಯುತಭಾಗಲೇಶಮನ್ಯೇ ಚ ದೇವಾ ಗುರವೋ ಜನಾಃ ಸ್ವಯಮ್ । ಕರ್ತುಂ ಸಮೇತಾಃ ಪ್ರಭವಂತಿ ಪುಂಸಸ್ತಮೀಶ್ವರಂ ತ್ವಾಂ ಶರಣಂ ಪ್ರಪದ್ಯೇ'

-ಭಾಗ. 8-24-49

ಹೀಗೆ ಭಗವಂತನ ಪ್ರಸಾದವು ಸಾಧಕನ ಸಾಧನಾನುಷ್ಠಾನಕ್ಕೆ ಅನುಗುಣವಾದ ಪ್ರಮಾಣದಲ್ಲಿ ಉಂಟಾಗಿ ಫಲಿಸುವ ಪ್ರಯುಕ್ತ, ಚತುರ್ವಿಧ ಪುರುಷಾರ್ಥಗಳಿಗೂ ಕಾರಣವಾಗಿರುವ ಪ್ರಯುಕ್ತ, ವಿಶೇಷವಾಗಿ ಮುಕ್ತಿಗೆ ಅಸಾಧಾರಣ ನಿಮಿತ್ತವಾಗಿರುವ ಪ್ರಯುಕ್ತ ಅತ್ಯಂತ ಶೋಭನವಾದುದೆನಿಸಿದೆ

೨ ಶೋಭನವಾದ ಮನಃಪ್ರಸಾದವು ದೊರಕುವಂತ ಅನುಗ್ರಹಿಸುವವನು[1]

ರಾಗದ್ವೇಷಗಳಿಂದ ದೂರಗಳಾದ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುತ್ತಿದ್ದರೂ, ಯಾರಿಗೆ ತನ್ನ ಮನಸ್ಸಿನ ಮೇಲೆ, ಇಂದ್ರಿಯಗಳ ಮೇಲೆ ಹಿಡಿತವಿದೆಯೋ ಅಂತಹವನು ಮನಃ ಪ್ರಸಾದವನ್ನು ಪಡೆಯುವನೆಂದು ಗೀತಾಚಾರ್ಯನು ತಿಳಿಸಿರುವನು ಇಂದ್ರಿಯನಿಗ್ರಹಕ್ಕಾದರೂ ಭಗವಂತನ ಸರ್ವೋತ್ತಮತ್ವಜ್ಞಾನಪೂರ್ವಕವಾಗಿ ಅವನಲ್ಲಿ ಮನಸ್ಸನ್ನು ಮಗ್ನಗೊಳಿಸುವುದೇ ಮುಖ್ಯ ಪ್ರಯೋಜಕ[3] ಆದ್ದರಿಂದ ಇಂದ್ರಿಯನಿಗ್ರಹ ಮೂಲಕವಾದ ಮನಃಪ್ರಸಾದಕ್ಕೆ ಭಗವಂ

---

೨ 1 ಶೋಭನಃ ಪ್ರಸಾದಃ ಸಾತ್ತ್ವಿಕಾನಾಂ ಮನಃಪ್ರಸಾದಃ ಯಸ್ಮಾತ್ ಸಃ ಸುಪ್ರಸಾದಃ ।

2 ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥
-ಗೀ 2-64

ಪ್ರಸಾದಂ-ಮನಃಪ್ರಸಾದಮ್ ।
-ಗೀ ಭಾ.

3 ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।
-ಗೀ. 2-61

ಬಹುಯತ್ನವತಃ ಶಕ್ಯಾನಿ ಅತೋ ಯತ್ನಂ ಕುರ್ಯಾದಿತ್ಯಾಶಯಃ । ಯುಕ್ತಃ ಮಯಿ ಮನೋ ಯುಕ್ತ್ವಾ ಅಹಮೇವ ಪರಃ ಸರ್ವಸ್ಮಾದುತ್ಕೃಷ್ಟೋ ಯಸ್ಯ ಸಃ ಮತ್ಪರಃ ।
-ಗೀ. ಭಾ.

ಅಯಂ ಭಾವಃ । ಯದ್ಯಪೀಂದ್ರಿಯಜಯೋ ಪರೋಕ್ತಃ ಪ್ರತ್ಯಾಹಾರಾದಿಃ ಸಾಧಾರಣ-ಪ್ರಯತ್ನೋ ನ ಸಾಧನಮ್ । ನಾಪಿ ನಿರಾಹಾರತ್ವಾದಿಕಂ ಪ್ರಾಗುಕ್ತಮವಶ್ಯಮ್ । ತಥಾಽಪಿ ತತ್ಪ್ರತಿನಿಧಿನಾ ಮಹಾಪ್ರಯತ್ನೇನ ಜೇಯಾನಿ । ತತ್ರ ಭಗವತಃ ಸರ್ವೋತ್ತ-

ತನೇ ಮುಖ್ಯ ಪ್ರಯೋಜಕ ಅಲ್ಲದೆ, ಮನಃಪ್ರಸಾದವು ಸತ್ತ್ವಗುಣದ ವಿಕಾರವಾಗಿದ್ದು, ಅದು ಭಗವಂತನ ಅನುಗ್ರಹದಿಂದಲೇ ಲಭಿಸುವಂತಹದ್ದು.[1]

೩. ಪ್ರಸನ್ನತೆಗೆ ಕಾರಣವಾದ, ಶೋಭನವಾದ ಸುಖ ಉಳ್ಳವನು.[2]

ಭಗವಂತನ ಆನಂದವು ಸಕಲಜಗತ್ತಿಗೂ ಆಧಾರವಾಗಿದೆ ಮನಸ್ಸಿಗೆ ಮತ್ತು ಮಾತಿಗೆ ಎಟಕದಷ್ಟು ಅಪರಿಮಿತವಾಗಿದೆ. ಉಳಿದವರೆಲ್ಲ ಈ ಆನಂದದ ಒಂದು ತುಣುಕಿನಷ್ಟು ಪ್ರಮಾಣದ ಆನಂದವನ್ನೇ ಅನುಭವಿಸುವರು ಇತರರ ಆನಂದಕ್ಕಿಂತ ಅತ್ಯಂತ ವಿಲಕ್ಷಣವಾದುದು. ಆದುದರಿಂದ ಭಗವಂತನ ಆನಂದವು ಇತರ ಎಲ್ಲ ಆನಂದಕ್ಕಿಂತ ಉತ್ಕೃಷ್ಟವಾದುದು—ಎಂಬುದಾಗಿ ಶ್ರೀವೇದ ವ್ಯಾಸರು ಬ್ರಹ್ಮಸೂತ್ರವೊಂದರಲ್ಲಿ ಸಿದ್ಧಾಂತಿಸಿರುವರು[3]

---

ಮತ್ತ್ವಜ್ಞಾನಪೂರ್ವಂ ತಸ್ಮಿನ್ನೇವ ನಿರಂತರಂ ಮನೋಯೋಜನಮಿಂದ್ರಿಯಜಯೋ ಮುಖ್ಯಂ ಸಾಧನಮ್ । ನಿರಾಹಾರತ್ವಾದಿಕಂ ತು ವಸ್ತುಗತಿಪ್ರದರ್ಶನಾರ್ಥಮೇ-ವೋಕ್ತಮಿತಿ ।
–ಗೀ ವಿ

1 'ಯೇ ಚೈವ ಸಾತ್ತ್ವಿಕಾ ಭಾವಾಃ ಮತ್ತ ಏವೇತಿ ತಾನ್ ವಿದ್ಧಿ .'
–ಗೀ 7-12

೩. 2 ಪ್ರಸೀದತ್ಯನೇನೇತಿ ಪ್ರಸಾದಃ ಸುಖಂ ಸುಷ್ಠು ಪ್ರಸಾದೋ ಯಸ್ಯೇತಿ ಸಂಪ್ರಸಾದಃ ।
–ಸ. ಸಂ.

* 'ಭೂಮಾ ಸಂಪ್ರಸಾದಾತ್ (ಬ್ರ ಸೂ 1-3-8) ಇತಿ ಸೂತ್ರೇ ಪ್ರಸಾದಶಬ್ದಃ ಸುಖಾರ್ಥಕತಯಾ ವ್ಯಾಖ್ಯಾತಃ—'ಸಂಪ್ರಸಾದಾತ್ ಪೂರ್ಣಸುಖರೂಪತ್ವಾದಿತಿ' ।

3 ಪರಮತಃ ಸೇತೋನ್ಮಾನಸಂಬಂಧಭೇದವ್ಯಪದೇಶೇಭ್ಯಃ
–ಬ್ರ ಸೂ. 3-2-32

ನ ಚಾನಂದಾದಿತ್ವಾಲ್ಲೋಕಾನಂದಾದಿವತ್ । ಏಷ ಸೇತುರ್ವಿಧೃತಿರ್ಯ ಏಷ ಆನಂದಃ ಪರಸ್ಯೈಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯೇತಿ ಸೇತುತ್ವಂ ಹ್ಯುಚ್ಯತೇ । ಯತೋ ವಾಚೋ ನಿವರ್ತಂತ ಇತ್ಯನ್ಮಾನತ್ವಮ್ । ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತೀತಿ ಸಂಬಂಧಃ । ಅನ್ಯಜ್ಜ್ಞಾನಂ ತು ಜೀವಾನಾಮನ್ಯಜ್ಜ್ಞಾನಂ ಪರಸ್ಯ ಚ । ನಿತ್ಯಾನಂದಾವ್ಯಯಂ ಪೂರ್ಣಂ ಪರಜ್ಞಾನಂ ವಿಧೀಯತ ಇತಿ ಭೇದಃ । ಅತೋಽಲೌಕಿಕತ್ವಾತ್ಪರಮೇವ ಬ್ರಹ್ಮಾನಂದಾದಿಕಮ್ ।
–ಬ್ರ. ಸೂ ಭಾ.

೪ ಶೋಭನವಾದ ಸುಖ ಸ್ವರೂಪಿ[1]

೫ ಶೋಭನವಾದ ಸುಖವನ್ನು ಅನುಗ್ರಹಿಸುವವನು[2]

ದುಃಖಾಮಿಶ್ರಿತ ಹಾಗೂ ಸಹಜ ಸುಖ ಮುಕ್ತಿಸುಖ. ಮುಕ್ತಾತ್ಮರಿಗೆ ಇದು ಭಗವಂತನ ಪ್ರಸಾದದಿಂದಾಗಿಯೇ ದೊರಕುವಂತಹದ್ದು[3]

೬ ಚೆನ್ನಾಗಿ ಜ್ಞಾನದಿಂದ ಪೂರ್ಣರಾದ ಜ್ಞಾನಿಗಳನ್ನು ಮುಕ್ತಿಗೆ ಕಳುಹಿಸುವವನು[4]

೭ ಜ್ಞಾನಿಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವವನು[5]

ಪ್ರಾಜ್ಞರು ಭಗವಂತನ ಪ್ರತಿಮೆಯಂತಿರುವವರು. ಅವರಲ್ಲಿ ಇದ್ದುಕೊಂಡು ಭಗವಂತನು

---

ಆಧಾರತ್ವಾಮಿತತ್ವೋಪಜೀವ್ಯತ್ವನಿಯಾಮಕತ್ವಾನಾಂ ವ್ಯಪದೇಶಾತ್, 'ನಿತ್ಯಾನಂದಾವ್ಯಯಂ ಪೂರ್ಣಂ ಪರಜ್ಞಾನಂ ವಿಧೀಯತೇ' ಇತ್ಯಾಧಿಕ್ಯೇನ ವೈಲಕ್ಷಣ್ಯವ್ಯಪದೇಶಾಚ್ಚ ಸರ್ವಸ್ಮಾದುತ್ತಮಮೇವ ಬ್ರಹ್ಮಾನಂದಾದಿಕಮ್ ।

-ತತ್ತ್ವದೀಪಿಕಾ

೪ 1 ಶೋಭನಸುಖರೂಪತ್ವಾತ್ ಸುಪ್ರಸಾದಃ ।

೫ 2 ಪ್ರಸಾದಃ ಸುಖಮ್ । ಸುಷ್ಠು ಪ್ರಸಾದಃ ಜೀವಾತ್ಮನಾಂ ಯಸ್ಮಾತ್ ಸಃ ಸುಪ್ರಸಾದಃ ।

3 ಏವಂ ಸಮ್ಯಕ್ ಪ್ರಸಾದೇನ ವಿಷ್ಣೋರ್ಮೋಕ್ಷೋಽಪಿ ಯೋಽಪರಃ ।
ಯಂ ಪ್ರಾಪ್ಯ ತೇ ನಿಜಾನಂದಮಾಪ್ನುವಂತಿ ಸ ಕೇಶವಃ ।

- ಸಾಮ ಸಂಹಿತಾ (ಛಾಂ. ಉ. ಭಾ. 8-4-2)

೬ 4 ಸುಪ್ರಾಂತೀತಿ ಸುಪ್ರಾಃ ಜ್ಞಾನಪೂರ್ಣಾಃ ಜ್ಞಾನಿನಃ। ವಿಪ್ರವತ್।'ಪ್ರಾ ಪೂರಣೇ'।ತಾನ್ ಸಾದಯತಿ ಮುಕ್ತಿಂ ಪ್ರತಿ ಗಮಯತೀತಿ ಸುಪ್ರಸಾದಃ । 'ಷದಲ್ ವಿಶರಣಗತ್ಯವಸಾದನೇಷು'

೭ 5 ಸುಪ್ರಾಃ ವಿಪ್ರಾಃ ಜ್ಞಾನಿನ ಇತಿ ಯಾವತ್ । ತೇಷು ಸೀದತಿ ವಿಶೇಷತಃ ಸನ್ನಿಹಿತೋ ಭವತೀತಿ ಸುಪ್ರಸಾದಃ ।

ಜ್ಞಾನದಾನ ಮಾಡುವವನು [1]

೮ ಜ್ಞಾನಿಗಳ ಮೂಲಕ ಅಜ್ಞಾನವನ್ನು ನಾಶಪಡಿಸುವವನು [2]

೯ ಶೋಭನನಾಗಿರುವವನು ಮತ್ತು ಚನ್ನಾಗಿ - ಅಧಿಕರಣದ ದೋಷಸ್ಪರ್ಶ ಇಲ್ಲದಂತೆ ಎಲ್ಲ ಪದಾರ್ಥಗಳಲ್ಲಿ ಇರುವವನು [3]

೧೦ ಅಧಿಕವಾಗಿ ಜ್ಞಾನಭಕ್ತ್ಯಾದಿಗಳಿಂದ ಪೂರ್ಣರಾದ ಬ್ರಹ್ಮಾದಿ ದೇವತೆಗಳನ್ನೂ (ಪ್ರಲಯಕಾಲದಲ್ಲಿ) ಸಂಹರಿಸುವವನು [4]

## ಜಿಜ್ಞಾಸೆ

### [ಪುಣ್ಯಪಾಪಗಳು ದ್ವಾರ]

ಪ್ರ - ಕರ್ಮದಿಂದ ಪುಣ್ಯವು ಉಂಟಾಗುವದು ಎಂದು ಏಕೆ ಒಪ್ಪಬೇಕು? ಈ ಜನ್ಮದಲ್ಲಿ ಮಾಡಿದ ಕರ್ಮದ ಫಲ ಬರುವ ಜನ್ಮಗಳಲ್ಲಿ ಉಂಟಾಗುತ್ತದೆಂದು ಶಾಸ್ತ್ರವು ಹೇಳುತ್ತದೆ ಈ ಜನ್ಮದಲ್ಲಿ ಮಾಡಿದ ಕರ್ಮವು ಬೇರೆ ಜನ್ಮಗಳಲ್ಲಿ ಇರುವದಿಲ್ಲ ಕಾರಣವು ಅವ್ಯವಹಿತ ಪೂರ್ವಕಾಲದಲ್ಲಿ ಇರಬೇಕು. ಆದುದರಿಂದ ಈ ಜನ್ಮದಲ್ಲಿ ನಾಶವನ್ನು ಹೊಂದಿದ ಕರ್ಮವು ಬರುವ ಜನ್ಮಗಳಲ್ಲಿ ಫಲವನ್ನು ಹೇಗೆ ಕೊಡುತ್ತದೆಂದು ವಿಚಾರ ಮಾಡಿದಾಗ ಕರ್ಮವು ನಾಶವಾದರೂ ಕರ್ಮಜನ್ಯ ಪುಣ್ಯವು ಬರುವ ಜನ್ಮಗಳಲ್ಲಿಯೂ ಇರುವದು ಆ ಪುಣ್ಯದ ದ್ವಾರದಿಂದ ಜನ್ಮಾಂತರಗಳಲ್ಲಿ ಈ ಜನ್ಮದ ಕರ್ಮವು ಫಲವನ್ನು ಕೊಡುತ್ತದೆಂದು ಒಪ್ಪಲೇಬೇಕೆಂದು ಮೀಮಾಂಸಕರು ಸಿದ್ಧಾಂತವನ್ನು ಮಾಡಿದ್ದಾರೆ ಈ ಕಾರಣಕ್ಕಾಗಿ ಕರ್ಮದಿಂದ ಪುಣ್ಯವು ಉಂಟಾಗುವದು ಎಂದು ಒಪ್ಪಿದ್ದಲ್ಲವೇ? ಹಾಗಾದರೆ ಕರ್ಮದಿಂದ ಭಗವತ್ಪ್ರಸಾದವು

---

1 'ಹರೇಸ್ತು ಪ್ರತಿಮಾಃ ಪ್ರಾಜ್ಞಾಸ್ತತ್ರಸ್ಥಃ ಕೇಶವಃ ಸ್ವಯಮ್ । ದದಾತಿ ಜ್ಞಾನಮೀಶೇಶಃ ಪರಮಾತ್ಮಾ ಸ್ವಯಂ ಪ್ರಭುಃ'

—ಭಾಗ. ತಾ. ನಿ 4-21-16

೮ 2 ಸುಷ್ಠು ಜ್ಞಾನಿಭಿಃ ಸಾದಯತಿ ಅಜ್ಞಾನಂ ಅವಸಾದಯತಿ ನಾಶಯತೀತಿ ಸುಪ್ರಸಾದಃ।

೯ 3 ಶೋಭನತ್ವಾತ್ ಸು । ಪ್ರಕರ್ಷೇಣ ಸೀದತಿ ಸರ್ವಪದಾರ್ಥೇಷು ನಿಷೀದತೀತಿ ಪ್ರಸಾದಃ । ಸುಪ್ರಸಾದಃ ।

೧೦ 4 ಅತಿಶಯೇನ ಜ್ಞಾನಭಕ್ತ್ಯಾದಿಭಿಃ ಪೂರ್ಣಾಃ ಸುಪ್ರಾಃ ಬ್ರಹ್ಮಾದಯೋ ದೇವಾಃ। ತಾನಪಿ ಪ್ರಲಯೇ ಸಾದಯತಿ ನಾಶಯತೀತಿ ಸುಪ್ರಸಾದಃ ।

ಉಂಟಾಗುವದರಿಂದ ಪ್ರಸಾದರೂಪದ್ವಾರದಿಂದ ಜನ್ಮಾಂತರದಲ್ಲಿ ಕರ್ಮಫಲವು ಲಭ್ಯವಾಗುತ್ತದೆ ಕರ್ಮಜನ್ಯಪುಣ್ಯವನ್ನು ದ್ವಾರವನ್ನಾಗಿ ಇಟ್ಟುಕೊಂಡು ಈ ಜನ್ಮದ ಕರ್ಮದ ಫಲವು ಜನ್ಮಾಂತರದಲ್ಲಿ ಲಭ್ಯವಾಗುವುದೆಂದು ಹೇಳುವದು ಅನಾವಶ್ಯಕವಲ್ಲವೇ?

ಉ - ಭಗವಂತನ ಮತ್ತು ಭಗವತ್ಪ್ರಸಾದದ ಪ್ರಾಯ ಸಾಕ್ಷಾತ್‌ಕಾರ್ಯವನ್ನು ಮಾಡುವದಿಲ್ಲ ಇನ್ನೊಂದನ್ನು ದ್ವಾರವನ್ನಾಗಿ ಇಟ್ಟುಕೊಂಡೇ ಮಾಡುವದು ಕಂಡಿದೆ ಜಗತ್‌ಸೃಷ್ಟಿಯನ್ನು ಚತುರ್ಮುಖನನ್ನು ದ್ವಾರವನ್ನಾಗಿ ಇಟ್ಟುಕೊಂಡು ಮಾಡುವದು, ಪ್ರಲಯವನ್ನು ರುದ್ರನನ್ನು ದ್ವಾರವನ್ನಾಗಿ ಇಟ್ಟುಕೊಂಡು ಮಾಡುವದು. ಅಂತೆಯೇ ಭಗವತ್ಪ್ರಸಾದವು ಕರ್ಮಜನ್ಯ ಪುಣ್ಯವನ್ನು ದ್ವಾರವನ್ನಾಗಿ ಇಟ್ಟುಕೊಂಡು ಭಗವತ್ಕೋಪವು ಕರ್ಮಜನ್ಯ ಪಾಪವನ್ನು ದ್ವಾರವನ್ನಾಗಿ ಇಟ್ಟುಕೊಂಡು ಕಾರ್ಯವನ್ನು ಮಾಡುವದು ಶಾಸ್ತ್ರಸಿದ್ಧವಾದುದರಿಂದ ಕರ್ಮಜನ್ಯಪುಣ್ಯಪಾಪಗಳನ್ನು ಅಂಗೀಕರಿಸಿದ್ದು ಕೂಡುತ್ತದೆ



## ೨೬೭ ಪ್ರಸನ್ನಾತ್ಮಾ

೧ ನಿತ್ಯ ಪ್ರಸನ್ನ ಸ್ವರೂಪನು[1]

೨ ನಿತ್ಯ ಪ್ರಸನ್ನವಾದ ಮನಸ್ಸು ಉಳ್ಳವನು[2]

ಭಗವಂತನು ನಿತ್ಯವೂ ಆನಂದ ಪರಿಪೂರ್ಣನಾದವನು. ಆಪ್ತಕಾಮನಾಗಿದ್ದು, ನಿತ್ಯತೃಪ್ತನಾದವನು. ಆದುದರಿಂದ ನಿತ್ಯವೂ ಪ್ರಸನ್ನನಾಗಿಯೇ ಇರುವನು ಅವನ ಸ್ವರೂಪಾತ್ಮಕ ಮನಸ್ಸೂ ನಿತ್ಯವೂ ಪ್ರಸನ್ನವಾಗಿಯೇ ಇರುವುದು ಆಂತರಿಕವಾದ ಪ್ರಸನ್ನತೆಯನ್ನು ಮುಖ್ಯವಾಗಿ ಮುಖವು ಸೂಚಿಸಿಕೊಡುವುದು. ಭಗವಂತನನ್ನು 'ಪ್ರಸನ್ನವದನ'ನನ್ನಾಗಿ ಧ್ಯಾನಿಸಬೇಕೆನ್ನುವುದರ[3] ಮೂಲಕ ಅವನು ಆಂತರಿಕವಾಗಿ ಸದಾ ಸುಪ್ರಸನ್ನನಾಗಿರುವವನೆಂದು ಧ್ಯಾನಿಸಬೇಕೆಂದು ಸಂದೇಶಿಸಲಾಗಿದೆ.

ಅಲ್ಲದೆ, ಮುಖದಲ್ಲೂ ಪ್ರಧಾನವಾಗಿ ನಗು ಪ್ರಸನ್ನತೆಯನ್ನು ಸಂಕೇತಿಸುವಂತಹದ್ದು ಪರಿಪೂರ್ಣವಾದ ಹಾಗೂ ಅಸಾಧಾರಣವಾದ ಸುಖದಿಂದಾಗಿ ಹೊರಹೊಮ್ಮಿರುವ ಭಗವಂತನ

---

೧ 1 ಪ್ರಸನ್ನಶ್ಚಾಸೌ ಆತ್ಮಾ ಚ ಪ್ರಸನ್ನಾತ್ಮಾ ।

೨ 2 ಪ್ರಸನ್ನಃ ಆತ್ಮಾ ಮನಃ ಯಸ್ಯ ಸಃ ಪ್ರಸನ್ನಾತ್ಮಾ ।

-ಸ. ಸಂ.

3 ಶುಕ್ಲಾಂಬರಧರಂ ವಿಷ್ಣುಂ ..ಪ್ರಸನ್ನವದನಂ ಧ್ಯಾಯೇತ್... ।

ಮಂದಹಾಸ[1] ಅವನ ನಿತ್ಯಪ್ರಸನ್ನತೆಯನ್ನು ಸಾರುತ್ತಿದೆ. ಪ್ರಸನ್ನತೆಯನ್ನು ಜ್ಞಾಪಿಸುವ ಮುಖದ ಮತ್ತೊಂದು ಅಂಗ ಕಣ್ಣು. ಕಮಲದಂತೆ ಪೂರ್ಣವಾಗಿ ಅರಳಿದ ಭಗವಂತನ ಕಣ್ಣು[2] ಅವನ ಪ್ರಸನ್ನತೆಗೆ ಜ್ಞಾಪಕ

ಹೀಗೆ ಭಗವಂತನು ನಿತ್ಯಪ್ರಸನ್ನನಾಗಿರುವನೆಂಬುದನ್ನು ಅವನ ಮುಖ, ಮುಖದಲ್ಲಿಯ ಮುಗುಳ್ನಗೆ, ಅರಳಿರುವ ಕಣ್ಣು—ಸೂಚಿಸುತ್ತಿವೆ

೩ ಪ್ರಸನ್ನನಾಗಿಯೇ ವಿಷಯಪದಾರ್ಥಗಳ ಸಾರಭಾಗವನ್ನು ಭೋಗಿಸುವವನು[3]

ಭಗವಂತನು ಪೂರ್ಣಾನಂದನಾಗಿದ್ದು ನಿತ್ಯಪ್ರಸನ್ನನು ಆದರೂ ಜೀವಾತ್ಮರ ಇಂದ್ರಿಯಗಳಲ್ಲಿದ್ದುಕೊಂಡು ಶುಭಭೋಗಗಳನ್ನು ಲೀಲೆಯಿಂದ ಭೋಗಿಸುವನು.[4]

೪ ಜೀವಾತ್ಮರು ಪ್ರಸನ್ನರಾಗುವಂತೆ ಅನುಗ್ರಹಿಸುವವನು.[5]

ಜೀವಾತ್ಮರು ಪೂರ್ಣವಾಗಿ ಪ್ರಸನ್ನರಾಗುವುದು ಮುಕ್ತರಾದಾಗಲೇ ಆದ್ದರಿಂದ ಅವರಿಗೆ ಮುಕ್ತಿಯನ್ನು ಅನುಗ್ರಹಿಸುವ ಭಗವಂತನೇ ಅವರ ಪ್ರಸನ್ನತೆಗೆ ಕಾರಣವೆನಿಸುವನು ಸಂಸಾರ ದೆಶೆಯಲ್ಲೂ ಜ್ಞಾನಿಗಳು ಇಂದ್ರಿಯನಿಗ್ರಹ ಮೂಲಕ ಪಡೆಕೊಳ್ಳುವ ಮನಃ ಪ್ರಸಾದಕ್ಕೆ ಇಂದ್ರಿಯನಿಗ್ರಹಾದಿಗಳನ್ನು ಅನುಗ್ರಹಿಸುವ ಭಗವಂತನೇ ಮುಖ್ಯ ನಿಮಿತ್ತನು

---

1 ಪೂರ್ಣಾನನ್ಯಸುಖೋದ್ಭಾಸಿ ಮಂದಸ್ಮಿತಮಧೀಶಿತುಃ ।
ಗೋವಿಂದಸ್ಯ ಸದಾ ಚಿಂತ್ಯಂ ।
-ದ್ವಾ. ಸ್ತೋ. 2-9

2 ' ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ'
-ಮ. ಭಾರ. ತಾ ನಿ 2-1

೩ 3 ಪ್ರಸನ್ನಃ ಸನ್ನಪಿ ವಿಷಯಾಣಾಂ ಸಾರಭಾಗಂ ಅತ್ತೀತಿ ಪ್ರಸನ್ನಾತ್ಮಾ ।

4 ಭುಂಕ್ತೇ ಹರಿಃ ಶುಭಾನ್ ಭೋಗಾನಿಂದ್ರಿಯೇಷು ವ್ಯವಸ್ಥಿತಃ ।
ಪೂರ್ಣಾನಂದೋಽಪಿ ಭಗವಾನ್ ಕ್ರೀಡಯಾ ಭುಂಕ್ತ ಏವ ತು ।
–ನಾರಾಯಣ ಶ್ರುತಿ (ಗೀ. ತಾ. 15-9)

೪ 5 ಪ್ರಸನ್ನಾಃ ಆತ್ಮಾನಃ ಜೀವಾತ್ಮಾನಃ ಯಸ್ಮಾತ್ಸಃ ಪ್ರಸನ್ನಾತ್ಮಾ ।

೫ ಚಿತ್ತಪ್ರಸಾದವನ್ನು ಪಡೆದಿರುವ ಜ್ಞಾನಿಗಳಿಗೆ ಅಥವಾ ಸುಖಪೂರ್ಣರಾಗಿರುವ ಪ್ರಯುಕ್ತ ನಿತ್ಯಪ್ರಸನ್ನರಾಗಿರುವ ಮುಕ್ತರಿಗೆ ವಿಶೇಷವಾಗಿ ಸ್ವಾಮಿ ಆಗಿರುವವನು[1]

೬ ಪ್ರಕೃಷ್ಟನಾಗಿರುವವನು ಸ್ವರೂಪತಃ ನಿತ್ಯರಾದ ಜೀವಾತ್ಮರು ದೇಹವಿಯೋಗ ರೂಪವಾದ ನಾಶಕ್ಕೊಳಗಾಗುವಂತೆ ಮಾಡುವವನು[2]

೭ ದಯಾರ್ದ್ರವಾದ ಸ್ವಭಾವ ಉಳ್ಳವನು.[3]

೮ ಚನ್ನಾಗಿ ದುಃಖಗ್ರಸ್ತರಾದ ಜೀವಾತ್ಮರನ್ನು ತನ್ನವರನ್ನಾಗಿ ಸ್ವೀಕರಿಸುವವನು[4]

೯ ಚೆನ್ನಾಗಿ ವಿಷಣ್ಣರಾದ ದೈತ್ಯರನ್ನು ಸಂಹರಿಸುವವನು.[5]

೧೦ ಎಲ್ಲೆಡೆ ಇರುವ ಸ್ವರೂಪ ಉಳ್ಳವನು[6]

---

೫ 1 ಪ್ರಸನ್ನಾನಾಂ ಪ್ರಾಪ್ತಚಿತ್ತಪ್ರಸಾದಾನಾಂ ಜ್ಞಾನಿನಾಂ ನಿತ್ಯಪ್ರಸನ್ನಾನಾಂ ಮುಕ್ತಾನಾಂ ವಾ ಆತ್ಮಾ ವಿಶೇಷತಃ ಸ್ವಾಮೀ ।

೬ 2 ಪ್ರಕೃಷ್ಟತ್ವಾತ್ ಪ್ರ । ಸನ್ನಾಃ ದೇಹವಿಯೋಗರೂಪನಾಶೋಪೇತಾಃ ಆತ್ಮಾನಃ ಜೀವಾಃ ಯಸ್ಮಾತ್ಸಃ ಸನ್ನಾತ್ಮಾ ।

೭ 3 ಪ್ರಸನ್ನಃ ದಯಾರ್ದ್ರಃ ಆತ್ಮಾ ಸ್ವಭಾವೋಽಸ್ಯೇತಿ ಪ್ರಸನ್ನಾತ್ಮಾ ।

-ಶಾಂ ಭಾ. ಆಧಾರೇಣ

೮ 4 ಪ್ರಕರ್ಷೇಣ ಸನ್ನಾಃ ಪ್ರಸನ್ನಾಃ ವಿಷಣ್ಣಾಃ ಜೀವಾಸ್ತಾನ್ ಆದತ್ತೇ ಸ್ವೀಯತಯಾ ಸ್ವೀಕರೋತೀತಿ ಪ್ರಸನ್ನಾತ್ಮಾ ।

೯ 5 ಪ್ರಕರ್ಷೇಣ ಸನ್ನಾಃ ವಿಷಣ್ಣಾಃ ದೈತ್ಯಾಸ್ತಾನತ್ತಿ ಸಂಹರತೀತಿ ಪ್ರಸನ್ನಾತ್ಮಾ ।

೧೦ 6 ಪ್ರಕರ್ಷೇಣ ಸನ್ನಃ ಗತಃ ಸರ್ವತ್ರ ವ್ಯಾಪ್ತಃ ಆತ್ಮಾ ಸ್ವರೂಪಂ ಯಸ್ಯ ಸಃ। ಗತ್ಯರ್ಥಕಾತ್ ಸದಲ್ ಧಾತೋಃ ನಿಷ್ಪನ್ನಃ ಶಬ್ದಃ ಸನ್ನ ಇತಿ ।

೧೧ ಎಲ್ಲೆಡೆ ಇರುವ ದೇಹ ಉಳ್ಳವನು[1]

ಭಗವಂತನು ಸ್ವರೂಪತಃ ವ್ಯಾಪ್ತನಾಗಿರುವಂತೆ, ಸ್ವರೂಪಾತ್ಮಕವಾದ ದೇಹದಿಂದಲೂ ವ್ಯಾಪ್ತನು.

'ಹೇ ವಿಷ್ಣೋ! ನೀನು ನಿನ್ನ ಶರೀರದಿಂದಲೂ ವ್ಯಾಪ್ತನಾಗಿರುವವನು'—ಎಂಬುದಾಗಿ ಋಗ್ವೇದವು ಭಗವಂತನನ್ನು ಸ್ತುತಿಸಿದೆ[2]

ಜಿಜ್ಞಾಸೆ

[ಪ್ರಸನ್ನರಾಗಿಯೇ ಇರಬೇಕು]

ಪ್ರ- ಪ್ರಸನ್ನಾತ್ಮಾ ಎಂಬ ಪರಮಾತ್ಮನ ನಾಮದಿಂದ ನಾವು ಏನಾದರೂ ತಿಳಿಯ ತಕ್ಕದ್ದು ಇರಬಹುದು, ಅದು ಯಾವುದು?

ಉ- ಪರಮಾತ್ಮನನ್ನು ಬಹು ನಾಸ್ತಿಕರು ನಿಂದಿಸುತ್ತಾರೆ ಆದರೆ ಅವನಿಗೆ ಸಿಟ್ಟು ಉಂಟಾಗುವ ದಿಲ್ಲ ಅವನು ಆನಂದಪೂರ್ಣನಾಗಿ ಪ್ರಸನ್ನನಾಗಿಯೇ ಇರುತ್ತಾನೆ ಇದನ್ನು ತಿಳಿದು ನಾವು ನಮ್ಮನ್ನು ಯಾರು ಬೇಕಾದರೂ ನಿಂದಿಸಲಿ ನಾವು ಕೂಡಾ ಪ್ರಸನ್ನರಾಗಿಯೇ ಇರಬೇಕು. ನಾವು ಸಿಟ್ಟು ಹೊಂದಬಾರದು ಆನಂದಪೂರ್ಣನಾದ ಬ್ರಹ್ಮನ ಧ್ಯಾನದಿಂದ ನಾವು ಪ್ರಸನ್ನರಾಗಿ ಇರಲು ಸಾಧ್ಯತೆ ಇದೆ ನಮ್ಮಲ್ಲಿ ದೋಷಾರೋಪವನ್ನು ಯಾರಾದರೂ ಮಾಡಿದಾಗ ಸಮಾಧಾನದಿಂದ ಆ ದೋಷಗಳು ತನ್ನಲ್ಲಿ ನಿಜವಾಗಿ ಇಲ್ಲವಾದರೆ ಆ ದೋಷ ಗಳು ತನ್ನಲ್ಲಿ ಇಲ್ಲ ಎಂದು ಸಮಾಧಾನದಿಂದ ನಿಂದಕನನ್ನು ಕುರಿತು ತಿಳಿಸಬೇಕು. ಹೊರತು ಅವನನ್ನು ಪ್ರತಿ ನಿಂದಿಸಬಾರದು. ಇದು ನಮ್ಮನ್ನು ಯಾರಾದರೂ ನಿಂದಿಸಿದರೆ ಮಾತ್ರ. ದೇವರನ್ನು ಮತ್ತು ದೊಡ್ಡವರನ್ನು ಯಾರಾದರೂ ವೃಥಾ ನಿಂದಿಸಿದರೆ ಅದಕ್ಕೆ ಪ್ರತಿ ಯಾಗಿ ಅವನನ್ನು ನಿಂದಿಸುವದು ವಿಹಿತವೇ ಆಗಿರುತ್ತದೆ. 'ನಿಂದಾ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ। ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ। ಎಂದು ಭಾಗ ವತದಲ್ಲಿ ವಿಧಿಯೂ ಇದೆ. ಆದುದರಿಂದ ಪರಮಾತ್ಮನು ತನ್ನನ್ನು ನಿಂದಿಸಿದವನು ತನ್ನ

---

೧೧ 1 ಪ್ರಸನ್ನಃ ಸರ್ವತ್ರ ಗತಃ ಆತ್ಮಾ ದೇಹಃ ಯಸ್ಯ ಸಃ ।

2 'ಪರೋ ಮಾತ್ರಯಾ ತನ್ವಾ ವೃಧಾನ. '

-ಋ. ವೇ. 7-99-12

'ಹೇ ವಿಷ್ಣೋ ಸ್ವಮೂರ್ತ್ಯಾಪರಿಚ್ಛಿನ್ನ ತ್ವಂ ವಿಂತೇಃ ಪರೋಽಸಿ ..'

-ತ. ಪ್ರ. (ಬ್ರ. ಸೂ ಭಾ. ಟೀ. 1-1-2)

ಭಕ್ತನ ದ್ರೋಹವನ್ನು ಮಾಡಿದರೆ ಮಾತ್ರ ಅವನನ್ನು ಶಿಕ್ಷಿಸುತ್ತಾನೆ. ಕೇವಲ ತನ್ನ ನಿಂದೆಯನ್ನು ಮಾಡಿದವನು ಎಂಬ ಕಾರಣದಿಂದ ನಿಂದಕನಿಗೆ ಶಿಕ್ಷೆಯನ್ನು ವಿಧಿಸಿದ್ದು ಎಲ್ಲಿಯೂ ಕಂಡು ಬರುವದಿಲ್ಲ



## ೨೩೮ ವಿಶ್ವಧೃಕ್

೧ ವಿಶ್ವದಲ್ಲಿ ತಲೆ ಎತ್ತಿ ನಿಲ್ಲುವವನು—ನಿರ್ಭೀತನಾಗಿ ಇರುವವನು[1]

ಸಮಗ್ರ ವಿಶ್ವದಲ್ಲಿ ಯಾವುದೇ ದೇಶದಲ್ಲಿ ಕಾಲದಲ್ಲಿ ಯಾರಿಗೂ ಭಯಪಡದೆ, ತಲೆ ಎತ್ತಿ ನಿಲ್ಲಬಲ್ಲ ಯಾರಾದರೂ ಇದ್ದರೆ ಅದು ಸ್ವತಂತ್ರನಾದ ಸರ್ವಸಮರ್ಥನಾದ ಭಗವಂತನೊಬ್ಬನೇ ಈ ರೀತಿಯಾದ ಧಾರ್ಷ್ಟ್ಯಗುಣವನ್ನು ಭಗವಂತನ ಅಸಾಧಾರಣ ಗುಣವಾಗಿ ಧರಣೀದೇವಿ ಉಲ್ಲೇಖಿಸಿರುವಳು[2]. ಉಳಿದೆಲ್ಲರೂ ಅವನಿಂದ ಭಯಪಡುತ್ತಿದ್ದರೆ, ಅವನು ಮಾತ್ರ ಯಾರಿಂದಲೂ ಭಯಪಡುತ್ತಿಲ್ಲ—ಎಂದು ಈಶಾವಾಸ್ಯೋಪನಿಷತ್ತು ಸಂದೇಶಿಸಿದೆ[3] ಕರ್ಮಯೋಗಿಗಳೂ ಜ್ಞಾನಯೋಗಿಗಳೂ ಭಗವಂತನನ್ನು ಅರ್ಚಿಸಬೇಕೆಂದು ವಿಧಿಸಲು ಹೊರಟ ಋಗ್ವೇದ—ಪ್ರತಿಮೆಯಲ್ಲಿರುವ ನಿರ್ಭೀತವಾದ ತತ್ತ್ವವನ್ನು ಅರ್ಚಿಸಬೇಕೇ ಹೊರತು ಬರೀ ಪ್ರತಿಮೆಯನ್ನಾಗಲೀ ಪ್ರತಿಮೆಯ ಅವಾಂತರ ಅಭಿಮಾನಿಯನ್ನಾಗಲೀ ಅರ್ಚಿಸಬಾರದೆಂಬುದಾಗಿ ಸಂದೇಶಿಸುತ್ತ[4], ಭಗವಂತ

---

೧ 1 ವಿಶ್ವಸ್ಮಿನ್ ಧೃಷ್ಣೋತಿ ನಿರ್ಭೀತೋ ಭವತೀತಿ ವಿಶ್ವಧೃಕ್ ।

2 ಪ್ರಾಗಲ್ಭ್ಯಂ ಪ್ರಶ್ರಯಃ ಶೀಲಂ ನಿತ್ಯ ಯತ್ರ ಮಹಾಗುಣಾಃ ।
-ಭಾಗ. 1-16 28

ಪ್ರಾಗಲ್ಭ್ಯಂ ಧಾರ್ಷ್ಟ್ಯಂ—ಇತಿ ಪ್ರಾಚೀನವಚ್ ।

3 ತದೇಜತಿ ತನ್ನೈಜತಿ ।
-ಈ. ಉ. 1-5

ತತೋ ಬಿಭೇತಿ ಸರ್ವೋಽಪಿ ನ ಬಿಭೇತಿ ಹರಿಃ ಸ್ವಯಮ್ ।
-ತತ್ತ್ವಸಂಹಿತಾ (ಈ ಉ. ಭಾ.)

4 'ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ ।
ಅರ್ಚಂತು ಪುತ್ರಕಾ ಉತಪುರನ್ನ ಧೃಷ್ಣ್ವರ್ಚತ'
ಧೃಷ್ಣು ಧೃಷ್ಟಂ ಪರಂ ಬ್ರಹ್ಮ ವಾಸುದೇವಾಖ್ಯಮ್ ।
-ಕ. ನಿ.

ನನ್ನು 'ನಿರ್ಭೀತ ತತ್ತ್ವ'—ಎಂದು ಉಲ್ಲೇಖಿಸುವುದರ ಮೂಲಕ ಅವನು ಪೂಜಾರ್ಹನೆನಿಸಲು ಹೊಂದಿರುವ ಪ್ರಧಾನವಾದ ವ್ಯಕ್ತಿತ್ವವನ್ನು ಎತ್ತಿ ತೋರಿಸಿದೆ

೨ ಪೂರ್ಣನಾಗಿ ಇರುವವನು ಮತ್ತು ನಿರ್ಭೀತನಾಗಿ ಇರುವವನು[1]

ಉಳಿದವರೆಲ್ಲ ಅಪರಿಪೂರ್ಣರಾಗಿರುವುದರಿಂದಲೇ ಪರಿಪೂರ್ಣತತ್ತ್ವದ ದೆಸೆಯಿಂದ ಭಯ ಪಡಬೇಕಾದ ಪರಿಸ್ಥಿತಿಗೊಳಗಾಗಿರುವರು ಭಗವಂತನಾದರೂ ಸಕಲಗುಣ ಪರಿಪೂರ್ಣನಾಗಿರುವವನು ಆದ್ದರಿಂದಲೇ ನಿರ್ಭೀತನಾಗಿ ಇರುವನು

೩ (ಎಲ್ಲದರೊಳಗೂ ಅಂತರ್ಯಾಮಿಯಾಗಿ) ಪ್ರವೇಶಿಸಿರುವವನು ಮತ್ತು ನಿರ್ಭೀತನಾಗಿ ಇರುವವನು[2]

ಉಳಿದ ಯಾರೇ ಯಾವುದೇ ಪ್ರವೃತ್ತಿ ನಡೆಸಬೇಕೆಂದರೂ ಅವರ ಅಂತರ್ಯಾಮಿಯಾಗಿರುವ ಭಗವಂತನ ಪ್ರೇರಣೆಗೊಳಗಾಗಲೇ ಬೇಕು ಹೀಗೆ ಎಲ್ಲರೊಳಗೆ ಅಂತರ್ಯಾಮಿಯಾಗಿ ಪ್ರವೇಶಿಸಿ ಅವರನ್ನು ಪ್ರೇರಿಸುತ್ತಿರುವ ಭಗವಂತನು ಯಾರ ಪ್ರವೃತ್ತಿಗಾದರೂ ಹೇಗೆ ತಾನೇ ಭಯಪಟ್ಟಾನು!

೪ ಸಮಗ್ರ ವಿಶ್ವವನ್ನೂ ಪರಾಭವಗೊಳಿಸಲು ಸಮರ್ಥನಾಗಿರುವವನು[3]

---

ಹೇ ಪ್ರಿಯಮೇಧಾಸಃ ಪ್ರಿಯಯಜ್ಞಾ ಧೃಷ್ಣು ಧೃಷ್ಟಮ್, 'ಞಿ ಧೃಷಾ ಪ್ರಾಗಲ್ಭ್ಯೇ' ನಿರ್ಭಯಂ ಬ್ರಹ್ಮ ಅರ್ಚತ

—ರಾ ಟೀ.

೨ 1 ವಿಶಂತಿ ಸರ್ವೇ ಗುಣಾ ಅಸ್ಮಿನ್ನಿತಿ ವಿಶ್ವಃ ಪೂರ್ಣಃ । ಧೃಷ್ಣೋತೀತಿ ಧೃಕ್ । ವಿಶ್ವಶ್ಚಾಸೌ ಧೃಕ್ ಚ ವಿಶ್ವಧೃಕ್ ।

೩ 2 ವಿಶತಿ ಅಂತರ್ಯಾಮಿತಯಾ ಸರ್ವಂ ಪ್ರವಿಶತೀತಿ ವಿಶ್ವಃ ಧೃಷ್ಣೋತಿ ನಿರ್ಭೀತೋ ಭವತೀತಿ ಧೃಕ್ ವಿಶ್ವಶ್ಚಾಸೌ ಧೃಕ್ ಚ ।

೪ 3 ವಿಶ್ವಂ ಧೃಷ್ಣೋತಿ ಪ್ರಗಲ್ಭತೇ ಜ್ಞಾನೈಶ್ವರ್ಯಾದಿಭಿರ್ಗುಣೈಃ ಅಭಿಭವಿತುಂ ಸಮರ್ಥೋ ಭವತೀತಿ ವಿಶ್ವಧೃಕ್ । 'ಞಿ ಧೃಷಾ ಪ್ರಾಗಲ್ಭ್ಯೇ' । ಪ್ರಾಗಲ್ಭ್ಯಂ ಪರಾಭಿಭವಸಾಮರ್ಥ್ಯಮ್ ।

—ಶಾಂ. ಭಾ. ವಿವೃತಿಃ

ಭಗವಂತನು ತನ್ನ ಸಾಮರ್ಥ್ಯದಿಂದ ಸಮಗ್ರ ವಿಶ್ವವನ್ನೇ ಅತಿಕ್ರಮಿಸುವನೆಂದು ಸಂಜಯನು ಭಗವಂತನ ಸಾಮರ್ಥ್ಯಾತಿಶಯವನ್ನು ಪರಿಚಯಿಸಿಕೊಟ್ಟಿರುವನು[1] ಅನಂತಗುಣ ಪರಿಪೂರ್ಣನಾದ ಭಗವಂತನ, ಒಂದೊಂದು ಗುಣವೂ ನಿರವಧಿಕ[2] ಎಂದ ಮೇಲೆ, ಯಾರೇ ಆಗಲಿ ಯಾವುದೇ ಗುಣವನ್ನು ಅವನು ಹೊಂದಿರುವಷ್ಟು ಪ್ರಮಾಣದಲ್ಲಿ ಹೊಂದಲಾರರು ಆದ್ದರಿಂದ ಭಗವಂತನು ಪ್ರತಿಯೊಂದು ಗುಣದ ವಿಷಯದಲ್ಲೂ ಸಮಗ್ರ ವಿಶ್ವವನ್ನೇ ಪರಾಜಯಿಸಬಲ್ಲನು.

೫ (ತಮ್ಮ ತಮ್ಮ ಯೋಗ್ಯತಾನುಸಾರ) ಪೂರ್ಣರಾದ ಮುಕ್ತಾತ್ಮರು ನಿರ್ಭೀತರಾಗಿ ಇರುವಂತೆ ಅನುಗ್ರಹಿಸುವವನು[3]

ಜೀವಾತ್ಮರು ಮುಕ್ತರಾಗುವವರೆಗೆ ಭಗವಂತನಿಂದ ಭಯಪಡುತ್ತಲೇ ಇರುವರು ನಿರ್ಭಯನಾದ ಭಗವಂತನನ್ನು ಹೊಂದಿದರೆಂದರೆ ಬಳಿಕ ನಿರ್ಭೀತರಾಗುವರು[4] ಅವರು ಹೀಗೆ ನಿರ್ಭೀತರಾಗುವಂತೆ ಭಗವಂತನೇ ಅನುಗ್ರಹಿಸುವನು

೬ ಜೀವ ಸಮೂಹದಲ್ಲೇ ಪೂರ್ಣರಾಗಿರುವ ವಾಯುದೇವರು ನಿರ್ಭೀತರಾಗಿ ಇರುವಂತೆ ಅನುಗ್ರಹಿಸುವವನು[5]

---

1 ಏಕತೋ ವಾ ಜಗತ್ಕೃತ್ಸ್ನಮೇಕತೋ ವಾ ಜನಾರ್ದನಮ್ ।
ಸಾರತೋ ಜಗತಃ ಕೃತ್ಸ್ನಾದತಿರಿಕ್ತೋ ಜನಾರ್ದನಃ ।
—ಮ. ಭಾರ. ಉದ್ಯೋಗ 68–7

2 'ಪ್ರತ್ಯೇಕಶೋ ಗುಣಾನಾಂ ತು ನಿಸ್ಸೀಮತ್ವಮುದೀರ್ಯತೇ । ಅನಂತತ್ವಂ ತು ಗುಣತಸ್ತೇ ಚಾನಂತಾ ಹಿ ಸಂಖ್ಯಯಾ । ಅತೋಽನಂತಗುಣೋ ವಿಷ್ಣುರ್ಗುಣತೋಽನಂತ ಏವ ಚ'
-ತಂತ್ರಭಾಗವತ (ಭಾಗ ತಾ. ನಿ. 6 4-48)

೫ 3 ವಿಶ್ವಾಃ ಸ್ವಸ್ವಯೋಗ್ಯತಾನುಸಾರೇಣ ಪೂರ್ಣಾಃ ಮುಕ್ತಾತ್ಮಾನಃ ಧೃಷಃ ನಿರ್ಭೀತಾಃ ಯಸ್ಮಾತ್ ಸಃ ವಿಶ್ವಧೃಕ್ ।

4 'ತದೇವ ಬ್ರಹ್ಮ ಭಯಕೃದ್ ವಿದುಷೋಽವಿದುಷಸ್ತತಃ । ವಿದುಷೋಽಲ್ಪಭಯಂ ಕುರ್ಯಾದ್ ಯಾವನ್ಮುಕ್ತಿಂ ವ್ರಜತ್ಯಸೌ । ಅಥಾಭಯಂ ಭವೇದ್ ಬ್ರಹ್ಮ ತಸ್ಯ ಮುಕ್ತಸ್ಯ ಸರ್ವದಾ .. । ಜ್ಞಾತ್ವಾ ಮುಕ್ತಸ್ಯ ಭೀರ್ನೈವ ಕುತಶ್ಚನ ಭವಿಷ್ಯತಿ'
—ಯಜುಃ ಸಂಹಿತಾ (ತೈ. ಉ. 2-12)

೬ 5 ವಿಶ್ವಃ ವಾಯುಃ ಧೃಕ್ ನಿರ್ಭೀತಃ ಯಸ್ಮಾತ್ಸಃ 'ವಿಶ್ವಧೃಕ್ ।

ಭಗವದನುಗ್ರಹಕ್ಕೆ ಪಾತ್ರರಾದ ವಾಯುದೇವರು ಭಗವಂತನನ್ನು ಬಿಟ್ಟು ಉಳಿದ ಯಾರಿಂದಲೂ ಭಯಪಡದೆ ಇರುವರು ತಮ್ಮ ಭೀಮಸೇನಾವತಾರದಲ್ಲಿ ಈ ಗುಣವನ್ನು ವಿಶೇಷವಾಗಿ ಪ್ರಕಟಿಸಿರುವರು ಭೀಮಸೇನನು ನಾರಾಯಣಾಸ್ತ್ರಕ್ಕೂ ತಲೆ ಬಾಗದೆ ನಿರ್ಭೀತನಾಗಿ ನಡೆದುಕೊಂಡಿದ್ದನು.

೭ ವಿಶ್ವದಲ್ಲಿ (ಎಲ್ಲೆಡೆ) ಚಲಿಸುತ್ತಿರುವವನು.[1]

೮ ಸಮಗ್ರ ವಿಶ್ವವನ್ನು ಬಲ್ಲವನು[2]

೯ ವಿಶ್ವವನ್ನು ಧರಿಸಿರುವವನು.[3]

೧೦ ವಿಶ್ವವನ್ನು ಸೃಷ್ಟಿಸಿರುವವನು.[4]

## ಜಿಜ್ಞಾಸೆ

### [ಪ್ರತಿಮಾ ಪೂಜೆ]

ಪ್ರ - ವಿಗ್ರಹದಲ್ಲಿ ಪರಮಾತ್ಮನ ಪೂಜೆ ಮಾಡುವದನ್ನು ಕೆಲವರು ನಿಂದಿಸುತ್ತಾರೆ ಪುರಾಣಗಳಲ್ಲಿ ಪ್ರತಿಮಾ ಪೂಜೆಯ ವಿಷಯವು ಹೇಳಲ್ಪಟ್ಟರೂ ವೇದಗಳಲ್ಲಿ ಎಲ್ಲಿಯೂ ಅದು ಹೇಳಲ್ಪಟ್ಟಿಲ್ಲ ಎಂದು ಕೆಲವರ ಆಕ್ಷೇಪ ಇದು ಯುಕ್ತವೋ?

ಉ - ಋಗ್ವೇದದಲ್ಲಿ 'ಅರ್ಚತ ಪ್ರಾರ್ಚತ' ಎಂದು ಪ್ರತಿಮೆಯಲ್ಲಿ ಪರಮಾತ್ಮನ ಪೂಜೆಗೆ ವಿಧಿಯು ಇದೆ ಆದುದರಿಂದ ಪ್ರತಿಮೆಯಲ್ಲಿ ಪರಮಾತ್ಮನ ಪೂಜೆಯನ್ನು ಮಾಡುವದು ನಿಂದ್ಯವಲ್ಲ.

---

೭ 1 ವಿಶ್ವಸ್ಮಿನ್ ಧರ್ಜತಿ ಗಚ್ಛತೀತಿ ವಿಶ್ವಧೃಕ್ । 'ಧೃಜ ಗತೌ' ।

೮ 2 ವಿಶ್ವಂ ಧರ್ಜತಿ ಜಾನಾತೀತಿ ವಿಶ್ವಧೃಕ್ । 'ಧೃಜ ಗತೌ' ।

೯ 3 ವಿಶ್ವಂ ಧರತೀತಿ ವಿಶ್ವಧೃತ್ ವಿಶ್ವಧೃದೇವ ವಿಶ್ವಧೃಕ್ । ತಕಾರಸ್ಥಾನೇ ಕಕಾರಃ ಆರ್ಷಃ । 'ಮಹಾದ್ರಿಧೃಕ್' (೧೮೪) ಇತಿ ನಾಮ್ನಃ ಇವ । ಯಥಾ ವಾ ಭಾಗವತೇ (2-10-42) '. ಧರ್ಮರೂಪಧೃಕ್' ಇತ್ಯತ್ರ ।

೧೦ 4 . ...ವಿಶ್ವಂ ಸೃಜತೀತಿ ವಿಶ್ವಸೃಟ್ ।
-ಷ. ಭ.

ವಿಶ್ವಸೃಡಿತಿ ಪಾಠಭೇದಮಾದೃತ್ಯೇತ್ಥಂ ವ್ಯಾಖ್ಯಾತಮ್ ।

ಪ್ರ - ಶ್ರೀಮದಾಚಾರ್ಯರು 'ಪ್ರತಿಮಾಸ್ವಪ್ರಬುದ್ಧಾನಾಂ' ಪ್ರತಿಮೆಗಳಲ್ಲಿ ಪರಮಾತ್ಮನ ಪೂಜೆಯನ್ನು ಮಾಡತಕ್ಕವರು ಅಪ್ರಬುದ್ಧರು (ಅಜ್ಞಾನಿಗಳು) ಎಂದು ಹೇಳಿರುತ್ತಾರೆಯಲ್ಲವೇ?

ಉ - ಶ್ರೀಮದಾಚಾರ್ಯರೆಂಬ ಮಹಾ ಜ್ಞಾನಿಗಳೂ ಕೂಡ ಉಡುಪಿ ಮಂಥಪಾಶಧರ ಶ್ರೀಕೃಷ್ಣ-ವಿಗ್ರಹದಲ್ಲಿ ಪರಮಾತ್ಮನ ಪೂಜೆ ಮಾಡಿದ್ದಾರೆ. ಅಪರೋಕ್ಷ ವ್ಯಾಪ್ತದರ್ಶಿಗಳೂ ಕೂಡ ಮಾಡಬೇಕಾದ ಪ್ರತಿಮಾ ಪೂಜೆಯು ನಿಂದ್ಯವಲ್ಲ 'ಪ್ರತಿಮಾಸ್ವಪ್ರಬುದ್ಧಾನಾಂ' ಅಂದರೆ ಅಪ್ರಬುದ್ಧರಾದವರು ಪ್ರತಿಮೆಯ ಪೂಜೆಯನ್ನು ಮಾಡಲೇಬೇಕು ಜ್ಞಾನಿಗಳು ಪ್ರತಿಮೆಯಲ್ಲಿ ಪೂಜೆಯನ್ನು ಮಾಡಿದರೂ, ಮಾಡದೆ ಇದ್ದರೂ ಅವರಿಗೆ ಮುಕ್ತಿಯು ನಿಯತ ಎಂದು ಅಭಿಪ್ರಾಯ



## ೨೪೯ ವಿಶ್ವಭುಕ್

೧ ಸಮಸ್ತವನ್ನೂ ಭೋಗಿಸುವವನು[1]

ಚರಾಚರವನ್ನೊಳಗೊಂಡ ಸಮಸ್ತವನ್ನೂ ಪ್ರಲಯಕಾಲದಲ್ಲಿ ಭೋಗಿಸುವವನು ಭಗವಂತನೇ ಎಂಬುದಾಗಿ ಬ್ರಹ್ಮಸೂತ್ರವೊಂದರಲ್ಲಿ ಸೂಚಿಸಲಾಗಿದೆ[2] ಯಾವ ಭಗವಂತನು ನಿಖಿಲ ಪ್ರಪಂಚವನ್ನೂ ಸೃಷ್ಟಿಸಿರುವನೋ, ರಕ್ಷಿಸಿರುವನೋ, ಅವನೇ ಪ್ರಲಯ ಕಾಲದಲ್ಲಿ ಅದನ್ನು ಭೋಗಿಸುವನೆಂದು ಸ್ಕಾಂದ ಸಂದೇಶಿಸಿದೆ[3]. ಅಂತೆಯೇ ತೈತ್ತಿರೀಯ ಶ್ರುತಿಯೂ ಈ ಜಗತ್ತನ್ನು ಸೃಷ್ಟಿಕಾಲದಲ್ಲಿ ಸೃಷ್ಟಿಸಿದ, ಸ್ಥಿತಿಕಾಲದಲ್ಲಿ ರಕ್ಷಿಸಿದ ಭಗವಂತನೊಳಗೆ ಪ್ರಲಯಕಾಲದಲ್ಲಿ ಭುವನವು ಪ್ರವೇಶಿಸುವುದೆಂದು ಬೋಧಿಸಿದೆ.[4] 'ಮೃತ್ಯುನಾಮಕ ಭಗವಂತನು ಬ್ರಹ್ಮಾಂಡವನ್ನು ಸೃಷ್ಟಿಸಿ, ಅಂತಹ

---

೧ 1 ವಿಶ್ವಂ ಭುಂಕ್ತೇ ಇತಿ ವಿಶ್ವಭುಕ್ ।

2 ಅತ್ತಾ ಚರಾಚರಗ್ರಹಣಾತ್ ।

-ಬ್ರ ಸೂ 1-2-9

3 'ಸ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈಕ ಏವ ತು। ವಾಸುದೇವಃ ಪರಃ ಪುಂಸಾಮಿತರೋಽಲ್ಪಸ್ಯ ವಾ ನ ವಾ' -ಸ್ಕಾಂದ (ಬ್ರ. ಸೂ. ಭಾ. 1-2-9)

4 'ಏಕ ಪುರಸ್ತಾದ್ ಯ ಇದಂ ಬಭೂವ ಯತೋ ಬಭೂವ ಭುವನಸ್ಯ ಗೋಪಾಃ । ಯಮಪ್ಯೇತಿ ಭುವನಂ ಸಾಂಪರಾಯೇ .'

-ಬ್ರ. ಸೂ. ಭಾ. 1-2-9

ಬ್ರಹ್ಮಾಂಡದಲ್ಲಿ ಸಂವತ್ಸರನಾಮಕ ಚತುರ್ಮುಖನನ್ನು ಸೃಷ್ಟಿಸಿದನು ಅವನನ್ನು ನುಂಗಲು ಮೃತ್ಯುನಾಮಕ ಭಗವಂತನು ಬಾಯಿ ತೆರೆಯಲು ಅವನು 'ಭಾಣ್' ಎಂದು ಕೂಗುವನು. ಅವನ ಮೇಲೆ ಕರುಣೆಯಿಂದ ಭಗವಂತನು ಅವನನ್ನು ಸೃಷ್ಟಿಕರ್ಮದಲ್ಲಿ ನಿಯೋಜಿಸಿದನು ಅವನು ಭಗವಂತನ ಭಕ್ಷಣೆಗಾಗಿಯೇ ಸರ್ವ ಭುವನಗಳನ್ನೂ ಸೃಷ್ಟಿಸಿದನು'— ಎಂಬುದಾಗಿ ಬ್ರಹ್ಮವೈವರ್ತವು[1] ಪ್ರಲಯಕಾಲದಲ್ಲಿ ಭಗವಂತನ ಭೋಗಕ್ಕಾಗಿಯೇ ಸೃಷ್ಟಿಕಾಲದಲ್ಲಿ ಚತುರ್ಮುಖನ ಮೂಲಕ ಈ ಸೃಷ್ಟಿ ವಿಸ್ತಾರ ನಡೆದಿದೆ ಎಂದು ಅಭಿಪ್ರಾಯಪಟ್ಟಿದೆ

ಹೀಗೆ ಪ್ರಲಯಕಾಲದಲ್ಲಿ ಎಲ್ಲವನ್ನೂ ಭಕ್ಷಿಸುವ ಭಗವಂತನು ಸ್ಥಿತಿಕಾಲದಲ್ಲಿ ಜೀವಾತ್ಮರು ತಮ್ಮ ಬೇರೆ ಬೇರೆ ಇಂದ್ರಿಯಗಳ ಮೂಲಕ ಭೋಗಿಸುವ ವಿಷಯ ಪದಾರ್ಥಗಳಲ್ಲೂ ಸಾರ ಭಾಗವನ್ನು ಭೋಗಿಸುವನು[2] ಭಗವಂತನು ತನ್ನ ಸ್ವರೂಪೇಂದ್ರಿಯದಿಂದಲೇ ಭೋಗಿಸಲು ಸಮರ್ಥನಾಗಿರುವನಾದರೂ ಜೀವಾತ್ಮರ ದೇಹಗಳಲ್ಲಿ ಇದ್ದುಕೊಂಡು ತನ್ನ ಇಂದ್ರಿಯಗಳಿಂದ ಪ್ರಕಾಶಿತಗಳಾದ ಜೀವಾತ್ಮರ ಇಂದ್ರಿಯಗಳಿಂದ ಭೋಗಗಳಲ್ಲಿ ಸಾರಭಾಗವನ್ನು ಅನುಭವಿಸುವನು.[3] ಭಗವಂತನು ಆತ್ಮ ಮತ್ತು ಅಂತರಾತ್ಮ ಎಂಬ ಎರಡು ರೂಪಗಳಿಂದ ಜೀವಾತ್ಮರ ಹೃದಯ

---

1 'ನೇಹಾಽಸೀತ್ ಕಿಂಚನಾಪ್ಯಾದೌ ಮೃತ್ಯುರಾಸೀದ್ಧರಿಸ್ತದಾ । ಸೋಽತ್ಮನೋ ಮನಸಾಽಸ್ರಾಕ್ಷೀದಪ ಏವ ಜನಾರ್ದನಃ । ಶಯಾನಸ್ತಾಸು ಭಗವಾನ್ ನಿರ್ಮಮೇಽಂಡಂ ಮಹತ್ತರಮ್ । ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜತ್ ಪ್ರಭುಃ । ತಮತ್ತುಂ ವ್ಯಾದದಾದಾಸ್ಯಂ ತದಾಽಸೌ ವಿರುರಾವ ಹ। ಅಥ ತತ್ಕೃಪಯಾ ವಿಷ್ಣುಃ ಸೃಷ್ಟಿಕರ್ಮಣ್ಯಯೋಜಯತ್। ಸೋಽಸೃಜದ್ ಭುವನಂ ಸರ್ವಮಾದ್ಯಾರ್ಥಂ ಹರಯೋ ವಿಭುಃ'

- ಬ್ರಹ್ಮವೈವರ್ತ (ಬ್ರ. ಸೂ. ಭಾ. 1-2-9)

2 ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥

–ಗೀತಾ. 15-9

3 ಸ ಏತೈರಿಂದ್ರಿಯೈರ್ವಿಷ್ಣುರ್ಭೋಗಾನನುಭವತ್ಯಜಃ । ಸ್ವರೂಪೇಣೈವ ಶಕ್ತೋಽಪಿ ಜೀವದೇಹಸ್ಥಿತೋ ಹರಿಃ । ಭುಂಕ್ತೇ ತದಿಂದ್ರಿಯೈರ್ಭೋಗಾಂಶ್ಚರಿತ್ರೈರಿಂದ್ರಿಯೈಃ ಸ್ವಕೈಃ । ಜೀವಂ ತದಿಂದ್ರಿಯಾಣ್ಯೇವಂ ಪ್ರಾಣಂ ಚ ವ್ಯಾಪ್ಯ ಕೃತ್ಸ್ನಶಃ । ಭುಂಕ್ತೇ ತದ್ಗುಣಾನ್ ವಿಷ್ಣುರ್ನೈವ ದೋಷಾನ್ ಕದಾಚನ ।

–ಸಾಮಸಂಹಿತಾ (ಛಾಂ. ಉ. ಭಾ. 8-4-4)

ದಲ್ಲಿದ್ದು ಕರ್ಮದ ಶುಭಫಲವನ್ನು ಅನುಭವಿಸುವನೆಂದು ಬೃಹತ್ಸಂಹಿತೆಯು ಸಂದೇಶಿಸಿದೆ[1] ಜೀವಾತ್ಮರ ಹೃದಯಗುಹೆಯಲ್ಲಿದ್ದುಕೊಂಡು ಕರ್ಮಫಲವನ್ನು ಅನುಭವಿಸುವ ರೂಪಗಳು ಭಗವಂತನವುಗಳೇ ಎಂಬುದಾಗಿ ಬ್ರಹ್ಮಸೂತ್ರವೊಂದು ನಿರ್ಣಯಿಸಿದೆ[2]

ಸಾರ್ವಕಾಲಿಕ ಹಾಗೂ ಸಾರ್ವದೇಶಿಕ ಅಸ್ತಿತ್ವವನ್ನು ಹೊಂದಿರುವ ಪ್ರಯುಕ್ತ 'ಮಹದ್ ಭೂತ' ಎನಿಸಿರುವ ಶ್ರೀ ವಿಷ್ಣುವು ಒಬ್ಬನಾದರೆ, ದೇಶತಃ ಅಲ್ಪವಾದ ಅಸ್ತಿತ್ವವನ್ನು ಪಡೆದಿರುವ ಅಲ್ಪ ಭೂತಗಳು ಭಿನ್ನ ಭಿನ್ನವಾದವು ಅನೇಕಗಳು ಮಹದ್ಭೂತನೆನಿಸಿರುವ ಹಾಗೂ ಪ್ರಲಯ ಕಾಲದಲ್ಲಿ ಸರ್ವವನ್ನೂ ಭಕ್ಷಿಸುವ ಪ್ರಯುಕ್ತ ವಿಶ್ವಭುಕ್ ಎನಿಸಿರುವ ವಿಷ್ಣುವು ಮೂರುಲೋಕಗಳನ್ನೂ ವ್ಯಾಪಿಸಿ ಸಕಲ ಭೂತಗಳ ಅಂತರ್ಯಾಮಿಯಾಗಿದ್ದು ಅವುಗಳು ಭೋಗಿಸುವ ವಿಷಯ ಪದಾರ್ಥಗಳ ಸಾರಭಾಗವನ್ನು ಭೋಗಿಸುವನು—ಎಂಬುದಾಗಿ ಭೀಷ್ಮಾಚಾರ್ಯರು ಸಂದೇಶಿಸಿರುವರು[3]

೨ (ಜೀವ ಸಮೂಹದಲ್ಲಿ ಪೂರ್ಣನಾಗಿರುವ ಪ್ರಯುಕ್ತ) ವಿಶ್ವ ಎನಿಸುವ ಮುಖ್ಯ ಪ್ರಾಣನನ್ನು ಭಕ್ಷಿಸುವವನು[4]

---

1 ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ । ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್ ।
—ಬೃಹತ್ಸಂಹಿತಾ (ಬ್ರ ಸೂ ಭಾ 1-2-11)

2 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್'
—ಬ್ರ ಸೂ. 1-2-11

ಗುಹಾಂ ಪ್ರವಿಷ್ಟೌ ಪಿಬಂತೌ ವಿಷ್ಣುರೂಪೇ ಏವ ।
—ಬ್ರ .ಸೂ. ಭಾ.

3 ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।
ತ್ರೀಂಲ್ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥
—ಮ. ಭಾ.ರ. ಅನು 149-140

* 'ಅಸ್ತಿತ್ವಾದ್ ಭೂತನಾಮಭ್ಯಃ . ' ಇತ್ಯಾದಿನಾ ಪಾದ್ಮೇನ (ಗೀ ತಾ. 18-20) ಭೂತ ಶಬ್ದಪ್ರವೃತ್ತಿನಿಮಿತ್ತಂ ಅಸ್ತಿತ್ವಮೇವೇತಿ ಜ್ಞಾಯತೇ ।

* ಭಗವತಃ ಭೋಗಮಧಿಕೃತ್ಯ ಅಧಿಕಃ ವಿಚಾರಃ ೧೪೭ ತಮಸ್ಯ ೫೦೦ ತಮಸ್ಯ ೮೮೮ ತಮಸ್ಯ ಚ ಭೋಕ್ತಾ ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೨ 4 'ವಿಶ್ವೋ ವಾಯುಃ ಸಮುದ್ದಿಷ್ಟಃ ಪೂರ್ಣತ್ವಾತ್ ಜೀವಸಂಘತಃ' (ಬೃ. ಉ. ಭಾ. 6-4-13) ಇತಿ ವಿಶ್ವಃ ವಾಯುಃ । ತಂ ಭುಂಕ್ತೆ ಇತಿ ವಿಶ್ವಭುಕ್ ।

ಪರಮಾತ್ಮನಲ್ಲೇ ಸದಾ ನೆಲೆಸಿರುವ ಹಾಗೂ ಪ್ರಯುಕ್ತ ಅನಿಲ ಎನಿಸಿರುವ ಹಾಗೂ ಪ್ರಲಯಕಾಲದಲ್ಲೂ ತಿರೋಧಾನ ಹೊಂದದ ಜ್ಞಾನವಿರುವ ಪ್ರಯುಕ್ತ ಅಮೃತ ಎನಿಸುವ ವಾಯುದೇವನ ದೇಹವೂ ಅವನ ಸಾಧನಾವಧಿ ಮುಗಿದಾಗ ಪರಮಾತ್ಮಜ್ಯೋತಿಯಲ್ಲಿ ಸುಟ್ಟು ಲಯವಾಗುವುದೆಂದು ಈಶಾವಾಸ್ಯೋಪನಿಷತ್ತು ಸಂದೇಶಿಸಿದೆ[1]

೩ ಪೂರ್ಣನಾಗಿದ್ದುಕೊಂಡೇ ಭೋಗಿಸುವವನು[2]

ಭಗವಂತನು ಆನಂದ ಪರಿಪೂರ್ಣನು ಆದುದರಿಂದ ಆನಂದಪ್ರಾಪ್ತಿಗಾಗಿ ಅವನು ಭೋಗಿಸುವುದಲ್ಲ ಕೇವಲ ಲೀಲೆಯಿಂದಷ್ಟೇ ಭೋಗಿಸುವನು[3]

೪ (ಶರೀರಗಳಲ್ಲಿ ಪ್ರವೇಶಿಸುವ ಪ್ರಯುಕ್ತ ವಿಶ್ವ ಎನಿಸುವ) ಜೀವಾತ್ಮರ ಜೊತೆಗೆ ಭೋಗಿಸುವವನು[4]

ಜೀವಾತ್ಮರು ತಮ್ಮ ಇಂದ್ರಿಯಗಳ ಮೂಲಕ ವಿಷಯ ಪದಾರ್ಥಗಳನ್ನು ಭೋಗಿಸುವಾಗ ಅವರ ಇಂದ್ರಿಯಗಳಲ್ಲಿದ್ದುಕೊಂಡು ಅವರ ಜೊತೆ ಭಗವಂತನು ಆ ಭೋಗಗಳಲ್ಲಿ ಸಾರಭಾಗವನ್ನು ಭೋಗಿಸುವನು

೫ ಜೀವಾತ್ಮರ ಇಂದ್ರಿಯಗಳನ್ನು ಪ್ರವೇಶಿಸಿದವನಾಗಿ ಆ ಇಂದ್ರಿಯಗಳ ಮೂಲಕ ಭೋಗಿಸುವವನು[5]

---

1 ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಂ ।
—ಈ ಉ 2–5

ಇದಂ ವಾಯ್ವಧಿಷ್ಠಿತಮಚಿಚ್ಛರೀರಂ ಪರಮಾತ್ಮಾಗ್ನೌ ಭಸ್ಮೀಭಾವೇನ ವಿನಶ್ಯತಿ ।
—ತ್ರ್ಯ. ದಾ. ಟೀ.

೩ 2 ವಿಶ್ವಃ ಪೂರ್ಣಃ ಸನ್ನೇವ ಭುಂಕ್ತೆ ಇತಿ ವಿಶ್ವಭುಕ್ ।

3 ಪೂರ್ಣಾನಂದೋऽಪಿ ಭಗವಾನ್ ಕ್ರೀಡಯಾ ಭುಂಕ್ತೆ ಏವ ತು ।
—ನಾರಾಯಣಶ್ರುತಿ (ಗೀ. ತಾ 15 9)

೪ 4 'ಶರೀರೇಷು ಪ್ರವಿಷ್ಟತ್ವಾತ್ ವಿಶ್ವೋ ಜೀವ ಉದೀರ್ಯತೇ' (ಮಾಹಾತ್ಮ್ಯ –ಭಾಗ.ತಾ.ನಿ 10-15-48) ಇತಿ ವಿಶ್ವಃ ಜೀವಃ । ತೇನ ಸಹ ಭುಂಕ್ತೆ ಇತಿ ವಿಶ್ವಭುಕ್ ।

೫ 5 ಜೀವಾನಾಂ ಇಂದ್ರಿಯಾಣಿ ವಿಶತೀತಿ ವಿಶ್ವಃ । ವಿಶ್ವಃ ಸನ್ ತತ್ತದಿಂದ್ರಿಯದ್ವಾರಾ ಭುಂಕ್ತೆ ಇತಿ ವಿಶ್ವಭುಕ್ ।

೬ ವಿಶ್ವವನ್ನು ರಕ್ಷಿಸುವವನು.[1]

೭ ಜೀವಾತ್ಮರನ್ನು ರಕ್ಷಿಸುವವನು.[2]

ಭಗವಂತನು ಎಲ್ಲರ ದೇಹಗಳಲ್ಲಿ ರಕ್ಷಕನಾಗಿ ಇರುವುದರಿಂದ ಅವರು ಸ್ವರೂಪತಃ ಅವಧ್ಯರೆನಿಸಿರುವರೆಂದು ಗೀತಾಚಾರ್ಯನು ಸಂದೇಶಿಸಿರುವನು[3]

೮ ಆಯಾಯ ಪದಾರ್ಥದ ಒಳಗೆ ಪ್ರವೇಶಿಸಿ ಅದನ್ನು ರಕ್ಷಿಸುತ್ತಿರುವವನು[4]

ಭಗವಂತನು ನಿತ್ಯಪದಾರ್ಥವನ್ನೂ, ಅನಿತ್ಯಪದಾರ್ಥವನ್ನೂ, ನಿತ್ಯಾನಿತ್ಯ ಪದಾರ್ಥವನ್ನೂ ಪ್ರವೇಶಿಸಿ ಅಲ್ಲಲ್ಲಿ ಇದ್ದುಕೊಂಡು ನಿತ್ಯವನ್ನು ನಿತ್ಯವನ್ನಾಗಿಯೂ, ಅನಿತ್ಯವನ್ನು ಅನಿತ್ಯವನ್ನಾಗಿಯೂ, ನಿತ್ಯಾನಿತ್ಯವನ್ನು ನಿತ್ಯಾನಿತ್ಯವನ್ನಾಗಿಯೂ ರಕ್ಷಿಸುತ್ತಿರುವನೆಂದು ಪಾದ್ಮ ತಿಳಿಸಿದೆ.[5]

೯ ವಾಯುದೇವನನ್ನು ವಿಶೇಷವಾಗಿ ರಕ್ಷಿಸುತ್ತಿರುವವನು.[6]

---

೬ 1 ವಿಶ್ವಂ ಜಗತ್ ಭುನಕ್ತಿ ಪಾಲಯತೀತಿ ವಿಶ್ವಭುಕ್ ।

೭ ವಿಶ್ವಾನ್ ಜೀವಾನ್ ಭುನಕ್ತೀತಿ ವಿಶ್ವಭುಕ್ ।

3 ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।

-ಗೀ. 2-30

ದೇಹೀ ಕುತೋಽವಧ್ಯಃ ? ಯಸ್ಮಾದಯಮೀಶ್ವರಃ ಸರ್ವಸ್ಯ ದೇಹೇ ರಕ್ಷಕತ್ವೇನ ಸ್ಥಿತಃ। ಅತ ಏವಾವಧ್ಯಃ । ನ ಸ್ವಸಾಮರ್ಥ್ಯಂ ಕಸ್ಯಾಪಿ ।

-ಗೀ. ತಾ.

೮ 4 ವಿಶತಿ ಸರ್ವಾನ್ ಪದಾರ್ಥಾನ್ ರಕ್ಷಕತ್ವೇನೇತಿ ವಿಶ್ವಃ । ವಿಶ್ವಃ ಸನ್ ತಾನ್ ಭುನಕ್ತಿ ರಕ್ಷತೀತಿ ವಿಶ್ವಭುಕ್ ।

5 ತ್ರ ತತ್ರ ಸ್ಥಿತೋ ವಿಷ್ಣುರ್ನಿತ್ಯಂ ರಕ್ಷತಿ ನಿತ್ಯದಾ । ಅನಿತ್ಯದೈವಾನಿತ್ಯಂ ಚ ನಿತ್ಯಾನಿತ್ಯೇ ತತಸ್ತತಃ' ।

-ಪಾದ್ಮ (ಗೀ. ತಾ. 2-30)

೯ 6 ವಿಶ್ವಂ ವಾಯುಂ ಭುನಕ್ತಿ ವಿಶೇಷತಃ ಪಾಲಯತೀತಿ ವಿಶ್ವಭುಕ್ ।

ವಾಯುದೇವನು ತನ್ನ ಹನುಮಂತ, ಭೀಮಸೇನ ಹಾಗೂ ಮಧ್ವ—ಈ ಮೂರು ಅವತಾರಗಳಲ್ಲೂ ರಾವಣ, ದುರ್ಯೋಧನ ಶಂಕರಾದಿ ಶತ್ರುಗಳಿಂದ ಹಿಂಸಿಸಲ್ಪಟ್ಟರೂ ನಿರ್ವಿಕಾರನಾಗಿ ಇರುವನು, ಸರ್ವಜ್ಞನಾದವನು ಸರ್ವಸಾಮರ್ಥ್ಯವುಳ್ಳವನು ಸ್ವಚ್ಛಂದ ಮೃತ್ಯು ಸಜ್ಜನರನ್ನು ಸಂತೋಷಪಡಿಸುವವನು ಹೀಗೆಲ್ಲ ವಾಯುದೇವನನ್ನು ಸ್ತುತಿಸಿದ ತಿವಿಕ್ರಮ ಪಂಡಿತಾಚಾರ್ಯರು 'ತ್ರಿಧಾಮಾ' ಎನಿಸಿರುವ ಭಗವಂತನು ವಾಯುದೇವರಿಗೆ ವಿಶೇಷವಾಗಿ ರಕ್ಷಕನಾಗಿ ಇರುವುದರಿಂದ ಅವನ ಮಹತ್ತ್ವಪೂರ್ಣವಾದ ವ್ಯಕ್ತಿತ್ವದ ಬಗ್ಗೆ ಆಶ್ಚರ್ಯ ಪಡಬೇಕಾಗಿಲ್ಲ—ಎಂದು ನಿರೂಪಿಸಿರುವರು[1]

೧೦ (ಸಾಧಕವರ್ಗದಲ್ಲೇ ಪೂರ್ಣರಾಗಿದ್ದ) ವಿಶ್ವ ಎನಿಸುವ ಸತ್ಯ ಲೋಕಾಧಿಪತಿಯ ಜೊತೆಗೆ ಭೋಗಿಸುವವನು[2]

ಭಗವಂತನ ಆದೇಶಾನುಸಾರವಾಗಿ ಅವನ ಭೋಗಗಳು ಸತ್ಯಲೋಕಾಧಿಪತ್ಯ ಪದವಿಯನ್ನು ಅಲಂಕರಿಸಿರುವ ಚತುರ್ಮುಖನಿಗೂ ದೊರಕುವವು ಆದ್ದರಿಂದಲೇ ಆ ಪದವಿ 'ಸಹಭೋಗ' ಎಂದೇ ಎನಿಸಿದೆ[3]

## ಜಿಜ್ಞಾಸೆ

[ಉಪನಿಷದ್ವಿರೋಧವಿಲ್ಲ]

ಪ್ರ - 'ಯಸ್ಯ ಚ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ' ಎಂದು ಪರಮಾತ್ಮನು ಬ್ರಹ್ಮಕ್ಷತ್ರಗಳೇ ಅನ್ನವಾಗಿ ಉಳ್ಳವನು ಎಂದು ಹೇಳಿದ್ದರಿಂದ ವಿಶ್ವಭುಕ್ ಎಂಬ ನಾಮದ ಅರ್ಥವು ಉಪನಿಷದ್ವಿರುದ್ಧವಾಗುವದಿಲ್ಲವೋ?

---

1 ತ್ರಿಷ್ವಪ್ಯೇವಾವತಾರೇಷ್ವರಿಭಿರಪಘೃಣಂ ಹಿಂಸಿತೋ ನಿರ್ವಿಕಾರಃ ಸರ್ವಜ್ಞಃ ಸರ್ವಶಕ್ತಿಸಕಲಗುಣಗಣಾಽಪೂರ್ಣರೂಪಪ್ರಗಲ್ಭಃ । ಸ್ವಚ್ಛಃ ಸ್ವಚ್ಛಂದಮೃತ್ಯುಃ ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ ತ್ರಾತಾ ಯಸ್ಯ ತ್ರಿಧಾಮಾ ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ ॥ -ವಾ ಸ್ತು. 32

೧೦ 2 ವಿಶ್ವೇನ ಸಾಧಕವರ್ಗೇ ಪೂರ್ಣೇನ ಸತ್ಯಲೋಕಾಧಿಪತಿನಾ ಸಹ ಭುಂಕ್ತ ಇತಿ ವಿಶ್ವಭುಕ್ ।

3 ಭೋಗಾಶ್ಚ ಯೇ ಯಾನಿ ಚ ಕರ್ಮಜಾತಾನ್ಯನಾದ್ಯನಂತಾನಿ ಮಮೇಹ ಸಂತಿ। ಮದಾಜ್ಞಯಾ ತಾನ್ಯಖಿಲಾನಿ ಸಂತಿ ಧಾತುಃ ಪದೇ ತತ್ಸಹಭೋಗ ನಾಮ । -ಮ ಭಾರ. ತಾ. ನಿ. 8-242

* ಮಮ ಯೇ ಭೋಗಾ ಸಂತಿ...ಮದಾಜ್ಞಯಾ ತಾನ್ಯಖಿಲಾನಿ ಧಾತುಃ ಪದೇ ಸಂತಿ ಯದ್ ಯಸ್ಮಾತ್ತಸ್ಮಾತ್ ಸಹಭೋಗನಾಮ, ಧಾತುಃ ಪದಮಿತಿ ಶೇಷಃ । -ಪದಾರ್ಥ ದೀಪಿಕಾ

ಉ,– ಉಪನಿಷತ್ತಿನಲ್ಲಿ ಬ್ರಹ್ಮಕ್ಷತ್ರಶಬ್ದಗಳಿಗೆ ಬ್ರಾಹ್ಮಣಜಾತ್ಯಭಿಮಾನಿಯಾದ ಚತುರ್ಮುಖನು ಕ್ಷತ್ರಜಾತ್ಯಭಿಮಾನಿಯಾದ ಮುಖ್ಯವಾಯು ಎಂದು ಅರ್ಥ ಅವರು ಇಬ್ಬರು ತಮ್ಮ ಹೊಟ್ಟೆಯಲ್ಲಿ ಎಲ್ಲ ವಿಶ್ವವನ್ನು ಇಟ್ಟುಕೊಂಡ ಮೇಲೆ ಇವರಿಬ್ಬರನ್ನೂ ಪರಮಾತ್ಮನು ತನ್ನ ಹೊಟ್ಟೆಯಲ್ಲಿ ಇಟ್ಟುಕೊಳ್ಳುವುದರಿಂದ ಪರಮಾತ್ಮನು 'ವಿಶ್ವಭುಕ್' ಎಂದು ಹೇಳಲ್ಪಡುತ್ತಾನೆ ಆದುದರಿಂದ ಉಪನಿಷದ್ವಿರೋಧವು ಇಲ್ಲ.



## ೨೪೦ ವಿಭು

○ ನಿಯಾಮಕನಾಗಿ ವಿವಿಧ ರೂಪಗಳನ್ನು ತಾಳಿರುವವನು[1]

ಭಗವಂತನು ಈ ಜಗತ್ತೆಲ್ಲವನ್ನೂ ಸೃಷ್ಟಿಸಿ, ಇದಕ್ಕೆ ನಿಯಾಮಕನಾಗಿ ಅನಂತ ರೂಪಗಳನ್ನು ತಾಳುವೆನೆಂದು ಯೋಚಿಸುವನು ಅನಂತರ ಜಗತ್ತನ್ನು ಸೃಷ್ಟಿಸಿ, ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲೂ ನಿಯಾಮಕನಾಗಿ ಪ್ರವೇಶಿಸುವನು. ಸತ್ ತ್ಯತ್, ನಿರುಕ್ತ, ಅನಿರುಕ್ತ, ನಿಲಯನ, ಅನಿಲಯನ, ವಿಜ್ಞಾನ, ಅವಿಜ್ಞಾನ, ಸತ್ಯ ಹಾಗೂ ಅನೃತ—ಎಂದು ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಳ್ಳುವ ಬೇರೆ ಬೇರೆ ಪದಾರ್ಥವನ್ನು ಆಯಾಯ ಹೆಸರಿನ ರೂಪದಿಂದಲೇ ಪ್ರವೇಶಿಸುವನು. ಭಗವಂತನ ತತ್ತನ್ನಾಮಕಗಳಾದ ರೂಪಗಳ ಸಂಬಂಧದಿಂದಾಗಿಯೇ ಆಯಾಯ ಪದಾರ್ಥ ಆಯಾಯ ಹೆಸರುಳ್ಳದ್ದಾಗಿದೆ—ಎಂದು ತೈತ್ತಿರೀಯೋಪನಿಷತ್ತು ಸಂದೇಶಿಸಿದೆ[2] ಬಹುರೂಪಗಳಿಂದ ಕೂಡಿರುವುದರಿಂದಲೇ ಭಗವಂತನು 'ಸಹಸ್ರಶಾಖ

---

○ 1 ನಿಯಾಮಕತ್ವೇನ ವಿವಿಧಭವನಾತ್ ವಿಭುಃ ।

2 'ಸೋಽಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದꣳಸರ್ವಮಸೃಜತ । ಯದಿದಂ ಕಿಂಚ । ತತ್ ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ ।'

-ತೈ ಉ. 2-11

'ಸೃಷ್ಟ್ವಾ ಜಗದಿದಂ ಸರ್ವಂ ನಿಯಾಮಕತಯಾಽಸ್ಯ ತು । ಬಹುರೂಪೋ ಭವಾನೀತಿ ಸ್ವಾಜ್ಜಗಚ್ಚೇತ್ಯಚಿಂತಯತ್ । ತ್ಯಚ್ಚಾನಿರುಕ್ತಂ ವಿಜ್ಞಾನಂ . ಅವಿಜ್ಞಾನಂ ಚಾನಿಲ

ಎಂದೆನಿಸಿರುವನೆಂದು ವ್ಯಾಖ್ಯಾನಿಸಲು ತೊಡಗಿರುವ 'ಪ್ರಕ್ಲಿಪ್ತ'ವು 'ವಿಭುಃ' ಹೆಸರಿನಿಂದ ಅವನನ್ನು ಉಲ್ಲೇಖಿಸಿ, ವಿಭು ಎನಿಸುವುದರಿಂದಲೇ ಅವನಿಗೆ ಬಹುರೂಪಗಳಿವೆ—ಎಂಬುದನ್ನು ಸೂಚಿಸಿ ಕೊಟ್ಟಿದೆ[1] ಅರ್ಜುನನು ಶ್ರೀಕೃಷ್ಣನನ್ನು ನಾರದ, ಅಸಿತ, ದೇವಲ ಮೊದಲಾದ ಋಷಿಗಳು ಬೇರೆ ಬೇರೆ ಹೆಸರುಗಳಿಂದ ಕರೆಯುವರೆಂದು ಸ್ತುತಿಸುತ್ತ, ಅವನು ಬೇರೆ ಬೇರೆ ರೂಪ ತಾಳುವುದರಿಂದಾಗಿ 'ವಿಭುಃ' ಎಂಬುದಾಗಿಯೂ ಅವನನ್ನು ಕರೆಯುವರೆಂದು ಹೇಳಿರುವನು.[2] ಭಕ್ತರ ಅಭೀಷ್ಟಗಳನ್ನು ವರ್ಷಿಸುವ ಭಗವಂತನ ಮೊದಲ ರೂಪವನ್ನು 'ವಿಭುಃ' ಎಂದು ಹೆಸರಿಸಿದ 'ವಾರುಣಶಾಖೆ'—ಭಗವಂತನು ವಿವಿಧ ರೂಪಗಳನ್ನು ತಾಳಿರುವುದರಿಂದಲೇ ವಿಭು ಎನಿಸಿರುವನೆಂದು ತಿಳಿಸಿದೆ.[3]

೨ ಸಮರ್ಥನಾಗಿರುವವನು.[4]

---

ಯಸ್ಮಾತ್ ಪ್ರಕೃತಿಪ್ರಾಣಯೋಃ ಪರಮ್ । ತದ್ಗವಿಷ್ಣೋಽಸ್ತು ಸಂಬಂಧಾತ್ ಸ್ವತಸ್ತನ್ನಾಮಕೋ ಹರಿಃ ತತೋ ನಿಯಾಮಕಶ್ಚೇತಿ '

—ಯಜುಃ ಸಂಹಿತಾ (ತೈ. ಉ ಭಾ )

1 '. ಬಹುರೂಪತ್ವತೋ ವಿಭುಃ । ಸಹಸ್ರಶಾಖ ಇತ್ಯುಕ್ತಃ

—ಪ್ರಕ್ಲಿಪ್ತ (ತೈ. ಉ. ಭಾ. 1–9)

2 ಪರಂ ಬ್ರಹ್ಮ ಪರಂ ಧಾಮ ವಿಭುಮ್ । ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ । '

—ಗೀತಾ. 10–12, 13

ವಿವಿಧಮಾಸೀದಿತಿ ವಿಭುಃ ।

ತಥಾ ಹಿ ವಾರುಣಶಾಖಾಯಾಮ್—ವಿಭು ಪ್ರಭು ಪ್ರಥಮಂ ಮೇಹನಾವತ ಇತಿ ಸ ಹ್ಯೇವ ಪ್ರಾಭವತ್ ವಿವಿಧೋಽಭವತ್

—ಗೀ. ಭಾ. 10–12

3 ಮೇಹನಾವತಃ ಸೇಚಕಸ್ಯ ಭಗವತಃ ಪ್ರಥಮಂ ರೂಪಂ ವಿಭು ಪ್ರಭು ಚೇತ್ಯೇತದನೂದ್ಯ ವ್ಯಾಖ್ಯಾಯತೇ । ಪ್ರಾಭವತ್ ಸಮರ್ಥೋಽಭವದಿತಿ ವಿಭುಃ ।

—ಪ್ರ. ದೀ.

೨ 4 ಸಮರ್ಥತ್ವಾದ್ವಿಭುಃ ।

—ವಿ ರಾ.

ಉ.- ಉಪನಿಷತ್ತಿನಲ್ಲಿ ಬ್ರಹ್ಮಕ್ಷತ್ರಶಬ್ದಗಳಿಗೆ ಬ್ರಾಹ್ಮಣಜಾತ್ಯಭಿಮಾನಿಯಾದ ಚತುರ್ಮುಖನು ಕ್ಷತ್ರಜಾತ್ಯಭಿಮಾನಿಯಾದ ಮುಖ್ಯಪ್ರಾಣನು ಎಂದು ಅರ್ಥ ಅವರು ಇಬ್ಬರು ತಮ್ಮ ಹೊಟ್ಟೆಯಲ್ಲಿ ಎಲ್ಲ ವಿಶ್ವವನ್ನು ಇಟ್ಟುಕೊಂಡ ಮೇಲೆ ಇವರಿಬ್ಬರನ್ನೂ ಪರಮಾತ್ಮನು ತನ್ನ ಹೊಟ್ಟೆಯಲ್ಲಿ ಇಟ್ಟುಕೊಳ್ಳುವದರಿಂದ ಪರಮಾತ್ಮನು 'ವಿಶ್ವಭುಕ್' ಎಂದು ಹೇಳಲ್ಪಡುತ್ತಾನೆ ಆದುದರಿಂದ ಉಪನಿಷದ್ವಿರೋಧವು ಇಲ್ಲ.



## ೨೪೦ ವಿಭು

೧ ನಿಯಾಮಕನಾಗಿ ವಿವಿದ ರೂಪಗಳನ್ನು ತಾಳಿರುವವನು[1]

ಭಗವಂತನು ಈ ಜಗತ್ತೆಲ್ಲವನ್ನೂ ಸೃಷ್ಟಿಸಿ, ಇದಕ್ಕೆ ನಿಯಾಮಕನಾಗಿ ಅನಂತ ರೂಪಗಳನ್ನು ತಾಳುವೆನೆಂದು ಯೋಚಿಸುವನು ಅನಂತರ ಜಗತ್ತನ್ನು ಸೃಷ್ಟಿಸಿ, ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲೂ ನಿಯಾಮಕನಾಗಿ ಪ್ರವೇಶಿಸುವನು. ಸತ್ ತ್ಯತ್, ನಿರುಕ್ತ, ಅನಿರುಕ್ತ, ನಿಲಯನ, ಅನಿಲಯನ, ವಿಜ್ಞಾನ, ಅವಿಜ್ಞಾನ, ಸತ್ಯ ಹಾಗೂ ಅನೃತ—ಎಂದು ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಳ್ಳುವ ಬೇರೆ ಬೇರೆ ಪದಾರ್ಥವನ್ನು ಆಯಾಯ ಹೆಸರಿನ ರೂಪದಿಂದಲೇ ಪ್ರವೇಶಿಸುವನು. ಭಗವಂತನ ತತ್ತನ್ನಾಮಕಗಳಾದ ರೂಪಗಳ ಸಂಬಂಧದಿಂದಾಗಿಯೇ ಆಯಾಯ ಪದಾರ್ಥ ಆಯಾಯ ಹೆಸರುಳ್ಳದ್ದಾಗಿದೆ—ಎಂದು ತೈತ್ತಿರೀಯೋಪನಿಷತ್ತು ಸಂದೇಶಿಸಿದೆ[2] ಬಹುರೂಪಗಳಿಂದ ಕೂಡಿರುವುದರಿಂದಲೇ ಭಗವಂತನು 'ಸಹಸ್ರಶಾಖ

---

೧ 1 ನಿಯಾಮಕತ್ವೇನ ವಿವಿಧಭವನಾತ್ ವಿಭುಃ ।

2 'ಸೋಽಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ । ಯದಿದಂ ಕಿಂಚ । ತತ್ ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ ।'

-ತೈ ಉ 2-11

'ಸೃಷ್ಟ್ವಾ ಜಗದಿದಂ ಸರ್ವಂ ನಿಯಾಮಕತಾಽಸ್ಯ ತು । ಬಹುರೂಪೋ ಭವಾನೀತಿ ಸ್ಯಾಜ್ಜಗಚ್ಚೇತ್ಯಚಿಂತಯತ್ । ತ್ಯಚ್ಚಾನಿರುಕ್ತಂ ವಿಜ್ಞಾನಂ . ಅವಿಜ್ಞಾನಂ ಚಾನಿಲ

ಎಂದೆನಿಸಿರುವನೆಂದು ವ್ಯಾಖ್ಯಾನಿಸಲು ತೊಡಗಿರುವ 'ಪ್ರಕ್ಲಿಪ್ತ'ವು 'ವಿಭುಃ' ಹೆಸರಿನಿಂದ ಅವನನ್ನು ಉಲ್ಲೇಖಿಸಿ, ವಿಭು ಎನಿಸುವುದರಿಂದಲೇ ಅವನಿಗೆ ಬಹುರೂಪಗಳಿವೆ—ಎಂಬುದನ್ನು ಸೂಚಿಸಿ ಕೊಟ್ಟಿದೆ[1] ಅರ್ಜುನನು ಶ್ರೀಕೃಷ್ಣನನ್ನು ನಾರದ, ಅಸಿತ, ದೇವಲ ಮೊದಲಾದ ಋಷಿಗಳು ಬೇರೆ ಬೇರೆ ಹೆಸರುಗಳಿಂದ ಕರೆಯುವರೆಂದು ಸ್ತುತಿಸುತ್ತ, ಅವನು ಬೇರೆ ಬೇರೆ ರೂಪ ತಾಳುವುದರಿಂದಾಗಿ 'ವಿಭುಃ' ಎಂಬುದಾಗಿಯೂ ಅವನನ್ನು ಕರೆಯುವರೆಂದು ಹೇಳಿರುವನು.[2] ಭಕ್ತರ ಅಭೀಷ್ಟಗಳನ್ನು ವರ್ಷಿಸುವ ಭಗವಂತನ ಮೊದಲ ರೂಪವನ್ನು 'ವಿಭುಃ' ಎಂದು ಹೆಸರಿಸಿದ 'ವಾರುಣಶಾಖೆ'—ಭಗವಂತನು ವಿವಿಧ ರೂಪಗಳನ್ನು ತಾಳಿರುವುದರಿಂದಲೇ ವಿಭು ಎನಿಸಿರುವನೆಂದು ತಿಳಿಸಿದೆ.[3]

೨ ಸಮರ್ಥನಾಗಿರುವವನು[4]

---

ಯುನಂ ಪ್ರಕೃತಿಪ್ರಾಣಯೋಃ ಪರಮ್ । ತದ್ಗವಿಷ್ಣೋಸ್ತು ಸಂಬಂಧಾತ್ ಸ್ವತಸ್ತನ್ನಾಮಕೋ ಹರಿಃ ತತೋ ನಿಯಾಮಕಶ್ಚೇತಿ ’

-ಯಜುಃ ಸಂಹಿತಾ (ತೈ ಉ ಭಾ.)

1 ‘ ಬಹುರೂಪತ್ವತೋ ವಿಭುಃ । ಸಹಸ್ರಶಾಖ ಇತ್ಯುಕ್ತಃ

-ಪ್ರಕ್ಲಿಪ್ತ (ತೈ ಉ. ಭಾ. 1-9)

2 ಪರಂ ಬ್ರಹ್ಮ ಪರಂ ಧಾಮ . ವಿಭುಮ್ । ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ । ’

-ಗೀತಾ. 10-12, 13

ವಿವಿಧಮಾಸೀದಿತಿ ವಿಭುಃ ।

ತಥಾ ಹಿ ವಾರುಣಶಾಖಾಯಾಮ್—ವಿಭು ಪ್ರಭು ಪ್ರಥಮಂ ಮೋಹನಾವತ ಇತಿ ಸ ಹ್ಯೇವ ಪ್ರಾಭವತ್ ವಿವಿಧೋಽಭವತ್

-ಗೀ. ಭಾ. 10-12

3 ಮೋಹನಾವತಃ ಸೇಚಕಸ್ಯ ಭಗವತಃ ಪ್ರಥಮಂ ರೂಪಂ ವಿಭು ಪ್ರಭು ಚೇತ್ಯೇತದನೂದ್ಯ ವ್ಯಾಖ್ಯಾಯತೇ । ಪ್ರಾಭವತ್ ಸಮರ್ಥೋಽಭವದಿತಿ ವಿಭುಃ ।

-ಪ್ರ. ದೀ.

೨ 4 ಸಮರ್ಥತ್ವಾದ್ವಿಭುಃ ।

-ವಿ. ರಾ.

೩ ಎಲ್ಲೆಡೆ ವ್ಯಾಪಿಸಿರುವವನು[1]

ಅಗ್ನಿನಾಮಕ ಭಗವಂತನು ಎಲ್ಲ ಭುವನದಲ್ಲೂ ವ್ಯಾಪಿಸಿರುವನೆಂದು ವಿಭು ಶಬ್ದವನ್ನು ಪ್ರಯೋಗಿಸಿಯೇ ಋಗ್ವೇದ ಸಂದೇಶಿಸಿದೆ[2]

೪ ಪ್ರತ್ಯಕ್ಷ ಹಾಗೂ ತಿರೋಹಿತ ಎಂಬ ಪ್ರಭೇದದ ವೈಭವವನ್ನು ಒಳಗೊಂಡಿರುವವನು[3]

ಬಗವಂತನು ಪ್ರತ್ಯಕ್ಷ ಹಾಗೂ ತಿರೋಹಿತ ಎಂಬ ಪ್ರಭೇದದ ವೈಭವ ರೂಪಗಳನ್ನು ಒಳಗೊಂಡಿರುವವನು ಕಪಿಲ ವ್ಯಾಸ, ಕೃಷ್ಣಾದಿಗಳು ಪ್ರತ್ಯಕ್ಷ ವೈಭವವೆನಿಸಿದರೆ, ಬ್ರಹ್ಮಾದಿ ಜೀವಗಳಿಗಿಂತಲೂ, ಜಡಪದಾರ್ದಗಳಿಂತಲೂ ಭಿನ್ನವಾಗಿ ಆಯಾಯ ವ್ಯಕ್ತಿ ಮತ್ತು ಪದಾರ್ಥಗಳಲ್ಲಿದ್ದು ಅವು ತಮ್ಮ ಜಾತಿಯಲ್ಲೇ ಅಧಿಕವೆನಿಸುವಂತೆ ಅನುಗ್ರಹಿಸುವ ಬಗವದ್ರೂಪಗಳು ತಿರೋಹಿತ ವೈಭವವೆನಿಸಿವೆ[4]

೫ ತನ್ನ ಸನ್ನಿಧಾನದಿಂದಾಗಿ ಕೆಲವು ಪದಾರ್ಥಗಳು ತಮ್ಮ ತಮ್ಮ ಜಾತಿಯಲ್ಲಿ ವಿಶಿಷ್ಟಗಳೆನಿಸುವಂತೆ ಅನುಗ್ರಹಿಸುವವನು[5]

ಭಗವಂತನು ತನ್ನ ವಿಭೂತಿರೂಪದಿಂದಾಗಿ ಪದಾರ್ದಗಳು ವಿಶಿಷ್ಟಗಳೆನಿಸುವಂತೆ ಅನುಗ್ರಹಿಸುವನು

---

೩ 1 ವಿಭುರ್ವ್ಯಾಪ್ತಃ ।

—ಸ. ಸಂ.

2 ‘ವಿಭುರ್ವಿಶ್ವಸ್ಯ ಭುವನಾಯ’

—ಋ. ವೇ. 31-2

ವ್ಯಾಪೀ ಚ ವಿಶ್ವಸ್ಯ ।

—ಋ ಭಾ.

೪ 3 ವಿಭವತಿ ವೈಭವಯುಕ್ತೋ ಭವತೀತಿ ವಿಭುಃ ।

4 ‘ದ್ವಿವಿಧಂ ವೈಭವಂ ರೂಪಂ ಪ್ರತ್ಯಕ್ಷಂ ಚ ತಿರೋಹಿತಮ್ । ಕಪಿಲವ್ಯಾಸಕೃಷ್ಣಾದ್ಯಂ ಪ್ರತ್ಯಕ್ಷಂ ವೈಭವಂ ಸ್ಮೃತಮ್ । ಭಿನ್ನಂ ಬ್ರಹ್ಮಾದಿಜೀವೇಭ್ಯೋ ಜಡೇಭ್ಯಶ್ಚಾಪಿ ತದ್ಗತಮ್ । ಸ್ವಜಾತ್ಯಾಧಿಕ್ಯದಂ ತೇಷಾಂ ತತ್ ತಿರೋಹಿತವೈಭವಮ್’

—ಗೀ. ತಾ. 10-21...40

೫ 5 ವಿಶಿಷ್ಟಾ ಭವಂತ್ಯಸ್ಮಾದಿತಿ ।

—ಸ. ಸಂ.

೬ ನೂತನ ಶರೀರ ಸ್ವೀಕಾರರೂಪವಾದ ಜನನವನ್ನು ಹೊಂದದಿರುವವನು.[1]

೭ ವಿಲಕ್ಷಣನಾಗಿ ಇರುವವನು[2]

೮ ವಿಶಿಷ್ಟನಾಗಿ ಇರುವವನು[3]

೯ ವಿಶಿಷ್ಟವಾದ ಮಂಗಲ ಸ್ವರೂಪಿ[4]

'ಮಂಗಲಾನಾಂ ಚ ಮಂಗಲಂ'—ಎಂದಿರುವಂತೆ ಇತರ ಮಂಗಲ ಪದಾರ್ಥಗಳಿಗೆಲ್ಲ ಮಾಂಗಲ್ಯವನ್ನು ಅನುಗ್ರಹಿಸುತ್ತ, ಮಂಗಲ ಪದಾರ್ಥಗಳಲ್ಲೆಲ್ಲ ಶ್ರೇಷ್ಠ ಮಂಗಲವೆನಿಸುತ್ತ, ವಿಶಿಷ್ಟ ಮಂಗಲ ಸ್ವರೂಪಿಯಾದವನು ಭಗವಂತನು

೧೦ ವಿಶೇಷವಾಗಿ ಪೂರ್ಣನಾಗಿ ಇರುವವನು[5]

೧೧ ಸರ್ವಾಶ್ರಯನಾಗಿರುವವನು[6]

೧೨ ಉಪನಿಷತ್ತುಗಳ ರಹಸ್ಯಾರ್ಥ ಆಗಿರುವವನು.[7]

೧೩ ವಿಶೇಷವಾಗಿ ಸಂಚರಿಸುವವನು.[8]

---

೬ 1 ಭವಃ ಉತ್ಪತ್ತಿಃ । ವಿಗತಃ ಭವಃ ಯಸ್ಮಾತ್ಸಃ ವಿಭವಃ ವಿಭವ ಏವ ವಿಭುಃ ।

೭ 2 ವಿಲಕ್ಷಣತಯಾ ಭವತೀತಿ ವಿಭುಃ ।

೮ 3 ವಿಶಿಷ್ಟತಯಾ ಭವತೀತಿ ವಿಭುಃ ।

೯ 4 ವಿಶಿಷ್ಟಮಂಗಲಸ್ವರೂಪತ್ವಾದ್ವಿಭುಃ ।

೧೦ 5 ವಿಶೇಷೇಣ ಭವತಿ ವರ್ಧತೇ ಪೂರ್ಣೋ ವರ್ತತ ಇತಿ ವಿಭುಃ ।

೧೦ 6 ವಿಭವತಿ ಸರ್ವಂ ನಿವಸತ್ಯತ್ರೇತಿ ವಿಭುಃ ।

೧೨ 7 ಉಪನಿಷದಾಂ ವಿಶಿಷ್ಟಃ ಭವಃ ಭಾವಃ ರಹಸ್ಯಾರ್ಥ ಇತಿ ಯಾವತ್, ವಿಭವಃ । ವಿಭವ ಏವ ವಿಭುಃ ।

೧೩ 8 ವಿಶೇಷೇಣ ಭವತಿ ಸರ್ವತ್ರ ಗಚ್ಛತೀತಿ ವಿಭುಃ ।

[ಅರ್ಥವಿಶೇಷಗಳನ್ನು ೮೮೦ನೆಯ 'ವಿಭುಃ' ಎಂಬ ನಾಮದ ವ್ಯಾಖ್ಯಾನದಲ್ಲಿ ನೋಡಬಹುದು ]

ಜಿಜ್ಞಾಸೆ

[ಜಗದತಿರಿಕ್ತಗಳೇ ಆಗಿವೆ]

ಪ್ರ – 'ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ ಇದಂ ಸರ್ವಮಸೃಜತ' ಈ ಶ್ರುತಿಯು ಪರಮಾತ್ಮನಿಗೆ ಅನಂತರೂಪವತ್ವವನ್ನು ಹೇಳುತ್ತದೆಂದು ಹೇಳಬೇಕು ಆದರೆ ಆ ಅನಂತ ರೂಪಗಳು ಎಂದರೆ ಜಗತ್ತಿನ ಎಲ್ಲ ವಸ್ತುಗಳೇ ಹೊರತು ತದತಿರಿಕ್ತಗಳಲ್ಲ ಏಕೆಂದರೆ ನಾನು ಬಹುಭಾವವನ್ನು ಹೊಂದುತ್ತೇನೆಂದು ಸಂಕಲ್ಪಿಸಿ ಈ ಜಗತ್ತನ್ನು ಸೃಷ್ಟಿ ಮಾಡಿದನು ಎಂದು ಶ್ರುತಿಯು ಹೇಳುತ್ತದೆ ಇದರಿಂದ ಜಗದ್ರೂಪಬಹುಭಾವವೇ ಈ ಶ್ರುತಿಗೆ ಅಭಿಪ್ರೇತ ಎಂದು ಗೊತ್ತಾಗುತ್ತಿದೆಯಲ್ಲವೇ ?

ಉ.- 'ಗುರುಃ ಸ್ಯಾಮಿತಿ ಸಂಕಲ್ಪ್ಯ ಶಿಷ್ಯಸಂಪಾದನಂ ಯಥಾ' ತಾನು ಗುರು ಆಗಬೇಕೆಂದು ಸಂಕಲ್ಪಿಸಿ ಶಿಷ್ಯಸಂಪಾದನೆಯನ್ನು ಮಾಡಿದಾಗ ಗುರುತ್ವಕ್ಕೂ ಶಿಷ್ಯಸಂಪತ್ತಿಗೂ ಪ್ರಯೋಜ್ಯ ಪ್ರಯೋಜಕ ಭಾವವು ಇರುವಂತೆ ನಿಯಾಮಕ ಬಹುರೂಪತ್ವಕ್ಕೂ ನಿಯಮ್ಯ ಬಹು ಪದಾರ್ಥತ್ವಕ್ಕೂ ಪ್ರಯೋಜ್ಯ ಪ್ರಯೋಜಕಭಾವವು ಇದೆ ನಿಯಮ್ಯಗಳು ಬಹಳ ಇದ್ದರೇನೇ ನಿಯಾಮಕಗಳು ಬಹಳವಾಗಿ ಬೇಕು ಆದುದರಿಂದ ಜಗದತಿರಿಕ್ತ ಬಹುರೂಪಗಳ ಸ್ವೀಕಾರ ಸಂಕಲ ಮಾಡಿ ಜಗತ್ತಿನ ಸೃಷ್ಟಿಯು ಮಾಡಲ್ಪಡುವುದು ಅಸಂಗತವಲ್ಲ ಪರಮಾತ್ಮನ ಅನಂತರೂಪಗಳು ಎಲ್ಲವೂ ನಿರ್ದೋಷ ಜ್ಞಾನಾನಂದಾತ್ಮಕಗಳು ಜಗತ್ತಿನ ವಸ್ತುಗಳು ತದ್ರೂಪಗಳು ಅಲ್ಲ ಆದ್ದರಿಂದ ಪರಮಾತ್ಮನ ನಿಯಾಮಕ ಅನಂತರೂಪಗಳು ಜಗದತಿರಿಕ್ತಗಳೇ ಆಗಿವೆ



೨೪೧ ಸತ್ಕರ್ತಾ

೧ ಸ್ವತಂತ್ರಕರ್ತ್ರ[1]

---

ಭೂಧಾತೋಃ ಉಕ್ತಾರ್ಥಾಃ ಶ್ಲೋಕೇಽಸ್ಮಿನ್ ಸಂಗೃಹೀತಾಃ—
'ಸತ್ತಾಯಾಂ ಮಂಗಲೇ ವೃದ್ಧೌ ನಿವಾಸೇ ವ್ಯಾಪ್ತಿಸಂಪದೋಃ ।
ಅಭಿಪ್ರಾಯೇ ಚ ಶಕ್ತೌ ಚ ಪ್ರಾದುರ್ಭಾವೇ ಗತೌ ಚ ಭೂಃ ॥

* ಪರಾಶರಭಟ್ಟೀಯೇ 'ವಿಶ್ವಭುಗ್ವಿಭುಃ' ಇತಿ ಏಕನಾಮತಯಾ ಪರಿಗಣಿತಮ್

೧ 1 ಅಸತ್ಕರ್ತಾ ತು ಜೀವಃ ಸ್ಯಾತ್ ಸತ್ಕರ್ತಾ ಪರಮೇಶ್ವರಃ ।
—ಶಬ್ದನಿರ್ಣಯ (ಭಾಗ. ತಾ. ನಿ. 3-29-35)

ಭಗವಂತನೊಬ್ಬನೇ ಸಹಜವಾಗಿ ಸ್ವತಂತ್ರವಾಗಿ ಕರ್ತೃ ಆಗಿರುವನು ಉಳಿದವರೆಲ್ಲ ಅವನಿಂದ ಪ್ರೇರಿತರಾಗಿಯಷ್ಟೇ ಕರ್ತೃಗಳು[1] ರಾಜನಾದವನು ತನ್ನ ಪುತ್ರರಿಗೆ ಪಾಲಕತ್ವವನ್ನು ನೀಡುವಂತೆ ಪರಮಾತ್ಮನು ಜೀವಾತ್ಮರಿಗೆ ಕ್ರಿಯಾಸ್ವಾತಂತ್ರ್ಯರೂಪವಾದ ಕರ್ತೃತ್ವವನ್ನು ಸೃಷ್ಟಿಸುವುದೇ ಇಲ್ಲ ಸ್ವತಂತ್ರನಾಗಿರುವುದರಿಂದ ಸ್ವಭಾವ ಎನಿಸುವ ಭಗವಂತನಷ್ಟೇ ಸ್ವತಂತ್ರವಾಗಿ ಪ್ರವರ್ತಿಸುವನು—ಎಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[2]

ಋಗ್ವೇದವು ಭಗವಂತನನ್ನು 'ಗಣಪತೇ !' ಎಂದು ಸಂಬೋಧಿಸಿ 'ನಿನ್ನ ಹೊರತು ಏನೂ ಮಾಡಲ್ಪಡುವುದಿಲ್ಲ'—ಎಂದಿರುವುದು ಭಗವಂತನಷ್ಟೇ ಸ್ವತಂತ್ರಕರ್ತೃ ಎಂಬ ಅಭಿಪ್ರಾಯದಲ್ಲೇ[3] ಇದನ್ನೇ ಶ್ರುತಿಗೀತೆಯು ಹೀಗೆ ವಿವರಿಸಿದೆ—ಎಲ್ಲರ ಕ್ರಿಯೆಗಳೂ ಅಖಿಲ ಶಕ್ತಿಧಾರಕನಾದ ಭಗವಂತನಿಂದ ಆಚರಿಸಲ್ಪಟ್ಟವೆಂದು ಜ್ಞಾನಿಗಳು ತಿಳಿಸುವರು[4]

---

1 ಹರಿಃ ಸ್ವಭಾವತಃ ಕರ್ತಾ ಸರ್ವಮನ್ಯತ್ ತದೀರಿತಮ್ ।
-ಗೀ ತಾ. 5-14

2 'ಯಥಾ ಪಿತ್ರಾ ದತ್ತಂ ಪಾಲಕತ್ವಂ ರಾಜಪುತ್ರಾಣಾಮೇವಂ ಪರಮಾತ್ಮದತ್ತಂ ಕ್ರಿಯಾಸ್ವಾತಂತ್ರ್ಯ ಲಕ್ಷಣಂ ಕರ್ತೃತ್ವಂ ಜೀವಾನಾಮಸ್ತ್ವಿತ್ಯಾಶಂಕಾಂ ಪರಿಹರತಿ— 'ನ ಕರ್ತೃತ್ವಂ ಲೋಕಸ್ಯ ಸೃಜತಿ ಪ್ರಭುಃ । .ಸ್ವಭಾವಸ್ತು ಪ್ರವರ್ತತೇ'— (ಗೀ 5- 14) ಕ್ರಿಯಾಯಾಂ ಸ್ವಾತಂತ್ರ್ಯಂ ಲೋಕಸ್ಯ ನ ಸೃಜತೀಶ್ವರ ಇತ್ಯರ್ಥಃ । ಅನ್ಯಥಾ ಲೋಕಸ್ಯೇತಿ ವಿಶೇಷಣಂ ವ್ಯರ್ಥಮ್ । ಜನಪದೇ ನಿವಸತಾಮಪ್ಯಾಧಿಪತ್ಯಾದಾನ್ಯಾನ್ನ ದತ್ತಾ ಜನಪದಾ ರಾಜ್ಞಾ ಸ್ವಪುತ್ರಾಣಾಮಿತಿವತ್ ಕರ್ಮಫಲಾದಿಸಂಯೋಗಿನಾಮಪಿ ತತ್ಸ್ವಾತಂತ್ರ್ಯದಾನಾತ್ 'ನ ಸೃಜತಿ' ಇತಿ ಯುಜ್ಯತೇ। ಸ್ವಯಮೇವ ಭವತಿ ಭಾವಯತಿ ಚೇತಿ ಸ್ವಭಾವಃ । ಸ್ವಭಾವತ್ವಾತ್ ಸ್ವಯಮೇವ ಕರ್ತೃತ್ವಾದಿಷು ಪ್ರವರ್ತತೇ'
-ಗೀ. ಭಾ. 5-14

3 ' ನ ಋತೇ ತ್ವತ್ಕ್ರಿಯತೇ ಕಿಂಚನಾರೇ '
-ಋ. ವೇ. 10-112-9

4 ತವ ಪುರುಷ ವದಂತ್ಯಖಿಲಶಕ್ತಿಧೃತಃ ಸ್ವಕೃತಮ್ ।
-ಭಾಗ. 10-14-20

ತಸ್ಮಾತ್ ಸರ್ವಂ ತವ ಸ್ವಕೃತಮೇವ ವದಂತಿ ।
-ಭಾಗ. ತಾ. ನಿ.

೨ ಒಳ್ಳೆಯ ಕೆಲಸಗಳನ್ನು ಮಾಡುವವನು.[1]

ಋಗ್ವೇದದಲ್ಲಿ, ಅಗ್ನಿನಾಮಕ ಭಗವಂತನನ್ನು ಸಂಬೋಧಿಸಿ, ಸತ್ಕರ್ಮಗಳನ್ನು ಅಧಿಕವಾಗಿ ನಡೆಸುವ ನೀನು ಸತ್ಕರ್ಮಗಳನ್ನು ಮಾಡುವ ವಾಯುದೇವನಿಗೆ ಸ್ವರ್ಗಾದಿ ಲೋಕಗಳ ಸ್ವಾಮ್ಯವನ್ನೂ, ಜ್ಞಾನವನ್ನೂ, ಹಾಗೂ ಭಾರತೀದೇವಿಯನ್ನು ಪತ್ನಿಯನ್ನಾಗಿಯೂ ನೀಡಿರುವಿ ಎಂದು ಸ್ತುತಿಸಲಾಗಿದೆ.[2]

೩ ಪೂಜಿಸುವವನು[3]

ಭಗವಂತನೇ ಸ್ವತಂತ್ರಕರ್ತೃ ಆಗಿರುವುದರಿಂದ ರಮಾಬ್ರಹ್ಮಾದಿಗಳ ಮೂಲಕ ನಡೆಸಿರುವ ತನ್ನ ಪೂಜೆಗೂ ಅವನೇ ಮುಖ್ಯ ಕರ್ತೃ. 'ಶ್ರೀ ಬ್ರಹ್ಮ ರುದ್ರಾದಿಗಳಲ್ಲಿ ಅವರವರ ತಾರತಮ್ಯಕ್ಕನುಗುಣವಾಗಿ ಅವರಲ್ಲಿ ಸನ್ನಿಹಿತನಾಗಿ ತನ್ನನ್ನು ಚೆನ್ನಾಗಿ ಪೂಜಿಸಿಕೊಳ್ಳುವನು ಹೀಗೆ ಬ್ರಹ್ಮಾಂಡದ ಒಳಗಷ್ಟೇ ಅಲ್ಲ. ಹೊರಗೂ ಕೂಡಾ ಹಾಗೆಯೇ ರಮಾಬ್ರಹ್ಮಾದಿ ಸಚ್ಚೇತನರ ಮೂಲಕವಷ್ಟೇ ಅಲ್ಲ, ಅಸಚ್ಚೇತನರ ಮೂಲಕವೂ ತನ್ನನ್ನು ಪೂಜಿಸುಕೊಳ್ಳುವನು ಅವರನ್ನು ಕೆಳಗೆ ತಳ್ಳುವುದಕ್ಕಾಗಿ ಅವರ ಮೂಲಕ ನಡೆಸುವ ಕೆಟ್ಟ ಕರ್ಮಗಳೂ ಭಗವಂತನ ದೃಷ್ಟಿಯಲ್ಲಿ ತನ್ನ ಪೂಜೆಯೇ ಆಗಿರುವುದು—ಹೀಗೆ ತಂತ್ರಭಾಗವತ ಭಗವಂತನ ಪೂಜಕತ್ವವನ್ನು

---

೨ 1 ಸತಾಂ ಸಮೀಚೀನಕರ್ಮಣಾಂ ಕರ್ತಾ ಸತ್ಕರ್ತಾ । 'ಪ್ರಶಸ್ತೇ ಕರ್ಮಣಿ ಚ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ (ಗೀ 17-26)'

2 ತ್ವಮಗ್ನೇ ಮನವೇ ದ್ಯಾಮವಾಶಯಃ ಪುರೂರವಸೇ ಸುಕೃತೇ ಸುಕೃತ್ತರಃ ।

-ಋ. ವೇ. 31-4

ವಿಶಿಷ್ಟಬೋಧಾನ್ಮನವೇ ವಾಯವೇ ತ್ವಂ ಪ್ರಾದಾ ದಿವಂ ಜ್ಞಾನರೂಪಾಂ ಪ್ರಿಯಾಂ ಚ ।
....ಸುಕೃತೇ ಸುಕೃತ್ತರಃ ।

-ಋ. ಭಾ.

ಸುಕೃತ್ತರಃ ಅತಿಶಯೇನ ಸತ್ಕರ್ಮಣಾಂ ಕರ್ತಾ ತ್ವಂ .. । ಸುಕೃತೇ ಸತ್ಕರ್ಮಣಾಂ ಕರ್ತ್ರೇ ..

-ಋ. ಭಾ. ಟೀ.

೩ 3 ಸತ್ಕರೋತಿ ಪೂಜಯತೀತಿ ಸತ್ಕರ್ತಾ ।

-ಶಾಂ ಭಾ.

ವಿವರಿಸಿದೆ[1] ಜೀವಸಮೂಹಕ್ಕೆ ಸ್ವಾಮಿಯಾದವನೇ ! ಎಂದು ಭಗವಂತನನ್ನು ಸಂಬೋಧಿಸಿದ ಸಾಧಕನು, ನನ್ನ ಇಂದ್ರಿಯ ಸಮೂಹದಲ್ಲಿದ್ದುಕೊಂಡು ಅರ್ಚನೀಯನಾದ ನಿನ್ನನ್ನು ನೀನೇ ಆರಾಧಿಸು—ಎಂದು ಪ್ರಾರ್ಥಿಸಿಕೊಳ್ಳುವುದನ್ನು ಋಗ್ವೇದ ಉಲ್ಲೇಖಿಸಿದೆ[2] ಪೂಜಿಸುವವನು, ಪೂಜಿಸಿಕೊಳ್ಳಲ್ಪಡುವವನು ನೀನೇ—ಎಂದು ಶ್ರುತಿಗೀತೆಯಲ್ಲಿ ಭಗವಂತನನ್ನು ಕೊಂಡಾಡಲಾಗಿದೆ[3]. ತಂದೆಯು ತನ್ನ ಶಿಶುವು ತನಗೆ ನಮಸ್ಕರಿಸುವಂತೆ ಮಾಡಿದಾಗ, ಆ ನಮಸ್ಕಾರದಲ್ಲಿ ತಂದೆಯ ಪಾತ್ರವೇ ಹಿರಿಯದ್ದಾದರೂ ಅದು ಹೇಗೆ ಶಿಶುಕರ್ತೃಕ ಪ್ರಣಾಮ ಎನಿಸುವುದೋ ಹಾಗೆಯೇ ಜೀವರ ಮೂಲಕ ನಡೆಯುವ ಭಗವಂತನ ಆರಾಧನೆಯಲ್ಲೂ ಭಗವಂತನದೇ ಪ್ರಧಾನಪಾತ್ರವಾದರೂ ಔಪಚಾರಿಕವಾಗಿಯಷ್ಟೇ ಅದು ಜೀವಕೃತ ಪೂಜೆ ಎನಿಸುವುದೆಂದು 'ಪ್ರವೃತ್ತ'ವು ಭಗವದಾರಾಧನೆಯು ಮುಖ್ಯವಾಗಿ ಭಗವತ್ಕೃತವೇ ಆಗಿರುವುದೆಂಬುದನ್ನು ದೃಷ್ಟಾಂತಪೂರ್ವಕವಾಗಿ ಸಮರ್ಥಿಸಿದೆ[4].

---

1 ಶ್ರೀಬ್ರಹ್ಮರುದ್ರಪೂರ್ವೇಷು ಕ್ರಮಾತ್ ಸ್ಥಿತ್ವಾ ಜನಾರ್ದನಃ । ಸ್ವಾತ್ಮಾನಮರ್ಚಯತ್ಯದ್ಧಾ ಬಹಿರಂತರಸತ್ಸು ಚ । ಅಸತಾಮುಪಚಾರೋ ಹರಿದೃಷ್ಟ್ಯೈತತ್ಪೂಜನಮ್ । ತಸ್ಮಾದ್ಭೋಗಮನಾಯೇತಿ ಶ್ರುತಿರಾಹಾಖಿಲಕ್ರಿಯಮ್'

-ತಂತ್ರಭಾಗವತ (ಭಾಗ. ತಾ. ನಿ. 10-94-20)

2 'ನಿ ಷು ಸೀದ ಗಣಪತೇ ಗಣೇಷು. ಮಹಾಮರ್ಕಂ ಮಘವನ್ ಚಿತ್ರಮರ್ಚ'

-ಋ. ವೇ 10 112-9

ಹೇ ಜೀವಗಣಾನಾಂ ಪತೇ ಜೀವಸ್ಯೇಂದ್ರಿಯಗಣೇಷು ನಿಷುಸೀದ ನಿಯಾಮಕತಯಾ ಸುಖೇನ ನಿಷೀದ। . ಅತಃ ಹೇ ಮಘವನ್ ಯಜ್ಞಸ್ವಾಮಿನ್ ಮಹಾಂತಮರ್ಚನೀಯಂ ಸರ್ವಾಶ್ಚರ್ಯಮಯಂ ತ್ವಾಂ ತ್ವಮೇವಾರ್ಚ।

-ಬ. ಗೋ. (ಭಾಗ. ತಾ. ಟೀ.)

3 'ಮಹತಿ ಮಹೀಯಸೇ. '

-ಭಾಗ 10-94-38

ಮಹಸಿ ಮಹೀಯಸೇ ಪೂಜಯಸಿ ಪೂಜ್ಯತೇ ಚಾತ್ಮನೈವ ।

– ಭಾಗ. ತಾ. ನಿ.

4 ಸ್ವವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಮ್ । ಏವಂ ಪೂಜಾ ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪಿ—ಪ್ರವೃತ್ತ (ಗೀ. ತಾ. 5-12)

‘ನನ್ನಲ್ಲಿ, ನನ್ನ ಇಂದ್ರಿಯಗಳಲ್ಲಿ ವ್ಯಾಪಿಸಿಕೊಂಡಿರುವ ಸ್ವತಂತ್ರನಾದ ಶ್ರೀಹರಿಯೇ ಸ್ವೇಚ್ಛಾನುಸಾರವಾಗಿ ನನ್ನನ್ನು ನಡೆಸುವನು ನನ್ನ ಮನಸ್ಸು, ವಾಗಿಂದ್ರಿಯ ಹಾಗೂ ದೇಹಗಳ ವೃತ್ತಿಗಳು ಅವನ ಪೂಜಾ ರೂಪದಲ್ಲಿವೆ– ಹೀಗ ನಮ್ಮ ಸಕಲ ಕರ್ಮಗಳ ಕರ್ತಾರನೂ, ಆ ಕರ್ಮಗಳ ಉದ್ದೇಶ್ಯನೂ ಶ್ರೀಹರಿಯೇ ಎಂಬುದಾಗಿ ಅನುಸಂಧಾನಮಾಡಿಕೊಳ್ಳಬೇಕೆಂದು ‘ಯೋಗದೀಪಿಕಾ’ ಸಂದೇಶಿಸಿದೆ[1]

ಹೀಗೆ ಭಗವಂತನು ಇನ್ನೊಬ್ಬರ ಮೂಲಕ ತನ್ನನ್ನು ತಾನೇ ಆರಾಧಿಸಿಕೊಳ್ಳುವುದಲ್ಲದೆ, ಅವತಾರಗಳಲ್ಲಿ ತನ್ನದ್ದೇ ಆದ ಒಂದು ಅವತಾರದಿಂದ ತನ್ನದ್ದೇ ಆದ ಮತ್ತೊಂದು ಅವತಾರವನ್ನು ಸತ್ಕರಿಸುವುದಿದೆ. ಹೀಗೆಯೇ ಶ್ರೀಕೃಷ್ಣನು ಪರಶುರಾಮನನ್ನು ನಮಿಸಿರುವನು ಶ್ರೀಕೃಷ್ಣ ಮತ್ತು ಪರಶುರಾಮರಿಬ್ಬರೂ ಭಗವಂತನ ಅತ್ಯಂತಾಭಿನ್ನ ಅವತಾರಗಳಾದರೂ ಅಯೋಗ್ಯರಿಗೆ ಮೋಹವನ್ನುಂಟು ಮಾಡುವುದಕ್ಕಾಗಿಯಷ್ಟೇ ಒಂದು ರೂಪದ ಮೂಲಕ ಮತ್ತೊಂದು ರೂಪಕ್ಕೆ ಸತ್ಕಾರವನ್ನು ನೀಡಲಾಗಿದೆ[2]

೪ ಸಜ್ಜನರ ಯೋಗ ಕ್ಷೇಮಾದಿಗಳನ್ನು ನಿರ್ವಹಿಸುವವನು.[3]

೫ ಸತ್ಯ ಪ್ರಪಂಚವನ್ನು ನಿರ್ಮಿಸಿರುವವನು[4]

---

1 ‘ಮಯಿ ಸ್ಥಿತೋ ಮದಂಗೇಷು ಸ್ವತಂತ್ರೋ ವ್ಯಾಪ್ತವಾನ್ ಹರಿಃ । ಸರ್ವಶಃ ಸ್ವಾತ್ಮತಂತ್ರೋ ಮಾಂ ಸ್ವೇಚ್ಛಯಾ ವರ್ತಯತ್ಯಜಃ । ಸ್ವಾತ್ಮನಸ್ತಸ್ಯ ಪೂಜಾಃ ಸ್ಯುರ್ಮನೋ-ವಾಕ್ಕಾಯವೃತ್ತಯಃ । ಮನ್ಮ್ಯತಾ ಇತಿ ಕರ್ತಾರಮುದ್ದೇಶ್ಯಂ ಚ ಹರಿಂ ಸ್ಮರೇತ್’

–ಯೋಗ ದೀಪಿಕಾ

2 ‘ಸರ್ವಾವತಾರಾಭಿನ್ನೋಽಪಿ ಸಮಶಕ್ತಿರಪಿ ಸ್ವಯಮ್ । ಪೂಜ್ಯಪೂಜಕನೀಚೋಚ್ಚಂ ಮೋಹನಾಯ ದುರಾತ್ಮನಾಮ್। ಅಖಂಡೈಕರಸೋ ವಿಷ್ಣುರ್ದರ್ಶಯೇತ್ತತ್ರ ತತ್ರ ಹಿ’

–ಷಾಡ್ಗುಣ್ಯ (ಭಾಗ. ತಾ ನಿ. 10-52-4)

೪ 3 ಸತಾಂ ಯೋಗಕ್ಷೇಮಾದಿವಹನಾತ್ ಸತ್ಕರ್ತಾ ।

–ವಿ. ರಾ.

೫ 4 ಸತಃ ಪ್ರಪಂಚಸ್ಯ ಕರ್ತಾ ।

–ವಿ. ರಾ.

ಭಗವಂತನು ಯಾವ ಜಗತ್ತನ್ನು ಸೃಷ್ಟಿಸಿರುವನೋ ಅದು ಸತ್ಯವೇ ಹೊರತು ನಿರರ್ಥಕವಾದುದಲ್ಲ—ಎಂದು ಶ್ರುತಿಯು ದಾರ್ಢ್ಯಪೂರ್ವಕವಾಗಿ ಘೋಷಿಸುತ್ತಿದೆ[1]

೭ ಕ್ಲೇಶಾದಿ ರಹಿತನಾದವನು ಮತ್ತು (ಸಕಲ) ಕರ್ತೃ[2].

ಪುರುಷನಿಂದ ತಲಗೂದಲು, ರೋಮಗಳು ಹೇಗೆ ಅನಾಯಾಸವಾಗಿ ಹುಟ್ಟಿಕೊಳ್ಳುವವೋ ಅಂತೆಯೇ ಅಕ್ಷರನಾಮಕ ಭಗವಂತನಿಂದ ಅನಾಯಾಸವಾಗಿ ಈ ಜಗತ್ತು ಸೃಷ್ಟವಾಗಿದೆ—ಎಂದು ಉಪನಿಷತ್ತು ಸಂದೇಶಿಸಿದೆ[3]

೭ ನಾಶಾದಿಯುಕ್ತರಾದ ದೈತ್ಯರನ್ನು ದಂಡಿಸುವವನು[4].

೮ (ಜಗತ್ತನ್ನು) ಸೃಷ್ಟಿಸುವವನು[5]

೯ (ಜಗತ್ತನ್ನು) ಬದುಕಿಸುವವನು[6]

---

1 'ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ '
-ಮ ಭಾರ.ತಾ ನಿ 1-67

೭ 2 ಸನ್ ಕ್ಲೇಶಾದಿರಹಿತಃ ಕರ್ತಾ ।
-ವಿ ರಾ.

3 'ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾಽಕ್ಷರಾತ್ ಸಂಭವತೀಹ ವಿಶ್ವಮ್'
-ಅಥ. ಉ. 1-8

೭ 4 ಸತಾಂ ಸದ್‌ಲ್ ವಿಶರಣಗತ್ಯವಸಾದನೇಷು ಇತಿ ಧಾತೋಃ ವಿಶರಣಾದಿಯುಕ್ತಾನಾಂ ದೈತ್ಯಾನಾಂ ಕರ್ತಾ ಹಿಂಸಕಃ । ('ಕೃಞ್‌ಹಿಂಸಾಯಾಂ')
-ಸ. ಸಂ.

೮ 5 'ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ' (ಗೀ.17-26) ಇತ್ಯುಕ್ತದಿಶಾ ಜಗತಃ ಸತ್ ಸದ್ಭಾವಂ ಉತ್ಪತ್ತಿಂ ಕರೋತೀತಿ ಸತ್ಕರ್ತಾ ।

೯ 6 ಸತ್ ಸತ್ತ್ವಂ ಜೀವನಂ ಕರೋತೀತಿ ಸತ್ಕರ್ತಾ । ಬ್ರಹ್ಮಣಃ ಸತ್ಯಶಬ್ದಾರ್ಥಸಮನ್ವಯ ಸಂದರ್ಭೇ'...ಸತ್ತ್ವಂ ಜೀವನಮೇವ ಚ' (ಅ. ನ್ಯಾ. 1-1-190) ಇತಿ ಜೀವನಮಪಿ ಸಚ್ಛಬ್ದಾರ್ಥತಯಾಽಭ್ಯುಪಗತಮ್ ।

೧೦ (ಪ್ರಳಯ ಕಾಲದಲ್ಲಿ ಜಗತ್ತನ್ನು) ಸಂಹರಿಸುವವನು[1]

೧೧ (ಯೋಗ್ಯರನ್ನು) ಜ್ಞಾನಿಗಳನ್ನಾಗಿ ಸಿದ್ಧಪಡಿಸುವವನು[2]

ಅಜ್ಞಾನಿಗಳಿಗೆ ಜ್ಞಾನವನ್ನಿತ್ತು ಜ್ಞಾನಿಗಳನ್ನಾಗಿಸುವವನು ಭಗವಂತನು. ಅಗ್ನಿನಾಮಕ ಭಗವಂತನು ಜ್ಞಾನದಾನಮಾಡಿ ಋಷಿಗಳನ್ನಾಗಿಸುವವನೆಂದು ಋಗ್ವೇದ ಬೋಧಿಸಿದೆ[3]

೧೨ (ಸಾತ್ವಿಕರನ್ನು) ನಿರ್ದುಷ್ಟರನ್ನಾಗಿಸುವವನು[4]

ಭಗವಂತನು ಅವಿದ್ಯಾತ್ಮಕವರ್ಣಾದಿ ದೋಷಗಳನ್ನು ದೂರೀಕರಿಸಿ, ಸಾತ್ವಿಕರನ್ನು ಸಾಮಾನ್ಯತಃ ನಿರ್ದುಷ್ಟರನ್ನಾಗಿಸುವನು, ಮುಕ್ತರನ್ನಾಗಿಸುವನು

೧೩ ಜೀವಸಮೂಹದಲ್ಲೇ ಪೂರ್ಣನಾದ ಮುಖ್ಯಪ್ರಾಣನನ್ನು ಸೃಷ್ಟಿಸುವವನು[5]

---

೧೦ 1 ಸತಃ ಸಾದಸ್ಯ ವಿನಾಶಸ್ಯ ಕರ್ತಾ ಸತ್ಕರ್ತಾ । ಸತ್ಯಶಬ್ದಾರ್ಥವ್ಯಾಖ್ಯಾನ ಸಂದರ್ಭೇ (ಅ ವ್ಯಾ. 1-1-190) 'ವಿಶೀರ್ಣತಾ ಚ ಸತ್ತ್ವಂ ಸ್ಯಾತ್ ಸನ್ನಮಿತ್ಯಾಹುರೇವ ಯತ್' –ಇತಿ ಸಚ್ಛಬ್ದಸ್ಯ ವಿನಾಶಾರ್ಥಕತ್ವಂ ಪ್ರದರ್ಶಿತಮ್ ।

೧೧ 2 '...ಸನ್ ಪಂಡಿತಃ ಕವಿಃ .' ಇತಿ ಸಚ್ಛಬ್ದಸ್ಯ ಜ್ಞಾನಿಪರ್ಯಾಯವಾಚಕೇಷು ಪಾಠಾತ್ ಸತಾಂ ಜ್ಞಾನಿನಾಂ ಕರ್ತಾ ಸತ್ಕರ್ತಾ ।

3 '...ಋಷಿಕೃನ್ಮರ್ತ್ಯಾನಾಮ್'

–ಋ. 31-16

.. ಋಷೀಣಾಂ ಕರ್ತಾ ತಥಾ ಜ್ಞಾನದಾನೇನ ದೇವ ।

–ಋ. ಭಾ.

೧೨ 4 ಸಾತ್ತ್ವಿಕಾನಾಂ ಸತ್ ಸಾಧುತ್ವಂ ಕರೋತೀತಿ ಸತ್ಕರ್ತಾ । '. ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ' (ಗೀ. 17–26) ಸಾಧುತ್ವಂ ಚ ನಿರ್ದುಷ್ಟತ್ವಮೇವ ।

೧೩ 5 '....ಸದ್ ವಾವ ಪ್ರಾಣಾಃ' ಇತಿ ಪೈಂಗಿಶ್ರುತೇಃ (ಬ್ರ. ಸೂ. ಭಾ. 2–3–9) ಸನ್ ಮುಖ್ಯಪ್ರಾಣಃ । ತಂ ಕರೋತಿ ಸೃಜತೀತಿ ಸತ್ಕರ್ತಾ ।

ಜೀವಸಮೂಹದಲ್ಲೇ ಪೂರ್ಣನಾಗಿರುವ ಪ್ರಯುಕ್ತ 'ಸತ್' ಎನಿಸಿರುವವನು ಪ್ರಾಣದೇವನು[1] ಅವನನ್ನು ಜೀವೋತ್ತಮನಾಗುವಂತೆ ಸೃಷ್ಟಿಸಿರುವವನು ಭಗವಂತನು

೧೪ ವ್ಯಕ್ತಗಳೆನಿಸಿರುವ ತೇಜಸ್ಸು, ಪೃಥಿವೀ ಹಾಗೂ ಜಲವನ್ನು ಸೃಷ್ಟಿಸಿರುವವನು.[2]

೧೫ (ಆಯಾಯ ಕಾರ್ಯದಲ್ಲಿ ಸಮರ್ಥವಾದ ಪದಾರ್ಥವನ್ನು) ಸಮರ್ಥವಾಗುವಂತೆ ಮಾಡಿರುವವನು[3]

ಭಗವಂತನು ಪ್ರತಿಯೊಂದು ಪದಾರ್ಥದಲ್ಲೂ ಇದ್ದುಕೊಂಡು, ಅದರಲ್ಲಿ ಶಕ್ತಿಯನ್ನು ಪ್ರೇರಿಸಿ ಕಾರ್ಯದ ರಚನೆಯಲ್ಲಿ ಸಮರ್ಥವನ್ನಾಗಿ ಮಾಡಿ, ಅದರ ಮೂಲಕ ಕಾರ್ಯವನ್ನು ನಡೆಸುವನು ಎಂದು ವಾಮನ ಸಂದೇಶಿಸಿದೆ[4]

## ಜಿಜ್ಞಾಸೆ

[ಭ್ರಮಗಳ ಅನಾದಿ ಪ್ರವಾಹ]

ಪ್ರ - ಪರಮಾತ್ಮನು ಒಬ್ಬನೇ ಸ್ವತಂತ್ರಕರ್ತನಾದ್ದರಿಂದ ಅವನಿಗೆ ಸತ್‌ಕರ್ತಾ ಎಂದು ಹೆಸರು ಎಂದು ಹೇಳುವದಾದರೆ ನಾವು ಕೆಲವು ಕಾರ್ಯಗಳ ವಿಷಯದಲ್ಲಿ ಸ್ವತಂತ್ರಕರ್ತರು ಎಂದು ತಿಳಿಯುವದು ಹೇಗೆ? ಈ ಜ್ಞಾನವು ಭ್ರಮ ಎಂದು ಸಮಾಧಾನವು ಯುಕ್ತ ಕಾಣುವದಿಲ್ಲ. ಭ್ರಮಕ್ಕೆ ಕಾರಣ ಪ್ರಧಾನದ ಜ್ಞಾನ ಅಂತಹ ಪ್ರಧಾನವು ಪರಮಾತ್ಮರೂಪ ಸ್ವತಂತ್ರಕರ್ತಾ ಒಬ್ಬನೇ ಅವನ ಜ್ಞಾನವು ನಮಗೆ ಇಲ್ಲ ಆದುದರಿಂದ ಪ್ರಧಾನದ ಜ್ಞಾನವೂ ಇಲ್ಲದೆ ಭ್ರಮವು ಹುಟ್ಟುವದೆಂದು ಹೇಳಬೇಕಾಯಿತಲ್ಲ?

ಉ - ಪೂರ್ವಪೂರ್ವಸ್ವತಂತ್ರಕರ್ತೃಭ್ರಮದಿಂದ ಉತ್ತರೋತ್ತರ ಸ್ವತಂತ್ರಕರ್ತೃಭ್ರಮವು ಉಂಟಾಗುತ್ತಾ ಇದೆ ಈ ಪ್ರವಾಹವು ಅನಾದಿ ಈ ರೀತಿ ಭ್ರಮವು ಉಂಟಾಗುವುದಕ್ಕೆ ಪರಮಾತ್ಮನೆಂಬ ಸ್ವತಂತ್ರ ಕರ್ತನ ಜ್ಞಾನವು ಬೇಕಾಗಿಲ್ಲ ಪ್ರಧಾನ ಜ್ಞಾನವು ಇಲ್ಲದೆ

---

1 ವಾಯುಃ ಸದಿತಿ ಸಂಪ್ರೋಕ್ತೋ ಜೀವೇಷು ತು ಸುಪೂರ್ಣತಃ
-ಐ. ಉ. ಭಾ.1-4-13

೧೪ 2 'ಸದಿತಿ ವ್ಯಕ್ತಮುದ್ದಿಷ್ಟಂ.' ಇತ್ಯುಕ್ತದಿಶಾ ಸತ್ ತೇಜಃಪೃಥ್ವೀಜಲಾತ್ಮಕಂ ವ್ಯಕ್ತಂ ಕರೋತಿ ಸೃಜತೀತಿ ಸತ್ಕರ್ತಾ ।

೧೫ 3 . ಸತ್ ಸಮರ್ಥಂ ಪ್ರಕೀರ್ತಿತಮ್'' (ಭಾಗ. ತಾ. ನಿ 11-28-9) ಇತ್ಯುಕ್ತದಿಶಾ ಸತ್ ಸ್ವಸ್ವಕಾರ್ಯೇಷು ಕಾರಣಂ ಸಮರ್ಥಂ ಕರೋತೀತಿ ಸತ್ಕರ್ತಾ ।

4 'ತತ್ರ ತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತೀಃ ಪ್ರಬೋಧಯನ್ ।
ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ' ॥
-ವಾಮನ (ಬ್ರ. ಸೂ. ಭಾ. 2-3-11)

ಭ್ರಮವು ಉಂಟಾಗುವ ಪ್ರಸಂಗವೂ ಇಲ್ಲ ಪ್ರಧಾನವು ಭ್ರಮಕ್ಕೆ ಕಾರಣವಲ್ಲ ಆದರ ಜ್ಞಾನವು ಕಾರಣ ಜ್ಞಾನಜನ್ಯ ಕಾರ್ಯಗಳು ಭ್ರಮದಿಂದಲೂ ಆಗುವವು ಸರ್ಪಭ್ರಮದಿಂದಲೂ ಭಯವು ಬರುವದು ಕಂಡಿದೆ ಈ ಭ್ರಮ ಪರಂಪರೆಯು ಅನಾದಿಯಾಗಿ ಇರುವದು ಪ್ರಾಮಾಣಿಕವಾದುದರಿಂದ ಅನವಸ್ಥಾದೋಷವು ಇಲ್ಲ.



## ೨೪೨ ಸತ್ಕೃತಃ (ಸತ್ಕೃತಿಃ)

೧ ಎಲ್ಲರಿಂದಲೂ ಸರ್ವದಾ ಪೂಜಿಸಲ್ಪಡುವವನು.[1]

ಶ್ರೀ ಕೃಷ್ಣನು ಮೂರು ಲೋಕಗಳಿಗೂ ಪೂಜ್ಯತಮನಾದವನೆಂಬುದು ತನಗೆ ಚೆನ್ನಾಗಿ ತಿಳಿದಿದೆ ಎಂದು ದುರ್ಯೋಧನನೇ ಒಪ್ಪಿಕೊಂಡಿರುವನು[2] ಲೋಕದಲ್ಲಿ ಪೂಜ್ಯರಾದ ಲಕ್ಷ್ಮೀ ಬ್ರಹ್ಮಾದಿಗಳಿಂದಲೂ ಪೂಜಿಸಲ್ಪಡುವವನು ಭಗವಂತನು ಇತರರಿಗೆ ಪೂಜೆಯನ್ನು ಸಲ್ಲಿಸುವಾಗಲೂ ಪ್ರಧಾನವಾಗಿ ಪೂಜಿಸಲ್ಪಡುವವನು ಅವರ ಅಂತರ್ಯಾಮಿಯಾಗಿರುವ ಭಗವಂತನೇ ಆದ್ದರಿಂದಲೇ ನರನಾರಾಯಣರು ನಾರದರಿಗೆ ಹೀಗೆ ಸಂದೇಶಿಸಿರುವರು—'ಯಾರು ಪಿತೃಗಳನ್ನಾಗಲೀ, ದೇವತೆಗಳನ್ನಾಗಲೀ, ಗುರುಗಳನ್ನಾಗಲೀ, ಅತಿಥಿಗಳನ್ನಾಗಲೀ, ಹಸುಗಳನ್ನಾಗಲೀ, ಬ್ರಾಹ್ಮಣ ಶ್ರೇಷ್ಠರನ್ನಾಗಲೀ, ಪೃಥಿವಿಯನ್ನಾಗಲೀ, ತಾಯಿಯನ್ನಾಗಲೀ ತ್ರಿಕರಣಗಳಿಂದ ಪೂಜಿಸುವರೋ—ಅವರು ಶ್ರೀ ವಿಷ್ಣುವನ್ನೇ ಪೂಜಿಸುವರು ಯಾಕೆಂದರೆ ಎಲ್ಲರ ಶರೀರದೊಳಗೆ ಆ ವಿಷ್ಣುವೇ ಅಂತರ್ಯಾಮಿಯಾಗಿ ಇರುವನು[3]' ಪ್ರಾಜ್ಞರು ಗೌರವಸೂಚಕವಾಗಿ ಎದ್ದು ನಿಲ್ಲುವುದು.

---

೧ 1 ಸರ್ವೈರಪಿ ಪೂಜಿತ ಇತಿ ಸತ್ಕೃತಃ । ಅಸಾಧಾರಣ್ಯೇನ ವ್ಯಪದೇಶಃ । 'ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ' (ಗೀ 11-32) ಇತ್ಯತ್ರ ಸ್ಥಿತಃ ಪ್ರವೃದ್ಧಶಬ್ದಃ ಯಥಾ ಸಾರ್ವಕಾಲಿಕತ್ವಾರ್ಥಕಕ್ತಪ್ರತ್ಯಯಾಂತತಯಾ ವ್ಯಾಖ್ಯಾತಸ್ತಥಾತ್ರಾಪಿ ಕ್ತಪ್ರತ್ಯಯಸ್ಯ ಸಾರ್ವಕಾಲಿಕತ್ವಮೇವಾರ್ಥಃ ।

2 ಸ ಹಿ ಪೂಜ್ಯತಮೋ ಲೋಕೇ ಕೃಷ್ಣಃ ಪೃಥುಲಲೋಚನಃ ।
ತ್ರಯಾಣಾಮಪಿ ಲೋಕಾನಾಂ ವಿದಿತಂ ಮಮ ಸರ್ವಥಾ ॥
–ಮ. ಭಾರ. ಉದ್ಯೋಗ. 88-5

3 ಯೇ ಯಜಂತಿ ಪಿತೄನ್ ದೇವಾನ್ ಗುರೂಂಶ್ಚೈವಾತಿಥೀಂಸ್ತಥಾ ।
ಗಾಶ್ಚೈವ ದ್ವಿಜಮುಖ್ಯಾಂಶ್ಚ ಪೃಥಿವೀಂ ಮಾತರಂ ತಥಾ ॥ 231
ಕರ್ಮಣಾ ಮನಸಾ ವಾಚಾ ವಿಷ್ಣುಮೇವ ಯಜಂತಿ ತೇ ।
ಅಂತರ್ಗತಃ ಸ ಭಗವಾನ್ಸರ್ವಸತ್ತ್ವಶರೀರಗಃ ॥
–ಮ. ಭಾರ. ಶಾಂತಿ. 345-27

ವಿನಯ ಪ್ರದರ್ಶನ, ನಮಿಸುವುದು—ಮೊದಲಾದವುಗಳನ್ನು ಗುಹಾಶಯನಾದ ಅಂತರ್ಯಾಮಿ ಪರಮಪುರುಷನನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಪರಸ್ಪರವಾಗಿ ನಡೆಸುವರು ಹೊರತು ಬರೀ ದೇಹಾಭಿಮಾನಿ ಜೀವಾತ್ಮನಿಗೆ ಗೌರವ ಸಲ್ಲಿಸುವುದು ಅವರ ಉದ್ದೇಶವಾಗಿ ಇರುವುದಿಲ್ಲ[1]—ಎಂಬುದಾಗಿ ರುದ್ರದೇವ ದಾಕ್ಷಾಯಣಿಗೆ ನೀಡಿದ ಈ ಸಂದೇಶವೂ ಮುಖ್ಯವಾಗಿ ಸತ್ಕೃತನಾಗುವವನು ಭಗವಂತನೇ ಎಂದು ಸೂಚಿಸುತ್ತಿದೆ

ರಮಾಬ್ರಹ್ಮಾದಿಗಳ ಮೂಲಕ ನಡೆಯುವ ಭಗವಂತನ ಪೂಜೆಯನ್ನೂ ಮುಖ್ಯವಾಗಿ ಅವನೇ ನಡೆಸುವ ಪ್ರಯುಕ್ತ ಪ್ರಧಾನವಾಗಿ ಅವನು ತನ್ನಿಂದಲೇ ಪೂಜಿತನಾಗಿರುವನೆಂಬ ಅಭಿಪ್ರಾಯದಲ್ಲಿ ಶ್ರುತಿ ಗೀತೆಯು ಅವನನ್ನು 'ಸ್ವಸತ್ಕೃತ' ಎಂದು ಉಲ್ಲೇಖಿಸಿದೆ[2]

೨ ಸಜ್ಜನರಿಂದ ಆದರಿಸಲ್ಪಡುವವನು[3]

ಭಗವಂತನು ಸರ್ವಸ್ವಾಮಿ ಆದರೂ, ಇದನ್ನು ವಿಶ್ಲೇಷಿಸಿಕೊಂಡು ಅವನಿಗೆ ಆದರ ಸಲ್ಲಿಸ, ಪವರು ಸಜ್ಜನರು ಮಾತ್ರ ಪಾಪಿಷ್ಠರಾದವರಿಗೆ ಒಂದು ನಿಮಿಷವಾಗಲೀ, ಅರ್ಧನಿಮಿಷವಾಗಲೀ ಒಂದು ಮುಹೂರ್ತವಾಗಲೀ,—ಭಗವಂತನಲ್ಲಿ ಭಕ್ತಿ ಉಂಟಾಗಲಾರದು.[4]

---

1 ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ ವಿಧೀಯತೇ ಸಾಧು ಮಿಥಸ್ಸುಮಧ್ಯಮೇ ।
ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ ಗುಹಾಶಯಾಯೈವ ನ ದೇಹಮಾನಿನೇ ॥
-ಭಾಗ. 4-3-22

2 'ಪ್ರಕ್ರಮವತ್ ಸ್ವಸತ್ಕೃತವತ್ ಪುರುಷೇಷು ಧೀಷು ತು ಬಹಿರಂತರಸಜ್ಚರಣೇ ।'
-ಭಾಗ. 10 94-20

'ಸರ್ವಪುರುಷೇಷು ಸರ್ವಧೀಷು ಚ ಸ್ಥಿತ್ವಾ ಶ್ರೀಬ್ರಹ್ಮಾದಿಷು ಪ್ರಕರ್ಷೇಣ ಕ್ರಮೇಣ ಸ್ವಾತ್ಮನೈವ ಸತ್ಕೃತಮ್' ।
-ಭಾಗ. ತಾ ನಿ.

೨ 3 ಸದ್ಭಿರಾದೃತತ್ವಾತ್ ಸತ್ಕೃತಃ ।
-ವಿ. ರಾ.

4 ನಿಮಿಷಂ ನಿಮಿಷಾರ್ಧಂ ವಾ ಮುಹೂರ್ತಮಪಿ ಭಾರ್ಗವ ।
ನಾದಗ್ಧಾಶೇಷಪಾಪಾನಾಂ ಭಕ್ತಿರ್ಭವತಿ ಕೇಶವೇ ॥
-ಕೃ. ಮು. 75

೩ ಸತ್ಯವಾದ ಕರ್ಮ ಉಳ್ಳವನು.[1]

ಸರ್ವೋತ್ತಮನಾದ ಪಾರಮಾರ್ಥಿಕ ಸತ್ಯನಾದ ಭಗವಂತನ ಜಗತ್ಸೃಷ್ಟೃತ್ವ, ಪಾಲಕತ್ವಾದಿ ಕರ್ಮಗಳೂ ಪಾರಮಾರ್ಥಿಕ ಸತ್ಯಗಳು—ಎಂದು ಶ್ರುತಿ ಸಂದೇಶಿಸಿದೆ[2]

೪ ಸಜ್ಜನರಿಂದ ಧ್ಯಾನಿಸಲ್ಪಡುವವನು[3]

‘ಭಗವಂತನನ್ನು ಎಂದೂ ಮರೆಯಬೇಡಿರಿ’[4]—ಎಂಬ ವಿಧಿಗನುಗುಣವಾಗಿ ಸಜ್ಜನರು ಯಾವಾಗಲೂ ಭಗವಂತನನ್ನು ಸ್ಮರಿಸಿಕೊಳ್ಳುತ್ತಲೇ ಇರುವರು.

೫ ಪ್ರಶಸ್ತಗಳಾದ ಕರ್ಮಗಳನ್ನು ಮಾಡುವವನು[5]

೬ ಸತ್ಯವಾದ ಜಗತ್ತನ್ನು ಸೃಷ್ಟಿಸುವವನು.[6]

---

೩ 1 ಸತ್ ಸತ್ಯಂ ಕೃತಂ ಕರ್ಮ ಯಸ್ಯ ಸಃ ಸತ್ಕೃತಃ ।

-ವಿ ರಾ.

2 ಪ್ರಭ್ವಾನ್ಯಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಮ್ ।

-ಮ ಭಾರ. ತಾ ನಿ 1 66

೪ 3 ಸದ್ಭಿಃ ಕೃತಃ ಧ್ಯಾತ ಇತಿಃ । ‘ಅವಿದ್ಯಮಾನರಚನಂ ವಿದ್ಯಮಾನಸ್ಕೃತಿಸ್ತಥಾ । ಉಭಯಂ ರಚನಂ ಪ್ರೋಕ್ತಂ ಪೂರ್ವಸಿದ್ಧೇಷು ತು ಸ್ಕೃತಿಃ’ ಇತಿ ಶಬ್ದನಿರ್ಣಯಃ (ಭಾಗ. ತಾ. ನಿ. 3-16-42)

4 ‘. ನ ವಿಸ್ಮರೇತಾಽತ್ಮಾನಂ .’

-ಬ್ರ ಸೂ ಭಾ. 3-4-18

೫ 5 ಸಂತಿ ಪ್ರಶಸ್ತಕರ್ಮಾಣಿ ಕೃತಾನಿ ಯೇನ ಸಃ ಸತ್ಕೃತಃ ।

೬ 6 ಸನ್ ಪ್ರಪಂಚಃ ಕೃತಃ ಯೇನ ಸಃ ಸತ್ಕೃತಃ ಅಥವಾ ಸನ್ ಸತ್ತ್ವಂ (ಭಾವಪ್ರಧಾನನಿರ್ದೇಶಃ) ಸದ್ಭಾವಃ ಜಗತಾಂ ಸೃಷ್ಟಿಃ ಕೃತಂ ಯೇನ ಸಃ ಸತ್ಕೃತಃ ।

೭ ಮುಕ್ತಾತ್ಮರಿಗೆ ನಿರ್ದುಷ್ಟತ್ವವನ್ನು ಅನುಗ್ರಹಿಸುವವನು[1]

೮ ಲಕ್ಷ್ಮೀದೇವಿ ಹಾಗೂ ಮುಕ್ತಾತ್ಮರಿಗೆ ಮುಕ್ತಿ ನೀಡಿ ಅನುಗ್ರಹಿಸುವವನು.[2]

ನಿತ್ಯಮುಕ್ತಳಾದ ಲಕ್ಷ್ಮೀದೇವಿಯು ನಿತ್ಯಮುಕ್ತಳಾಗುವಂತೆ ಭಗವಂತನೇ ಅನುಗ್ರಹಿಸಿರುವವನು[3] ಮುಕ್ತಾತ್ಮರಿಗೆ ಮುಕ್ತಿಯನ್ನು ಅವನೇ ನೀಡಿರುವವನು

೯ ಮುಖ್ಯಪ್ರಾಣನನ್ನು ಸಾಕ್ಷಾತ್ ಪುತ್ರನನ್ನಾಗಿ ಸೃಷ್ಟಿಸಿರುವವನು.[4]

೧೦ ವ್ಯಕ್ತಗಳಾದ ತೇಜಸ್ಸು, ಪೃಥಿವೀ, ಹಾಗೂ ಜಲವನ್ನು ಸೃಷ್ಟಿಸಿರುವವನು[5]

---

೭ 1 ಸನ್ ಸತ್ತ್ವಂ (ಭಾವಪ್ರಧಾನ ನಿರ್ದೇಶಃ) ಸಾಧುಭಾವಃ ಮುಕ್ತಾತ್ಮನಾಂ ಅವಿದ್ಯಾಕಾಮಾದಿದೋಷದೂರತ್ವಂ ಕೃತಂ ಯೇನ ಸಃ ಸತ್ಕೃತಃ ।
ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ।
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥
–ಗೀ 17–26

೮ 2 'ಸದಿತ್ಯಮೃತಥವರ್ಮಾಣೋ ಮುಕ್ತಾಃ ಶ್ರೀರಪಿ ಚೇರಿತಾಃ' (ಛಾಂ ಉ. ಭಾ 8-1-7) ಇತ್ಯುಕ್ತದಿಶಾ ಸಂತಃ ಮುಕ್ತಾಃ ಶ್ರೀಶ್ಚ ಕೃತಂ ಯೇನ ಸಃ ಸತ್ಕೃತಃ । ಮುಕ್ತಾನಾಂ ಶ್ರಿಯಶ್ಚ ಕರಣಂ 'ಸೃಷ್ಟಿತ್ವಂ ದೇವಾನಾಂ ಮುಕ್ತಿಸೃಷ್ಟಿತ್ವಮುಚ್ಯತೇ ನಾನ್ಯತ್' (ಮ ಭಾರ. ತಾ ನಿ. 2–64) ಇತ್ಯುಕ್ತದಿಶಾ ಮುಕ್ತಾನಾಂ ಮುಕ್ತಿಪ್ರದಾನಂ, ಶ್ರೀಃ ನಿತ್ಯಮುಕ್ತಾ ಯಥಾ ಭವತಿ ತಥಾ ತಸ್ಯಾ ಅನುಗ್ರಹಕರಣಂ ಅಭಿಪ್ರೇತಮ್ ।

3 ಹರೇಃ ಪ್ರಸಾದಸಾಮರ್ಥ್ಯಾದಜರಾ ಚಾಮರಾ ಹ್ಯಹಮ್ । ಅನಾದಿಕಾಲಸಂಬಂಧಾದಿತ್ಯಾಹ ಹರಾ ರಮಾ ।
–ಛಾಂ. ಉ ಭಾ. 3-3.2

೯ 4 ಸತ್ ಪ್ರಾಣಃ । 'ಸದಿತಿ ಪ್ರಾಣಃ' ಇತಿ ಶ್ರುತೇಃ (ಭಾಗ. ತಾ. ನಿ. 2-1–41) ಇತ್ಯುಕ್ತದಿಶಾ ಸನ್ ಮುಖ್ಯಪ್ರಾಣಃ ಕೃತಃ ಸಾಕ್ಷಾತ್ಪುತ್ರತ್ವೇನ ಸೃಷ್ಟಃ ಯೇನ ಸಃ ಸತ್ಕೃತಃ ।

೧೦ 5 'ಸದಿತಿ ವ್ಯಕ್ತಮುದ್ದಿಷ್ಟಂ ' (ಭಾಗ. ತಾ. ನಿ. 2-6-32) ತತ್ ಕೃತಂ ಯೇನ ಸಃ ಸತ್ಕೃತಃ ।

೧೧ (ಪದಾರ್ಥವನ್ನು ತನ್ನ ತನ್ನ ಕಾರ್ಯದಲ್ಲಿ)ಸಮರ್ಥವಾದುದನ್ನಾಗಿ ರಚಿಸಿರುವವನು[1]

೧೨ ಮುಮುಕ್ಷುಗಳಿಂದ ಹೊಂದಲ್ಪಡುವ ಪ್ರಯುಕ್ತ 'ಸತ್' ಎನಿಸುವ ವಾಸುದೇವ ರೂಪದ ಸೃಷ್ಟಿಗೆ ಕಾರಣನಾದವನು[2]

ಮೂಲರೂಪಿ ಭಗವಂತನಿಂದ ಸನ್ನಾಮಕ ಬಗವಂತನು ಪ್ರಾದುರ್ಭವಿಸಿದನೆಂದು ತೈತ್ತಿರೀಯೋಪನಿಷತ್ತು ಸಂದೇಶಿಸಿದೆ[3]

೧೩ ಸಂಕರ್ಷಣಪ್ರದ್ಯುಮ್ನಾದಿ ನಿರ್ದಿಷ್ಟಗಳಾದ ರೂಪಗಳ ಅಭಿವ್ಯಕ್ತಿಗೆ ಕಾರಣನಾಗಿರುವವನು.[4]

ವಾಸುದೇವನು ಸಂಕರ್ಷಣಾದಿ ರೂಪಗಳಿಂದ ತನ್ನನ್ನು ಅಭಿವ್ಯಕ್ತಗೊಳಿಸಿರುವ ಪ್ರಯುಕ್ತ 'ಸುಕೃತ' ಎಂದೇ ಅವನನ್ನು ಉಪನಿಷತ್ತು ಕರೆದಿದೆ.[5]

೧೪ ಸಮೀಚೀನವಾದ ವ್ಯಾಪಾರ ಉಳ್ಳವನು[6]

---

೧೧ 1 'ಅಸಮರ್ಥಮಸತ್ ಪ್ರೋಕ್ತಂ ಸತ್ ಸಮರ್ಥಂ ಪ್ರಕೀರ್ತಿತಮ್' (ಭಾಗ. ತಾ. ನಿ. 11-28-9) ಇತಿ ಸತ್ ಸಮರ್ಥಂ ಕೃತಂ ಯೇನ ಸಃ ಸತ್ಕೃತಃ ।

೧೨ 2 ಸತ್ ಮುಮುಕ್ಷುಣಾ ಆಸಾದ್ಯತ್ವಹೇತುನಾ ಸನ್ನಾಮಕಂ ವಾಸುದೇವರೂಪಂ ಕೃತಂ ಸೃಷ್ಟಂ ಯೇನ ಸಃ ಸತ್ಕೃತಃ ।

3 ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ ।

–ತೈ. ಉ. 2-15

೧೩ 4 ಸಂತಿ ನಿರ್ದಿಷ್ಟಾನಿ ಸಂಕರ್ಷಣಾದೀನಿ ಸ್ವಾತ್ಮಕಾನಿ ರೂಪಾಣಿ ಕೃತಾನಿ ಅಭಿವ್ಯಕ್ತಾನಿ ಯೇನ ಸಃ ಸತ್ಕೃತಃ ವಾಸುದೇವಃ ।

5 ತದಾತ್ಮಾನಗ್ಂಸ್ವಯಮಕುರುತ । ತಸ್ಮಾತ್ತತ್ಸುಕೃತಮುಚ್ಯತ ಇತಿ ।

–ತೈ. ಉ. 2-15

೧೪ 6 ಸತೀ ಕೃತಿಃ ಸತ್ಯಕರ್ಮ ವ್ಯಾಪಾರೋ ಯಸ್ಯ ಸ ಸತ್ಕೃತಿಃ ।

–ಸ. ಸಂ.

೧೫ (ಪ್ರದ್ಯುಮ್ನರೂಪದಿಂದ) ಕೃತಿ ಎಂಬ ಪತ್ನಿಯನ್ನು ಹೊಂದಿರುವವನು.[1]

ನಾರಾಯಣನಾಮಕಭಗವಂತನು ಚೇತನರ ಸೃಷ್ಟಿಗಾಗಿ ಪ್ರದ್ಯುಮ್ನನಾಮಕ ರೂಪವನ್ನು ತಾಳಿದಾಗ ಲಕ್ಷ್ಮೀದೇವಿಯು ಕೃತಿನಾಮಕ ರೂಪವನ್ನು ತಾಳುವಳು.[2]

೧೬ ಸಮೀಚೀನವಾದ ಕರ್ಮ ಉಳ್ಳವನು.[3]

೧೭ ಸಮೀಚೀನವಾದ ಆಕಾರ ಉಳ್ಳವನು[4]

## ಜಿಜ್ಞಾಸೆ

[ಸರ್ವಪೂಜ್ಯನು]

ಪ್ರ- ಮಹಾಭಾರತಾದಿ ಗ್ರಂಥಗಳಲ್ಲಿ ನಾರಾಯಣನು ಎಲ್ಲರಿಂದಲೂ ಪೂಜಿಸಲ್ಪಡುತ್ತಾನೆಂದು ಹೇಳುವಂತೆ ರುದ್ರನ ಪ್ರಸ್ತಾವವು ಬರುವಾಗ ರುದ್ರನು ಎಲ್ಲರಿಂದಲೂ ಪೂಜಿಸಲ್ಪಡುತ್ತಾನೆಂದು ಹೇಳುವದರಿಂದ ಸತ್ಕೃತಃ ಎಂಬ ನಾಮವು ನಾರಾಯಣನಿಗೆ ಅಸಾಧಾರಣ ನಾಮವು ಹೌದೋ ಅಲ್ಲವೋ?

ಉ.- ಪಾಂಡವರು ರಾಜಸೂಯಾಶ್ವಮೇಧವನ್ನು ಮಾಡುತ್ತಾ ಅಗ್ರಪೂಜೆಯನ್ನು ಶ್ರೀಕೃಷ್ಣನಿಗೆ ಭಕ್ತಿಯಿಂದ ಅರ್ಪಿಸಿದರು ಆ ಯಜ್ಞ ಸಭೆಯಲ್ಲಿ ಬ್ರಹ್ಮರುದ್ರಾದಿ ದೇವತೆಗಳೂ ಇದ್ದರು.

---

೧೫ 1 ಸತೀ ಕೃತಿಸ್ತನ್ನಾಮ್ನೀ ಭಾರ್ಯಾ ಯಸ್ಯ ಸಃ ಸತ್ಕೃತಿಃ ।
-ಸ. ಸಂ.

2 ...ಸ ಸೃಷ್ಟಿಹೇತೋಃ ಪ್ರದ್ಯುಮ್ನತಾಮುಪಗತಃ ಕೃತಿತಾಂ ಚ ದೇವೀ ।
-ಸ. ಸಂ.

೧೬ 3 ಸತೀ ಕೃತಿಃ ಕರ್ಮ ಯಸ್ಯ ಸಃ ಸತ್ಕೃತಿಃ ।
-ವಾ. ರಾ.

೧೭ 4 ಸತೀ ಆಕೃತಿಃ ಆಕಾರಃ ಯಸ್ಯ ಸಃ ಸತ್ಕೃತಿಃ ।
-ವಾ. ರಾ

* ಅಂತಿಮವ್ಯಾಖ್ಯಾತಾರಃ ಅರ್ಥಾತ್ 'ಸತ್ಕೃತಿಃ' ಇತಿ ಪಾಠಮಂಗೀಕೃತ್ಯೋಕ್ತಾಃ । ವಾದಿರಾಜೀಯೇ ಸತ್ಯಸಂಧೀಯೇ ಚ 'ಸತ್ಕೃತಿ' ಇತಿ ಪಾಠಃ ಆದೃತಃ। ಶಾಂಕರಭಾಷ್ಯೇ, ವಿದ್ಯಾಧಿರಾಜೀಯೇ ಚ 'ಸತ್ಕೃತಿಃ' ಇತಿ ಪಾಠಾಂತರಂ ಸೂಚಿತಮ್ ।

ಆದರೂ ಶ್ರೀಕೃಷ್ಣನಿಗೆ ದೇವೋತ್ತಮ ಸ್ವರೂಪರಾದ ಪಾಂಡವರು ಅಗ್ರಪೂಜೆಯನ್ನು ಮಾಡಿದರು. ಈ ವಿಷಯ ಮಹಾಭಾರತದಲ್ಲಿ ಸ್ಪಷ್ಟವಾಗಿ ಕಾಣುತ್ತದೆ ಇದರಂತೆ ರುದ್ರದೇವರಿಗೆ ದೇವೋತ್ತಮರು ಅಗ್ರಪೂಜೆಯನ್ನು ಮಾಡಿದ ಉಲ್ಲೇಖವು ಮಹಾಭಾರತಾದಿಗಳಲ್ಲಿ ಎಲ್ಲಿಯೂ ಇಲ್ಲ. ಆದುದರಿಂದ ಸರ್ವಪೂಜ್ಯನು ಎಂಬ ನಿಮಿತ್ತದಿಂದ 'ಸತ್ಕೃತಃ' ಎಂಬ ನಾಮವು ನಾರಾಯಣನ ಅಸಾಧಾರಣ ನಾಮವೇ ಆಗಿರುತ್ತದೆ



## ೨೪೨ ಸಾಧುಃ

೧ ಶ್ರೇಷ್ಠನೆಂದು ನಿರ್ಧರಿಸಿಕೊಳ್ಳಲು ಯೋಗ್ಯನಾದವನು[1]

'ಈ ಸಂಸಾರವು ಅಸಾರವಾಗಿದ್ದು, ಇದರಲ್ಲಿ ಶ್ರೀಹರಿಯು ಸಾರಾತ್ಸಾರತರನೆನಿಸಿರುವನು'— ಎಂದು ಕೌಶಿಕರು ಸಂದೇಶಿಸಿರುವರು[2]

ಭಗವಂತನು ಸಮಸ್ತಗುಣಪರಿಪೂರ್ಣನಾಗಿರುವುದರಿಂದ ಸಮಸ್ತ ಎನಿಸಿರುವನು, ಸಾಧು ಆಗಿರುವುದರಿಂದ ಸಾಮ ಎನಿಸಿ ಸಕಲ ಸಾಮಗಳಿಗೆ ದೇವತೆ ಆಗಿರುವನು-ಎಂದು ಸಂದೇಶಿಸುತ್ತಿರುವ ಛಾಂದೋಗ್ಯೋಪನಿಷತ್ತು, ಸಾರನೆಂಬುದಾಗಿ ನಿರ್ಧರಿಸಲು ಯೋಗ್ಯನಾದವನೆಂಬ ಸಾಧುಶಬ್ದದ ಅರ್ಥವೇ ಸಾಮಶಬ್ದದ ಅರ್ಥ ಎಂಬುದನ್ನು ಸಮರ್ಥಿಸಲು ಜ್ಞಾನಿಗಳ ಮೂರು ಸಂವಾದಗಳನ್ನು ಮುಂದಿಡುವುದು ಬಳಿಕ. ಭಗವಂತನು 'ಸಾಧು' ಆಗಿರುವುದರಿಂದಲೇ 'ಸಾಮ' ಎನಿಸಿರುವನೆಂದು ತಿಳಿದು ಉಪಾಸಿಸುವವನು ಮುಕ್ತನಾಗಿ ಸಾಧು ಧರ್ಮಗಳನ್ನು ಪಡೆಯುವನೆಂದು ಉಪಾಸನೆಯ ಫಲವನ್ನು ಸಂದೇಶಿಸುತ್ತಿದೆ[3]

---

೧ 1 ಸಾರತ್ವೇನ ಧಾರ್ಯಃ ಅವಧಾರ್ಯ ಇತಿ ಯಾವತ್, ಸಾಧುಃ ।

-ಛಾಂ. ಉ. ಭಾ. (2-1 1) ಆಧಾರೇಣ

2 ಅಸಾರೇ ಖಲು ಸಂಸಾರೇ ಸಾರಾತ್ ಸಾರತರೋ ಹರಿಃ ।

-ಕೌ ಮ 69

3 ಸಮಸ್ತಸ್ಯ ಖಲು ಸಾಮ್ನ ಉಪಾಸನಂ ಸಾಧು ಯತ್ ಖಲು ಸಾಧು ತತ್ ಸಾಮೇತ್ಯಾಚಕ್ಷತೇ ಯದಸಾಧು ತದಸಾಮೇತಿ ತದುತಾಪ್ಯಾಹುಃ ಸಾಮ್ನೈನಮುಪಾಗಾದಿತಿ ಸಾಧುನೈನಮುಪಾಗಾದಿತ್ಯೇವ ತದಾಹುರಸಾಮ್ನೈನಮುಪಾಗಾದಿತ್ಯಸಾಧುನೈನಮುಪಾಗಾದಿತ್ಯೇವ ತದಾಹುರಥೋತಾಪ್ಯಾಹುಃ ಸಾಮ ನೋ ಬತೇತಿ ಯತ್ ಸಾಧು ಭವತಿ ಸಾಧು ಬತೇತ್ಯೇವ ತದಾಹುರಸಾಮನೋ ಬತೇತಿ ಯದಸಾಧು ಭವತ್ಯಸಾಧು ಬತೇತ್ಯೇವ ತದಾಹುಃ ಸ ಯ

೨ ನಿರ್ದುಷ್ಟನಾಗಿದ್ದು ಶೋಭನನಾಗಿರುವವನು [1]

ಎಲ್ಲವನ್ನೂ ಸೃಷ್ಟಿಸುವ ಭಗವಂತನು, ಸೃಷ್ಟಗಳಾದ ಆ ಎಲ್ಲ ವಸ್ತುಗಳಲ್ಲೂ ಪ್ರವೇಶಿಸುವನು—ಎಂದು ತಿಳಿಸುವ ತೈತ್ತಿರೀಯೋಪನಿಷತ್ತು, ಆಯಾಯ ಪದಾರ್ಥವನ್ನು ಪ್ರವೇಶಿಸಿದ ಪ್ರಯುಕ್ತ ಆಯಾಯ ಪದಾರ್ಥದ ದೋಷದ ಲೇಪಕ್ಕೆ ಅವಕಾಶವಿಲ್ಲ. ಯಾಕೆಂದರೆ ಅವನು ನಿರ್ದುಷ್ಟತ್ವರೂಪ ಸಾಧುತ್ವೋಪೇತನಾಗಿರುವ ಪ್ರಯುಕ್ತ ಸತ್ಯನಾಮಕನಾಗಿ ಅಲ್ಲಿ ಇರುವನು—ಎಂದು ಸಂದೇಶಿಸಿದೆ [2]

೩ ಸುಂದರನಾಗಿರುವವನು [3]

---

ಏತದೇವಂ ವಿದ್ವಾನ್ ಸಾಧು ಸಾಧು ಸಾಮೇತ್ಯುಪಾಸ್ತೇಽಭ್ಯಾಶೋ ಹ ಯದೇನಂ ಸಾಧವೋ ಧರ್ಮಾ ಆ ಚ ಗಚ್ಛೇಯುರುಪ ಚ ನಮೇಯುಃ

—ಛಾಂ. ಉ. (2-1-1)

ಸಮಸ್ತಸ್ಯ ಪೂರ್ಣಸ್ಯ ಸಾಧುತ್ವಾತ್ ಸಾಮನಾಮ್ನೋ ವಿಷ್ಣೋರುಪಾಸನಂ ಸಾಧು। ಸಾರತ್ವೇನ ಮೇಯಂ ಸಾಮ। ಸಾರತ್ವೇನ ಧಾರ್ಯಂ ಸಾಧ್ವಿತ್ಯೇಕ ಏವಾರ್ಥಃ।

—ಛಾಂ, ಉ. ಭಾ.

'ಸಾಧುತ್ವಾತ್ ಸಾಮನಾಮಾನಂ ಸಮಸ್ತಗುಣಪೂರ್ತಿತಃ। ಸಮಸ್ತಂ ಚ ಉಪಾಸೀತ ನಾರಾಯಣಮನಾಮಯಮ್। ಸರ್ವಸಾಮ್ನಾಂ ದೇವತೇತಿ ಸ ಮುಕ್ತಃ ಸಾಧುಧರ್ಮಭಾಕ್'

—ಸಾಮಸಂಹಿತಾ (ಛಾಂ. ಉ ಭಾ)

೨ 1 ನಿರ್ದೋಷತ್ವಪ್ರಯುಕ್ತಶೋಭನತ್ವಾತ್ ಸಾಧುಃ।' . ಸಾಧು ಶೋಭನಮ್'

—ಅ. ಕೋ.

2 ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್.. ಸತ್ಯಮಭವತ್।

—ತೈ ಉ. 2-11

* ಅತಃ ಸಾಧುಸ್ವರೂಪಃ ಸನ್ ಸತ್ಯನಾಮಾ ।

—ಯಜುಃ ಸಂಹಿತಾ (ತೈ ಉ ಭಾ)

* ತತ್ ಸರ್ವತ್ರಾನುಪ್ರವಿಷ್ಟಂ ರೂಪಂ ತದ್ದೋಷೇಣ ಲಿಪ್ಯತೇ ಕಿಂ ನೇತ್ಯಾಹ-ತತ್ಸತ್ಯಮಭವತ್। ಸಾಧುಸ್ವರೂಪಂ ನಿರ್ದೋಷಸ್ವರೂಪಂ ಸತ್ ಸತ್ಯನಾಮಾಽಭವದಿತ್ಯರ್ಥಃ।

—ಉ. ಖ.

೩ 3 'ಸಾಧುಃ...ಸಜ್ಜನರಮ್ಯಯೋಃ'—ಹೇಮಚಂದ್ರಃ ।

೪ ಎಲ್ಲ ಸಾಧನೆಗಳನ್ನೂ ಸ್ವತಂತ್ರವಾಗಿ ಸಾಧಿಸುವವನು[1]

೫ ಪರರ ಕಾರ್ಯಗಳನ್ನು ಸಾಧಿಸುವವನು[2]

ಸ್ವತಃ ಪರಿಪೂರ್ಣನಾಗಿರುವ ಭಗವಂತನು ಪ್ರವರ್ತಿಸುವುದೇ ಪರಕಾರ್ಯವನ್ನು ಸಾಧಿಸುವುದಕ್ಕಾಗಿಯೇ

೬ ನ್ಯಾಯವಾಗಿ ನಡೆದುಕೊಳ್ಳುವವನು[3]

೭ ಸಿದ್ಧರೂಪಿಯಾಗಿರುವವನು[4]

೮ (ಭಕ್ತರು ಅಪೇಕ್ಷಿಸುವ) ದೌತ್ಯ ಸಾರಥ್ಯಾದಿಗಳನ್ನು ಸಾಧಿಸುವವನು[5]

---

೪ 1 ಸಾಧ್ನೋತಿ ಸರ್ವಾಣಿ ಸಾಧನಾನೀತಿ ಸಾಧುಃ । 'ಸಾಧ ಸಂಸಿದ್ಧೌ'

* ಸಾಧಕತ್ವಾತ್ ಸಾಧುಃ

—ವಿ. ರಾ.

* ಸಾಧ್ಯಭೇದಾನುಪಾದಾನಾತ್ ಸಾಧ್ಯಮಾತ್ರಸಾಧಕಃ ।

—ಶಾಂ. ಭಾ.

೫ 2 ಸಾಧ್ನೋತಿ ಪರಕಾರ್ಯಮಿತಿ ಸಾಧುಃ ।

—ಸ. ಸಂ

೬ 3 ನ್ಯಾಯವರ್ತೀ ಸಾಧುಃ ।

—ಶಾಂ. ಭಾ.

೭ 4 ಸಿದ್ಧರೂಪತ್ವಾತ್ ಸಾಧುಃ ।

—ವಿ. ರಾ.

೮ 5 ತದಪೇಕ್ಷಿತದೌತ್ಯಸಾರಥ್ಯಾದಿ ಸಾಧಯತೀತಿ ಸಾಧುಃ ।

—ಪ. ಭ.

## ಜಿಜ್ಞಾಸೆ

### [ಎಲ್ಲ ಗುಣಗಳೂ ಶ್ರುತಗಳು]

ಪ್ರ - 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ಈ ಶ್ರುತಿಯಲ್ಲಿ ಪರಮಾತ್ಮನ ಗುಣಗಳು ಶ್ರುತಿಪ್ರತಿಪಾದ್ಯಗಳಾಗದವುಗಳೂ ಇವೆ ಎಂದು ಹೇಳಿರುತ್ತದೆ. ಇದು ಅನುಕ್ತಂ ಪಂಚಭಿರ್ವೇದೈಃ ನ ವಸ್ತ್ವಸ್ತಿ ಕುತಶ್ಚನ' ವೇದಗಳಲ್ಲಿ ಹೇಳದೆ ಇದ್ದ ವಸ್ತುಗಳು ಇಲ್ಲ ಎಂದು ಹೇಳುವ ಈ ಪ್ರಮಾಣದಿಂದ ವಿರುದ್ಧವಾಗುವದಿಲ್ಲವೋ?

ಉ - ಆತ್ಮಶಬ್ದವು ಶ್ರುತಿಯಲ್ಲಿ ಇದೆ ಆ ಶಬ್ದವು ಬ್ರಹ್ಮದೇವರಿಂದ ಉಪಾಸ್ಯಗಳಾದ ಎಲ್ಲ ಭಗವದ್ಗುಣಗಳನ್ನು ಪ್ರತಿಪಾದಿಸುತ್ತದೆಂದು ಬ್ರಹ್ಮಸೂತ್ರದ ಉಪಸನಾಪಾದದಲ್ಲಿ ಸಮರ್ಥಿಸಲ್ಪಟ್ಟಿದೆ. ಬ್ರಹ್ಮದೇವರು ಪರಮಾತ್ಮನ ಅನಂತಗುಣೋಪಾಸಕರು. ಲಕ್ಷ್ಮೀದೇವಿಯು ಬ್ರಹ್ಮದೇವರಿಗಿಂತಲೂ ಅಧಿಕ ಅನಂತಗುಣೋಪಾಸಕಳು ಯಾರು ಎಷ್ಟು ಪರಮಾತ್ಮನ ಗುಣೋಪಾಸನಾ ಯೋಗ್ಯರೋ ಅಷ್ಟೂ ಗುಣಗಳನ್ನು ಆತ್ಮ ಶಬ್ದವೊಂದೇ ಅವರನ್ನು ಕುರಿತು ಪ್ರತಿಪಾದಿಸುತ್ತದೆಂದೇ ಬ್ರಹ್ಮಸೂತ್ರದಲ್ಲಿ ಸಮರ್ಥಿಸಿರುತ್ತದೆ ಆದುದರಿಂದ ಪರಮಾತ್ಮನ ಎಲ್ಲ ಗುಣಗಳು ಈ ರೀತಿಯಾಗಿ ಶ್ರುತಗಳೇ ಆಗುತ್ತವೆ ಒಂದು ಶಬ್ದವು ಒಂದು ಗುಣವನ್ನು ಮಾತ್ರ ಹೇಳುತ್ತದೆ ಆದುದರಿಂದಷ್ಟೇ ಪರಮಾತ್ಮನ ಎಲ್ಲ ಗುಣಗಳು ಶ್ರುತಗಳು ಅಲ್ಲ ಎಂದು 'ಅಶ್ರುತಾ' ಎಂದು ಹೇಳಲಾಗಿದೆ



### ೨೪೪ ಜಹ್ನುಃ

೧ ಸಕಲ ದೋಷಗಳನ್ನು ತೊರೆದಿರುವವನು[1]

ಸಕಲ ಗುಣಪರಿಪೂರ್ಣನಾದ ಭಗವಂತನು ಸಕಲದೋಷದೂರನಾದವನು[2] ಅವನನ್ನು ಪರಿಚಯಿಸಿ ಕೊಡ ಹೊರಟ 'ಮಹೋಪನಿಷತ್ತು'—ಮೊಟ್ಟ ಮೊದಲು ಅವನ ನಿರ್ದೋಷತ್ವವನ್ನೇ ಉಲ್ಲೇಖಿಸಿದೆ[3] ಶ್ರೀ ವಿಷ್ಣುವಿನ ನಿರ್ದೋಷತ್ವದ ಕುರಿತು ನಾರದ ಹಾಗೂ ಚತುರ್ಮುಖ ಇವರ

---

೧ 1 ಜಹಾತಿ ನಿತ್ಯಂ ದೋಷಾನ್ ದೂರತ ಏವ ತ್ಯಜತೀತಿ ಜಹ್ನುಃ ।

2 ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ ।
-ದ್ವಾ. ಸ್ತೋ 6 8

3 ವರ್ಜಿತಃ ಸರ್ವದೋಷೈರ್ಯಃ.. ಸ ವಿಷ್ಣುಃ ಪರಮೋ ಮತಃ
-ಮಹೋಪನಿಷತ್ (ವಿ. ತ ವಿ.)

ನಡುವೆ ನಡೆದ ಸಂಭಾಷಣೆಯನ್ನು 'ಬ್ರಹ್ಮಾಂಡ'ವು ನಿರೂಪಿಸಿಗೆ—ಶ್ರೀ ಹರಿಯು ನಿರ್ದುಷ್ಟ ಎಂದಾದರೆ ಮನುಷ್ಯರಲ್ಲಿ ಹೇಗೆ ತಾನೇ ಜನ್ಮ ಪಡೆಯುವನು? ಚಿಂತೆ ಶ್ರಮ, ಗಾಯ, ಅಜ್ಞಾನ, ದುಃಖ—ಮೊದಲಾದವುಗಳಿಗೆ ಪಾತ್ರನಾದಂತೆ ಹೇಗೆ ತೋರುವನು?—ನನ್ನನ್ನು ಕಾಡುತ್ತಿರುವ ಈ ಸಂಶಯವನ್ನು ನೀನೇ ಪರಿಹರಿಸಬೇಕೆಂದು ನಾರದ ಋಷಿಯು ಕೇಳಲು ಚತುರ್ಮುಖನು ಸಮಾಧಾನಿಸುವನು—'ಶ್ರೀ ವಿಷ್ಣುವಿಗೆ ಸ್ತ್ರೀಪುರುಷರ ಸಂಪರ್ಕದಿಂದ ಉಂಟಾಗುವ ದೇಹದ ಸ್ವೀಕಾರ ರೂಪವಾದ ಜನ್ಮವಿಲ್ಲ ತನ್ನ ನಿರ್ದುಷ್ಟ ಚೈತನ್ಯಸ್ವರೂಪವಾದ ದೇಹದ ಪ್ರಕಾಶನವೇ ಅವನ ಜನ್ಮವೆನಿಸಿದೆ ಶುದ್ಧನಾದ ಸದ್ಗುಣ ಪೂರ್ಣನಾದ ಅವನು ಅಸುರ ಮೋಹಕ್ಕಾಗಿಯಷ್ಟೇ ದುಃಖಾಜ್ಞಾನ ಶ್ರಮಾದಿಗಳನ್ನು ತೋರಿಸುವನು ಸ್ವತಂತ್ರನಾದ ಅಚಿಂತ್ಯ ಸದ್ಗುಣಪೂರ್ಣನಾದ ಅವನಲ್ಲಿ ಅಜ್ಞಾನ, ಗಾಯಾದಿಗಳು ಹೇಗೆ ಸಂಭವಿಸುವವು? ಅಸುರರು ಮುಕ್ತಿಯಿಂದ ವಂಚಿತರಾಗಿ ತಮಸ್ಸಿಗೆ ಹೋಗಬೇಕೆಂಬುದಕ್ಕಾಗಿಯಷ್ಟೇ ಅವನು ಹೀಗೆ ತೋರಿಸುವನು. ಆದುದರಿಂದ ಭಗವಂತನ ಮೂಲರೂಪವಷ್ಟೇ ಅಲ್ಲ ಪ್ರಾದುರ್ಭಾವ ಹೊಂದಿದ ರೂಪಗಳೂ ನಿರ್ದುಷ್ಟಗಳೇ—ಎಂದು ತಿಳಿಯಬೇಕು.[1] ಭಗವಂತನು ಅಶೇಷ ಶಕ್ತಿ ಯುಕ್ತನು ಸ್ವತಂತ್ರನು. ಇಂತಹವನು ಹೇಗೆ ತಾನೇ ದೋಷದೂಷಿತನಾದಾನು?—ಎಂದು ಯುಕ್ತಿಯಿಂದಲೂ ಸಮರ್ಥಿಸಿರುವರು ಶ್ರೀಮದಾಚಾರ್ಯರು[2]

---

1 ಶ್ರೀ ನಾರದ ಉವಾಚ । ನಿರ್ದೋಷಶ್ಚೇತ್ ಕಥಂ ವಿಷ್ಣುರ್ಮನುಷ್ಯೇಷೂದಪದ್ಯತ । ಚಿಂತಾಶ್ರಮವ್ರಣಾಜ್ಞಾನದುಃಖಯುಗ್ ದೃಶ್ಯತೇ ಕಥಮ್ । ಏಷ ಮೇ ಸಂಶಯೋ ಬ್ರಹ್ಮನ್ ಹೃದಿ ಶಲ್ಯ ಇವಾರ್ಪಿತಃ । ಅನುದ್ಧಾರ್ಯೋಽತಿಸರ್ವೈರ್ಮರ್ತ್ಯೈಃ ಸೂಕ್ತಿಶಕ್ತ್ಯಾ ತಮುದ್ಧರ । ಬ್ರಹ್ಮೋವಾಚ । ಸ್ತ್ರೀಪುಂಮಲಾಭಿಯೋಗಾತ್ಮದೇಹೋ ವಿಷ್ಣೋರ್ನ ಜಾಯತೇ । ಕಿಂತು ನಿರ್ದೋಷಚೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಮ್ । ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋರ್ನ ಚಾಪರಾ । ತಥಾಪ್ಯಸುರಮೋಹಾಯ ಪರೇಷಾಂ ಚ ಕ್ವಚಿತ್ ಕ್ವಚಿತ್ । ದುಃಖಾಜ್ಞಾನಶ್ರಮಾದೀನ್ ಸ ದರ್ಶಯೇಚ್ಛುದ್ಧಸದ್ಗುಣಃ । ಕ್ವ ವ್ರಣಾದಿ ಕ್ವ ಚಾಜ್ಞಾನಂ ಸ್ವತಂತ್ರಾಚಿಂತ್ಯಸದ್ಗುಣೇ । ದೌರ್ಲಭ್ಯಾಯೈವ ಮೋಕ್ಷಸ್ಯ ದರ್ಶಯೇತ್ ತಾನ್ಯಜೋ ಹರಿಃ । ಮಿಥ್ಯಾದರ್ಶನದೋಷೇಣ ತೇನ ಮುಕ್ತಿಂ ನ ಯಾತಿ ಚ । ತಮೋ ಯಾತಿ ಚ ತೇನೈವ ತಸ್ಮಾದ್ ದೋಷವಿವರ್ಜಿತಮ್ । ಪ್ರಾದುರ್ಭಾವಗತಂ ಚೈವ ಜಾನೀಯಾದ್ ವಿಷ್ಣುಮಂಜಸಾ

-ಬ್ರಹ್ಮಾಂಡ (ಮ ತ ನಿ.)

2 ಅಶೇಷಶಕ್ತಿಯುಕ್ತಶ್ಚೇತ್ ಸ್ವಾತಂತ್ರ್ಯಾತ್ ದೋಷವಾನ್ ಕಥಮ್ ।

-ಅನುವ್ಯಾಖ್ಯಾನ (3-2 131)

೨ ಅಯೋಗ್ಯರನ್ನು—ದುಷ್ಟರನ್ನು ತೊರೆಯುವವನು[1]

ಭಗವಂತನು ಯೋಗ್ಯರ, ಸಜ್ಜನರ ಯೋಗಕ್ಷೇಮ ನಿರ್ವಾಹಕನಾಗಿ ಅವರ ಜೊತೆಗೆಯೇ ಇರುವನಾದರೆ, ವಿಶೇಷವಾಗಿ ಯೋಗಕ್ಷೇಮನಿರ್ವಹಣೆಯ ವಿಷಯದಲ್ಲಿ ಅಯೋಗ್ಯರನ್ನು. ದುಷ್ಟರನ್ನು ಕೈಬಿಡುವನು ಶ್ರೀಕೃಷ್ಣನು ಪಾಂಡವರ ಜೊತೆಗೇ ಇದ್ದು ಅವರ ಯೋಗಕ್ಷೇಮವನ್ನು ನಿರ್ವಹಿಸುತ್ತಿದ್ದನು ಆದರೆ ದುರ್ಯೋಧನಾದಿಗಳನ್ನು ತೊರೆದಿದ್ದನು

೩ ದುಷ್ಟರನ್ನು ಸಂಹರಿಸುವವನು[2]

ದುಷ್ಟರು ತಮಗೆ ಯೋಗ್ಯವಾದ ಅಂಧಂತಮಸ್ಸಿಗೆ ನಿಯತವಾಗಿ ಬೀಳುವಂತೆ ಮಾಡುವವನು.[3]

೪ ಜ್ಞಾನಿಗಳಲ್ಲದವರಿಗೆ ತನ್ನ ಸ್ವರೂಪವನ್ನು ಮರೆ ಮಾಡುವವನು.[4]

೫ ಅಭಕ್ತರೆದುರು ತನ್ನ ಮಹಿಮೆಗಳನ್ನು ಅಡಗಿಸಿಕೊಳ್ಳುವವನು.[5]

ಕುಂತೀದೇವಿ ಶ್ರೀಕೃಷ್ಣನನ್ನು ಸ್ತುತಿಸುತ್ತ—'ನೀನು ಪರಮಾಚ್ಛಾದಿಕಾ ಎಂಬ ಮಾಯೆಯ ಪರದೆಯಿಂದ ಅವೃತನಾದವನು ಇಂದ್ರಿಯಗಳಿಗೆ ಗೋಚರನಾಗದ ಪ್ರಯುಕ್ತ ಅಧೋಕ್ಷಜ ಎಂದೇ

---

೨ 1 ದುಷ್ಟಾನ್ ಜಹಾತೀತಿ ಜಹ್ನುಃ ।
—ವಿ. ರಾ

* ಜಹಾತ್ಯಯೋಗ್ಯಾನಿತಿ ಜಹ್ನುಃ ।
—ಸ. ಸಂ

೩ 2 ದುಷ್ಟಾನ್ ಹಂತೀತಿ ಜಹ್ನುಃ ।
—ವಿ. ರಾ.

3 ಅಥ ಚ ದೈತ್ಯಹತಿಸ್ತಮಸಿ ಸ್ಥಿರಾ ನಿಯತಸಂಸ್ಥಿತಿರೇವ ನ ಚಾನ್ಯಥಾ ।
—ಮ ಭಾರ. ತಾ ನಿ. 2-65

೪ 4 ಜ್ಞಾನಿಭಿನ್ನೇಷು ಸ್ವಾತ್ಮಾನಂ ಅಪಹ್ನುತ ಇತಿ ಜಹ್ನುಃ ।
—ಪ ಭ. ಅಧಾರೇಣ

೫ 5 ಅಭಕ್ತೇಷ್ವಾತ್ಮಮಾಹಾತ್ಮ್ಯಮಪಹ್ನುತ ಇತಿ ಜಹ್ನುಃ ।
—ಪ. ಭ.

ಎನಿಸಿರುವವನು, ನಿರ್ವಿಕಾರನಾಗಿರುವವನು ಆದುದರಿಂದಲೇ ನಟನೆಯಲ್ಲಿ ತೊಡಗಿರುವ ನಟನಂತೆ ಮೂಢರ ದೃಷ್ಟಿಗೆ ನೀನು ಗೋಚರಿಸಲಾರೆ'—ಎಂದು ಹೇಳಿರುವಳು.[1]

೬ (ಜ್ಞಾನಿಗಳ ಪಾಲಿಗೆ) ಪರಮಾಚ್ಛಾದಿಕಾ ಎಂಬ ಪ್ರಕೃತಿಯನ್ನು ತೊರೆಯುವವನು.[2]

ಸಂಸಾರದೆಶೆಯಲ್ಲಿ ಜೀವಾತ್ಮನು ಸ್ವರೂಪಾಚ್ಛಾದಿಕಾ ಎಂಬ ಪ್ರಕೃತಿಯಿಂದ ಆವರಿಸಲ್ಪಟ್ಟ ತನ್ನ ಸ್ವರೂಪ ಉಳ್ಳವನಾಗಿಯೂ, ಪರಮಾಚ್ಛಾದಿಕಾ ಎಂಬ ಪ್ರಕೃತಿಯ ಆವರಣದಿಂದಾಗಿ ಕಾಣದೆ ಇರುವ ಪರಮಾತ್ಮನ ಸ್ವರೂಪ ಉಳ್ಳವನಾಗಿಯೂ—ಇರುವನು ಶ್ರುತಿ ಪ್ರತಿಪಾದಿತಗಳಾದ ಭಗವದ್ಗುಣಗಳನ್ನು ಕರ್ಮಗಳನ್ನೂ ಉಪಾಸಿಸಿದನೆಂದರೆ ಜೀವಾತ್ಮನು ಸಂಸಾರವನ್ನು ದಾಟುವನು ಆಗ ಭಗವಂತನೇ ಅವನ ಸ್ವರೂಪಾಚ್ಛಾದಿಕಾ ಎಂಬ ಪ್ರಕೃತಿಯನ್ನು ನಾಶಪಡಿಸುವನು ಹಾವು ತನ್ನ ಪರೆಯನ್ನೆಂಬಂತೆ ಪರಮಾಚ್ಛಾದಿಕಾ ಎಂಬ ಪ್ರಕೃತಿಯನ್ನು ತ್ಯಜಿಸುವನು—ಎಂದು ಶ್ರುತಿಗೀತೆಯಲ್ಲಿದೆ.[3] ಈ ಎರಡೂ ವಿಧದ ಪ್ರಕೃತಿಯೂ ಜೀವಾತ್ಮನ ಜ್ಞಾನಪ್ರತಿಬಂಧಕವಾಗಿರುವುದಾದರೂ ಭಗವಂತನೇ ಸ್ವತಂತ್ರನಾಗಿರುವ ಪ್ರಯುಕ್ತ ಸ್ವಗುಣೋಚ್ಛಾದಿಕಾ ಪ್ರಕೃತಿಯ ನಾಶವನ್ನೂ,

---

1 ಮಾಯಾಯವನಿಕಾಚ್ಛನ್ನ ಮಜ್ಞಾಧೋಕ್ಷಜ ಮವ್ಯಯಮ್ ।
ನ ಲಕ್ಷ್ಯಸೇ ಮೂಢದೃಶಾ ನಟೋ ನಾಟ್ಯಧರೋ ಯಥಾ ॥
–ಭಾಗ. 1-8-19

೬ 2 ಜ್ಞಾನಿನಾಂ ಕೃತೇ ಪರಮಾಚ್ಛಾದಿಕಾಂ ಪ್ರಕೃತಿಂ ಜಹಾತಿ ತ್ಯಜತೀತಿ ಜಹ್ನುಃ ।

3 ಉದಗಾತ್ ಪುಮಾನನುಗೀತಗುಣಾಂಶ್ಚ ಜುಷನ್ ಭಜತಿ ಸರೂಪತಾಂ ತದನು ತ್ವಮುತ ಜಹಾಸಿ ಜಿಹಾಸಿ ತಾಮ್ । ಅಹಿರಿವ ತ್ವಚಂ ಪರಮಾತ್ತಭಗಾಂ ।
–ಭಾಗ 10-94-34

ಶ್ರುತಿಷು ತವಾನುಗೀತಾನ್ ಗುಣಾನ್ ಜುಷನ್ ಪುಮಾನುದಗಾದಸ್ಮಾತ್ ಸಂಸಾರಾತ್ ತವ ಸರೂಪತಾಂ ಚ ಭಜತಿ । ತದನು ಗುಣಸ್ಮರಣಮನು । ಗುಣಾಂಶ್ಚ ಜುಷನ್ನಿತಿ ಚ-ಶಬ್ದಃ ಕರ್ಮಾಣಿ ಚೇತ್ಯಸ್ಮಿನ್ನರ್ಥೇ । ಯಚ್ಚಾಯಂ ಪುಮಾನಾತ್ತಭಗಾಂ ತ್ವಯಾಽಪಹೃತ-ಭಗಾಂ ಪ್ರಾತಿಸ್ವಿಕಾಂ ಪೂರ್ವೋಕ್ತಾಂ ದ್ವಿವಿಧಾಂ ಪ್ರಕೃತಿಂ ಜಹಾತಿ ಹಂತಿ ಚ ತದಪಿ ತ್ವಮೇವ ಜಹಾಸಿ ಜಿಹಾಸಿ ಚ ।

–ಭಾಗ. ತಾ. ನಿ.

ಪರಮಾಚಾರ್ಯದಿಶಾ ಪ್ರಕೃತಿಯ ತ್ಯಾಗವನ್ನೂ ಅವನೇ ಮಾಡುವವನೆಂದು ಗಾರುಡ ವಿವರಿಸಿದೆ.[1]

೭ (ಸೃಷ್ಟಿಕಾಲದಲ್ಲಿ) ಸೃಷ್ಟಗಳಾದ ವಸ್ತುಗಳನ್ನೆಲ್ಲಾ (ಸಂಹಾರಕಾಲದಲ್ಲಿ) ಸಂಹರಿಸುವವನು[2]

೮ (ಸಂಹಾರ ಕಾಲದಲ್ಲಿ) ಜನರನ್ನು ಸಂಹರಿಸುವವನು[3]

೯ ಜನರನ್ನು ತಮ್ಮ ತಮ್ಮ ಕರ್ತವ್ಯದಲ್ಲಿ ತೊಡಗುವಂತೆ ಆಜ್ಞಾಪಿಸುವವನು.[4]

ಶ್ರುತಿಸ್ಮೃತಿಗಳು ಭಗವಂತನ ಆದೇಶಗಳಾಗಿದ್ದು, ಅವುಗಳ ಮೂಲಕ ಭಗವಂತನು ಪ್ರತಿಯೊಬ್ಬರನ್ನೂ ಅವರವರ ಕರ್ತವ್ಯದಲ್ಲಿ ತೊಡಗಿಸುವವನು

೧೦ ಜ್ಞಾನಿಗಳಲ್ಲದವರನ್ನು ತ್ಯಜಿಸುವವನು ಮತ್ತು ಭಕ್ತರನ್ನು ಉತ್ತಮ ಸ್ಥಾನವಾದ ಮುಕ್ತಿಗೆ ಕರೆದೊಯ್ಯುವವನು[5]

೧೧ (ಬುದ್ಧಾವತಾರದಲ್ಲಿ ಅಸುರರ ಮೋಹಕ್ಕಾಗಿ) ಜಗತ್ತಿನ ಸತ್ತ್ವವನ್ನು ನಿರಾಕರಿಸಿರುವವನು.[6]

---

1 ಸ್ವಾತಂತ್ರ್ಯಾತ್ ಪ್ರಕೃತಿತ್ಯಾಗಕರ್ತಾ ನಾರಾಯಣಃ ಪರಃ । ಯದ್ಯಪ್ಯೇಷಾ ಜೀವಸಂಸ್ಥಾ ಹಂತಾ ಚ ಭಗವಾನ್ ಪ್ರಭುಃ ।

-ಗಾರುಡ (ಭಾಗ. ತಾ. ನಿ.)

೭ 2 ಜಾತಂ ವಸ್ತು ನಿಹ್ನುತೇ ನಿರಾಕರೋತಿ ಸಂಹರತೀತಿ ಜಹ್ನುಃ ।

-ನಾ. ರಾ.

೮ 3 ಜನಾನ್ ಸಂಹಾರಸಮಯೇ ಅಪಹ್ನುತೇ ಅಪನಯತೀತಿ ಜಹ್ನುಃ ।

-ಶಾಂ. ಭಾ.

೯ 4 ಜನಂ ಹುಂ ಕರೋತೀತಿ ಜಹ್ನುಃ ।

-ನಾ. ರಾ.

೧೦ 5 ಜಹಾತ್ಯವಿದುಷಃ ಭಕ್ತಾನ್ ನಯತಿ ಪರಂ ಪದಮಿತಿ ಜಹ್ನುಃ ।

-ಶಾಂ. ಭಾ.

೧೧ 6 ಅಪಹ್ನುತೇ ಬುದ್ಧಾವತಾರೇ ಅಸುರವ್ಯಾಮೋಹಾಯ ಜಗತಃ ಸತ್ತ್ವಂ ನಿರಾಕರೋತೀತಿ ಜಹ್ನುಃ ।

ಭಗವಂತನು ಬುದ್ಧಾವತಾರದಲ್ಲಿ 'ಸರ್ವವೂ ಕ್ಷಣಿಕ' 'ಸರ್ವವೂ ಶೂನ್ಯ' ಎಂದು ಬೋಧಿಸುವುದರ ಮೂಲಕ ತಾನು ಜಗತ್ತಿನ ಸತ್ತ್ವವನ್ನು ನಿರಾಕರಿಸಿರುವವನಂತೆ ಅಸುರರ ಎದುರು ನಟಿಸಿರುವನು.

## ಜಿಜ್ಞಾಸೆ

### [ದುರ್ಲಭ ಹಾಗೂ ಸುಲಭ]

ಪ್ರ - ಪರಮಾತ್ಮನು ಹುಟ್ಟಿದನು ಎಂದು ತಾನು ಅಜ್ಞಾನ ದುಃಖಾದಿಗಳುಳ್ಳವನೆಂದು ಅಯೋಗ್ಯರಿಗೆ ಮೋಹನವನ್ನು ಮಾಡಲಿ. ಯೋಗ್ಯ ಜೀವರು ಮೋಹಯೋಗ್ಯರು ಅಲ್ಲ ಅವರಿಗೆ ಏಕೆ ಭಗವಂತನು ಮೋಹವನ್ನುಂಟು ಮಾಡುತ್ತಾನೆ?

ಉ - ಮೋಕ್ಷವು ಮಹಾ ಪುರುಷಾರ್ಥವು ಅದು ದುರ್ಲಭವಾಗಬೇಕು ಸುಲಭವಾಗಬಾರದು ಯಾವುದು ಉತ್ತಮ ವಸ್ತುವೋ ಅದು ದುರ್ಲಭವಾಗಿ ಇರುತ್ತದೆ ಸುವರ್ಣವು ಉತ್ತಮ ವಸ್ತು. ಅದು ಖನಿಯಲ್ಲಿ ಬಹು ಕಷ್ಟದಿಂದ ಲಭ್ಯ ಆದುದರಿಂದ ಯೋಗ್ಯ ಜೀವರಿಗೆ ಮೋಕ್ಷವು ಸುಲಭವಾಗಬಾರದು ಅದಕ್ಕಾಗಿ ಅವರಿಗೂ ಪರಮಾತ್ಮನು ಮೋಹವನ್ನುಂಟು ಮಾಡುತ್ತಾನೆ

ಪ್ರ - 'ಸುಲಭನೋ ಹರಿ' ಎಂದು ದಾಸರು ಪರಮಾತ್ಮನನ್ನು ವರ್ಣಿಸುತ್ತಾರೆ ಅದು ಹೇಗೆ? ಅವನು ಉತ್ತಮ ವಸ್ತು ದುರ್ಲಭನೇ ಆಗಬೇಕು ಅಲ್ಲವೇ?

ಉ - ಶ್ರೀಹರಿಯು ದುರ್ಲಭನೇ ಆಗಿದ್ದಾನೆ. ಆದರೆ ಮಹಾಭಕ್ತರಿಗೆ ಅವನು ಸುಲಭನು ಆ ಮಹಾಭಕ್ತರು ಮಹಾಭಕ್ತಿಯನ್ನು ಸಂಪಾದಿಸಲಿಕ್ಕೆ ತುಂಬಾ ಕಷ್ಟಪಟ್ಟಿದ್ದಾರೆ. ಆದುದರಿಂದ ಶ್ರೀಹರಿಯು ಅಲ್ಪಭಕ್ತಿಯುಳ್ಳವರಿಗೆ ದುರ್ಲಭ. ಕಷ್ಟದಿಂದ ಮಹಾಭಕ್ತಿಯನ್ನು ಪಡೆದವರಿಗೆ ಸುಲಭ. ಈ ರೀತಿ ಎರಡೂ ವಿರುದ್ಧ ಧರ್ಮಗಳು ಅವನಲ್ಲಿ ಕೂಡುತ್ತವೆ.



**೨೪೫ ನಾರಾಯಣಃ**

೧ ಯಾವಾಗಲೂ ಸರ್ವಜೀವಜಡಗಳಿಗಿಂತ ಭಿನ್ನನಾಗಿರುವವನು. ಎಲ್ಲರಿಗಿಂತಲೂ ಅಧಿಕವಾಗಿ ಸರ್ವದೋಷರಹಿತನಾದವನು ತನ್ನ ಭಕ್ತರ ಅವಿದ್ಯಾದಿದೋಷಗಳನ್ನು ಹೋಗಲಾಡಿಸುವವನು. ಸರ್ವದೋಷವಿರುದ್ಧಗಳಾದ ಕಲ್ಯಾಣ ಗುಣಗಳಿಂದ ಪೂರ್ಣವಾದ ಸ್ವರೂಪವುಳ್ಳವನು[1]

---

೧ 1 ಸರ್ವಜೀವಜಡಭಿನ್ನಃ ಇತಿ ನಃ । ಸದೈವ ಭಿನ್ನ ಇತಿ ಚ ನಾಃ । ಸರ್ವದೋಷಕ್ಷಯಾತ್ ರಃ । ಸರ್ವಾಪೇಕ್ಷಯಾ ಆಧಿಕ್ಯಕಾರಿತ್ವಾತ್ ರಾಃ । ಭಕ್ತಾನಾಂ ದೋಷಾನ್ ಯಾಪಯತೀತಿ ಯಃ । ಸರ್ವದೋಷವಿರುದ್ಧಗುಣರೂಪತ್ವಾತ್ ಣಃ ।

ಸರ್ವವಾಙ್ಮಯವೂ ಅಕಾರದ ವ್ಯಾಖ್ಯಾನರೂಪದಲ್ಲಿದೆ ಎಂದು ಸಾಧಿಸ ಹೊರಟ 'ಬ್ರಹ್ಮಸಾರ'ವು—ನಾರಾಯಣ ಎಂಬ ಭಗವಂತನ ಪ್ರಸಿದ್ಧನಾಮವೂ ಅಕಾರದಿಂದಲೇ ಅಭಿವ್ಯಕ್ತವಾಗಿದ್ದು, ಅದರ ವ್ಯಾಖ್ಯಾನವೇ ಆಗಿದೆ ಎಂಬುದನ್ನು ಸಮರ್ಥಿಸಿದೆ ಅಕಾರಕ್ಕೆ ಭೇದ, ನಿಷೇಧ ಹಾಗೂ ವಿರೋಧ ಎಂಬ ಮೂರು ಅರ್ಥಗಳು ಇವೆ[1] ಇವುಗಳಲ್ಲಿ ಭೇದ ಎಂಬ ಅರ್ಥವುಳ್ಳ ಅಕಾರದಿಂದಾಗಿ ನಾರಾಯಣ ನಾಮದ ಮೊದಲ ಅಕ್ಷರವಾದ ನಕಾರವು ಅಭಿವ್ಯಕ್ತವಾಗಿದೆ ಆದ್ದರಿಂದಲೇ ಅದು, ನಾರಾಯಣನು ಸಕಲ ಜೀವಜಡಗಳಿಗಿಂತ ಭಿನ್ನವಾಗಿರುವವನೆಂಬುದನ್ನು ತಿಳಿಸುವುದು ಮತ್ತೊಂದು ಆಧಿಕ್ಯಾರ್ಥಕ ಅಕಾರ ಸೇರಿ 'ನಾ' ಎಂದು ದೀರ್ಘವಾಗಿ ಪರಿಣಾಮಗೊಂಡಾಗ, ನಕಾರ ಸೂಚಿತಾರ್ಥದಲ್ಲಿ ಆಧಿಕ್ಯವು ಸೂಚಿತವಾಗಿ ಭಗವಂತನು ಯಾವಾಗಲೂ, ಸ್ವಾಭಾವಿಕವಾಗಿಯೇ ಜೀವಜಡಗಳಿಗಿಂತ ಭಿನ್ನನಾಗಿರುವನೆಂಬುದನ್ನು ತಿಳಿಸಲಾಗುವುದು. ಅಭಾವಾರ್ಥಕ ಅಕಾರದಿಂದ ಅಭಿವ್ಯಕ್ತವಾದುದು ನಾರಾಯಣ ನಾಮದ ಎರಡನೇ ಅಕ್ಷರವಾದ ರಕಾರವು—ಭಗವಂತನು ದೋಷರಹಿತನಾದವನೆಂಬುದನ್ನು ಹೇಳುವುದು ಅದಕ್ಕೆ ಮತ್ತೊಂದು ಆಧಿಕ್ಯಾರ್ಥಕ ಅಕಾರ ಸೇರಿ ದೀರ್ಘವಾಗಿದೆ ಆದ್ದರಿಂದ ರಕಾರೋಕ್ತಾರ್ಥದಲ್ಲಿ ಆಧಿಕ್ಯವು ಸೂಚಿತವಾಗಿ, ಭಗವಂತನು ಎಲ್ಲರಿಗಿಂತಲೂ ಅತ್ಯಧಿಕವಾಗಿ ನಿರ್ದುಷ್ಟನಾಗಿರುವವನೆಂದು ಹೇಳಲಾಗುವುದು ನಾರಾಯಣನಾಮದ ಮೂರನೆಯ ಅಕ್ಷರವಾದ 'ಯ'ಕಾರವು ವಿನಾಶಾರ್ಥಕ ಅಕಾರದಿಂದ ಅಭಿವ್ಯಕ್ತವಾಗಿದ್ದು, ಭಗವಂತನು ತನ್ನ ಭಕ್ತರ ದೋಷಗಳನ್ನು ಪರಿಹರಿಸುವವನು—ಎಂಬ ಅರ್ಥವನ್ನು ತಿಳಿಸುವುದು ವಿರೋಧ ಎಂಬ ಅರ್ಥವುಳ್ಳ ಅಕಾರದಿಂದ ಅಭಿವ್ಯಕ್ತವಾದುದು ನಾರಾಯಣ ನಾಮದ ಕೊನೆಯ ನಕಾರ ಭಗವಂತನು ಸರ್ವದೋಷವಿರುದ್ಧಗುಣಸ್ವರೂಪಿಯಾಗಿರುವವನೆಂಬುದಾಗಿ ಅದು ಬೋಧಿಸುವುದು ಹೀಗೆ ಅಕಾರದ ಅರ್ಥವನ್ನೇ ವಿವರಿಸುತ್ತಿರುವ ನಾರಾಯಣ

---

ನಾರಾಯಣೇತಿ ನಾಮ್ನಿ ವಿದ್ಯಮಾನಾಃ ಚತ್ವಾರಃ ವರ್ಣಾಃ ಕ್ರಮಾತ್ ಭೇದಾರ್ಥಕಾತ್ ಅಭಾವಾರ್ಥಕಾತ್, ವಿನಾಶಾರ್ಥಕಾತ್, ವಿರೋಧಾರ್ಥಕಾತ್ ಅಕಾರಾದೇವಾಭಿವ್ಯಕ್ತಾ ಇತಿ ತೈಃ ಕ್ರಮಶಃ ಚತ್ವಾರಃ ಅರ್ಥಾಃ ಉಚ್ಯಂತೇ। ನಾ ಏವಂ ರಾ ಇತ್ಯತ್ರ ವಿದ್ಯಮಾನಸ್ಯ ದೀರ್ಘಸ್ಯ ಆಧಿಕ್ಯಮರ್ಥಃ । ಪ್ರಥಮಾರ್ಥೇ ಆಧಿಕ್ಯಂ 'ಸದೈವ' ಇತಿ ಫಲತಿ, ದ್ವಿತೀಯಾರ್ಥೇ ಚ ಆಧಿಕ್ಯಂ 'ಸರ್ವತೋಽಪ್ಯಧಿಕತ್ವತಃ' ಇತಿ ಪರ್ಯವಸ್ಯತಿ । ಸರ್ವಮೇತದುಪರಿ ಉದಾಹ್ರಿಯಮಾಣ 'ಬ್ರಹ್ಮಸಾರ' ಪ್ರಮಾಣಾಧಾರಿತಮ್ ।

1 ಅನ್ಯತಾ ಚ ನಿಷೇಧಶ್ಚ ವಿರುದ್ಧತ್ವಮಿತಿ ತ್ರಯಃ । ಅಕಾರಾರ್ಥಾಃ

—ಐ ಉ ಭಾ 2-2-7-5

ನಾಮವು ಅಕಾರ ಎಂಬ ಬೀಜದಿಂದ ಅಭಿವ್ಯಕ್ತವಾಗಿದ್ದು[1], ಭಗವಂತನ ವ್ಯಕ್ತಿತ್ವದ ಪ್ರಧಾನ ಮುಖಗಳಾದ ಸರ್ವಭಿನ್ನತ್ವ, ದೋಷದೂರತ್ವ, ಭಕ್ತಾನುಕಂಪಿತ್ವ ಹಾಗೂ ಗುಣಸ್ವರೂಪತ್ವ—ಇವುಗಳನ್ನು ಸಾರುತ್ತಿವೆ.

೨ ಗುಣಪರಿಪೂರ್ಣನಾದವನು[2]

೩ ಸಕಲಗುಣಗಳಿಂದಲೂ ಒಮ್ಮೆಲೇ ಹೊಂದಲ್ಪಡುವವನು —ಯಾವಾಗಲೂ ಸರ್ವ ಗುಣ ಪರಿಪೂರ್ಣ[3]

---

1 ಏಕಾರ್ಥತ್ವಾದಕಾರೋಽಸೌ ನಕಾರತ್ವಮುಪಾಗತಃ । ದೀರ್ಘೀಭೂತಃ ಪುನಸ್ತೇನೈವಾಕಾರೇಣ ಸಹ ಸ್ಥಿತಃ । ಅಭಾವವಾಚ್ಯಕಾರಸ್ಯ ಹ್ಯರ್ಥೋ ರೇಫಃ ಕ್ಷಯಂ ವದನ್ । ಸೋಽತ್ರಾಪ್ಯಕಾರೇಣ ಸಹಿತೋ ದೀರ್ಘತ್ವಂ ಸಮುಪಾಗತಃ । ಅಭಾವವಾಚ್ಯಕಾರಃ ಸ ಏಕಾರ್ಥಾದ್ ಗತ್ಯಭಾವಯೋಃ । ಯಕಾರತ್ವಂ ಗತಸ್ತಸ್ಮಾನ್ನ್ಯೋ ರೇಫಸ್ಯೋತ್ತರತ್ವತಃ । ಣತ್ವಂ ಗತೋ ಹ್ಯಕಾರೋಽಸೌ ನೋ ವಿರುದ್ಧಾರ್ಥವಾಚಕಃ । ಅನ್ಯತ್ವಾತ್ ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ । ಸರ್ವದೋಷೋಜ್ಝಿತತ್ವಾಚ್ಚ ಸರ್ವತೋಽಪ್ಯಧಿಕತ್ವತಃ । ನಿರಾಸನಾಚ್ಚ ದೋಷಾಣಾಂ ಸ್ವಭಕ್ತೇಭ್ಯಃ ಸಮಂತತಃ । ಸರ್ವದೋಷವಿರುದ್ಧೋರುಗುಣಪೂರ್ಣಸ್ವರೂಪತಃ । ನಾರಾಯಣ ಇತಿ ಪ್ರೋಕ್ತೋ ಹ್ಯಕಾರಾರ್ಥೋಽಯಮೇವ ಹಿ । ತಸ್ಮಾದಕಾರಬೀಜೇಯಂ ವಿಷ್ಣೋರ್ನಾರಾಯಣಾಭಿಧಾ ।

-ಬ್ರಹ್ಮಸಾರ (ಐ. ಉ ಭಾ. 2-2-6 5)

ದೀರ್ಘೀಭೂತಃ ಪುನಸ್ತಸ್ಯೇತ್ಯತ್ರಾಪ್ಯಾಧಿಕ್ಯವಾಚಿನಾಕಾರೇಣೇತ್ಯರ್ಥಃ । ಕಿಂ ತದನ್ಯತ್ವೇ ಆಧಿಕ್ಯಮಿತ್ಯತ ಉಕ್ತಂ—ಸದೈವೇತಿ । ಸರ್ವತೋಽಪ್ಯಧಿಕತ್ವತ ಇತಿ ತತ್ಪರಾಕಾರಸ್ಯಾರ್ಥಃ ।

-ತಾತ್ಪರ್ಯನಿರ್ಣಯಮ್

೨ 2 ಅರಾಃ ದೋಷಾಸ್ತದ್ವಿರುದ್ಧತ್ವಾನ್ನಾರಾಃ ಗುಣಾಃ ತೇಷಾಮಯನಃ ನಾರಾಯಣಃ । 'ಲ್ಯುಟಃ ಟಿತ್ಕರಣಸಾಮರ್ಥ್ಯಾತ್ ಲ್ಯುಡಂತಃ ಅಯನಶಬ್ದಃ ನಪುಂಸಕಾದನ್ಯಯೋಃ ಲಿಂಗಯೋರಪ್ಯಸ್ತೀತಿ ಜ್ಞಾಯತೇ' ।

೩ 3 ನಾರ್ಯೈಃ ಸಹೇಯತ ಇತಿ ನಾರಾಯಣಃ ।

-ತತ್ತ್ವದೀಪಿಕಾಧಾರೇಣ

ಮೊದಲ ಬ್ರಹ್ಮಸೂತ್ರದಲ್ಲಿ ಬ್ರಹ್ಮ ಎನಿಸುವವನ ಜಿಜ್ಞಾಸೆಯನ್ನು ಮಾಡಬೇಕೆಂದು ವಿಧಿಸಿದ್ದು, ಗುಣಪೂರ್ಣನಾದವನೇ ಬ್ರಹ್ಮ ಎನಿಸುವ ಪ್ರಯುಕ್ತ ಗುಣಪೂರ್ಣನಾಗಿರುವುದರಿಂದ ನಾರಾಯಣ ಎಂದು ಪ್ರಸಿದ್ಧನಾಗಿರುವವನೇ ಆ ಬ್ರಹ್ಮ, ಅವನ ಜಿಜ್ಞಾಸೆಯನ್ನೇ ಅಲ್ಲಿ ವಿಧಿಸಲಾಗಿದೆ— ಎಂಬುದಾಗಿ ಶ್ರೀಮದಾಚಾರ್ಯರು ಸಮರ್ಥಿಸುತ್ತ ನಾರಾಯಣನಾಮದ ಗುಣಪೂರ್ಣ ಎಂಬ ಅರ್ಥವನ್ನು ಉಲ್ಲೇಖಿಸಿರುವರು.[1]

೨ ದೋಷದೂರನಾದವನು[2]

೩ ಶ್ರವಣ ಮನನಾದಿಗಳಿಂದ ಜ್ಞೇಯನಾದವನು[3]

೪ ನಾಶವಿಲ್ಲದ ಮುಕ್ತರ ಸಮುದಾಯದಿಂದ ಹೊಂದಲ್ಪಡುವವನು[4]

ನಾಲ್ಕು ಅಧ್ಯಾಯಗಳನ್ನೊಳಗೊಂಡ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸಲು ಹೊರಟಿರುವ ಶ್ರೀಮದಾಚಾರ್ಯರು, ಆ ಸೂತ್ರ ಭಾಷ್ಯದ ಮಂಗಲಪದ್ಯದಲ್ಲಿ ಶ್ರೀಮನ್ನಾರಾಯಣನನ್ನೇ ನಮಿಸಿದ್ದು, ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳಿಂದ ಸಿದ್ಧಾಂತಿಸಲ್ಪಡುವ ನಾಲ್ಕು ಪ್ರಮುಖ

---

1 ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ । ಗುಣಾ ನಾರಾ ಇತಿ ಜ್ಞೇಯಾಸ್ತದ್ವಾನ್ ನಾರಾಯಣಃ ಸ್ಮೃತಃ । ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಮ್ । ಅತೋ ನಾರಾಯಣಸ್ಯೈವ ಜಿಜ್ಞಾಸಾಽತ್ರ ವಿಧೀಯತೇ ॥

—ಅ. ವ್ಯಾ. 1-1-84

೨ 2 ಅರಾಣಾಮಯನಂ ನ ಭವತೀತಿ ಯೋಜನಾಯಾಂ ದೋಷವರ್ಜಿತತ್ವಂ (ನಾರಾಯಣ-ಶಬ್ದೇನ ವಕ್ತಿ)

—ತತ್ತ್ವದೀಪಿಕಾ

೩ 3 ನಾರಂ ಚೇತನವಿಶೇಷಸಂಬಂಧಿತ್ವಾಜ್ಜ್ಞಾನಂ, ತೇನ ನಾರೇಣ ಈಯತ ಇತಿ ನಾರಾಯಣಃ ।

—ತತ್ತ್ವದೀಪಿಕಾಧಾರೇಣ

೪ 4 ನ ರೀಯಂತೇ ಇತಿ ನರಾ ಮುಕ್ತಾಃ, ತೇಷಾಂ ಸಮುದಾಯೋ ನಾರಃ ತೇನೇಯತ ಇತಿ ನಾರಾಯಣಃ ।

—ತತ್ತ್ವದೀಪಿಕಾಧಾರೇಣ

ಪ್ರಮೇಯಗಳಿಗೆ ಸಂಬಂಧಿಸಿದಂತೆ ನಾರಾಯಣ ನಾಮದ ಗುಣಪೂರ್ಣತ್ವ, ದೋಷದೂರತ್ವ ಜ್ಞೇಯತ್ವ ಹಾಗೂ ಗಮ್ಯತ್ವ ಎಂಬ ನಾಲ್ಕು ಅರ್ಥಗಳನ್ನು ಸೂಚಿಸುವಂತೆ ನಾಲ್ಕು ವಿಶೇಷಣ ಗಳಿಂದ ನಾರಾಯಣನನ್ನು ವಿಶೇಷಿಸಿರುವರು[1]

೭ ಜಲವೇ ತನ್ನ ನಿವಾಸ ಸ್ಥಾನವಾಗಿ ಉಳ್ಳವನು.[2]

'ಪ್ರಲಯಕಾಲದಲ್ಲಿ ಪ್ರಕೃತಿಯು ನೀರಂತೆ ವ್ಯಾಪಿಸಿದ್ದು[3]. ಅಂತಹ ನೀರಿನ ಮೇಲೆ ಶೂನ್ಯ ಎಂಬ ಹೆಸರಿನ ಭಗವಂತನು ಪವಡಿಸುವನು. ನೀರನ್ನು ಆಶ್ರಯಿಸಿ ಮಲಗಿರುವ ಆ ಭಗವದ್ರೂಪವು ನಾರಾಯಣ ಎನಿಸಿದೆ.'—ಎಂದು 'ವ್ಯೋಮಸಂಹಿತೆ' ತಿಳಿಸಿದೆ.[4]

ಹೀಗೆ ಭಗವಂತನ ಮೂಲರೂಪವಷ್ಟೇ ಅಲ್ಲ, ಮೂಲರೂಪದಿಂದ ಅಭಿವ್ಯಕ್ತ್ತದ, ಬ್ರಹ್ಮಾಂಡವನ್ನು ಭೇದಿಸಿ, ಪ್ರಕಾಶಿತನಾದ ಪುರುಷನಾಮಕನೂ ತಾನು ಪ್ರಕಾಶಿತನಾದವನೇ ತನಗೆ ಆವಾಸಸ್ಥಾನವೊಂದು ಬೇಕೆಂದು ಜಲವನ್ನು ಸೃಷ್ಟಿಮಾಡಿ, ಅದರಲ್ಲಿ ಸಾವಿರ ವರ್ಷಕಾಲ ವಾಸಮಾಡಿದನು ಆದ್ದರಿಂದಲೂ ಅವನು ನಾರಾಯಣ ಎಂದೆನಿಸುವನೆಂದು ಭಾಗವತ

---

1 ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥
—ಬ್ರ ಸೂ ಭಾ.

ನಾರಾಯಣಪದೇನ ಚೈತತ್ಸಮನ್ವಯಾದ್ಯರ್ಥಚತುಷ್ಟಯಂ ವಿಶೇಷಣಪದಚತುಷ್ಟಯೋಪದಿಷ್ಟಮಭಿಪ್ರೈತಿ ।
—ತತ್ತ್ವದೀಪಿಕಾ

೭ 2 ನಾರಾಃ ಆಪಃ ಅಯನಂ ಪೂರ್ವಂ ನಿವಾಸಸ್ಥಾನಂ ಯಸ್ಯ ಸಃ ನಾರಾಯಣಃ ।

3 ಯದಾ ಹಿ ಸಲಿಲತ್ವೇನ ಪ್ರಕೃತಿರ್ವ್ಯಾಪ್ಯ ತಿಷ್ಠತಿ । ತದಾ ತಸ್ಯಾಂ ಹರೇರ್ವಿಷ್ಣೋರೇಕೋ ದ್ರಷ್ಟಾ ವ್ಯವಸ್ಥಿತಃ ।
—ಬೃ. ಉ. ಭಾ. 6-3-32

4 'ಯಃ ಶೇತೇ ಪ್ರಳಯೇ ವಿಷ್ಣುಃ ಶೂನ್ಯನಾಮಾ ಮಹಾಕೃತಿಃ । ಸ ತು ನಾರಾಯಣೋ ನಾಮ ನರಾಣಾಮಯನತ್ವತಃ'
—ವ್ಯೋಮಸಂಹಿತಾ (ಭಾಗ. ತಾ. ನಿ. 2-6-41)

ತಿಳಿಸಿದೆ [1] ಮನಸ್ಮೃತಿಯೂ ಈ ಅಭಿಪ್ರಾಯವನ್ನೇ ಹೊಂದಿದೆ [2]

ಇಷ್ಟೇ ಅಲ್ಲ, ಭಗವಂತನು ಯಾವಾಗಲೂ ಅಪಾರವಾದ ಜಲರಾಶಿಯಲ್ಲಿ ಇರುವುದರಿಂದಲೂ ನಾರಾಯಣ ಎನಿಸಿರುವನೆಂದು ಶ್ರೀ ಮಧ್ವಾಚಾರ್ಯರು ಅಭಿಪ್ರಾಯಪಟ್ಟಿರುವರು [3]

೮ ಜೀವಾತ್ಮರ ಸಮೂಹಕ್ಕೆ ಆಶ್ರಯನಾಗಿ ಇರುವವನು ಅಥವಾ ಜೀವಾತ್ಮರ ಸಮೂಹವೇ ನಿವಾಸಸ್ಥಾನವಾಗಿ ಉಳ್ಳವನು [4]

ಭಗವಂತನು ನಾರ ಎನಿಸುವ ಜೀವಸಮೂಹಕ್ಕೆ ಪರಮಾಶ್ರಯನಾಗಿರುವುದರಿಂದಲೂ ಜೀವ ಸಮೂಹವು ಭಗವಂತನಿಗೆ ಆವಾಸಸ್ಥಾನವಾಗಿರುವುದರಿಂದಲೂ ಭಗವಂತನು ನಾರಾಯಣ ಎಂದೆನಿಸಿ

---

1 ಪುರುಷೋಽಂಡಂ ವಿನಿರ್ಭಿದ್ಯ ಯದಾಽಸೌ ಸ ವಿನಿರ್ಗತಃ ।
ಆತ್ಮನೋಽಯನಮನ್ವಿಚ್ಛನ್ನಪೋಽಸ್ರಾಕ್ಷೀಚ್ಛುಚಿಃ ಶುಚೀಃ ॥
ತಾಸ್ವವಾತ್ಸೀತ್ ಸ್ವಸೃಷ್ಟಾಸು ಸಹಸ್ರಪರಿವತ್ಸರಾನ್ ।
ತೇನ ನಾರಾಯಣೋ ನಾಮ ಯದಾಪಃ ಪುರುಷೋದ್ಭವಾಃ ।
-ಭಾಗ. 2-10-10,11

2 ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ ॥
-ಮನುಸ್ಮೃತಿ 1-10

3 'ಅಂಭಸ್ಯಪಾರ ಇತ್ಯುಕ್ತೋ ನಾರಾಯಣಪದೇರಿತಃ । ಆಪೋ ನಾರಾ ಇತಿ ಹ್ಯಾಹ. '
-ಅ. ವ್ಯಾ 1-1-85, 86

'ಹಿ ಯಸ್ಮಾತ್ ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ'-ಇತಿ ಸ್ಮೃತಿರಪ್ಸುಸ್ಥಿತತ್ವಂ ನಾರಾಯಣಶಬ್ದಾರ್ಥಮಾಹ । ತಸ್ಮಾದಪಾರೇಽಂಭಸಿ ಸ್ಥಿತ ಇತಿ ವಾಕ್ಯಂ ನಾರಾಯಣಶಬ್ದಸಮಾನಾರ್ಥಂ ಭವತಿ
-ಶ್ರೀಮನ್ನ್ಯಾಯಸುಧಾ

೪ 4 ನರಾಣಾಂ ಸಂಘಾಃ ನಾರಾಃ ತೇಷಾಂ ಅಯನಂ ನಾರಾಯಣಃ । ನಾರಾಃ ಅಯನಂ ಯಸ್ಯ ಸಃ ನಾರಾಯಣಃ ।
-ವಿ ರಾ

ರುವನೆಂದು ಪಾದ್ಮ ಸಾರಿದೆ.[1]

೯ (ಕಲ್ಪಾಂತದಲ್ಲಿ) ಚರಾಚರ ಜಗತ್ತನ್ನು ತನ್ನ ಉದರದಲ್ಲಿ ಆಧರಿಸಿಕೊಂಡಿರುವವನು.[2]

೧೦ (ಸೃಷ್ಟಿಕಾಲದಲ್ಲಿ) ಚರಾಚರ ಜಗತ್ತನ್ನು ಸೃಷ್ಟಿಸಿರುವವನು.[3]

೧೧ ಚರಾಚರ ಜಗತ್ತಿಗೆ ಜ್ಞಾನವನ್ನು ಅನುಗ್ರಹಿಸುವವನು.[4]

ಚರಾಚರ ಜಗತ್ತು 'ನಾರ' ಎನಿಸಿದ್ದು, ಪ್ರಲಯಕಾಲದಲ್ಲಿ ಭಗವಂತನು ಅದನ್ನು ತನ್ನ ಉದರದಲ್ಲಿ ಧರಿಸಿಕೊಂಡಿರುವುದರಿಂದ, ಸೃಷ್ಟಿಕಾಲದಲ್ಲಿ ಸೃಷ್ಟಿಸುವುದರಿಂದ ಹಾಗೂ ಅದರಲ್ಲಿಯ ಚೇತನರಿಗೆ ಜ್ಞಾನವನ್ನು ನೀಡುವುದರಿಂದ ಭಗವಂತನು ನಾರಾಯಣ ಎಂದೆನಿಸಿರುವನೆಂದು ಪ್ರಮಾಣ ವೊಂದು ಸಾರಿದೆ.[5]

---

1 ನಾರಾ ಇತ್ಯಾತ್ಮನಾಂ ಸಂಘಾಸ್ತೇಷಾಂ ಗತಿರಸೌ ಹರಾ । ಭವಂತಿ ತೇ ಚಾಯತನಂ ತೇನ ನಾರಾಯಣಃ ಸ್ಮೃತಃ ।

-ವಿ. ರಾ ಉದ್ಧೃತ

೯ 2 'ಚರಾಚರಂ ಜಗತ್ ಕೃತ್ಸ್ನಂ ನಾರಮಿತ್ಯಭಿಧೀಯತೇ'-ಇತಿ ನಾರಂ ಚರಾಚರಂ ಜಗತ್ । ಪ್ರಲಯಕಾಲೇ ತಸ್ಯ ಅಧ್ರಿಯಮಾಣತ್ವಾತ್ ನಾರಾಯಣಃ ।

-ವಿ ರಾ. ಅಧಾರೇಣ

೧೦ 3 ನಾರಸ್ಯ ಚರಾಚರಜಗತಃ ಆಯನಂ ಬಹಿರಾಗಮನಂ ಯಸ್ಮಾತ್ಸಃ ನಾರಾಯಣಃ ।

-ವಿ. ರಾ. ಅಧಾರೇಣ

೧೧ 4 ನಾರಸ್ಯ ಆಯನಂ ಗತಿರ್ಯಸ್ಮಾತ್ಸಃ ನಾರಾಯಣಃ ।

-ವಿ ರಾ. ಅಧಾರೇಣ

5 'ಕಲ್ಪಾಂತೇ ಚ ಜಗತ್ ಕೃತ್ಸ್ನಂ ಗ್ರಸಿತ್ವಾ ಯೇನ ಧಾರ್ಯತೇ । ಪುನಃ ಸಂಸೃಜ್ಯತೇ ಯೇನ ಸ ವೈ ನಾರಾಯಣಃ ಸ್ಮೃತಃ । ಚರಾಚರಂ ಜಗತ್ ಕೃತ್ಸ್ನಂ ನಾರಮಿತ್ಯಭಿಧೀಯತೇ । ತಸ್ಯಾಪ್ಯಸ ಗತಿರ್ಯೇನ ತೇನ ನಾರಾಯಣಃ ಸ್ಮೃತಃ'

-ವಿ. ರಾ. ಉದ್ಧೃತ ।

೧೨ ನರರಿಗೆ ಉಪಕಾರ ಮಾಡುವ ಪ್ರಯುಕ್ತ 'ನಾರ' ಎನಿಸುವ ವೇದದಿಂದ ಪ್ರತಿಪಾದ್ಯನಾಗಿರುವವನು[1]

೧೩ ನರರ ಸಮುದಾಯಕ್ಕೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ ಬಂಧ ಹಾಗೂ ಮೋಕ್ಷಗಳನ್ನು ನೀಡುವ ಪ್ರಯುಕ್ತ ಅದಕ್ಕೆ ಆಶ್ರಯನಾಗಿರುವವನು[2]

೧೪ ನರರಿಗೆ ಅಧಿಪತಿಯಾಗಿರುವ ವಾಯುದೇವನಿಗೆ ಪರಮ ಪ್ರೇಮಾಸ್ಪದನಾಗಿರುವವನು[3]

೧೫ ನರರಿಗೆ ಅಧಿಪತಿ ಆಗಿರುವ ಮುಖ್ಯಪ್ರಾಣನಿಗೆ ವಿಶೇಷವಾಗಿ ಆಶ್ರಯನಾಗಿರುವವನು[4]

ಭಗವಂತನು ಮುಖ್ಯಪ್ರಾಣನಿಗೆ ಮುಖ್ಯವಾಗಿ ಆಶ್ರಯವಾಗಿರುವ ಪ್ರಯುಕ್ತ ಮುಖ್ಯಪ್ರಾಣ ಅನಿಲ ಎಂದೇ ಎನಿಸಿರುವನು[5]

೧೬ ನರರಿಗೆ ಸಂಬಂಧಿಸಿರುವುದರಿಂದ, ಅಥವಾ ಕ್ಷಯವಿಲ್ಲದುದರಿಂದ ಅಥವಾ ದುಃಖವನ್ನು ಹೋಗಲಾಡಿಸುವುದರಿಂದ ಅಥವಾ ದೋಷಗಳನ್ನು ಹೋಗಲಾಡಿಸುವುದರಿಂದ

---

೧೨ 1 ಉಪಕಾರತ್ವಾದಿನಾ ನರಾಣಾಮಿಮೇ ನಾರಾ ವೇದಾದಯಃ। ಪ್ರತಿಪಾದ್ಯತಯಾ ತದಯನತ್ವಾತ್ ನಾರಾಯಣಃ ।

-ಸುಧಾ (1-1-1)

೧೩ 2 ನರಸಮೂಹೋ ನಾರಮ್ । ಉದ್ಭವಾದಿದಾತೃತಯಾ ತದಯನತ್ವಾತ್ ನಾರಾಯಣಃ।

-ಸುಧಾ (1-1-1)

೧೪ 3 ನರಾಣಾಮಧಿಪತಿರ್ನಾರೋ ಮುಖ್ಯವಾಯುಃ। ಪರಮಪ್ರೇಮಾಸ್ಪದತಯಾ ತಸ್ಯಾಯನತ್ವಾತ್ ನಾರಾಯಣಃ ।

-ಸುಧಾ

೧೫ 4 ನರಾಣಾಮಧಿಪತಿರ್ನಾರೋ ಮುಖ್ಯವಾಯುಃ ತಸ್ಯ ವಿಶೇಷತ ಅಯನತ್ವಾತ್ ನಾರಾಯಣಃ ।

5 '. .ವಿಷ್ಣುಃ... । ಅದೋಷತ್ವಾದ ಇತ್ಯುಕ್ತೋ ವಾಯುಸ್ತನ್ನಿಲಯೋ ಯತಃ । ಅನಿಲಂ ತತ ಏವಾಸೌ...'

-ಬೃ. ಉ ಭಾ' 7-20-3

ಅಥವಾ ನಿರ್ದುಷ್ಟ ವೇದಗಳಿಂದ ಉಂಟಾಗುವುದರಿಂದ ನಾರ ಎನಿಸುವ ಜ್ಞಾನಕ್ಕೆ ವಿಷಯ ನಾಗುವವನು[1]

೧೭ ನಾಶರಹಿತಳಾದ ಲಕ್ಷ್ಮೀದೇವಿಗೆ ಪತಿ ಆಗಿರುವವನು[2]

ಅನುವ್ಯಾಖ್ಯಾನದ ಪ್ರಾರಂಭದ ಮಂಗಲಾಚರಣೆಯಲ್ಲಿ ಭಗವಂತನನ್ನು ಲಕ್ಷ್ಮೀಪತಿಯನ್ನಾಗಿ ಸ್ತುತಿಸುವುದಕ್ಕಾಗಿಯೂ 'ನಾರಾಯಣ' ನಾಮದಿಂದ ಉಲ್ಲೇಖಿಸಲಾಗಿದೆ—ಎಂದು ತೋರಿಸಿ ಕೊಡುವುದಕ್ಕಾಗಿಯೇ ನ್ಯಾಯಸುಧಾದ ಮಂಗಲ ಪದ್ಯದಲ್ಲಿ ಭಗವಂತನನ್ನು 'ಶ್ರಿಯಃ ಪತಿ' ಎಂದೇ ಉಲ್ಲೇಖಿಸಲಾಗಿದೆ.[3]

೧೮ ನಿರ್ದುಷ್ಟನಾದವನು ಹಾಗೂ ಶ್ರೇಷ್ಠನಾದವನು[4]

೧೯ ನೀರು ಚಲಿಸುವಂತೆ ಅನುಗ್ರಹಿಸುವವನು[5]

---

1 ನರಸಂಬಂಧಿತ್ವಾನ್ನ ರೀಯತೇಽನೇನೇತಿ ವಾ, ನಾರಮಣಂ ಯೇನೇತಿವಾ, ನ ದೋಷಾ ಯಂನೇತಿ ವಾ, ನಿರ್ದೋಷವೇದೋತ್ಪನ್ನತ್ವಾದ್ವಾ ನಾರಂ ಜ್ಞಾನಂ ವಿಷಯತಯಾ ತದ ಯನತ್ವಾತ್ ನಾರಾಯಣಃ ।

–ತ. ಪ್ರ. (1-1-1)

೧೭ 2 'ಅಯನಸ್ತು ಧವೇ ಶ್ರೇಷ್ಠೇ ' ಇತ್ಯುಕ್ತೇರ್ನಾರಾಯಾ (ನರೀಯತ ಇತಿ ನಾಶ ರಹಿತಾಯಾ) ರಮಾಯಾಃ ಪತಿಃ ನಾರಾಯಣಃ ।

–ವಿ ರಾ

3 ಅತ್ರ 'ಶ್ರಿಯಃ ಪತ್ಯೇ' ಇತ್ಯುಕ್ತ್ಯಾ ನಾರಾ ಲಕ್ಷ್ಮೀಃ ಪತಿತ್ವೇನ ತದಯನಮಿತ್ಯಭಿಪ್ರಾಯ-ವ್ಯಂಜನೇನಾವಶ್ಯಕವಾಙ್ಮನಸದೇವತಾನಮನಾಭಾವಪ್ರಯುಕ್ತನ್ಯೂನತಾಶಂಕಾಽಪಹ - ಸ್ತಿತಾ ಭವತಿ ..'

–ಚಷಕ (ಸುಧಾಟಿಪ್ಪಣೀ)

೧೮ 4 ನ ವಿದ್ಯಂತೇ ಅರಾಃ ಯಸ್ಮಿನ್ ಸಃ ನಾರಃ । ಶ್ರೇಷ್ಠತ್ವಾದಯನಃ । 'ಅಯನಸ್ತು ಧವೇ ಶ್ರೇಷ್ಠೇ . ' । ನಾರಶ್ಚಾಸೌ ಅಯನಶ್ಚ ನಾರಾಯಣಃ ।

೧೯ 5 ನಾರಾಃ ಅಪಃ ತಾಸಾಂ ಅಯನಂ ಗಮನಂ ಯಸ್ಮಾತ್ಸಃ ನಾರಾಯಣಃ ।

೨೦ ಲಕ್ಷ್ಮೀದೇವಿಗೆ ಜ್ಞಾನಸ್ಫೂರ್ತಿಯನ್ನು ಅನುಗ್ರಹಿಸುವವನು[1]

೨೧ ಲಕ್ಷ್ಮೀದೇವಿಯು (ಎಲ್ಲರಿಗೆ) ಆಶ್ರಯ ಆಗುವಂತೆ ಅನುಗ್ರಹಿಸುವವನು[3]

೨೨ ನಿರ್ದುಷ್ಟಗಳಾದ ವೇದಗಳು ತಿಳಿಯಲ್ಪಡುವಂತೆ ಅನುಗ್ರಹಿಸುವವನು.[3]

ಬಾದರಾಯಣರು ಎಲ್ಲರ ಹೃದಯದಲ್ಲಿದ್ದು ಓಂಕಾರ ಪೂರ್ವಕವಾದ ವಿದ್ಯೆಗಳನ್ನು ಪ್ರೇರಿಸುತ್ತಿರುವರು—ಎಂಬುದಾಗಿ ಸಾತ್ತ್ವತಸಂಹಿತೆ ತಿಳಿಸಿದೆ[4]

೨೩ ನಿರ್ದುಷ್ಟಗಳಾದ ವೇದಗಳಿಂದಲೇ ತಿಳಿಯಲ್ಪಡುವವನು[5]

*　　　　*　　　　*

ಭಗವಂತನ ರೂಪಗಳಲ್ಲಿ ನಾಮಪ್ರಯುಕ್ತವಾಗಿ ಆಗಲಿ, ಗುಣಪ್ರಯುಕ್ತವಾಗಿ ಆಗಲೀ ಏನೂ ವ್ಯತ್ಯಾಸವಿಲ್ಲ. ಆದರೂ ನಾರಾಯಣ ಎಂಬ ನಾಮ ಭಗವಂತನಿಗೆ ಪ್ರಿಯವಾದುದು[6] ಸಮಸ್ತ

---

೨೦ 1 ನಾರಾಯಾಃ ಲಕ್ಷ್ಮ್ಯಾಃ ಅಯನಂ ಜ್ಞಾನಂ ಯಸ್ಮಾತ್ಸಃ ನಾರಾಯಣಃ ।

೨೧ 2 ನಾರಾ ಲಕ್ಷ್ಮೀ ಅಯನಂ ಸರ್ವಸ್ಯಾಶ್ರಯಃ ಯಸ್ಮಾತ್ಸಃ ನಾರಾಯಣಃ ।

೨೨ 3 ನಾರಾಃ ನಿರ್ದುಷ್ಟಾ ವೇದಾಃ ತೇಷಾಂ ಅಯನಂ ಜ್ಞಾನಂ ಯಸ್ಮಾತ್ಸಃ ನಾರಾಯಣಃ ।

4 'ಹೃದಿಸ್ಥೋ ಬಾದರಾಯಣಃ । ಓಂಕಾರಪೂರ್ವಕಾ ವಿದ್ಯಾಃ ಪ್ರೇರಯತ್ಯಖಿಲೇಷ್ವಪಿ । ಸದೈವ 'ಸಾತ್ತ್ವತ ಸಂಹಿತಾ (ಋ. ವೇ. ಭಾ 1-27)

೨೩ 5 ನಾರೈಃ ವೇದೈಃ ಈಯತೇ ಜ್ಞಾಯತ ಇತಿ ನಾರಾಯಣಃ ।
ಅಧಿಕಾಃ ಅರ್ಥಾಃ ಬಿದರಹಳ್ಳಿ ಶ್ರೀನಿವಾಸತೀರ್ಥೈಃ ವಿರಚಿತೇ 'ನಾರಾಯಣಪದಸ್ಯಾರ್ಥಃ' ಇತಿ ಗ್ರಂಥೇ ದ್ರಷ್ಟವ್ಯಾಃ । ತತ್ರ ದ್ವ್ಯಧಿಕಸಪ್ತತ್ಯರ್ಥಾಃ ಪ್ರದರ್ಶಿತಾಃ ।

*　　　　*　　　　*

6 'ನ ರೂಪಾಣಾಂ ವಿಶೇಷೋಽಸ್ತಿ ಗುಣತೋ ನಾಮತೋಽಪಿ ವಾ । ತಥಾಽಪಿ ತತ್ ಪ್ರಿಯಂ ನಾಮ ನಾರಾಯಣ ಇತಿ ಸ್ಮ ಹ । ವಿಶೇಷತಃ ಸಮಸ್ತಾನಾಂ ನಾಮ್ನಾಂ ತಸ್ಯಾರ್ಥ ಏವ ತು । ವಿಜ್ಞಾಯತೇ ಗುಣೈಃ ಪೂರ್ತಿರ್ನಾಮಸಾಮ್ಯಂ ತದಾ ತಥಾ'

-ಛಾಂ. ಉ. ಭಾ. (2-1-9)

ನಾಮಗಳ ಅರ್ಥ ಇದರಲ್ಲಿ ಅಡಗಿದೆ. ನಾರಾಯಣ ಎಂಬ ನಾಮದ ಮೂಲಕ ಭಗವಂತನನ್ನು ಗುಣಪೂರ್ಣನನ್ನಾಗಿ ಉಪಾಸಿಸಿಯೇ ದೇವತೆಗಳು ಆಧಿಕ್ಯವನ್ನು ಪಡೆದಿರುವರು[1]

## ಜಿಜ್ಞಾಸೆ

### [ಆಚಾರ್ಯತ್ರಯರ ಸಮ್ಮತಿ]

ಪ್ರ:- ನಾರಾಯಣನು ಸರ್ವೋತ್ತಮನು ಎಂದು ಆಚಾರ್ಯತ್ರಯರೂ ಒಪ್ಪಿದ್ದಾರೆಂದು ಕೆಲವರು ಹೇಳುತ್ತಾರೆ. ಅದು ವಾಸ್ತವವೋ? ಶಂಕರಾಚಾರ್ಯರು ವಿಷ್ಣುವನ್ನು ಸ್ತೋತ್ರ ಮಾಡುವಾಗ ವಿಷ್ಣುವು ಸರ್ವೋತ್ತಮನು ಎಂದು ಹೇಳಿದರೆ ಇತರ ದೇವತೆಗಳನ್ನು ಸ್ತೋತ್ರ ಮಾಡುವಾಗ ಅವರು ಸರ್ವೋತ್ತಮರೆಂದು ಹೇಳುತ್ತಾರೆ ಅವರ ಸ್ತೋತ್ರಗಳನ್ನು ಆಧಾರವನ್ನಾಗಿ ಇಟ್ಟು ಕೊಂಡು ಅವರ ಅಭಿಪ್ರಾಯವನ್ನು ನಿರ್ಧರಿಸುವಂತಿಲ್ಲವಲ್ಲ?

ಉ - ಶಂಕರಾಚಾರ್ಯರು ಗೀತೆಗೆ ಭಾಷ್ಯವನ್ನು ಬರೆಯುವಾಗ ಆರಂಭದಲ್ಲಿ 'ನಾರಾಯಣಃ ಪರೋಽವ್ಯಕ್ತಾತ್ ಅಂಡಮವ್ಯಕ್ತಸಂಭವಮ್ । ಅಂಡಸ್ಯಾಂತಸ್ತ್ವಿಮೇ ಲೋಕಾಃ ಸಪ್ತದ್ವೀಪಾ ಚ ಮೇದಿನೀ ।' ಎಂದು ನಾರಾಯಣನ ಸರ್ವೋತ್ತಮತ್ವ ಪ್ರತಿಪಾದಕ ಮಂಗಳಾಚರಣ ಶ್ಲೋಕವನ್ನು ಮಾಡಿದ್ದಾರೆ ಮತ್ತು ಗೀತಾಭಾಷ್ಯದಲ್ಲಿ 'ಯೋ ಲೋಕತ್ರಯ-ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ' ಈ ಗೀತಾದಲ್ಲಿರುವ ಈಶ್ವರ ಎಂಬ ರುದ್ರನಲ್ಲಿ ಪ್ರಸಿದ್ಧ ಶಬ್ದಕ್ಕೆ 'ಈಶನಶೀಲೋ ನಾರಾಯಣಃ' । ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ ಈ ಕಾರಣ ಗಳಿಂದ ಗೀತಾಶಾಸ್ತ್ರವು ನಾರಾಯಣ ಸರ್ವೋತ್ತಮತ್ವ ಪ್ರತಿಪಾದಕವೆಂದು ಶಂಕರಾಚಾರ್ಯರು ಒಪ್ಪಿದ್ದಾರೆಂದು ತಿಳಿಯುತ್ತದೆ ಗೀತೆಯು ಸರ್ವೋಪನಿಷತ್‌ಗಳ ಸಾರವೆಂದು ಅವರಿಗೆ ಒಪ್ಪಿಗೆ ಇದ್ದದ್ದರಿಂದ ನಾರಾಯಣ ಸರ್ವೋತ್ತಮತ್ವ ವಿಷಯದಲ್ಲಿ ಉಪನಿಷತ್ ಹಾಗೂ ಗೀತೆಗಳ ಆಧಾರವು ಎಂದು ಅವರ ಅಭಿಪ್ರಾಯವು ಎಂದು ನಿರ್ಧಾರವಾಗುತ್ತದೆ ಆದುದರಿಂದ ಆಚಾರ್ಯತ್ರಯರೂ ನಾರಾಯಣ ಸರ್ವೋತ್ತಮತ್ವ ಪ್ರತಿಪಾದಕರು ಎಂಬುದು ನಿಶ್ಚಯ



೨೪೬ ನರಃ

೧ ಯಾವುದೇ ರೀತಿಯ ನಾಶಕ್ಕೊಳಗಾಗದವನು[1]

---

1 'ನಾಮ್ನೋ ನಾರಾಯಣಾಖ್ಯಸ್ಯ ಗುಣೈಃ ಪೂರ್ತಿಂ ಹಿ ದೇವತಾಃ । ವಿಜ್ಞಾಯಾರ್ಥ-ಮುಪಾಸ್ಯೈವ ಸರ್ವಾಧಿಕ್ಯಮಥಾಪಿರೇ'
-ಛಾಂ- ಉ. ಭಾ. 2-1-9

೧ 2 ನ ರೀಯತ ಕ್ಷೀಯತೇ ನ ರಿಷ್ಯತಿ ನಶ್ಯತೀತಿ ವಾ ನರಃ । 'ರೀಙ್ ಕ್ಷಯೇ' 'ರಿಷ ಹಿಂಸಾಯಾಮ್' ವಾ ।

೨ ನಿರ್ವಿಕಾರನಾಗಿರುವವನು[1]

ಋಗ್ವೇದದಲ್ಲಿ ಉಪೇಂದ್ರ ಮತ್ತು ಸಂಕರ್ಷಣನಾಮಕ ಭಗವದ್ರೂಪಗಳನ್ನು ನಿರ್ವಿಕಾರಿ ಹಾಗೂ ಅವಿನಾಶಿ ಎಂಬ ಅರ್ಥಗಳಲ್ಲಿ 'ನರಾ' ಎಂದು ವಿಶೇಷಿಸಲಾಗಿದೆ.[2]

ಹಾಗೆಯೇ ವರುಣನಾಮಕ ಭಗವಂತನಿಗೆ ಅವಿನಾಶಿ ಎಂಬ ಅರ್ಥದಲ್ಲಿ 'ನರ' ಎಂದು ವಿಶೇಷಿಸಲಾಗಿದೆ[3] ನೀರಿಗೆ ನಾರ ಎಂಬ ಹೆಸರಿನ ಔಚಿತ್ಯವನ್ನು ವಿವರಿಸ ಹೊರಟ 'ನಾರಾಯಣಾ-ಧ್ಯಾತ್ಮವು', ಭಗವಂತನು ಯಾವುದೇ ರೀತಿಯ ನಾಶಕ್ಕೊಳಗಾಗದ ಪ್ರಯುಕ್ತ ನರ ಎನಿಸುವ ನೆಂದು ಸಂದೇಶಿಸಿದೆ[4] ಭಗವಂತನು ಸರ್ವವಿಲಕ್ಷಣನೆಂದು ತಿಳಿಸಿದ ಯಾಜ್ಞವಲ್ಕ್ಯರು, ಅಂತಹ

---

೨ 1 ನ ಪರಿವರ್ತತ ಇತ್ಯಸ್ಮಿನ್ನರ್ಥೇ 'ಲಾ ಪರಿವರ್ತನೇ' ಧಾತೋಃ ನಞ್‌ಪೂರ್ವಕಾತ್ ಕ-ಪ್ರತ್ಯಯೇ ಲಲಯೋರಭೇದಾತ್ 'ನರಃ' ಇತಿ ಸಿಧ್ಯತಿ ।
–ಮಂ. ಮಂ. ಆಧಾರೇಣ

2 ವಾಯುವಿಂದ್ರಶ್ಚ ನರಾ ।
ಋ. ವೇ. 2–6

ತದರ್ಥಂ ಕ್ಷಿಪ್ರಮಾಯಾತಂ ಅಚಲೌ । ನರೌ ತಾವವಿನಾಶಿತ್ವಾತ್ '
ಋ. ವೇ ಭಾ.

ನರಾವಿತ್ಯನೂದ್ಯಾಚಲಾವಿತಿ ವ್ಯಾಖ್ಯಾತಮ್ । ನಿರ್ವಿಕಾರೌ । ಲಾ ಪರಿವರ್ತನೇ । ತತೋ ನಪೂರ್ವಾತ್ ಕಃ । ಅವಿನಾಶಿತ್ವಾದಿತ್ಯರ್ಥಾಂತರಮ್ । 'ರೀಙ್ ಕ್ಷಯೇ' 'ರಿಷ ಹಿಂಸಾಯಾಂ' ತತೋ ಡಃ ।
–ಋ ಭಾ. ಟೀ.

3 ಕದಾ ಕ್ಷತ್ರಶ್ರಿಯಮ್‌ನರಮಾವರುಣಂ ಕರಾಮಹೇ ।
–ಋ. ವೇ. 25–5

ಅತೋಽಖಿಲಕ್ಷತ್ರಪತಿಮಾಹ್ವಯಾಮಃ ಕದಾ ವಯಮ್ । ಅವಿನಾಶಿನಂ...'
ಋ. ವೇ. ಭಾ.

ನರಂ ನ ರಿಷ್ಯತೀತ್ಯವಿನಾಶಿನಮ್ ।
–ಋ. ಭಾ. ಟೀ.

4 ..ಸೋಽಪ್ಯೋಽಸೃಜತ್ ತತೋ ನಾರಾ ನರೋಽನಾಶಾತ್ ಪರೋ ಯತಃ ।
–ನಾರಾಯಣಾಧ್ಯಾತ್ಮ (ಭಾಗ. ತಾ. ನಿ 2-10-11)

ಭಗವಂತನ ಅಸಾಧಾರಣ ಲಕ್ಷಣಗಳನ್ನು ನಿರೂಪಿಸುತ್ತ ಭಗವಂತನು ಎಂದೂ ಎಲ್ಲೂ ನಾಶಕ್ಕೊಳಗಾಗುವುದಿಲ್ಲೆಂದು ಸಂದೇಶಿಸಿರುವರು[1]

೩ ಬೇರೆ ಬೇರೆ ಚಟುವಟಿಕೆಗಳಲ್ಲಿ ಪ್ರೇರಿಸುವವನು.[2]

೪ ಆಯಾಯ ಕರ್ಮಕ್ಕೆ ಅನುಗುಣವಾಗಿ ಫಲವನ್ನು ಹೊಂದಿಸುವವನು.[3]

ಭಗವಂತನು ಬೇರೆ ಬೇರೆ ಸ್ವಭಾವದ ಜೀವಾತ್ಮರನ್ನು ಅವರವರ ಸ್ವಭಾವಕ್ಕನುಗುಣವಾದ ಕರ್ಮಗಳಲ್ಲಿ ತೊಡಗಿಸುವನು. ಹಾಗೆಯೇ ಅವರವರ ಕರ್ಮಕ್ಕನುಗುಣವಾದ ಫಲವನ್ನು ಅವರಿಗೆ ತಲುಪಿಸುವನು. ಆದ್ದರಿಂದಲೇ 'ನರ' ಎನಿಸಿರುವನೆಂದು ಪ್ರಮಾಣವೊಂದು ಸಂದೇಶಿಸಿದೆ[4]

೫ ಸರ್ವವನ್ನು ಪ್ರೇರಿಸುವವನು ಮತ್ತು ಒಂದಲ್ಲ ಒಂದು ರೀತಿಯ ನಾಶಕ್ಕೊಳಗಾಗುವಂತೆ ಮಾಡುವವನು.[5]

---

1 '..ಆತ್ಮಾ. .ನ ರಿಷ್ಯತಿ'
—ಬೃ ಉ. 5-9-26

ನ ಚ ನಾಶೋಽಭವತ್ ಕ್ವಾಪಿ ನ ನರಿಷ್ಯತಿ ಚ ಕ್ವಚಿತ್ ।
-ಬೃ. ಉ ಭಾ.

೩ 2 ನೃಣಾತಿ ನಾನಾಸ್ವಭಾವಾನ್ ಜೀವಾನ್ ನಯತಿ ಪ್ರೇರಯತೀತಿ ಯಾವತ್ ನರಃ ।
'ನೃ ನಯೇ' ।
—ಶಾಂ. ಭಾ. ಆಧಾರೇಣ

೪ 3 ನೃಣಾತಿ ತತ್ತತ್ಕರ್ಮಾನುಗುಣಂ ತತ್ಫಲಂ ನಯತಿ, ಪ್ರಾಪಯತೀತಿ ಯಾವತ್ ನರಃ ।
'ನೃ ನಯೇ' ।
—ಶಾಂ. ಭಾ. ಆಧಾರೇಣ.

4 'ನಯತೀತಿ ನರಃ ಪ್ರೋಕ್ತಃ ಪರಮಾತ್ಮಾ ಸನಾತನಃ' ಇತಿ ವ್ಯಾಸವಚನಮಿತಿ ಶಾಂಕರಭಾಷ್ಯೇ ಉದಾಹೃತಮ್ ।

* ನೃಣಾತಿ ನಯತಿ ಕರ್ಮಣಿ ಪ್ರೇರಯತಿ, ಪ್ರಾಪಯತಿ ಕರ್ಮಫಲಮಿತಿ ವಾ ನರಃ ।
-ವಿವೃತಿಃ (ಶಾ. ಭಾ.)

೫ 5 ಸರ್ವಂ ನೀಯತೇ ರೀಯತೇ ಯೇನ ಸಃ ನರಃ ।
—ವಿ ರಾ.

೬ ಕ್ಲೇಶಾದಿಗಳನ್ನು ನಾಶಪಡಿಸುವವನು[1]

* *

ನರ, ನಾರಾಯಣ, ಹರಿ ಹಾಗೂ ಕೃಷ್ಣ ಎಂಬ ನಾಲ್ಕು ಮಂದಿ ಯಮಧರ್ಮನ ಮಕ್ಕಳಲ್ಲಿ ನಾರಾಯಣ, ಹರಿ, ಕೃಷ್ಣರು ಸಾಕ್ಷಾದ್ ಭಗವಂತನೇ ಆಗಿರುವರು ನರನು ಸಾಕ್ಷಾದ್ ಬಗವಂತ ನಲ್ಲ ಶೇಷನು ನರನಾಗಿ ಅವತರಿಸಿರುವನು ಅವನಲ್ಲಿ ನರ ಎಂಬ ಹೆಸರಿನ ಭಗವಂತನು ಸನ್ನಿಹಿತ ನಾಗಿರುವನು—ಎಂದು 'ಷಾಡ್ಗುಣ್ಯ'ವು ಸ್ಪಷ್ಟೀಕರಿಸಿದೆ[2]

## ಜಿಜ್ಞಾಸೆ

### [ಶಾಸ್ತ್ರಪ್ರಾಮಾಣ್ಯಕ್ಕೆ ಯುಕ್ತಿ]

ಪ್ರ - ಶಾಸ್ತ್ರವು ಪ್ರಮಾಣ ಎಂಬುದನ್ನು ದೃಢಪಡಿಸಿಕೊಳ್ಳಲಿಕ್ಕೆ ಯುಕ್ತಿಯನ್ನು ತಿಳಿದುಕೊಳ್ಳ ಬೇಕೆಂಬ ಅಪೇಕ್ಷೆ ಇದೆ ಆ ಬಗ್ಗೆ ಏನು ಯುಕ್ತಿ?

ಉ - ಯಮದೇವರಿಗೆ ನಾಲ್ಕು ಮಕ್ಕಳು ಹರಿ, ಕೃಷ್ಣ, ನರ, ನಾರಾಯಣ ಎಂಬುದಾಗಿ. ಈ ನಾಲ್ಕು ಮಕ್ಕಳುಗಳಲ್ಲಿ ಹರಿ, ಕೃಷ್ಣ, ನಾರಾಯಣ ಈ ಮೂರು ಭಗವದವತಾರಗಳು. ನರನು ಮಾತ್ರ ಆವೇಶಾವತಾರ, ಸಾಕ್ಷಾತ್ ಅವತಾರವಲ್ಲ ಎಂದು ಶಾಸ್ತ್ರವು ಹೇಳುತ್ತದೆ. ಈ ವಿಷಯವನ್ನು ಶಾಸ್ತ್ರವು ಹೇಳುತ್ತಿರುವುದನ್ನು ನೋಡಿದರೆ ಶಾಸ್ತ್ರವು ಪ್ರಾಮಾಣಿಕವಾದದ್ದನ್ನೇ ಹೇಳುತ್ತದೆಂದು ದೃಢನಿರ್ಣಯವು ಉಂಟಾಗುವದು ಏಕೆಂದರೆ ಹರಿ, ಕೃಷ್ಣ, ನಾರಾಯಣ ಈ ಮೂರು ಭಗವದ್ರೂಪವೆಂದು ಹೇಳಿ ನರನನ್ನು ಮಾತ್ರ ಆವೇಶಾವತಾರವೆಂದು ಏಕೆ ಹೇಳಬೇಕು? ನರನು ಭಗವಂತನನ್ನು ಕುರಿತು ತಪಸ್ಸನ್ನು ಮಾಡಿದ್ದರಿಂದ, ಭಗವಂತನು ತಪಸ್ವಿಯಲ್ಲವಾದ್ದರಿಂದ ಆ ನರನನ್ನು ಆವೇಶಾವತಾರ ಎಂದು ಕಲ್ಪಿಸಿ ಹೇಳಿದ್ದು ಎಂದು ಹೇಳುವದು ಸರಿಯಲ್ಲ ಏಕೆಂದರೆ ನಾರಾಯಣನು ಕೂಡ ತಪಸ್ಸನ್ನು ಮಾಡಿದ್ದಾನೆ. ಆದರೂ ನಾರಾಯಣನು ಸಾಕ್ಷಾದವತಾರವು ಏಕೆ? ಆದುದರಿಂದ ಶಾಸ್ತ್ರವು ಕಲ್ಪಿಸಿ ಹೇಳುವುದಿಲ್ಲ ಇದ್ದದ್ದನ್ನು ಇದ್ದ ಹಾಗೆ ಹೇಳುತ್ತದೆಂದು ಯುಕ್ತಿಯನ್ನು ಪರಾಮರ್ಶಿಸಿರಿ.



---

೬ 1 ನಕಾರವಾಚ್ಯಕ್ಲೇಶಾದಿಕ್ಷಯಾತ್ ನರಃ ।

—ವಿ. ರಾ.

2 'ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ ಚತ್ವಾರೋ ಧರ್ಮತನಯಾ ಹರಿರೇವ ತ್ರಯೋ ಮತಾಃ । ಅನಂತೋ ನರನಾಮಾತ್ರ ತಸ್ಮಿಂಸ್ತು ನರನಾಮವಾನ್ । ವಿಶೇಷೇಣ ಸ್ವಯಂ ವಿಷ್ಣುರ್ನಿವಸತ್ಯಂಬುಜೇಕ್ಷಣಃ'

—ಷಾಡ್ಗುಣ್ಯ (ಭಾಗ. ತಾ. ನಿ. 2–7–6)

ಅಸಂಖ್ಯೇಯೋಽಪ್ರಮೇಯಾತ್ಮಾ ವಿಶಿಷ್ಟಃ ಶಿಷ್ಟಕೃಚ್ಛುಚಿಃ ।
ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ ॥ ೨೭ ॥

**೨೪೭ ಅಸಂಖ್ಯೇಯಃ**

ಂ ಗುಣ, ಕರ್ಮ ರೂಪ ಜನ್ಮಾದಿಗಳ ರೂಪದಿಂದ ಎಣಿಸಲು ಅಶಕ್ಯನಾದವನು ಅಥವಾ ಎಣಿಸಲು ಅಶಕ್ಯಗಳಾದ ಗುಣ ರೂಪ, ಕರ್ಮಗಳುಳ್ಳವನು[1]

ಭಗವಂತನು ಒಬ್ಬನೇ ಆದರೆ ಅವನ ಗುಣಗಳು, ಕರ್ಮಗಳು, ಅವತಾರ ಎನಿಸುವ ಜನ್ಮಗಳು, ರೂಪಗಳು—ಇವೆಲ್ಲ ಅಸಂಖ್ಯಗಳು ಅಸಂಖ್ಯಗಳಾದ ಗುಣಾದಿಗಳು ಅವನ ಸ್ವರೂಪಾತ್ಮಕಗಳೇ. ಆದ್ದರಿಂದ ಅವನೂ ತನ್ನ ಅಸಂಖ್ಯಗುಣಗಳ, ಅಸಂಖ್ಯಕರ್ಮಗಳ, ಅಸಂಖ್ಯರೂಪಗಳ, ಅಸಂಖ್ಯ ಅವತಾರಗಳ ರೂಪದಿಂದ ಅಸಂಖ್ಯೇಯನು

ಸಾವಿರ ಮುಖಗಳುಳ್ಳ ಶೇಷನು ನಿತ್ಯ ಭಗವಂತನ ಗುಣಗಳನ್ನು ಕೊಂಡಾಡುತ್ತಿದ್ದರೂ ಇಂದಿನವರೆಗೂ ಆ ಗುಣಗಳು ಕೊನೆಗೊಂಡಿಲ್ಲ 'ನಾನಾಗಲೀ ಮರೀಚ್ಯಾದಿ ಋಷಿಗಳಾಗಲೀ ಕರ್ದಮಾದಿ ಪ್ರಜಾಪತಿಗಳಾಗಲೀ ಭಗವಂತನ ಗುಣಗಳನ್ನು ನಿತ್ಯ ಸ್ತುತಿಸುತ್ತ ಇದ್ದರೂ ಗುಣಗಳ ಕೊನೆ ಕಾಣದೆ ಹೋಗಿರುವಾಗ ಉಳಿದ ಯಾರು ಹೇಗೆ ತಾನೇ ಭಗವಂತನ ಗುಣಗಳನ್ನು ಸ್ತುತಿಸುತ್ತ, ಅವುಗಳ ಕೊನೆ ಕಂಡಾರು?[2]'—ಎಂಬುದಾಗಿ ಚತುರ್ಮುಖನು ಭಗವದ್ಗುಣಗಳ ಅಸಂಖ್ಯೇಯತ್ವವನ್ನು ಸಮರ್ಥಿಸಿರುವನು. ಚತುರ್ಮುಖನ ಈ ಮಾತಿನ ಆಧಾರದ ಮೇಲೆಯೇ ಶ್ರೀಮದಾಚಾರ್ಯರೂ—ಅನಂತ ಎನಿಸುವ ಭಗವಂತನ ಗುಣಗಳನ್ನು ಚತುರ್ಮುಖಾದಿಗಳು ಎಣಿಸುತ್ತಿದ್ದರೂ, ಅವುಗಳ

---

ಂ 1 ಭಗವತಃ ಗುಣಾದಯಃ ತದಾತ್ಮಕಾಃ । ತಥಾಚ ಗುಣ-ಕರ್ಮ-ರೂಪ-ಜನ್ಮರೂಪೇಣ ಸಂಖ್ಯಾತುಮಶಕ್ಯಃ । ಅಥವಾ ಸಂಖ್ಯಾತುಂ ಯೋಗ್ಯಾಃ ಸಂಖ್ಯೇಯಾಃ । ನ ವಿದ್ಯಂತೇ ಸಂಖ್ಯೇಯಾಃ ಗುಣಕರ್ಮಾದಯಃ ಯಸ್ಮಿನ್ ಸಃ ಅಸಂಖ್ಯೇಯಃ ।

2 ನಾಂತಂ ವಿದಾಮ್ಯಹಮಮೀ ಮುನಯಃ ಪ್ರಜೇಶಾಃ ಮಾಯಾಬಲಸ್ಯ ಪುರುಷಸ್ಯ ಕುತೋಽಪರೇ ಯೇ । ಗಾಯನ್ ಗುಣಾನ್ ದಶಶತಾನನ ಆದಿದೇವಃ ಶೇಷೋಽಧುನಾಽಪಿ ಸಮವಸ್ಯತಿ ನಾಸ್ಯ ಪಾರಮ್ ॥

-ಭಾಗ. 2-7-41

ಕೊನೆ ಕಂಡಿಲ್ಲ—ಎಂದು ಸ್ತುತಿಸಿರುವರು[1]

'ನನಗೆ ಸಾವಿರಾರು ಜನ್ಮಗಳೂ, ಕರ್ಮಗಳೂ, ನಾಮಗಳೂ ಇವೆ. ಪರಮ ಋಷಿಗಳು ಅವುಗಳ ಎಣಿಕೆಗೆ ತೊಡಗಿ ಕೊನೆ ಕಂಡಿಲ್ಲ. ಪಾರ್ಥಿವ ಧೂಳಿಕಣಗಳನ್ನು ಬೇಕಾದರೂ ನಾನು ಎಣಿಸಬಲ್ಲೆನಾದರೂ, ಅನಂತಗಳಾದ ನನ್ನ ಜನ್ಮ, ಕರ್ಮಗಳನ್ನು ಮಾತ್ರ ಎಣಿಸಲಾರೆ[2]— ಎಂಬುದಾಗಿ ಶ್ರೀಕೃಷ್ಣನು ಪರಮಾತ್ಮನು ಮುಚುಕುಂದ ರಾಜನಿಗೆ ತನ್ನ ಜನ್ಮಾದಿಗಳ ಅಸಂಖ್ಯೇಯತ್ವವನ್ನು ತಿಳಿಸಿರುವನು

ಸರ್ವಜ್ಞನಾದ ಭಗವಂತನು ಅನಂತಗಳಾದ ತನ್ನ ಗುಣ ರೂಪಾದಿಗಳಲ್ಲಿ ಒಂದೊಂದನ್ನೂ, ಪ್ರತ್ಯೇಕವಾಗಿ, ವಿಶೇಷವಾಗಿ ತಿಳಿದಿರುವನು. ಆದರೆ ಅವುಗಳನ್ನು ಎಣಿಸುವುದಿಲ್ಲ 'ಅಸಂಖ್ಯ' ಗಳಾದ ಅವುಗಳ ಎಣಿಕೆ ಹೇಗೆ ತಾನೇ ಕೂಡೀತು? 'ಅಸಂಖ್ಯ' ಪದಾರ್ಥಗಳನ್ನು ಎಣಿಸಲು ತೊಡಗಿದರೆ ಸರ್ವಜ್ಞತ್ವವೂ ಕೂಡಲಾರದು. ಆದ್ದರಿಂದ ಸರ್ವಜ್ಞತಮನಾದ ಭಗವಂತನ ದೃಷ್ಟಿಯಲ್ಲೂ ಅವನ ಗುಣಕ್ರಿಯಾದಿಗಳು 'ಅಸಂಖ್ಯ'ಗಳೇ ಎಂಬುದಾಗಿ ಶ್ರೀಮದಾಚಾರ್ಯರು ನಿರ್ಣಯಿಸಿರುವರು[3]

೨ ಚೆನ್ನಾಗಿ—ಸಮಗ್ರವಾಗಿ ತಿಳಿಸಲು ಅಶಕ್ಯನಾಗಿರುವವನು[4]

---

1 ನೈವಾದಾಪುರ್ಗುಣಾಂತೋಽನಂತಂ ಯದ್ಗುಣಾನಾಮಜಾದಯಃ।
-ದ್ವಾ. ಸ್ತೋ.

2 'ಜನ್ಮಕರ್ಮಾಭಿಧಾನಾನಿ ಸಂತಿ ಮೇಽಂಗ ಸಹಸ್ರಶಃ । ಶಕ್ಯಂತೇಽನುಸಂಖ್ಯಾತುಮನಂತತ್ವಾನ್ಮಯಾಽಪಿ ಹಿ ॥ ಕ್ವಚಿದ್ ರಜಾಂಸಿ ವಿಮಮೇ ಪಾರ್ಥಿವಾನ್ಯುರುಜನ್ಮಭಿಃ । ಗುಣಕರ್ಮಾಭಿಧಾನಾನಿ ನ ಮೇ ಜನ್ಮಾನಿ ಕರ್ಹಿಚಿತ್ । ಕಾಲತ್ರಯೋಪಪನ್ನಾನಿ ಜನ್ಮಕರ್ಮಾಣಿ ಮೇ ನೃಪ । ಅನುಕ್ರಮಂತೋ ನೈವಾಂತಂ ಗಚ್ಛಂತಿ ಪರಮರ್ಷಯಃ'
-ಭಾಗ 10-51-37,38,39

3 'ಅನಂತಮಿತಿ ವೇತೀಶಸ್ತ್ವನಂತಂ ತ್ವಂತವತ್ತಥಾ । ಅನಂತಸ್ಯ ಹಿ ಸಂಖ್ಯಾನೇ ನತು ಸರ್ವಜ್ಞತಾ ಭವೇತ್ । ಅನಂತಮಪಿ ವೇತ್ತೀಶಃ ಪ್ರತ್ಯೇಕಂ ಚ ವಿಶೇಷತಃ । ಸರ್ವಜ್ಞತ್ವಾನ್ನಸಂಖ್ಯಾನಮಸಂಖ್ಯಸ್ಯ ಕುತೋ ಹಿ ಸಾ'
-ಭಾಗ. ತಾ. ನಿ. 11-16-39

೨ 4 ಸಂಖ್ಯಾತುಂ ಸಮ್ಯಕ್ ಸಾಮಗ್ರ್ಯೇಣ ಪ್ರಕಥಯಿತುಂ ಶಕ್ಯಃ ಸಂಖ್ಯೇಯಃ ।
ನ ಸಂಖ್ಯೇಯಃ ಅಸಂಖ್ಯೇಯಃ । 'ಖ್ಯಾ ಪ್ರಕಥನೇ'

ಭಗವಂತನು ಅಸಂಖ್ಯಗುಣಕರ್ಮಾದಿಗಳಿಂದ ಸಂಪನ್ನನಾಗಿರುವುದರಿಂದಲೇ ಅವನನ್ನು ಯಾರೂ ಸಮಗ್ರವಾಗಿ ತಿಳಿಸಲಾರರು. ಭಗವಂತನ ಮಹಿಮೆಯನ್ನು ಪೂರ್ಣವಾಗಿ ಹೇಳಲಾಗದ ಪ್ರಯುಕ್ತ ತಾವು 'ಅಸಮುದ್ರಶ'ರು ಎಂಬುದಾಗ್ಗಿ ವೇದಾಭಿಮಾನಿದೇವತೆಯರು ಸ್ತುತಿಸಿರುವರು [1]

೩ ಪೂರ್ಣನಾದ ತನ್ನಿಂದಲೇ ಚೆನ್ನಾಗಿ ತಿಳಿಸಲು ಶಕ್ಯನಾದವನು.[2]

ಭಗವಂತನು ತನ್ನ ವೇದವ್ಯಾಸಾದಿಅವತಾರಗಳಿಂದ ಮಹಾಭಾರತಾದಿಗಳನ್ನು ರಚಿಸಿ, ಅವುಗಳ ಮೂಲಕ ತನ್ನ ಸ್ವರೂಪವನ್ನು ಚೆನ್ನಾಗಿ ತಿಳಿಸಿರುವನು

೪ ಪೂರ್ಣನೆಂದೂ, ನಿರ್ದೋಷನೆಂದೂ ತಿಳಿಸಲು ಯೋಗ್ಯನಾದವನು[3]

ಗುಣಪೂರ್ಣತ್ವ ಹಾಗೂ ದೋಷದೂರತ್ವಗಳು ಭಗವಂತನ ಪ್ರಮುಖ ಲಕ್ಷಣಗಳು.

೫ ಪೂರ್ಣನಾದವನೆಂದು ಜಿಜ್ಞಾಸಿಸಲು ಯೋಗ್ಯನಾದವನು[4]

ಬ್ರಹ್ಮಸೂತ್ರದ ಪ್ರಾರಂಭದ ಸೂತ್ರದಲ್ಲಿ ಪೂರ್ಣನಾಗಿರುವ ಪ್ರಯುಕ್ತ ಬ್ರಹ್ಮ ಎನಿಸಿರುವ ಭಗವಂತನ ಜಿಜ್ಞಾಸೆಯನ್ನು ನಡೆಸಬೇಕೆಂದು ವಿದಿಸಿದ ಶ್ರೀವೇದವ್ಯಾಸರು ಬ್ರಹ್ಮಸೂತ್ರದ ಪ್ರಥಮಾಧ್ಯಾಯದಲ್ಲಿ ಬೇರೆ ಬೇರೆ ವೈದಿಕ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯಿಸುವುದರ ಮೂಲಕ ಅವನು ಗುಣಪೂರ್ಣನೆಂದು ಸಿದ್ಧಾಂತಿಸಿರುವರು

---

1 ವಯಮಪಿ ತೇ ಸಮಾಸಮುದ್ರಶೋಽಂಘ್ರಿಸರೋಜ ಸುಧಾಮ್ ।

–ಭಾಗ 10-94 24

ಮಹಿಮ್ನಃ ಸರ್ವಶೋಽನುಕ್ತೇರ್ವೇದಾಃ ಶ್ವಾಸಮುದರ್ಶನಾಃ ।

–ತಂತ್ರಭಾಗವತ (ಭಾಗ ತಾ ನಿ.)

೩ 2 'ಅಃ ಇತಿ ಬ್ರಹ್ಮ' ಇತಿ ಏನ ಪೂರ್ಣೇನ ಭಗವತಾ ಸಂಖ್ಯಾತುಂ ಸಮ್ಯಕ್ ಕಥಯಿತುಂ ಶಕ್ಯಃ ಅಸಂಖ್ಯೇಯಃ ।

೪ 3 ಪೂರ್ಣತ್ವಾತ್ ಅ ಇತಿ, ಸಮೀಚೀನತ್ವಾತ್ ನಿರ್ದೋಷತ್ವಾತ್ ಸಂ ಇತಿ ಚ ಖ್ಯೇಯಃ ಸಂಕಥನೀಯಃ ಅಸಂಖ್ಯೇಯಃ ।

೫ 4 ಅ ಇತಿ ಪೂರ್ಣ ಇತಿ ಸಂಖ್ಯಾತುಂ ಜಿಜ್ಞಾಸಿತುಂ ಯೋಗ್ಯಃ ಅಸಂಖ್ಯೇಯಃ । ' ಚರ್ಚಾ ಸಂಖ್ಯಾ ವಿಚಾರಣಾ' ಇತಿ ಸಂಪೂರ್ವಕಖ್ಯಾತೇಃ ವಿಚಾರಾರ್ಥಕತ್ವಂ ಸಿದ್ಧಮ್ ।

೬ ಅಸಂಖ್ಯ ಜಲವನ್ನು ಸಮುದ್ರಕ್ಕೆ ಹೊಂದಿಸುವವನು.[1]

೭ (ಭಕ್ತರಿಗೆ) ಅಸಂಖ್ಯ ಆನಂದವನ್ನು ಹೊಂದಿಸುವವನು[2]

೮ ಅಸಂಖ್ಯ ಜೀವರಿಂದ ಜ್ಞೇಯನಾಗಿರುವವನು ಅಥವಾ ಪ್ರಾಪ್ಯನಾಗಿರುವವನು.[3]

೯ ಗುಣಾದಿರೂಪದಿಂದ ಅಸಂಖ್ಯನಾಗಿರುವವನು ಮತ್ತು ಜ್ಞೇಯನಾಗಿರುವವನು.[4]

ಭಗವಂತನು ಅಸಂಖ್ಯನಾಮಾದಿಗಳುಳ್ಳವನಾದರೂ, ಸಾಧಕರಿಂದ ತಮ್ಮ ತಮ್ಮ ಯೋಗ್ಯತಾನುಗುಣವಾಗಿ ಜ್ಞೇಯನಾಗಿರುವವನು

೧೦ ಗುಣಾದಿರೂಪದಿಂದ ಅಸಂಖ್ಯನಾಗಿರುವವನು, ಇಚ್ಛಾರೂಪಿ ಹಾಗೂ ಜ್ಞಾನರೂಪಿ[5]

---

೬ 1 ಅಸಂಖ್ಯಾನ್ಯುದಕಾನಿ ಸಮುದ್ರಂ ಪ್ರಾಪಯತೀತಿ ಅಸಂಖ್ಯೇಯಃ ।

–ಶೀ. ಚಂ.

೭ 2 ಅಸಂಖ್ಯಂ ಮುದಂ (ಆನಂದಂ) ಭಕ್ತಾನ್ ಪ್ರಾಪಯತೀತಿ ಅಸಂಖ್ಯೇಯಃ ।

–ಶೀ. ಚಂ.

(ಉಭಯತ್ರಾಪಿ) ಅಸಂಖ್ಯಶಬ್ದೋಪಪದಾತ್ 'ಇಣ್ ಗತೌ' ಇತಿ ಧಾತೋಃ ಅಂತರ್ಣೀತಣ್ಯರ್ಥಾತ್ ಕರ್ಮಣಿ ಯುಕ್ ।

–ಶೀ. ಚಂ.

೮ 3 ಅಸಂಖ್ಯೈಃ ಜೀವಾತ್ಮಭಿಃ ಈಯಃ ಜ್ಞೇಯಃ ಪ್ರಾಪ್ಯಃ ವಾ ಅಸಂಖ್ಯೇಯಃ । 'ಇಣ್ ಗತೌ' ।

೯ 4 ಗುಣಾದಿರೂಪೇಣ ಅಸಂಖ್ಯಃ । ಜ್ಞೇಯತ್ವಾದೀಯಃ । ಅಸಂಖ್ಯಶ್ಚಾಸಾವೀಯಶ್ಚ ಅಸಂಖ್ಯೇಯಃ ।

೧೦ 5 ಗುಣಾದಿರೂಪೇಣ ಅಸಂಖ್ಯಃ । ಇಚ್ಛಾರೂಪತ್ವಾದಿಃ । ಜ್ಞಾನರೂಪತ್ವಾದ್ ಯಃ ।

## ಜಿಜ್ಞಾಸೆ

[ಅಚಿಂತ್ಯಶಕ್ತಿಗೆ ದ್ಯೋತಕ]

ಪ್ರ - 'ಏಕೋ ದೇವಃ ಸರ್ವಭೂತೇಷು ಗೂಢಃ' 'ಏಕಮೇವಾದ್ವಿತೀಯಂ ಬ್ರಹ್ಮ' ಇತ್ಯಾದಿ ಶ್ರುತಿಗಳಲ್ಲಿ ಪರಮಾತ್ಮನು ಒಬ್ಬನೇ ಎಂದು ಅವನಲ್ಲಿ ಸಂಖ್ಯೇಯತ್ವವನ್ನು ಹೇಳಿದ್ದರಿಂದ ಅವನಲ್ಲಿ ಅಸಂಖ್ಯೇಯತ್ವವು ಹೇಗೆ?

ಉ - 'ಯದೇಕಮವ್ಯಕ್ತಮನಂತರೂಪಂ' ಶ್ರುತಿಯು ಅಸಂಖ್ಯೇಯತ್ವವನ್ನೂ ಕೂಡ ಹೇಳುತ್ತದೆ ಅವನ ಅನಂತ ರೂಪಗಳು ಅವನಿಂದ ಅಭಿನ್ನಗಳಾದುದರಿಂದ ಅವನಲ್ಲಿ ಏಕತ್ವವು ಇದ್ದಂತೆ ಅನಂತತ್ವವೂ ಇದೆ ಇದು ಅವನ ಅಚಿಂತ್ಯ ಶಕ್ತಿಗೆ ದ್ಯೋತಕ. ಇತರ ಮತದವರು ಶ್ರುತಿಯಲ್ಲಿ ಪರಸ್ಪರ ವಿರುದ್ಧೋಕ್ತಿಗಳು ಒಂದರೆ ಅವುಗಳಲ್ಲಿ ಒಂದು ಉಕ್ತಿಯು ಮಾತ್ರ ಸತ್ಯ, ಇನ್ನೊಂದು ಮಿಥ್ಯಾ ಎಂದು ಹೇಳುವದು ಯುಕ್ತವಲ. ಶ್ರುತಿವಾಕ್ಯಗಳು ಎಲ್ಲವೂ ಅತ್ಯಂತ ಪ್ರಮಾಣಗಳು



## ೨೪೮ ಅಪ್ರಮೇಯಾತ್ಮಾ

೧ ಸಮಗ್ರವಾಗಿ ತಿಳಿಯಲಶಕ್ಯವಾದ ಸ್ವರೂಪ ಉಳ್ಳವನು[1]

೨ ಸಮಗ್ರವಾಗಿ ತಿಳಿಯಲಶಕ್ಯನಾದವನು ಮತ್ತು ಎಲ್ಲರ ಸ್ವಾಮಿ ಅಥವಾ ಅಂತರ್ಯಾಮಿ[2]

---

೧ 1 ಪ್ರಕರ್ಷೇಣ ಸಮಗ್ರತಯಾ ಮಾತುಂ ಜ್ಞಾತುಂ ಯೋಗ್ಯಃ ಪ್ರಮೇಯಃ । ಪ್ರಮೇಯೋ ನ ಭವತೀತಿ ಅಪ್ರಮೇಯಃ । ಅಪ್ರಮೇಯಃ ಆತ್ಮಾ ಸ್ವರೂಪಂ ಯಸ್ಯ ಸಃ ಅಪ್ರಮೇಯಾತ್ಮಾ ।

ಭಗವತ್ಸ್ವರೂಪಸ್ಯ ಅಪ್ರಮೇಯತ್ವಮಧಿಕೃತ್ಯ 'ಅಪ್ರಮೇಯಃ' (೪೬) ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಮ್ ।

೨ 2 ಪ್ರಕರ್ಷೇಣ ಸಮಗ್ರತಯಾ ಮಾತುಂ ಜ್ಞಾತುಂ ಯೋಗ್ಯಃ ಪ್ರಮೇಯಃ । ಪ್ರಮೇಯೋ ನ ಭವತೀತಿ ಅಪ್ರಮೇಯಃ । ಸರ್ವಸ್ವಾಮಿತಯಾ ಆದತ್ತ ಇತಿ ಆತ್ಮಾ ಸ್ವಾಮೀ । ಅಂತರ್ಯಾಮಿತ್ವಾದ್ವಾ ಆತ್ಮಾ ।

೩ ಸಮಗ್ರವಾಗಿ ತಿಳಿಯಲಶಕ್ಯವಾದ ಶರೀರ ಉಳ್ಳವನು[1]

ಭಗವಂತನ ಶರೀರವು ಅವನ ಸ್ವರೂಪಾತ್ಮಕವಾಗಿದ್ದು, ಅವನಂತೆಯೇ ಅಪ್ರಮೇಯ.

೪ ಸಮಗ್ರವಾಗಿ ತಿಳಿಯಲಶಕ್ಯವಾದ ನಡುಂದೇಹ ಉಳ್ಳವನು[2]

ಭಗವಂತನ ಅಂಗಾಂಗಗಳೂ ಅವನ ಸ್ವರೂಪಾತ್ಮಕಗಳಾಗಿದ್ದು ಅವನಂತೆಯೇ ಪರಿಪೂರ್ಣ, ಅವನಂತೆಯೇ ಅನಂತ, ಅಪ್ರಮೇಯ. ಶ್ರೀಮದಾಚಾರ್ಯರು ಭಗವಂತನ ಎದೆಯನ್ನು ಸ್ತುತಿಸುವಾಗ, ಇಂದಿರಾದೇವಿಗೆ ಆಧಾರವಾದ ಅದು ಅನಂತ ಆದರೂ ಅಂತವುಳ್ಳಂತೆ ಭಗವಂತನ ಭುಜಗಳ ನಡುವೆ ಇರುವುದೆಂಬುದಾಗಿ[3] ಅದರ ಅಪ್ರಮೇಯತ್ವದ ಒಂದು ಅಂಶವನ್ನು ತೋರಿಸಿರುವರು.

೫ ಅಪ್ರಮೇಯವಾದ ಮನಸ್ಸು ಅಥವಾ ಬುದ್ಧಿ ಉಳ್ಳವನು[4]

೬ ಪೂರ್ಣನಾದ ತನ್ನಿಂದ ಸಮಗ್ರವಾಗಿ ತಿಳಿಯಲು ಯೋಗ್ಯವಾದ ಸ್ವರೂಪ, ದೇಹ, ಮಧ್ಯದೇಹ, ಬುದ್ಧಿ ಅಥವಾ ಮನಸ್ಸು ಉಳ್ಳವನು[5]

---

೩ 1 ಅಪ್ರಮೇಯಃ ಆತ್ಮಾ ದೇಹಃ ಯಸ್ಯ ಸಃ ಅಪ್ರಮೇಯಾತ್ಮಾ ।
ಭಗವತಃ ದೇಹಸ್ಯಾಪ್ರಮೇಯತ್ವಮಧಿಕೃತ್ಯ 'ಅನಿರ್ದೇಶ್ಯವಪುಃ' (೧೮೧) ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಮ್ ।

೪ 2 ಅಪ್ರಮೇಯಃ ಆತ್ಮಾ ಸಂದೇಹಃ ಮಧ್ಯದೇಹ ಇತಿ ಯಾವತ್, ಯಸ್ಯ ಸಃ ಅಪ್ರಮೇಯಾತ್ಮಾ । 'ಸಂದೇಹದೇಹಮನಸೋಬುದ್ಧಿಜೀವಾಃ ಸ್ವಯಂ ತಥಾ । ಬ್ರಹ್ಮಾತ್ಮಮುಖ್ಯಾಃ ಕ್ರಮಶಃ ಉತ್ಕರ್ಷೋ ಹ್ಯಾತ್ಮತಾ ಭವೇತ್'

–ಪ್ರಕಾಶ ಸಂಹಿತಾ (ಭಾಗ. ತಾ. ನಿ. 3–10–29)

3 ಸ್ಮರಣೀಯಾಮುರೋ ವಿಷ್ಣೋರಿಂದಿರಾವಾಸಮುತ್ತಮೈಃ । ಅನಂತಮಂತವದಿವ ಭುಜಯೋರಂತರಂ ಗತಮ್'

–ದ್ವಾ. ಸ್ತೋ.

೫ 4 ಅಪ್ರಮೇಯಃ ಆತ್ಮಾ ಮನಃ ಬುದ್ಧಿರ್ವಾ ಯಸ್ಯ ಸಃ ಅಪ್ರಮೇಯಾತ್ಮಾ ।

೬ 5 ಪೂರ್ಣತ್ವಾದನಾಮಕೇನ ಸ್ವೇನೈವ ಪ್ರಮೇಯಃ ಪ್ರಕರ್ಷೇಣ ಜ್ಞಾತುಂ ಯೋಗ್ಯಃ ಆತ್ಮಾ ಸ್ವರೂಪಂ ವಾ ದೇಹೋ ವಾ ಮಧ್ಯದೇಹೋ ವಾ ಬುದ್ಧಿರ್ವಾ ಮನೋ ವಾ ಯಸ್ಯ ಸಃ ।

ಸರ್ವಜ್ಞನಾದ ಭಗವಂತನಾದರೂ ತನ್ನ ಸ್ವರೂಪ ಹಾಗೂ ತನ್ನ ಸ್ವರೂಪಾತ್ಮಕಗಳಾದ ದೇಹಾದಿಗಳನ್ನು ಚೆನ್ನಾಗಿಯೇ ತಿಳಿದಿರುವನು

೭ ಪೂರ್ಣನಾದ ತನ್ನ ಅನುಗ್ರಹದಿಂದಲೇ ಚೆನ್ನಾಗಿ ತಿಳಿಯಲು ಯೋಗ್ಯವಾದ ಸ್ವರೂಪವುಳ್ಳವನು.[1]

ಔಪನಿಷದಃ ಪುರುಷಃ' ಎನಿಸಿರುವ ಭಗವಂತನು ವೇದದ ಮೂಲಕವೇ ತಿಳಿಯಲ್ಪಡುವವನು. ಆದರೂ ವೇದವು ಚೆನ್ನಾಗಿ ಅವನನ್ನು ತಿಳಿಸಿಕೊಡಲಾರದು ಭಗವಂತನ ಸ್ವರೂಪವು ಅಪ್ರಸಿದ್ಧವಾಗಿರುವುದರಿಂದ ಆದರ ಅನುಭವವನ್ನು ವೇದವು ಉಂಟುಮಾಡಿಕೊಡಲಾರದು. ಭಗವಂತನು ಪ್ರಸನ್ನನಾದನೆಂದರೆ ಆಗಷ್ಟೇ ಅವನ ಸ್ವರೂಪವು ಅನುಬವಾರೂಢವಾಗಬಲ್ಲದು ಆಗ ಸಾಧಕನು ತಾನೇ ಭಗವಂತನ ಸ್ವರೂಪವನ್ನು ಕಿಂಚಿತ್‌ಪ್ರಮಾಣದಲ್ಲಿ ಚೆನ್ನಾಗಿಯೇ ಅನುಭವಿಸುವನು—ಎಂಬುದಾಗಿ 'ವಾರಾಹ ವು ಭಗವಂತನ ಸ್ವರೂಪ ಚೆನ್ನಾಗಿ ತಿಳಿಯಬೇಕೆಂದರೆ ಅವನ ಪ್ರಸಾದ ಅತ್ಯಾವಶ್ಯಕ ಎಂದು ತಿಳಿಸಿದೆ[2]

೮ ಪೂರ್ಣನಾದವನು ಮತ್ತು ಜೀವಾತ್ಮರನ್ನು ಚನ್ನಾಗಿ ತಿಳಿದವನಾಗಿರುವವನು[3]

ಪೂರ್ಣನಾದ ಭಗವಂತನು ಜೀವಾತ್ಮರನ್ನು ಚೆನ್ನಾಗಿ ಬಲ್ಲವನಾಗಿರುವನು

೯ ಸರ್ವಜೀವಜಡಗಳಿಗಿಂತ ಭಿನ್ನನಾದವನು ಮತ್ತು (ಎಲ್ಲ ಪದಾರ್ಥಗಳ) ಸ್ವಭಾವವನ್ನು ಚೆನ್ನಾಗಿ ಬಲ್ಲವನು[4]

---

೭ 1 ಅತ್ ಪೂರ್ಣತ್ವಾದನಾಮಕಾತ್ ಸ್ವಾತ್ ಸ್ವಾನುಗ್ರಹಾದಿತಿ ಯಾವತ್, ಪ್ರಕರ್ಷೇಣ ಜ್ಞಾತುಂ ಯೋಗ್ಯಃ ಆತ್ಮಾ ಸ್ವರೂಪಂ ಯಸ್ಯ ಸಃ ।

2 'ವೇದೋ ವದನ್ನಪಿ ಹರಿಂ ನ ಸಮ್ಯಗ್ ವಕ್ತಿ ಕುತ್ರಚಿತ್ । ನಾರೋಹಯತ್ಯನುಭವಮಪ್ರಸಿದ್ಧಸ್ವರೂಪತಃ । ತಥಾಽಪ್ಯನುಭವಾರೋಹಃ ಪ್ರಸನ್ನೇ ಕೇಶವೇ ಭವೇತ್ । ಕಿಂಚಿದೇವ ಸುಸಮ್ಯಕ್ ಚ ಸ್ವಯಂ ತ್ವನುಭವತ್ಯಮುಮ್'

—ವಾರಾಹ (ಭಾಗ ತಾ. ನಿ 4-28-45)

೮ 3 ಪೂರ್ಣತ್ವಾದಃ । ಪ್ರಮೇಯಾಃ ಪ್ರಕರ್ಷೇಣ ಜ್ಞಾತುಂ ಯೋಗ್ಯಾಃ ಆತ್ಮಾನಃ ಜೀವಾತ್ಮಾನಃ ಯಸ್ಯ ಸಃ ಪ್ರಮೇಯಾತ್ಮಾ । ಅಶ್ಚಾಸೌ ಪ್ರಮೇಯಾತ್ಮಾ ಚ ಅಪ್ರಮೇಯಾತ್ಮಾ ।

೯ 4 ಸರ್ವಜೀವಜಡೇಭ್ಯಃ ಭಿನ್ನತ್ವಾತ್ ಅಃ । ಪ್ರಕರ್ಷೇಣ ಮೇಯಾಃ ಜ್ಞೇಯಾಃ ಆತ್ಮಾನಃ ತತ್ತತ್ಪದಾರ್ಥಸ್ಯ ಸ್ವಭಾವಾಃ ಯಸ್ಯ ಸಃ ಪ್ರಮೇಯಾತ್ಮಾ । 'ಆತ್ಮಾ ಕಲೇವರೇ ಯತ್ನೇ ಸ್ವಭಾವೇ ' —ಧರಣಿಃ ।

ಸರ್ವ ಜೀವಜಡಗಳಿಗಿಂತಲೂ ಅತ್ಯಂತ ಭಿನ್ನನಾದ ಭಗವಂತನು, ಅವೆಲ್ಲವುಗಳ ಸ್ವಭಾವವನ್ನು ಚೆನ್ನಾಗಿ ಅರಿತಿರುವವನು

೧೦ ಪೂರ್ಣವಾಗಿದ್ದು, ಪ್ರಕೃಷ್ಟವಾದದ್ದು ಎಂದು ತಿಳಿಯಲು ಯೋಗ್ಯವಾದ ಸ್ವರೂಪ ಉಳ್ಳವನು[1]

ಭಗವಂತನ ಸ್ವರೂಪವನ್ನು ಸಮಗ್ರವಾಗಿ ತಿಳಿಯಲಶಕ್ಯವಾದರೂ ಜೀವಾತ್ಮರು ನಮ್ಮ ಯೋಗ್ಯತಾನುಸಾರವಾಗಿ, ಅದನ್ನು ಗುಣಪೂರ್ಣವಾಗಿದ್ದು ಪ್ರಕೃಷ್ಟವಾಗಿರುವುದನ್ನಾಗಿ ತಿಳಿಯಬೇಕು

೧೧ ಪೂರ್ಣನಾದವನು, ಪ್ರಕೃಷ್ಟನಾಗಿರುವವನು, ತಿಳಿಯಲು ಯೋಗ್ಯನಾದವನು ಮತ್ತು ಎಲ್ಲೆಡೆ ವ್ಯಾಪಿಸಿರುವವನು[2]

೧೨ ಚತುರ್ಮುಖ ಅಥವಾ ವಾಯುದೇವನು (ಜೀವೋತ್ತಮನಾಗಿದ್ದು) ಇತರ ಜೀವರಿಗೆ ಅಪ್ರಮೇಯರೆನಿಸುವಂತೆ ಅನುಗ್ರಹಿಸುವವನು[3]

## ಜಿಜ್ಞಾಸೆ

### [ಗುಣಾನಂತ್ಯದ ಪ್ರಯೋಜನ]

ಪ್ರ - ಪರಮಾತ್ಮನು ಅನಂತಗುಣ ಕ್ರಿಯಾರೂಪವುಳ್ಳವನಾದುದರಿಂದ ಸಂಪೂರ್ಣವಾಗಿ ಯಾರಿಗೂ ತಿಳಿಯಲು ಅಶಕ್ಯನು ಎಂದು ಹೇಳುವಾಗ ಒಂದು ಪ್ರಶ್ನೆಯು ಉಂಟಾಗುತ್ತದೆ ತಿಳಿಯಲು ಅಶಕ್ಯಗಳಾದ ಆ ಗುಣಗಳಿಂದ ಏನು ಪ್ರಯೋಜನ? ಪರಮಾತ್ಮನ ಗುಣಗಳನ್ನು ಎಷ್ಟು ಎಷ್ಟು ಇತರರು ತಿಳಿಯುತ್ತಾರೋ ಅಷ್ಟು ಅವನಲ್ಲಿ ಭಕ್ತಿ ಹೆಚ್ಚಾಗಿ ಅವನ ಅನುಗ್ರಹವು ಅಧಿಕವಾಗಿ ಆಗಿ ಆನಂದವಿಶೇಷಾನುಭವವನ್ನು ಪಡೆಯುವದೇ ಗುಣಗಳಿರುವುದರ ಪ್ರಯೋಜನ ಎಷ್ಟೋ ಗುಣಗಳು ಯಾರಿಗೂ ತಿಳಿಯಲ್ಪಡದೆ ಇದ್ದರೆ ಅವುಗಳು ನಿಷ್ಪ್ರಯೋಜನಗಳಾಗುವವು ಅಲ್ಲವೆ?

---

೧೦ 1 ಪೂರ್ಣತ್ವಾದಃ । ಪ್ರಕೃಷ್ಟತ್ವಾತ್ ಪ್ರ, ಅಪ್ರ ಇತಿ ಮಾತುಂ ಯೋಗ್ಯತ್ವಾತ್ ಅಪ್ರಮೇಯಃ । ಅಪ್ರಮೇಯಃ ಆತ್ಮಾ ಸ್ವರೂಪಂ ಯಸ್ಯ ಸಃ ।

೧೧ 2 ಪೂರ್ಣತ್ವಾತ್ ಅಃ ಪ್ರಕೃಷ್ಟತ್ವಾತ್ ಪ್ರ । ಮಾತುಂ ಯೋಗ್ಯತ್ವಾತ್ ಮೇಯಃ । ಆ ತತತ್ವಾತ್ ಆತ್ಮಾ ।

೧೨ 3 ಅಪ್ರಮೇಯಃ। ಇತರ ಜೀವೈಃ ಪ್ರಮಾತುಮಶಕ್ಯಃ ಆತ್ಮಾ ಚತುರ್ಮುಖಃ ವಾಯುರ್ವಾ ಯಸ್ಮಾತ್ ಸಃ ಅಪ್ರಮೇಯಾತ್ಮಾ ।

ಉ- ಅನಂತ ಚತುರ್ಮುಖಬ್ರಹ್ಮರುಗಳು ಬೇರೆ ಬೇರೆ ಕಲ್ಪಗಳಲ್ಲಿ ಕ್ರಮೇಣ ಬರುತ್ತಾ ಇರುತ್ತಾರೆ ಅವರೆಲ್ಲರೂ ಭಗವಂತನ ಗುಣಗಳನ್ನು ಒಬ್ಬನು ತಿಳಿದದ್ದನ್ನೇ ಇನ್ನೊಬ್ಬರೂ ತಿಳಿಯುವರು ಎಂಬುದಕ್ಕೆ ವಿಶೇಷ ಪ್ರಮಾಣಗಳು ಇಲ್ಲ ಆದುದರಿಂದ ಪರಮಾತ್ಮನ ಅನಂತಗಳಾದ ಗುಣಗಳು ಅನಂತ ಚತುರ್ಮುಖರುಗಳಿಗೆ ವಿದಿತಗಳಾಗಿ ಸಪ್ರಯೋಜನಗಳಾಗುತ್ತವೆ ಎಂದು ಹೇಳಬಹುದು.



## ೨೪೯ ವಿಶಿಷ್ಟಃ

೧ ಎಲ್ಲರಿಗಿಂತಲೂ ಅತಿಶಯೋಪೇತನಾಗಿರುವವನು[1]

೨ ವಿಶಿಷ್ಟನಾಗಿ ಶಾಸ್ತ್ರದಲ್ಲಿ ಪ್ರತಿಪಾದಿತನಾಗಿರುವವನು[2]

ಭಗವಂತನು ಎಲ್ಲರಿಗಿಂತ ವಿಶಿಷ್ಟನಾಗಿರುವುದರಿಂದಲೇ 'ವಿ' ಎಂದೇ ಎನಿಸಿರುವವನು[3] ವಿಶಿಷ್ಟಗಳಾದ ಪ್ರೇರಕತ್ವ, ವ್ಯಾಪ್ತತ್ವ ಹಾಗೂ ಬಲ—ಇವುಗಳನ್ನು ಹೊಂದಿರುವುದರಿಂದಲೇ ವಿಷ್ಣು ಎನಿಸಿರುವವನು[4] ಅವನು ಯಾವಾಗಲೂ ಸರ್ವರಿಂದಲೂ ವಿಶಿಷ್ಟನಾಗಿರುವನೆಂದು ಬೃಹದಾರಣ್ಯಕೋಪನಿಷತ್ತು ಅವನನ್ನು 'ಊರ್ಧ್ವ' ಎಂದು ಕರೆದಿದೆ.[5]

---

೧ 1 ಸರ್ವಾತಿಶಾಯಿತ್ವಾದ್ ವಿಶಿಷ್ಟಃ ।

–ವಿ ಶಾ.

ವಿಶೇಷೇಣ ಶಿಷ್ಯತ ವಿಶಿಷ್ಯತ ಇತಿ ವಿಶಿಷ್ಟಃ । 'ಶಿಷ್ಲ್ ವಿಶೇಷಣೇ'

೨ 2 ವಿ ಇತಿ, ವಿಶಿಷ್ಟ ಇತಿ ಶಿಷ್ಟಃ ಶಾಸ್ತ್ರೇ ಅನುಶಿಷ್ಟ ಪ್ರತಿಪಾದಿತ ಇತಿ ಯಾವತ್ ವಿಶಿಷ್ಟಃ ।

3 ಅಕಯಪ್ರವಿಸಂಭೂಮಸಖಹಾ ವಿಷ್ಣುವಾಚಕಾಃ ಏಕಾಕ್ಷರಾಃ... ..

–ಶಬ್ದನಿರ್ಣಯ (ಬೃ. ಉ. ಭಾ. 5-7-3)

4 'ಏವಂ ವಿಶಿಷ್ಟಪ್ರಾಣತ್ವವ್ಯಾತತ್ವಂ ಚ ಸರ್ವಶಃ । ವಿಶಿಷ್ಟಂ ಚ ಬಲಂ ವಿಷ್ಣೋಃ ಸರ್ವಸ್ಮಾಚ್ಛೀಲವಿತ್ಯಪಿ । ಉದಿತಂ ವಿಷ್ಣುಶಬ್ದೇನ .'

–ಐ ಉ. ಭಾ (2-8-7-3)

5 ...ಸ್ವರ್ಗಲೋಕಮಿತ ಊರ್ಧ್ವೋ ವಿಮುಕ್ತಾಃ ॥

–ಬೃ. ಉ. 6-4-8

ಸಚ್ಛಾಸ್ತ್ರಗಳು ಭಗವಂತನನ್ನು ವಿಶಿಷ್ಟನನ್ನಾಗಿ ತಿಳಿಸಿಕೊಡುವವು—ಎಂಬುದು ಶ್ರೀಮದಾಚಾರ್ಯರು ತಮ್ಮ ವಿಷ್ಣುತತ್ತ್ವವಿನಿರ್ಣಯದಲ್ಲಿ ಸಮರ್ಥಿಸಿದ ಪ್ರಮೇಯಗಳಲ್ಲೊಂದು.[1] ಸರ್ವ ವೇದಗಳೂ ಮುಖ್ಯವಾಗಿ ಭಗವಂತನನ್ನು ಹೇಗೆ ಹೇಳಹೊರಟಿವೆ ಎಂದು ತೋರಿಸಿಕೊಡಲು ಹೊರಟ ಮಹೋಪನಿಷತ್ತು, ವೇದಗಳು ಭಗವಂತನನ್ನು ಸರ್ವೋತ್ತಮನನ್ನಾಗಿ, ಸರ್ವಗುಣ ಪೂರ್ಣನನ್ನಾಗಿ, ಸರ್ವದೋಷರಹಿತನನ್ನಾಗಿ, ಜ್ಞಾಪಿಸಿಕೊಡುವುದರ ಮೂಲಕ ಎಲ್ಲರಿಗಿಂತಲೂ ವಿಶಿಷ್ಟನನ್ನಾಗಿ ಪ್ರತಿಪಾದಿಸಿವೆ—ಎಂದು ಸಂದೇಶಿಸಿದೆ.[2] ಶ್ರೀಮದಾಚಾರ್ಯರು ಅನುವ್ಯಾಖ್ಯಾನದ ಮೊದಲ ಮಂಗಲ ಪದ್ಯದಲ್ಲಿ ತಾವು ನಮಿಸುತ್ತಿರುವ ನಾರಾಯಣನು ವಿಶಿಷ್ಟನಾಗಿರುವನೆಂದು ಉಪಪಾದಿಸುವುದಕ್ಕಾಗಿ ನಾರಾಯಣನನ್ನು ನಿರವಧಿಕಗುಣಗಳೇ ದೇಹವಾಗಿ ಉಳ್ಳವನ

---

ಊರ್ಧ್ವಃ ಸ ಭಗವಾನ್ ಸರ್ವವಿಶಿಷ್ಟೋ ಯತ್ ಸದೈವ ಹಿ ।

–ಬೃ. ಉ. ಭಾ.

1 'ಸದಾಗಮೈಕ ವಿಜ್ಞೇಯಂ ನಾರಾಯಣಂ ಸದಾ ವಂದೇ'

–ವಿ ತ. ವಿ. ಮಂಗಲಪದ್ಯಮ್

ಆಗಮೈಃ ವಿಶಿಷ್ಟತಯಾ ವಿಲಕ್ಷಣತಯಾ ಚ ಜ್ಞೇಯಮ್ ।

–ವಿ ತ. ವಿ. ಟೀಕಾ

* 'ವಿಶೇಷಣಾನಿ ಯಾನೀಹ ಕಥಿತಾನಿ ಸದುಕ್ತಿಭಿಃ । ಸಾಧಯಿಷ್ಯಾಮಿ ತಾನ್ಯೇವ .'

–ವಿ. ತ ವಿ.

* ಅತಃ ಸದಾಗಮೈರೇವ ಸರ್ವಸ್ಮಾದ್ಭಿನ್ನತ್ವೇನ ಸರ್ವಸ್ಮಾದ್ವಿಶಿಷ್ಟತ್ವೇನ ಚ ವಿಜ್ಞೇಯೋ ಭಗವಾನ್ನಾರಾಯಣ ಇತಿ ಸಿದ್ಧಮ್

–ವಿ ತ ವಿ (ಪ್ರಥಮ ಪರಿಚ್ಛೇದಾವಸಾನೇ)

2 ಸರ್ವೋತ್ತಮಂ ಸರ್ವದೋಷವ್ಯಪೇತಂ ಗುಣೈರಶೇಷೈಃ ಪೂರ್ಣಮನ್ಯಂ ಸಮಸ್ತಾತ್ ।
ವೈಲಕ್ಷಣ್ಯಾಜ್ಜ್ಞಾಪಯಿತುಂ ಪ್ರವೃತ್ತಾಃ ಸರ್ವೇ ವೇದಾ ಮುಖ್ಯತೋ ನೈವ ಚಾನ್ಯತ್

–ಮಹೋಪನಿಷತ್ (ವಿ. ತ. ವಿ.)

ಆಗಮೈಃ ಭಗವಾನ್ ಸರ್ವಸ್ಮಾದ್ಭಿನ್ನತ್ವೇನ, ಸರ್ವಸ್ಮಾದ್ವಿಶಿಷ್ಟತ್ವೇನ ಜ್ಞೇಯ ಇತ್ಯಸ್ಮಿನ್ ಪ್ರಮೇಯೇ ಶ್ರೀಮದಾಚಾರ್ಯೈರೇಷಾ ಉಪನಿಷತ್ ಸಂವಾದಿತಯಾ ಉದಾಹೃತೇ-ತ್ಯಸ್ಯಾಃ ಪ್ರಥಮಚರಣೇ ಭಗವತಃ ವಿಶಿಷ್ಟತ್ವಮೇವ ಪ್ರಸ್ತಾವಿತಮಿತಿ ನಿಶ್ಚೀಯತೇ ।

ನ್ನಾಗಿಯೂ ನಿರ್ದೋಷನನ್ನಾಗಿಯೂ, ಜಗತ್ತಿಗೆ ಸೃಷ್ಟ್ಯಾದಿಗಳನ್ನು ನೀಡುವವನನ್ನಾಗಿಯೂ ವಿಶೇಷಿಸಿರುವರು[1]

೩ ವಿಶಿಷ್ಟರಾದ ಬ್ರಹ್ಮಾದಿದೇವತೆಗಳಿಗೂ ಆದೇಶ ನೀಡುವವನು.[2]

೪ ವಿಶಿಷ್ಟವಾದ ಆದೇಶ ಉಳ್ಳವನು.[3]

ಭಗವಂತನು ಬ್ರಹ್ಮಾದಿಶಿಷ್ಯರೂ ತಮ್ಮ ತಮ್ಮ ಕರ್ತವ್ಯದಲ್ಲಿ ತೊಡಗುವಂತೆ ಆದೇಶಿಸುವನು ಅದರಂತೆ ಅವರು ನಡೆದುಕೊಳ್ಳುವರು ಋಗ್ವೇದದಲ್ಲಿ ವರುಣನಾಮಕ ಭಗವಂತನನ್ನು ಸಂಬೋಧಿಸಿ.—ನಕ್ಷತ್ರಗಳನ್ನು ಗಗನದಲ್ಲಿ ಎತ್ತರದಲ್ಲಿ ಸ್ಥಾಪಿಸಿದ್ದು, ಅವುಗಳು ರಾತ್ರಿಯಷ್ಟೇ ಕಾಣುವಂತೆ ಮಾಡಿರುವವನು ನೀನೇ ನಿನ್ನ ಇಂತಹ ಕರ್ಮಗಳನ್ನು ಕಾಣುತ್ತ ಚಂದ್ರನು ರಾತ್ರಿಕಾಲ ಸಂಚರಿಸುವನು—ಬರೇ ಚಂದ್ರನಷ್ಟೇ ಅಲ್ಲ. ಎಲ್ಲ ದೇವತೆಗಳೂ ನಿನ್ನ ಆಜ್ಞೆಯನ್ನು ಪರಿಪಾಲಿಸುವವರು—ಎಂದು ಸ್ತುತಿಸಲಾಗಿದೆ[4] ಉಳಿದವರು ಹೊರಗಷ್ಟೇ ಆದೇಶಿಸಿದರೆ, ಭಗವಂತನಾದರೂ

---

1 ನಾರಾಯಣಂ ನಿಖಿಲಪೂರ್ಣಗುಣೈಕದೇಹಂ ನಿರ್ದೋಷಮಾಹ್ಯತಮಮಹ್ಯಖಿಲೈಃ
ಸುವಾಕ್ಯೈಃ ಅಸ್ಯೋದ್ಭವಾದಿದಂ ಸನ್ನಮಾಮಿ
—ಅ ವ್ಯಾ ಮಂಗಲಪದ್ಯಮ್

ತತ್ರ ವೈಶಿಷ್ಟ್ಯೋಪಪಾದನಾಯ ನಿಖಿಲಪೂರ್ಣಗುಣೈಕದೇಹಂ ನಿರ್ದೋಷಮಸ್ಯೋದ್ಭವಾದಿದಮಿತಿ ವಿಶೇಷಣತ್ರಯಮ್ ।
—ಸುಧಾ

೩ 2 ವಿಶಿಷ್ಟಾನಾಂ ಬ್ರಹ್ಮಾದೀನಾಮಪಿ ಶಿಷ್ಟಂ ಶಾಸನಂ ಆದೇಶಃ ಇತಿ ಯಾವತ್, ಯಸ್ಮಾತ್ಸ ವಿಶಿಷ್ಟಃ ।

೪ 3 ವಿ ವಿಶಿಷ್ಟಂ ಶಿಷ್ಟಂ ಆದೇಶ ಯಸ್ಯಾಸೌ ವಿಶಿಷ್ಟಃ ।

4 ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ ನಕ್ತಂ ದದೃಶ್ರೇ ಕುಹಚಿದ್ದಿವೇಯುಃ ।
ಅದಬ್ಧಾನಿ ವರುಣಸ್ಯ ವ್ರತಾನಿ ವಿಚಾಕಶಚ್ಚಂದ್ರಮಾ ನಕ್ತಮೇತಿ ॥
—ಋ. ವೇ 24-10

ಋಕ್ಷಾಣ್ಯಮೀ ನಿಹಿತಾನಿ ತ್ವಯೋಚ್ಚೈಃ । ದೃಶ್ಯಾನಿ ರಾತ್ರಾ ನ ದಿವಾ ತ್ವಯ್ಯೇವೇತ್ಯಾದೀನಿ ಕರ್ಮಾಣ್ಯನಿರೋಧಿತಾನಿ॥ ಪಶ್ಯನ್ ಪುರಾನಂದತನೋಸ್ತ್ವದೈವ ಚಂದ್ರೋ ನಿತ್ಯಂ ದೃಶ್ಯಮಾನಸ್ತ್ವದೈವ ಸಂಪ್ರೇರಿತೋ ಯಾತಿ ಪರೇ ಚ ದೇವಾ ಏವಂ ತ್ವದಾಜ್ಞಾಕರಣಾಃ ಸದೈವ ॥
—ಋ. ವೇ. ಭಾ.

ಅಂತರ್ಯಾಮಿಯಾಗಿ ಆದೇಶಿಸುವವನು ಎಲ್ಲರ ಹೃದಯದಲ್ಲಿ ಪವಡಿಸಿರುವ ಭಗವಂತನೇ ಎಲ್ಲರಿಗೂ ಅನುಶಾಸನೆ ಮಾಡುವವನೆಂಬ ಮಹಾಭಾರತದ ಸಂದೇಶ[1] ಈ ಅಭಿಪ್ರಾಯವಿಟ್ಟುಕೊಂಡೇ ಹೊರಟಿರುವಂತಹದ್ದು

೫ (ವಿಶೇಷವಾಗಿ ಭಗವಂತನನ್ನು ಪ್ರತಿಪಾದಿಸುವ ಪ್ರಯುಕ್ತ) ವಿಶಿಷ್ಟವೆನಿಸುವ ವೇದಗಳು (ಪ್ರಲಯಕಾಲದಲ್ಲೂ) ಉಳಿಯುವಂತೆ ಅನುಗ್ರಹಿಸುವವನು[2]

ಸಮಸ್ತವೇದಗಳೂ ಪ್ರಲಯಕಾಲದಲ್ಲೂ ಭಗವಂತನ ಬುದ್ಧಿಯಲ್ಲಿ ಇದ್ದೇ ಇರುವ ಪ್ರಯುಕ್ತ ಶಾಶ್ವತಗಳೇ ಆಗಿವೆ—ಎಂಬುದಾಗಿ ಬ್ರಹ್ಮಾಂಡ ತಿಳಿಸಿದೆ[3]

೬ ಶಿಷ್ಟರಾದ ಬ್ರಹ್ಮಾದಿಗಳು ವಿಶಿಷ್ಟರಾಗುವಂತೆ ಅನುಗ್ರಹಿಸಿರುವವನು.[4]

ಭಗವಂತನು ಬ್ರಹ್ಮಾದಿದೇವತೆಗಳಿಗೆ ಪ್ರಭುತ್ವ, ಸ್ಥಾನ, ಮಾನಾದಿಗಳನ್ನು ನೀಡಿ,[5] ಅವರು ಇತರರೆಲ್ಲರಿಗಿಂತ ವಿಶಿಷ್ಟರೆನಿಸುವಂತೆ ಅನುಗ್ರಹಿಸುವವನು.

೭ ವಿಶೇಷವಾಗಿ ಸ್ತುತನಾದವನು.[6]

---

1 'ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ಯೋ ಹೃಚ್ಛಯಸ್ತಮಹಮನುಬ್ರವೀಮಿ'
-ಮ ಭಾ. ಆಶ್ವಮೇಧಿಕ 26-1

೫ 2 ವಿ ವಿಶೇಷೇಣ ಭಗವತ್ಪ್ರತಿಪಾದಕತಯಾ ವಿಶಿಷ್ಟಾಃ ವೇದಾಃ । ತೇ ಪ್ರಲಯೇ ಶಿಷ್ಟಾಃ ಅವಶಿಷ್ಟಾಃ ಯಸ್ಮಾತ್ಸಃ ವಿಶಿಷ್ಟಃ ।

3 ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾಃ ವಿಷ್ಣುಬುದ್ಧಿಗಾಃ ।
-ಬ್ರಹ್ಮಾಂಡ (ವಿ. ತ. ವಿ )

೬ 4 ವಿ ವಿಶಿಷ್ಟಾ ಬ್ರಹ್ಮಾದಯಃ (ಶಿಷ್ಟಾಃ) ಯಸ್ಮಾತ್ಸಃ ವಿಶಿಷ್ಟಃ ।
-ಸ. ಸಂ.

5 'ದಾತೃ ಸರ್ವಾಮರೈಶ್ವರ್ಯವಿಮುಕ್ತ್ಯಾದೇರಹೋ ವರಮ್ । ಆನಂದಸ್ಯ ಪದಂ... '
-ದ್ವಾ. ಸ್ತೋ. 11-6

* ಶರ್ವಗುರ್ವಾದಿಗಿರ್ವಾಣಸಂಸ್ಥಾನದಃ.. ...
-ದ್ವಾ. ಸ್ತೋ. 6-10

೭ 6 ವಿಶೇಷೇಣ ಶಿಷ್ಟಃ ಸ್ತುತಃ ವಿಶಿಷ್ಟಃ ।
-ಶೀ. ಚಂ.

೮ ವಿಶೇಷವಾಗಿ ಶತ್ರುಗಳನ್ನು ದಂಡಿಸುವವನು.[1]

[ಅರ್ಥವಿಶೇಷಗಳನ್ನು ೨೦೯ನೆಯ 'ವಿಶಿಷ್ಟಃ' ಎಂಬ ನಾಮದ ವ್ಯಾಖ್ಯಾನದಲ್ಲಿ ನೋಡಬಹುದು ]

## ಜಿಜ್ಞಾಸೆ

[ವಿಶಿಷ್ಟತ್ವವು ಒಂದೇ]

ಪ್ರ- ವಿಶಿಷ್ಟತ್ವ ಎಂದರೆ ಶ್ರೇಷ್ಠತ್ವ. ಇದು ಗುಣಪ್ರಯುಕ್ತವಾದದ್ದು. ಇದೂ ಒಂದು ಗುಣವೋ? ಅಥವಾ ಅಲ್ಲವೋ? ಇದು ಗುಣವಲ್ಲವಾದರೆ ಭಗವಂತನ ಸಹಸ್ರನಾಮಗಳು ಭಗವಂತನ ಗುಣಗಳನ್ನು ಬೋಧಿಸುತ್ತವೆ - ಎಂಬ ನಿಯಮವು ಇಲ್ಲವೆಂದಾಗುತ್ತದೆ 'ಯಾನಿ ನಾಮಾನಿ ಗೌಣಾನಿ' ಎಂಬ ವಚನದ ವಿರೋಧವು ಪ್ರಾಪ್ತವಾದೀತು. ವಿಶಿಷ್ಟತ್ವವು ಗುಣವಾದರೆ ಇದೂ ವಿಶಿಷ್ಟತ್ವಪ್ರಯೋಜಕವಾಗಬೇಕು ವಿಶಿಷ್ಟತ್ವಪ್ರಯೋಜಕತ್ವವು ಗುಣಲಕ್ಷಣವಾದ ವಿಶಿಷ್ಟತ್ವವೆನಿಸಿದ್ದು, ಇನ್ನೊಂದು ವಿಶಿಷ್ಟತ್ವಕ್ಕೆ ಪ್ರಯೋಜಕವಾದರೆ ಒಂದು ಗುಣವುಳ್ಳವನಲ್ಲಿ ಅನಂತಗಳಾದ ವಿಶಿಷ್ಟತ್ವಗಳು ಇರುವದರಿಂದ ಒಂದು ಗುಣವುಳ್ಳವನು ಅನಂತಗುಣ ವುಳ್ಳವನಾಗಬೇಕಾಯಿತು.

ಉ - 'ಯಥಾರ್ಜನಿರ್ಜಾನ್ಯಾ' ಘಟಜನಿಯ ಜನಿಯು ಘಟಜನಿಗಿಂತ ಬೇರೆ ಅಲ್ಲ ಅದರಂತೆ ವಿಶಿಷ್ಟತ್ವವೂ ಕೂಡ ಒಂದು ಗುಣವಾದರೂ ತತ್ಪ್ರಯುಕ್ತವಾದ ವಿಶಿಷ್ಟತ್ವವು ಪ್ರಯೋಜಕ ದಿಂದ ಬೇರೆ ಅಲ್ಲ ಆದುದರಿಂದ ಒಂದು ಗುಣವುಳ್ಳವನು ಅನಂತಗುಣವುಳ್ಳವನಾಗುವದಿಲ್ಲ



## ೨೫೦ ಶಿಷ್ಟಕೃತ್

೧ (ಸ್ವತಂತ್ರವಾಗಿ ಸರ್ವರಿಗೂ) ಶಾಸನೆಯನ್ನು ಮಾಡುವವನು.[2]

ಸ್ವತಂತ್ರನಾದ ಭಗವಂತನಿಗೊಬ್ಬನಿಗೇ ಸರ್ವರಿಗೂ ಶಾಸನೆ ಮಾಡುವ ಅಧಿಕಾರ ಮತ್ತು

---

೮ 1 ವಿಶೇಷೇಣ ಶತ್ರೂಣಾಂ ಶಾಸಿತಾ ।

-ಶೇ. ಚಂ-

೧ 2 ಶಿಷ್ಟಂ ಶಾಸನಂ, ತತ್ ಕರೋತೀತಿ ಶಿಷ್ಟಕೃತ್ ।

-ವಿ ರಾ.

ಅಸಾಧಾರಣ್ಯೇನ ವ್ಯಪದೇಶ ಇತಿ ಸ್ವಾತಂತ್ರ್ಯೇಣೇತಿ ಸರ್ವೇಷಾಮಿತಿ ಚ ಲಭ್ಯತೇ ।

ಸಾಮರ್ಥ್ಯವಿರುವಂತಹದ್ದು.[1] ಸಾರ್ವಭೌಮನ ಆದೇಶವನ್ನು ಸಾಮಂತರಾಜರು ಪಾಲಿಸುವಂತೆ ಭಗವಂತನ ಅನುಶಾಸನೆಯನ್ನು ಚತುರ್ಮುಖರುದ್ರಾದಿಗಳೆಲ್ಲ ಪಾಲಿಸುವರೆಂಬುದಾಗಿ ಉದರಶಾಂಡಿಲ್ಯ ಶ್ರುತಿಯು ಅಭಿಪ್ರಾಯಪಟ್ಟಿದೆ[2] ಭಗವಂತನ ಶಾಸನೆಯ ಮೇರೆಗೆ ಜಗತ್ತಿನ ಪ್ರತಿಯೊಂದೂ ಧರಿಸಲ್ಪಟ್ಟಿದೆ – ಎಂದು ಯಾಜ್ಞವಲ್ಕ್ಯರು ಸಂದೇಶಿಸಿರುವರು.[3]

೨ ಶಿಷ್ಟರನ್ನಾಗಿ ಮಾಡುವವನು.[4]

ವೇದೋಕ್ತತತ್ತ್ವಜ್ಞಾನ ಪೂರ್ವಕವಾಗಿ ವೇದವಿಧಿಗನುಗುಣವಾಗಿ ನಡೆದುಕೊಳ್ಳುವವರೇ ಶಿಷ್ಟರೆನಿಸುವರು ಶಿಷ್ಟರಾದವರು ತಾವು ಶಿಷ್ಟರಾಗಲು ಬೇಕಾದ ವೇದೋಕ್ತತತ್ತ್ವಜ್ಞಾನ ಹಾಗೂ ತದನುಗುಣವಾಗಿ ನಡೆದುಕೊಳ್ಳಬೇಕೆಂಬ ಶ್ರದ್ಧೆ—ಇವುಗಳನ್ನು ಭಗವದನುಗ್ರಹದಿಂದಲೇ ಪಡೆದು ಕೊಂಡಿರುವರು.

---

1 ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ..

-ಮ. ಭಾರ. ಆಶ್ವಮೇಧಿಕ 26-1

2 'ಖಂಡಾಧೀಶಾಃ ಸಾರ್ವಭೌಮಸ್ಯ ಯದ್ವತ್ ಬ್ರಹ್ಮೇಶಾದ್ಯಾಃ ಕುರ್ವತೇ ತೇಽನು-ಶಾಸ್ತಿಮ್'

-ಉದರಶಾಂಡಿಲ್ಯ ಶ್ರುತಿ (ಭಾಗ ತಾ. ನಿ 10-94-29)

3 'ಏತಸ್ಯ ವಾ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ. . . '

-ಬೃ. ಉ 5-8-9

'ಸಾ ಚ ಪ್ರಶಾಸನಾತ್' (1-3-10) ಇತಿ ಬ್ರಹ್ಮಸೂತ್ರೇ ಅಂಬರಾಂತಸ್ಯ ಸರ್ವಸ್ಯ ಧೃತಿಃ ಪ್ರಶಾಸನಾದುಚ್ಯತೇ -'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ' -ಇತ್ಯಾದಿನಾ ಇತಿ ಅಕ್ಷರ-ನಾಮಕಸ್ಯ ಭಗವತಃ ಪ್ರಶಾಸನಾದೇವ ಅಂಬರಾಂತಸ್ಯ ಧಾರಣಮಿತಿ ಸಿದ್ಧಾಂತಿತಮ್ ।

* ಭಗವತಃ ಶಾಸಕತ್ವಮಧಿಕೃತ್ಯಾಧಿಕಃ ವಿಚಾರಃ 'ಶಾಸ್ತಾ' (602) ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೨ 4 ಶಿಷ್ಟಾನ್ ಕರೋತೀತಿ ಶಿಷ್ಟಕೃತ್ । ವಿಶೇಷ್ಯಸ್ಯ ಸಿದ್ಧತ್ವೇಽಪಿ ವಿಶೇಷಣದ್ವಾರಾ ವಿಶಿಷ್ಟ ಕರಣಾತ್ ।

-ವಿ. ರಾ.

೩ ಶಿಷ್ಟರಿಗೆ ಸದ್ಗತಿ ದೊರಕುವಂತೆ ಮಾಡುವವನು.[1]

೪ (ಸಮರ್ಥರಾದವರೆಲ್ಲ ಮಾಡಿ ಮಾಡಿ ಮುಂದೆ ಮಾಡಲು ಸಾಮರ್ಥ್ಯವಿಲ್ಲದೆ) ಉಳಿಸಿದ್ದನ್ನು ಪೂರ್ಣವಾಗಿ ಮಾಡುವವನು.[2]

ಅಮೃತಕ್ಕಾಗಿ ಸಮುದ್ರಮಥನದಲ್ಲಿ ತೊಡಗಿದ ದೇವ, ದಾನವಾದಿಗಳು ಅಸಮರ್ಥರಾದಾಗ ಅಜಿತನಾಮಕ ಭಗವಂತನೇ ಸಮುದ್ರಮಥನವನ್ನು ಪೂರ್ಣಗೊಳಿಸಿರುವನು.[3]

೫ ದಂಡನೆ ಮಾಡುವವನು[4]

ಭಗವಂತನು ತನ್ನ ನಿಯತಿಯನ್ನು ಮೀರಿದವರನ್ನು ದಂಡಿಸುವನು

೬ ಉಪದೇಶ ಮಾಡುವವನು.[5]

೭ (ಪ್ರಲಯಕಾಲದಲ್ಲಿ) ಉಳಿದಿರುವ ಸೂಕ್ಷ್ಮಪ್ರಕೃತಿಯಿಂದ (ಸೃಷ್ಟಿಕಾಲದಲ್ಲಿ) ಪ್ರಪಂಚವನ್ನು ಸೃಷ್ಟಿಸಿರುವವನು.[6]

---

೩ 1 ಶಿಷ್ಟಾನ್ ಕರೋತೀತಿ ಶಿಷ್ಟಕೃತ್ । ಶಿಷ್ಟಕರಣಂ ಚ 'ಸೃಷ್ಟ್ಯುತ್ತಂ ದೇವಾನಾಂ ಮುಕ್ತಿಸೃಷ್ಟ್ಯುತ್ತಮುಚ್ಯತೇ ನಾನ್ಯತ್ (ಮ. ಭಾರ. ತಾ. ನಿ. 2-64)' ಇತಿವತ್ ಶಿಷ್ಟಾನಾಂ ಸದ್ಗತಿಕರಣಮೇವ ।

೪ 2 ಸಮರ್ಥೈಃ ಸರ್ವೈರಪಿ ಕೃತ್ವಾ ಕೃತ್ವೋತ್ತರತ್ರ ಕರಣಾಸಾಮರ್ಥ್ಯೇನ ಯಚ್ಛಿಷ್ಟಂ ತತ್ಸ್ವಯಂ ಪೂರ್ಣಂ ಕರೋತೀತಿ ಶಿಷ್ಟಕೃತ್ । -ಸ ಸಂ.

3 ಮಥ್ಯಮಾನಾತ್ ತಥಾ ಸಿಂಧೋರ್ದೇವಾಸುರವರೂಥಪೈಃ । ಯದಾ ಸುಧಾ ನ ಜಾಯೇತ ನಿರ್ಮಮಂಥಾಜಿತಃ ಸ್ವಯಮ್ ।

-ಭಾಗ. 8-7-16

೫ 4 ಶಿಷ್ಟಂ ಶಾಸನಂ ದಂಡನಮಿತಿ ಯಾವತ್, ಕರೋತೀತಿ ಶಿಷ್ಟಕೃತ್ ।

೬ 5 ಶಿಷ್ಟಂ ಉಪದಿಷ್ಟಂ, ಉಪದೇಶಮಿತಿ ಯಾವತ್ ಕರೋತೀತಿ ಶಿಷ್ಟಕೃತ್ ।

೭ 6 ಪ್ರಲಯೇ ಶಿಷ್ಟಾತ್ ಅವಶಿಷ್ಟಾತ್ ಸೂಕ್ಷ್ಮಪ್ರಕೃತ್ಯಂಶಾತ್ ಕರೋತಿ ಪ್ರಪಂಚಂ ಸೃಜತೀತಿ ಶಿಷ್ಟಕೃತ್ ।

೮ (ತನ್ನ ವಿಭೂತಿರೂಪಗಳ ಸನ್ನಿಧಾನದಿಂದಾಗಿ) ಕೆಲವು ಪದಾರ್ಥಗಳು ತಮ್ಮ ತಮ್ಮ ಪಂಗಡದಲ್ಲಿ ವಿಶಿಷ್ಟಗಳೆನಿಸುವಂತ ಮಾಡಿರುವವನು[1]

ಗೀತಾಚಾರ್ಯನು ತನ್ನ ವಿಭೂತಿರೂಪದ ಸನ್ನಿಧಾನದಿಂದಾಗಿ ಯಾವುದು ಯಾವುದು ತನ್ನ ಜಾತಿಯಲ್ಲಿ, ಪಂಗಡದಲ್ಲಿ ವಿಶಿಷ್ಟವೆನಿಸಿದೆ[2] ಎಂಬುದನ್ನು ವಿವರವಾಗಿ ಉಪದೇಶಿಸಿರುವನು.[3]

೯ ಶಿಷ್ಟರನ್ನು ಪಾಲಿಸುವವನು[4]

## ಜಿಜ್ಞಾಸೆ

[ಸ್ವಾತಿರಿಕ್ತ ಸರ್ವಶಾಸಕ]

ಪ್ರ. ಪರಮಾತ್ಮನು ಸರ್ವಕ್ಕೂ ಶಾಸಕನಾದರೆ ಸರ್ವದಲ್ಲಿ ಅವನ ಶಾಸನವೂ ಸೇರಿದೆ. ಆದ್ದರಿಂದ ತನ್ನ ಶಾಸನಕ್ಕೂ ಶಾಸಕನು ಅವನು ಎಂದು ಹೇಳಬೇಕು ಅವನು ಚೇತನ-ಸಾಮಾನ್ಯಕ್ಕೆ ಶಾಸಕನು. ಆದ್ದರಿಂದ ಅಚೇತನವಾದ ಶಾಸನಕ್ಕೆ ಶಾಸಕನಾಗಬೇಕಿಲ್ಲ ಎಂದು ಹೇಳಬಾರದು. ಶಾಸನವೆಂದರೆ ಪ್ರೇರಣೆ. ಆ ಪ್ರೇರಣೆಯು ಚೇತನಾಚೇತನ ಸಾಮಾನ್ಯಕ್ಕೆ ಸಂಬಂಧಿಸಿದ್ದು ಆಗಿರುತ್ತದೆ ಚೇತನಸಾಮಾನ್ಯಕ್ಕೆ ಮಾತ್ರ ಸಂಬಂಧಿಸಿದ್ದು ಅಲ್ಲ

ಉ. ಪರಮಾತ್ಮನು ಸ್ವಾತಿರಿಕ್ತಸರ್ವಶಾಸಕನು. ಅವನ ಶಾಸನ ಅವನ ಸ್ವರೂಪಭೂತವಾಗಿದೆ. ಆದುದರಿಂದ ಅವನ ಶಾಸನಕ್ಕೆ ಅವನು ಶಾಸಕನು ಅಲ್ಲ 'ಗುಣಕ್ರಿಯಾದಯಃ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ' ಎಂಬ ಪ್ರಮಾಣದ ಆಧಾರದಿಂದ ಅವನ ಶಾಸನರೂಪವಾದ ಕ್ರಿಯೆಯು ಅವನ ಸ್ವರೂಪವೆಂದು ತಿಳಿಯುತ್ತದೆ



---

೮ 1 ಸ್ವವಿಭೂತಿರೂಪಾಣಾಂ ಸನ್ನಿಧಾನೇನ ಸ್ವಸ್ವಜಾತೀಯೇಷು ವಿಶಿಷ್ಟಾನ್ ಕರೋತೀತಿ ಶಿಷ್ಟಕೃತ್ ।

2 ಯೇಷಾಂ ವಿಷ್ಣುಸ್ವರೂಪಾಣಾಂ ಸನ್ನಿಧೇರನ್ಯವಸ್ತುಷು । ವಿಶಿಷ್ಟಂ ಸ್ವಜಾತೇಃ ಸ್ಯಾದ್ ವಿಭೂತ್ಯಾಖ್ಯಾನಿ ತಾನಿ ತು । -ವಿಭೂತಿತತ್ತ್ವ (ಗೀ. ತಾ. 10 21)

3 ಭಗವದ್ಗೀತಾಯಾಃ ದಶಮಾಧ್ಯಾಯೇ ವಿವೃತಮ್ ।

೯ 4 ಶಿಷ್ಟಾನ್ ಕರೋತಿ ಪಾಲಯತೀತಿ । ಸಾಮಾನ್ಯವಚನೋ ಧಾತುರ್ವಿಶೇಷವಚನೋ ದೃಷ್ಟಃ 'ಕುರು ಕಾಷ್ಠಾನಿ' ಇತ್ಯಾಹರಣೇ ಯಥಾ ತದ್ವದಿತಿ ।

—ಶಾಂ. ಭಾ.

೨೫೧ ಶುಚಿಃ

೧ (ತನ್ನ ಭಕ್ತರೆದುರು ತನ್ನ ಸ್ವರೂಪವನ್ನು) ಪ್ರಕಾಶಪಡಿಸುವವನು[1]

ಭಗವಂತನು ಅವ್ಯಕ್ತೈಕಸ್ವಭಾವದವನು ಆದರೂ ತನ್ನ ಅಚಿಂತ್ಯಶಕ್ತಿಯಿಂದಾಗಿ ಭಕ್ತರೆದುರು ತನ್ನ ಸ್ವರೂಪವನ್ನು ಪ್ರಕಾಶಪಡಿಸುವನು[2] ಪ್ರವಚನ, ಮೇಧಾಶಕ್ತಿ, ಬಹು ಶ್ರವಣ—ಮೊದಲಾದ ಯಾವುದೇ ಸಾಧನಗಳಿಂದ ಸಾಕ್ಷಾತ್ಕರಿಸಿಕೊಳ್ಳಲು ಅಶಕ್ಯನಾದ ಭಗವಂತನು ತಾನು ಯಾರ ಬಗ್ಗೆ ಪ್ರಸನ್ನನಾಗುವನೋ ಅವನಿಗಷ್ಟೇ ತನ್ನ ಸ್ವರೂಪವನ್ನು ಪ್ರಕಾಶಪಡಿಸುವನೆಂದು ಆಥರ್ವಣೋಪನಿಷತ್ತು ಸಂದೇಶಿಸಿದೆ[3]

೨ (ಮೋಕ್ಷ ಯೋಗ್ಯರಿಗೆ ತಮ್ಮ ಸ್ವರೂಪವನ್ನು) ಪ್ರಕಾಶಪಡಿಸುವವನು.[4]

'ಸ್ವಗುಣಾಚ್ಛಾದಿಕಾ' ಎಂಬ ಮಾಯೆಯ ಪರದೆಯಿಂದ ಆಚ್ಛಾದಿತರಾದ ಜೀವಾತ್ಮರು ತಮ್ಮ ಸ್ವರೂಪವನ್ನು ಯಥಾವತ್ತಾಗಿ ತಿಳಿಯದಿರುವಾಗ, ಭಗವಂತನು ಆ ಪರದೆಯನ್ನು ನಾಶಪಡಿಸಿ, ಜೀವಾತ್ಮರಿಗೆ ಅವರ ಸಚ್ಚಿದಾನಂದ ಸ್ವರೂಪವನ್ನು ಪ್ರಕಾಶಪಡಿಸುವನು ಭಗವಂತನು ಯಾರ

---

೧ 1 ಸ್ವಭಕ್ತಾನಾಮನುಗ್ರಹತಃ ಸ್ವಸ್ವರೂಪಂ ಶೋಚಯತಿ ಪ್ರಕಾಶಯತೀತಿ ಶುಚಿಃ । ಅಥವಾ ಶೋಚತಿ ಪ್ರಕಾಶತೇ ಸ್ವಸ್ವರೂಪಮನೇನೇತಿ ಶುಚಿಃ । ಯದ್ಯಪಿ ಅದ್ಯತನಧಾತುಪಾಠೇ 'ಶುಚ ಶೋಕೇ' ಇತ್ಯೇವ ಧಾತುಃ ಪಠ್ಯತೇ । ತಥಾಪಿ 'ಶುಚ ದೀಪ್ತೌ' ಇತಿ ಧಾತುಃ ಪ್ರಾಚೀನಾನಾಂ ಸಮ್ಮತಃ । ಭಾಗವತಸ್ಯ 'ತಥಾಽಪಿ ಶೋಚಸ್ಯಾತ್ಮಾನಂ.. (1-5-4)' ಇತಿ ವಚನೇ 'ಶೋಚಸಿ ಪ್ರಕಾಶಯಸಿ' -ಇತಿ ಶ್ರೀಮದಾಚಾರ್ಯೈಃ ಪ್ರಕಾಶನಾರ್ಥಕತಯಾ ಶುಚಿಃ ವ್ಯಾಖ್ಯಾತಃ ।

2 'ಅತೋಽನಂತೇನ ತಥಾ ಹಿ ಲಿಂಗಮ್' (ಬ್ರ. ಸೂ. 3-2-27) ಉಭಯತ್ರ ಪ್ರಮಾಣಭಾವಾತ್ ತತ್ಪ್ರಸಾದಾದೇವ ಪ್ರಕಾಶೋ ಭವತಿ ।
—ಬ್ರ. ಸೂ. ಭಾ.

3 ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥
-ಅಥ. ಉ. 4-1-3

೨ 4 ಶೋಚಯತಿ ಜೀವಾತ್ಮನಾಂ ಸ್ವಸ್ವರೂಪಂ ಪ್ರಕಾಶಯತೀತಿ ಶುಚಿಃ । ಶೋಚತಿ ಸ್ವರೂಪಂ ಪ್ರಕಾಶತೇ ಅನೇನೇತಿ ವಾ ಶುಚಿಃ ।

ಬಗ್ಗೆ ಪ್ರಸನ್ನನಾಗುವನೋ ಅವರಿಗೆಷ್ಟೇ ಅವರ ಸ್ವರೂಪಾತ್ಮಕ ದೇಹವನ್ನು ಪ್ರಕಟಪಡಿಸುವನೆಂದು ಆಥರ್ವಣೋಪನಿಷತ್ತು ಸಂದೇಶಿಸಿದೆ.[1]

೩ (ವೇದವ್ಯಾಸಾದಿ ರೂಪಗಳಿಂದ ಶಾಸ್ತ್ರಾರ್ಥವನ್ನು) ಪ್ರಕಾಶಗೊಳಿಸುವವನು.[2]

ಶ್ರೀವೇದವ್ಯಾಸ ಎಂಬ ಸೂರ್ಯನು ಭೂವಲಯದಲ್ಲಿ ಪ್ರಾದುರ್ಭವಿಸಿ ತನ್ನ ಗೊ-ಸಂತಾನವನ್ನು ವಿಸ್ತರಿಸಿ, ಶ್ರುತಿ-ಕಮಲವನ್ನು ಅರಳಿಸಿ, ಪರತತ್ತ್ವವನ್ನು ಪ್ರಕಾಶಗೊಳಿಸಿರುವನೆಂದು ಶ್ರೀ ಜಯತೀರ್ಥಶ್ರೀಪಾದರು ಸ್ತುತಿಸಿರುವರು[3]

೪ ಸೂರ್ಯನ ಮೂಲಕ ಜಗತ್ತನ್ನು ಬೆಳಗಿಸುವವನು.[4]

ಜಗತ್ತನ್ನು ಬೆಳಗುವ ಸೂರ್ಯನ ತೇಜಸ್ಸು ತನಗೆ ಸೇರಿದ್ದೆಂದು ಗೀತಾಚಾರ್ಯನು ಸಂದೇಶಿಸಿರುವನು[5]

೫ (ತನ್ನ ಅವತಾರಗಳಲ್ಲಿ ಅಜ್ಞರ ಮೋಹಕ್ಕಾಗಿ ದುಃಖಾಜ್ಞಾನಾಸ್ವಾತಂತ್ರ್ಯಾದಿಗಳನ್ನು) ಪ್ರಕಾಶಪಡಿಸುವವನು[6]

---

1 'ನಾಯಮಾತ್ಮಾ . ' ಇತ್ಯಾದ್ಯುಪರಿ ಉದಾಹೃತಸ್ಯ ಆಥರ್ವಣೋಪನಿಷತ್ಸಂದೇಶಸ್ಯ 'ಆತ್ಮೀಯತ್ವೇನ ಯಂ ವೃಣುತೇ ತಂ ಪ್ರತ್ಯೇವ ತದೀಯಂ ಸ್ವರೂಪಾತ್ಮಕಂ ಶರೀರಂ ಪ್ರಕಟಯತೀ'ತ್ಯರ್ಥೋಽಪಿ ಸಂಪ್ರದಾಯವಿದಾಂ ಸಮ್ಮತಃ ।

೩ 2 ಶೋಚಯತಿ ವೇದವ್ಯಾಸಾದಿರೂಪೈಃ ಶಾಸ್ತ್ರಾರ್ಥಂ ಪ್ರಕಾಶಯತೀತಿ ಶುಚಿಃ । ಶೋಚತಿ ಶಾಸ್ತ್ರಾರ್ಥಃ ಪ್ರಕಾಶತೇ ಅನೇನೇತಿ ವಾ ಶುಚಿಃ ।

3 'ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ ।
ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ತ್ವಂ ಪರಮ್ ।
ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್'
-ಸುಮಂಗಲಪದ್ಯಮ್

೪ 4 ಶೋಚಯತಿ ಸೂರ್ಯಸ್ಯ ತೇಜಸಾ ಜಗತ್ ಪ್ರಕಾಶಯತೀತಿ ಶುಚಿಃ ।

5 ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । . . . ತತ್ತೇಜೋ ವಿದ್ಧಿ ಮಾಮಕಮ್ ॥ —ಗೀ 15-12

೫ 6 ಶೋಚಯತಿ ಸ್ವಾವತಾರೇಷು ಅಜ್ಞಜನಮೋಹಾಯ ದುಃಖಾಜ್ಞಾನಾದಿ ಪ್ರಕಾಶಯತೀತಿ ಶುಚಿಃ ।

ಅಯೋಗ್ಯರಾದ ಅಜ್ಞಾನಿಗಳು ತನ್ನನ್ನು ಸಾಮಾನ್ಯ ಮನುಷ್ಯರಂತೆ ತಿಳಿದು ಅವರಿಗೆ ಯೋಗ್ಯವಾದ ಗತಿಯನ್ನು ಹೊಂದಲೆಂದು ಭಗವಂತನು ತನ್ನ ಅವತಾರಗಳಲ್ಲಿ ಸಾಮಾನ್ಯರಂತೆ ದುಃಖಾಜ್ಞಾನಾದಿಗಳನ್ನು ಪ್ರಕಾಶಿಸಿರುವನು. ಶ್ರೀ ವೇದವ್ಯಾಸಾವತಾರದಲ್ಲಿ ಭಾಗವತ ರಚನೆಯ ಹಿನ್ನೆಲೆಯಲ್ಲಿ, ವೇದವ್ಯಾಸರೂಪಿ ಭಗವಂತನು ಅಕೃತಾರ್ಥನಂತೆ ತನ್ನನ್ನು ಪ್ರಕಾಶಪಡಿಸಿರುವನೆಂಬುದನ್ನು ನಾರದರು ನಿರೂಪಿಸಿರುವರು[1]

೬ ಶೋಕವನ್ನು ನೀಡುವವನು[2]

ಜೀವಾತ್ಮರಿಗೆ, ಅವರವರ ಪ್ರಾರಬ್ಧಕರ್ಮಕ್ಕನುಗುಣವಾಗಿ ದುಃಖವನ್ನು ನೀಡುವ ಭಗವಂತನೇ, ದುಃಖಿಕ್ಕೊಳಗಾಗುವ ಅವರು ಅಳುವಂತೆ ಮಾಡುವನು ಅಯೋಗ್ಯರಿಗೆ ವಿಶೇಷವಾಗಿ ದುಃಖವನ್ನೇ ನೀಡಿ ಅವರು ವಿಶೇಷವಾಗಿ ಶೋಕಿಸುವಂತೆ ಮಾಡುವನು

೭ (ಅವತಾರಗಳಲ್ಲಿ ನಟನೆಗಾಗಿ) ಅಳುವವನು.[3]

ಭಗವಂತನು ರಾಮಾವತಾರದಲ್ಲಿ—ರಾವಣನಿಂದ ಸೀತಾಕೃತಿಯ ಅಪಹಾರ ನಡೆದಾಗ, ಸ್ತ್ರೀಯರಲ್ಲಿ ಅತ್ಯಾಸಕ್ತರಾದವರು ಹೇಗೆ ದುಃಖಕ್ಕೊಳಗಾಗಬೇಕಾಗುವುದೆಂಬುದನ್ನು ಸಾಧಕರಿಗೆ ತೋರಿಸಿಕೊಡುವುದಕ್ಕಾಗಿ ಅತ್ತಿರುವನು[4] ಹಾಗೆಯೇ ಕೃಷ್ಣಾವತಾರದಲ್ಲಿ - ಧೃತರಾಷ್ಟ್ರಗಾಂಧಾರಿಯರೆದುರು ದುರ್ಯೋಧನಾದಿಗಳ ಸಂಹಾರವನ್ನು ತಿಳಿಸುವ ಮುಂಚೆ ತಾನೂ ಆ ಬಗ್ಗೆ ಬಹಳ ಬೇಸರ

---

1 'ತಥಾಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ'

—ಭಾಗ. 1-5-4

ಶೋಚಸಿ ಪ್ರಕಾಶಯಸಿ । 'ಅಜಸ್ರೇಣ ಶೋಚಿಷಾ ಶೋಶುಚಾನಃ' ಇತಿ ಹಿ ಶ್ರುತಿಃ'

ಭಾಗ. ತಾ. ನಿ.

೬ 2 ಶೋಚಂತಿ ಸರ್ವೇಽಪಿ, ವಿಶೇಷತಃ ದುರ್ಜನಾಃ ಅನೇನೇತಿ ಶುಚಿಃ । ಅಗ್ನೇಃ ಶೃಂಗಾರಸ್ಯ ಚ ಶುಚಿಶಬ್ದವಾಚ್ಯತ್ವೇ ಏವಮಪಿ ವ್ಯುತ್ಪತ್ತಿರಾಶ್ರಿಯತೇ ।

೭ 3 ರಾಮಕೃಷ್ಣಾದ್ಯವತಾರೇಷು ನಟನಾರ್ಥಂ ಶೋಚತೀತಿ ಶುಚಿಃ ।

4 ರಕ್ಷೋಽಧಮೇನ ವೃಕವದ್ ವಿಪಿನೇಽಸಮಕ್ಷಂ ವೈದೇಹರಾಜದುಹಿತರ್ಯಪಯಾಪಿತಾಯಾಮ್ । ಭ್ರಾತ್ರಾ ವನೇ ಕೃಪಣವತ್ ಪ್ರಿಯಯಾ ವಿಯುಕ್ತಃ ಸ್ತ್ರೀಸಂಗಿನಾಂ ಗತಿಮಿತಿ ಪ್ರಥಯಂಶ್ಚಚಾರ ॥ ಭಾಗ. 9-10-11

ಗೊಂಡವನಂತೆ ನಟಿಸುವುದಕ್ಕಾಗಿ ಗಟ್ಟಿಯಾಗಿ ಅಳುವವನು. ಮುಹೂರ್ತಕಾಲ ಕಣ್ಣೀರು ಸುರಿಸುವವನು[1]

೮ ನಿತ್ಯವೂ ಪ್ರಕಾಶ ಸ್ವರೂಪಿಯಾಗಿರುವವನು.[2]

[ಅರ್ಥವಿಶೇಷಗಳನ್ನು ೧೫೭ನೆಯ 'ಶುಚಿಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

## ಜಿಜ್ಞಾಸೆ

[ಯಥಾರ್ಥವೆಂದು ತಿಳಿಯುವುದಿಲ್ಲ]

ಪ್ರ.- ಪರಮಾತ್ಮನು ತನ್ನ ಭಕ್ತರಿಗೆ ಮಾತ್ರ ತನ್ನ ಸ್ವರೂಪವನ್ನು ತೋರಿಸುತ್ತಾನೆಂದು ಹೇಳುವದು ಯುಕ್ತವೋ? ಶ್ರೀಕೃಷ್ಣನು ಪಾಂಡವಕೌರವರಿಗೆ ಸಂಧಾನವನ್ನು ಮಾಡುವುದಕ್ಕಾಗಿ ಹಸ್ತಿನಪುರಕ್ಕೆ ಹೋಗುವಾಗ ಧೃತರಾಷ್ಟ್ರನಿಗೆ ಕಣ್ಣನ್ನು ಕೊಟ್ಟು ತನ್ನ ವಿಶ್ವರೂಪವನ್ನು ತೋರಿಸಿದನು. ಆ ವಿಶ್ವರೂಪವನ್ನು ದುರ್ಯೋಧನಾದಿಗಳೂ ಸಹ ನೋಡಿದರು ಅಭಕ್ತನಾದ ದುರ್ಯೋಧನನಿಗೆ ಪರಮಾತ್ಮನು ತನ್ನ ನಿಜರೂಪವನ್ನು ಹೇಗೆ ತೋರಿಸಿದನು?

ಉ - ದುರ್ಯೋಧನನು ಪರಮಾತ್ಮನು ತೋರಿಸಿದ ತನ್ನ ನಿಜಸ್ವರೂಪವನ್ನು ಯಥಾರ್ಥವೆಂದು ತಿಳಿಯಲಿಲ್ಲ. ಅವನ ಯೋಗ್ಯತೆ ಒಳ್ಳೆಯದಲ್ಲ ತನ್ನ ನಿಜರೂಪವನ್ನು ಅಯೋಗ್ಯರಿಗೆ ಪರಮಾತ್ಮನು ತೋರಿಸಿದರೂ ಅದು ಯಥಾರ್ಥವೆಂದು ತಿಳುವಳಿಕೆ ಬಾರದೆ ಇರಲಿ ಎಂದು ಇಚ್ಛಿಸುತ್ತಾನೆ ಆದುದರಿಂದ ಅಯೋಗ್ಯರಾದ ಅಭಕ್ತರಿಗೆ ಪರಮಾತ್ಮನು ತನ್ನ ನಿಜರೂಪವನ್ನು ಯಥಾರ್ಥವೆಂದು ತೋರಿಸುವುದಿಲ್ಲ ಎಂಬ ನಿಯಮವು ಯುಕ್ತ.



---

1 ತತಸ್ತು ಯಾದವಶ್ರೇಷ್ಠೋ ಧೃತರಾಷ್ಟ್ರಮಧೋಕ್ಷಜಃ ॥ ಪಾಣಿನಾಲಂಬ್ಯ ರಾಜೇಂದ್ರ ಸುಸ್ವರಂ ಪ್ರರುರೋದ ಹ । ಸ ಮುಹೂರ್ತಾದಿವೋತ್ಸೃಜ್ಯ ಬಾಷ್ಪಂ ಶೋಕಸಮುದ್ಭವಮ್ ॥ ಪ್ರಕ್ಷಾಲ್ಯ ವಾರಿಣಾ ನೇತ್ರೇ ಹ್ಯಾಚಮ್ಯ ಚ ಯಥಾವಿಧಿ ॥ ಉವಾಚ ಪ್ರಸ್ತುತಂ ವಾಕ್ಯಂ . ..

—ಮ. ಭಾರ. ಶಲ್ಯ. 63–38

೮ 2 ಪ್ರಕಾಶತ್ವಾತ್ ಶುಚಿಃ । —ವಿ. ರಾ.

ಶೋಚತಿ ನಿತ್ಯಂ ಪ್ರಕಾಶತ ಇತಿ ಶುಚಿಃ । 'ಶುಚ ದೀಪ್ತೌ' । ಅಸಾಧಾರಣ್ಯೇನ ವ್ಯಪದೇಶಃ ।

೨೫೨ ಸಿದ್ಧಾರ್ಥಃ

೧ (ಸಹಜವಾಗಿಯೇ) ಈಡೇರಿರುವ ಪ್ರಯೋಜನ ಉಳ್ಳವನು[1]

'ಆಪ್ತಕಾಮ' ಎಂದೇ ಎನಿಸಿರುವ ಭಗವಂತನು ತನಗೆ ಬೇಕಾದ ಪ್ರಯೋಜನಗಳನ್ನೆಲ್ಲ ಸಹಜವಾಗಿಯೇ ಹೊಂದಿರುವವನು[2]. ಭಗವಂತನು ಯಾವುದಾದರೊಂದು ಪ್ರಯೋಜನವನ್ನು ಉದ್ದೇಶಿಸಿ ಜಗತ್ಸೃಷ್ಟ್ಯಾದಿ ಚಟುವಟಿಕೆಗಳಲ್ಲಿ ತೊಡಗುವನೆಂದರೆ ಜಗತ್ ಸೃಷ್ಟ್ಯಾದಿಗಳ ಮೊದಲು ಆ ಪ್ರಯೋಜನಗಳು ಅವನಲ್ಲಿ ಇಲ್ಲದ ಪ್ರಯುಕ್ತ ಅಪೂರ್ಣತೆ ಉಂಟಾಗಲಾರದೆ?—ಎಂಬ ಪೂರ್ವ-ಪಕ್ಷ ಉದಯಿಸಿದಾಗ ಶ್ರೀವೇದವ್ಯಾಸರು ತಮ್ಮ ಬ್ರಹ್ಮಸೂತ್ರವೊಂದರಲ್ಲಿ ಭಗವಂತನು ಸಹಜವಾಗಿಯೇ ತನ್ನ ಪ್ರಯೋಜನಗಳನ್ನು ಹೊಂದಿರುವುದರಿಂದ ಯಾವುದೇ ಸ್ವಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳನ್ನು ನಿರ್ವಹಿಸುತ್ತಿಲ್ಲ. ಆದ್ದರಿಂದಲೇ ಆ ಪ್ರಯುಕ್ತ ಅಪೂರ್ಣನಲ್ಲ—ಎಂದು ಸಿದ್ಧಾಂತಿಸಿರುವರು[3]. ತಾನು ಹೊಂದಬೇಕಾದ ಪ್ರಯೋಜನ ಯಾವುದೂ ಇಲ್ಲ – ಎಂದು ಗೀತಾಚಾರ್ಯನೂ ಸಂದೇಶಿಸಿರುವನು[4]

೨ (ಭಕ್ತಶ್ರೇಷ್ಠರ ದೃಷ್ಟಿಯಲ್ಲಿ) ಪ್ರಸಿದ್ಧವಾದ ಪ್ರಯೋಜನ ಆಗಿರುವವನು.[5]

---

೧ 1 ಸಿದ್ಧಃ ಸ್ವತಃ ನಿಷ್ಪನ್ನಃ ಅರ್ಥಃ ಪ್ರಯೋಜನಂ ಯಸ್ಯ ಸಃ । 'ಅರ್ಥೋಽಭಿಧೇಯರೈವಸ್ತುಪ್ರಯೋಜನ ನಿವೃತ್ತಿಷು' –ಅ. ಕೋ.

2 '.. ಆಪ್ತಕಾಮಸ್ಯ ಕಾ ಸ್ಪೃಹಾ' (ಮಾಂ. ಉ. 1 1-15) ಇತ್ಯುಪನಿಷದಿ ಭಗವಂತಂ ಆಪ್ತಕಾಮೇತಿ ಉಲ್ಲಿಖ್ಯ ಅತ ಏವ ತಸ್ಯ ನೂತನಪ್ರಯೋಜನಾರ್ಥಾ ಸ್ಪೃಹೈವ ನ ಯುಜ್ಯತ ಇತಿ ಸಮರ್ಥಿತಮ್ ।

3 ಯತ್ಪ್ರಯೋಜನಾರ್ಥಂ ಸೃಷ್ಟ್ಯಾದಿ ತದೂನತ್ವಾನ್ನ ಪೂರ್ಣತೇತ್ಯತ ಆಹ-'ನ ಪ್ರಯೋಜನವತ್ತ್ವಾತ್' (ಬ್ರ. ಸೂ. 2-1 33) 'ಅಥೈಷ ಏವ ಪರಮ ಆನಂದ' ಇತ್ಯಾದಿನಾ ಕೃತಕೃತ್ಯತ್ವಾನ್ನ ಪ್ರಯೋಜನಾಯ ಸೃಷ್ಟಿಃ । –ಬ್ರ. ಸೂ. ಭಾ.

ನ ಭವಿಷ್ಯತ್ಪ್ರಯೋಜನವತ್ತ್ವೇನ ಸೃಷ್ಟಿಃ । ಪ್ರಾಪ್ತಪ್ರಯೋಜನತ್ವಾತ್ । –ತತ್ತ್ವ ದೀಪಿಕಾ.

4 'ನಾನವಾಪ್ತಮವಾಪ್ತವ್ಯಂ....' –ಗೀ. 3-22

೨ 5 ಭಕ್ತಶ್ರೇಷ್ಠಾನಾಂ ದೃಷ್ಟ್ಯಾ ಸಿದ್ಧಃ ಪ್ರಸಿದ್ಧಶ್ಚಾಸೌ ಅರ್ಥಶ್ಚ ಸಿದ್ಧಾರ್ಥಃ । 'ಸಿದ್ಧೋ.. ನಿತ್ಯೇ ಪ್ರಸಿದ್ಧೇ' ।

೩ ಸಿದ್ಧ ಪುರುಷರ ದೃಷ್ಟಿಯಲ್ಲಿ ಪ್ರಯೋಜನ ಎನಿಸಿರುವವನು.[1]

೪ ಸಿದ್ಧ ಪುರುಷರಿಂದಲೂ ಪ್ರಾರ್ಥಿಸಲ್ಪಡುವವನು[2]

೫ ಶಾಸ್ತ್ರದಲ್ಲಿ ಪ್ರಸಿದ್ಧನಾಗಿರುವವನು ಮತ್ತು ಎಲ್ಲರಿಂದಲೂ ಪ್ರಾರ್ಥಿಸಲ್ಪಡುವವನು[3]

ಭಗವಂತನು ಎಲ್ಲರಿಂದಲೂ ಪ್ರಾರ್ಥಿಸಲ್ಪಡುವವನು ಸಿದ್ಧಪುರುಷರು ವಿಶೇಷವಾಗಿ ಪ್ರಾರ್ಥಿಸುವರು.[4] ಏಕಾಂತ ಭಕ್ತರಾದ ಸಿದ್ಧಪುರುಷರಂತೂ ಭಗವಂತನಿಗಾಗಿಯೇ ಭಗವಂತನನ್ನು ಪ್ರಾರ್ಥಿಸುವರು ಅವರ ದೃಷ್ಟಿಯಲ್ಲಿ ಭಗವಂತನೇ ಮುಖ್ಯ ಪ್ರಯೋಜನ. ಉಳಿದ ಮೋಕ್ಷಾದಿ ಪದಾರ್ಥಗಳೂ ಈ ಮುಖ್ಯ ಪ್ರಯೋಜನಕ್ಕಾಗಿಯಷ್ಟೇ ಬೇಕಾದವು.[5] ಸಾಮಾನ್ಯ ಭಕ್ತರಾದರೂ ತಮ್ಮ ಧರ್ಮಾರ್ಥಾದಿ ಪುರುಷಾರ್ಥಗಳ ಸಿದ್ಧಿಗಾಗಿ ಭಗವಂತನನ್ನು ಪ್ರಾರ್ಥಿಸುವರು. ಹೀಗೆ ಒಂದಲ್ಲ ಒಂದು ಪ್ರಯೋಜನಕ್ಕಾಗಿ[6] ಎಲ್ಲರಿಂದಲೂ ಪ್ರಾರ್ಥಿಸಲ್ಪಡುವವನಾಗಿ ಭಗವಂತನು ಶಾಸ್ತ್ರದಲ್ಲಿ ಪ್ರಸಿದ್ಧನಾಗಿರುವನು.

---

೩ 1 ಸಿದ್ಧಾನಾಂ ಅರ್ಥಃ ಸಿದ್ಧಾರ್ಥಃ ।

೪ 2 ಸಿದ್ಧೈರಪಿ ಅರ್ಥ್ಯತೇ ಪ್ರಾರ್ಥ್ಯತ ಇತಿ ಸಿದ್ಧಾರ್ಥಃ ।

೫ 3 ಸಿದ್ಧಃ ಶಾಸ್ತ್ರೇಷು ಪ್ರಸಿದ್ಧಃ । ಅರ್ಥ್ಯತೇ ಸರ್ವೈಃ ಪ್ರಾರ್ಥ್ಯತ ಇತಿ ಅರ್ಥಃ ಸಿದ್ಧಶ್ಚಾಸಾವರ್ಥಶ್ಚ ಸಿದ್ಧಾರ್ಥಃ ।

4 ಉನ್ನತಪ್ರಾರ್ಥಿತಾಶೇಷಸಂಸಾಧಕಂ.

–ದ್ವಾ. ಸ್ತೋ.

5 ...ಏಕಾಂತಾನಾಂ ನ ಕಸ್ಯಚಿತ್ । ಅರ್ಥೋ ನಾರಾಯಣೋ ದೇವಸ್ತ್ವನ್ಯತ್ ಸರ್ವಂ ತದರ್ಥಕಮ್

–ಗೀತಾಕಲ್ಪ (ಗೀ. ಭಾ. 7–29)

6 ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।

ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್ ॥

–ಭಾಗ. 2 3–10

೬ (ವೇದದ) ಪ್ರಸಿದ್ಧವಾದ ಅರ್ಥ ಆಗಿರುವವನು[1]

ವೇದವು ಮೂರು ಅರ್ಥಗಳನ್ನು ಹೊಂದಿರುವುದು.[2] ಅವುಗಳಲ್ಲಿ ಜ್ಞಾನಿಗಳಿಗೆ ಪ್ರಸಿದ್ಧವಾದ ಅರ್ಥ ಭಗತ್ಪರವಾದುದೇ ಆದುದರಿಂದಲೇ ವೇದದಲ್ಲಿ ಬರುವ ಅಗ್ನಿ, ಯಮ, ಮಾತರಿಶ್ವನ್ ಮೊದಲಾದ ವೈದಿಕ ಶಬ್ದಗಳಿಂದಲೂ ಜ್ಞಾನಿಗಳ ಪ್ರಕಾರ ಮುಖ್ಯವಾಗಿ ನಿರ್ದಿಷ್ಟನಾದ ಭಗವಂತನೇ ವಾಚ್ಯನೆಂಬುದಾಗಿ ಋಗ್ವೇದ ಸಂದೇಶಿಸಿದೆ[3]

೭ ಸಿದ್ಧ ಪುರುಷರಿಗೆ ಧನರೂಪದಲ್ಲಿರುವವನು[4]

ಎಲ್ಲವೂ ಭಗವಂತನ ಒಡೆತನಕ್ಕೆ ಸೇರಿದ್ದೆಂದು ವಿವೇಚಿಸಿಕೊಂಡು ಯಾವುದರಲ್ಲೂ ತನ್ನದ್ದೆಂಬ ಅಭಿಮಾನವನ್ನಿಟ್ಟುಕೊಳ್ಳದ ಪ್ರಯುಕ್ತ 'ಅಕಿಂಚನ' ಎನಿಸಿರುವವರಿಗೆ ಧನರೂಪದಲ್ಲಿರುವವನು ಭಗವಂತನೆಂಬ ಅಭಿಪ್ರಾಯದಲ್ಲಿ—ಅವನನ್ನು 'ಅಕಿಂಚನ ವಿತ್ತ' ಎಂದೇ ಉಲ್ಲೇಖಿಸಿರುವಳು ಕುಂತಿದೇವಿ[5]

೮ ಭಕ್ತರಿಗೆ ಅಭೀಷ್ಟಗಳನು ನೀಡಲು ಸಿದ್ಧನಾಗಿರುವವನು ಮತ್ತು ತಮ್ಮ ಅಭೀಷ್ಟ

---

ಅಕಾಮೋ ಧರ್ಮಕಾಮೋ ವಾ ಮೋಕ್ಷಕಾಮೋಽಪಿ ಯೋ ಭವೇತ್ ।
ಅಥವಾ ಸರ್ವಕಾಮೋ ಯಃ ಸ ವಿಷ್ಣುಂ ಪುರುಷಂ ಯಜೇತ್ ॥

-ಸ್ಕಾಂದ (ಭಾಗ. ತಾ. ನಿ)

೬ 1 ಸಿದ್ಧಃ ವೇದಸ್ಯ ಪ್ರಸಿದ್ಧಃ ಅರ್ಥಃ ಅಭಿಧೇಯಃ ಸಿದ್ಧಾರ್ಥಃ ।

2 'ತ್ರಯೋಽರ್ಥಾಃ ಸರ್ವವೇದೇಷು. .'

-ಸ್ಕಾಂದ (ಋ. ಭಾ. 1-76)

3 'ಏಕಂ ಸದ್ ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ

-ಋ. ವೇ. 1-164 46

೭ 4 ಸಿದ್ಧಾನಾಂ ಸಿದ್ಧಿಮಂತಾವಂಥೋಽರ್ಥ ಧನರೂಪಃ ।

-ಸ. ಸಂ.

5 ನಮೋಽಕಿಂಚನವಿತ್ತಾಯ......।

-ಭಾಗ. 1-8-27

ಪ್ರಾಪ್ತಿಗಾಗಿ ಭಕ್ತರಿಂದ ಪ್ರಾರ್ಥಿಸಲ್ಪಡುವವನು.[1]

ಭಕ್ತರು ತಮ್ಮ ಅಭೀಷ್ಟ ಪ್ರಾಪ್ತಿಗಾಗಿ ಭಗವಂತನನ್ನೇ ಮೊರೆಹೊಕ್ಕುವರು. ಭಗವಂತನಾದರೂ ಭಕ್ತರ ಅಭೀಷ್ಟಗಳನ್ನು ನೀಡಲು ಸಿದ್ಧನಾಗಿರುವನು

೯ ಮುಕ್ತರಿಂದ ಹೊಂದಲ್ಪಡುವವನು[2]

೧೦ ಮುಕ್ತರಿಂದಲೂ ಪ್ರಾರ್ಥಿಸಲ್ಪಡುವವನು[3]

## ಜಿಜ್ಞಾಸೆ

### [ಜಗತ್ ಸೃಷ್ಟಿಯ ಪ್ರಯೋಜನ]

ಪ್ರ - ಚತುರ್ಮುಖನು ಪರಮಾತ್ಮನ ಭಕ್ಷಣಕ್ಕಾಗಿ ಜಗತ್‌ಸೃಷ್ಟಿಯನ್ನು ಮಾಡಿದರು. ಚತುರ್ಮುಖನ ಕೂಡ ಆ ಪರಮಾತ್ಮನಿಗೆ ಓದನ ಆಗಿದ್ದಾನೆ. ಚತುರ್ಮುಖರನ್ನು ಸೃಷ್ಟಿಮಾಡಿ ಅವನನ್ನು ತಿನ್ನಲಿಕ್ಕೆ ಪರಮಾತ್ಮನು ಇಚ್ಛಿಸಿದಾಗ ಚತುರ್ಮುಖನು ತನ್ನನ್ನು ತಿನ್ನಬಾರದು ಎಂದು ಅಭಿಪ್ರಾಯಪಟ್ಟನು ಆಗ ಪರಮಾತ್ಮನು ಬ್ರಹ್ಮನನ್ನು ತಿನ್ನದೆ ಉಳಿಸಿದನು. ಬ್ರಹ್ಮನಿಂದ ಈ ಜಗದ್ರೂಪವಾದ ದೊಡ್ಡದಾದ ಓದನ ಸೃಷ್ಟಿಯಾಗಲಿ. ಅನಂತರ ಜಗತ್ತು ಬ್ರಹ್ಮ ಈ ಎರಡು ಓದನದ ಲಾಭವಾಗುತ್ತದೆಂದು ತಿಳಿದು ಪರಮಾತ್ಮನು ಬ್ರಹ್ಮದೇವರಿಗೆ ಸೃಷ್ಟಿಮಾಡಲಿಕ್ಕೆ ಆಜ್ಞಾ ಮಾಡಿದನು ಈ ಪ್ರಮೇಯವನ್ನು ವಿಚಾರ ಮಾಡಿದಾಗ ಪರಮಾತ್ಮನು ತನ್ನ ಭೋಗಕ್ಕಾಗಿ ಜಗತ್‌ಸೃಷ್ಟಿಯನ್ನು ಹಾಗೂ ಚತುರ್ಮುಖನ ಸೃಷ್ಟಿಯನ್ನು ಇಚ್ಛಿಸುತ್ತಾನೆಂದು ತಿಳಿಯುತ್ತದೆ. ಆದರೆ ಭೋಗಾರ್ಥಂ ಸೃಷ್ಟಿರಿತ್ಯನ್ಯೇ' ಎಂಬ ಶ್ರುತಿಯು ಭೋಗಕ್ಕಾಗಿ ಈ ಸೃಷ್ಟಿಯಲ್ಲ ಎಂದು ಹೇಳುತ್ತದೆ. ಈ ಪರಸ್ಪರ ವಿರೋಧವನ್ನು ಹೇಗೆ ಪರಿಹರಿಸುವದು?

---

1 ಸಿದ್ಧೋ ಭಕ್ತಾಭಿಲಷಿತದಾನೇಽರ್ಥ್ಯತೇ ಪ್ರಾರ್ಥ್ಯತೇ ಭಕ್ತೈಃ ಸ್ವಾಭಿಷ್ಟಪ್ರಾಪ್ತ್ಯೈ ಇತಿ ಅರ್ಥಃ । ಸಿದ್ಧಶ್ಚಾಸೌ ಅರ್ಥಶ್ಚ ಸಿದ್ಧಾರ್ಥಃ ।
—ಸ. ಸಂ. ಆಧಾರೇಣ

೯ 2 ಸಿದ್ಧೈಃ ಮುಕ್ತೈಃ ಅರ್ಯತೇ ಗಮ್ಯತ ಇತಿ ಸಿದ್ಧಾರ್ಥಃ । 'ಸಿದ್ಧೋ. ..ನಿಷ್ಪನ್ನ ಮುಕ್ತಯೋಃ' —ಹೈಮಃ ।

೧೦ 3 ಸಿದ್ಧೈಃ ಮುಕ್ತೈಃ ಅರ್ಥ್ಯತೇ ಪ್ರಾರ್ಥ್ಯತ ಇತಿ ಸಿದ್ಧಾರ್ಥಃ ।

ಉ - ಸ್ವಪ್ರಯೋಜನಾರ್ಥವಾಗಿ ಪರಮಾತ್ಮನು ಸೃಷ್ಟಿಮಾಡುವದಲ್ಲ. ಭೋಗಕ್ಕಾಗಿ ಸೃಷ್ಟಿ ಮಾಡುತ್ತಾನೆಂದು ಶಾಸ್ತ್ರದ ವಚನಗಳಲ್ಲಿ ವಿರೋಧವು ಆಪಾತತಃ ಇದೆ ಹೊರತು ವಾಸ್ತವವಾಗಿ ಇಲ್ಲ ಯಾವ ಪ್ರಯೋಜನದ ಲಾಭವಾಗದೆ ಇದ್ದರೆ ಮನೋವಿಕಾರವಾಗಬಹುದೋ ಅಂತಹ ಪ್ರಯೋಜನಕ್ಕಾಗಿ ಭಗವಂತನ ಸೃಷ್ಟಿಯು ಅಲ್ಲ ಎಂದು ಆದ್ಯವಚನದ ಅಭಿಪ್ರಾಯ. ಯಾವ ಪ್ರಯೋಜನದ ಲಾಭವಾಗಲಿ, ಲಾಭವಾಗದೆ ಇರಲಿ ಮನಸ್ಸಿಗೆ ಯಾವ ತರಹದ ಮನೋವಿಕಾರವೂ ಇಲ್ಲವೋ ಅಂತಹ ಪ್ರಯೋಜನಕ್ಕಾಗಿ ಜಗತ್ ಸೃಷ್ಟಿ ಎಂದು ಎರಡನೇ ವಚನದ ಅರ್ಥ.



## ೨೫೩ ಸಿದ್ಧಸಂಕಲ್ಪಃ

೧ (ಸಹಜವಾಗಿಯೇ) ಈಡೇರಿದ ಸಂಕಲ್ಪ ಉಳ್ಳವನು.[1]

- ಛಾಂದೋಗ್ಯೋಪನಿಷತ್ತಿನಲ್ಲಿ ಹೃತ್ಕಮಲದ ಆಕಾಶದಲ್ಲಿ ಇರುವ ಭಗವಂತನ ಮಹಿಮೆಯನ್ನು ತಿಳಿಸುತ್ತ, ಅವನ ಸತ್ಯಕಾಮತ್ವದ ಸಮರ್ಥನೆಗಾಗಿ, ಸತ್ಯ ಸಂಕಲ್ಪತ್ವವನ್ನು ಉಲ್ಲೇಖಿಸಲಾಗಿದೆ.[2] ಸಂಕಲ್ಪಾನುಸಾರವಾಗಿಯೇ ಇಚ್ಛೆ ಇರುವುದು.[3] ಭಗವಂತನು ಸತ್ಯವಾದ, ಸ್ವತಃ ಸಿದ್ಧವಾದ ಸಂಕಲ್ಪವುಳ್ಳವನಾದುದರಿಂದ, ಅಂತಹ ಸಂಕಲ್ಪಾನುಸಾರವಾಗಿ ಇರುವ ಅವನ ಇಚ್ಛೆಯೂ ಸತ್ಯವೇ ಆಗಿರಬೇಕು— ಎಂದು ಸಾಧಿಸಲಾಗಿದೆ ಮುಂದೆ, ಇಂತಹ ಸತ್ಯಸಂಕಲ್ಪನ ಶಾಸನಾನುಸಾರವಾಗಿ[4] ಮುಕ್ತಾತ್ಮರೂ

---

೧ 1 ಸಿದ್ಧಃ ಸ್ವತಃ ನಿಷ್ಪನ್ನಃ ಸಂಕಲ್ಪಃ ಮಾನಸವ್ಯಾಪಾರಃ ಯಸ್ಯ ಸಃ ।

2 '. . . ಏತತ್ ಸತ್ಯಂ ಬ್ರಹ್ಮಪುರಮಸ್ಮಿನ್ ಕಾಮಾಃ ಸಮಾಹಿತಾ ಏಷ ಆತ್ಮಾ.. ಸತ್ಯಕಾಮಃ ಸತ್ಯಸಂಕಲ್ಪಃ' -ಛಾಂ. ಉ 8-1 2

* ಸತ್ಯಕಾಮತ್ವೇಽಪಿ ಹೇತುಃ ಸತ್ಯಸಂಕಲ್ಪ ಇತಿ ।
–ವೇದೇಶೀಯ

3 ಸಂಕಲ್ಪಾನುಸಾರಿಣೀ ಇಚ್ಛೇತಿ ಪ್ರಸಿದ್ಧಮಿತಿ ಭಾವಃ ।
–ವೇದೇಶೀಯ

4 .. ಇಹ ಪ್ರಜಾ ಅನ್ವಾವಿಶಂತಿ ಯಥಾನುಶಾಸನಮಿತಿ ಮುಕ್ತಾನಾಂ ಭಗವತಿ ಆಸ್ವಾವೇಶೇ ಯದುಕ್ತಂ ಭಗವದನುಶಾಸನಾನುಸಾರಿತ್ವಂ ತಸ್ಯ ಉತ್ತರತ್ರ ಸರ್ವತ್ರಾಪಿ ಅನ್ವಯಃ । ತಥಾ ಚ ಮುಕ್ತಾನಾಂ ಸತ್ಯಕಾಮತ್ವಂ ಸತ್ಯಸಂಕಲ್ಪತ್ವಮಪಿ ಭಗವಚ್ಛಾಸನಾನುಸಾರೇಣೇತಿ ಸಿದ್ಧ್ಯತಿ ।

ಸತ್ಯಸಂಕಲ್ಪರಾಗಿರುವರೆಂಬುದನ್ನು ವಿವರಿಸುವುದರ ಮೂಲಕ ಇವನ ಸತ್ಯಸಂಕಲ್ಪತ್ವವನ್ನು ದೃಢೀಕರಿಸಲಾಗಿದೆ ಮುಖ್ಯನಾದ, ಗುಣಗಳಿಂದ ಶ್ರೇಷ್ಠನಾದ, ಭಗವಂತನು 'ಸತ್ಯ ಸಂಕಲ್ಪ' ಎನಿಸಿರುವನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು.[1]

೨ ನಿತ್ಯಗಳಾದ ಸಂಕಲ್ಪಗಳುಳ್ಳವನು.[2]

೩ (ಶಾಸ್ತ್ರಗಳಲ್ಲಿ) ಪ್ರಸಿದ್ಧವಾದ ಸಂಕಲ್ಪ ಉಳ್ಳವನು[3]

ಶಾಸ್ತ್ರಗಳು ಭಗವಂತನನ್ನು 'ಸತ್ಯ ಸಂಕಲ್ಪ' ಎಂದು ಸ್ತುತಿಸುವುದರ ಮೂಲಕ ಅವನ ಸಂಕಲ್ಪದ ಮಹಿಮೆಯನ್ನೂ ಉಲ್ಲೇಖಿಸಿವೆ.

೪ ಪ್ರಸಿದ್ಧ ಅಥವಾ ನಿತ್ಯ ಆಗಿರುವವನು ಮತ್ತು ಚನ್ನಾಗಿ ಸಮರ್ಥನಾಗಿರುವವನು.[4]

೫ ಸಿದ್ಧಪುರುಷರ ಸಂಕಲ್ಪಗಳೆಲ್ಲ ಯಾರ ವಿಷಯದಲ್ಲಿ ಇವೆಯೋ ಅಂತಹವನು[5]

೬ ಮುಕ್ತಾತ್ಮರು ತಮ್ಮ ಕಾಮಗಳನ್ನೆಲ್ಲ ಪೂರೈಸಿಕೊಳ್ಳಲು ಸಮರ್ಥರಾಗುವಂತೆ ಅನುಗ್ರಹಿಸುವವನು[6]

೭ ಮುಕ್ತಾತ್ಮರ ಸಂಕಲ್ಪಗಳು ಯಾರಿಂದ ಉಂಟಾಗುವವೋ ಅಂತಹವನು.[7]

---

1 'ಸತ್ಯಸಂಕಲ್ಪ ಏಕೋ ವರೇಣ್ಯೋ ವಶೀ...' —ದ್ವಾ. ಸ್ತೋ.

೨ 2 ಸಿದ್ಧಾಃ ನಿತ್ಯಾಃ ಸಂಕಲ್ಪಾಃ ಯಸ್ಯ ಸಃ ಸಿದ್ಧಸಂಕಲ್ಪಃ । 'ಸಿದ್ಧೋ.... ನಿತ್ಯೇ ಪ್ರಸಿದ್ಧೇ' —ಹೈಮಃ

೩ 3 ಸಿದ್ಧಃ ಶಾಸ್ತ್ರೇಷು ಪ್ರಸಿದ್ಧಃ ಸಂಕಲ್ಪಃ ಯಸ್ಯ ಸಃ ಸಿದ್ಧಸಂಕಲ್ಪಃ ।

೪ 4 ಪ್ರಸಿದ್ಧತ್ವಾತ್ ನಿತ್ಯತ್ವಾದ್ವಾ ಸಿದ್ಧಃ । ಸಮ್ಯಕ್ ಕಲ್ಪತೇ ಸಮರ್ಥೋ ಭವತೀತಿ ಸಂಕಲ್ಪಃ। ಸಿದ್ಧಶ್ಚಾಸೌ ಸಂಕಲ್ಪಶ್ಚ ಸಿದ್ಧಸಂಕಲ್ಪಃ ।

೫ 5 ಸಿದ್ಧಾನಾಂ ಸಂಕಲ್ಪಾಃ ಯಸ್ಮಿನ್ ವಿಷಯೇ ಸಃ ಸಿದ್ಧಸಂಕಲ್ಪಃ ।

೬ 6 ಸಿದ್ಧಾಃ ಮುಕ್ತಾತ್ಮಾನಃ ಸಂಕಲ್ಪಂತೇ ಸ್ವಕಾಮಪೂರಣೇ ಸಮರ್ಥಾಃ ಭವಂತ್ಯಸ್ಮಾದಿತಿ ಸಿದ್ಧಸಂಕಲ್ಪಃ ।

೭ 7 ಸಿದ್ಧಾನಾಂ ಮುಕ್ತಾನಾಂ ಸಂಕಲ್ಪಾಃ ಯಸ್ಮಾತ್ ಪ್ರಾದುರ್ಭವಂತಿ ಸಃ ಸಿದ್ಧಸಂಕಲ್ಪಃ ।

ಮುಕ್ತಾತ್ಮರ ಸಂಕಲ್ಪಗಳು ಭಗವತ್‌ಸಂಕಲ್ಪಾನುಸಾರಿಗಳಾಗಿರುವುದರಿಂದಲೇ ಅವರೂ 'ಸತ್ಯ ಸಂಕಲ್ಪ'ರೆನಿಸಿರುವರು

## ಜಿಜ್ಞಾಸೆ

### [ಪ್ರತಿಜ್ಞಾ ಪಾಲನೆ]

ಪ್ರ - ಕೌರವ ಪಾಂಡವರ ಯುದ್ಧದಲ್ಲಿ ಶ್ರೀಕೃಷ್ಣನು ತಾನು ಆಯುಧಧಾರಿಯಾಗುವದಿಲ್ಲ ಎಂದು ಪ್ರತಿಜ್ಞೆ ಮಾಡಿದರೂ ಭೀಷ್ಮಾರ್ಜುನರಿಗೆ ಪರಸ್ಪರ ಯುದ್ಧವಾಗುವಾಗ ಭೀಷ್ಮರನ್ನು ಚಕ್ರಾಯುಧವನ್ನು ಧರಿಸಿ ಶ್ರೀಕೃಷ್ಣನು ಹೇಗೆ ಎದುರಿಸಿದನು?

ಉ - ಭಕ್ತರ ಪ್ರತಿಜ್ಞೆಯನ್ನು ಸತ್ಯಮಾಡುವದಕ್ಕೋಸ್ಕರ ತನ್ನ ಪ್ರತಿಜ್ಞೆಯನ್ನು ಬಿಡುತ್ತೇನೆಂದು ಶ್ರೀಕೃಷ್ಣನ ಇನ್ನೊಂದು ಪ್ರತಿಜ್ಞೆಯು ಇದೆ ಭೀಷ್ಮರು ಯುದ್ಧದಲ್ಲಿ ಶ್ರೀಕೃಷ್ಣನಿಂದ ಆಯುಧ ಧಾರಣವಾಗುವಂತೆ ಮಾಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿದ್ದಾರೆ ಭೀಷ್ಮರು ಭಕ್ತರು. ಅವರ ಪ್ರತಿಜ್ಞೆ ಸತ್ಯ ಮಾಡುವದಕ್ಕಾಗಿ ಶ್ರೀಕೃಷ್ಣನು ತನ್ನ ಪ್ರತಿಜ್ಞೆಯನ್ನು ಬಿಟ್ಟರೂ ತನ್ನ ಪ್ರತಿಜ್ಞೆಯನ್ನು ಸತ್ಯವನ್ನಾಗಿಯೇ ಮಾಡಿದ್ದಾನೆ. ಆದುದರಿಂದ ಅವನು ಸತ್ಯಸಂಕಲ್ಪನೇ ಆಗುತ್ತಾನೆ.



## ೨೫೪ ಸಿದ್ಧಿದಃ

೧ ಕ್ರಿಯಾ ನಿಷ್ಪತ್ತಿರೂಪವಾದ, ಅಥವಾ ಫಲನಿಷ್ಪತ್ತಿರೂಪವಾದ ಸಿದ್ಧಿಯನ್ನು ನೀಡುವವನು.[1]

ಸಕಲಕ್ರಿಯೆಗಳಿಗೂ ಸ್ವತಂತ್ರಕರ್ತೃ ಆಗಿರುವ ಭಗವಂತನೇ ಪ್ರತಿಯೊಂದು ಕ್ರಿಯೆಯೂ ಉಂಟಾಗುವಂತೆ ಅನುಗ್ರಹಿಸುವನು ಹಾಗೆಯೇ ಕ್ರಿಯೆಯಿಂದ ಫಲ ಉಂಟಾಗುವಂತೆ ಅನುಗ್ರಹಿಸುವವನೂ ಅವನೇ. ಅಲ್ಲದೆ, ಸಕಲ ಫಲಸಿದ್ಧಿಗಳಿಗೂ ಭಗವತ್ಪಾದಾರವಿಂದದ ಆರಾಧನೆಯೇ ಮೂಲ[2]—ಎಂಬುದಾಗಿ ಕುಚೇಲನು ಸಾರಿರುವಂತೆ, ಭಗವಂತನನ್ನು ಆರಾಧಿಸಿದಲ್ಲಿ ಅವನ ಅನುಗ್ರಹದಿಂದಾಗಿ ಸಕಲ ಸಿದ್ಧಿಗಳನ್ನೂ ಪಡೆದುಕೊಳ್ಳಬಹುದಾಗಿದೆ.

---

೧ 1 ಕ್ರಿಯಾನಿಷ್ಪತ್ತ್ಯಾತ್ಮಿಕಾಂ ಫಲನಿಷ್ಪತ್ತ್ಯಾತ್ಮಿಕಾಂ ವಾ ಸಿದ್ಧಿಂ ದದಾತೀತಿ ಸಿದ್ಧಿದಃ । 'ಸಿದ್ಧಿಸ್ತು ಮೋಕ್ಷೇ ನಿಷ್ಪತ್ತಿಯೋಗಯೋಃ', - ಹೈಮಃ

2 ಸರ್ವಾಸಾಮಪಿ ಸಿದ್ಧೀನಾಂ ಮೂಲಂ ತಚ್ಚರಣಾರ್ಚನಮ್
-ಭಾಗ. 10-81-19

೨ ಅಣಿಮಾದಿ ಹದಿನೆಂಟು ಸಿದ್ಧಿಗಳನ್ನು ನೀಡುವವನು.[1]

ಶ್ರೀಕೃಷ್ಣನು ಉದ್ಧವನಿಗೆ ಅಣಿಮಾದಿ ಹದಿನೆಂಟು ಸಿದ್ಧಿಗಳನ್ನು ಪರಿಚಯಿಸಿಕೊಟ್ಟು, ಸಕಲಸಿದ್ಧಿಗಳಿಗೂ ತಾನೇ ಕಾರಣ, ತಾನೇ ಒಡೆಯನೆಂಬುದಾಗಿ ಹೇಳಿರುವನು.[2] ಚತುರ್ಮುಖನಲ್ಲಿ ಇತರರೆಲ್ಲರಿಗಿಂತ ಅಧಿಕವಾಗಿ ಸಿದ್ಧಿಗಳು ಬರುವಂತೆ ಭಗವಂತನು ಅನುಗ್ರಹಿಸಿರುವನು.[3]

೩ (ಮುಕ್ತಿಯೋಗ್ಯರಿಗೆ) ಮುಕ್ತಿಯನ್ನು ನೀಡುವವನು.[4]

ಯಾವ ಭಗವಂತನಿಂದಾಗಿ ಪ್ರಾಣಿಗಳಲ್ಲಿ ಪ್ರವೃತ್ತಿ ಉಂಟಾಗುವುದೋ, ಯಾವ ಭಗವಂತನು ಈ ಎಲ್ಲ ಪ್ರಪಂಚವನ್ನು ವ್ಯಾಪಿಸಿರುವನೋ—ಅಂತಹ ಭಗವಂತನನ್ನು ಸ್ವವರ್ಣಾಶ್ರಮೋಚಿತಕರ್ಮದಿಂದ ಆರಾಧಿಸಿ ಮಾನವನು 'ಮುಕ್ತಿ'ಯನ್ನು ಪಡೆಯುವನು—ಎಂದು ಗೀತಾಚಾರ್ಯನು ಭಗವದನುಗ್ರಹದಿಂದಲೇ ಮುಕ್ತಿ ಎಂದು ಸೂಚಿಸಿರುವನು.[5]

೪ ಜ್ಞಾನವನ್ನು ನೀಡುವವನು.[6]

೫ (ಸಿದ್ಧಿಗೆ ನಿಯಾಮಕನಾಗಿದ್ದು) 'ಸಿದ್ಧಿ' ಎಂದೇ ಎನಿಸುವ ತನ್ನನ್ನು ತನ್ನ ಭಕ್ತರಿಗೆ

---

೨ 1 ಅಣಿಮಾದಿಸಿದ್ಧೀಃ ದದಾತೀತಿ ಸಿದ್ಧಿದಃ ।

2 ಸರ್ವಾಸಾಮಪಿ ಸಿದ್ಧೀನಾಂ ಹೇತುಃ ಪತಿರಹಂ ಪ್ರಭುಃ ।

—ಭಾಗ. 11-15-35

3 ...ಅಣಿಮಾದ್ಯಾಃ .. । .. . ವಿರಿಂಚಸ್ಯ ತತ್ಪ್ರಸಾದಾತ್ ಪರಾಧಿಕಾಃ ।

—ಸ್ವಾಭಾವ್ಯ (ಭಾಗ. ತಾ. ನಿ 11-15-3)

೩ 4 ಸಿದ್ಧಿಂ ಮೋಕ್ಷಂ ದದಾತೀತಿ ಸಿದ್ಧಿದಃ ।

5 ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥

—ಗೀತಾ. 18-46

೪ 6 'ಷಿಧ ಗತ್ಯಾಂ' ಇತ್ಯತಃ ಸಿದ್ಧಸ್ಯ ಸಿದ್ಧಿಶಬ್ದಸ್ಯ ಜ್ಞಾನಾರ್ಥಕತ್ವಮ್ । ತಥಾಚ ಸಿದ್ಧಿಂ ಜ್ಞಾನಂ ದದಾತೀತಿ ಸಿದ್ಧಿದಃ ।

ನೀಡುವವನು.[1]

೬ (ದುರ್ಜನರ) ಕ್ರಿಯಾನಿಷ್ಪತ್ತಿಯನ್ನು ಅಥವಾ ಫಲನಿಷ್ಪತ್ತಿಯನ್ನು ಕೆಡಿಸುವವನು.[2]

ದುಷ್ಟಜನರ ಕ್ರಿಯೆಯು ನಿಷ್ಪನ್ನವಾಗಿ, ಅವರಿಗೆ ಅದರ ಫಲ ದೊರಕಿತೆಂದರೆ ಅದರಿಂದ ಗರ್ವಿಷ್ಠರಾದ ಅವರು ಇನ್ನಷ್ಟು ಲೋಕೋಪದ್ರವವನ್ನು ಉಂಟುಮಾಡುವರೆಂದು ಅವರ ಕ್ರಿಯಾನಿಷ್ಪತ್ತಿಯನ್ನೂ, ಫಲನಿಷ್ಪತ್ತಿಯನ್ನೂ ಭಗವಂತನು ಕೆಡಿಸುವನು.

೭ (ಅಯೋಗ್ಯರ ಪಾಲಿಗೆ) ಮೋಕ್ಷವನ್ನು ಅಥವಾ ಜ್ಞಾನವನ್ನು ನಿರಾಕರಿಸುವವನು. (ಅವರಿಗೆ) ದೊರಕದಂತೆ ಮಾಡುವವನು[3]

ಭಗವಂತನು ಅಯೋಗ್ಯರಿಗೆ ಮೋಕ್ಷವಾಗಲೀ, ಮೋಕ್ಷಸಾಧನವಾದ ಜ್ಞಾನವಾಗಲೀ ದೊರಕದಂತೆ ಮಾಡುವನು ಬುದ್ಧಾವತಾರದಲ್ಲಿ ಮುಖ್ಯವಾಗಿ ಅದನ್ನೇ ನಡೆಸಿರುವನು.

## ಜಿಜ್ಞಾಸೆ

### [ಕೊಡುವ ಅಣಿಮಾದಿಗಳು ಬೇರೆ]

ಪ್ರ - ಪರಮಾತ್ಮನು ಭಕ್ತರಿಗೆ ಅಣಿಮಾದಿ ಸಿದ್ಧಿಗಳನ್ನು ಕೊಟ್ಟರೆ ಅವನಿಗೆ ಅಣಿಮಾದಿ ಸಿದ್ಧಿಗಳು ಇಲ್ಲವೆಂದಾಯಿತು ದಾನವೆಂದರೆ ಸ್ವಸ್ವತ್ವಧ್ವಂಸ ಪೂರ್ವಕ ಪರಸತ್ವಾಪಾದನ. ಆದುದರಿಂದ ದಾನಕೊಟ್ಟವರಲ್ಲಿ ದೇಯದ ಸ್ವಸ್ವತ್ವಧ್ವಂಸವು ಆಗಬೇಕು ಅಲ್ಲವೇ?

---

1 '. ಸಿದ್ಧಿಃ (೧೦೧) ಸರ್ವಾದಿರಚ್ಯುತಃ' ಇತಿ ಸಿದ್ಧೀನಾಂ ಭಗವದಧೀನಸತ್ತಾಕತ್ವೇನ ಭಗವಾನ್ ಸಿದ್ಧಿರಿತ್ಯೇವ ಭಣ್ಯತೇ। ತಥಾಚ ಸಿದ್ಧಿಂ ಸಿದ್ಧಿನಾಮಕಂ ಸ್ವಾತ್ಮಾನಂ ಭಕ್ತೇಭ್ಯಃ ದದಾತೀತಿ ಸಿದ್ಧಿದಃ ।

೬ 2 ದುರ್ಜನಾನಾಂ ಸಿದ್ಧಿಂ ಕ್ರಿಯಾನಿಷ್ಪತ್ತಿಂ, ಫಲನಿಷ್ಪತ್ತಿಂ ವಾ ದ್ಯತಿ ಖಂಡಯತೀತಿ ಸಿದ್ಧಿದಃ । 'ದೋ ಅವಖಂಡನೇ'

೭ 3 ಅಯೋಗ್ಯಾನಾಂ ಕೃತೇ ಸಿದ್ಧಿಂ ಜ್ಞಾನಂ ಮೋಕ್ಷಂ ವಾ ದ್ಯತಿ ಖಂಡಯತಿ ನಿರಾಕರೋತೀತಿ ಯಾವತ್, ಸಿದ್ಧಿದಃ ।

೮ - ದಾನವೆಂದರೆ ಸ್ವಸ್ವತ್ವ ಧ್ವಂಸಪೂರ್ವಕಪರಸತ್ತ್ವಾಪಾದನ ರೂಪವೆಂಬುದು ನಿಜ. ಇದು ಪ್ರಾಯಿಕ ಆದುದರಿಂದ ಕನ್ಯಾದಾನವನ್ನು ಮಾಡಿದ ಕನ್ಯಾಪಿತೃವಿಗೆ ಆ ಕನ್ಯೆಯ ಮೇಲೆ ಸ್ವತ್ವವು ಇರುವದು ಕಂಡಿದೆ ಮತ್ತು ಪರಮಾತ್ಮನು ಭಕ್ತರಿಗೆ ಕೊಡುವ ಅಣಿಮಾದಿಗಳು ಬೇರೆ ತನ್ನ ಸ್ವತ್ವವುಳ್ಳ ಅಣಿಮಾದಿಗಳು ಬೇರೆ ಗೋದಾನಸ್ಥಳದಲ್ಲಿ ಗೋವು ಒಂದೇ. ಆ ಸ್ಥಳದಲ್ಲಿ ಮಾತ್ರ ಸ್ವತ್ವಧ್ವಂಸವು ಇರುತ್ತದೆ



## ೨೫೫ ಸಿದ್ಧಿಸಾಧನಃ

೧ ಕಾರ್ಯ ನಿಷ್ಪತ್ತಿಯನ್ನು ಸಾಧಿಸುವವನು[1]

ಭಗವಂತನು ಯಾವುದೇ ಕಾರ್ಯದ ಕರ್ತೃ, ಕರಣ ಹಾಗೂ ಕಾರಣ—ಇವುಗಳಲ್ಲಿ ಇದ್ದು ಕೊಂಡು, ಅವುಗಳ ಮೂಲಕ ಕಾರ್ಯವು ನಿಷ್ಪನ್ನವಾಗುವಂತೆ ಪ್ರೇರಿಸುವವನು. ಬೇರೆ ಬೇರೆ ಸಾಧನಗಳ ಮೂಲಕವೇ ಯಾವುದೇ ಕಾರ್ಯ ರೂಪುಗೊಳ್ಳುವುದಾದರೂ, ಅವುಗಳ ಸಾಧನತ್ವವು ಭಗವದಧೀನವಾಗಿರುವುದರಿಂದ[2] ಅವನೇ ಸ್ವತಂತ್ರನಾದ ಸಾಧನನೆನಿಸುವವನು.

೨ ಯಾವುದೇ ಕಾರ್ಯದ ಫಲಸಿದ್ಧಿಗೂ, ಸಾಧನಕ್ಕೂ ಅತ್ಯಧಿಕವಾಗಿ ಒಡೆಯನಾಗಿರುವವನು.[3]

೩ ಮೋಕ್ಷವನ್ನು ಸಾಧಿಸುವವನು[4]

---

೧ 1 ಸಾಧ್ಯತೇಽನೇನೇತಿ ಸಾಧನಃ । ಸಿದ್ಧೀನಾಂ ಸಾಧನಃ ಸಿದ್ಧಿಸಾಧನಃ ।
—ವಿ. ರಾ.

2 ಸಾಧನಾನಾಂ ಸಾಧನತ್ವಂ ಚೈತದಾಽಽಯತ್ತಾಧೀನಮಿಷ್ಯತೇ. .
—ಬ್ರ. ಸೂ. ಭಾ. 2-1-19

೨ 3 ಯಸ್ಯ ಕಸ್ಯಾಪಿ ಕಾರ್ಯಸ್ಯ ಫಲಸಿದ್ಧಿಃ ಸಾಧನಂ ಚ ಭಗವದಧೀನಸತ್ತಾಕೇ ಇತಿ ಯದಧೀನಾ ಯಸ್ಯ ಸತ್ತೇತ್ಯಾದಿನ್ಯಾಯೇನ ಸಿದ್ಧಿಸಾಧನವಾಚಕಾಭ್ಯಾಂ ಶಬ್ದಾಭ್ಯಾಮೇವ ಭಗವಾನಪಿ ಭಣ್ಯತೇ । ತಥಾಚ ಸಿದ್ಧಿಶ್ಚಾಸೌ ಸಾಧನಶ್ಚ ಸಿದ್ಧಿಸಾಧನಃ ।

೩ 4 ಸಿದ್ಧಿಂ ಮೋಕ್ಷಂ ಸಾಧಯತೀತಿ ಸಿದ್ಧಿಸಾಧನಃ ।

೪ (ಮೋಕ್ಷಕ್ಕೆ ಸಾಧನವಾದ) ಜ್ಞಾನವನ್ನು ಸಾಧಿಸುವವನು[1]

ಅಜ್ಞಾನಿಗಳಿಗೆ ಜ್ಞಾನವನ್ನು ನೀಡುವ ಭಗವಂತನೇ ಜ್ಞಾನಪಡೆಕೊಂಡ ಜ್ಞಾನಿಗಳಿಗೆ ಮೋಕ್ಷವನ್ನು ನೀಡುವನು 'ಸ್ವಗುಣಾಚ್ಛಾದಿಕಾ' ಎಂಬ ಪ್ರಕೃತಿಯ ಆವರಣದಿಂದಾಗಿ ತನ್ನ ಸ್ವರೂಪವನ್ನೂ, 'ಪರಮಾಚ್ಛಾದಿಕಾ' ಎಂಬ ಪ್ರಕೃತಿಯ ಆವರಣದಿಂದಾಗಿ ಭಗವಂತನ ಸ್ವರೂಪವನ್ನೂ ಅರಿಯದ ಪ್ರಯುಕ್ತ ಜೀವಾತ್ಮನು ಸಂಸಾರ ಬಂಧನಕ್ಕೊಳಗಾಗಿದ್ದು, ಆ ಆವರಣಗಳನ್ನು ಹೋಗಲಾಡಿಸಿ ಜೀವಾತ್ಮನಿಗೆ ತನ್ನ ಸ್ವರೂಪದ ಜ್ಞಾನವನ್ನೂ, ಭಗವತ್ಸ್ವರೂಪದ ಜ್ಞಾನವನ್ನೂ ನೀಡುವವನು[2] ಭಗವಂತನು ಬಳಿಕ ಸಂಸಾರಬಂಧನದಿಂದ ಮುಕ್ತಿಯನ್ನೂ ಅವನೇ ನೀಡುವನು ಜ್ಞಾನಗಳಿಕೆಯಲ್ಲೂ, ಮುಕ್ತಿಗಳಿಕೆಯಲ್ಲೂ ಭಗವಂತನದೇ ಹಿರಿಯ ಪಾತ್ರ ಎಂದು ತೋರಿಸಿ ಕೊಡುವುದಕ್ಕಾಗಿಯೇ ಶ್ರುತಿ ಗೀತೆಯಲ್ಲಿ ಭಗವಂತನನ್ನು ಸಂಬೋಧಿಸಿ ನೀನೇ ಜೀವಾತ್ಮನಿಗೆ ಸಂಬಂಧಿಸಿದ ಪರಮಾಚ್ಛಾದಿಕಾ ಎಂಬ ಪ್ರಕೃತಿಯನ್ನು ತ್ಯಜಿಸುವಿ ಹಾಗಯೇ ಸ್ವರೂಪಾಚ್ಛಾದಿಕಾ ಎಂಬ ಪ್ರಕೃತಿಯನ್ನು ಸಂಹರಿಸುವಿ—ಎಂಬುದಾಗಿ ಪ್ರಾರ್ಥಿಸಿಕೊಳ್ಳಲಾಗಿದೆ.[3]

೫ (ಶಾಸ್ತ್ರಗಳ ಮೂಲಕ) ಸಿದ್ಧಿ ಎನಿಸುವ ತನ್ನನ್ನು (ಸಾತ್ವಿಕರೆದುರು) ಸಾಧಿಸುವವನು[4]

ಬ್ರಹ್ಮಸೂತ್ರ, ಮಹಾಭಾರತ ಮುಂತಾದ ಶಾಸ್ತ್ರಗಳಲ್ಲಿ ಭಗವಂತನು, ಸಿದ್ಧಿಗಳಿಗೆಲ್ಲ ನಿಯಾಮಕನಾಗಿರುವ ಪ್ರಯುಕ್ತ 'ಸಿದ್ಧಿ'—ಎಂದೆನಿಸಿರುವ ತನ್ನನ್ನು ಆಗಮ ಯುಕ್ತ್ಯಾದಿಗಳಿಂದ ಸಾಧಿಸಿರುವನು

೪ 1 ಸಿದ್ಧಿಂ ಜ್ಞಾನಂ ಸಾಧಯತೀತಿ ಸಿದ್ಧಿಸಾಧನಃ ।

2 'ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ' -ಅ ವ್ಯಾ. 1 1 15

3 ಭಜತಿ ಸರೂಪತಾಂ ತದನು ತ್ವಮುತ ಜಹಾಸಿ ಜಿಹಾಸಿ ತಾಮವ್ ।
-ಭಾಗ-10-94-38

ಯಾಚ್ಛಾದಯಾ ಪುಮಾನಾತ್ತಭಗಾಂ ತ್ವಯಾತ್ತಹೃತಭಗಾಂ ಪ್ರಾತಿಸ್ವಿಕಾಂ ಪೂರ್ವೋಕ್ತಾಂ ದ್ವಿವಿಧಾಂ ಕಷ್ಟಾಂ ಪ್ರಕೃತಿಂ ಜಹಾತಿ ಜಿಹಾತಿ ಹಂತಿ ಚ ತದಪಿ ತ್ವಮೇವ ಜಹಾಸಿ ಜಿಹಾಸಿ ಚ । -ಭಾಗ. ತಾ ನಿ.

* 'ಸ್ವಾತಂತ್ರ್ಯಾತ್ ಪ್ರಕೃತಿತ್ಯಾಗಕರ್ತಾ ನಾರಾಯಣಃ ಪರಃ । ಯದಪ್ಯೇಷಾ ಜೀವಸಂಸ್ಥಾ ಹಂತಾ ಚ ಭಗವಾನ್ ಪ್ರಭುಃ' -ಗಾರುಡ (ಭಾಗ. ತಾ. ನಿ.)

೫ 4 ಸಿದ್ಧಿಂ ಸಿದ್ಧಿನಾಮಕಂ ಸ್ವಾತ್ಮಾನಂ ಸಾತ್ತ್ವಿಕೇಷು ಸಾಧಯತೀತಿ 'ಸಿದ್ಧಿಸಾಧನಃ ।

## ಜಿಜ್ಞಾಸೆ

[ಆವರಣದ ನಿವೃತ್ತಿಯೇ ಮೋಕ್ಷ]

ಪ್ರ - ಪರಮಾತ್ಮನು ಜ್ಞಾನಿಗಳಿಗೆ ಮೋಕ್ಷವನ್ನೂ ಮುಕ್ತರಿಗೆ ಆನಂದವನ್ನೂ ಕೊಡುತ್ತಾನೆಂದು 'ಜ್ಞಾನಿನಾಂ ಮೋಕ್ಷದಶ್ಚ ಸಃ ಆನಂದದಶ್ಚ ಮುಕ್ತಾನಾಂ' ಎಂಬ ಪ್ರಮಾಣವಚನವು ಹೇಳುತ್ತದೆ. ಮೋಕ್ಷವು ಪರಮಪುರುಷಾರ್ಥವಾಗಬೇಕಾದರೆ ಆನಂದರೂಪ ಆಗಬೇಕು ಆದುದರಿಂದ ಮೋಕ್ಷದಾನವೇ ಆನಂದದಾನರೂಪವಾದ್ದರಿಂದ ಪ್ರಮಾಣವಚನವು ಮೋಕ್ಷದಾನಕ್ಕಿಂತ ಅತಿರಿಕ್ತವಾಗಿ ಆನಂದದಾನವನ್ನು ಹೇಳುವದು ಹೇಗೆ?

ಉ - ಮೋಕ್ಷವು ಪ್ರಕೃತಿರೂಪವಾದ ಆವರಣದ ನಿವೃತ್ತಿರೂಪವೆಂದು ಈ ಪ್ರಮಾಣವಚನದ ಅರ್ಥ ಮೋಕ್ಷವು ಪರಮಪುರುಷಾರ್ಥ ಎಂದು ಹೇಳುವಾಗ ಮೋಕ್ಷ ಶಬ್ದಾರ್ಥವು ಆನಂದ ಈ ರೀತಿ ಮೋಕ್ಷಶಬ್ದದಿಂದ ಬೇರೆ ಬೇರೆ ಅರ್ಥಗಳು ವಿವಕ್ಷಿತವಾದುದರಿಂದ ಯಾವ ದೋಷವೂ ಇಲ್ಲ.



ವೃಷಾಹೀ ವೃಷಭೋ ವಿಷ್ಣುರ್ವೃಷಪರ್ವಾ ವೃಷೋದರಃ ।
ವರ್ಧನೋ ವರ್ಧಮಾನಶ್ಚ ವಿವಿಕ್ತಃ ಶ್ರುತಿಸಾಗರಃ ॥ ೨೮ ॥

೨೫೭ ವೃಷಾಹೀ

೧ ಧರ್ಮದ ಜ್ಞಾನವನ್ನು ಅತಿಶಯವಾಗಿ, ನಿತ್ಯವೂ ಹೊಂದಿರುವವನು.[1]

೨ ಧರ್ಮದ ಜ್ಞಾನವನ್ನು ನಿಯಮಿಸುತ್ತಿರುವವನು.[2]

ಉದ್ಧವನು ಶ್ರೀಕೃಷ್ಣ ಪರಮಾತ್ಮನನ್ನು ಸಂಬೋಧಿಸಿ, ನಿನ್ನನ್ನು ಬಿಟ್ಟು ಮತ್ತೊಬ್ಬ ಭೂಮಿಯಲ್ಲಿ ಧರ್ಮವನ್ನು ಹೇಳುವವನಾಗಲೀ, ಮಾಡುವವನಾಗಲೀ, ರಕ್ಷಿಸುವವನಾಗಲೀ—ಇಲ್ಲ.

---

೧ 1 ವೃಷಸ್ಯ ಧರ್ಮಸ್ಯ ಅಹಃ ಜ್ಞಾನಂ ವೃಷಾಹಃ। 'ರಾಜಾಹಸ್ಸಖಿಭ್ಯಷ್ಟಚ್' । ಸೋಽತ್ರಸ್ಯಾಸ್ತೀತಿ ವೃಷಾಹೀ। 'ಅತಿಶಯಾರ್ಥೇ, ನಿತ್ಯಯೋಗೇ ಚ ಇನಿಃ' 'ಅಹರ್ದಿನಂ ಪ್ರಕಾಶಶ್ಚ ಕ್ವಚಿದ್ ಜ್ಞಾನಂ ಬಲಂ ತಥಾ' (ಬೃ. ಉ. ಭಾ. 5-3-2)

೨ 2 ವೃಷಸ್ಯ ಧರ್ಮಸ್ಯ ಅಹಃ ಜ್ಞಾನಂ ವೃಷಾಹಃ। ಸಮಾಸಾಂತಷ್ಟಚ್ । ಸಃ ನಿಯಮ್ಯತಯಾಽತ್ರಸ್ಯಾಸ್ತೀತಿ ವೃಷಾಹೀ ।

ಪ್ರಾಣಾದಿಕಲೆಗಳು ಮೂರ್ತಿಮಂತಗಳಾಗಿ ಇರುವ ಚತುರ್ಮುಖನ ಸಭೆಯಲ್ಲೂ ನಿನ್ನನ್ನು ಬಿಟ್ಟರೆ ಧರ್ಮವನ್ನು ಹೇಳುವವರಿಲ್ಲ. ನಿನ್ನ ಅನುಗ್ರಹವಿಲ್ಲದೆ ಚತುರ್ಮುಖನೂ ಧರ್ಮವನ್ನು ಹೇಳಲಾರ. ನಿನ್ನ ಪ್ರಸಾದಕ್ಕೆ ಪಾತ್ರನಾಗಿ ಚತುರ್ಮುಖನೊಬ್ಬನಷ್ಟೇ ಧರ್ಮವನ್ನು ಹೇಳಬಲ್ಲ. ಇನ್ನಾರೂ ಹೇಳಲಾರರು[1]—ಎಂದು ಹೇಳಿರುವನು ಇದು—ಧರ್ಮಜ್ಞಾನವು ಪೂರ್ಣಪ್ರಮಾಣದಲ್ಲಿ ಭಗವಂತನಲ್ಲಷ್ಟೇ ಇರುವುದೆಂಬುದನ್ನೂ, ಪ್ರವಚನ, ರಕ್ಷಣೆ, ರಚನೆಗಳ ಮೂಲಕ ಧರ್ಮಜ್ಞಾನವನ್ನು ನಿಯಮಿಸುತ್ತಿರುವವನೂ ಭಗವಂತನೇ ಎಂಬುದನ್ನೂ ಸೂಚಿಸಿಕೊಡುವುದು

೩ ಶ್ರೇಷ್ಠವಾದ ಪ್ರಕಾಶ ಅಥವಾ ಜ್ಞಾನ ಅಥವಾ ಬಲ ಯಾವಾಗಲೂ ಇರುವವನು.[2]

ಭಗವಂತನು ಜ್ಞಾನಸ್ವರೂಪದ ಪ್ರಕಾಶ ಉಳ್ಳವನೇ ಹೊರತು ಪ್ರಾಕೃತತೇಜಸ್ಸ್ವರೂಪವಾದ ಪ್ರಕಾಶ ಉಳ್ಳವನಲ್ಲ ಎಂಬುದಾಗಿ 'ಜ್ಞಾನಭಾಃ' ಎಂಬ ವಿಶೇಷಣದಿಂದಲೂ, ಎಲ್ಲೂ, ಯಾವಾಗಲೂ, ಯಾರಿಂದಲೂ ಪ್ರತಿರೋಧವಿಲ್ಲದ ಪರಾಕ್ರಮ ಅವನದೆಂಬುದಾಗಿ 'ಸತ್ಯಪರಾಕ್ರಮಃ' ಎಂಬ ವಿಶೇಷಣದಿಂದಲೂ, ಅತ್ಯಂತ ಶ್ರೇಷ್ಠವಾದ ಜ್ಞಾನ ಅವನದ್ದೆಂಬುದಾಗಿ 'ಜ್ಞಾನಜ್ಞಾನಃ'—ಎಂಬ ವಿಶೇಷಣದಿಂದಲೂ ಅವನನ್ನು 'ಪೈಂಗಿಶ್ರುತಿ'ಯು ಸ್ತುತಿಸಿದೆ[3]

೪ (ಜೀವಾತ್ಮರ) ಶ್ರೇಷ್ಠವಾದ ಪ್ರಕಾಶ, ಜ್ಞಾನ ಹಾಗೂ ಬಲಗಳನ್ನು ನಿಯಮಿಸುತ್ತಿರುವವನು.[4]

---

1 ವಕ್ತಾ ಕರ್ತಾಽವಿತಾ ನಾನ್ಯೋ ಧರ್ಮಸ್ಯಾಚ್ಯುತ ತೇ ಭುವಿ ।
ಸಭಾಯಾಮಪಿ ವೈರಿಂಚ್ಯಾಂ ಯತ್ರ ಮೂರ್ತಿಧರಾಃ ಕಲಾಃ ॥
—ಭಾಗ. 11-17-5

ವಿನಾ ಪ್ರಸಾದಂ ವಿಷ್ಣೋರ್ನ ಧರ್ಮಂ ಬ್ರಹ್ಮಾಽಭಿವಕ್ಷ್ಯತಿ ।
ತತ್ಪ್ರಸಾದೇನ ವಕ್ತುಂ ತು ಬ್ರಹ್ಮಾ ಶಕ್ಷ್ಯತಿ ನಾಪರಃ ॥
—ಪ್ರಧಾನ (ಭಾಗ ತಾ. ನಿ)

೩ 2 ವೃಷಂ ಶ್ರೇಷ್ಠಂ ತತ್ ಅಹಃ ಪ್ರಕಾಶಃ ಜ್ಞಾನಂ ಬಲಂ ವಾ ವೃಷಾಹಃ ಸಮಾಸಾಂತಷ್ಟಚ್ । ಸಃ ನಿತ್ಯಮಸ್ಯಾಸ್ತೀತಿ ವೃಷಾಹೀ ।' . 'ಶ್ರೇಷ್ಠೇ ಸುಕೃತೇ ವೃಷಃ' ಅ ಕೋ.।

3 .. ಜ್ಞಾನಭಾಃ ಸತ್ಯಪರಾಕ್ರಮಃ ಜ್ಞಾನಃ . ಸ ವಿಷ್ಣುಃ ಪರಮೋಽಕ್ಷರಃ
—ಬ್ರ. ಸೂ. ಭಾ. 2-2-41

೪ 4 ವೃಷಂ ಶ್ರೇಷ್ಠಮ್ । ವೃಷಂ ಚ ತತ್ ಅಹಃ ಪ್ರಕಾಶಃ ಜ್ಞಾನಂ ಬಲಂ ವಾ ವೃಷಾಹಃ ಟಚ್ । ಸಃ ನಿಯಮ್ಯತಯಾಽಸ್ಯಾಸ್ತೀತಿ ವೃಷಾಹೀ ।

ಜೀವಾತ್ಮರ ಸ್ವರೂಪಾತ್ಮಕಗಳಾದ ಬಲ, ಶುದ್ಧಜ್ಞಾನಗಳು ಭಗವದನುಗ್ರಹದಿಂದ ಅಭಿವ್ಯಕ್ತ ಗಳಾಗುವವೆಂಬುದಾಗಿ ಗೌಪವನ ಶ್ರುತಿಯು ಸಂದೇಶಿಸಿದೆ[1] ಹಾಗೆಯೇ ಸಂಸಾರದೆಶೆಯಲ್ಲಿ ಅಲ್ಪ ತೇಜೋರೂಪವಾಗಿದ್ದ ಜೀವಸ್ವರೂಪವನ್ನು ಭಗವಂತನು ಮುಕ್ತಿಯಲ್ಲಿ ದೊಡ್ಡ ಪರಿಮಾಣದ ತೇಜಸ್ಸನ್ನಾಗಿ ಅಭಿವ್ಯಕ್ತಗೊಳಿಸುವನೆಂದು ಪ್ರಮಾಣ ಸಾರುತ್ತಿದೆ[2] ಹೀಗೆ ಜೀವಾತ್ಮರ ಸ್ವರೂಪಾತ್ಮಕ ಗಳಾಗಿದ್ದು ಶ್ರೇಷ್ಠಗಳಾಗಿರುವ ಪ್ರಕಾಶಾದಿಗಳು ಭಗವಂತನಿಂದ ನಿಯಂತ್ರಿತವಾಗಿರುವವು.

೫ ಧರ್ಮದ ಜ್ಞಾನವನ್ನು ನೀಡುವ ವೇದಾದಿ ಶಾಸ್ತ್ರಗಳಿಗೆ ನಿಯಾಮಕನಾಗಿ ಇರುವವನು[3]

೬ (ಪುರುಷಾರ್ಥಗಳನ್ನು) ಅಭಿವರ್ಷಿಸುವ ಜ್ಞಾನಕ್ಕೆ ವಿಷಯನಾಗಿರುವವನು[4]

ಭಗವಂತನ ಜ್ಞಾನ ಮೋಕ್ಷಕ್ಕೆ ಮಾತ್ರವೇ ಅಲ್ಲದೆ ಸಕಲ ಪುರುಷಾರ್ಥಗಳಿಗೂ ಸಾಧನವಾಗಿದೆ. ಕರ್ಮಯೋಗಿಗಳಿಗೆ ಜ್ಞಾನಿಗಳ ಫಲಗಳು ದೊರಕದಂತೆ ಜ್ಞಾನಿಗಳಿಗೂ ಕರ್ಮಯೋಗಿಗಳ ಫಲಗಳು ದೊರಕಲಾರವೇ ಎಂಬ ಸಂದೇಹ ಬಂದಾಗ, ಗೀತಾಚಾರ್ಯನು ದೃಷ್ಟಾಂತಪೂರ್ವಕವಾಗಿ ಸಮಾಧಾನಿಸಿರುವನು—'ಬಾವಿಯಿಂದ ದೊರಕಬಹುದಾದ ಪ್ರಯೋಜನಗಳೆಲ್ಲ ಮಹಾಸಮುದ್ರದಲ್ಲಿ ಅಂತರ್ಭಾವ ಹೊಂದಿದಂತೆ ಕರ್ಮಯೋಗಿಗಳ ಫಲಗಳೆಲ್ಲ ಭಗವಂತನ ಪರೋಕ್ಷ ಹಾಗೂ ಪ್ರತ್ಯಕ್ಷ ಜ್ಞಾನವನು ಪಡೆದುಕೊಂಡವರಿಗೆ ದೊರಕಿಯೇ ತೀರುವವು.[5]

---

1 'ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಮ್ । ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ' -ಗೌಪವನ ಶ್ರುತಿ (ಬ್ರ. ಸೂ. ಭಾ. 2-3-31)

2 ಅಲ್ಪಂ ತೇಜಸ್ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ। ತಥೈವ ಸುಮಹತ್ತೇಜಃ ಕರೋತಿ ಭಗವಾನ್ ಮಹತ್। —ಬೃ. ಉ. ಭಾ. 6-4-4

೫ 3 ವೃಷಸ್ಯ ಧರ್ಮಸ್ಯ ಆಹಃ ಜ್ಞಾನಂ ಯಸ್ಮಾತ್ ಸಃ ವೃಷಾಹಃ ವೇದಾದಿಃ ಸ ನಿಯಮ್ಯ-ತಯಾಽಸ್ಯಾಸ್ತೀತಿ ವೃಷಾಹೀ ।

೬ 4 ಪುರುಷಾರ್ಥಾನ್ ವರ್ಷತೀತಿ ವೃಷಂ, ವೃಷಂ ಚ ತತ್ ಅಹಜ್ಞಾನಂ ಚ ವೃಷಾಹಃ । ತತ್ ವಿಷಯಿತಯಾಽಸ್ಯಾಸ್ತೀತಿ ವೃಷಾಹೀ ।

5 ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ।
—ಗೀ. 2-46

೭ ಹಗಲಿನಂತೆ ಪ್ರಕಾಶಿಸುವ ಪುಣ್ಯ ಉಳ್ಳವನು.[1]

೮ ಯಜ್ಞ ವಿಶೇಷ ಅಥವಾ ದ್ವಾದಶಾಹಾದಿ ಕ್ರತು 'ವೃಷಾಹ' ಎನಿಸಿದ್ದು, ಅದಕ್ಕೆ ಯಜಮಾನ, ಕರ್ತೃ ಅಥವಾ ಭೋಕ್ತೃ ಆಗಿರುವವನು[2]

೯ ಯಾರನ್ನು ಮೊದಲು ಸಂಗಮಿಸುವ ದಿನವು ಸಕಲ ಮಂಗಲಕ್ಕೂ ಕಾರಣವಾಗಿದ್ದು ಧರ್ಮರೂಪವಾಗಿದೆಯೋ ಅಂತಹ ದಿನ ಉಳ್ಳವನು[3]

೧೦ ವೃಷಭಾಸುರನನ್ನು ಚೆನ್ನಾಗಿ ಸಂಹರಿಸಿರುವವನು[4]

ಅರಿಷ್ಟ ಎಂಬ ಅಸುರನು ಭಯಂಕರವಾದ ವೃಷಭಾಕಾರದಿಂದ ಗೋಕುಲದ ಗೋಪ ಗೋಪಿಯರನ್ನೆಲ್ಲ ಭಯಪಡಿಸುತ್ತ, ಗೋಕುಲಕ್ಕೆ ಬರಲು ಶ್ರೀಕೃಷ್ಣನು ಅವನ ಪಾದಗಳಲ್ಲಿ ಹಿಡಿದು ಒದ್ದೆ ಬಟ್ಟೆಯನ್ನೆಂಬಂತೆ ಹಿಂಡಿ ಸಂಹರಿಸುವನು[5]

---

ತಥಾಽಪಿ ಕಾಮ್ಯಕರ್ಮಿಣಾಂ ಫಲಂ ಜ್ಞಾನಿನಾಂ ನ ಭವತೀತಿ ಸಾಮ್ಯಮೇವೇತ್ಯತ ಆಹ—ಯಾವಾನರ್ಥ ಇತಿ । ಯಥಾ ಯಾವಾನರ್ಥಃ ಪ್ರಯೋಜನಂ ಉದಪಾನೇ ಕೂಪೇ ಭವತಿ ತಾವಾನ್ ಸರ್ವತಃ ಸಂಪ್ಲುತೋದಕೇಽಂತರ್ಭವತ್ಯೇವ, ಏವಂ ಸರ್ವೇಷು ವೇದೇಷು ಯತ್ ಫಲಂ ತದ್ ವಿಜಾನತೋ ಜ್ಞಾನಿನೋ ಬ್ರಾಹ್ಮಣಸ್ಯ ಫಲೇಽಂತರ್ಭವತಿ।
—ಗೀ. ಭಾ.

೭ 1 ವೃಷಃ ಧರ್ಮಃ ಪುಣ್ಯಮ್, ತದೇವಾಹಃ ಪ್ರಕಾಶಸಾಧರ್ಮ್ಯಾತ್ । ಸೋಽಸ್ಯಾಸ್ತೀತಿ ವೃಷಾಹೀ ।
—ಶಾಂ. ಭಾ.

೮ 2 ಯಜ್ಞವಿಶೇಷೋ ವಾ ದ್ವಾದಶಾಹಾದಿಃ ಕ್ರತುಃ ವೃಷಾಹಃ ಸೋಽಸ್ಯಾಸ್ತೀತಿ ವೃಷಾಹೀ ।
—ಶಾಂ ಭಾ.

೯ 3 ನಿಖಿಲಮಂಗಲಾಂಕುರಾರ್ಪಣದಿನತ್ವಾತ್ ವೃಷರೂಪಂ ಧರ್ಮರೂಪಮಹರಸ್ಯ ಪ್ರಥಮಾಭಿಗಮನದಿವಸಂ ವೃಷಾಹಃ । ತದಸ್ಯಾಸ್ತೀತಿ ವೃಷಾಹೀ ।
—ಪ. ಭ.

೧೦ 4 ವೃಷಂ ವೃಷಭಾಸುರಂ ಆ ಸಮ್ಯಕ್ ಹಿನಸ್ತೀತಿ ವೃಷಾಹೀ ।
—ವಾ ರಾ.

5 ಭಾಗವತೇ ದಶಮಸ್ಕಂಧಸ್ಯ ಷಟ್‌ತ್ರಿಂಶಾಧ್ಯಾಯೇ ಆದಾವೇವೇಯಮಾಖ್ಯಾಯಿಕಾ ವರ್ಣಿತಾ ।

೧೧ ಧರ್ಮದ ಮೂಲಕ ವ್ಯಾಪಿಸಿರುವವನು.[1]

೧೨ ಧರ್ಮಕ್ಕೆ ಅತ್ಯಂತ ಒಡೆಯನಾಗಿರುವವನು ಮತ್ತು ಯಾರಿಂದಲೂ ಹೀನನಲ್ಲದೆ ಇರುವವನು ಅಥವಾ ಎಲ್ಲೆಡೆ ವ್ಯಾಪಿಸಿರುವವನು[2]

ಜಿಜ್ಞಾಸೆ

[ಧರ್ಮಜ್ಞಾನದಿಂದ ಶ್ರೈಷ್ಠ್ಯ]

ಪ್ರ - ಪರಮಾತ್ಮನು ಧರ್ಮದ ಜ್ಞಾನವುಳ್ಳವನು ಎಂದು ಹೇಳಿದರೆ ಅದರಿಂದ ಅವನಿಗೆ ಶ್ರೈಷ್ಠ್ಯವು ಹೇಗೆ ಸಿದ್ಧವಾಗುತ್ತದೆ?

ಉ – 'ಧರ್ಮಸ್ಯ ವಚನಂ ಶ್ರೇಯಃ ಧರ್ಮಜ್ಞಾನಂ ತು ದುಷ್ಕರಂ' ಎಂದು ಹೇಳಿದಂತೆ ಧರ್ಮದ ಜ್ಞಾನವು ದುಸ್ಸಂಪಾದ್ಯವಾಗಿದೆ. ಗೀತೆಯಲ್ಲಿಯೂ 'ಕಿಂ ಕರ್ಮ ಕಿಮಕರ್ಮೇತಿ ಕವಯೋऽಪ್ಯತ್ರ ಮೋಹಿತಾಃ' ಎಂದು ಧರ್ಮಾಧರ್ಮಗಳನ್ನು ತಿಳಿಯುವ ವಿಷಯದಲ್ಲಿ ಮಹಾಜ್ಞಾನಿಗಳಿಗೂ ಮೋಹವು ಉಂಟಾಗುತ್ತದೆಂದು ಹೇಳಿರುತ್ತದೆ ಆದುದರಿಂದ ಧರ್ಮದ ಜ್ಞಾನವು ದುರ್ಲಭವಾಗಿದೆ ಅಂತಹ ದುರ್ಲಭ ಧರ್ಮಜ್ಞಾನವುಳ್ಳವನು ಪರಮಾತ್ಮನು. ಎಂದು ಅವನ ಮಹಾಗುಣ ಪ್ರತಿಪಾದಕವೇ ಆಗಿದೆ ವೃಷಾಹೀ ಎಂಬ ನಾಮ.



೨೫೭ ವೃಷಭಃ

೧ ಮಳೆ ಸುರಿಸುವವನು.[3]

ಪರ್ಜನ್ಯನಲ್ಲಿರುವ ಅನಿರುದ್ಧರೂಪಿ ಭಗವಂತನು ಭೂಮಿ ಮತ್ತು ಅಂತರಿಕ್ಷಗಳು ಒಂದಾಗುವಂತೆ, ಅವುಗಳ ಧಾರಣೆಗಾಗಿ ಮಳೆ ಸುರಿಯುವಂತೆ ಅನುಗ್ರಹಿಸುವನು ಮಳೆಯಲ್ಲಿ

---

೧೧ 1 ವೃಷೇಣ ಧರ್ಮೇಣ ಅಹ್ಯತೇ ವ್ಯಾಪ್ಯತೇ ಇತಿ ವೃಷಾಹೀ ।
-ಸ. ಸಂ.

೧೨ 2 ಧರ್ಮಸ್ಯ ಭಗವದಧೀನಸತ್ತಾಕತ್ವಾತ್ ಭಗವಾನ್ ವೃಷಃ । ಧರ್ಮಸ್ವಾಮೀ ಇತಿ ಯಾವತ್ । ನ ಹೀಯತೇ ಹೀನೋ ನ ಭವತೀತಿ ಅಹ್ಯತೇ ವ್ಯಾಪ್ನೋತೀತಿ ವಾ ಅಹೀ । ವೃಷಶ್ಚಾಸಾವಹೀ ಚ ವೃಷಾಹೀ ।

೧ 3 ವರ್ಷತೀತಿ ವೃಷಭಃ । 'ವೃಷು ಸೇಚನೇ' ಇತ್ಯತಃ ಅಭಚ್ ।

ವೃಷ್ಟಿನಾಮಕನಾಗಿರುವ ಪ್ರದ್ಯುಮ್ನರೂಪಿ ಭಗವಂತನು ಮಳೆ ಸುರಿಸುವನು—ಎಂಬುದಾಗಿ ಶಾಕಲ್ಯರು ಸಂದೇಶಿಸಿರುವರು[1] ಮೇಘಸಮೂಹದಲ್ಲಿದ್ದು ಮಳೆಯನ್ನು ನೀಡುವವನೂ, ಉಪ ಸಂಹರಿಸುವವನೂ ತಾನೇ ಎಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[2] ಹೀಗೆ ಮಳೆ ಬರಿಸುವುದರಿಂದಲೇ ಋಗ್ವೇದದಲ್ಲಿ ಅಗ್ನಿನಾಮಕ ಭಗವಂತನನ್ನು 'ವೃಷಭ' ಎಂದು ಕರೆಯಲಾಗಿದೆ.[3]

೨ (ಭಕ್ತರ ಅಭೀಷ್ಟಗಳನ್ನು) ವರ್ಷಿಸುವವನು[4]

---

1 ಅಥ ಶಾಕಲ್ಯಸ್ಯ ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃ ಸಂಧಿಃ ಪರ್ಜನ್ಯಃ ಸಂಧಾತಾ -ಐ ಉ 2-7-2-1

' .. ಶಾಕಲ್ಯೋ ವಾಸುದೇವಾದಿರೂಪಿಣಮ್ । . ಆಹ ಚತುರ್ವಿಧಮ್ ।
ಭೂಮಿದ್ಯುವೃಷ್ಟಿ ಪರ್ಜನ್ಯನಾಮ್ನೋರ್ವ್ಯಾದಿಷು ಸಂಸ್ಥಿತಮ್ । . '

-ಐ. ಉ ಭಾ.

ವರ್ಷಣಾದ್ ವೃಷ್ಟಿಃ । ಪರಂ ಜನಯತೀತಿ ಪರ್ಜನ್ಯನಾಮಾ ವಿಷ್ಣುಃ । ಸಂಧಿನೋತೀತಿ ಸಂಧಿಃ । 'ಧಿನು ಪುಷ್ಟೌ' ಇತಿ ಧಾತುಃ । ಸಮ್ಯಗ್ ಧಾರಣಾತ್ ಸಂಧಾತಾ । ವರ್ಷಣಮೇವ ದ್ಯಾವಾಪೃಥಿವ್ಯೋಃ ಸಂಧಾನಮ್ । ಪರ್ಜನ್ಯಸ್ಥೋ ಭಗವಾಂಸ್ತತ್ಕರ್ತಾ ।

-ಐ. ಉ. ಭಾ.

ವರ್ಷಣಾದ್ ವೃಷ್ಟಿನಾಮಕೋ ವೃಷ್ಟೌ ಸ್ಥಿತಃ ಪ್ರದ್ಯುಮ್ನಃ ಸಂಧಿಃ ಸಂಹಿತಾದೇವತಾ । ಪರಂ ಸಸ್ಯಾದಿಕಂ ಜನಯತೀತಿ ಪರ್ಜನ್ಯನಾಮಾ ಪರ್ಜನ್ಯಸ್ಥೋಽನಿರುದ್ಧಃ ಸಂಧಾತಾ ಉಚ್ಚಾರಯಿತೃಪುರುಷಸ್ಥಃ । -ತಾಮ್ರಪರ್ಣೀಯಮ್ ।

2 . . ಅಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।

-ಗೀ. 9-19

* ಮೇಘಚಕ್ರಗತಃ ಸನ್ ವರ್ಷಂ ಉತ್ಸೃಜಾಮಿ ನಿಗೃಹ್ಣಾಮಿ ಉಪಸಂಹರಾಮಿ

-ಗೀ. ವಿ.

3 'ತ್ವಮಗ್ನೇ ವೃಷಭಃ . .' -ಋ. ವೇ. 31-5
ಹೇ ಅಗ್ನೇ ತ್ವಂ ವೃಷಭೋ ವರ್ಷಣಸ್ಯ ಕರ್ತಾ....। -ಋ. ಭಾ. ಟೀ.

೨ 4 ವರ್ಷತಿ ಭಕ್ತಾಭೀಷ್ಟಾನೀತಿ ವೃಷಭಃ ।

ನಾಲ್ಕು ವೇದಗಳು ಆವನ ಸ್ವರೂಪಗ್ರಾಹಕಗಳಾಗಿ ಇವೆ. ಅನಂತಾಸನ, ವೈಕುಂಠ ಹಾಗೂ ಕ್ಷೀರಸಾಗರದಲ್ಲಿ ಅವನ ಮೂರು ರೂಪಗಳು ಇವೆ. ಜಡ ಮತ್ತು ಚೇತನಗಳು ಅವನನ್ನು ಆಶ್ರಯಿಸುತ್ತಿವೆ. ಸಪ್ತ ಲೋಕಗಳು ಅಥವಾ ಛಂದಸ್ಸುಗಳು ಅವನ ಹಸ್ತದಂತೆ ಕ್ರಿಯಾನಿವರ್ತಕಗಳಾಗಿವೆ. ಅವನು ಪ್ರತಿಯೊಂದು ಪ್ರಾಣಿಯ ಹೃದಯ, ಕಂಠ ಹಾಗೂ ಚಕ್ಷುಸ್ಸು ಇವುಗಳಲ್ಲಿ ಇರುವವನು ಇಂತಹ ಅಗ್ನಿನಾಮಕ ಭಗವಂತನು ಭಕ್ತರ ಅಭೀಷ್ಟಗಳನ್ನು ವರ್ಷಿಸುವ ಪ್ರಯುಕ್ತ 'ವೃಷಭ' ಎಂದೆನಿಸಿರುವನು. ಅಂತಹ 'ವೃಷಭ' ಎನಿಸುವ ಭಗವಂತನು, 'ಮಹಾದೇವ' ಎನಿಸುವ ತಾನು ಜಾಗ್ರದಾದ್ಯವಸ್ಥೆಗಳನ್ನು ಪ್ರೇರಿಸುವುದಕ್ಕಾಗಿ ಮರ್ತ್ಯರನ್ನು ಪ್ರವೇಶಿಸಿರುವುದಾಗಿ ಬ್ರಹ್ಮಾದಿಗಳಿಗೆ ಉಪದೇಶಿಸುವನೆಂದು ಋಗ್ವೇದವು ಸಂದೇಶಿಸುವಾಗ ಅಗ್ನಿನಾಮಕ ಭಗವಂತನನ್ನು 'ವೃಷಭ' ಎಂದೇ ಕರೆದಿದೆ[1]

---

1 ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ ।
ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾನ್ ಆವಿವೇಶ ॥
-ಋ. ವೇ. 4-58-3

'ದ್ವಿಶೀರ್ಷತ್ವಾಚ್ಚ ತು ರಕ್ಷೋಽಧಿಯಜ್ಞೋ 'ದ್ವೇ ಶೀರ್ಷೇ' ಇತಿ ವಾಗುತ್ತರತ್ರ'(ಋ.ಭಾ 31-13) ಇತಿ ಶ್ರೀಮದಾಚಾರ್ಯಾಃ ಇಮಂ ಮಂತ್ರಂ ಪರಾಮೃಶ್ಯ ಅಗ್ನಿನಾಮಕಭಗವತಃ ಚತುರಕ್ಷತ್ವಂ ಸಮರ್ಥಿತವಂತ ಇತಿ ಅಸ್ಯ ಮಂತ್ರಸ್ಯ ಅಗ್ನಿನಾಮಕ ಭಗವತ್ಪರತ್ವಂ ತೇಷಾಂ ಸಮ್ಮತಮಿತಿ ಜ್ಞಾಯತೇ ।

ಮಂತ್ರಮಿಮಂ ಭಗವತ್ಪರತಯಾ ಬನ್ನಂಜೇ ಗೋವಿಂದಾಚಾರ್ಯಾಃ (ಕ. ನಿ. ಟಿ.) ಏವಂ ವ್ಯಾಖ್ಯಾತವಂತಃ —

ಚತ್ವಾರಿ ಶೃಂಗಾಣಿ ಚತ್ವಾರೋ ವೇದಾಃ । ಶೃಂಗಗ್ರಾಹಿಕಯಾ ಗವಾದಿಕಮಿವ ಭಗವಂತಮಿಮೇ ಗ್ರಾಹಯಂತೀತಿ । ತ್ರಯೋ ಅಸ್ಯ ಪಾದಾಃ ಸ್ವರೂಪಭೂತಾಃ ತ್ರಿಪಾದಸ್ಯಾಮೃತಂ ದಿವೀತಿ ಕಥಿತಾಃ । ದ್ವೇ ಚಿದಚಿತೀ ಅಸ್ಯ ಶೀರ್ಷೇ ಶ್ರಯಣಾತ್ । ಸಪ್ತ ಛಂದಾಂಸಿ ಲೋಕಾ ವಾ ಕ್ರಿಯಾನಿವರ್ತಕತ್ವಾದಸ್ಯ ಹಸ್ತಾಸಃ । ತ್ರಿಧಾ ಬದ್ಧಃ ಅಧ್ಯಾತ್ಮಂ-ಹೃದಯೇ ಕಂಠೇ ಚಕ್ಷುಷಿ ಚ । ವೃಷಭೋ ಅಭೀಷ್ಟವರ್ಷಿತಾ । ರೋರವೀತಿ ಶಬ್ದಂ ಕರೋತಿ ಬ್ರಹ್ಮಾದೀನುಪದಿಶತಿ । ಕಿಮ್? ಮಹಾನ್ ದೇವಃ ಮರ್ತ್ಯಾನಾವಿವೇಶೇತಿ । ಆವೇಶಪ್ರಯೋಜನಂ ಚ ಜಾಗರಿತಾದ್ಯವಸ್ಥಾಪ್ರೇರಣಮಿತಿ ಪೂರ್ವಮೇವ ತ್ರಿಧಾ ಬದ್ಧ ಇತ್ಯುಕ್ತಮ್ ।

೩ ಎತ್ತುಗಳಲ್ಲಿ ವೃಷಭರೂಪದಿಂದ ಇರುವವನು.[1]

೪ ಎತ್ತುಗಳಲ್ಲಿದ್ದುಕೊಂಡು (ಅದರಲ್ಲಿ ಮೇಲೆ ಸಂಚರಿಸುವವರಿಗೆ) ಆಹ್ಲಾದವನ್ನುಂಟು ಮಾಡುವವನು.[2]

ಭಗವಂತನ ನಾರಾಯಣ ಮತ್ತು ಅನಿರುದ್ಧರೂಪಗಳು ಎತ್ತಿನಲ್ಲಿ ವೃಷಭರೂಪದಿಂದ ಇದ್ದು ಎತ್ತಿನ ಮೂಲಕ ಸಂಚರಿಸುವವರಿಗೆ ತೃಪ್ತಿಯನ್ನು ನೀಡುವರು—ಎಂದು ಐತರೇಯ ಸಂಹಿತೆ ಅಭಿಪ್ರಾಯಪಟ್ಟಿದೆ[3]

೫ ಶ್ರೇಷ್ಠನಾಗಿರುವವನು[4]

೬ ವರ್ಷಿಸುವವನು ಮತ್ತು ಎಲ್ಲರಿಗೂ ಆಹ್ಲಾದವನ್ನುಂಟು ಮಾಡುವವನು.[5]

ಭಗವಂತನು ಮೇಘ ಮಂಡಲದಲ್ಲಿದ್ದು ಮಳೆ ಬರಿಸಿ ಆ ಮೂಲಕ ಎಲ್ಲರಿಗೂ ಆಹ್ಲಾದವನ್ನುಂಟು ಮಾಡುವನು

೭ ಶ್ರೇಷ್ಠನಾಗಿರುವವನು ಮತ್ತು ಸ್ವತಂತ್ರನಾಗಿರುವವನು.[6]

---

೩ 1 ವೃಷಭೇಷು ವೃಷಭಾಕಾರೇಣ ವರ್ತಮಾನಃ ।

೪ 2 ವೃಷೇಷು ಸ್ಥಿತಃ ಸನ್ ಭಾತಿ ತೇಷಾಮುಪರಿ ಆರೋಢ್ನ್ ಆಹ್ಲಾದಯತೀತಿ ವೃಷಭಃ । 'ಭಾ ಆಹ್ಲಾದನೇ'

3 ನಾರಾಯಣಾನಿರುದ್ಧೌ ತು ತಥಾನ್ಯಪಶುಷು ಸ್ಥಿತೌ। ವೃಷಭಾಶ್ವಾದಿರೂಪೇಣ ತೃಪ್ತಿದಾವಖಿಲಸ್ಯ ಚ । –ಐತರೇಯಸಂಹಿತಾ (ಐ. ಉ. ಭಾ. 2–2–1–5)

೫ 4 'ವೃಷಭಃ ಶ್ರೇಷ್ಠವೃಷಯೋಃ' –ವಿಶ್ವಃ ।

೬ 5 ವರ್ಷತಿ ಭಾತೀತಿ ಚ ವೃಷಭಃ । ('ಭಾ ಆಹ್ಲಾದನೇ')

–ವಿ. ರಾ.

೭ 6 ಶ್ರೇಷ್ಠತ್ವಾತ್ ವೃಷಃ । ಭಾತಿ ಸ್ವತಂತ್ರೋ ವರ್ತತ ಇತಿ ಭಃ । 'ಭಾ ಸ್ವಾತಂತ್ರ್ಯೇ' । ವೃಷಶ್ಚಾಸೌ ಭಶ್ಚ ವೃಷಭಃ ।

ಭಗವಂತನು ಸ್ವತಂತ್ರನಾಗಿರುವುದರಿಂದಲೇ ಶ್ರೇಷ್ಠನಾಗಿ ಇರುವನು.

೮ ಧರ್ಮವನ್ನು ಉಪದೇಶಿಸುವವನು.[1]

ಭೂಮಿಯಲ್ಲಿ ಭಗವಂತನ ಹೊರತಾಗಿ ಇನ್ನಾರೂ ಧರ್ಮವನ್ನು ಉಪದೇಶಿಸುವವರಿಲ್ಲ— ಎಂದು ಉದ್ಧವನು ಅಭಿಪ್ರಾಯಪಟ್ಟಿರುವನು.[2]

೯ ಧರ್ಮದ ಜ್ಞಾನ ಉಳ್ಳವನು[3]

೧೦ ಧರ್ಮದ ಜ್ಞಾನವನ್ನು ಅನುಗ್ರಹಿಸುವವನು.[4]

* * *

ನಾಭಿರಾಜ ಹಾಗೂ ಮೇರುದೇವಿಯಲ್ಲಿ ಅವತರಿಸಿರುವ ಭಗವಂತನು ಋಷಭ ಎನಿಸುವಂತೆ ವೃಷಭ ಎಂದೂ ಅಲ್ಲಲ್ಲಿ ಉಲ್ಲೇಖಿಸಲ್ಪಟ್ಟಿರುವನು[5]

## ಜಿಜ್ಞಾಸೆ

[ಕ್ಷೀರಸಮುದ್ರದಂತೆ]

ಪ್ರ– ಪರಮಾತ್ಮನು ಭಕ್ತರ ಅಭೀಷ್ಟಗಳನ್ನು ಕೊಡತಕ್ಕವನಾದರೂ ಶೀಘ್ರವಾಗಿ ಅಭೀಷ್ಟ ಗಳನ್ನು ಕೊಡುವುದಿಲ್ಲ. ಅವನು ಬಹುಕಾಲ ವ್ಯವಧಾನದಿಂದ ಪ್ರಸನ್ನನಾಗುತ್ತಾನೆ ಪ್ರಸನ್ನ ನಾಗಿ ಫಲವನ್ನು ಕೊಡುತ್ತಾನೆ ಕುಚೇಲನಿಗೂ ಕೃಷ್ಣನು ಮನೆಯಲ್ಲಿ ಐಶ್ವರ್ಯವನ್ನು ಕೊಡಲಿಲ್ಲ. ತಿರುಗಿ ಅವನು ಊರಿಗೆ ಬಂದ ಸಮಯದಲ್ಲಿ ಕೊಟ್ಟನು. ಕುಚೇಲನಿಗೆ ಕೃಷ್ಣನ ದರ್ಶನವಾದ ಕೂಡಲೇ ಕೊಡಬಹುದಿತ್ತಲ್ಲ? ಅಷ್ಟು ತಡ ಏಕೆ ಮಾಡಬೇಕು? ಇದು ಪರಮಾತ್ಮ ನಿಗೆ ದೋಷವಲ್ಲವೆ?

---

೮ 1 ವೃಷಂ ಧರ್ಮಂ ಭಾತಿ ಕಥಯತೀತಿ ವೃಷಭಃ । 'ಭಾ ಕಥನೇ' ।

2 ವಕ್ತಾ.. . ನಾನ್ಯೋ ಧರ್ಮಸ್ಯಾಚ್ಯುತ ತೇ ಭುವಿ ।
-ಭಾಗ. 11-17-5

೯ 3 ವೃಷಸ್ಯ ಧರ್ಮಸ್ಯ ಭಾ ಜ್ಞಾನಂ ಯಸ್ಯ ಸಃ ವೃಷಭಃ । 'ಭಾ ಜ್ಞಾನೇ'

೧೦ 4 ವೃಷಸ್ಯ ಧರ್ಮಸ್ಯ ಭಾ ಜ್ಞಾನಂ ಯಸ್ಮಾತ್ ಸಃ ವೃಷಭಃ ।

5 ' .. .ವೃಷಭಾದ್ಯಾಃ ಸ್ವಯಂ ಹರಿಃ ।'-ಹರಿವಂಶ (ಭಾಗ. ತಾ. ನಿ. 4-8-8)

* ಪಾರಾಶರ್ಯಶ್ಚ ಕಪಿಲೋ ವೈಕುಂಠೋ ವೃಷಭಸ್ತಥಾ......ಏವಮಾದ್ಯಾಃ ಹರೇಃ ಸಾಕ್ಷಾತ್ ಪ್ರಾದುರ್ಭಾವಾಃ ಪ್ರಕೀರ್ತಿತಾಃ' -ಬೃ. ಉ. ಭಾ. 3-5-4

ಉ.- ಪರಮಾತ್ಮನು ಯಾವ ಫಲವನ್ನು ಕೊಡುತ್ತಾನೋ ಅದು ಎಲ್ಲರೂ ಕೊಡುವ ಫಲಕ್ಕಿಂತ ದೊಡ್ಡ ಫಲ. ದೊಡ್ಡ ಫಲವು ದುರ್ಲಭ ದುರ್ಲಭವಾದದ್ದು ಬೇಗನೆ ಸಿಗುವದಿಲ್ಲ. ದೇವತೆಗಳ ಅನ್ನವಾದ ಅಮೃತವು ದುರ್ಲಭ. ಅದು ಸಮುದ್ರಮಥನ ಮಾಡುವಾಗ ಮೊದಲು ಸಿಗಲಿಲ್ಲ ಕಾಲಕೂಟ ವಿಷವು ಮೊದಲು ಸಿಕ್ಕಿತು. ಕೊನೆಗೆ ಅಮೃತವು ಸಿಕ್ಕಿತು. ಕ್ಷೀರ ಸಮುದ್ರವು ಬಹಳ ಪ್ರಯಾಸಪಟ್ಟ ಮೇಲಷ್ಟೇ ಅಮೃತವನ್ನು ಕೊಟ್ಟರೂ ಅದು ಕ್ಷೀರ ಸಮುದ್ರದ ದೋಷವು ಎಂದು ಯಾರೂ ಹೇಳುವದಿಲ್ಲ ಅದರಂತೆ ಕಾಲವಿಲಂಬದಿಂದ ಶ್ರೇಷ್ಠ ಫಲವನ್ನು ಪರಮಾತ್ಮನು ಕೊಡುವದು ಅವನ ದೋಷವಲ್ಲ. ಕ್ಷೀರಸಮುದ್ರವು ಎಲ್ಲ ಸಮುದ್ರಕ್ಕಿಂತ ಶ್ರೇಷ್ಠವೇ ಆಗಿದೆ ಆದುದರಿಂದಲೇ ಕ್ಷೀರಸಮುದ್ರದಲ್ಲಿಯೇ ಪರಮಾತ್ಮನು ಸದಾ ಇರುತ್ತಾನೆ



**೨೫೮ ವಿಷ್ಣುಃ**

೧ ಎಲ್ಲವನ್ನೂ ವ್ಯಾಪಿಸಿರುವವನು.[1]

೨ ಆಕಾಶವೇ ಮೊದಲಾದ ವ್ಯಾಪಕ ಪದಾರ್ಥಗಳನ್ನು ವ್ಯಾಪಿಸಿಕೊಂಡಿರುವಂತೆ ಮಾಡಿರುವವನು.[2]

ಭಗವಂತನು ತನ್ನ ಪ್ರಭಾವದಿಂದ ಸಕಲ ಲೋಕಗಳನ್ನೂ ಸಕಲದೇವತೆಗಳನ್ನೂ, ಸರ್ವ ಜೀವರನ್ನೂ ಹಾಗೂ ಸರ್ವಭೂತಗಳನ್ನೂ ವ್ಯಾಪಿಸಿರುವನು ಹಾಗೂ ಆಕಾಶವೇ ಮೊದಲಾದ ವ್ಯಾಪಕ ಪದಾರ್ಥಗಳು ವ್ಯಾಪಿಸಿಕೊಂಡಿರುವಂತೆ ಮಾಡಿರುವವನು. ಆದ್ದರಿಂದಲೇ ಮಹಾವಿಷ್ಣು ಎಂದೆನಿಸಿರುವವನು, ಎಂಬುದಾಗಿ ನರಸಿಂಹ ತಾಪನೀಯ ಶ್ರುತಿಯು ಸಂದೇಶಿಸಿದೆ[3]

೩ ಎಲ್ಲವನ್ನೂ ಪ್ರವೇಶಿಸಿರುವವನು.[4]

---

೧ 1 ಸರ್ವಂ ವೇವೇಷ್ಟಿ ವ್ಯಾಪ್ನೋತೀತಿ ವಿಷ್ಣುಃ । 'ವಿಷಲ್ ವ್ಯಾಪ್ತೌ'

೨ 2 ಆಕಾಶಾದಿ ವೇಷಯತಿ ವ್ಯಾಪಯತೀತಿ ವಿಷ್ಣುಃ । ಅಂತರ್ಣೀತಣಿಚ್ ।

3 'ಅಥ ಕಸ್ಮಾದುಚ್ಯತೇ ಮಹಾವಿಷ್ಣುರಿತಿ–ಯಸ್ಮಾತ್ಸ ಮಹಿಮ್ನಾ ಸರ್ವಾನ್ ಲೋಕಾನ್ ಸರ್ವಾನ್ ದೇವಾನ್ ಸರ್ವಾನಾತ್ಮನಃ ಸರ್ವಾಣಿ ಭೂತಾನಿ ವ್ಯಾಪ್ನೋತಿ ವ್ಯಾಪಯತಿ।'
–ನರಸಿಂಹ ತಾಪನೀಯಶ್ರುತಿಃ

೩ 4 ಸರ್ವಂ ವಿಶತೀತಿ ವಿಷ್ಣುಃ । 'ವಿಶ ಪ್ರವೇಶನೇ'

೪ ಪೃಥಿವ್ಯಾದಿ ಸಕಲ ಭೂತಗಳಿಗೂ, ಅವುಗಳ ಅಭಿಮಾನಿಗಳಿಗೂ ಇತರ ಪ್ರಜೆಗಳಿಗೂ ಚಾಲನೆಯನ್ನು ನೀಡುವವನು.[1]

೫ ಅತ್ಯಧಿಕವಾದ ಕಾಂತಿಯನ್ನು ಹೊಂದಿರುವವನು[2]

೬ ನಾಶ ಹೊಂದುವ ಪದಾರ್ಥಗಳಿಗೆ ಸೃಷ್ಟ್ಯಾದಿಗಳನ್ನು ನೀಡಬೇಕೆಂದು ಇಚ್ಛಿಸುವವನು[3]

೭ (ತ್ರಿವಿಕ್ರಮಾವತಾರದಲ್ಲಿ ಸಕಲಲೋಕಗಳಲ್ಲೂ) ಹೆಜ್ಜೆ ಇಟ್ಟಿರುವವನು.[4]

ಶ್ರೀಕೃಷ್ಣನು ಈ ಎಲ್ಲ ಅರ್ಥಗಳನ್ನಿಟ್ಟುಕೊಂಡೇ 'ವಿಷ್ಣುರಿತ್ಯಭಿಸಂಜ್ಞಿತಃ'— ತಾನು ವಿಷ್ಣು ಎಂಬ ಹೆಸರಿಂದ ಅನ್ವರ್ಥಕವಾಗಿ ಕರೆಸಿಕೊಳ್ಳಲ್ಪಡುವವನೆಂದು ಅರ್ಜುನನಿಗೆ ಉಪದೇಶಿಸಿರುವನು[5]

ಗೀತಾಚಾರ್ಯನೂ ಈ ಅರ್ಥಗಳನ್ನಿಟ್ಟುಕೊಂಡೇ 'ಆದಿತ್ಯಾನಾಮಹಂ ವಿಷ್ಣುಃ...' ಎಂದು

---

೪ 1 ಪೃಥಿವ್ಯಾದಿ ಭೂತಾನಿ ತದಭಿಮಾನಿನಃ ಇತರಪ್ರಜಾಶ್ಚ ವಿಯಂತಿ ಗಚ್ಛಂತಿ ಅನೇನೇತಿ ವಿಷ್ಣುಃ । 'ವೀ ಗತೌ'

೫ 2 ವೇತಿ ಶೋಭತೇ ಇತಿ ವಿಷ್ಣುಃ । 'ವೀ ಕಾಂತೌ'

೬ 3 ಅಧಿಭೂತಾನಾಂ 'ಅಧಿಭೂತಂ ಕ್ಷರೋ ಭಾವಃ' ಇತ್ಯುಕ್ತೇಃ ನಾಶಶೀಲಪದಾರ್ಥಾನಾಂ ಜನ್ಮಾದಿ ವಷ್ಟಿ ಇಚ್ಛತೀತಿ ವಿಷ್ಣುಃ । 'ವಶ ಕಾಂತೌ'—ಕಾಂತಿರಿಚ್ಛಾ ।

೭ 4 ವೇತಿ ಕ್ರಮತೇ ಇತಿ ವಿಷ್ಣುಃ । 'ವೀ ಗತೌ'

5 ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ ।
ವ್ಯಾಪ್ತಾ ಮೇ ರೋದಸೀ ಪಾರ್ಥ ಕಾಂತಿಶ್ಚಾಭ್ಯಧಿಕಾ ಮಮ ॥
ಅಧಿಭೂತನಿವಿಷ್ಟಶ್ಚ ತದಿಚ್ಛುಶ್ಚಾಸ್ಮಿ ಭಾರತ ।
ಕ್ರಮಣಾಚ್ಚಾಪ್ಯಹಂ ಪಾರ್ಥ ವಿಷ್ಣುರಿತ್ಯಭಿಸಂಜ್ಞಿತಃ ॥

ಮಹಾಭಾರತ. ಶಾಂತಿ. ಮೋಕ್ಷಧರ್ಮ (341-42,43)

ಗಚ್ಛತ್ಯನೇನೇತಿ ಗತಿಃ —ಪ್ರಮೇಯದೀಪಿಕಾ (ಗೀ. ಭಾ. ಟಿ. 10-22)

ತನ್ನನ್ನು ವಿಷ್ಣು ಎಂದು ಹೆಸರಿಸಿಕೊಂಡಿರುವನೆಂದು ಶ್ರೀಮದಾಚಾರ್ಯರು ತೋರಿಸಿಕೊಟ್ಟಿರುವರು.[1]

೮ ಜಗತ್ತನ್ನು ಉತ್ಪಾದಿಸುವವನು.[2]

೯ ದುಷ್ಟರನ್ನು ದುರ್ಗತಿಗೆ ಎಸೆಯುವವನು.[3]

೧೦ ಪ್ರಲಯಕಾಲದಲ್ಲಿ ಎಲ್ಲವನ್ನೂ ಭಕ್ಷಿಸುವವನು[4]

೧೧ (ಕಾಲೀಯಸರ್ಪನ) ವಿಷವನ್ನು ನಾಶಪಡಿಸಿದವನು[5]

೧೨ ಭಕ್ತರಿಗೆ ವಿಶೇಷವಾಗಿ ಅಭೀಷ್ಟವನ್ನು ನೀಡುವವನು, ಅಥವಾ ವಿಶಿಷ್ಟ ಫಲವನ್ನು ಸುರಿಸುವವನು[6]

೧೩ ಸ್ವಭಾವತಃ ಸ್ಥಿರನಾಗಿದ್ದು ಚಾಂಚಲ್ಯವಿಲ್ಲದವನು[7]

---

1 ವಿಷ್ಣುಃ ಸರ್ವವ್ಯಾಪಿತ್ವಪ್ರವೇಶಿತ್ವಾದೇಃ -ಗೀ. ಭಾ. (10-22)

೮ 2 ವೇತಿ ಜಗತ್ ಪ್ರಜನಯತೀತಿ ವಿಷ್ಣುಃ । 'ವೀ ಪ್ರಜನೇ'

೯ 3 ವೇತಿ ದುಷ್ಟಾನ್ ಅಸ್ಯತೀತಿ ವಿಷ್ಣುಃ । 'ವೀ ಅಸನೇ'

೧೦ 4 ವೇತಿ ಪ್ರಲಯೇ ಸರ್ವಂ ಖಾದತೀತಿ ವಿಷ್ಣುಃ । 'ವೀ ಖಾದನೇ'

೧೧ 5 ಕಾಲೀಯನಾಗಸ್ಯ ವಿಷಂ ನುದತಿ ನಾಶಯತೀತಿ ವಿಷ್ಣುಃ । 'ನುದ ವ್ಯಯೇ'

-ವಾ. ರಾ.

೧೨ 6 ವಿಶೇಷೇಣ ಸನೋತಿ ದದಾತಿ ಭಕ್ತಾಯಾಭೀಷ್ಟಮಿತಿ 'ಷಣು ದಾನೇ'

-ರಾ. ಸೂ.

* ವಿಶಿಷ್ಟಫಲಂ ಸ್ನಾತಿ ಪ್ರಸ್ರವತಿ ಯಸ್ಮಾದಿತಿ । 'ಷ್ಣಾ ಪ್ರಸ್ರವಣೇ'

-ರಾ. ಸೂ.

೧೩ 7 ವಿಗತಃ ಸ್ನುಃ ಪ್ರಸ್ರವಣಂ ಯಸ್ಮಾದಿತಿ । -ಸ. ಸಂ.

೧೪ ಸಕಲ ಗುಣಗಳ ಪ್ರವೇಶಕ್ಕೂ ಆಧಾರನಾಗಿರುವವನು, ಸಕಲ ಗುಣಪರಿಪೂರ್ಣ.[1]

ಶ್ರೀಕೃಷ್ಣನು ಗುಣಸಮೃದ್ಧನಾಗಿರುವುದರಿಂದಲೇ ವಿಷ್ಣು ಎನಿಸಿರುವನೆಂದು ಸಂಜಯನು ತಿಳಿಸಿರುವನು[3]

[ಅರ್ಥವಿಶೇಷಗಳನ್ನು ೨ನೆಯ ಹಾಗೂ ೬೫೭ನೆಯ 'ವಿಷ್ಣು' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು ]

## ಜಿಜ್ಞಾಸೆ

[ಸಂಕೋಚ ಮಾಡಬೇಕು]

ಪ್ರ – 'ಸರ್ವಂ ವಿಶತಿ ಇತಿ ವಿಷ್ಣುಃ' ಎಂದು ವಿಷ್ಣು ಶಬ್ದಾರ್ಥವನ್ನು ಹೇಳಿ ವಿಷ್ಣು ಸರ್ವಾಂತರ್ಯಾಮಿ ಎಂದು ಹೇಳಿದರೆ ಸರ್ವವಸ್ತುಗಳಲ್ಲಿ ಅವ್ಯಾಕೃತಾಕಾಶವು ಸೇರಿ ಇದೆ ಆದುದರಿಂದ ಆಕಾಶದ ಒಳಗೆ ವಿಷ್ಣು ಪ್ರವೇಶಿಸಿದ್ದಾನೆಂದು ಹೇಳಬೇಕು ಆಗ ಅವ್ಯಾಕೃತಾಕಾಶವು ಒಂದೇ ವಸ್ತು ಆಗುವದಿಲ್ಲ ಹೊರಗಿನ ಅವ್ಯಾಕೃತಾಕಾಶ ಅದರ ಒಳಗಿನ ಆಕಾಶ ಈ ರೀತಿ ಎರಡು ಆಕಾಶವು ಇರಬೇಕಾಯಿತಲ್ಲ?

ಉ – 'ಸರ್ವಂ ವಿಶತಿ' ಎಂದು ವಿಷ್ಣುಶಬ್ದಾರ್ಥವನ್ನು ಹೇಳುವಾಗ ಸರ್ವಶಬ್ದಕ್ಕೆ ಆಕಾಶಾದಿಗಳನ್ನು ಬಿಟ್ಟು ಎಂದು ಸಂಕೋಚ ಮಾಡಿ ಅರ್ಥವನ್ನು ಹೇಳಬೇಕು ವಿಷ್ಣುಸರ್ವೋತ್ತಮ ಎಂದು ಹೇಳುವಾಗ ಸರ್ವಶಬ್ದಾರ್ಥದಲ್ಲಿ ವಿಷ್ಣುವನ್ನು ಸೇರಿಸಬಾರದು. ವಿಷ್ಣುವಿಗಿಂತ ಇತರ ಸರ್ವಕ್ಕಿಂತ ಉತ್ತಮ ಎಂದು ಸಂಕೋಚಮಾಡಿ ಅರ್ಥವನ್ನು ಹೇಳುವಂತೆ, ಸರ್ವಂ ವಿಶತಿ ಎಂಬಲ್ಲಿಯೂ ಸಂಕೋಚ ಮಾಡಬೇಕು.



## ೨೫೯ ವೃಷಪರ್ವಾ

೧ ಧರ್ಮವನ್ನು ಪೂರ್ಣಗೊಳಿಸುವವನು.[3]

ಭಕ್ತರು ಮಾಡಿದ ಧರ್ಮಕಾರ್ಯದಲ್ಲಿ ಏನಾದರೂ ನ್ಯೂನತೆ ಸಂಭವಿಸಿದರೆ ಅದನ್ನು ಪರಿಹರಿಸಿ, ಆ ಧರ್ಮಕಾರ್ಯವನ್ನು ಪೂರ್ಣಗೊಳಿಸುವವನು ಭಗವಂತನು ಆದ್ದರಿಂದಲೇ ಪ್ರತಿ

---

೧೪ 1 ವಿಶಂತಿ ಕಲ್ಯಾಣಗುಣಾಃ ಅಸ್ಮಿನ್ನಿತಿ ವಿಷ್ಣುಃ । 'ವಿಶ ಪ್ರವೇಶನೇ'

2 '. . .ಬೃಹತ್ವಾತ್ ವಿಷ್ಣುರುಚ್ಯತೇ' –ಮ. ಭಾರ. ಉದ್ಯೋಗ 70–3

೧ 3 ವೃಷಂ ಧರ್ಮಂ ಪರ್ವತಿ ಪೂರಯತೀತಿ ವೃಷಪರ್ವಾ । 'ಪರ್ವ ಪೂರಣೇ' ।

ಯೊಂದು ಧರ್ಮಕಾರ್ಯದ ಕೊನೆಗೆ—'ಯಾರ ಸ್ಮರಣೆಯಿಂದ ಹಾಗೂ ನಾಮೋಚ್ಚಾರಣೆಯಿಂದ ತಪಸ್ಸು, ಮಂತ್ರ ಹಾಗೂ ಇನ್ನಿತರ ಧಾರ್ಮಿಕ ಕರ್ಮಗಳಲ್ಲಿ ಸಂಭವಿಸುವ ನ್ಯೂನತೆಯು ಕೂಡಲೇ ಪರಿಹೃತವಾಗಿ ಸಂಪೂರ್ಣತೆಯು ಉಂಟಾಗುವುದೋ, ಅಂತಹ ಅಚ್ಯುತನನ್ನು ನಮಿಸುವೆನು'—ಎಂದು ಪ್ರಾರ್ಥಿಸಲಾಗುವುದು.[1]

೨ ಶ್ರೇಷ್ಠಗಳಾದ ಉತ್ಸವಗಳಿಗೆ ಒಡೆಯನಾಗಿರುವವನು.[2]

೩ ಉತ್ಸವಗಳು ಶ್ರೇಷ್ಠಗಳಾಗುವಂತೆ ಅನುಗ್ರಹಿಸುವವನು.[3]

'ಉತ್ಸವ'ವು ಮಂಗಲ ಹಾಗೂ ಸಂತೋಷದ ವಾತಾವರಣದಲ್ಲಿ ಸಂಭವಿಸುವುದು. 'ಮಂಗಲಾಯತನ' ಎನಿಸಿರುವ ಶ್ರೀಹರಿಯೇ ಈ ವಾತಾವರಣವನ್ನು ನಿರ್ಮಿಸಿ ಉತ್ಸವವನ್ನು ಯಶಸ್ವಿಗೊಳಿಸುವವನು. ಆದ್ದರಿಂದಲೇ 'ಮಂಗಲಾಯತನ'—ಮಂಗಲಾಶ್ರಯನಾದ ಶ್ರೀಹರಿಯು ಯಾರ ಹೃದಯದಲ್ಲಿ ನಿತ್ಯವೂ ವಿಶೇಷವಾಗಿ ಸನ್ನಿಹಿತನಾಗಿರುವನೋ ಅವರ ಪಾಲಿಗೆ 'ನಿತ್ಯೋತ್ಸವವು'—ಎಂದು ಶ್ರೀಮದಾಚಾರ್ಯರು ಸಂದೇಶಿಸಿರುವರು.[4]

೪ (ಭಕ್ತರಿಗೆ ಜ್ಞಾನಾನಂದಾದಿಗಳನ್ನು) ಸುರಿಸುವವನು ಮತ್ತು ಅವರನ್ನು (ಅವರವರ ಯೋಗ್ಯತಾನುಗುಣವಾಗಿ) ಪೂರ್ಣಗೊಳಿಸುವವನು.[5]

ಭಗವಂತನು ತನ್ನ ಭಕ್ತರಿಗೆ ಮುಕ್ತ್ಯವಸ್ಥೆಯಲ್ಲಿ ಜ್ಞಾನಾನಂದಾದಿಗಳನ್ನು ನೀಡಿ, ಅವರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಪೂರ್ಣಗೊಳಿಸುವವನು.

---

1 ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಮಂತ್ರಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥

೨ 2 ವೃಷಾಣಿ ಶ್ರೇಷ್ಠಾನಿ ಪರ್ವಾಣಿ ಉತ್ಸವಾಃ ಯಸ್ಯ ಸಃ ವೃಷಪರ್ವಾ ।

೩ 3 ವೃಷಾಣಿ ಶ್ರೇಷ್ಠಾನಿ ಪರ್ವಾಣಿ ಉತ್ಸವಾಃ ಯಸ್ಮಾತ್ ಸಃ ವೃಷಪರ್ವಾ। 'ಶ್ರೇಷ್ಠೇ ಸುಕೃತೇ ವೃಷಭೇ ವೃಷಃ'—ಅ. ಕೋ. । 'ಪರ್ವ ಸ್ಯಾದುತ್ಸವೇ .' —ಧರಣಿಃ ।

4 'ನಿತ್ಯೋತ್ಸವೋ . ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ'
—ಕೃ. ಮಂ 205

೪ 5 ವರ್ಷತಿ ಭಕ್ತೇಷು ಜ್ಞಾನಾನಂದಾದೀನ್ ಸಿಂಚತೀತಿ ವೃಷಃ । ಪರ್ವತಿ ಭಕ್ತಾನ್ ಜ್ಞಾನಾದಿದಾನೇನ ಪೂರಯತೀತಿ ಪರ್ವಾ । ವೃಷಶ್ಚಾಸೌ ಪರ್ವಾ ಚ ವೃಷಪರ್ವಾ ।

೫ ಶ್ರವಣಮನನಾದಿರೂಪಗಳಾದ ಧರ್ಮಗಳೇ ತನ್ನನ್ನು ಹೊಂದಲು ಉಪಾಯ ಗಳಾಗಿ ಉಳ್ಳವನು[1]

೬ ಏಕಾದಶೀವ್ರತಾಚರಣೆಯೇ ಮುಂತಾದ ಧರ್ಮಗಳೇ ತನ್ನನ್ನು ಪಡೆಯಲು ಸಾಧನ ಗಳಾಗಿ ಉಳ್ಳವನು[2]

ಮುಕ್ತಿಯಲ್ಲಿ ವಿಶೇಷವಾಗಿ ಭಗವಂತನ ಪ್ರಾಪ್ತಿಯಾಗುವುದು. ಅಂತಹ ಮುಕ್ತಿ ಭಗವಂತನ ಸಾಕ್ಷಾತ್ಕಾರವಾದಾಗಲೇ ದೊರಕುವದು.[3] ಅವನ ಶ್ರವಣ-ಮನನ-ನಿದಿಧ್ಯಾಸನಗಳನ್ನು ನಡೆಸಬೇಕು.[4] ಇಷ್ಟೇ ಅಲ್ಲದೆ, ಭಕ್ತಿ, ನಿಷಿದ್ಧತ್ಯಾಗ, ನಿತ್ಯ ಹರಿಸ್ಮೃತಿ, ರಾಗತ್ಯಾಗ, ಶಾಸ್ತ್ರವಿಹಿತಗಳ ಅನುಷ್ಠಾನ—ಮುಂತಾದವುಗಳು ಕಲೆತಾಗ ಅಷ್ಟೇ ಭಗವಂತನ ಅಪರೋಕ್ಷಜ್ಞಾನ ಸಿದ್ಧಿಸುವುದು ಇವುಗಳಿಂದ ಹೊರತಾಗಿ ಖಂಡಿತಾ ದೊರಕಲಾರದು—ಎಂದು 'ಸತ್ತತ್ತ್ವ'[5] ಪ್ರತಿಪಾದಿಸುವಂತೆ ಧರ್ಮಾನುಷ್ಠಾನವೂ ಮುಕ್ತಿಪ್ರಾಪ್ತಿಗೆ ಅತ್ಯಾವಶ್ಯಕ

---

೫ 1 ವೃಷರೂಪಾಣಿ ಸೋಪಾನಪರ್ವಾಣಿ ಅಹುಃ ಪರಂಧಾಮಾರುರುಕ್ಷೋರಿತ್ಯತಃ ವೃಷ-ಪರ್ವಾ । —ಶಾಂ. ಭಾ.

'ವೃಷಾಃ ಶ್ರವಣಮನನನಿದಿಧ್ಯಾಸನಾತ್ಮಕಾಃ ಧರ್ಮಾಃ ಯದ್ವಿಷ್ಣ್ವಾಖ್ಯಂ ಪರಂ ಧಾಮ ಆರುರುಕ್ಷೋಃ ಪರ್ವಾಣೀವ ಪ್ರಾಪ್ತ್ಯುಪಾಯಾಃ ಸ ವೃಷಪರ್ವೇತಿ ವ್ಯಾಚಷ್ಟೇ ' —ವಿವೃತಿಃ

೬ 2 'ವೃಷರೂಪಾಣಿ ಜ್ಞೇಯಾನಿ ಪರ್ವಾಣ್ಯಾಹುರ್ಮನೀಷಿಣಃ । ನರಂ ಜಿಗಮಿಷೋಃ ಸ್ಥಾನೇ ವೃಷಪರ್ವಾ ತತಃ ಸ್ಮೃತಃ' —ವಿ ಧಾ.

3 'ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ' ಅಥ ಉ. 2-1-10

4 ' ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ....' —ಬೃ. ಉ. 4-4-5

5 ಭಕ್ತ್ಯಾ ಜ್ಞಾನಾನ್ನಿಷಿದ್ಧಾನಾಂ ತ್ಯಾಗಾನ್ನಿತ್ಯಹರಿಸ್ಮೃತೇಃ । ಅರಾಗಾತ್ ವಿಹಿತಾತ್ಯಾಗಾದಿತ್ಯೇತೈರೇವ ಸಂಯುತೈಃ । ಅಪರೋಕ್ಷದರ್ಶನಂ ವಿಷ್ಣೋರ್ಜಾಯತೇ ನಾನ್ಯಥಾ ಕ್ವಚಿತ್' —ಸತ್ತತ್ತ್ವ (ಗೀ ತಾ 8-8)

೭ ಧರ್ಮ ಸಾಧನಗಳಾದ ಅಮಾವಾಸ್ಯಾದಿ ಪರ್ವದಿನಗಳಿಗೆ ಒಡೆಯನಾಗಿರುವವನು.[1]

೮ ಅಭೀಷ್ಟವನ್ನು ಸುರಿಸುವ ಚತುರ್ದಶಿಯೇ ಮೊದಲಾದ ಐದು ಪರ್ವದಿನಗಳಿಗೆ ಒಡೆಯನಾಗಿರುವವನು.[2]

ಚತುರ್ದಶಿ, ಅಷ್ಟಮಿ, ಅಮಾವಾಸ್ಯೆ, ಪೂರ್ಣಿಮಾ, ಹಾಗೂ ಸಂಕ್ರಮಣ—ಈ ಐದು ದಿನಗಳು ಪರ್ವಗಳೆನಿಸಿದ್ದು[3] ಇವುಗಳಿಗೆ ಭಗವಂತನೇ ನಿಯಾಮಕನಾಗಿರುವವನು

೯ ಧರ್ಮವನ್ನು ಬಿಗಿದಿಟ್ಟು ಗಂಟಿನಂತೆ ಇರುವ ತೀರ್ಥ ಕ್ಷೇತ್ರಾದಿಗಳಿಗೆ ನಿಯಾಮಕನಾಗಿರುವವನು[4]

೧೦ (ಶಾಸ್ತ್ರದ ಮೂಲಕ) ಧರ್ಮವನ್ನು ಪ್ರಸ್ತುತಪಡಿಸುವವನು.[5]

## ಜಿಜ್ಞಾಸೆ

[ಸ್ಮರಣ ಸಹಿತವಾಗಿರಲೇ ಬೇಕು]

ಪ್ರ - 'ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ' ಎಂಬ ವಚನದಲ್ಲಿ ಭಗವಂತನ ಸ್ಮರಣ ಮತ್ತು ಅವನ ನಾಮಕೀರ್ತನದಿಂದ ಎಂದು ಹೇಳಿದ್ದರಿಂದ ನಾಮಕೀರ್ತನವನ್ನು ಮಾಡುವಾಗ ಭಗವಂತನ

---

೭ 1 ವೃಷಃ ಪುಣ್ಯಂ ತತ್ಸಾಧನಾನಿ ಪರ್ವಾಣ್ಯಮಾವಾಸ್ಯಾದೀನಿ ಯಸ್ಯಾಸೌ ವೃಷಪರ್ವಾ ।
-ಸ. ಸಂ

೮ 2 ವೃಷಾಣಿ ಅಭೀಷ್ಟವರ್ಷಕಾಣಿ ಪರ್ವಾಣಿ ಪಂಚ ಪರ್ವಾಣಿ ಯಸ್ಯ ಸಃ ವೃಷಪರ್ವಾ ।
-ವಾ. ಶಾ.

3 ಚತುರ್ದಶ್ಯಷ್ಟಮೀ ಚೈವ ಅಮಾವಾಸ್ಯಾಥ ಪೂರ್ಣಿಮಾ ।
ಪರ್ವಾಣ್ಯೇತಾನಿ ರಾಜೇಂದ್ರ ರವಿಸಂಕ್ರಾಂತಿರೇವ ಚ ॥
-ವಾ. ರಾ. ಉದಾಹೃತವ್ ।

೯ 4 ವೃಷಸ್ಯ ಧರ್ಮಸ್ಯ ಪರ್ವಾಣಿ ಗ್ರಂಥಿಸ್ಥಾನೀಯಾನಿ ಪುಣ್ಯಕ್ಷೇತ್ರಾದೀನಿ ಯಸ್ಮಾತ್ ಸಃ ವೃಷಪರ್ವಾ ।

೧೦ 5 ವೃಷಸ್ಯ ಧರ್ಮಸ್ಯ ಪರ್ವ ಶಾಸ್ತ್ರದ್ವಾರಾ ಪ್ರಸ್ತಾವಃ ಯಸ್ಮಾತ್ಸಃ ವೃಷಪರ್ವಾ । 'ಪರ್ವ ಸ್ಯಾದುತ್ಸವೇ ಗ್ರಂಥೌ ಪ್ರಸ್ತಾವೇ ' -ಧರಣಿಃ ।

ಸ್ಮರಣವು ಇಲ್ಲ ಎಂದು ಅರ್ಥವಾಗುತ್ತದೆ ಭಗವಂತನ ಸ್ಮರಣವಿಲ್ಲದ ನಾಮಕೀರ್ತನವು ಸಫಲವೋ? ಹರಿಸ್ಮರಣವಿಲ್ಲದ ನಾಮಕೀರ್ತನದಿಂದ ಫಲವು ಸಿಗುವುದಾದರೆ ಹರಿವಾಣ ಎಂದು ಹೇಳುವಾಗಲೂ ಪಾಪಪರಿಹಾರವಾಗಲಿ!

ಉ - ನಾಮಕೀರ್ತನ ಮಾಡುವದರಿಂದ ಫಲವು ಸಿಗಬೇಕಾದರೆ ಭಗವಂತನ ಸ್ಮರಣಸಹಿತವಾದ ನಾಮಕೀರ್ತನವೇ ಇರಬೇಕು. ನಾಮಕೀರ್ತನ ಮಾಡುವಾಗ ಭಗವಂತನ ಸ್ಮರಣವು ಇರಲೇ ಬೇಕಾದರೆ, 'ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ' ಎಂಬಲ್ಲಿ ನಾಮೋಕ್ತಿಯಲ್ಲಿಯೇ ಸ್ಮರಣವು ಹೇಳಲ್ಪಟ್ಟಿದ್ದರಿಂದ ಸ್ಮೃತಿಯನ್ನು ಬೇರೆ ಏಕೆ ಹೇಳಿದ್ದು ಎಂದು ಶಂಕೆಯು ಸರಿಯಲ್ಲ. ಕೇವಲ ಭಗವತ್ ಸ್ಮರಣದಿಂದ ನಾಮಕೀರ್ತನ ರಹಿತ ಭಗವತ್‌ಸ್ಮರಣ ಎಂದು ಅರ್ಥವು ವಿವಕ್ಷಿತವಾದುದರಿಂದ ಪುನರುಕ್ತಿದೋಷವು ಇಲ್ಲ.



## ೨೬೦ ವೃಷೋದರಃ

೧ (ತನ್ನ ಭಕ್ತನ) ಕಾಮನೆಗಳನ್ನು ಸುರಿಸುವ ಉದರ ಉಳ್ಳವನು[1]

ಇಂದ್ರನಾಮಕ ಭಗವಂತನ ಉದರವು, ಯಾವ ಭಕ್ತನು ತನಗೆ ಸಮರ್ಪಿಸಿದ ಸೋಮರಸವನ್ನು ಅತಿಶಯವಾಗಿ ಸ್ವೀಕರಿಸುವುದೋ ಅಂತಹ ಭಕ್ತನಿಗೆ ಸಕಲಕಾಮನೆಗಳನ್ನೂ ಸಮುದ್ರದಂತೆ ಸುರಿಸುವುದೆಂಬುದಾಗಿ ಋಗ್ವೇದ ಸಂದೇಶಿಸಿದೆ[2]

೨ ಶ್ರೇಷ್ಠವಾದ ಹೊಟ್ಟೆ ಉಳ್ಳವನು[3]

---

೧ 1 ವರ್ಷತಿ ಭಕ್ತಾಯ ಸರ್ವಾನ್ ಕಾಮಾನ್ ಸಿಂಚತೀತಿ ವೃಷಮ್ । ವೃಷಂ ಉದರಂ ಕುಕ್ಷಿಃ ವೃಷೋದರಃ ।

2 ಯಃ ಕುಕ್ಷಿಃ ಸೋಮಪಾತಮಸ್ಸಮುದ್ರ ಇವ ಪಿನ್ವತೇ ।
-ಋ. ವೆ . 8-7

'ಯಃ ಕುಕ್ಷಿರಸ್ಯ ದೇವಸ್ಯ ಸಮುದ್ರ ಇವ ಸೋಮಶಿಲಾನ್ । ಕಾಮಾನ್ ಕ್ಷರತಿ ಭಕ್ತಾಯ ...' -ಋ. ಭಾ.

೨ 3 ವೃಷಂ ಶ್ರೇಷ್ಠಂ ಉದರಂ ಯಸ್ಯ ಸಃ ವೃಷೋದರಃ । '....ಶ್ರೇಷ್ಠಶ್ಚ ಧರ್ಮಶ್ಚ ವೃಷ ಉಚ್ಯತೇ' -ಮ. ಭಾರ. ಶಾಂತಿ 35-2-24

ಭಗವಂತನ ಉದರವು ತೆಳ್ಳಗಾಗಿಯೇ ಇರುವುದಾದರೂ ಅಖಿಲವನ್ನೂ ಧರಿಸಿಕೊಂಡಿರುವಂತಹದ್ದು. ರೇಖಾತ್ರಯದಿಂದ ಚಿಹ್ನಿತವಾಗಿರುವಂತಹದ್ದು ನಿತ್ಯವೂ ಲಕ್ಷ್ಮೀದೇವಿಯಿಂದ ಆಲಿಂಗಿತವಾಗಿರುವಂತಹದ್ದು. ಆದ್ದರಿಂದಲೇ ಎಲ್ಲರಿಂದಲೂ ಧ್ಯಾನಿಸಲು ಅರ್ಹವಾದದ್ದು[1]

೩ ಶ್ರೇಷ್ಠರಾದ ಜೀವಾತ್ಮರು ವಿಶೇಷವಾಗಿ ರಮಿಸುವಂತೆ ಮಾಡುವವನು[2]

ಭಗವಂತನು ಶ್ರೇಷ್ಠ ಜೀವಾತ್ಮರಿಗೆ ಮುಕ್ತಿಯನ್ನು ಅನುಗ್ರಹಿಸಿ ಅವರು ವಿಶೇಷವಾಗಿ ಆನಂದಿಸುವಂತೆ ಮಾಡುವನು

೪ ಜೀವಾತ್ಮರಿಗೆ ಅಭೀಷ್ಟಗಳನ್ನು ಸುರಿಸುವವನು ಮತ್ತು ಅವರಲ್ಲಿ ಇದ್ದುಕೊಂಡು ರಮಿಸುವವನು[3]

ಜೀವಾತ್ಮರು ತಮ್ಮ ಇಂದ್ರಿಯಗಳಿಂದ ವಿಷಯಭೋಗವನ್ನು ನಡೆಸುವಾಗ, ಭಗವಂತನು ಅವರ ಇಂದ್ರಿಯಗಳ ಮೂಲಕ ಭೋಗದ ಸಾರಭಾಗವನ್ನು ಸವಿಯುತ್ತ ಕ್ರೀಡಿಸುತ್ತಿರುವನು

೫ ಜೀವೋತ್ತಮನಾದ ವಾಯುದೇವನು ವಿಶೇಷವಾಗಿ ರಮಿಸುವಂತೆ ಮಾಡುವವನು.[4]

---

1 ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್ ।
ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥
-ಧ್ಯಾ ಸ್ತೋ.

೩ 2 'ಅ ಇತ್ಯುಕ್ತಃ ಪರೋ ವಿಷ್ಣುರ್ಯೋಗ್ಯ ಉಚ್ಚಾಃ ಸ ಏವ ತು । ತ ಉದಾ ಜೀವಸಂಘಾಃ ಸ್ಯುಃ .' ಇತಿ ಯಜುಃಸಂಹಿತಾ (ತೈ. ಉ ಭಾ 2 12) ನಿರೂಪಿತದಿಶಾ ಉತ್ ಉತ್ಕೃಷ್ಟಃ ಅಃ ಅಕಾರವಾಚ್ಯೋ ವಿಷ್ಣುಃ ಯೇಭ್ಯೋ ಜೀವೇಭ್ಯೋ ತೇ ಉದಾಃ ಜೀವಾಃ । ಮುಕ್ತಿಯೋಗ್ಯತ್ವೇನ ಶ್ರೇಷ್ಠಾಃ ವೃಷಾಶ್ಚ ತೇ ಉದಾಶ್ಚ ವೃಷೋದಾಃ । ತಾನ್ ವಿಶೇಷೇಣ ರಮಯತೀತಿ ವೃಷೋದರಃ ।

೪ 3 ವರ್ಷತಿ ಜೀವೇಭ್ಯಃ ಕಾಮಾನ್ ಸಿಂಚತೀತಿ ವೃಷಃ । ಉದೇಷು ರಮತ ಇತಿ ಉದರಃ । ವೃಷಶ್ಚಾಸೌ ಉದರಶ್ಚ ವೃಷೋದರಃ ।

೫ 4 ವೃಷಶ್ಚಾಸೌ ಉದಶ್ಚ ವೃಷೋದಃ ಜೀವಶ್ರೇಷ್ಠಃ ಮುಖ್ಯಪ್ರಾಣಃ । ವೃಷೋದಂ ವಿಶೇಷೇಣ ರಮಯತೀತಿ ವೃಷೋದರಃ ।

ತಾನು ಪ್ರಾಣದೇವನಿಗೆ ವಿಶೇಷವಾಗಿ ಆನಂದವನ್ನು ನೀಡುವುದರಿಂದಲೇ ತನ್ನನ್ನು 'ಪ್ರಾಣಾರಾಮ' ಎಂದು ಉಪಾಸಿಸಬೇಕೆಂದು ಭಗವಂತನು ಚತುರ್ಮುಖನಿಗೆ ಉಪದೇಶಿಸಿರುವನು.[1]

೬ ಶ್ರೇಷ್ಠನಾದವನು ಮತ್ತು ದೋಷದೂರನಾದವನು[2]

ಭಗವಂತನು ದೋಷದೂರನಾದುದರಿಂದಲೇ ಸರ್ವಶ್ರೇಷ್ಠನಾಗಿರುವನು.

೭ ಧರ್ಮಕ್ಕೆ ನಿಯಾಮಕನಾಗಿರುವವನು, ಪಾಪದಿಂದ ದೂರನಾಗಿರುವವನು, ಉಚ್ಚನಾಗಿರುವವನು, ಪೂರ್ಣನಾಗಿರುವವನು ಹಾಗೂ ನಿತ್ಯವೂ ರಮಿಸುತ್ತಿರುವವನು.[3]

೮ ಪುಣ್ಯಜಲದಿಂದ ಕ್ರೀಡಿಸುವವನು[4]

೯ (ತ್ರಿವಿಕ್ರಮ ರೂಪದಿಂದ ಬ್ರಹ್ಮಾಂಡದೊಳಗಿರುವವರಿಗೆ) ಪವಿತ್ರ ಜಲವಾದ ಗಂಗೋದಕವನ್ನು ನೀಡಿರುವವನು.[5]

---

1 ಸತ್ಯಾತ್ಮ ಪ್ರಾಣಾರಾಮಂ . ಇತಿ ಪ್ರಾಚೀನ ಯೋಗ್ಯೋಪಾಸ್ಯ ।

-ತೈ. ಉ. 1-14

ವಾಯೋರ್ವಿಶೇಷರಮಕೋ . ಇತ್ಯುಪಾಸ್ಯ ಪ್ರಾಥಮಿಕೋ ಯೋಗ್ಯಸ್ತ್ವಂ ಮದುಪಾಸನೇ । ಪ್ರಾಥಾನ್ಯಾದಿತಿ ಪೂರ್ವಂ ಹಿ ಪ್ರಾಹ ವಿಷ್ಣುಶ್ಚತುರ್ಮುಖಮ್ ।

-ಬ್ರಹ್ಮಸಾರ (ತೈ. ಉ. ಭಾ.)

೬ 2 ಶ್ರೇಷ್ಠತ್ವಾತ್ ವೃಷಃ । ಉದ್ಗತಾಃ ಅರಾಃ ದೋಷಾಃ ಯಸ್ಮಾತ್ ಸಃ ಉದರಃ ।

೭ 3 ಧರ್ಮಸ್ಯ ಭಗವದಧೀನಸತ್ತಾಕತ್ವಾತ್ ವೃಷಃ ಭಗವಾನ್ । ' ಸ ಉನ್ನಾಮಾ ಪಾಪ್ಮೋದ್ಗಶ್ಚೋಚ್ಚ ಏವ ಚ' -ಸತ್ತತ್ತ್ವ (ಛಾಂ. ಉ. ಭಾ. 1-3-7) ನಿರೂಪಿತ ದಿಶಾ ಪಾಪ್ಮೋದ್ಗತತ್ವಾತ್ ಉಚ್ಚತ್ವಾತ್ ಭಗವಾನ್ ಉತ್ । ಪೂರ್ಣತ್ವಾದಃ । ನಿತ್ಯಂ ರಮತ ಇತಿ ರಃ ।

೮ 4 ವೃಷೋದೇನ ಪುಣ್ಯೋದಕೇನ ರಮತ ಇತಿ ವೃಷೋದರಃ ।

-ಸ. ಸಂ.

೯ 5 ವೃಷೋದಂ ಗಂಗೋದಕಂ ರಾತಿ ತ್ರಿವಿಕ್ರಮರೂಪೇಣ ಬ್ರಹ್ಮಾಂಡವರ್ತಿಭ್ಯ ಇತಿ ।

-ಸ. ಸಂ.

೧೦ ಭಕ್ತರ ಕಾಮನೆಗಳನ್ನು ಸುರಿಸುವವನು ಮತ್ತು ದೋಷದೂರನಾದವನು.[1]

೧೧ ಚತುರ್ಮುಖಾದಿ ಪ್ರಜೆಗಳನ್ನು ವರ್ಷಿಸುವ ಉದರ ಉಳ್ಳವನು.[2]

೧೨ (ಆರಾಧಕರು ಸಮರ್ಪಿಸುವ ಹವಿಸ್ಸೇ ಮೊದಲಾದವುಗಳಿಂದ ತುಂಬಿರುವುದರಿಂದ, ಸಕಲ ದುಃಖಿಗಳಿಗೂ ಆಶ್ರಯವಾಗಿ ಇರುವುದರಿಂದ) ಧಾರ್ಮಿಕವಾದ ಉದರ ಉಳ್ಳವನು.[3]

೧೩ ಮಳೆಬರಿಸುವವನು ಮತ್ತು ನೀರನ್ನು ನೀಡುವವನು.[4]

ಭಗವಂತನು ಪರ್ಜನ್ಯನಲ್ಲಿದ್ದುಕೊಂಡು ಮಳೆಬರಿಸುವ ಮೂಲಕ ನೀರನ್ನು ಅನುಗ್ರಹಿಸುವನು.

## ಜಿಜ್ಞಾಸೆ

[ಪರಿಚಿತ ಹೆಸರಿಂದ ವ್ಯವಹಾರ]

ಪ್ರ – ಜೀವೋತ್ತಮರಾದ ವಾಯುದೇವರನ್ನು ವಿಶೇಷವಾಗಿ ರಮಿಸುವಂತೆ ಮಾಡುವವನು ಆದುದರಿಂದ ಭಗವಂತನು ವೃಷೋದರ ಎಂದು ವೃಷೋದರ ನಾಮದ ವ್ಯಾಖ್ಯಾನದಲ್ಲಿ ವೃಷೋದ ಶಬ್ದದಿಂದ ಜೀವೋತ್ತಮರಾದ ವಾಯುದೇವರು ಎಂಬ ಅರ್ಥವು ವಿವಕ್ಷಿತವಾಗಿದೆ ಆದರೆ ವಾಯುದೇವರಂತೆ ಚತುರ್ಮುಖಬ್ರಹ್ಮದೇವರೂ ಜೀವೋತ್ತಮರಾದುದರಿಂದ ಅವರು ಆ ಶಬ್ದದಿಂದ ವಿವಕ್ಷಿತರು ಹೌದೋ ಅಲ್ಲವೋ? ವಿವಕ್ಷಿತರು ಹೌದಾದರೆ ಆ ರೀತಿ ವ್ಯಾಖ್ಯಾನವನ್ನು ಏಕೆ ಮಾಡಲಿಲ್ಲ?

ಉ – ಚತುರ್ಮುಖ ಭೂಮಿಯಲ್ಲಿ ಅವತಾರ ಮಾಡುವದಿಲ್ಲ ಅವರು ಪೂರ್ವಕಲ್ಪದಲ್ಲಿ ವಾಯುದೇವರು ಆಗಿರುವಾಗ ಅನೇಕಾವತಾರಗಳನ್ನು ಮಾಡಿ ಅವತಾರದ್ವಾರಾ ಮಾಡಬೇಕಾದ ಶ್ರೀ

---

೧೦ 1 ವರ್ಷಕಾದ್ ವೃಷಃ । ಉದ್ಗತಾರತ್ವಾದುದರಃ । ವೃಷಶ್ಚಾಸಾವುದರಶ್ಚೇತಿ ।
–ಸ. ಸಂ.

೧೧ 2 ಪ್ರಜಾಃ ವರ್ಷತೀವೋದರಮಸ್ಯೇತಿ ವೃಷೋದರಃ ।
–ಶಾಂ. ಭಾ.

೧೨ 3 ಆರಾಧಕಾನಾಂ ಯಥಾಲಬ್ಧಹವಿರಾದಿಭಿಸ್ಸಂಪೂರಿತತ್ವೇನ ಸರ್ವಾರ್ತಾಸ್ಪದತ್ವೇನ ಧಾರ್ಮಿಕೋದರತ್ವಾದ್ ವೃಷೋದರಃ । –ಪ. ಭಾ.

೧೩ 4 ವರ್ಷತೀತಿ ವೃಷಃ । ವೃಷಃ ಸನ್ ಉದಂ ಉದಕಂ ರಾತೀತಿ ವೃಷೋದರಃ ।

ಹರಿಸೇವೆಯನ್ನು ಮುಗಿಸಿದ್ದಾರೆ. ಅವರು ಪೂರ್ವಕಲ್ಪದಲ್ಲಿ ಭೂಮಿಯಲ್ಲಿ ಅವತರಿಸಿ ಮಹಾ ಕಾರ್ಯಗಳನ್ನು ಮಾಡುವಾಗ ಅವರ ಪರಿಚಯವು ಎಲ್ಲರಿಗೂ ಆಯಿತು. ಆಗ ಅವರನ್ನು ವಾಯುದೇವರೆಂದು ಎಲ್ಲರೂ ವ್ಯವಹರಿಸುತ್ತಾ ಇದ್ದರು. ಈ ಕಲ್ಪದಲ್ಲಿಯೂ ಆದಾವ ಹಿಂದಿನ ಕಲ್ಪದ ಪರಿಚಿತಹೆಸರಿನಿಂದಲೇ ಎಲ್ಲರೂ ಅವರನ್ನು ವ್ಯವಹರಿಸುತ್ತಾರೆ. ಇದಕ್ಕೆ ಒಂದು ಉದಾಹರಣೆ—ಗೃಹಸ್ಥಾಶ್ರಮಿಯು ಯಾವ ಹೆಸರಿನಿಂದ ಪ್ರಸಿದ್ಧ ನಾಗಿದ್ದಾನೋ ಆವನು ಸನ್ಯಾಸಿಯಾಗಿ ನಾಮಾಂತರವನ್ನು ಹೊಂದಿದರೂ ಪೂರ್ವನಾಮ ದಿಂದಲೇ ಆ ಸನ್ಯಾಸಿಯನ್ನು ಜನರು ಕರೆಯುತ್ತಾರೆ. ಅದರಂತೆ ಬ್ರಹ್ಮದೇವರ ಪೂರ್ವನಾಮದಿಂದ ಅವರನ್ನು ಹೇಳುವದು ಕೂಡುತ್ತದೆ.



## ೨೬೧ ವರ್ಧನಃ

೧ ಭಕ್ತರನ್ನು ಅಭಿವೃದ್ಧಿಪಡಿಸುವವನು[1]

ಋಗ್ವೇದದಲ್ಲಿ ಅಗ್ನಿನಾಮಕ ಭಗವಂತನನ್ನು ಸಂಬೋಧಿಸಿ, ನೀನು ಭಕ್ತರ ಅಭೀಷ್ಟಗಳನ್ನು ಸುರಿಸುವವನು, ಹಾಗೆಯೇ ಅವರನ್ನು ಅಭಿವೃದ್ಧಿಗೊಳಿಸುವವನು—ಎಂದು ಪ್ರಾರ್ಥಿಸಲಾಗಿದೆ.[2] ಜೀವಾತ್ಮನು ಪೂರ್ಣಪ್ರಮಾಣದ ಅಭಿವೃದ್ಧಿಯನ್ನು ಪಡೆಯುವುದು ಮೋಕ್ಷಾವಸ್ಥೆಯಲ್ಲಿ ಆದ್ದ ರಿಂದ ಭಗವಂತನು ಮುಖ್ಯವಾಗಿ ಭಕ್ತರನ್ನು ಅಭಿವೃದ್ಧಿಪಡಿಸುವುದೆಂದರೆ, ಅವರಿಗೆ ಮೋಕ್ಷ ದೊರಕುವಂತೆ ಮಾಡುವುದು ಆದ್ದರಿಂದಲೇ ಋಗ್ವೇದದಲ್ಲಿ 'ಇಂದ್ರನಾಮಕ ಭಗವಂತನನ್ನು ಸಂಬೋಧಿಸಿ, ನಮ್ಮ ಗೂಢವಾದ ಜ್ಞಾನ ಸಮೂಹದ ಆವರಣವನ್ನು ಸರಿಸಿ, ನಮ್ಮನ್ನು ವೃದ್ಧಿ ಪಡಿಸು'—ಎಂದು ಪ್ರಾರ್ಥಿಸಲಾಗಿದೆ[3] ಸಜ್ಜನರೆಂಬ ಸಮುದ್ರದ ಸಮೃದ್ಧಿಗೆ ಪೂರ್ಣಚಂದ್ರ ನಂತಿರುವವನು ಭಗವಂತನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು[4]

---

೧ 1 ವರ್ಧಯತಿ ಸಾತ್ವಿಕಾನ್ ಏಧಯತೀತಿ ವರ್ಧನಃ ।

2 'ತ್ವಮಗ್ನೇ ವೃಷಭಃ ಪುಷ್ಟಿವರ್ಧನಃ.. .' —ಋ. ವೇ. 31-5
ಭಕ್ತಾನಾಂ ಪುಷ್ಟಿವರ್ಧನಃ । ಋ. ಭಾ. ಟೀ.

3 ಗವಾಮುಪವ್ರಜಂ ವೃಧಿ ಕೃಣುಷ್ವ ರಾಧೋ ಅದ್ರಿವಃ । —ಋ. ವೇ. 10-7
ಗೂಢಂ ಜ್ಞಾನಸಮೂಹಂ ತ್ವಂ ವಿವೃಣ್ವೃದ್ಧಿಂ ಚ ನಃ ಕುರು । —ಋ. ವೇ. ಭಾ.

4 'ಸುಜನೋದಧಿಸಮೃದ್ಧಿಪೂರ್ಣಚಂದ್ರಃ......' —ದ್ವಾ. ಸ್ತೋ.

೨ (ತನ್ನ ಅವತಾರ ರೂಪಗಳಿಂದ) ಸಾತ್ತ್ವಿಕ ಸ್ವಭಾವವನ್ನು ಅಭಿವೃದ್ಧಿಪಡಿಸುವವನು. ಅಥವಾ ರಾಜಸ ಮತ್ತು ತಾಮಸ ಸ್ವಭಾವಗಳನ್ನು ನಾಶಮಾಡುವವನು[1]

೩ (ಸಾತ್ತ್ವಿಕ ಸ್ವಭಾವದ ಪೋಷಣೆಗಾಗಿ ತನ್ನ ಬೇರೆ ಬೇರೆ ಅವತಾರಗಳಿಂದ)ಸತ್ತ್ವರ-ಜಸ್ತಮೋ ಗುಣಗಳನ್ನು ಅಭಿವೃದ್ಧಿಪಡಿಸುವವನು.[2]

ಸಾತ್ತ್ವಿಕ ಸ್ವಭಾವವನ್ನು, ಆ ಸ್ವಭಾವದ ಸಜ್ಜನರನ್ನು ಅಭಿವೃದ್ಧಿಪಡಿಸುವುದು ಭಗವಂತನ ಮುಖ್ಯ ಉದ್ದೇಶ ಸಾತ್ತ್ವಿಕ ತಾಮಸರಿಗಾಗಲಿ, ಸಾತ್ವಿಕ ರಾಜಸರಿಗಾಗಲೀ, ಸಾತ್ತ್ವಿಕ ಸಾತ್ವಿಕರಿಗಾಗಲೀ ರಾಜಸ ಅಥವಾ ತಾಮಸ ಸ್ವಭಾವದವರಿಂದ ಏನಾದರೂ ಹಾನಿ ಉಂಟಾದಾಗ, ಭಗವಂತನು ಅವತರಿಸಿ ರಾಜಸ ಮತ್ತು ತಾಮಸ ಸ್ವಭಾವದವರನ್ನು ಸಂಹರಿಸಿ, ಸಾತ್ತ್ವಿಕರನ್ನು ಅಭಿವೃದ್ಧಿ ಪಡಿಸುವನೆಂದು ಸ್ಕಾಂದವು ಪ್ರತಿಪಾದಿಸಿದೆ.[3]

ಹೀಗೆ ಸಾತ್ವಿಕಸ್ವಭಾವವನ್ನು ಅಭಿವೃದ್ಧಿಪಡಿಸುವುದೇ ಭಗವದವತಾರದ ಮುಖ್ಯ ಉದ್ದೇಶವಾದರೂ, ಈ ಉದ್ದೇಶದ ಪೋಷಣೆಗಾಗಿಯೇ ಹಯಗ್ರೀವಾದಿ ರೂಪಗಳಿಂದ ಸತ್ತ್ವಗುಣವನ್ನೂ ಪರಶುರಾಮಾದಿ ರೂಪಗಳಿಂದ ರಜೋಗುಣವನ್ನೂ ಕೃಷ್ಣಾದಿರೂಪಗಳಿಂದ ತಮೋಗುಣವನ್ನೂ ವರ್ಧಿಸುವನು ಭಗವಂತನು ಹಯಗ್ರೀವಾದಿ ರೂಪಗಳಿಂದ ಜ್ಞಾನದಾನಾದಿಗಳನ್ನು ನಡೆಸುವುದರ ಮೂಲಕ ಸತ್ತ್ವಗುಣವನ್ನು ಅಭಿವೃದ್ಧಿಗೊಳಿಸಿ ಸಜ್ಜನರನ್ನು ರಕ್ಷಿಸಿದರೆ, ಪರಶುರಾಮಾದಿ ರೂಪಗಳಿಂದ ರಾಗದಾನ ನಡೆಸುವುದರ ಮೂಲಕ ರಜೋಗುಣವನ್ನು ಅಭಿವೃದ್ಧಿಗೊಳಿಸಿ ಸಜ್ಜನರನ್ನು ಸೃಷ್ಟಿಸುವನು ಕೃಷ್ಣಾದಿರೂಪಗಳಿಂದ ಅಸಜ್ಜನರಲ್ಲಿ ತಮೋಗುಣವನ್ನು ಅಭಿವೃದ್ಧಿಗೊಳಿಸಿ, ಅವರನ್ನು ದುರ್ಗತಿಗೆ

---

೨ 1 ಸಾತ್ತ್ವಿಕಸ್ವಭಾವಂ ವರ್ಧಯತಿ ಸ್ವಾವತಾರರೂಪೈಃ ಪೋಷಯತೀತಿ, ರಾಜಸತಾಮಸ-ಸ್ವಭಾವೌ ವರ್ಧಯತಿ ಛಿನತ್ತೀತಿ ವಾ ವರ್ಧನಃ । 'ವರ್ಧ ಛೇದನಪೂರಣಯೋಃ' ॥

೩ 2 ಸಾತ್ತ್ವಿಕಸ್ವಭಾವಪೋಷಣಾಯ ಸತ್ತ್ವಾದೀನ್ ವರ್ಧಯತಿ ಪೋಷಯತೀತಿ ವರ್ಧನಃ।

3 'ದೇವಾಃ ಪೃಥಗನಾಖ್ಯಾತಾಃ ಸ್ಮೃತಾಃ ಸಾತ್ತ್ವಿಕತಾಮಸಾಃ । ಅತಾತ್ವಿಕಾ ಪೃಥಾಖ್ಯಾತಾಃ ಸ್ಮೃತಾಃ ಸಾತ್ತ್ವಿಕರಾಜಸಾಃ । ಸಾತ್ತ್ವಿಕಾಃ ಸಾತ್ತ್ವಿಕಾಸ್ತತ್ರ ತಾತ್ವಿಕಾಃ ಪರಿಕೀರ್ತಿತಾಃ । . . ಸಾತ್ತ್ವಿಕೇಷು ತ್ರಿಷು ಯದಾ ತ್ವೇಕಸ್ಯ ಪ್ರತಿಬಾಧನಮ್ । ರಜಸ್ತಮೋಭ್ಯಾಂ ವಿಷ್ಣುರ್ಹಿ ತದಾ ಪ್ರಾದುರ್ಭವತ್ಯಜಃ । ರಾಜಸಾಂಸ್ತಾಮಸಾನ್ ಹತ್ವಾ ಸಾತ್ತ್ವಿಕಂ ವರ್ಧಯಿಷ್ಯತಿ' -ಸ್ಕಾಂದ (ಭಾಗ. ತಾ. ೩. 2 10 42)

ಕಳುಹಿಸುವನು ಆ ಮೂಲಕ ಸಜ್ಜನರನ್ನು ಅಭಿವೃದ್ಧಿಗೊಳಿಸುವನು. ಎಂಬುದಾಗಿ ಬ್ರಹ್ಮತರ್ಕ ವಿವರಿಸಿದೆ[1]

೪ ದೇವತೆಗಳನ್ನು ಅಭಿವೃದ್ಧಿಗೊಳಿಸುವವನು[2]

೫ ದೈತ್ಯರನ್ನು ಸಂಹರಿಸುವವನು.[3]

೬ ಎಲ್ಲರಿಂದಲೂ ಸ್ವೀಕರಿಸಲ್ಪಡುವ ಧನಕ್ಕೆ ಸ್ವಾಮಿ ಆಗಿರುವವನು[4]

೭ (ತಾಯಿಯಂತೆ ತನ್ನ ಆರಾಧಕರನ್ನು ತನ್ನ ಉದರದಲ್ಲಿಟ್ಟುಕೊಂಡು) ಬೆಳೆಸುವವನು[5]

೮ ಭಕ್ತನಿಂದ ಸಮರ್ಪಿತವಾದ ಪತ್ರ ಪುಷ್ಪಾದಿಗಳಿಗೆ ಅಧಿಕ ಫಲ ದೊರಕುವಂತೆ ಮಾಡಿ ಅವುಗಳನ್ನು ವೃದ್ಧಿಪಡಿಸಿರುವವನು[6]

---

1 ಜಗತಾಂ ವರ್ಧಯನ್ ಸತ್ತ್ವಂ ಯದಾ ರಕ್ಷತಿ ಕೇಶವಃ । ಹಯಗ್ರೀವಾದಿರೂಪೇಣ ಶುಕ್ಲವರ್ಣಸ್ತದಾ ವಿಭುಃ । ವರ್ಧಯಂಸ್ತು ರಜೋ ಯೇನ ಜಗದುತ್ಪಾದಯೇದ್ಧರಿಃ । ತದ್ ರಕ್ತಂ ಜಾಮದಗ್ನ್ಯಾದಿರೂಪಂ ಯೇನ ವಿನಾಶಯೇತ್ । ವರ್ಧಯಂಸ್ತು ತಮೋ ಲೋಕೇ ತತ್ ಕೃಷ್ಣಂ ಯಾದವಾದಿಕಮ್ ।. .ಜ್ಞಾನದಾನಾದಿನಾ ರಕ್ಷಾ ಮಹತಾಂ ಸಂಪ್ರಕೀರ್ತಿತಾ । ರಾಗದಾನೇನ ಮಹತಾಂ ಸೃಷ್ಟಿಃ ಸೃಷ್ಟಿರುದೀರ್ಯತೇ । ಅಸತಾಂ ತು ತಮೋವೃದ್ಧಿಂ ಕುರ್ವನ್ ಪಾತಯತೇ ಯದಾ । ಸತಾಂ ವಿವರ್ಧನಾರ್ಥಾಯ ಕೃಷ್ಣರೂಪೀ ತದಾ ಹರಿಃ । -ಬ್ರಹ್ಮತರ್ಕ (ಭಾಗ. ತಾ. ನಿ. 10-4-20)

೪ 2 ದೇವಾನಾಂ ಸಮೇಧನಾದ್ ವರ್ಧನಃ । -ವಿ ರಾ

೫ 3 ದೈತ್ಯಾನಾಂ ಛೇದನಾತ್ ವರ್ಧನಃ । (ವರ್ಧ ಛೇದನಪೂರಣಯೋಃ) -ವಿ. ರಾ.

೬ 4 ವರ್ ವೃತಂ ಧನಂ ಯಸ್ಯಾಸಾವಿತಿ ವರ್ಧನಃ । -ಸ. ಸಂ.

೭ 5 ಮಾತೃವತ್ ತಾನುದರೇ ಕೃತ್ವಾ ವರ್ಧಯತೀತಿ ವರ್ಧನಃ । -ಪ. ಭ.

೮ 6 ವರ್ಧಯತಿ ಭಕ್ತೇನ ದತ್ತಂ ಪತ್ರಪುಷ್ಪಫಲಾದಿಕಂ ಇತಿ ವರ್ಧನಃ । -ಶಾಂ. ಭಾ. ವಿವೃತಿಃ ।

ಶ್ರೀಕೃಷ್ಣನು ಸುಧಾಮನೊಡನೆ ತನಗೆ ಭಕ್ತರು ಭಕ್ತಿಪೂರ್ವಕವಾಗಿ ಸಮರ್ಪಿಸಿದ ಸ್ವಲ್ಪವನ್ನೂ ತಾನು ಅಧಿಕವಾಗಿ ಪರಿಗಣಿಸುವುದಾಗಿ ಹೇಳಿರುವನು[1]

## ಜಿಜ್ಞಾಸೆ

[ಸಮುದ್ರದ ವೃದ್ಧಿಯಂತೆ]

ಪ್ರ – 'ಭೋಗಮಾತ್ರಸಾಮ್ಯಲಿಂಗಾಚ್ಚ' ಸೂತ್ರದಲ್ಲಿ ಮೋಕ್ಷದಲ್ಲಿ ಜೀವರು ವಿಷಯಭೋಗವನ್ನು ಒಮ್ಮೆ ಅಧಿಕವಾಗಿ ಮತ್ತೊಮ್ಮೆ ಕಡಿಮೆಯಾಗಿ ಭೋಗಿಸುತ್ತಾ ಇದ್ದರೂ ಅಲ್ಲಿಯ ಅವರ ಆನಂದದಲ್ಲಿ ವ್ಯತ್ಯಾಸವು ಉಂಟಾಗುವದಿಲ್ಲ ಎಂದು ಹೇಳಿರುತ್ತದೆ ಆದುದರಿಂದ ವರ್ಧನಃ ಎಂಬ ಭಗವನ್ನಾಮವು ಭಕ್ತ ಜೀವರಿಗೆ ಮೋಕ್ಷದಲ್ಲಿ ಭೋಗದ ವೃದ್ಧಿಯನ್ನು ಭಗವಂತನು ಕೊಡುತ್ತಾನೆಂದು ಪ್ರತಿಪಾದಿಸಿದರೆ ಸೂತ್ರ ವಿರೋಧವು ಉಂಟಾಗುವದಿಲ್ಲವೋ?

ಉ – ಮೋಕ್ಷದಲ್ಲಿ ಭೋಗದ ವೃದ್ಧಿಯೂ ಇದೆ. ಆದು 'ಸಮುದ್ರತರಂಗೋಪಮಾ' ಅಂದರೆ ಸಮುದ್ರವು ಅಲೆಗಳುಳ್ಳದ್ದು ಆಗುವಾಗ ವೃದ್ಧಿಯುಳ್ಳದ್ದು ಎಂದು ವ್ಯವಹರಿಸುತ್ತೇವೆ ಅದರಂತೆ ಮೋಕ್ಷದಲ್ಲಿ ಆನಂದ ವೃದ್ಧಿಯೂ ಇದೆ ಎಂಬ ವ್ಯವಹಾರ ಆದುದರಿಂದ ಮೋಕ್ಷದಲ್ಲಿ ಆನಂದ ವೃದ್ಧಿಯನ್ನು ಹೇಳಿದರೂ ಸೂತ್ರ ವಿರೋಧವು ಇಲ್ಲ



## ೨೬೨ ವರ್ಧಮಾನಃ

೧ ನಿತ್ಯವೂ ಪೂರ್ಣನಾಗಿರುವವನು.[2]

ಭಗವಂತನು ಸಹಜವಾಗಿಯೇ ಪೂರ್ಣನಾಗಿರುವವನು ಅವನು ಯಾವಾಗಲೂ ಪೂರ್ಣನಾಗಿಯೇ ಇರುವುದರಿಂದ ಹೊಸತಾಗಿ ವೃದ್ಧಿಯನ್ನು ಹೊಂದಲು ಅವನಲ್ಲಿ ಅವಕಾಶವೇ ಇಲ್ಲ ಅದ್ದರಿಂದಲೇ ಇತರರಲ್ಲಿ ವೃದ್ಧಿಗೆ ಪ್ರಯೋಜಕವಾದ ಕರ್ಮವೂ ಆತನ ಅಧಿಕವೃದ್ಧಿಗೆ ಕಾರಣ ಕಾರಣವಾಗಲಾರದು.[3] ಭಗವಂತನ ಸ್ವರೂಪವನ್ನು ಸ್ಪಷ್ಟಗೊಳಿಸುವುದು—ಎಂಬ ಅಭಿಪ್ರಾಯ

---

1 ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್
-ಭಾಗ. 10-81-3

೧ 2 ವರ್ಧಮಾನಂ ಸಾರ್ವಕಾಲಿಕಃ ಶಾನಚ್ । ತಾಚ್ಛೀಲ್ಯಾರ್ಥಶ್ಚಾನಶ್ ವಾ । ಸದಾವೃಧಂ ಸದಾಪೂರ್ಣಮ್ । ಮ. ಭಾ. ಟೀ. (1-8)

3 '. ಸ ನ ಸಾಧುನಾ ಕರ್ಮಣಾ ಭೂಯಾನ್. . . '
-ಬೃ. ಉ. 6-4-22

ವನ್ನಿಟ್ಟುಕೊಂಡಷ್ಟೇ ಅವನ ವೃದ್ಧಿಯನ್ನು ಅಲ್ಲಲ್ಲಿ ಉಲ್ಲೇಖಿಸಲಾಗಿದೆ[1]

ಗೀತಾಚಾರ್ಯನು ತಾನು ಸಕಲ ದೇಶ ಕಾಲಗಳಲ್ಲೂ ಪರಿಪೂರ್ಣನಾದವನೆಂಬುದಾಗಿ ಸಂದೇಶಿಸಿರುವನು[2] ಋಗ್ವೇದದ ಅಗ್ನಿಸೂಕ್ತದಲ್ಲಿ ಅಗ್ನಿನಾಮಕ ಭಗವಂತನನ್ನು ಸಂಬೋಧಿಸಿ, ಸ್ವರ್ಗಾದಿಗಳಲ್ಲಿ ಹಾಗೂ ಹೃದಯದಲ್ಲಿ ಮತ್ತೆ ಮತ್ತೆ ಪ್ರಕಾಶಿಸುತ್ತಿರುವ ಯಾವಾಗಲೂ ಪರಿಪೂರ್ಣನಾಗಿರುವ ನಿನ್ನನ್ನು ಶರಣಾಗತರಾಗುವೆವು—ಎಂದು ಪ್ರಾರ್ಥಿಸಲಾಗಿದೆ[3]

---

* 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ಕರ್ಮಣಾ ವರ್ಧತೇ ನೋಕನೀಯಾನ್'
-ಬೃ ಉ. 6-4-23

'ನ ಕರ್ಮಣಾ ಇತಿ ತು ಕರ್ಮಣಾಽಪಿ ನ ಕಿಮು ಸ್ವಯಮಿತಿ ।
-ಗೀ ಭಾ. 11-32

' .ವೃದ್ಧಿಲಕ್ಷಣವಿಕ್ರಿಯಾಕಾರಣತ್ವೇನ ಸಂಭಾವಿತೇನ ಕರ್ಮಣಾಽಪಿ ಯದಾ ನ ವರ್ಧತೇ ತದಾ ಸ್ವಯಂ ಕರ್ಮಣಾ ವಿನಾ ನ ವರ್ಧತೇ ಇತಿ ಕಿಮು ವಕ್ತವ್ಯಮಿತಿ ವೃದ್ಧಿ-ಲಕ್ಷಣವಿಕ್ರಿಯಾಕಾರಣತ್ವಮಾತ್ರನಿಷೇಧಾಯ ಕೈಮುತ್ಯಪ್ರದರ್ಶನಾರ್ಥಂ ...'
-ಪ್ರ. ದೀ.

1 ಉಕ್ಥಮಿಂದ್ರಾಯ ಶಂಸ್ಯಂ ವರ್ಧನಂ. . -ಋ. ವೇ. 10-5
ನಿತ್ಯವೃದ್ಧತ್ವತೋ ವಿಷ್ಣೋರ್ವರ್ಧನಂ ತು ಪ್ರಕಾಶತಃ ।
-ಋ. ಭಾ.

* 'ಏತನಾಗ್ನೇ ಬ್ರಹ್ಮಣಾ ವಾವೃಧಸ್ವ.. ' -ಋ. ವೇ 31-18

ಸ್ಪಷ್ಟತ್ವಂ ಚ ಪ್ರಾಪ್ನುಹಿ ವೇದವಾಚಾ । -ಋ. ಭಾ.

2 'ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ.. '
-ಗೀ. 11-32

ಪ್ರವೃದ್ಧಃ ಪರಿಪೂರ್ಣಃ... -ಗೀ. ಭಾ.

ವೃದ್ಧಿಃ ಧಾತ್ವರ್ಥಃ । ಸಾ ಚ ಪ್ರಶಬ್ದೇನ ದೇಶತಃ ಕಾಲತಶ್ಚ ಸದಾತನೀ ವಿವಕ್ಷಿತೇತಿ ಭಾವಃ । -ಪ್ರ. ದೀ.

3 ವರ್ಧಮಾನಂ ಸ್ವೇ ದಮೇ । -ಋ. ವೇ. 1-8

'ದೇದೀಪ್ಯಮಾನಂ ಸ್ವೇ ಸದ್ಮನ್ಯಧ್ವರೇಶಂ ಸದಾವೃಧಮ್ । ...ತ್ವಾಮುಪೇಮಸಿ'
-ಋ. ಭಾ.

೨ ಅನಾದಿನಿತ್ಯನಾಗಿರುವವನು.[1]

ಗೀತಾಚಾರ್ಯನು ತಾನು ಅನಾದಿನಿತ್ಯನಾಗಿರುವೆನೆಂಬ ಅಭಿಪ್ರಾಯದಲ್ಲಿ ತನ್ನನ್ನು 'ಪ್ರವೃದ್ಧ' ಎಂದು ವಿಶೇಷಿಸಿಕೊಂಡಿರುವನು.[2]

೩ ದೇಹತೋಽಪಿ ನಿತ್ಯಪ್ರವೃದ್ಧನಾಗಿರುವವನು[3]

ಭಗವಂತನ ದೇಹವು ಅವನ ಸ್ವರೂಪಾತ್ಮಕವಾಗಿದ್ದು, ಅವನಂತೆಯೇ ನಿತ್ಯವೂ ಪ್ರವೃದ್ಧವಾದುದು ಆದ್ದರಿಂದ ಅವನು ಸ್ವರೂಪತಃ ಹೊಸತಾಗಿ ಹೇಗೆ ವೃದ್ಧಿಯನ್ನು ಹೊಂದುವುದಿಲ್ಲವೋ ಅಂತೆಯೇ ದೇಹತೋಽಪಿ ನೂತನವಾದ ವೃದ್ಧಿಯನ್ನು ಹೊಂದುವುದಿಲ್ಲ ಅವನ ದಿವ್ಯರೂಪಕ್ಕೆ ವೃದ್ಧಿಹ್ರಾಸಾದಿಗಳಿಲ್ಲ—ಎಂಬುದಾಗಿ ಶಾಸ್ತ್ರದಲ್ಲಿ ಅಲ್ಲಲ್ಲಿ ನಿರೂಪಿಸಲಾಗಿದೆ.[4]

೪ (ಲೋಕದೃಷ್ಟಿಯಲ್ಲಿ) ಬೆಳೆಯುವವನಂತೆ ನಟಿಸಿರುವವನು.[5]

---

೨ 1 'ಕಾಲೋಽಸ್ಮಿ ಪ್ರವೃದ್ಧಃ' ಇತಿ ಗೀತಾಯಾಃ (11-32) ಪ್ರವೃದ್ಧಶಬ್ದಂ ಅನಾದಿನಿತ್ಯಾರ್ಥಕತಯಾ ವ್ಯಾಖ್ಯಾತವತಾಂ ಶ್ರೀಮದಾಚಾರ್ಯಾಣಾಂ ವರ್ಧಮಾನನಾಮ್ನೋಽಪ್ಯಯಮರ್ಥಃ ಸಮ್ಮತಃ ।

2 ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ —ಗೀ. 11-32

ಪ್ರವೃದ್ಧಃ ಅನಾದಿಃ । —ಗೀ. ಭಾ

ಅನಾದಿಃ ಇತಿ ನಿತ್ಯಸ್ಯಾಪ್ಯುಪಲಕ್ಷಣಮ್ । —ಪ್ರ. ದೀ.

3 ದೇಹತೋಽಪಿ ನಿತ್ಯಪ್ರವೃದ್ಧತ್ವಾತ್ ವರ್ಧಮಾನಃ ।

4 '...ನಾಸೌ ಜಜಾನ ನ ಮರಿಷ್ಯತಿ ನೈಧತೇಽಸೌ'
—ಇತಿ ಹಿ ಭಾಗವತೇ (11-3-38)

* 'ಯಸ್ಯ ದಿವ್ಯಂ ಹಿ ತದ್ರೂಪಂ ಹೀಯತೇ ವರ್ಧತೇ ನ ಚ'
—ಮೋಕ್ಷಧರ್ಮೇ (ಗೀ. ಭಾ. 11-32)

ಭಗವತೋ ವಿಕ್ರಿಯಾರೂಪವೃದ್ಧ್ಯಭಾವೇಽಪಿ ತದ್ರೂಪಸ್ಯ ಭವತು ಇತಿ ತತ್ರಾಹ—ಯಸ್ಯೇತಿ । —ಪ್ರ. ದೀ.

೪ 5 ಲೋಕದೃಷ್ಟ್ಯಾ ಅವತಾರೇಷು ವರ್ಧತ ಇವ ವರ್ಧಮಾನಃ ।

ಭಗವಂತನು ತನ್ನ ರಾಮಕೃಷ್ಣಾವತಾರಗಳಲ್ಲಿ ಕ್ರಮವಾಗಿ ಬೆಳೆಯುವವನಂತೆ ನಟಿಸಿರುವನು. ರಾಮಾವತಾರದ ಪ್ರಸ್ತಾವದಲ್ಲಿ—ಭಗವಂತನು ಲೋಕದೃಷ್ಟಿಗನುಗುಣವಾಗಿಯಷ್ಟೇ ಬೆಳೆಯುತ್ತಿರುವನೆಂದು ಶ್ರೀಮದಾಚಾರ್ಯರು ನಿರ್ಣಯಿಸಿರುವರು[1]

ಹಾಗೆಯೇ ಭಗವಂತನು ಮತ್ಸ್ಯಾವತಾರದಲ್ಲಿ ಕ್ರಮೇಣ ಬೆಳೆದವನಂತೆ ತೋರಿಸಿರುವನು. ವಾಮನನಾಗಿದ್ದವನು ತ್ರಿವಿಕ್ರಮನಾಗಿ ಬೆಳೆದಂತೆ ತೋರಿಸಿರುವನು

೫. ಎಲ್ಲೆಡೆ ವ್ಯಾಪಿಸಿರುವವನು[2]

ಇಂದ್ರನಾಮಕ ಭಗವಂತನು ಎಲ್ಲೆಡೆ ವ್ಯಾಪಿಸಿದ್ದರೂ, ಅವನ ಅನುಗ್ರಹವಿಲ್ಲದೆ ಅಂತರಿಕ್ಷ ಪೃಥಿವಿಗಳು ಹಾಗೂ ಅವುಗಳ ಅಭಿಮಾನಿನಿಯರಾದ ಶ್ರೀಭೂದೇವಿಯರು ಅವನನ್ನು ಹೊಂದಲಾರರು—ಎಂದು ಋಗ್ವೇದ ಪ್ರತಿಪಾದಿಸಿದೆ[3]

೬. (ಯೋಗ್ಯ ಜೀವಾತ್ಮರ) ದೋಷಗಳನ್ನು ನಾಶಪಡಿಸುವ (ಅಥವಾ) ಅವರನ್ನು ಜ್ಞಾನಭಕ್ತ್ಯಾದಿ ಗುಣಗಳಿಂದ ಪೂರ್ಣರನ್ನಾಗಿ ಮಾಡುವ ತತ್ತ್ವಾಭಿಮಾನಿ ದೇವತೆಗಳನ್ನು ಆದರಿಸುವವನು[4]

---

1 ನಿತ್ಯಪ್ರವೃದ್ಧಸ್ಯ ಚ ತಸ್ಯ ವೃದ್ಧಿರಪೇಕ್ಷ್ಯ ಲೋಕಸ್ಯ ಹಿ ಮಂದದೃಷ್ಟಿವತ್ ।
—ಮ. ಭಾರ. ತಾ. ನಿ. 4–1

೫ 2 ವರ್ಧತೇ ಸರ್ವತ್ರ ವರ್ತತ ಇತಿ ವರ್ಧಮಾನಃ ಸರ್ವಗತಃ ।

3 ನ ಹಿ ತ್ವಾ ರೋದಸೀ ಉಭೇ ಋಘಾಯಮಾಣಮಿನ್ವತಃ ।
—ಋ. ವೇ. 10-8

ನತ್ವಾ ಋಘಾಯಮಾಣಂ ಹಿ ವರ್ಧಮಾನಂ ತು ರೋದಸೀ । ಸಂಪ್ರಾಪ್ನುತಃ ಶ್ರೀಭೂಮೀ ಚ ಸಹಿತೇ ಚಾಪ್ರಸಾದತಃ । —ಋ. ಭಾ.

ವರ್ಧಮಾನಂ–ಸರ್ವಗತಂ —ಋ. ಭಾ. ಟೀ.

೬ 4 ವರ್ಧಯಂತಿ ಯೋಗ್ಯಜೀವಾತ್ಮನಾಂ ದೋಷಾನ್ ಛಿಂದಂತೀತಿ ವಾ ಯೋಗ್ಯ-ಜೀವಾತ್ಮನಃ ಜ್ಞಾನಭಕ್ತ್ಯಾದಿಗುಣೈಃ ಪೂರಯಂತೀತಿ ವಾ ವರ್ಧಾಃ ತತ್ತ್ವಾಭಿಮಾನಿನಃ ದೇವಾಃ । ತಾನ್ ಮಾನಯತೀತಿ ವರ್ಧಮಾನಃ । 'ವರ್ಧ ಛೇದನಪೂರಣಯೋಃ'

೭ ತಮ್ಮ ದೋಷಗಳನ್ನು ಪರಿಹರಿಸಿಕೊಳ್ಳುವ (ಅಥವಾ) ತಮ್ಮನ್ನು ಜ್ಞಾನ ಭಕ್ತ್ಯಾದಿಗುಣಗಳಿಂದ ಪೂರ್ಣರನ್ನಾಗಿ ಮಾಡಿಕೊಳ್ಳುವ ಸಾತ್ತ್ವಿಕಜೀವಾತ್ಮರನ್ನು ಆದರಿಸುವವನು.[1]

೮ ಹಿಂಸಿಸುವ ಅಸುರರಿಗೆ ಬಲವನ್ನು ನೀಡುವವನು ಅಥವಾ ಅವರನ್ನು ನಾಶ ಪಡಿಸುವವನು.[2]

೯ ಇತರರ ಅಜ್ಞಾನವನ್ನು ನಾಶಪಡಿಸುವ ಅಥವಾ ಜ್ಞಾನವನ್ನು ತುಂಬಿಸುವ ಗುರು ಗಳಿಗೆ ಜ್ಞಾನವನ್ನು ನೀಡುವವನು.[3]

೧೦ ಯೋಗ್ಯಜೀವರನ್ನು ಜ್ಞಾನಭಕ್ತ್ಯಾದಿಗಳಿಂದ ಪೂರ್ಣರನ್ನಾಗಿಸುವ ತತ್ತ್ವಾಭಿಮಾನಿ ದೇವತೆಗಳನ್ನು ಸೃಷ್ಟಿಸಿರುವವನು ಅಥವಾ ಅವರಿಗೆ ಅವರವರ ಸ್ವಭಾವಕ್ಕನುಗುಣವಾಗಿ ಅವರ ಸಾಮರ್ಥ್ಯಾದಿಗಳಲ್ಲಿ ಅವಧಿಯನ್ನು ನೀಡಿರುವವನು[4]

---

೭ 1 ವರ್ಧಯಂತಿ ಸ್ವದೋಷಾನ್ ಛಿಂದಂತೀತಿ ವಾ ಜ್ಞಾನಭಕ್ತ್ಯಾದಿಭಿಃ ಸ್ವಾತ್ಮನ ಪೂರಯಂತೀತಿ ವಾ ವರ್ಧಾಃ ಸಾತ್ತ್ವಿಕಾಃ । ತಾನ್ ಮಾನಯತೀತಿ ವರ್ಧಮಾನಃ ।

೮ 2 ವರ್ಧಯಂತಿ ಪರಾನ್ ಛಿಂಧಂತೀತಿ ವರ್ಧಾಃ ಹಿಂಸಾಶೀಲಾಃ ಅಸುರಾಃ । ತೇಷಾಂ ಮಾನಂ ಬಲಂ ನಾಶೋ ವಾ ಯಸ್ಮಾತ್ ಸಃ ವರ್ಧಮಾನಃ। 'ಮಾನಂ ಜ್ಞಾನಂ ಲಯಶ್ಚೈವ ಮರ್ಯಾದಾ ಚೈವ ಕಥ್ಯತೇ । ಉತ್ಪಾದನಂ ಚ ಸಂಖ್ಯಾನಂ ಬಲಂ ಚ ಕ್ವಚಿದುಚ್ಯತೇ' –ಶಬ್ದನಿರ್ಣಯ (ಬೃ. ಉ. ಭಾ. 3-2–5)

೯ 3 ವರ್ಧಯಂತಿ ಛಿಂದಂತಿ ಅಜ್ಞಾನಮಿತಿ ಪೂರಯಂತಿ ಜ್ಞಾನಮಿತಿ ವಾ ವರ್ಧಾಃ ಗುರವಃ । ತೇಷಾಂ ಮಾನಂ ಜ್ಞಾನಂ ಯಸ್ಮಾತ್ಸಃ ವರ್ಧಮಾನಃ ।

೧೦ 4 ವರ್ಧಯಂತಿ ಯೋಗ್ಯಜೀವಾನ್ ಜ್ಞಾನಭಕ್ತ್ಯಾದಿಗುಣೈಃ ಪೂರಯಂತೀತಿ ವರ್ಧಾಃ ತಾತ್ತ್ವಿಕಾಃ ದೇವಾಃ । ತೇಷಾಂ ಮಾನಂ ಉತ್ಪಾದನಂ ಮರ್ಯಾದಾ ವಾ ಯಸ್ಮಾತ್ ಸಃ ವರ್ಧಮಾನಃ ।

## ಜಿಜ್ಞಾಸೆ

[ವ್ಯಾವಹಾರಿಕ ಸತ್ಯ]

ಪ್ರ - ವ್ಯಾವಹಾರಿಕಸತ್ಯ ಪಾರಮಾರ್ಥಿಕಸತ್ಯ ಎಂದು ಸತ್ಯದ ವಿಭಾಗವನ್ನು ಸಿದ್ಧಾಂತದಲ್ಲಿ ನಿರಾಕರಿಸುತ್ತಾರೆ. ಆದರೆ ಪುರಾಣಗಳಲ್ಲಿ ಪ್ರತಿಪಾದಿತಗಳಾದ ರಾಮಕೃಷ್ಣತ್ರಿವಿಕ್ರಮಾದಿ ಭಗವದ್ರೂಪಗಳಲ್ಲಿ ತೋರುವ ಕಾದಾಚಿತ್ಕ ವೃದ್ಧಿಯು ವ್ಯಾವಹಾರಿಕ ಸತ್ಯವೆಂದು ಭಗವಂತನ ಶಾಶ್ವತತ್ವವು ಪಾರಮಾರ್ಥಿಕ ಸತ್ಯವೆಂದೂ ಸಿದ್ಧಾಂತದಲ್ಲಿ ಸ್ವೀಕರಣೀಯವಾಗಿದೆ ಇಲ್ಲವಾದರೆ ರಾಮಕೃಷ್ಣಾದಿಗಳ ಕಾದಾಚಿತ್ಕ ವೃದ್ಧಿಯು ಬ್ರಹ್ಮಜ್ಞಾನೈಕಬಾಧ್ಯವಾಗಿ ಬ್ರಹ್ಮಜ್ಞಾನವು ಉಂಟಾಗುವವರೆಗೆ ವ್ಯಾವಹಾರಿಕವಾಗಿ ಇರಲಾರದು ಅಲ್ಲವೇ?

ಉ - ಬ್ರಹ್ಮಜ್ಞಾನಬಾಧ್ಯತ್ವವು ವ್ಯಾವಹಾರಿಕಸತ್ಯದ ಲಕ್ಷಣವೆಂದು ಇತರ ಮತದವರು ಹೇಳುವದು ಯುಕ್ತವಲ್ಲ ಬ್ರಹ್ಮಜ್ಞಾನಿಗಳಿಗೆ ಇರುವ ಪ್ರಾರಬ್ಧಕರ್ಮವು ಬ್ರಹ್ಮಜ್ಞಾನ ಬಾಧ್ಯವಾಗಿಲ್ಲ. ಆದರೂ ಆ ಕರ್ಮವು ಅವರ ಮತದಲ್ಲಿ ವ್ಯಾವಹಾರಿಕ ಸತ್ಯವಾಗಿದೆ



## ೨೬೩ ವಿವಿಕ್ತಃ

೧ ಜೀವಜಡಾತ್ಮಕ ಪ್ರಪಂಚಕ್ಕಿಂತ ಪ್ರತ್ಯೇಕವಾಗಿ ಇರುವವನು[1]

ಸಕಲಗುಣ ಪರಿಪೂರ್ಣನಾದ, ಸರ್ವದೋಷ ದೂರನಾದ, ಸ್ವತಂತ್ರನಾದ ಭಗವಂತನು ಸರ್ವ ವಿಲಕ್ಷಣನು 'ಸಮಾನನಾಮಕ ಭಗವಂತನು ಸರ್ವಾಧಾರನು ಎಂದು ಪ್ರತಿಜ್ಞೆ ಮಾಡಿ, ಅದರ ಸಮರ್ಥನೆಗೆ ಹೊರಟ ಯಾಜ್ಞವಲ್ಕ್ಯರು—ಭಗವಂತನು ಪರಾಶ್ರಯಳಾದ ಲಕ್ಷ್ಮೀದೇವಿಗಿಂತಲೂ ವಿಲಕ್ಷಣನಾದವನು; ಚತುರ್ಮುಖಾದಿಗಳಿಗಿಂತಲೂ ವಿಲಕ್ಷಣನಾದವನು. ಹೀಗೆ ದುಃಖಾಸ್ಪೃಷ್ಟ ಚೇತನಕ್ಕಿಂತಲೂ, ದುಃಖಸ್ಪೃಷ್ಟಚೇತನರಿಗಿಂತಲೂ ವಿಲಕ್ಷಣನಾದವನು ಹಾಗೆಯೇ ಸಂಸಾರಬದ್ಧ ಚೇತನರಿಗಿಂತಲೂ, ಮುಕ್ತ ಚೇತನರಿಗಿಂತಲೂ ವಿಲಕ್ಷಣನಾದವನು ಹೀಗೆ ಸಕಲ ಚೇತನರಿಗಿಂತಲೇ ವಿಲಕ್ಷಣನೆಂದ ಮೇಲೆ ಜಡಗಳಿಗಿಂತಲೂ ವಿಲಕ್ಷಣ ಎಂಬುದು ಕೈಮುತ್ಯನ್ಯಾಯ ಸಿದ್ಧವಾಗುವುದು[2]

---

೧ 1 ವೇವೇಕ್ತಿ ಸರ್ವಸ್ಮಾತ್ ಪೃಥಗ್ ಭವತೀತಿ ವಿವಿಕ್ತಃ । 'ವಿಜಿರ್ ಪೃಥಗ್‌ಭಾವೇ '

2 ' . . .ಸ ಏಷ ನೇತಿ ನೇತ್ಯಾತ್ಮಾ . ' —ಬೃ ಉ. 5–9–26

ಕುತ ಏವಂ ಸಮಾನನಾಮಕಸ್ಯ ವಿಷ್ಣೋಃ ಸರ್ವಾಧಾರತ್ವಮಿತ್ಯತ ಆಹಸ—ಏಷ ಇತಿ ।
—ಭಾ. ಭೋ.

ಈ ರೀತಿಯಾಗಿ ಭಗವಂತನಿಗೆ ಸರ್ವವಿಲಕ್ಷಣತ್ವವನ್ನು ಸಮರ್ಥಿಸಿ, ಅವನು ಸರ್ವವಿಲಕ್ಷಣನಾಗಿರುವುದರಿಂದಲೇ ಸರ್ವಾಧಾರನಾಗಿರುವನೆಂಬುದಾಗಿ ಅಭಿಪ್ರಾಯಪಟ್ಟಿರುವರು.

ಭಗವಂತನು ಯಾಕೆ ಸರ್ವವಿಲಕ್ಷಣನಾಗಿರುವನು? ಎಂಬುದನ್ನೂ ಯಾಜ್ಞವಲ್ಕ್ಯರು ಸಮರ್ಥಿಸುತ್ತ—ಅವನು ಎಲ್ಲೂ ಯಾವಾಗಲೂ ಯಾರಿಂದಲೂ ಸಮಗ್ರವಾಗಿ ತಿಳಿಯಲ್ಪಡುವುದಿಲ್ಲ ಎಲ್ಲೂ, ಯಾರಿಂದಲೂ ಸ್ವಲ್ಪವೂ ಹಿಂಸಿಸಲ್ಪಡುವುದಿಲ್ಲ ಎಲ್ಲೂ ಯಾವುದೇ ದೋಷದಿಂದ ದೂಷಿತನಾಗುವುದಿಲ್ಲ, ಎಂದೆಂದೂ ಬಂಧನದ ಸಂಪರ್ಕ ಇವನಿಗಿಲ್ಲ ಯಾವತ್ತೂ ಎಲ್ಲೂ ಇವನಿಗೆ ನಾಶವಿಲ್ಲ. ಆದರೆ ಉಳಿದ ಲಕ್ಷ್ಮೀದೇವಿಯೇ ಮೊದಲಾದವರನ್ನೆಲ್ಲ ಭಗವಂತನು ಸಮಗ್ರವಾಗಿಯೇ ತಿಳಿದಿರುವನು. ಲಕ್ಷ್ಮೀದೇವಿ ಹಾಗೂ ಮುಕ್ತಾದಿಗಳಲ್ಲೂ ನಿತ್ಯತ್ವಾದಿ ಧರ್ಮಗಳಿರುವುದಾದರೂ, ಅವು ಭಗವಂತನ ಪ್ರಸಾದದಿಂದಾಗಿ ಅಷ್ಟೇ. ಆದುದರಿಂದ ಸ್ವತಂತ್ರವಾಗಿ ಸರ್ವಾತ್ಮನಾ ಅಗ್ರಾಹ್ಯತ್ವ, ಅಹಿಂಸ್ಯತ್ವಾದಿ ಗುಣಗಳು ಭಗವಂತನ ಅಸಾಧಾರಣ ಗುಣಗಳಾಗಿದ್ದು, ಅಂತಹ ಗುಣಗಳಿಂದಾಗಿ ಅವನು ಸರ್ವವಿಲಕ್ಷಣನೆನಿಸಿರುವನೆಂದು ಪ್ರತಿಪಾದಿಸಿರುವರು.[1]

---

ಸ ಏಷ ಭಗವಾನ್ ನೈವಂ ಶ್ರೀವದನ್ಯಾಶ್ರಯೋ ಹರಿಃ । ನಚ ಬ್ರಹ್ಮಾದಿವದ್ ವಿಷ್ಣು-ರ್ನೈವಾಸೌ ಬದ್ಧವತ್ ಕ್ವಚಿತ್ । ನಚ ಮುಕ್ತವದೀಶೇಶಃ ಕುತ ಏವ ಜಡೋಪಮಃ ।

-ಬೃ. ಉ ಭಾ

ಇತಿ ನೇತ್ಯಸ್ಯಾರ್ಥಃ ಏವಂ ನೇತಿ । ತದೇವ ವಿವೃಣೋತಿ—ಶ್ರೀವದನ್ಯಾಶ್ರಯ ಇತಿ । ದ್ವಿತೀಯಸ್ಯ ನೇತ್ಯಸ್ಯಾರ್ಥೋ ನಚ ಬ್ರಹ್ಮಾದಿವದಿತಿ। ಏವಂ ದುಃಖಸ್ಪೃಷ್ಟತದಸ್ಪೃಷ್ಟ ದ್ವಿವಿಧಚೇತನವಿವಕ್ಷಯಾ ತದ್ವೈಲಕ್ಷಣ್ಯಪ್ರತಿಪಾದಕತಯಾ ನೇತಿ ನೇತಿ ವಾಕ್ಯಂ ವ್ಯಾಖ್ಯಾಯ ಇದಾನೀಂ ಬದ್ಧಮುಕ್ತದ್ವಿವಿಧಚೇತನವಿವಕ್ಷಯಾಽಪಿ ತದ್ವೈಲಕ್ಷಣ್ಯ ಪ್ರತಿಪಾದಕತ್ವೇನ ವ್ಯಾಚಷ್ಟೇ-ನೈವಾಸಾವಿತಿ। ನನ್ವೇವಂ ಚೇತನವೈಲಕ್ಷಣ್ಯಮೇವ ಪ್ರತಿಪಾದಿತಂ ಜಡವೈಲಕ್ಷಣ್ಯಂ ಕುತೋ ನ ಪ್ರತಿಪಾದ್ಯತ ಇತ್ಯತ ಆಹ—ಕುತ ಏವೇತಿ । ಕೈಮುತ್ಯಸಿದ್ಧತ್ವೇನಾನುಕ್ತಿರಿತಿ ಭಾವಃ । -ಭಾ. ಬೋ.

1 ' ..ಅಗೃಹ್ಯೋ ನಹಿ ಗೃಹ್ಯತೇಽಶೀರ್ಯೋ ನಹಿ ಶೀರ್ಯತೇಽಸಂಗೋ ನಹಿ ಸಜ್ಜತೇಽಸಿತೋ ನ ವ್ಯಥತೇ ನ ರಿಷ್ಯತಿ... '

-ಬೃ. ಉ. 5-9-26

ಅಗ್ರಾಹ್ಯೋಽಶೀರ್ಯಸಂಗೋಽಸಾವಸಿತಶ್ಚ ನ ರಿಷ್ಯತಿ । ನಹಿ ಸರ್ವಾತ್ಮನಾ ಕ್ವಾಪಿ ಕೇನಚಿದ್ ಜ್ಞಾಯತೇ ಕ್ವಚಿತ್ । ಸ್ವಲ್ಪೋಽಪಿ ಶೀರ್ಯತೇ ನೈವ ಕಾರಣಾತ್ ಕಾಲತೋಽಪಿ ವಾ । ನ ಲಿಪ್ಯತೇ ಜಗನಾಥಃ ಕ್ವಚಿದ್ ದೋಷೇಣ ಕೇನಚಿತ್ । ಭೂತ-

ಭಗವಂತನು ಸರ್ವಾತ್ಮನಾ ಗ್ರಾಹ್ಯನಾಗುವನು, ಹಿಂಸೆಗೊಳಗಾಗುವನು, ದೋಷದೂಷಿತನಾಗುವನು—ಮುಂತಾದ ಬಗ್ಗೆ ಯಾವುದೇ ಪ್ರಮಾಣ ಇಲ್ಲದಿರುವುದರಿಂದಲೇ, ಅವನು ಸರ್ವಾತ್ಮನಾ ಅಗ್ರಾಹ್ಯ, ಸ್ವಲ್ಪವೂ ಹಿಂಸೆಗೊಳಗಾಗದವನು—ಮುಂತಾದ ಗುಣಗಳನ್ನು ಅವನಲ್ಲಿ ಒಪ್ಪಿಕೊಳ್ಳಲೇಬೇಕು—ಎಂಬುದಾಗಿ ಯಾಜ್ಞವಲ್ಕ್ಯರು ಸಾಧಿಸಿರುವರು ಕೂಡಾ.[1] ಹೀಗೆ ಯಾಜ್ಞವಲ್ಕ್ಯರು ಉಪದೇಶಿಸಿದ ‘ನೇತಿ ನೇತಿ’ ಎಂಬ ವಾಕ್ಯದಿಂದ ಅವ್ಯಕ್ತವೇ ಮೊದಲಾದ ಸಮಸ್ತ ಪ್ರಪಂಚವೂ ಶ್ರೀವಿಷ್ಣುವಿಗಿಂತ ಭಿನ್ನವಾಗಿದೆ, ಎಂದು ತಿಳಿದುಕೊಂಡು ಅವನ ಅನ್ವೇಷಣೆಯಲ್ಲಿ ತೊಡಗಬೇಕೆಂದು

---

ಪೂರ್ವೋ ಭವಿಷ್ಯೋ ವಾ ಬಂಧೋ ನಾಸ್ಯ ಕುತಶ್ಚನ । ನಚ ನಾಶೋಽಭವತ್ ಕ್ವಾಪಿ ನ ಶಿಷ್ಯತಿ ಚ ಕ್ವಚಿತ್ । ಅನ್ಯತ್ ಸರ್ವಂ ಗೃಹೀತಂ ಹಿ ತೇನ ಜ್ಞಾನಾದಿನಾ ಸದಾ । ಅಶೀರ್ಯತ್ವಾದಯೋಽನ್ಯೇಷಾಂ ಸರ್ವೇಷಾಂ ತತ್ಪ್ರಸಾದತಃ । ಅತಸ್ತಸ್ಯಾತಿವೈಷ್ಣವ್ಯಾನ್ನೇತಿ ನೇತ್ಯಾಹ ತಂ ಶ್ರುತಿಃ’ —ಬೃ. ಉ. ಭಾ.

ನನು ನೇತಿ ನೇತೀತ್ಯುಕ್ತವೈಲಕ್ಷಣ್ಯೇ ಅಗ್ರಾಹ್ಯತ್ವಾದಿಕಂ ಹೇತುತ್ವೇನೋಚ್ಯತೇ । ಇದಂ ಚೇದನ್ಯನಿಷ್ಠಂ ತದಾ ಕಥಂ ಹೇತುಃ ಸ್ಯಾದಿತ್ಯತಃ ಅನ್ಯಸ್ಯ ಸರ್ವಾತ್ಮನಾ ಅಗ್ರಾಹ್ಯತ್ವಾದಿಕಂ ನಾಸ್ತೀತ್ಯಾಹ—ಅನ್ಯದಿತಿ । ಅನ್ಯತ್ ರಮಾದಿಕಂ ತೇನ ಪರಮಾತ್ಮನಾ ಗೃಹೀತಮ್ । ಸರ್ವಾತ್ಮನೇತಿ ಶೇಷಃ । ನನು ಸರ್ವಾತ್ಮನಾಽಗ್ರಾಹ್ಯತ್ವಸ್ಯ ವಿಷ್ಣೋರನ್ಯತ್ರಾಭಾವೇಽಪಿ ನಿರುಕ್ತಾಶೀರ್ಯತ್ವಸ್ಯ ರಮಾಯಾಂ ಮುಕ್ತೇಷು ಚ ಸತ್ವಾತ್ । ನಿರುಕ್ತಾನಾಂ ಅಸಂಗತ್ವಾಬದ್ಧತ್ವಾನಾಶ್ಯತ್ವಾನಾಂ ಮುಕ್ತೇಷ್ವಭಾವೇಽಪಿ ರಮಾಯಾಂ ಸತ್ವಾತ್ ಕಥಮಯಂ ತದ್ವೈಲಕ್ಷಣ್ಯೇ ಹೇತುಃ ಸ್ಯಾದಿತ್ಯತ ಆಹ—ಅಶೀರ್ಯತ್ವಾದಯ ಇತಿ । ಶ್ರುತೌ ಸ್ವಾತಂತ್ರ್ಯೇಣ ಅಶೀರ್ಯತ್ವಾದಿಕಮೇವ ವಿವಕ್ಷಿತಮಿತಿ ಭಾವಃ । ತತಶ್ಚಾಗ್ರಾಹ್ಯತ್ವಾದೇರನ್ಯಸಾಧಾರಣ್ಯಾಭಾವೇನ ತಸ್ಯ ವೈಲಕ್ಷಣ್ಯೇ ಹೇತುತ್ವಂ ಯುಜ್ಯತ ಏವೇತ್ಯಾಹ-ಅತ ಇತಿ । —ಭಾ. ಬೋ.

1 ‘ನಹಿ ಗೃಹ್ಯತೇ’ ಇತ್ಯಾದಿನಾ ಗ್ರಹಣಶೀರಣಾದಿಷು ಸರ್ವಪ್ರಮಾಣಾಭಾವಂ ದರ್ಶಯತಿ। —ಬೃ. ಉ. ಭಾ.

* ನನು ಶ್ರುತೌ ಅಗ್ರಾಹ್ಯಃ ಅಶೀರ್ಯ ಇತ್ಯಾದ್ಯುಕ್ತಾರ್ಥೇ ನಹಿ ಗೃಹ್ಯತೇ ನಹಿ ಶೀರ್ಯತ ಇತ್ಯಾದಿನಾ ತದೇವ ತತ್ರ ಹೇತುತ್ವೇನ ಕಥಮುಚ್ಯತ ಇತ್ಯತ ಆಹ-ನಹೀತಿ। ತಥಾಚಾರ್ಥಾಭಾವೇ ಪ್ರಮಾಣಾಭಾವೋ ಹೇತುರುಚ್ಯತ ಇತಿ ನಾನುಪಪತ್ತಿರಿತ್ಯರ್ಥಃ । —ಭಾ. ಬೋ.

'ನಾರಾಯಣ ಶ್ರುತಿ' ಸಂದೇಶಿಸಿದೆ[1]

ಸಕಲ ವೇದಗಳೂ ಮುಖ್ಯವಾಗಿ ಭಗವಂತನನ್ನು ಸರ್ವವಿಲಕ್ಷಣನನ್ನಾಗಿ ತಿಳಿಸಿಕೊಡಲು ಹೊರಟಿವೆ—ಎಂಬುದಾಗಿ ಮಹೋಪನಿಷತ್ತು ಪ್ರತಿಪಾದಿಸಿದೆ[2] ನಾರಾಯಣ ಶ್ರುತಿಯು—ಸಕಲ ವೇದಗಳೂ ಭಗವಂತನು ಎಲ್ಲಕ್ಕಿಂತಲೂ ಭಿನ್ನನಾದವನೆಂಬುದನ್ನು ತಿಳಿಸಿಕೊಡುತ್ತಿವೆ. ಸ್ವಾತಂತ್ರ್ಯ ಸಾರ್ವಜ್ಞ್ಯ ಸರ್ವೈಶ್ವರ್ಯಾದಿ ಗುಣಸ್ವರೂಪಿಯಾದ ಭಗವಂತನ ಸ್ವರೂಪಾತ್ಮಕವಾದುದೇ ಭೇದ ಆದುದರಿಂದ ಅವನ ಗುಣೋತ್ಕರ್ಷಪರಗಳಾದ ವೇದಗಳು ಅವನ ಭೇದಪರಗಳೂ ಆಗಿವೆ 'ನೇತಿ ನೇತಿ' ಮುಂತಾದ ವಾಕ್ಯಗಳು, ಭಗವಂತನು ಇತರ ಪದಾರ್ಥಗಳಿಗಿಂತ ಬೇರ್ಪಟ್ಟಿರುವುದನ್ನು ತಿಳಿಸಿದರೆ, 'ಯಃ ಸರ್ವಜ್ಞಃ' ಇತ್ಯಾದಿ ವೇದವಾಕ್ಯಗಳು ಭಗವಂತನಲ್ಲಿ ಇತರ ವ್ಯಾವರ್ತಕ ಧರ್ಮಗಳನ್ನು ತಿಳಿಸುತ್ತಿವೆ. ಹೀಗೆ ಸಕಲವೇದಗಳಿಗೂ ಭಗವಂತನು ಇತರ ಭಿನ್ನ ಎಂದು ಬೋಧಿಸುವುದರಲ್ಲೇ ತಾತ್ಪರ್ಯ—ಎಂದು ಸಮರ್ಥಿಸಿದೆ[3]

ಯಾವಾತನು ಭಗವಂತನನ್ನು ಹೆಜ್ಜೆ ಹೆಜ್ಜೆಗೆ ಜೀವಾತ್ಮರಿಗಿಂತ ಭಿನ್ನನನ್ನಾಗಿ ಉಪಪಾದಿಸುವನೋ, ಶ್ರೀಹರಿಗೆ ಅವನಿಗಿಂತ ಅಧಿಕ ಪ್ರಿಯನಾದವನು ಮತ್ತೊಬ್ಬನಿಲ್ಲ[4] ಆದ್ದರಿಂದಲೇ ಋಷಭ

---

1 ಅವ್ಯಕ್ತಾದಿಸಮಸ್ತಂ ತು ನೇತಿ ನೇತ್ಯಾದಿವಾಕ್ಯತಃ । ಬೋಧೇನ್ನೈವ ಪೃಥಗ್ ವಿಷ್ಣೋಃ ಕೃತ್ವಾ ವ್ಯಕ್ತಃ ಸ ಕೇಶವಃ —ನಾರಾಯಣಶ್ರುತಿಃ (ಗೀ. 15-4)

2 ಸರ್ವೋತ್ತಮಂ ಸರ್ವದೋಷವ್ಯಪೇತಂ ಗುಣೈರಶೇಷೈಃ ಪೂರ್ಣಮನ್ಯಂ ಸಮಸ್ತಾತ್ । ವೈಲಕ್ಷಣ್ಯಾದ್ ಜ್ಞಾಪಯಿತುಂ ಪ್ರವೃತ್ತಾಃ ಸರ್ವೇ ವೇದಾ ಮುಖ್ಯತೋ ನೈವ ಚಾನ್ಯತ್ —ಮಹೋಪನಿಷತ್ (ವಿ. ತ ವಿ)

3 ಸರ್ವೇ ವೇದಾ ಹರೇರ್ಭೇದಂ ಸರ್ವಸ್ಮಾದ್ ಜ್ಞಾಪಯಂತಿ ಹಿ । ಭೇದಃ ಸ್ವಾತಂತ್ರ್ಯ-ಸಾರ್ವಜ್ಞ್ಯಸರ್ವೈಶ್ವರ್ಯಾದಿಕಶ್ಚ ಸಃ । ಸ್ವರೂಪಮೇವ ಭೇದೋಕ್ತಿಯಂ ವ್ಯಾವೃತ್ತಿಶ್ಚ ಸ್ವರೂಪತಾ । ಸರ್ವವ್ಯಾವೃತ್ತಯೋ ಯಸ್ಮಾತ್ ಸ್ವಶಬ್ದೋಕ್ತಿಯಂ ಪ್ರಯುಜ್ಯತೇ । ಸರ್ವವ್ಯಾವೃತ್ತತಾಮೇವ ನೇತಿ ನೇತ್ಯಾದಿಕಾ ಶ್ರುತಿಃ । ವಿಷ್ಣೋರತೋ ವದೇದನ್ಯಾ ಅಪಿ ಸರ್ವಾ ನ ಸಂಶಯಃ ' —ನಾರಾಯಣ ಶ್ರುತಿಃ (ವಿ. ತ. ವಿ.)

4 ಉಪಪಾದಯೇತ್ ಪರಾತ್ಮಾನಂ ಜೀವೇಭ್ಯೋ ಯಃ ಪದೇ ಪದೇ ಭೇದೇನ್ನೈವ ನವೈ ತಸ್ಮಾತ್ ಪ್ರಿಯೋ ವಿಷ್ಣೋಸ್ತು ಕಶ್ಚನ । —ಪಾದ್ಮ (ಭಾಗ ತಾ ನಿ. 5-5-26)

* 'ಯೋ ಹರೇಶ್ಚೈವ ಜೀವಾನಾಂ ಭೇದವಕ್ತಾ ಹರೇಃ ಪ್ರಿಯಃ' —ಭಾಗ. ತಾ. ನಿ. 5-5-26

ನಾಮಕ ಭಗವಂತನು ತನ್ನ ಮಕ್ಕಳನ್ನು ಕುರಿತು ಹೀಗೆ ಉಪದೇಶಿಸಿರುವನು—ಚರಾಚರ ಸಕಲವೂ ನನಗೆ ಅಧಿಷ್ಠಾನವಾಗಿರುವ ಪ್ರಯುಕ್ತ ಸಮ್ಮಾನಾರ್ಹವಾದುದು. ಹೀಗೆ ಸಮ್ಮಾನಿಸುತ್ತಿರುವಾಗ ಅಧಿಷ್ಠಾನಗಳಾಗಿರುವವುಗಳಿಗೂ ಅವುಗಳಿಗಿಂತ ಪ್ರತ್ಯೇಕನಾಗಿರುವ ನನಗೂ ಇರುವ ಪ್ರತ್ಯೇಕತೆಯನ್ನು ಅಥವಾ ಪ್ರತ್ಯೇಕನಾದ ನನ್ನನ್ನು ಕ್ಷಣ ಕ್ಷಣದಲ್ಲಿ ನೀವು ಅರಿತುಕೊಳ್ಳುವುದು ನನಗೆ ಸಲ್ಲಿಸುವ ಮಹಾಪೂಜೆ ಎನಿಸಿದೆ—ಎಂದು.[1]

೨ ಪವಿತ್ರನಾಗಿರುವವನು.[2]

ಭಗವಂತನ ಸ್ವರೂಪವು ಪವಿತ್ರವಾದುದು ಅದರ ಸಂಪರ್ಕದಿಂದಾಗಿ ಪಾಪಿಯು ತನ್ನ ಪಾಪಗಳನ್ನು ಕಳೆದುಕೊಳ್ಳುವನು. ಅಂತಹ ಪವಿತ್ರನಾದ, ಶುದ್ಧನಾದ ಭಗವಂತನಿಂದಾಗಿ ನಾವೂ ಪವಿತ್ರರಾಗಿ ಸಂಸಾರವನ್ನು ದಾಟೋಣ—ಎಂದು ಮಹಾನಾರಾಯಣೋಪನಿಷತ್ತಿನಲ್ಲಿ ಹಾರೈಸಲಾಗಿದೆ.[3]

೩ ವಿವೇಕಿಯಾಗಿರುವವನು[4]

---

1 ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿಶ್ಚರಾಣಿ ಭೂತಾನಿ ಸುತಾ ಧ್ರುವಾಣಿ ।
ಸಂಭಾವಿತವ್ಯಾನಿ ಪದೇಪದೇ ವೋ ವಿವಿಕ್ತದೃಷ್ಟಿಸ್ತದುತಾರ್ಹಣಂ ಮೇ ॥
—ಭಾಗ. 5-5-26.

ಚರಾಣಿ ಧ್ರುವಾಣಿ ಸ್ಥಿರಾಣಿ ಚೇತಿ ಸರ್ವಾಣಿ ಭೂತಾನಿ ಮದಾವಾಸಸ್ಥಾನಭೂತಾನೀತಿ ಹೇ ಸುತಾಃ, ಭವದ್ಭಿಃ ಸದಾ ಸಮ್ಮಾನನಾಮರ್ಹಂತಿ । ತಥಾ ಚ ಪದೇಪದೇ ಪ್ರತಿಕ್ಷಣಂ ಯುಷ್ಮಾಕಂ ಯಾ ವಿವಿಕ್ತದೃಷ್ಟಿಃ ಅಧಿಷ್ಠಾನಭೂತಾನಾಂ ಭೂತಾನಾಂ ಸಕಾಶಾತ್ ಅಧಿಷ್ಠಿತಸ್ಯೇಶ್ವರಸ್ಯ ಭೇದದರ್ಶನಂ ತದೇವ ಮಮ ಮಹದರ್ಹಣಮ್ । ಜೀವೇಭ್ಯೋ ವಿವಿಕ್ತಸ್ಯ ಈಶ್ವರಸ್ಯ ದೃಷ್ಟಿರ್ವಾ । ಜೀವೇಶ್ವರಯೋರ್ವಿವಿಕ್ತತಯಾ ದೃಷ್ಟಿರ್ವಾ ।
—ಬ ಗೋ. (ಭಾ. ಟಿ).

೨ 2 'ವಿವಿಕ್ತೌ ಪೂತವಿಜನೌ .....' —ಅ. ಕೋ.

3 'ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ। ತೇನ ಪವಿತ್ರೇಣ ಶುದ್ಧೇನ ಪೂತಾ ಅತಿಪಾಪ್ಮಾನಮರಾತಿಂ ತರೇಮ'
—ಮಹಾನಾರಾಯಣೋಪನಿಷತ್

೩ 4 ವಿವಿಕ್ತಂ ತ್ರಿಷ್ವಸಂಪೃಕ್ತೇ ರಹಃ ಪೂತವಿವೇಕಿಷು' —ಮೇದಿನೀ ।

ಅನಾದಿ ಸಂಸಾರದಿಂದ ಭಗವಂತನೆಡೆಗೆ ಸಾಗಲು ಪರಾಪರತತ್ತ್ವ ವಿಷಯಕವಾದ ವಿವೇಕವು ಅತ್ಯಾವಶ್ಯಕ ಎಂದು ಸಂದೇಶಿಸಿದ ಗೀತಾಚಾರ್ಯನು, ಇಂತಹ ವಿವೇಕವನ್ನು ಪಡೆಯಲು ಭಗವಂತನನ್ನೆ ಶರಣಾಗತನಾಗಬೇಕೆಂದು ಸಂದೇಶಿಸಿರುವನು.[1] ಹೀಗೆ ಉಳಿದವರಿಗೆ ಪರಾಪರತತ್ತ್ವವಿಷಯಕ ವಿವೇಕವನ್ನು ಅನುಗ್ರಹಿಸಬಲ್ಲ ಭಗವಂತನು ಸ್ವತಃ ವಿವೇಕಿ ಆಗಿಯೇ ಇರುವನೆಂಬುದು ಸುತರಾಂ ಸಿದ್ಧ.

## ಜಿಜ್ಞಾಸೆ

### [ವಿವಿಕ್ತತ್ವವೇ ಶ್ರುತಿಸಾಧ್ಯ]

ಪ್ರ.- 'ಸ ವಾ ಏಷಃ ನೇತಿನೇತಿ' ಶ್ರುತಿಯು ಆತ್ಮಮಿಥ್ಯಾತ್ವವನ್ನು ಹೇಳುತ್ತದೋ ಅಥವಾ ಪ್ರಪಂಚ ಮಿಥ್ಯಾತ್ವವನ್ನು ಹೇಳುತ್ತದೋ? ಆತ್ಮ ಮಿಥ್ಯಾತ್ವವನ್ನು ಹೇಳುವದಿಲ್ಲ. ಆತ್ಮನು ಶಾಸ್ತ್ರೈಕ ಸಮಧಿಗಮ್ಯನು. ಅಂತಹ ಶಾಸ್ತ್ರವು ಸ್ವಬೋಧಿತನಾದ ಆತ್ಮನನ್ನು ಮಿಥ್ಯಾ ಎಂದು ಹೇಳಿದರೆ 'ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ' ಎಂಬ ನ್ಯಾಯ ವಿಷಯವಾಗುತ್ತದೆ. ಕೆಸರನ್ನು ಬೇಕು ಬೇಕು ಎಂದು ಮುಟ್ಟಿದವನು ಆ ಕೈಯನ್ನು ತೊಳೆಯುತ್ತಾನೆ ಕೆಸರನ್ನು ಮುಟ್ಟಿ ಕೈ ತೊಳೆಯತಕ್ಕವನು ಕೆಸರನ್ನು ಮುಟ್ಟಬಾರದು. ಅದರಂತೆ ಆತ್ಮ ಮಿಥ್ಯಾತ್ವವನ್ನು ಶ್ರುತಿಯು ಹೇಳುವದಾದರೆ ಆತ್ಮನು ಇದ್ದಾನೆಂದು ಬೋಧಿಸಬಾರದು. ಆದುದರಿಂದ ಈ ಶ್ರುತಿಯು ಪ್ರಪಂಚಮಿಥ್ಯಾತ್ವವನ್ನು ಹೇಳುತ್ತದೆಂದು ಪರಭಾಷ್ಯ ಕಾರರು ತಮ್ಮ ಭಾಷ್ಯದಲ್ಲಿ ಬರೆದಿದ್ದಾರೆ ಆದುದರಿಂದ ಈ ಶ್ರುತಿಯು ಆತ್ಮನಿಗೆ ಸರ್ವ ವಿಲಕ್ಷಣತ್ವವನ್ನು ಹೇಳುತ್ತದೆಂದು ನಿರ್ಣಯಿಸುವದು ಹೇಗೆ?

ಉ - ಈ ಶ್ರುತಿಯು ಪ್ರಪಂಚಮಿಥ್ಯಾತ್ವವನ್ನು ಹೇಳುವದಿಲ್ಲ ಪರಭಾಷ್ಯಕಾರರು ಈ ಶ್ರುತಿಯು ಪ್ರಪಂಚಮಿಥ್ಯಾತ್ವವನ್ನು ಹೇಳುತ್ತದೆಂದು ಹೇಳಿದ್ದು ಸರಿ ಅಲ್ಲ ಈ ಶ್ರುತಿಯು ಸ್ವರ್ಗ ನರಕಾದಿಗಳನ್ನು ಬೋಧಿಸಿದೆ. ತಾನು ಬೋಧಿಸಿದ ಸ್ವರ್ಗನರಕಾದಿಗಳು ಸುಳ್ಳು ಎಂದು ತಾನು ಹೇಳಿದರೆ 'ಪ್ರಕ್ಷಾಲನಾದ್ಧಿ' ಎಂಬ ನ್ಯಾಯ ವಿಷಯತ್ವವು ಪ್ರಾಪ್ತವಾಗುವದಿಲ್ಲವೆ? ಆದುದರಿಂದ ಈ ಶ್ರುತಿಯು ಪರಮಾತ್ಮನಿಗೆ ಸರ್ವವಿಲಕ್ಷಣತ್ವರೂಪವಿವಿಕ್ತತ್ವವನ್ನೇ ಹೇಳುತ್ತದೆ.



---

1 ಅಶ್ವತ್ಥಮೇನಂ ಸುವಿರೂಢಮೂಲಂ ಅಸಂಗಶಸ್ತ್ರೇಣ ದೃಢೇನ ಛಿತ್ವಾ ॥ ತತಃ ಪರಂ ತತ್ ಪರಿಮಾರ್ಗಿತವ್ಯಂ . ತಮೇವ ಚಾದ್ಯಂ ಪುರುಷಂ ಪ್ರಪದ್ಯೇ .

-ಗೀ. 15-3,4

'ಅವ್ಯಕ್ತಾದಿಸಮಸ್ತಂ ತು ನೇತಿನೇತ್ಯಾದಿವಾಕ್ಯತಃ । ಬೋಧೇನೈವ ಪೃಥಗ್ ವಿಷ್ಣೋಃ ಕೃತ್ವಾ ಮೃಗ್ಯಃ ಸ ಕೇಶವಃ। ತಮೇವಾದ್ಯಂ ಪ್ರಪದ್ಯೇತ . '

-ನಾರಾಯಣಶ್ರುತಿ (ಗೀ. ತಾ.)

ಜಗದ್ವೃಕ್ಷಛೇದನಾರ್ಥಮಿತಿ ಯೋಜ್ಯಮ್।

-ಗೀ. ವಿ.

## ೨೬೪ ಶ್ರುತಿಸಾಗರಃ

೧ (ಅನಂತ ಶ್ರುತಿಗಳನ್ನು ಪಡೆದಿದ್ದು) ಅಂತಹ ಶ್ರುತಿಗಳಿಂದ ಸಾಗರದಂತೆ ಇರುವವನು.[1]

೨ ನದಿಗಳಿಗೆಲ್ಲ ಸಾಗರದಂತೆ ಶ್ರುತಿಗಳಿಗೆ ನೆಲೆ ಆಗಿರುವವನು.[2]

೩ ನದಿಗಳಿಗೆಲ್ಲ ಸಾಗರದಂತೆ ಶ್ರುತ್ಯಭಿಮಾನಿದೇವತೆಗಳಿಗೆಲ್ಲ ನೆಲೆ ಆಗಿರುವವನು.[3]

ಭಗವಂತನ ಬುದ್ಧಿಯಲ್ಲಿ ಅನಂತ ವೇದಗಳೂ ಯಾವಾಗಲೂ ನೆಲೆಗೊಂಡಿವೆ.[4] ಸಮಸ್ತ ವೇದಗಳೂ ನಿತ್ಯವೂ ಅವನ ಕಂಠದಿಂದ ಹೊರಹೊಮ್ಮುತ್ತಿರುವವು.[5] ಶ್ರುತಿಗಳು ಸ್ವರೂಪತಃ

---

೧ 1 ಅನಂತಶ್ರುತಿಸಂಪನ್ನತ್ವಾತ್ ಶ್ರುತಿಭಿಃ ಸಾಗರ ಇವ ಶ್ರುತಿಸಾಗರಃ । ಪರಿಪೂರ್ಣಗುಣೈಃ ಅರ್ಣವ ಇವ ಇತ್ಯರ್ಥೇ 'ಪರಿಪೂರ್ಣಗುಣಾರ್ಣವಃ' ಇತಿ ಯಥಾ ಸ್ತೂಯತೇ ತದ್ವತ್ । ತತ್ರ ಯಥಾ ಗುಣಾನಾಮನಂತತ್ವಸೂಚನಾಯಾರ್ಣವೋಪಮಾ, ತಥಾಽತ್ರಾಪಿ ಭಗವತಿ ವಿದ್ಯಮಾನಾನಾಂ ಶ್ರುತೀನಾಮನಂತತ್ವದ್ಯೋತನಾಯ ಸಾಗರೋಪಮಾ ।

೨ 2 ಶ್ರುತಯಃ ಸಾಗರ ಇವಾತ್ರ ನಿಧೀಯಂತ ಇತಿ ಶ್ರುತಿಸಾಗರಃ।

—ಶಾಂ. ಭಾ.

ನದೀನಾಂ ಸಾಗರ ಇವ ಶ್ರುತೀನಾಂ ಸಾಗರಃ, ಸರ್ವಾಸಾಂ ಶ್ರುತೀನಾಮನೇಕಶಾಖಾಭಿನ್ನಾನಾಮತ್ರ ನಿಧಾನಾದಿತಿ ವ್ಯಾಚಷ್ಟೇ—ಶ್ರುತಯಃ ಸಾಗರ ಇವಾತ್ರೇತಿ ।

—ಶಾಂ. ಭಾ ವಿವೃತಿಃ

೩ 3 'ಶ್ರುತೀನಾಂ' ಇತ್ಯಭಿಮಾನಿವ್ಯಪದೇಶ ಇತ್ಯಂಗೀಕೃತ್ಯ ಶ್ರುತ್ಯಭಿಮಾನಿನಾಂ ದೇವಾನಾಂ ಸಾಗರ ಇವ ಶ್ರುತಿಸಾಗರಃ ।

4 ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ ।

—ಬ್ರಹ್ಮಾಂಡ (ವಿ. ತ. ನಿ.)

5 'ಸಂತತಂ ಚಿಂತಯೇತ್ಕಂಠಂ.... ವೈಕುಂಠಸ್ಯಾಖಿಲಾ ವೇದಾಃ ಉದ್ಗೀರ್ಯಂತೇಽನಿಶಂ ಯತಃ' —ದ್ವಾ. ಸ್ತೋ.

ಅವನಲ್ಲಿ ನೆಲೆಸಿರುವಂತೆ, ಮುಖ್ಯವಾಗಿ ಅವನನ್ನೇ ಪ್ರತಿಪಾದಿಸುತ್ತ ಪ್ರತಿಪಾದಕಗಳಾಗಿಯೂ ಅವನಲ್ಲೇ ನೆಲೆಗೊಂಡಿವೆ.[1] ಪ್ರಲಯ ಕಾಲದ ಕೊನೆಯ ಎಂಟನೇ ಒಂದು ಭಾಗ ಬಿಟ್ಟು ಉಳಿದ ಅವಧಿಯಲ್ಲಂತೂ ವೇದಗಳು ಬರೇ ಭಗವಂತನ ಸ್ತುತಿಯಲ್ಲೇ ಮಗ್ನಗಳಾಗಿದ್ದು ಅವನಲ್ಲೇ ನೆಲೆಗೊಂಡಿರುವವು[2] ಹಾಗೆಯೇ ಶ್ರುತ್ಯಭಿಮಾನಿ ದೇವತೆಗಳಾದ ಲಕ್ಷ್ಮೀದೇವಿಯೇ ಮೊದಲಾದವರೆಲ್ಲರೂ ಭಗವಂತನಲ್ಲೇ ನೆಲೆಗೊಂಡಿರುವರು.

ಳ ಶ್ರುತಿರೂಪವಾದ ಸಾಗರಕ್ಕೆ ಒಡೆಯನಾಗಿರುವವನು[3]

ಅನಂತ ಶಬ್ದಗಳನ್ನು ಹೊಂದಿರುವ ಪ್ರಯುಕ್ತ ಹಾಗೂ ಭಗವಂತನ ಅನಂತ ಗುಣಗಳನ್ನು ಪ್ರತಿಪಾದಿಸುತ್ತಿರುವ ಪ್ರಯುಕ್ತ ಶ್ರುತಿಗಳು ಸಾಗರದಂತೆ ಇರುವವು ಅಂತಹ ಶ್ರುತಿಗಳಿಗೆ ಮುಖ್ಯ ನೆಲೆ ಆಗಿರುವ ಪ್ರಯುಕ್ತ, ಸೃಷ್ಟಿಯ ಆದಿಯಲ್ಲಿ ಹಯಗ್ರೀವ ರೂಪದಿಂದ ಚತುರ್ಮುಖನಿಗೆ ಉಪದೇಶಿಸಿ ಮುಂದೆ ವೇದವಿದ್ಯೆಯು ಪ್ರಚಾರಕ್ಕೆ ಬರುವಂತೆ ಅನುಗ್ರಹಿಸಿರುವ ಪ್ರಯುಕ್ತ, ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿರುವ ಪ್ರಯುಕ್ತ, ಭಗವಂತನು ಅವುಗಳಿಗೆ ಒಡೆಯ ಎನಿಸಿರುವನು[4]

ಱ ವೇದವನ್ನು (ಚತುರ್ಮುಖಾದಿಗಳಿಗೆ) ಉಪದೇಶಿಸುವವನು, ಮತ್ತು (ಸರ್ವದಾ) ಉಚ್ಚರಿಸುತ್ತಿರುವವನು.[5]

---

1 'ನಾರಾಯಣಪರಾ ವೇದಾಃ .. ..' -ಭಾಗ. 2-5-14
ವೇದಪ್ರತಿಪಾದ್ಯೇಷು ಸ ಪರ ಇತ್ಯಾದಿ ।

2 ಲಯಸ್ಯ ತ್ವಷ್ಟಮೋ ಭಾಗಃ ಸೃಷ್ಟಿಕಾಲ ಉದಾಹೃತಃ । ತತ್ರೈವ ವೇದಸಂಚಾರೋ ಹ್ಯನ್ಯದಾ ಸ್ತುತಿಮಾತ್ರಕಾಃ । -ನಾರದೀಯ (ಭಾಗ. ತಾ. ನಿ. 10-94-14)

ಳ 3 ಶ್ರುತಿಲಕ್ಷಣಃ ಸಾಗರೋ ಯಸ್ಯೇತಿ । -ಸ. ಸಂ.

4 ಯಶ್ಛಂದಸಾಮೃಷಭೋ ವಿಶ್ವರೂಪಃ । -ತೈ. ಉ. 1-7

ಯೋ ವಿಶ್ವರೂಪೋ ಭಗವಾಂಶ್ಛಂದಸಾಮಧಿಪೋ ಹರಿಃ ।
-ತೈ. ಉ. ಭಾ.

ಱ 5 ಶ್ರುತಿಂ ವೇದಂ ಸನೋತೀತಿ ಶ್ರುತಿಸಃ, (ಆ ಸಮ್ಯಕ್) ಗೃಣಾತೀತಿ (ಶಬ್ದಂ ಕರೋತೀತಿ) ಗರಃ । ಶ್ರುತಿಸಶ್ಚಾಸೌ ಗರಶ್ಚ (ಆಗರಶ್ಚ) ಶ್ರುತಿಸಾಗರಃ ।
-ಸ. ಸಂ

ಭಗವಂತನು ವೇದಗಳನ್ನು ಸರ್ವದಾ ಉಚ್ಚರಿಸುತ್ತಿರುವನು ಹಾಗೂ ಚತುರ್ಮುಖಾದಿಗಳಿಗೆ ಉಪದೇಶಿಸುವನು

೬ ಶ್ರುತಿಗಳ ಸಾರ ಆಗಿರುವವನು ಮತ್ತು ಗೋವರ್ಧನ ಮುಂತಾದ ಪರ್ವತಗಳ ಮೂಲಕ ಕ್ರೀಡಿಸಿರುವವನು.[1]

೭ ನದಿಗಳಿಗೆ ಸಾಗರದಂತೆ ಸಕಲ ಸ್ತುತಿಗಳಿಗೂ ನೆಲೆ ಆಗಿರುವವನು.[2]

ಆಕಾಶದಿಂದ ಬಿದ್ದ ನೀರು ಸಮುದ್ರಕ್ಕೆ ಹೋಗಿ ಸೇರುವಂತೆ ಎಲ್ಲರಿಗೆ ಸಲ್ಲಿಸಿದ ಪ್ರಣಾಮವೂ ಕೇಶವನಿಗೇ ತಲುಪುವುದು[3]—ಎಂದಿರುವಂತೆ ಎಲ್ಲರಿಗೆ ಸಲ್ಲಿಸುವ ಸ್ತುತಿಯೂ ಭಗವಂತನಿಗೇ ಸೇರುವುದು

೮ ಶಾಸ್ತ್ರದಲ್ಲಿ ಪ್ರಸಿದ್ಧ ಆಗಿರುವವನು ಮತ್ತು ವಿಷವನ್ನು ಮುಖ್ಯವಾಗಿ ಕುಡಿದಿರುವ ವಾಯುದೇವ, ಹಾಗೂ ಗೌಣವಾಗಿ ಕುಡಿದಿರುವ ರುದ್ರದೇವನಿಗೆ ಒಡೆಯನಾಗಿರುವವನು.[4]

೯ (ಅನಂತ ಶ್ರೋತ್ರೇಂದ್ರಿಯಗಳನ್ನು ಹೊಂದಿದ್ದು) ಅಂತಹ ಶ್ರೋತ್ರೇಂದ್ರಿಯಗಳಿಂದ ಸಾಗರದಂತೆ ಇರುವವನು.[5]

---

೬ 1 ಶ್ರುತಿಸಾರತ್ವಾಚ್ಚ ಶ್ರುತಿಸೋಽಗ್ಯೈಗೋವರ್ಧನಾದಿಭಿಃ ರಮಂತ ಇತ್ಯಗರಃ । ಶ್ರುತಿಸಶ್ಚಾಸಾವಗರಶ್ಚ ಶ್ರುತಿಸಾಗರಃ । -ಸ. ಸಂ.

೭ 2 'ಶ್ರು ಶ್ರವಣೇ' ಇತ್ಯಸ್ಮಾತ್ ಭಾವೇ ಕ್ತಿನ್ ಶ್ರುತಿಃ ಶ್ರವಣಂ ಗುಣಾನಾಂ ಶ್ರವಣಂ ಸ್ತುತಿರಿತಿ ಯಾವತ್, ಶ್ರುತಿಭಿಃ ಸಾಗರ ಇತಿ ಶ್ರುತಿಸಾಗರಃ ।
—ಶೀ. ಚಂ.

3 ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ ।
ಸರ್ವದೇವನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ ।

೮ 4 ಶ್ರೂಯತೇ ಇತಿ ಶ್ರುತಿಃ, ಗರೇಣ ವಿಷೇಣ ಸಹಿತೌ ಸಗರೌ ರುದ್ರವಾಯೂ । ತಯೋಃ ಅಯಂ ಸಾಗರಃ । -ವಿ. ರಾ. ಆಧಾರೇಣ

೯ 5 ಶ್ರುತಿಭಿಃ ಶ್ರೋತ್ರೇಂದ್ರಿಯೈಃ ಸಾಗರ ಇವ ಶ್ರುತಿಸಾಗರಃ ।

ಭಗವಂತನ ವಿರಾಟ್‌ರೂಪ ಸಾವಿರಾರು ಶ್ರೋತ್ರೇಂದ್ರಿಯಗಳನ್ನು ಹೊಂದಿದೆ. ಅಲ್ಲದೆ, ಎಲ್ಲೆಡೆ ಇರುವ ಭಗವಂತನ ಪುಟ್ಟ ಪುಟ್ಟ ರೂಪಗಳೂ ಶ್ರೋತ್ರೇಂದ್ರಿಯವನ್ನು ಹೊಂದಿದ್ದು, ಆ ಪ್ರಯುಕ್ತವೂ ಭಗವಂತನ ಶ್ರೋತ್ರೇಂದ್ರಿಯಗಳು ಅನಂತ ಇದಲ್ಲದೆ, ಎಲ್ಲರ ಶ್ರೋತ್ರೇಂದ್ರಿಯಗಳಿಗೂ ಮುಖ್ಯವಾಗಿ ಭಗವಂತನೇ ಒಡೆಯನಾಗಿರುವುದರಿಂದ, ಆ ಪ್ರಯುಕ್ತವೂ ಅವನಿಗೆ ಅನಂತ ಶ್ರೋತ್ರೇಂದ್ರಿಯಗಳು ಹೀಗೆ ಭಗವಂತನು ಅನಂತ ಶ್ರೋತ್ರೇಂದ್ರಿಯಗಳನ್ನು ಹೊಂದಿರುವವನು. ಅವನು ಆದ್ದರಿಂದಲೇ ಶ್ರೋತ್ರೇಂದ್ರಿಯಗಳಿಂದ ಸಾಗರನೇ ಆಗಿರುವನು

## ಜಿಜ್ಞಾಸೆ

### [ಪ್ರಲಯಕಾಲದಲ್ಲಿ ವೇದೋಚ್ಚಾರಣೆ]

ಪ್ರ - ಪ್ರಲಯಕಾಲದಲ್ಲಿ ಪರಮಾತ್ಮನು ವೇದಗಳನ್ನು ಉಚ್ಚರಿಸುತ್ತಾನೆಂದು ಹೇಳುವದಾದರೆ ಪ್ರಲಯಕಾಲದಲ್ಲಿ ಧ್ವನ್ಯಾತ್ಮಕ ಶಬ್ದವನ್ನು, ಆ ಶಬ್ದಕ್ಕೆ ಉಪದಾನಕಾರಣವಾದ ಭೂತಾಕಾಶವನ್ನು ಒಪ್ಪಬೇಕಾದೀತು ಶಬ್ದೋಚ್ಚಾರಣವು ಧ್ವನಿಗೆ ನಿಮಿತ್ತಕಾರಣವಾಗಿದೆ ನಿಮಿತ್ತಕಾರಣಮಾತ್ರದಿಂದ ಉಪದಾನ ಕಾರಣವಿಲ್ಲದಿದ್ದರೂ ಕಾರ್ಯವು ಹುಟ್ಟಲಾರದು ಪ್ರಲಯಕಾಲದಲ್ಲಿ ಭೂತಾಕಾಶವೆಂಬ ಕಾರ್ಯದ್ರವ್ಯವು ಇಲ್ಲ 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಯು ಭೂತಾಕಾಶವು ಪರಮಾತ್ಮನಿಂದ ಸೃಷ್ಟಿಕಾಲದಲ್ಲಿ ಹುಟ್ಟಿತು ಎಂದು ಹೇಳುತ್ತದೆ ಇದನ್ನು ಹೇಗೆ ಕೂಡಿಸಬೇಕು

ಉ.- ಪ್ರಲಯ ಕಾಲದಲ್ಲಿ ಭೂತಾಕಾಶವು ಸ್ಥೂಲರೂಪದಿಂದ ಇಲ್ಲ. ಸೂಕ್ಷ್ಮರೂಪದಿಂದ ಉಂಟು, ಅದೇ ಪ್ರಲಯಕಾಲದ ವೇದೋಚ್ಚಾರಣಜನ್ಯಧ್ವನಿಗೆ ಉಪಾದಾನ ಕಾರಣವಾಗುತ್ತದೆ ಆದುದರಿಂದ ಪರಮಾತ್ಮನು ಪ್ರಲಯಕಾಲದಲ್ಲಿ ವೇದಗಳ ಉಚ್ಚಾರಣವನ್ನು ಮಾಡುತ್ತಾನೆಂಬುದು ಕೂಡುತ್ತದೆ.



**ಸುಭುಜೋ ದುರ್ಧರೋ ವಾಗ್ಮೀ ಮಹೇಂದ್ರೋ ವಸುದೋ ವಸುಃ ।**
**ನೈಕರೂಪೋ ಬೃಹದ್ರೂಪಃ ಶಿಪಿವಿಷ್ಟಃ ಪ್ರಕಾಶನಃ ॥ ೭೯ ॥**

೭೩೫ ಸುಭುಜಃ

೧ ಶೋಭನಗಳಾದ, ಸುಂದರಗಳಾದ ತೋಳುಗಳು ಉಳ್ಳವನು.[1]

---

೧ 1 ಶೋಭನಾಃ ಭುಜಾಃ ಯಸ್ಯ ಸಃ ಸುಭುಜಃ ।

೨ ಆನಂದ ರೂಪಗಳಾದ ತೋಳುಗಳು ಉಳ್ಳವನು.[1]

ಭಗವಂತನ ತೋಳುಗಳೂ ಅವನ ಸ್ವರೂಪಾತ್ಮಕಗಳೇ. 'ಚತುರ್ವೇದಶಿಖೆ'ಯು ಭಗವಂತನೇ ಅವನ ಬಲಗೈಯೂ, ಎಡಗೈಯೂ ಆಗಿರುವನೆಂದಿದ್ದರೆ,[2] 'ಬೃಹತ್ಸಂಹಿತೆ'ಯು 'ಪ್ರದ್ಯುಮ್ನನು ಭಗವಂತನ ಬಲಗೈಯೂ, ಅನಿರುದ್ಧನು ಅವನ ಎಡಗೈಯೂ ಆಗಿರುವನೆಂದು ತಿಳಿಸಿದೆ.[3] ಹೀಗೆ ಭಗವಂತನ ಸ್ವರೂಪಾತ್ಮಕಗಳೇ ಆಗಿರುವ ಅವನ ಭುಜಗಳು ಅವನಂತೆಯೇ ಗುಣಪೂರ್ಣಗಳು ನಿರ್ದುಷ್ಟಗಳು' ಜ್ಞಾನಾನಂದಾತ್ಮಕಗಳು[4] ಆದ್ದರಿಂದಲೇ ಶೋಭನಗಳು

ಭಗವಂತನ ನಾಲ್ಕು ಭುಜಗಳು ಪುಷ್ಟವಾದವು ಹಾಗೂ ದುಂಡಗಾಗಿ ಇರುವವು. ಯಾವಾಗಲೂ ಜಗದ್ರಕ್ಷಣೆಯಲ್ಲೇ ತೊಡಗಿರುವ ಅವು ಶಿಷ್ಟರಕ್ಷಣೆ ಹಾಗೂ ದುಷ್ಟ ಶಿಕ್ಷೆ ಇವುಗಳಿಗೆ ಸಂಕೇತವಾಗಿ ಶಂಖ, ಚಕ್ರ, ಗದಾ ಹಾಗೂ ಪದ್ಮ—ಎಂಬ ನಾಲ್ಕು ಆಯುಧಗಳನ್ನು ಧರಿಸಿಕೊಂಡಿವೆ. ಹೀಗೆ ಉಪಾಸಕರಿಂದ ಧ್ಯಾನಿಸಲು ಯೋಗ್ಯವಾದವುಗಳಿವು—ಎಂಬುದಾಗಿ ಶ್ರೀಮದಾಚಾರ್ಯರು ಸ್ತುತಿಸಿರುವರು[5]

೩ ಚೆನ್ನಾಗಿ ಭೋಗಿಸುವವನು.[6]

---

೨ 1 'ಸ್ವಿತ್ಯಾನಂದ ಸಮುದ್ದಿಷ್ಟಃ. . ..' (ಬೃ. ಉ. ಭಾ. 7-7-2) ಇತ್ಯಾನಂದರೂಪತ್ವಾತ್ ಸು ಭುಜಾಃ ಯಸ್ಯ ಸಃ ಸುಭುಜಃ ।

2 'ಸ ಶಿರಃ ಸ ದಕ್ಷಿಣಃ ಪಕ್ಷಃ ಸ ಉತ್ತರಃ ಪಕ್ಷಃ. .'
-ಚತುರ್ವೇದಶಿಖಾ (ಬ್ರ. ಸೂ. ಭಾ. 1-1-15)

3 'ಶಿರೋ ನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವ ಚ । ಪ್ರದ್ಯುಮ್ನಶ್ಚಾನಿರುದ್ಧಶ್ಚ.. '
-ಬೃಹತ್ಸಂಹಿತಾ (ಬ್ರ. ಸೂ. ಭಾ. 1-1-15)

4 ಸಜ್ಜ್ಞಾನಾನಂದಶೀರ್ಷೋಽಸೌ ಸ ಜ್ಞಾನಾನಂದಬಾಹುಕಃ ..ಏವಂಭೂತೋ ಮಹಾವಿಷ್ಣುಃ ' । -ವಾರಾಹ (ಈ. 1-8)

5 ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ ।
ಪೀನವೃತ್ತಾ ಜಗದ್ರಕ್ಷಾ ಕೇವಲೋದ್ಯೋಗಿನೋಽನಿಶಮ್ ॥
-ದ್ವಾ. ಸ್ತೋ.

6 ಸುಷ್ಠು ಭುಂಕ್ತೆ ಇತಿ ಸುಭುಜಃ ।

೪ ಆನಂದವನ್ನು ಭೋಗಿಸುವವನು.[1]

ಭಗವಂತನು ಗುಣಪೂರ್ಣನಾದ ತನ್ನ ಸ್ವರೂಪವನ್ನು ಯಾವಾಗಲೂ,[2] ಪ್ರಲಯ ಕಾಲದಲ್ಲೂ ಅನುಭವಿಸುತ್ತಲೇ ಇರುವನು.[3] ಅಲ್ಲದೆ ಜೀವಾತ್ಮರು ತಮ್ಮ ತಮ್ಮ ಇಂದ್ರಿಯಗಳ ಮೂಲಕ ವಿಷಯ ಪದಾರ್ಥಗಳನ್ನು ಭೋಗಿಸುವಾಗ, ಆ ಇಂದ್ರಿಯಗಳನ್ನು ಅಧಿಷ್ಠಾನವನ್ನಾಗಿಸಿಕೊಂಡು ವಿಷಯ ಪದಾರ್ಥಗಳ ಸಾರಭಾಗವನ್ನಷ್ಟೇ ಅನುಭವಿಸುವನು[4]

೫ (ಸೃಷ್ಟಿಕಾಲದಲ್ಲಿ ಜಗತ್ತನ್ನು) ಸೃಷ್ಟಿಸುವವನು ಮತ್ತು (ಸಂಹಾರ ಕಾಲದಲ್ಲಿ) ಭಕ್ಷಿಸುವವನು[5]

---

೪ 1 ಸು ಆನಂದಂ ಭುಂಕ್ತೆ ಇತಿ ಸುಭುಜಃ ।

2 '. ಸಾಕ್ಷಾದಪರೋಕ್ಷಾದ್ ಬ್ರಹ್ಮ ' -ಬೃ. ಉ. 5-5-1

ನಿತ್ಯಮಾತ್ಮಪ್ರಸಾದೇನ ಪೂರ್ಣಸರ್ವಗುಣಾತ್ಮಕಮ್ । ಪಶ್ಯನ್ನನುಭವತ್ಯೇವ ಸ್ವಂ ರೂಪಂ ಕೇಶವಃ ಪ್ರಭುಃ । ಸಾಕ್ಷಾದೇವಾಪರೋಕ್ಷತ್ವಾತ್ ಸ ವಿಷ್ಣುರೇವ ತತಃ ಸ್ಮೃತಃ । ಸಾಕ್ಷಾಚ್ಛಬ್ದಃ ಸ್ವತಂತ್ರತ್ವಮಪರೋಕ್ಷಸ್ತ್ವನಾವೃತಿಮ್ । ಅದನಂ ಭೋಗ ಉದ್ದಿಷ್ಟ-ಸ್ತಸ್ಮಾತ್ ವಿಷ್ಣುಸ್ತಥಾ ಸ್ಮೃತಃ -ಬೃಹತ್ಸ್ಮೃತಿ (ಬೃ ಉ। ಭಾ )

3 ' .ನಾನ್ಯತ್ ಕಿಂಚನ ಮಿಷತ್ . ' -ಐ. ಉ. 2-3 1-1

ಉನ್ಮೇಷೋ ಗುಣಸಂಪೂರ್ತೇರಿಂದ್ರಿಯಾನುಭವಃ ಸ್ಮೃತಃ । ತದೇವ ಮಿಷಣಂ ನಾಮ ಸದ್ರೂಪಂ ಮಿನುತೇ ಯತಃ । ಮಿಷಚ್ಚ ನಾನ್ಯದ್ ವಿಷ್ಣೋರ್ಹಿ ಕಿಮುತೋನ್ಮೇಷ-ದಿಷ್ಯತೇ । ಉಚ್ಚೈರ್ವಿರ್ಮಿಷನ್ ಹಿ ಭಗವಾನ್ ಸರ್ವದೈವ ಜನಾರ್ದನಃ

-ಸತ್ತತ್ತ್ವ (ಐ. ಉ. ಭಾ.)

4 ...ಅತ್ರ ಭುಂಕ್ತೇ ಹೃಷೀಕೈರ್ವಿಷಯಂ ಸಾರಭುಂ ಯತಃ

-ಭಾಗ. 4-23-64

೫ 5 ಸವತಿ ಸೃಷ್ಟಿಕಾಲೇ ಜಗತ್ ಪ್ರಸೂತ ಇತಿ ಸುಃ । 'ಷು ಪ್ರಸವೈಶ್ವರ್ಯಯೋಃ' । ಭುಂಕ್ತೇ ಪ್ರಲಯಕಾಲೇ ಜಗತ್ ಭಕ್ಷಯತೀತಿ ಭುಜಃ । ಸುಶ್ಚಾಸೌ ಭುಜಶ್ಚ ಸುಭುಜಃ ।

೬ (ಸ್ಥಿತಿಕಾಲದಲ್ಲಿ ಜಗತ್ತನ್ನು) ಚೆನ್ನಾಗಿ ಪಾಲಿಸುವವನು.[1]

೭ ಸರ್ವಸಮರ್ಥನಾಗಿರುವವನು ಮತ್ತು ಸರ್ವವನ್ನೂ ರಕ್ಷಿಸುವವನು.[2]

ಋಗ್ವೇದದಲ್ಲಿ—ಅಶ್ವಿನ್‌ನಾಮಕ ಭಗವದ್ರೂಪಗಳು ಬಹು ವಿಶ್ವದ ರಕ್ಷಕಗಳು ಹಾಗೂ ಪ್ರಲಯ ಕಾಲದಲ್ಲಿ ಬಹು ಭಕ್ಷಿಸುವವುಗಳು ಎಂಬ ಅಭಿಪ್ರಾಯದಲ್ಲಿ 'ಪುರುಭುಜೌ' ಎಂದು ವಿಶೇಷಿಸಲಾಗಿದೆ.[3]

೮ ಸುಖವನ್ನು ಭೋಗಿಸುವಂತೆ ಮಾಡುವವನು.[4]

ಜೀವಾತ್ಮರು ಸಂಸಾರಾವಸ್ಥೆಯಲ್ಲಿ ವಿಷಯ ಪದಾರ್ಥಗಳಿಂದ ಸುಖವನ್ನು ಭೋಗಿಸುವಂತೆ ಮಾಡುವವನೂ,[5] ಮೋಕ್ಷಾವಸ್ಥೆಯಲ್ಲಿ ಸ್ವರೂಪ ಸುಖವನ್ನು ಭೋಗಿಸುವಂತೆ ಮಾಡುವವನೂ ಭಗವಂತನೇ.[6]

೯ ಚೆನ್ನಾಗಿ ಇರುವ ಜ್ಞಾನಿಗಳಲ್ಲಿ ಅಭಿವ್ಯಕ್ತನಾಗುವವನು.[7]

---

೬ 1 ಸುಷ್ಠು ಭುನಕ್ತಿ ಜಗತ್ ಪಾಲಯತೀತಿ ಸುಭುಜಃ । 'ಭುಜಪಾಲನಾಭ್ಯವಹಾರಯೋಃ' ।

೭ 2 ಸವತಿ ಈಶ್ವರೋ ಭವತೀತಿ ಸುಃ । 'ಷು ಪ್ರಸವೈಶ್ವರ್ಯಯೋಃ' । ಭುನಕ್ತಿ ಸರ್ವಂ ಪಾಲಯತೀತಿ ಭುಜಃ । ಸುಶ್ಚಾಸೌ ಭುಜಶ್ಚ ಸುಭುಜಃ ।

3 'ಅಶ್ವಿನಾ.. ಪುರುಭುಜಾ ' -ಋ. ವೇ. 3-1
'...ಬಹುಗೋಪೌ ಬಹುಭುಜೌ . ಅಶ್ವಿನೌ' -ಋ. ವೇ. ಭಾ.

೮ 4 ಸು ಸುಖಂ ಭೋಜಯತೀತಿ ಸುಭುಜಃ । -ಸ. ಸಂ

5 'ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ' -ಗೀತಾ. 13-21

6 ಯಂ ಪ್ರಾಪ್ಯ ತೇ ನಿಜಾನಂದಮಾಪ್ನುವಂತಿ ಸ ಕೇಶವಃ ।
ತಂ ಪ್ರಾಪ್ಯ ರಮತೇ ಮುಕ್ತಃ ಸ್ತ್ರೀಭಿರ್ಯಾನೈಶ್ಚ ಬಂಧುಭಿಃ ॥
-ಸಾಮಸಂಹಿತಾ (ಛಾಂ. ಉ. ಭಾ. 8-4-2)

೯ 7 ಸುಷ್ಠು ಭವಂತೀತಿ ಸುಭುವಃ ಜ್ಞಾನಿನಃ, ತೇಷು ಜಾಯತೇ ಅಭಿವ್ಯಜ್ಯತ ಇತಿ ಸುಭುಜಃ ।

೧೦ (ಅಸುರರ ವಿಷಯದಲ್ಲಿ) ಅಧಿಕವಾಗಿ ಕುಟಿಲನಾಗಿ ಇರುವವನು[1]

## ಜಿಜ್ಞಾಸೆ

### [ಆನಂದಕ್ಕೆ ಭುಜಾಕಾರ]

ಪ್ರ – ಪರಮಾತ್ಮನ ಭುಜವು ಆನಂದರೂಪವು ಆಗುವದು ಹೇಗೆ? ಆನಂದವು ದ್ರವ್ಯವು ಅಲ್ಲ. ಅದು ಒಂದು ಗುಣ ಗುಣಕ್ಕೆ ಆಕಾರವು ಇಲ್ಲ. ಆದುದರಿಂದ ಸಾಕಾರ ಭುಜವು ಆನಂದ ರೂಪವೆಂದು ಹೇಗೆ ಹೇಳುವದು?

ಉ:– 'ಯಥಾ ಶೌಕ್ಲ್ಯಾದಿಕಂ ರೂಪಂ ಗೋರ್ಭವತ್ಯೇವ ಸರ್ವಥಾ' ಎಂದು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಿರುತ್ತದೆ. ಅಂದರೆ ಗೋವಿನಲ್ಲಿ ಶುಕ್ಲರೂಪವು ಇದೆ ಅದು ಖಂಡಿತವು ಅಲ್ಲ ಅಂದರೆ ಅದು ಯಾವದಾಶ್ರಯಭಾವಿ. ಗೋವು ಇರುವಷ್ಟು ಕಾಲ ಇರುತ್ತದೆ ಆದುದರಿಂದ ಅದು ಗೋಸ್ವರೂಪ. ಆ ಗೋಸ್ವರೂಪವಾದ, ವಿಶೇಷ ಬಲದಿಂದ ಗುಣರೂಪವೂ ಆದ ಆ ಶುಕ್ಲರೂಪವು ಗೋವಿನ ಆಕಾರವುಳ್ಳದ್ದು. ಹೇಗೆ ಗುಣವಾಗಿ ಇರುವ ಶುಕ್ಲರೂಪವು ಗೋಸ್ವರೂಪವಾದುದರಿಂದ ಸಾಕಾರವಾಗಿರುತ್ತದೋ ಹಾಗೆಯೇ ಪರಮಾತ್ಮನ ಭುಜಸ್ವರೂಪವಾಗಿದ್ದು ವಿಶೇಷಬಲದಿಂದ ಗುಣವೂ ಆಗಿರುವ ಆನಂದವು ಭುಜಾಕಾರ ವುಳ್ಳದ್ದು ಆಗಬಹುದು.



೨೬೬ ದುರ್ಧರಃ

೧ ಯಾರಿಂದಲೂ ಧರಿಸಲು ಅಶಕ್ಯನಾಗಿರುವವನು[2]

ಸಕಲಾಧಾರವಾದ ಪ್ರಕೃತಿಗೂ ಶ್ರೀವಿಷ್ಣುವು ಆಧಾರನಾಗಿದ್ದು, ಅಂತಹ ವಿಷ್ಣುವನ್ನು ಧರಿಸುವವರು ಯಾರೂ ಇಲ್ಲ—ಎಂದು ಪಾದ್ಮ ಪ್ರತಿಪಾದಿಸಿದೆ.[3] ಭಗವದನುಗ್ರಹದಿಂದ 'ಗರಿಮಾ' ಎಂಬ ಸಿದ್ಧಿ ಪಡೆದವನೇ ಮೂರು ಲೋಕಗಳಿಗೆ ಸಮಾನವಾದ ಭಾರವನ್ನು ಹೊಂದುವನೆಂದ

---

೧೦ 1 ಅಸುರೇಷು ಸುಷ್ಠು ಭುಜತಿ ಕುಟಿಲೋ ಭವತೀತಿ ಸುಭುಜಃ । 'ಭುಜ ಕೌಟಿಲ್ಯೇ' ।

೧ 2 ನ ಕೇನಾಪಿ ಧಾತಯಿತುಂ ಶಕ್ಯತ ಇತಿ ದುರ್ಧರಃ ।

3 ಆಧಾರಃ ಪ್ರಕೃತೇರ್ವಿಷ್ಣುರ್ನಾಧಾರಸ್ತು ಹರೇಃ ಕ್ವಚಿತ್ ।

–ಪಾದ್ಮ (ಭಾಗ. ತಾ. ನಿ. 11-22-25)

ಮೇಲೆ, ಗರಿಮಾಸಿದ್ಧಿಯನ್ನು ಸ್ವಾಭಾವಿಕವಾಗಿ ಹೊಂದಿರುವ[1] ಭಗವಂತನು ಅದೆಷ್ಟು ಭಾರವುಳ್ಳವನಾಗಿದ್ದಿರಬಹುದು! ಶಿಲೆಯೇ ಮೊದಲಾದ ಭಾರದ ಪದಾರ್ಥಗಳಲ್ಲಿ ತನ್ನ ಸನ್ನಿಧಾನದಿಂದಲೇ ಭಾರವನ್ನು ಉಂಟುಮಾಡುವ[2] ಭಗವಂತನು, ಸ್ವತಃ ಅದೆಷ್ಟು ಭಾರವುಳ್ಳವನಾಗಿದ್ದಿರಬಹುದು! ಆದ್ದರಿಂದಲೇ ಅವನು ಇತರರಿಗೆ ಅಧಾರ್ಯ ಎನಿಸಿರುವನು ಅವನ ಅನುಗ್ರಹದಿಂದಾಗಿ, ಅಚಿಂತ್ಯ ಶಕ್ತಿಯಿಂದಾಗಿಯಷ್ಟೇ ಗರುಡ, ಮುಖ್ಯಪ್ರಾಣಾದಿಗಳು ಭಗವಂತನನ್ನು ಹೊತ್ತುಕೊಳ್ಳುವರು ವಾಮನಾವತಾರದಲ್ಲಿ ಭಗವಂತನು ತನ್ನ ದುರ್ಧರತ್ವವನ್ನು ಸ್ವಲ್ಪ ಪ್ರಮಾಣದಲ್ಲಿ ಅಭಿವ್ಯಕ್ತಗೊಳಿಸಿರುವನು ಆದ್ದರಿಂದಲೇ ಅವನು ಬಲಿಯ ಯಜ್ಞ ನಡೆಯುತ್ತಿದ್ದ ನರ್ಮದಾ ತೀರಕ್ಕೆ ಸಾಗುವಾಗ ತನ್ನ ಭಾರದಿಂದ ಹೆಜ್ಜೆ ಹೆಜ್ಜೆಗೆ ಭೂಮಿಯನ್ನು ಬಾಗಿಸುತ್ತ ನಡೆಯುತ್ತಿದ್ದನು[3]

೨ (ಧ್ಯಾನಕಾಲದಲ್ಲಿ) ಬಹಳ ಕಷ್ಟದಿಂದ (ಮನಸ್ಸಲ್ಲಿ) ಧರಿಸಿಕೊಳ್ಳಲು ಯೋಗ್ಯನಾದವನು[4]

ಭಗವಂತನನ್ನು ಮನಸ್ಸಲ್ಲಿ ಒಮ್ಮೆಲೇ ಧರಿಸಿಕೊಳ್ಳುವುದು ಕಷ್ಟಸಾಧ್ಯವಾಗಿರುವುದರಿಂದಲೇ ಮನಸ್ಸು ಭಗವಂತನ ಸಮಗ್ರ ರೂಪದ ಧಾರಣೆಯಿಂದ ವಿಚಲಿತವಾಯಿತೆಂದರೆ ಅವನ ಒಂದೊಂದೇ ಅಂಗವನ್ನು ಸ್ಮರಿಸುತ್ತ ಕ್ರಮೇಣ ಸಮಗ್ರ ರೂಪದ ಸ್ಮರಣೆಯಲ್ಲಿ ಮನಸ್ಸು ಸುದೃಢವಾಯಿತೆಂದಾಗ ಮತ್ತೆ ಅವನ ಸಮಗ್ರ ರೂಪವನ್ನೇ ಧರಿಸಿಕೊಳ್ಳಬೇಕೆಂದು 'ಧ್ಯಾನಯೋಗ' ಪ್ರತಿಪಾದಿಸಿದೆ.[5]

---

1 ತ್ರಿಲೋಕಸಮಭಾರಸ್ತು ಗರಿಮಾ ಚಾಪಿ ಕೀರ್ತಿತಾ । . ಸಿದ್ಧಯಃ ಪರಿಪೂರ್ಣಾಸ್ತು ವಿಷ್ಣೋರೇಕಸ್ಯ ನಾನ್ಯಗಾಃ । –ಐಶ್ವರ್ಯ (ಭಾಗ. ತಾ. ನಿ. 11-15-5)

2 ಶಿಲಾದ್ಯೇಷು ಸ್ಥಿತೋ ವಿಷ್ಣುರ್ಭಾರದಾರ್ಢ್ಯಾದಿಕಾರಣಮ್ ।
-ಐ. ಉ ಭಾ. 2-2-2-2

3 ಜಗಾಮ ತತ್ರಾಖಿಲಸಾರಸಂಭೃತೋ ಭಾರೇಣ ಗಾಂ ಸನ್ನಮಯನ್ ಪದೇ ಪದೇ ॥
–ಭಾಗ. 8-18-20

೨ 4 ದುಃಖೇನ ಧ್ಯಾನಕಾಲೇ ಧಾರ್ಯತ ಇತಿ ದುರ್ಧರಃ ।

5 ' . ಯದಾ ತು ವಿಚಲೇತ್ ತತಃ। ಪ್ರತ್ಯಂಗಂ ಧಾರಣಂ ಕುರ್ಯಾನ್ಮನೋ ಯಾವತ್ ಸಮಗ್ರಗಮ್ । ಪ್ರತ್ಯಂಗಾಭ್ಯಾಸತೋ ಯಾವತ್ ಸಮಗ್ರೇ ಸುಸ್ಥಿರಂ ಮನಃ । ತದಾ ಪುನಃ ಸಮಗ್ರಂ ತಂ ಧಾರಯೇದ್ ಯತ್ನತೋ ಬುಧಃ'
–ಧ್ಯಾನಯೋಗ (ಭಾಗ. ತಾ. ನಿ. 11-14-44)

(ದುಃಖಕ್ಕೆ ಯೋಗ್ಯರಾಗಿದ್ದ) ದುಃಖಧಾರಿಗಳಾಗಿರುವ ಅಸುರರನ್ನು ನಾಶ ಪಡಿಸುವವನು.[1]

[ಅರ್ಥವಿಶೇಷಗಳನ್ನು ೭೧೪ನೆಯ 'ದುರ್ಧರಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

ಜಿಜ್ಞಾಸೆ

[ಪರಮಾತ್ಮನ ಅನುಗ್ರಹಬಲ]

ಪ್ರ - 'ತದವ್ಯಕ್ತಮಾಹ ಹಿ' ಎಂಬ ಬ್ರಹ್ಮಸೂತ್ರದಲ್ಲಿ ಪರಮಾತ್ಮನು ಅವ್ಯಕ್ತನು ಎಂದು ಸಮರ್ಥನ ಮಾಡಲಾಗಿದೆ ಆದುದರಿಂದ ಪರಮಾತ್ಮನ ಸಾಕ್ಷಾತ್ಕಾರವು ಯಾರಿಗೂ ಆಗುವದಿಲ್ಲ ಎಂದು ವಿಶಿಷ್ಟಾದ್ವೈತದ ಸಿದ್ಧಾಂತ ಇದು ಯುಕ್ತವೇ?

ಉ - ಪರಮಾತ್ಮನು ದುರ್ಧರನು ಆದರೂ ಶ್ರೀಕೃಷ್ಣಪರಮಾತ್ಮನನ್ನು ವಸುದೇವನು ಹೊತ್ತು ಕೊಂಡು ಮಥುರೆಯಿಂದ ನಂದಗೋಕುಲಕ್ಕೆ ಹೋದನು ಇದು ಹೇಗೆ? ಇದನ್ನು ವಿಶಿಷ್ಟಾದ್ವೈತ ಸಿದ್ಧಾಂತದವರು ಹೇಗೆ ಕೂಡಿಸುತ್ತಾರೆ? ಪರಮಾತ್ಮನ ಅನುಗ್ರಹ ಬಲ ದಿಂದ ವಸುದೇವನು ಹೊತ್ತುಕೊಂಡು ಹೋದನು ಎಂದು ಹೇಳುವದಾದರೆ ಅದರಂತೆ ಅವ್ಯಕ್ತನಾದ ಪರಮಾತ್ಮನು ಅನುಗ್ರಹಿಸಿದರೆ ಸಾಧಕರು ಅವನ ಸಾಕ್ಷಾತ್ಕಾರವನ್ನು ಹೊಂದುತ್ತಾರೆಂದು ಹೇಳಬಹುದಲ್ಲ? ಆದುದರಿಂದ ಪರಮಾತ್ಮನ ಸಾಕ್ಷಾತ್ಕಾರವು ಇಲ್ಲ ಎಂಬ ವಿಶಿಷ್ಟಾದ್ವೈತ ಸಿದ್ಧಾಂತವು ಯುಕ್ತವಲ್ಲ.

❦

## ೨೬೭ ವಾಗ್ಮೀ

೧ ಪ್ರಶಸ್ತವಾದ ಮಾತು ಉಳ್ಳವನು[2]

ಭಗವಂತನು ಪ್ರತಿಯೊಬ್ಬರ ಸುಬುದ್ಧಿಗೆ ಹಾಗೂ ತನ್ಮೂಲಕ ಹೊರಡುವ ಒಳ್ಳೆಯ ಮಾತಿಗೆ ಪ್ರೇರಕನಾಗಿರುವವನು.[3] ಹೀಗೆ ಉಳಿದವರ ಬುದ್ಧಿ ಮತ್ತು ಮಾತುಗಳ ಪ್ರೇರಕನಾದ

---

೬ 1 'ದುಃಖಂ ದುರಿತಿ ಸಂಪ್ರೋಕ್ತಂ.. ..' (ಗೀ. ತಾ. 14-16) ಇತಿ ದುಃ ದುಃಖಂ ಧಧ- ತೀತಿ ದುರ್ಧಾಃ ಅಸುರಾಃ ತಾನ್ ರೇಹಯತಿ ನಾಶಯತೀತಿ ದುರ್ಧರಃ 'ರೀಙ್ ಕ್ಷಯೇ' ಣಿಜಂತಃ ।

೧ 2 ಪ್ರಶಸ್ತಾ ವಾಗಸ್ಯೇತಿ ವಾಗ್ಮೀ ।

3 ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಮ್ । -ಋ. ವೇ. 3-11

ಅವನು ಒಳ್ಳೆಯ ಬುದ್ಧಿಮೂಲಕನಾಗಿ ಹೊರಡುವ ಒಳ್ಳೆಯ ಮಾತನ್ನು ಹೊಂದಿರುವನೆಂಬ ರ್ಥ ಸುತರಾಂ ಸಿದ್ಧ ಅಲ್ಲದೆ ಅವನು ತನ್ನ ಅವತಾರಗಳಲ್ಲಿ ತನ್ನ ವಾಗ್ಮಿತ್ವವನ್ನು ಅಭಿವ್ಯಕ್ತಗೊಳಿಸಿರುವನು

ರಾಮಾವತಾರದಲ್ಲಿ ಪ್ರಕಟಗೊಳಿಸಿರುವ ವಾಗ್ಮಿತ್ವವನ್ನು ವಾಲ್ಮೀಕಿ ಋಷಿಗಳು ಬೇರೆ ಬೇರೆ ರೀತಿಯಾಗಿ ನಿರೂಪಿಸಿರುವರು 'ಮಧುರವಾಗಿ ಮಾತನಾಡುವವನು, ಪ್ರಿಯವಾಗಿ ಮಾತನಾಡುವವನು ಸತ್ಯವಾದಿ[1] ವಾಚಸ್ಪತಿಯಂತೆ ಒಂದರ ಮೇಲೆ ಮತ್ತೊಂದು ಯುಕ್ತಿಯನ್ನು ಪ್ರಯೋಗಿಸುವವನು[2] ಮೊದಲು ಮಂದಹಾಸ ಬೀರಿ ಬಳಿಕ ಮಾತನಾಡುವವನು[3]'—ಹೀಗೆಲ್ಲ ವಾಲ್ಮೀಕಿ ಋಷಿಗಳು ಶ್ರೀರಾಮಚಂದ್ರನ ವಾಗ್ಮಿತ್ವದ ಬೇರೆ ಬೇರೆ ಅಂಶಗಳನ್ನು ಉಲ್ಲೇಖಿಸಿರುವರು

ಕೃಷ್ಣಾವತಾರದಲ್ಲಿ ಭಗವಂತನು ತನ್ನ ವಾಗ್ಮಿತ್ವವನ್ನು ಚೆನ್ನಾಗಿ ಪ್ರಕಟಗೊಳಿಸಿರುವನು. ಗೋಪಿಕಾಸ್ತ್ರೀಯರು ಶ್ರೀಕೃಷ್ಣನ ವಾಗ್ಮಿತ್ವದ ಅನೇಕ ಅಂಶಗಳನ್ನು ಉಲ್ಲೇಖಿಸಿ ಕೊಂಡಾಡಿರುವರು—ಶ್ರೀಕೃಷ್ಣನ ಮಾತು ಸುಂದರ ವಾಕ್ಯಗಳನ್ನೊಳಗೊಂಡಿದ್ದು ಕೇಳಲು ಇಂಪಾದದ್ದು ಅರ್ಥಗಾಂಭೀರ್ಯವನ್ನು ಹೊಂದಿದ್ದು, ವಿದ್ವಾಂಸರೂ ಅದರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಬೇಕಾದಂತಹದ್ದು[4] ಶ್ರೀಕೃಷ್ಣನು ಪಾಂಡವರ ರಾಯಭಾರಿಯಾಗಿ ಕೌರವಸಭೆಯಲ್ಲಿ ಪಾಂಡವರ ಪರವಾಗಿ ಮಾತನಾಡುವಾಗ ತನ್ನ ವಾಗ್ಮಿತ್ವವನ್ನು ಅಧಿಕ ಪ್ರಮಾಣದಲ್ಲಿ ಅಭಿವ್ಯಕ್ತಗೊಳಿಸಿರುವನು. ಶ್ರೀಕೃಷ್ಣನ ಆಗಿನ ಮಾತಿನ ವೈಖರಿಗೆ ಸಭೆಯಲ್ಲಿದ್ದ ಎಲ್ಲರೂ ಸ್ತಬ್ಧರಾಗುವರು. ಮನಸ್ಸಲ್ಲೇ ಅವನ

---

'ಸುವಾಚಾಂ ಪ್ರೇರಕಾ ಸದಾ । ಸುಬುದ್ಧಿಜ್ಞಾಪಿಕಾ ಸೈವ. ..'
-ಋ. ವೇ. ಭಾ

1 ಬುದ್ಧಿಮಾನ್ ಮಧುರಾಭಾಷೀ ಪೂರ್ವಭಾಷೀ ಪ್ರಿಯಂವದಃ ।
-ವಾ. ರಾ. ಅಯೋಧ್ಯಾ 1-13

* ಪ್ರಿಯವಾದೀ ಚ ಭೂತಾನಾಂ ಸತ್ಯವಾದೀ ಚ ರಾಘವಃ ।
-ವಾ. ರಾ ಅಯೋಧ್ಯಾ 2-32

2 ಉತ್ತರೋತ್ತರಯುಕ್ತೀನಾಂ ವಕ್ತಾ ವಾಚಸ್ಪತಿರ್ಯಥಾ ।
-ವಾ ರಾ. ಅಯೋಧ್ಯಾ 1-17

* ಉತ್ತರೋತ್ತರಯುಕ್ತಾ ಚ ವಕ್ತಾ ವಾಚಸ್ಪತಿರ್ಯಥಾ ।
-ವಾ. ರಾ. ಅಯೋಧ್ಯಾ 2-43

3 ಸ್ಮಿತಪೂರ್ವಾಭಿಲಾಷೀ ಚ . । -ವಾ. ರಾ. ಅಯೋಧ್ಯಾ 2-42

4 ಮಧುರಯಾ ಗಿರಾ ವಲ್ಗುವಾಕ್ಯಯಾ ಬುಧಮನೋಜ್ಞಯಾ ಪುಷ್ಕರೇಕ್ಷಣ ।
-ಭಾಗ. 10-31 8

ಮಾತನ್ನು ಮೆಚ್ಚಿಕೊಳ್ಳುವರು. ಆದರಿಂದ ರೋಮಾಂಚಗೊಳ್ಳುವರು ಯಾರೂ ಏನೂ ಮಾತನಾಡಲೂ ಉತ್ಸಾಹ ತೋರಿಸುವುದಿಲ್ಲ[1] ಇಂತಹ ವಾಗ್ಮಿತ್ವ ಶ್ರೀಕೃಷ್ಣನದು!

ಪ್ರಶಸ್ತಗಳಾದ ವೇದಾದಿ ವಚನಗಳಿಗೆ ಒಡೆಯನಾಗಿರುವವನು[2]

ವೇದಗಳು ನಿತ್ಯಗಳೇ ಆಗಿರುವದಾದರೂ, ನಿತ್ಯಗಳಾಗಿರುವಂತೆ ಅವುಗಳನ್ನು ರಕ್ಷಿಸುತ್ತಿರುವವನು ಭಗವಂತನು ಚತುರ್ಮುಖಾದಿಗಳಿಗೆ ಅವುಗಳನ್ನು ಉಪದೇಶಿಸಿರುವವನೂ ಅವನೇ. ಅವುಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿರುವವನೂ ಭಗವಂತನೇ ವೇದಗಳಿಗೆ ಪೋಷಕಗಳಾದ ಮಹಾಭಾರತ, ಪುರಾಣಾದಿಗಳನ್ನು ಭಗವಂತನೇ ರಚಿಸಿರುವವನು

ಹೀಗೆ ವೇದಾದಿ ಸಚ್ಛಾಸ್ತ್ರಗಳ ಮಾತುಗಳನ್ನು ನಿಯಮಿಸುತ್ತಿದ್ದು, ಅವುಗಳಿಗೆ ಸ್ವಾಮಿ ಆಗಿರುವವನು ಭಗವಂತನು.

೩ ವೇದವಚನದಿಂದಲೇ ತಿಳಿಯಲ್ಪಡುವವನು[3]

೪ ಸರಸ್ವತಿ ಮತ್ತು ಲಕ್ಷ್ಮೀದೇವಿಯರನ್ನು ಸೊಸೆ ಹಾಗೂ ಪತ್ನಿಯರನ್ನಾಗಿ ಹೊಂದಿರುವವನು[4]

೫ ಪ್ರಶಸ್ತಗಳಾದ ಮಾತು ಮಂತ್ರ ಜ್ಞಾನ ಇವುಗಳನ್ನು ಎಲ್ಲರಿಗಿಂತ ಅತಿಶಯವಾಗಿ

---

1 ತದ್ವಾಕ್ಯಂ ಪಾರ್ಥಿವಾಃ ಸರ್ವೇ ಹೃದಯೈಃ ಸಮಪೂಜಯನ್ । ನ ತತ್ರ ಕಶ್ಚಿದ್ವಕ್ತುಂ ಹಿ ವಾಚಂ ಪ್ರಾಕ್ರಾಮದಗ್ರತಃ । ಸ್ತಿಮಿತಾ ಹೃಷ್ಟರೋಮಾಣ ಆಸನ್ ಸರ್ವೇ ಸಭಾಸದಃ । -ಮ. ಭಾರ. ಉದ್ಯೋಗ 95-63

೨ 2 ಪ್ರಶಸ್ತಾಃ ವೇದಾದಿವಾಚಃ ಈಶಿತವ್ಯತಯಾ ಅಸ್ಯ ಸಂತೀತಿ ವಾಗ್ಮೀ ।

೩ 3 ವೇದವಾಚಾ ಮೀಯತ ಇತಿ ವಾಗ್ಮೀ । -ವಿ ರಾ.

ಏತದ್ವ್ಯಾಖ್ಯಾನುಸಾರೇಣ 'ವಾಗ್ಮೀ' ಇತಿ ಸಂಧಿಃ ಛಾಂದಸಃ ।

೪ 4 ' ಗೀರ್ವಾಗ್ ವಾಣೀ ಸರಸ್ವತೀ—ಇತಿ ವಾಕ್ ಸರಸ್ವತೀ । ಮಾ ಲಕ್ಷ್ಮೀಃ । ವಾಕ್ ಚ ಮಾ ಚ ವಾಙ್ಮೇ ಸರಸ್ವತೀಲಕ್ಷ್ಮ್ಯೌ । ತೇ ಅಸ್ಯ ಸ್ನುಷಾಭಾರ್ಯಾತ್ವೇನ ಸ್ತ ಇತಿ ವಾಙ್ಮೀ । ವಾಙ್ಮೀ ಏವ ವಾಗ್ಮೀ ।ಸಂಧಿಃ ಛಾಂದಸಃ ।

ಯಾವಾಗಲೂ ಹೊಂದಿರುವವನು[1]

## ಜಿಜ್ಞಾಸೆ

[ದುಃಖದಂತೆ ದುಷ್ಟ ಜ್ಞಾನಮಾತುಗಳಿಲ್ಲ]

ಪ್ರ ಪರಮಾತ್ಮನು ಎಲ್ಲರಿಗೂ ಒಳ್ಳೆಯದಾದ ಬುದ್ಧಿ ಮತ್ತು ಒಳ್ಳೆ ಮಾತುಗಳಿಗೆ ಪ್ರೇರಕನಾಗಿದ್ದಾನೆ ಆದುದರಿಂದ ಅವನು ಒಳ್ಳೆ ಬುದ್ಧಿ ಒಳ್ಳೆಮಾತುಗಳುಳ್ಳವನು ಎಂದು ಅವನ ವಾಗ್ಮೀ ನಾಮದಿಂದ ಸಿದ್ಧವಾಗುವುದಾದರೆ ಅವನು ದುಷ್ಟರಿಗೆ ದುಷ್ಟಬುದ್ಧಿ ಮತ್ತು ದುಷ್ಟ ಮಾತುಗಳ ಪ್ರೇರಕನಾದುದರಿಂದ ದುಷ್ಟ ಬುದ್ಧಿ ದುಷ್ಟಮಾತುಗಳುಳ್ಳವನು ಎಂದು ಸಿದ್ಧವಾಗಲಾರದೇ?

ಉ – ಪರಮಾತ್ಮನು ಎಲ್ಲರ ಸುಖ ದುಃಖಗಳಿಗೆ ಪ್ರೇರಕನಾದರೂ ಅವನಿಗೆ ಸುಖವು ಮಾತ್ರ ಇದೆ ದುಃಖವು ಇಲ್ಲ ಅದು ಏಕೆ? ಸುಖ ದುಃಖ ಪ್ರೇರಕತ್ವದಿಂದ ಸುಖ ದುಃಖಗಳಲ್ಲಿ ಅವನು ಸ್ವತಂತ್ರನು ಎಂದು ಸಿದ್ಧವಾಗುತ್ತದೆ ಯಾವ ಸೊತ್ತಿನಲ್ಲಿ ಯಾವನು ಸ್ವತಂತ್ರನೋ ಅವನು ಅದನ್ನು ತನಗೆ ಬೇಕೆಂದು ಇಚ್ಛಿಸಿದರೆ ಮಾತ್ರ ಅದು ಅವನಿಗೆ ಪ್ರಾಪ್ತವಾಗುತ್ತದೆ ಸುಖದಲ್ಲಿ ಸ್ವತಂತ್ರನಾದ ಪರಮಾತ್ಮನು ಅದನ್ನು ಇಚ್ಛಿಸಿದ್ದರಿಂದ ಅದು ಅವನಿಗೆ ಸದಾ ಇದೆ· ಅದರಂತೆ ದುಃಖವನ್ನು ತನಗೆ ಬೇಕೆಂದು ಇಚ್ಛಿಸುವದಿಲ್ಲ ಆದುದರಿಂದ ಅದು ಅವನಿಗೆ ಇಲ್ಲ ಅದರಂತೆ ಪರಮಾತ್ಮನು ದುಷ್ಟ ಬುದ್ಧಿ ದುಷ್ಟ ಮಾತುಗಳಿಗೆ ಪ್ರೇರಕನಾದ್ದರಿಂದ ಅದರಲ್ಲಿ ಅವನಿಗೆ ಸ್ವಾತಂತ್ರ್ಯವು ಸಿದ್ಧವಾದರೂ, ಅದು ತನಗೆ ಬೇಕೆಂದು ಇಚ್ಛಿಸುವುದಿಲ್ಲವಾದ್ದರಿಂದ ಅದು ಆತನಿಗೆ ಇಲ್ಲ



## ೨೬೮ ಮಹೇಂದ್ರಃ

೧ ತೇಜಸ್ವಿಯಾಗಿರುವವನು ಅಥವಾ ಉತ್ತಮನಾಗಿರುವವನು ಅಥವಾ ಪೂಜ್ಯನಾಗಿರುವವನು ಮತ್ತು ಪರಮೈಶ್ವರ್ಯಸಂಪನ್ನನು.[2]

---

1 ವಾಕ್ ಚ ಮಾ ಜ್ಞಾನಂ ಚ ವಾಙ್ಮೇ । ತೇ ಅಸ್ಯ ಸ್ತ ಇತಿ ವಾಙ್ಮೀ। ವಾಙ್ಮೀ ಏವ ವಾಗ್ಮೀ । ಸಂಧಿಃ ಛಾಂದಸಃ । ಪ್ರಶಂಸಾರ್ಥೇ, ಅತಿಶಯಾರ್ಥೇ, ನಿತ್ಯಯೋಗೇ ಚ ವಿವಕ್ಷಿತೇ ಇನಿಪ್ರತ್ಯಯಃ ।

೧ 2 'ತೇಜೋಽರ್ಥ ಉತ್ತಮಾರ್ಥೇ ಚ ಪೂಜ್ಯಾರ್ಥೇ ಚ ಪ್ರಯುಜ್ಯತೇ। ಮಹಚ್ಛಬ್ದಃ...' ಇತಿ ಶಬ್ದನಿರ್ಣಯಾ (ಭಾಗ. ತಾ. ನಿ 4-6-40) ನುಸಾರೇಣ ಮಹಾನ್ ತೇಜಸ್ವೀ, ಉತ್ತಮಃ ಪೂಜ್ಯೋ ವಾ । ಇಂದತಿ ಪರಮೇಶ್ವರೋ ಭವತೀತಿ ಇಂದ್ರಃ ಪರಮೈಶ್ವರ್ಯಶಾಲೀ । 'ಇದಿ ಪರಮೈಶ್ವರ್ಯೇ' ।

ಭಗವಂತನು ಎಲ್ಲರಿಗೂ ಶ್ರೇಷ್ಠ ಒಡೆಯನಾಗಿದ್ದು, ಪರಮೈಶ್ವರ್ಯವನ್ನು ಸ್ವತಂತ್ರವಾಗಿ ಪಡೆದಿರುವ ಪ್ರಯುಕ್ತ ಇಂದ್ರ ಎನಿಸಿರುವವನು[1]

ಶ್ರೀ ಮಧ್ವಾಚಾರ್ಯರು ಬೃಹತೀ ಸಹಸ್ರಪ್ರತಿಪಾದ್ಯನಾದ ಇಂದ್ರನು ಭಗವಂತನೇ ಎಂಬುದನ್ನು ಸಮರ್ಥಿಸುತ್ತ, ಪ್ರಥಮಮನ್ವಂತರದಲ್ಲಿ ಯಜ್ಞನಾಮಕ ಭಗವಂತನು ಸ್ವೇಚ್ಛೆಯಿಂದ ಇಂದ್ರಪದವಿಯನ್ನು ಪಡೆದಿರುವ ಪ್ರಯುಕ್ತ ಅವನೇ ಮುಖ್ಯವಾಗಿ ಇಂದ್ರ ಎನಿಸುವನು. ಉಳಿದ ಹನ್ನೆರಡು ಮಂದಿ ಆವನ ಅನುಗ್ರಹದಿಂದಷ್ಟೇ ಇಂದ್ರ ಪದವಿಯನ್ನೂ ಪಡೆದಿರುವುದರಿಂದ ಗೌಣವಾಗಿಯಷ್ಟೇ ಇಂದ್ರ ಎನಿಸಿರುವವರು ಆದ್ದರಿಂದ ಶ್ರುತಿಗಳಲ್ಲಿ ಮುಖ್ಯವಾಗಿ ಭಗವಂತನೇ ಇಂದ್ರ ಎಂದು ಕರೆಯಲ್ಪಡುವನು[2]—ಎಂದು ಪ್ರತಿಪಾದಿಸಿರುವರು

---

1 '. . . ಸ ಇಂದ್ರಃ ಸ ಭೂತಾನಾಮಧಿಪತಿಃ '

-ಐ. ಉ. 2-2-6-12

'ಇದಿ ಪರಮೈಶ್ವರ್ಯೇ' ಇತಿ ಧಾತೋಶ್ಚ ತಸ್ಯೈವ ಹಿ ಪರಮೈಶ್ವರ್ಯಮ್ । ಅನ್ಯೇಷಾಂ ತು ದ್ವಾದಶಾನಾಂ ತೇನ ದತ್ತಮೇವೇಂದ್ರತ್ವಂ ನ ಮುಖ್ಯತಃ ।

-ಐ ಉ. ಭಾ.

ಇಂದ್ರಶಬ್ದ ಪ್ರವೃತ್ತಿನಿಮಿತ್ತ ಭೂತಾಧಿಪತ್ಯಾಖ್ಯೈಶ್ವರ್ಯಾಚ್ಚೇಂದ್ರನಾಮತ್ವಮಿತಿ ಭಾವೇನ ಸ ಭೂತಾನಾಮಧಿಪತಿರಿತ್ಯಸ್ಯ ತಾತ್ಪರ್ಯಮಾಹ—ಇದಿ ಪರಮೇತಿ । ಅಧಿಕಃ ಪತಿರಿತ್ಯಧಿಪತಿಶಬ್ದಾರ್ಥವಿವರಣಮ್—ಅನ್ಯೇಷಾಮಿತಿ ।

-ತಾಮ್ರಪರ್ಣೀಯಮ್ ।

* ' . . . ಇಂದ್ರಃ ಸ ಪರಮೈಶ್ವರ್ಯಾತ್ ' -ಗೀ. ತಾ. 11-39

* . ಐಶ್ವರ್ಯಾದಿಂದ್ರ ಉಚ್ಯತೇ । -ಬ್ರಹ್ಮಾಂಡ (ಬ್ರ. ಸೂ. ಭಾ. 1-3-3)

2 ಸ ಹಿ ಪ್ರಥಮಂತ ಇಂದ್ರೋ ಬಭೂವ ಸ್ವೇಚ್ಛಯಾ ಯಜ್ಞನಾಮಾ । ತಸ್ಮಾತ್ ತಮೇವ ವೇದಾ ಇಂದ್ರಶಬ್ದೇನ ವದಂತಿ ಮುಖ್ಯತಃ । . ಅನ್ಯೇಷಾಂ ತು ದ್ವಾದಶಾನಾಂ ತೇನ ದತ್ತಮೇವೇಂದ್ರತ್ವಂ ನ ಮುಖ್ಯತಃ । -ಐ. ಉ. ಭಾ.

ಪ್ರಥಮಂತಃ ಪ್ರಥಮಮನ್ವಂತರೇ । ತಸ್ಮಾತ್ ಪ್ರಾಪ್ತೇಂದ್ರಪದತ್ವಾತ್ ।

-ತಾಮ್ರಪರ್ಣೀಯಮ್

ಸಾಮಾನ್ಯವಾಗಿ ಇಂದ್ರನಾಮವನ್ನು ಶಚೀಪತಿಯಲ್ಲಿ ಪ್ರಯೋಗಿಸುವಂತೆ ಮಹೇಂದ್ರನಾಮವನ್ನೂ ಅವನಲ್ಲೇ ಬಳಸಲಾಗುವುದು ಅದಿತಿದೇವಿಯಲ್ಲಿ ಶಚೀಪತಿಯ ಅನುಜನಾಗಿ ಪ್ರಾದುರ್ಭವಿಸಿದ ಭಗವಂತನು 'ಉಪೇಂದ್ರ' ಎನಿಸಿದರೆ, ಅವನ ಅಗ್ರಜನಾಗಿ ಹುಟ್ಟಿದ್ದ ಶಚೀಪತಿಯು ಮಹೇಂದ್ರ ಎಂದೆನಿಸಿರುವನು ಆದರೆ ಶಚೀಪತಿಯು ಮಹೇಂದ್ರ ಎನಿಸುವುದೂ ಮುಖ್ಯವಾಗಿ ಅಲ್ಲ. ಭಗವದನುಗ್ರಹದಿಂದಾಗಿ ಉಪೇಂದ್ರನ ಅಗ್ರಜನಾಗಿ ಹುಟ್ಟಿದ್ದು, ಆ ಪ್ರಯುಕ್ತ ತಮ್ಮನಾದ ಉಪೇಂದ್ರನಿಗೆ ಪೂಜ್ಯನಾಗಿರುವುದರಿಂದಷ್ಟೇ ಅವನು ಮಹೇಂದ್ರನು. ಅಲ್ಲದೆ 'ಮಹಾವ್ರತ' ಎಂಬ ಕರ್ಮವನ್ನು ಮಾಡಿದ್ದರಿಂದಲೂ ಅವನು ಮಹೇಂದ್ರನೆನಿಸಿರುವನು ಈ ಅಭಿಪ್ರಾಯದಿಂದಲೇ ಶ್ರುತಿಯೊಂದರಲ್ಲಿ ಶಚೀಪತಿಯನ್ನು 'ಮಹೇಂದ್ರ' ಎಂದು ಉಲ್ಲೇಖಿಸಲಾಗಿದೆ[1] ಅಧಿಕಸಾಮರ್ಥ್ಯಪ್ರಯುಕ್ತವಾದ ಮಹತ್ತ್ವ ಅವನಲ್ಲಿ ಇಲ್ಲ ಇಂತಹ ಮಹತ್ತ್ವವು ಮುಖ್ಯವಾಗಿ ಭಗವಂತನಲ್ಲೇ ಇರುವುದು ಇನ್ನಾರಲ್ಲೂ ಎಂದೂ ಬರಲಾರದು[2]—ಎಂಬುದಾಗಿ ಶ್ರೀಮದಾಚಾರ್ಯರು ಸಿದ್ಧಾಂತಿಸಿರುವರು.

ಹೀಗೆ ಭಗವಂತನು ಸರ್ವಶ್ರೇಷ್ಠನಾಗಿದ್ದು 'ಮಹಾನ್' ಎಂದೆನಿಸಿರುವಂತೆ, ಸರ್ವಶ್ರೇಷ್ಠನಾಗಿರುವುದರಿಂದ ಸರ್ವರಿಗೂ ಪೂಜ್ಯನಾಗಿರುವುದರಿಂದಲೂ ಮಹಾನ್ ಎನಿಸಿರುವನು. ಅತ್ಯಂತ ತೇಜಸ್ವಿ ಆಗಿರುವುದರಿಂದಲೂ ಅವನು 'ಮಹಾನ್' ಎನಿಸಿರುವನು ಆದ್ದರಿಂದ ಮುಖ್ಯವಾಗಿ ಮಹೇಂದ್ರನು ಅವನೇ.

---

ಇಂದ್ರೋ ಹಿ ಪ್ರಥಮೋ ವಿಷ್ಣೋರ್ಜ್ಞಾನಾಮಾ ಜಗತ್ಪತಿಃ । ತತ್ಪ್ರಸಾದಾದಥೇಂದ್ರತ್ವಂ ದ್ವಾದಶಾನ್ಯೇ ಪ್ರಪೇದಿರೇ. -ಐ. ಉ. ಭಾ.

1 'ಮತ್ಸಿ ಮಹಾಮಿಂದ್ರಮಿಂದೋ ಮದಾಯ .'
-ಐ. ಉ. ಭಾ (7-2-6-12)

2 ಮಹತ್ತ್ವಂ ಚ ತಸ್ಯಾದಿತಿಪುತ್ರತ್ವೇಽಗ್ರಜತ್ವಮಾತ್ರಂ ನತು ಸಾಮರ್ಥ್ಯತಃ । 'ಮಹ ಪೂಜಾಯಾಮ್' ಇತಿ ಧಾತೋಃ । ಪೂಜ್ಯೋ ಹ್ಯಗ್ರಜೋ ಭವತಿ । . ತಸ್ಮಾತ್ ತತ್ಪ್ರಸಾದಾದವತಾರಾಗ್ರಜತ್ವಮೇವ ತಸ್ಯ ಮಹತ್ತ್ವಮ್ ।
-ಐ. ಉ. ಭಾ.

* ನನು ಮಹಾಮಿಂದಮಿತಿ ಮಹತ್ವವಿಶೇಷಣಾತ್ ಕಥಮಯಮಿಂದ್ರಶಬ್ದಃ ಪುರಂದರವಿಷಯ ಇತ್ಯತ ಆಹ—ಮಹತ್ತ್ವಂ ಚೇತಿ। -ತಾ. ಪ.

೨ ಶಚೀಪತಿಯು ಮಹತ್ತ್ವವನ್ನು ಹೊಂದುವಂತೆ ಅನುಗ್ರಹಿಸಿರುವವನು[1]

ಶಚೀಪತಿಯು ಅದಿತಿಯಲ್ಲಿ ತನ್ನ ಅಗ್ರಜನಾಗಿ ಹುಟ್ಟುವಂತೆ ಅನುಗ್ರಹಿಸಿರುವ ಭಗವಂತನು, ಆ ಪ್ರಯುಕ್ತ ಅವನಲ್ಲಿ ಪೂಜ್ಯತ್ವರೂಪವಾದ ಮಹತ್ತ್ವ ಬರುವಂತೆ ಮಾಡಿರುವವನು[2] ಹಾಗೆಯೇ ಶಚೀಪತಿಯು ತನ್ನ ಪ್ರೀತಿಜನಕವಾದ ಮಹಾವ್ರತ ಕರ್ಮವನ್ನು ಮಾಡಿ ಮಹೇಂದ್ರ ಎನಿಸು ವಂತೆಯೂ ಅವನು ಅನುಗ್ರಹಿಸಿರುವವನು

೩ ಮಹತ್ತ್ವತತ್ತ್ವಾಭಿಮಾನಿಯಾಗಿದ್ದು 'ಮಹಾನ್' ಎನಿಸಿರುವ ಚತುರ್ಮುಖನು ಇಂದ್ರ ಎನಿಸುವಂತೆ ಅನುಗ್ರಹಿಸಿರುವವನು[3]

೪ ಪೂಜ್ಯನಾಗಿರುವ ಅಥವಾ (ಜೀವ ಸಮೂಹದಲ್ಲೇ) ಉತ್ತಮನಾಗಿರುವ ಮುಖ್ಯ

---

* ಅಗ್ರಜತ್ವಾದದಿತ್ಯಾಂ ತು ಮಹೇಂದ್ರೋ ನಾಮ ಚಾಭವತ್ । ಮಹಾವ್ರತಂ ಕರ್ಮ ಕೃತ್ವಾ ಚೈವ ನಾಮ್ನಾ ಮಹೇಂದ್ರಕಃ । ಮಹತ್ತ್ವಂ ಮುಖ್ಯತೋ ವಿಷ್ಣೋರ್ನಹ್ಯನ್ಯಸ್ಯ ಕದಾಚನ। —ಐ ಉ. ಭಾ. (2–2–6-12)

* ಇಂದ್ರನಾಮ್ನಃ ಅನ್ಯೇ ಅರ್ಥಾಃ 'ಉಪೇಂದ್ರ'(೧೫೫) ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಾಃ।

೨ 1 ಮಹಾನ್ ಇಂದ್ರಃ ಯಸ್ಮಾತ್ ಸಃ ಮಹೇಂದ್ರಃ ।

2 ಮಹತ್ತ್ವಂ ಚ ತಸ್ಯಾದಿತಿಪುತ್ರತ್ವೇಽಗ್ರಜತ್ವಮಾತ್ರಂ ನತು ಸಾಮರ್ಥ್ಯತಃ। 'ಮಹ ಪೂಜಾಯಾಮ್' ಇತಿ ಧಾತೋಃ । ಪೂಜ್ಯೋ ಹ್ಯಗ್ರಜೋ ಭವತಿ । ತಸ್ಮಾತ್ ತತ್ಪ್ರಸಾದಾದವತಾರಾಗ್ರಜತ್ವಮೇವ ತಸ್ಯ ಮಹತ್ತ್ವಮ್ ।

—ಐ ಉ. ಭಾ. (2-2-6–12)

ಮಹಾವ್ರತಂ ಕರ್ಮ ಕೃತ್ವಾ ಚೈವ ನಾಮ್ನಾ ಮಹೇಂದ್ರಕಃ । —ಐ. ಉ. ಭಾ.

* ವಿಷ್ಣುಪ್ರೀತ್ಯರ್ಥಂ ಮಹಾವ್ರತಂ ಕರ್ಮ ಕೃತ್ವೈವ ನ ಸ್ವತಃ ।

—ತಾ ಪ.

೩ 3 ಮಹತ್ತತ್ತ್ವಾಭಿಮಾನಿತ್ವಾತ್ ಮಹಾನ್ ಚತುರ್ಮುಖಃ ಇಂದ್ರಃ ಯಸ್ಮಾತ್ ಸಃ ಮಹೇದ್ರಃ ।

ಪ್ರಾಣನಂ ಇಂದ್ರ ಎನಿಸುವಂತೆ ಅನುಗ್ರಹಿಸಿರುವವನು.[1]

೫ ಉತ್ಸವಗಳಿಗೆಲ್ಲ ಒಡೆಯನಾಗಿರುವವನು.[2]

## ಜಿಜ್ಞಾಸೆ

### [ದೇವರಲ್ಲಿ ಉಷ್ಣಸ್ಪರ್ಶ]

ಪ್ರ - ಪರಮಾತ್ಮನು ತೇಜಸ್ವಿಯಾದರೆ ತೇಜಸ್ಸಿನಲ್ಲಿ ಉಷ್ಣಸ್ಪರ್ಶವು ಇದೆ ಅವನಲ್ಲಿ ಉಷ್ಣಸ್ಪರ್ಶವು ಇದೆಯೇ? ಅವನ ಸಮೀಪಕ್ಕೆ ಭಕ್ತರು ಹೋದಾಗ ಭಕ್ತರು ಸುಟ್ಟುಹೋಗುತ್ತಾರೋ?

ಉ ಚಂದ್ರನು ತೇಜಸ್ವಿಯಾದರೂ ಅವನಲ್ಲಿ ಉಷ್ಣಸ್ಪರ್ಶವು ಇಲ್ಲ ಅದರಂತೆ ಪರಮಾತ್ಮನು ತೇಜಸ್ವಿಯಾದರೂ ಅವನಲ್ಲಿ ಶೀತಸ್ಪರ್ಶವೂ ಇರಬಹುದು.

ಪ್ರ.- 'ಸರ್ವಭೂತಗುಣೈರ್ಯುಕ್ತಂ ದೇವಂ ಮಾಂ ಜ್ಞಾತುಮರ್ಹಸಿ' ಎಂದು ಮಹಾಭಾರತದಲ್ಲಿ ಹೇಳಿದ್ದರಿಂದ ಪರಮಾತ್ಮನಲ್ಲಿ ಸರ್ವಭೂತಗುಣಗಳೂ ಇರುವದರಿಂದ ಜಲಧರ್ಮವಾದ ಶೀತಸ್ಪರ್ಶವು ಇದ್ದಂತೆ ಸೂರ್ಯಾದಿ ತೇಜಸ್ಸಿನ ಧರ್ಮವಾದ ಉಷ್ಣಸ್ಪರ್ಶವೂ ಇರಬೇಕಲ್ಲವೇ?

ಉ - ದುಷ್ಟರನ್ನು ಸುಡಲಿಕ್ಕೆ ಆವಶ್ಯಕವಾದ ಉಷ್ಣಸ್ಪರ್ಶವು ಅವನಲ್ಲಿ ಇರುವದು. ಗುಣವಾದುದರಿಂದ ಅದು ಪರಮಾತ್ಮನಲ್ಲಿ ಇದೆ. ಅವನಲ್ಲಿ ಅಚಿಂತ್ಯ ಶಕ್ತಿಯು ಇರುವುದರಿಂದ ವಿರುದ್ಧ ಧರ್ಮಗಳೂ ಅವನಲ್ಲಿ ಇರುವವು



---

1 ಪೂಜ್ಯತ್ವಾತ್ ಜೀವೋತ್ತಮತ್ವಾದ್ವಾ ಮಹಾನ್ ಮುಖ್ಯಪ್ರಾಣಃ 'ಪ್ರಾಣಂ ವಾವ ಮಹಾನ್ ಇತ್ಯಾಚಕ್ಷತೇ' ಇತಿ ಹಿ ಪೈಂಗಿಶ್ರುತಿಃ (ಬ್ರ. ಸೂ. ಭಾ. 2 3-9)। ಸಃ ಇಂದ್ರಃ ಯಸ್ಮಾತ್ ಸಃ ಮಹೇಂದ್ರಃ ।

'ಇಂದ್ರಸ್ಯ ಯುಜ್ಯಃ ಸಖಾ' (ಋ. ವೇ. 23-19) ಇತ್ಯತ್ರ ಸ್ಥಿತಂ ಇಂದ್ರಶಬ್ದಂ ಮುಖ್ಯಪ್ರಾಣಪರತಯಾ ವ್ಯಾಖ್ಯಾತವಂತಃ ಶ್ರೀಮದಾಚಾರ್ಯಾಃ 'ತ್ರಯೋದಿಂದ್ರೇತಿವಚನಾತ್ ಪ್ರಾಣ ಇಂದ್ರಾಭಿಧೋ ಮತಃ' ಇತಿ ಮುಖ್ಯಪ್ರಾಣಸ್ಯ ಇ ದ್ರಾಭಿಧತ್ವಂ ಸಮಾರ್ಥಯಂತ।

೫ 2 ಮಹಾನಾಂ ಉತ್ಸವಾನಾಂ ಇಂದ್ರಃ ಸ್ವಾಮೀ ಮಹೇಂದ್ರಃ। 'ಮಹ ಉದ್ಧವ ಉತ್ಸವಃ' -ಅ. ಕೋ.

ಇಂದ್ರಶಬ್ದಃ ಸ್ವಾಮ್ಯರ್ಥೇ ದೇವೇಂದ್ರ ಇತ್ಯಾದೌ ಪ್ರಯುಕ್ತಃ ।

೨೬೯ ವಸುದಃ

೧ ದ್ರವ್ಯರೂಪವಾದ ಧನವನ್ನು ನೀಡುವವನು.[1]

೨ ವಿದ್ಯಾರೂಪವಾದ ಧನವನ್ನು ನೀಡುವವನು[2]

ಧನ ಎರಡು ಬಗೆಯದು ಬಾಹ್ಯ ಸಂಪತ್ತಿನ ರೂಪದಲ್ಲಿ ಇರುವಂತಹದ್ದು ಒಂದು ಬಗೆಯುದಾದರೆ, ವಿದ್ಯಾರೂಪದಲ್ಲಿ ಇರುವಂತಹದ್ದು ಎರಡನೇ ಬಗೆಯುದು[3] ಈ ಎರಡು ಬಗೆಯ ಧನಗಳಿಗೂ ಭಗವಂತನೇ ಒಡೆಯನು[4] ಆದ್ದರಿಂದ ಈ ಎರಡು ಬಗೆಯ ಧನವನ್ನೂ ಅವನೇ ಅನುಗ್ರಹಿಸುವವನು. ಅಗ್ನಿಸೂಕ್ತಗಳಲ್ಲಿ ಅಗ್ನಿನಾಮಕ ಭಗವಂತನ ಅನುಗ್ರಹದಿಂದಲೇ ವಿದ್ಯೆ ರೂಪದಲ್ಲಿರುವ ಹಾಗೂ ಬಾಹ್ಯಸಂಪತ್ತಿನ ರೂಪದಲ್ಲಿರುವ ಧನವನ್ನು ಪ್ರತಿನಿತ್ಯ ಹೊಂದಲಾಗುವುದೆಂದು ಸ್ತುತಿಸಲಾಗಿದೆ[5] ನಮಗೆ ಇಂದ್ರನಾಮಕ ಭಗವಂತನು ಧನವನ್ನು ಯಾವಾಗಲೂ ನೀಡು

---

೧ 1 ವಸು ಬಾಹ್ಯಂ ಧನಂ ದದಾತೀತಿ ವಸುದಃ ।

೨ 2 ವಸು ವಿದ್ಯಾತ್ಮಕಂ ಧನಂ ದದಾತೀತಿ ವಸುದಃ ।

3 ' ಸ ದ್ವಿವಿಧೋ ಜ್ಞೇಯೋ ದೈವೋ ಮಾನುಷ ಏವ ಚ ।
ದೈವೋ ವಿದ್ಯಾಹಿರಣ್ಯಾದಿರ್ಮಾನುಷಃ ಪರಿಕೀರ್ತಿತಃ ॥'
–ಮ. ಭಾರ. ತಾ. ನಿ. 29-50

4 'ವಿದ್ಯಾಧಿರಾಜಸ್ಯ...ಸದಾ ವಿದ್ಯಾಪತೇರ್ಹೃದಿ । .ವಿದ್ಯೇಶಮತಂ. '
ಅ. ವ್ಯಾ. 1–3–15,18,19

* ವಸೋರಿಂದ್ರಂ ವಸುಪತಿಂ –ಋ. ವೇ. 9-9

ವಸೋರ್ವಸೂನಾಂ ಚ ಪತಿಂ ದೇವದೇವೇಶ್ವರಂ ಪ್ರಭುಮ್ ।
–ಋ. ಭಾ.

* ಈಶಾನಂ ವಾರ್ಯಾಣಾಮ್ । –ಋ. ವಾ. 24–3

ವಿತ್ತಾನಾಮೀಶ್ವರಂ ಶತ್ತು.... –ಋ. ಭಾ.

5 'ಅಗ್ನಿನಾ ರಯಿಮಶ್ನವತ್ .' ಋ. ವೇ. 1–3
ತೇನೈವ ರಯಿಮಾಪ್ನೋತಿ ವಿತ್ತಂ ವಿದ್ಯಾಧನಾತ್ಮಕಮ್ ।
–ಋ. ಭಾ.

ತ್ರಿರುವನೆಂದು ಋಗ್ವೇದ ತಿಳಿಸಿದೆ[1]

೩. (ಅಯೋಗ್ಯರಿಗೆ) ವಿದ್ಯಾ ರೂಪವಾದ ಧನ ದೊರಕದಂತೆ ಮಾಡುವವನು.[2]

೪. (ಅಯೋಗ್ಯರಿಗೆ) ಬಾಹ್ಯಧನ ದೊರಕದಂತೆ ಮಾಡುವವನು[3]

ಭಗವಂತನು ಸಾಮಾನ್ಯವಾಗಿ ತನ್ನ ಭಕ್ತರಿಗೆ ಧನವು ದೊರಕುವಂತೆಯೂ, ಅಭಕ್ತರಿಗೆ ಧನವು ದೊರಕದಂತೆಯೂ ಮಾಡುವನು. ಆದರೆ ಯಾವ ಭಕ್ತರ ಪಾಲಿಗೆ ಧನವು ಅಹಂಕಾರಕ್ಕೆ ಕಾರಣವಾಗಬಲ್ಲದೋ, ಅಂತಹ ಭಕ್ತರಿಂದ ಧನವನ್ನು ಕಸಿದುಕೊಳ್ಳುವನು ಅಭಕ್ತರಿಗೆ ಧನವನ್ನು ನೀಡಿ, ತತ್ಫಯುಕ್ತ ಅವರು ಗರ್ವಿಷ್ಠರಾಗುವಂತೆ ಮಾಡಿ ಅವರಿಗೆ ದುರ್ಗತಿ ಆಗುವಂತೆ ಮಾಡುವನು[4]

೫ (ಮುಕ್ತಿಯೋಗ್ಯರಿಗೆ) ಮೋಕ್ಷರೂಪಸಂಪತ್ತನ್ನು ನೀಡುವವನು.[5]

---

1 ಇಂದ್ರೋ ವಸು ದಯಮಾನಃ । -ಋ. ವೇ. 10-6

ಅಸ್ಮಾಕಂ ಚ ಸದಾ ವಿತ್ತಂ ದದನೇವ ಪ್ರವರ್ತತೇ ।

-ಋ. ಭಾ.

೩. 2 ಅಯೋಗ್ಯಾನಾಂ ವಸು ವಿದ್ಯಾರೂಪಂ ಧನಂ ದ್ಯತಿ ಖಂಡಯತೀತಿ ವಸುದಃ ।

೪. 3 ಅಯೋಗ್ಯಾನಾಂ ವಸು ಬಾಹ್ಯಧನಂ ದ್ಯತಿ ಖಂಡಯತೀತಿ ವಸುದಃ ।

4 ಯಸ್ಯಾನುಗ್ರಹಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಮ್ ।
ಯಸ್ಯ ನಿಗ್ರಹಮಿಚ್ಛಾಮಿ ತಸ್ಯ ವಿತ್ತಂ ದದಾಮ್ಯಹಮ್ ।

* ಭಕ್ತಾಯ ಚಿತ್ರಾ ಭಗವಾನ್ ಹಿ ಸಂಪದೋ ರಾಜ್ಯಂ ವಿಭೂತೀರ್ನ ಸಮರ್ಥಯತ್ಯಜಃ ।
ಅದೀರ್ಘಬೋಧಾಯ ವಿಚಕ್ಷಣಃ ಸ್ವಯಂ ಪಶ್ಯನ್ ನಿಪಾತಂ ಧನಿನಾಂ ಮದೋ-
ದ್ಭವಮ್ । -ಭಾಗ. 10-81-37

೫ 5 ವಸು ಮೋಕ್ಷಾಖ್ಯವಿತ್ತಂ ಮುಕ್ತಿಯೋಗ್ಯೇಭ್ಯಃ ದದಾತೀತಿ ವಸುದಃ ।

೬ (ಮುಕ್ತ್ಯಯೋಗ್ಯರಿಗೆ) ಮೋಕ್ಷ ರೂಪಧನವನ್ನು ದೊರಕದಂತೆ ಮಾಡುವವನು.[1]

ಅಮೃತವನ್ನು ದೇವತೆಗಳಿಗಷ್ಟೇ ಕುಡಿಸಿ, ಅಸುರರಿಗೆ ದೊರಕದಂತೆ ಮಾಡಿರುವ ಭಗವಂತನು, ಈ ದೃಷ್ಟಾಂತದಿಂದ ಮೋಕ್ಷವೂ ಮೋಕ್ಷಯೋಗ್ಯರಾದ ದೇವತೆಗಳಿಗಷ್ಟೇ ದೊರಕುವಂತಹದ್ದು ಅಯೋಗ್ಯರಾದ ಅಸುರರಿಗೆ ಅದು ದೊರಕಲಾರದು ಹಾಗೆ ತಾನು ನಿಯಮಿಸುತ್ತಿರುವೆನೆಂಬುದನ್ನು ತೋರಿಸಿಕೊಟ್ಟಿರುವನೆಂಬುದಾಗಿ ಶ್ರೀಮದಾಚಾರ್ಯರು ನಿರ್ಣಯಿಸಿರುವರು[2]

೭ (ಮುಕ್ತಿಯೋಗ್ಯರಿಗೆ) ಜ್ಞಾನ ಧನವನ್ನು ನೀಡುವವನು[3]

೮ (ಮುಕ್ತ್ಯಯೋಗ್ಯರಿಗೆ) ಜ್ಞಾನ ಧನವನ್ನು ದೊರಕದಂತ ಮಾಡುವವನು[4]

ಭಗವಂತನು ಮುಕ್ತಿಯೋಗ್ಯರಿಗೆ ಜ್ಞಾನದಲ್ಲಿ ಅಭಿರುಚಿಯನ್ನು ನೀಡಿ,[5] ಅವರಿಗೆ ಜ್ಞಾನವನ್ನು ನೀಡುವವನು ಆದ್ದರಿಂದಲೇ ಸಾಧಕರು ತಮಗೆ ಜ್ಞಾನರೂಪವಾದ ಧನವನ್ನು ನೀಡಲು ಅಗ್ನಿ

---

೬ 1 ಮುಕ್ತ್ಯಯೋಗ್ಯಾನಾಂ ವಸು ಮೋಕ್ಷಾಖ್ಯವಿತ್ತಂ ದ್ಯತಿ ಖಂಡಯತೀತಿ ವಸುದಃ । 'ಅಗ್ನೇ ನಯ ಸುಪಥಾ ರಾಯೇ ' ಇತೀಶಾವಾಸ್ಯೋಪನಿಷದಿ ಮೋಕ್ಷಃ ವಿತ್ತತ್ವೇನ ಪರಿಗಣಿತಃ ।

2 ಇತ್ಥಂ ತ್ವಯಾ ಸಾಧ್ವಮೃತಂ ಸುರೇಷು ದತ್ತಂ ಹಿ ಮೋಕ್ಷಸ್ಯ ನಿದರ್ಶನಾಯ । ಭವೇದ್ಧಿ ಮೋಕ್ಷೋ ನಿಯತಂ ಸುರಾಣಾಂ ನೈವಾಸುರಾಣಾಂ ಸ ಕಥಂಚನ ಸ್ಯಾತ್ ।

-ಮ. ಭಾರ. ತಾ. ನಿ 10--34,35

೭ 3 ವಸು ಜ್ಞಾನಾಖ್ಯಂ ಧನಂ ದದಾತೀತಿ ವಸುದಃ । 'ತ್ವಂ ನೋ ಅಗ್ನೇ ಸನಯೇ ಧನಾನಾಂ .' (ಋ. ವೇ. 31-8) ಇತ್ಯತ್ರ ಪ್ರಜ್ಞೈವ ಧನತ್ವೇನ ಪರಿಗಣಿತಾ ।

೮ 4 ಅಯೋಗ್ಯಾನಾಂ ವಸು ಜ್ಞಾನಾಖ್ಯಂ ದ್ಯತಿ ಖಂಡಯತೀತಿ ವಸುದಃ ।

5 ಇಂದ್ರ ತ್ವೋತಾಸ ಆ ವಯಂ ವಜ್ರಂ ಘನಾದದೀಮಹಿ ।

-ಋ. ವೇ 8-3

ತ್ವತ್ಪ್ರೇರಿತಾ ಜ್ಞಾನರತಿಂ ದೃಢತ್ವೇನಾದದೀಮಹಿ ।

-ಋ. ವೇ. ಭಾ

ನಾಮಕ ಭಗವಂತನಲ್ಲಿ ಬೇಡಿಕೊಂಡಿರುವರು[1] ಮುಕ್ತ್ಯಯೋಗ್ಯರಿಗೆ ಜ್ಞಾನ ದೊರಕದಂತೆ ಮಾಡುವವನೂ ಭಗವಂತನೇ

೯ ಎಲ್ಲೆಡೆ ವಾಸವಾಗಿರುವ ಅಥವಾ ಮಹಾ ಧನರೂಪವಾಗಿರುವ ತನ್ನನ್ನೇ(ಭಕ್ತರಿಗೆ) ಕೊಡುವವನು[2]

೧೦ (ಅಭಕ್ತರಿಗೆ) ಮಹಾಧನರೂಪವಾದ ತಾನು ದೊರಕದಂತೆ ಮಾಡುವವನು[3]

ಭಗವಂತನು ತನ್ನ ಭಕ್ತರಿಗೆ ಅತಿ ಸಮೀಪದಲ್ಲಿ ಇರುವುದಾದರೆ, ಅಭಕ್ತರಿಗೆ ಅತಿ ದೂರದಲ್ಲಿ ಇರುವವನು—ಎಂದು ಶ್ರೀಮದಾಚಾರ್ಯರು ಸ್ತುತಿಸಿರುವರು[4] ಹೀಗೆ ಅವನನ್ನು ಅವನೇ ನೀಡುವವನಾದುದರಿಂದ, ಋಗ್ವೇದದಲ್ಲಿ—'ಮಹಾಐಶ್ವರ್ಯಸ್ವರೂಪಿಯಾದ ನಿನ್ನ ವಿಷಯದಲ್ಲಿ ನನ್ನನ್ನು ಪ್ರೇರಿಸು'—ಎಂದು ಇಂದ್ರನಾಮಕ ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳಲಾಗಿದೆ.[5]

* * *

ಹೀಗೆ ಎಲ್ಲ ರೀತಿಯ ಸಂಪತ್ತನ್ನೂ ಭಗವಂತನೇ ನೀಡುವುದರಿಂದ, ಅಗ್ನಿನಾಮಕ ಭಗವಂತ

---

1 'ತ್ವನ್ನೋ ಅಗ್ನೇ ಸನಯೇ ಧನಾನಾಂ... ' -ಋ ವೇ 31-8

ಪ್ರಜ್ಞಾಧನಾನಾಂ ಲಬ್ಧಯೇ ನಃ ಕೃಧಿ ತ್ವಂ ' -ಋ. ವೇ ಭಾ.

೯ 2 ಸರ್ವತ್ರ ವಸತೀತಿ ವಸುಃ ಭಗವಾನ್ । 'ಅಸ್ಮಾನ್ ಸುತತ್ರ ಚೋದಯೇಂದ್ರರಾಯೇ..' (ಋ ವೇ. 9-6) ಇತ್ಯತ್ರೋಕ್ತದಿಶಾ ಮಹೈಶ್ವರ್ಯರೂಪತ್ವಾದ್ವಾ ಭಗವಾನ್ ವಸುಃ । ತಂ ಸ್ವಭಕ್ತೇಭ್ಯಃ ದದಾತೀತಿ ವಸುದಃ ।

೧೦ 3 ಅಭಕ್ತಾನಾಂ ವಸು ವಸುರೂಪಂ ಸ್ವಾತ್ಮಾನಂ ದ್ಯತಿ ಖಂಡಯತಿ ನ ಪ್ರಕಾಶಯತೀತಿ ಯಾವತ್, ವಸುದಃ ।

4 ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್ । ಆನಂದಸ್ಯ ಪದಂ...' -ದ್ವಾ. ಸ್ತೋ.

5 ಅಸ್ಮಾನ್ ಸು ತತ್ರ ಚೋದಯೇಂದ್ರ ರಾಯೇ. . -ಋ. ವೇ. 9-6

ತತ್ರ ತ್ವಯಿ ಮಹಾರಾಯೇ ಮಹಾಕೀರ್ತೇ ಸಂಚೋದಯ । -ಋ. ವೇ. ಭಾ.

ನನ್ನು ಸಂಬೋಧಿಸಿ, ನೀನು ಜ್ಞಾನಿಗೆ ಮೋಕ್ಷಾದಿ ಸಕಲ ಸಂಪತ್ತನ್ನೂ ಹೊಂದಿಸುವಿ—ಎಂಬು ದಾಗಿ ಋಗ್ವೇದದಲ್ಲಿ ಸ್ತುತಿಸಲಾಗಿದೆ[1]

೧೧ ದೇವತೆಗಳಿಗೆ (ಅಭಿಮತವಾದದ್ದನ್ನು) ನೀಡುವವನು[2]

೧೨ (ಎಲ್ಲೆಡೆ) ಇರುವವನು ಮತ್ತು (ಎಲ್ಲವನ್ನೂ)ನೀಡುವವನು[3]

## ಜಿಜ್ಞಾಸೆ

[ವಿಷ್ಣುಭಕ್ತಿ ದಾರಿದ್ರ್ಯಕ್ಕೆ ಕಾರಣವಲ್ಲ]

ಪ್ರ - ವಿಷ್ಣುಭಕ್ತರು ಪ್ರಾಯಃ ದರಿದ್ರರಾಗುತ್ತಾರೆ ಆದುದರಿಂದ ವಿಷ್ಣುವಿಗೆ ವಸುದಃ ಎಂಬ ನಾಮ ಅನ್ವರ್ಥಕವಾಗಬಹುದೋ?

ಉ - 'ದ್ವಾಭ್ಯಾಂ ಕರಾಭ್ಯಾಂ ವಸು ತರ್ಪಯಂತಂ' ಎಂದು ಶ್ರೀಕರರೂಪಿ ಪರಮಾತ್ಮನ ಧ್ಯಾನ ಶ್ಲೋಕದಲ್ಲಿ ಶ್ರೀಕರಮೂರ್ತಿಯು ಎರಡೂ ಹಸ್ತಗಳಿಂದ ದ್ರವ್ಯವನು ಧರಿಸುತ್ತಾ ಭಕ್ತರಿಗೆ ವಸುದಾನ ಮಾಡುತ್ತೇನೆಂದು ತೋರಿಸುತ್ತ ಇದ್ದಾನೆಂದು ಹೇಳಿರತ್ತದೆ ಯಾವ ಇತರ ದೇವತೆಗಳೂ ಈ ರೀತಿ ಸದಾ ಎರಡು ಹಸ್ತಗಳಿಂದ ಧನವನ್ನು ಧರಿಸುತ್ತಾ ಇಲ್ಲ ಇದರಿಂದ ಇತರ ದೇವತೆಗಳು ಪ್ರಸನ್ನರಾಗಿ ಭಕ್ತರಿಗೆ ಧನವನ್ನು ಕೊಡುತ್ತಾ ಇರುವದು ಅವರ ಒಳಗೆ ನಾನು ಅಂತರ್ಯಾಮಿಯಾಗಿ ಇದ್ದು ಅವರನ್ನು ದ್ವಾರವನ್ನಾಗಿ ಮಾಡಿ

---

1 '. .ಕಾರವೇ ತ್ವಂ ಕಲ್ಯಾಣ ವಸು ವಿಶ್ವಮೋಹಿಷೇ'

-ಋ. ವೇ. 31-9

ವಿಶ್ವಂ ವಸು ಪ್ರಾರ್ಪಯಸೇ ಚ ಕಾರವೇ ।

-ಋ. ಭಾ.

ಕಾರವೇ ಜ್ಞಾನಿನೇ ವಿಶ್ವಂ ಸಮಸ್ತಂ ವಸು ಮೋಕ್ಷಾದಿಕಂ ಆ ಊಹಿಷೇ ಪ್ರಾಪಯಸಿ ।

—ಮಂ. ಮಂ

೧೧ 2 ವಸುಭ್ಯಃ ದೇವತಾಭ್ಯಃ ದದಾತಿ ಅಭಿಮತಂ ದದಾತೀತಿ ವಸುದಃ । 'ಆದಿತ್ಯಾ ವಸವೋ ರುದ್ರಾ ವಿಶ್ವೇ ಋಭವ ಇತ್ಯಪಿ । ಸರ್ವದೇವಸಮಾಖ್ಯಾ ಚ ..' ಇತಿ ಶಬ್ದನಿರ್ಣಯಂ (ಐ ಉ. ಭಾ. 2–2–7–6) ನಿರೂಪಿತದಿಶಾ ವಸುಶಬ್ದಃ ದೇವತಾಸಾಮಾನ್ಯವಾಚಕೋSಪಿ ।

೧೨ 3 ವಸತಿ ಸರ್ವತ್ರೇತಿ ವಸುಃ । ದದಾತಿ ಸರ್ವಮಿತಿ ದಃ ।

ನಾನೇ ಧನವನ್ನು ಕೊಡತಕ್ಕವನಾಗಿ ಇರುವದರಿಂದ ಹೊರತು ಧನವನ್ನು ಕೊಡಲಿಕ್ಕೆ ಅವರಿಗೆ ಸ್ವಾತಂತ್ರ್ಯ ಇದ್ದು ಅವರು ಧನದಾನ ಮಾಡುವದಲ್ಲ ಎಂದು ಶ್ರೀಕರಮೂರ್ತಿಯು ತಿಳಿಸುತ್ತಾ ಇದ್ದಾನೆ ಆದುದರಿಂದ ವಿಷ್ಣುಭಕ್ತಿಯು ದಾರಿದ್ರ್ಯಕ್ಕೆ ಕಾರಣ ಎಂದು ತಿಳಿಯಬಾರದು. ವಿಷ್ಣು ಭಕ್ತರು ದರಿದ್ರರಾಗುವದು ಅವರ ಪ್ರಾರಬ್ಧಕರ್ಮದಿಂದ ಎಂದು ತಿಳಿಯ ಬೇಕು



೨೭೦ ವಸುಃ

೧ ರಾತ್ರಿಕಾಲದಲ್ಲಿ ಕತ್ತಲೆಯಿಂದ ಎಲ್ಲವನ್ನೂ ಆವರಿಸಿರುವವನು.[1]

ಸವಿತೃನಾಮಕ ಭಗವಂತನು ಆಕಾಶತುಂಬ ಕತ್ತಲೆಯನ್ನು ತುಂಬಿಸುವನು[2] ಕತ್ತಲೆಯೂ, ಬೆಳಕೂ ಅವನಿಗೇ ಅಧೀನಗಳಾದವು[3] ಸುವರ್ಣರಥಾರೂಢನಾದ ಅವನೇ ಕತ್ತಲೆಯನ್ನು ಹೋಗಲಾಡಿಸುತ್ತ ಸಂಚರಿಸುತ್ತಿರುವನೆಂಬುದಾಗಿ ಋಗ್ವೇದ ಸಂದೇಶಿಸಿದೆ.[4]

೨ 'ಸ್ವಗುಣಾಚ್ಛಾದಿಕಾ' ಎಂಬ ಪ್ರಕೃತಿಯಿಂದ ಜೀವನ ಸ್ವರೂಪವನ್ನೂ 'ಪರಮಾ

---

೧ 1 ವಸ್ತೇ ರಾತ್ರೌ ತಮಸಾ ಸರ್ವಂ ಆಚ್ಛಾದಯತೀತಿ ವಸುಃ 'ವಸ ಆಚ್ಛಾದನೇ'।

2 ' ಕೃಷ್ಣೇನ ರಜಸಾ ದ್ಯಾಮೃಣೋತಿ' —ಋ. ವೇ. 35-9

ಋಣೋತಿ ಸಂಪೂರಯತಿ। —ಋ. ಭಾ.

3 ಸವಿತಾ ಚಿತ್ರಭಾನುಃ ಕೃಷ್ಣಾ ರಜಾಂಸಿ ತವಿಷೀಂ ದಧಾನಃ। —ಋ. ವೇ. 35-4

ತಮಃಪ್ರಕಾಶೌ ಯದಧೀನೌ ಯತಸ್ತೌ ದಧಾನ ಇತ್ಯುಚ್ಯತೇ ವಾಸುದೇವಃ। —ಋ. ಭಾ.

4 'ಆ ಕೃಷ್ಣೇನ ರಜಸಾ ವರ್ತಮಾನಃ.. ' —ಋ ವೇ. 35-2

ಕೃಷ್ಣಂ ರಜಃ ಶಾರ್ವರಂ...ರವಿಗೋ ಜನಾರ್ದನಃ। —ಋ. ಭಾ.

'ಕೃಷ್ಣೇನ ರಜಸಾ ಶಾರ್ವರೇಣ ತಮಸಾ ತನ್ನಿವರ್ತಕತಯೇತಿ ಯಾವತ್, ಆವರ್ತಮಾನಃ ಪ್ರವರ್ತಮಾನಃ...' —ಮಂ. ಮಂ.

ಚ್ಛಾದಿಕಾ ಎಂಬ ಪ್ರಕೃತಿಯಿಂದ ತನ್ನ ಸ್ವರೂಪವನ್ನೂ ಜೀವಾತ್ಮನಿಗೆ ಕಾಣದಂತೆ ಆಚ್ಛಾದಿ ಸುವವನು[1]

೩ ಜ್ಞಾನಿಗಳಾದ ದೇವತೆಗಳಿಗೆ ಮೋಕ್ಷ ದೊರಕುವಂತೆ ಮಾಡುವವನು[3]

ದೇವತೆಗಳಿಗೆ ಮೋಕ್ಷ ದೊರಕುವಂತೆ ಮಾಡುವಿಕೆಯೇ ಅವರ ಸೃಷ್ಟಿ ಎನಿಸಿದೆ[8]

೪ ಅನಂತಗುಣಗಳ ನಿತ್ಯ ನಿವಾಸಕ್ಕೆ ಆಧಾರನಾಗಿರುವವನು[4]

ಧರಣೀ ದೇವಿಯು ಶ್ರೀಕೃಷ್ಣ ಪರಮಾತ್ಮನಲ್ಲಿರುವ ಸತ್ಯ, ಶೌಚ ಮುಂತಾದ ನಲ್ವತ್ತು ಗುಣಗಳನ್ನು ಉಲ್ಲೇಖಿಸಿ ಇವುಗಳೂ, ಇವುಗಳಿಗಿಂತ ಇತರಗಳಾದ ಮಹಾಗುಣಗಳು ಶ್ರೀಕೃಷ್ಣನಲ್ಲಿ ನಿತ್ಯವೂ ಇವೆ—ಎಂದು ಅಭಿಪ್ರಾಯಪಟ್ಟಿರುವಳು.[5] ಭಗವಂತನ ಗುಣಗಳು ಅವನ ಸ್ವರೂಪಾತ್ಮಕಗಳಾಗಿದ್ದು,[6] ಅವು ಎಂದೆಂದೂ ಅವನಲ್ಲೇ ಇರುವವು[7]

---

1 ವಸ್ತೇ ಸ್ವಗುಣಾಚ್ಛಾದಿಕಯಾ ಜೀವಸ್ವರೂಪಂ, ಪರಮಾಚ್ಛಾದಿಕಯಾ ಸ್ವಸ್ವರೂಪಂ, ಚ ಆಚ್ಛಾದಯತೀತಿ ವಸುಃ ।

೩ 2 ವಾಂತಿ ಜಾನಂತೀತಿ ವಾಃ ಜ್ಞಾನಿನಃ ದೇವಾಃ । ತಾನ್ ಸೂತೇ ಇತಿ ವಸುಃ ।

3 ಸ್ರಷ್ಟೃತ್ವಂ ದೇವಾನಾಂ ಮುಕ್ತಿಸ್ರಷ್ಟೃತ್ವಮುಚ್ಯತೇ ನಾನ್ಯತ್ ।

-ಮ ಭಾರ. ತಾ. ನಿ.

೪ 4 ವಸಂತಿ ನಿತ್ಯಂ ನಿವಸಂತ್ಯನಂತಗುಣಾ ಅಸ್ಮಿನ್ನಿತಿ ವಸುಃ । ಅಸಾಧಾರಣ್ಯೇನ ವ್ಯಪದೇಶ ಇತಿ ಗುಣೇಷು ಅನಂತತ್ವಂ, ತೇಷಾಂ ವಾಸೇ ನಿತ್ಯತ್ವಂ ಚ ಲಭ್ಯತೇ ।

5 ಇಮೇ ಚಾನ್ಯೇ ಚ ಭಗವಾನ್ ನಿತ್ಯಾ ಯತ್ರ ಮಹಾಗುಣಾಃ ।

–ಭಾಗ 1-16-29

ಇಮೇ ಚತ್ವಾರಿಂಶದ್ ಅನ್ಯೇ ಚಾನುಕ್ತಾ ಅಸಧಾರಣ ಗುಣಾಃ ।

-ಬ. ಗೋ. (ಭಾ. ಟಿ)

6 ಗುಣೈಃ ಸ್ವರೂಪಭೂತೈಸ್ತು ಗುಣ್ಯಸೌ ಹರಿರೀಶ್ವರಃ ।

ಬ್ರಹ್ಮತರ್ಕ (ಭಾಗ ತಾ. ನಿ 1–16–29)

7 ನ ಚ ಯಾಂತಿ ಸ್ಮ ಕರ್ಹಿಚಿತ್ । -ಭಾಗ. 16–29

೫ ಎಲ್ಲವನ್ನೂ ಬಲ್ಲವನು ಅಥವಾ ಎಲ್ಲೆಡೆ ನಿಯಾಮಕನಾಗಿ ಇರುವವನು. ಮತ್ತು ಎಲ್ಲವನ್ನೂ ಸೃಷ್ಟಿಸುವವನು[1]

ಭಗವಂತನು ಎಲ್ಲವನ್ನೂ ಬಲ್ಲವನಾಗಿದ್ದು, ಎಲ್ಲದರ ನಿಯಾಮಕನಾಗಿರುವುದರಿಂದಲೇ ಎಲ್ಲವನ್ನೂ ಅವನೇ ಸೃಷ್ಟಿಮಾಡಬಲ್ಲವನಾಗಿರುವನು.

೬ ಅಮೃತವನ್ನು ಸೃಷ್ಟಿಸಿರುವವನು[2]

ಕ್ಷೀರಸಾಗರದ ಮಥನ ಸಂದರ್ಭದಲ್ಲಿ ಅಜಿತನಾಮಕನಾಗಿ ಮಥನದಲ್ಲಿ ಪಾಲ್ಗೊಂಡೂ, ಕೂರ್ಮನಾಗಿ ಮಂದರ ಪರ್ವತಧಾರಕನಾಗಿಯೂ ಅಮೃತದ ಆವಿರ್ಭಾವಕ್ಕೆ ಭಗವಂತನೇ ಮುಖ್ಯ ಕಾರಣನಾಗಿರುವನು

೭ (ದೇವತೆಗಳು ದಿಕ್ಪಾಲಕರಾಗಿ ಆಯಾಯ ಸ್ಥಾನದಲ್ಲಿ) ವಾಸಿಸುವಂತೆ ಮಾಡಿರುವವನು[3]

[ಅರ್ಥವಿಶೇಷಗಳನ್ನು ೧೦೭ನೆಯ 'ವಸು' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

## ಜಿಜ್ಞಾಸೆ

[ಸುಖದ ಮಹತ್ವ ಗೊತ್ತಾಗುವುದಕ್ಕಾಗಿ]

ಪ್ರ.- ರಾತ್ರಿಕಾಲದಲ್ಲಿ ಕತ್ತಲೆಯನ್ನು ಎಲ್ಲ ಕಡೆ ಕೊಡುವದರಿಂದ ಜನರು ಸರ್ವಕಾರ್ಯಗಳನ್ನು ಉಪಸಂಹರಿಸಬೇಕಾಗುವುದು ಜನರಿಗೆ ತುಂಬಾ ಉಪದ್ರವವನ್ನು ಮಾಡಿದಂತೆ ಆಗುವುದಲ್ಲ? ಇದು ಅವನ ಗುಣವು ಹೇಗಾಗುವದು?

ಉ.- ಜನರು ಸದಾ ಕಾರ್ಯ ಮಾಡುತ್ತಾ ಇದ್ದರೆ ಅವರಿಗೆ ಶ್ರಮವಾಗುವದು,ಅವರಿಗೆ ವಿಶ್ರಾಂತಿಯು ಬೇಕು ಎಂದು ಕತ್ತಲೆಯನ್ನು ಕೊಡುತ್ತಾನೆ ಮತ್ತು ಪರಮಾತ್ಮನು ಸುಖವನ್ನೂ ದುಃಖ

---

೫ 1 ಸರ್ವಂ ವಾತಿ ಜಾನಾತಿ ಅಥವಾ ನಿಯಾಮಕತಯಾ ಗಚ್ಛತೀತಿ ವಃ । 'ವಾ ಗತಿಗಂಧನಯೋಃ' ಸರ್ವಂ ಸೂತೇ ಸೃಜತೀತಿ ಸುಃ । ವಶ್ಚಾಸೌ ಸುಶ್ಚ ವಸುಃ ।

೬ 2 ವಕಾರಸ್ಯ ಅಮೃತಬೀಜಮಂತ್ರತ್ವಾತ್ ವಂ ಅಮೃತಂ ಸೂತೇ ಇತಿ ವಸುಃ ।

೭ 3 ವಾಸಯತಿ ದಿಕ್ಪಾಲಕತಯಾ ಸ್ಥಾನೇ ದೇವಾನಿತಿ ವಸುಃ ।

-ನಾ. ರಾ.

ವನ್ನೂ ಕೊಡತಕ್ಕವನು ಅದು ಹೇಗೆ ಅವನ ಗುಣವೋ ಹಾಗೆ ಪ್ರಕಾಶವನ್ನೂ ಕತ್ತಲಯನ್ನೂ ಕೊಡುವದು ಅವನ ಗುಣವೇ ಆಗುವದು ಸುಖದ ಮತ್ತು ಬೆಳಕಿನ ಮಹತ್ತ್ವವು ಗೊತ್ತಾಗಬೇಕಾದರೆ ದುಃಖವನ್ನೂ ಕತ್ತಲೆಯನ್ನೂ ಕೊಡಬೇಕು



೨೭೧ ನೈಕರೂಪಃ

೧ ಅನೇಕ ರೂಪಗಳುಳ್ಳವನು[1]

ಭಗವಂತನು ಒಬ್ಬನೇ ಆದರೂ ಅನೇಕಾನೇಕರೂಪಗಳನ್ನು ತೆಗೆದುಕೊಳ್ಳುವನು 'ನಾರಾಯಣನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬುದಾಗಿ ನಾಲ್ಕು ರೂಪಗಳಿಂದ ಸಹಿತನಾಗಿ ಒಟ್ಟು ಐದು ರೂಪಗಳುಳ್ಳವನಾದನು ಕೇಶವಾದಿ ದ್ವಾದಶ ರೂಪಗಳುಳ್ಳವನಾದನು ಮತ್ಸ್ಯಾದಿ ದಶರೂಪವಗಳುಳ್ಳವನಾದನು. ನಾರಾಯಣಾದಿ ನೂರೆಂಟು ರೂಪಗಳುಳ್ಳವನಾದನು. ವಿಶ್ವಾದಿ ಸಾವಿರ ರೂಪಗಳುಳ್ಳವನಾದನು ಸಾವಿರದಿಂದ ಮೇಲ್ಪಟ್ಟು ಪರಸಂಖ್ಯೆಯ ವರೆಗೂ ಇರುವ ಸಂಖ್ಯೆಗಳಷ್ಟು ರೂಪಗಳುಳ್ಳವನಾದನು ಅಜಿತಾದಿ ಅನಂತರೂಪಗಳುಳ್ಳವನಾದನು'— ಎಂಬುದಾಗಿ ಶ್ರೀಮದಾಚಾರ್ಯರು ಪಂಚರಾತ್ರಪ್ರಮಾಣದ ಮೂಲಕ ಸಂದೇಶಿಸಿರುವರು.[2] ಭಗವಂತನ ಕೃಷ್ಣ, ರಾಮ ಮತ್ತು ಕಪಿಲ ಎಂಬುದಾಗಿ ಮೂರು ರೂಪಗಳನ್ನು ವಿಶೇಷವಾಗಿ ಉಲ್ಲೇಖಿಸುವ 'ಚತುರ್ವೇದಶಿಖಾ'ವೂ ಭಗವಂತನ ಪಂಚ, ದಶ, ಶತ, ಸಹಸ್ರ ಹಾಗೂ ಅಮಿತ ರೂಪಗಳ ಸಮೂಹವನ್ನು ತಿಳಿಸಿದೆ[3] ಚತುರ್ವೇದ ಶಿಖಾದಲ್ಲೇ ಮತ್ತೊಂದೆಡೆ ಭಗವಂತನೇ ತಾನು ವಾಸುದೇವ ಸಂಕರ್ಷಣ ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬ ನಾಲ್ಕು ರೂಪಗಳುಳ್ಳವನೆಂದೂ, ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಹಾಗೂ ಕಲ್ಕಿ ಎಂಬ ದಶಾವತಾರಗಳುಳ್ಳವನೆಂದೂ, ನಾರಾಯಣಾದಿ

---

೧ 1 ನೈಕಾನಿ ಅನೇಕಾನಿ ರೂಪಾಣಿ ಯಸ್ಯ ಸಃ ನೈಕರೂಪಃ ।

2 'ಪಂಚಾತ್ಮಕಸ್ಸ ಭಗವಾನ್ ದ್ವಿಷಡಾತ್ಮಕೋಽಭವತ್ ಪಂಚದ್ವಯೀ ಶತಸಹಸ್ರಪರೋಽಮಿತಶ್ಚ । ಏಕಃ .' —ಮ. ಭಾರ ತಾ. 1–10

3 ತಸ್ಯ ಹ ವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣೋ ರಾಮ ಕಪಿಲ ಇತಿ । ತಸ್ಯ ವಾ ಏತಸ್ಯ ಪರಮಸ್ಯ ಪಂಚ ರೂಪಾಣಿ ದಶ ರೂಪಾಣಿ ಶತರೂಪಾಣಿ ಸಹಸ್ರರೂಪಾಣ್ಯಮಿತರೂಪಾಣಿ । ತಾನಿ ಹ ವಾ ಏತಾನಿ ಸರ್ವಾಣಿ ಪೂರ್ಣಾನ್ಯು ಸರ್ವಾಣ್ಯನಂತಾನಿ ಸರ್ವಾಣ್ಯಮಿತಾನಿ.. —ಚತುರ್ವೇದಶಿಖಾ (ಬ್ರ. ಸೂ. ಭಾ. 2-3-48)

ಶತಾವತಾರಗಳುಳ್ಳವನೆಂದೂ, ವಿಶ್ವಾದಿ ಸಹಸ್ರಾವತಾರಗಳುಳ್ಳವನೆಂದೂ, ಅಜಿತಾದಿ ಅನಂತಾವತಾರಗಳುಳ್ಳವನೆಂದೂ—ಈ ಎಲ್ಲ ರೂಪಗಳು ಜನ್ಮ ಮರಣಾದಿ ರಹಿತಗಳು, ಬಂಧಾದಿ ದೋಷದೂರಗಳು, ಗುಣಪೂರ್ಣಗಳು—ಎಂದೂ ಸಂದೇಶಿಸಿರುವುದನ್ನು ಉಲ್ಲೇಖಿಸಲಾಗಿದೆ[1] ಸರ್ವಸಮರ್ಥನಾದ ಪ್ರಯುಕ್ತ, ಇಂದ್ರ ಎನಿಸುವ ಭಗವಂತನು ತನ್ನ ಇಚ್ಛೆಗನುಗುಣವಾಗಿ ತನ್ನ ಸಾಮರ್ಥ್ಯದಿಂದ ಅನಂತರೂಪಗಳನ್ನು ಧರಿಸುವನೆಂಬ ಋಗ್ವೇದ ಮಂತ್ರವನ್ನು ಉಲ್ಲೇಖಿಸುವ ಬೃಹದಾರಣ್ಯಕೋಪನಿಷತ್ತು, ಆ ಮಂತ್ರದ ಅಭಿಪ್ರಾಯವನ್ನು ವಿವರಿಸುತ್ತ 'ಹರಿ' ಎನಿಸುವ ಭಗವದ್ರೂಪಗಳು ದಶ, ಶತ, ಸಹಸ್ರ, ಬಹು ಹಾಗೂ ಅನಂತ ಸಂಖ್ಯೆಯಲ್ಲಿವೆ—ಎಂದು ಸಂದೇಶಿಸಿದೆ[2] ಭಗವಂತನ ಅನಂತ ರೂಪಗಳ ಕುರಿತು ಅಧಿಕ ವಿಚಾರವನ್ನು ತಿಳಿಸುತ್ತ—ಭಗವಂತನ ಪ್ರತಿಯೊಂದು ರೂಪವನ್ನೂ ಕುರಿತು ಪ್ರತಿಬಿಂಬನಾಗಿ ಜೀವಾತ್ಮನಿರುವನು ಅರ್ಥಾತ್ ಜೀವಾತ್ಮರು ಅನಂತರಾಗಿರುವಂತೆ ಅವರ ಬಿಂಬರೂಪಗಳಾಗಿರುವ ಭಗವದ್ರೂಪಗಳೂ ಅನಂತಗಳು—ಎಂದೂ ಬೃಹದಾರಣ್ಯಕೋಪನಿಷತ್ತು ಬೋಧಿಸಿದೆ[3]

---

1 'ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನೋಽನಿರುದ್ಧೋಽಹಂ ಮತ್ಸ್ಯಃ ಕೂರ್ಮೋ ವರಾಹೋ ನಾರಸಿಂಹೋ ವಾಮನೋ ರಾಮೋ ರಾಮಃ ಕೃಷ್ಣೋ ಬುದ್ಧಃ ಕಲ್ಕಿರಹಂ ಶತಧಾಽಹಂ ಸಹಸ್ರಧಾಽಹಮಮಿತೋಽಹಮನಂತೋಽಹಂ ನೈವೈತೇ ಜಾಯಂತೇ ನ ಮ್ರಿಯಂತೇ ನೈಷಾಮಜ್ಞಾನಂ ನ ಬಂಧೋ ನ ಮುಕ್ತಿಃ ಸರ್ವ ಏವ ಹ್ಯೇತೇ ಪೂರ್ಣಾ ಅಜರಾ ಅಮೃತಾಃ ಪರಮಾಃ ಪರಾನಂದಾಃ'

–ಚತುರ್ವೇದಶಿಖಾ (ಬ್ರ ಸೂ ಭಾ. 2–3–48)

2 'ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶೇ-ತ್ಯಯಂ ವೈ ಹರಯೋಽಯಂ ವೈ ದಶ ಸಹಸ್ರಾಣಿ ಬಹೂನಿ ಚಾನಂತಾನಿ ಚ ತದೇತದ್ ಬ್ರಹ್ಮ .'

–ಬೃ ಉ 4-5–19

ಸ ಏವ ದಶಧಾ ಪ್ರೋಕ್ತೋ ವಿಷ್ಣುರ್ಮತ್ಸ್ಯಾದಿರೂಪಕಃ ।
ಶತಂ ನಾರಾಯಣಾದ್ಯಾತ್ಮಾ ವಿಶ್ವಾದ್ಯಾತ್ಮಾ ಸಹಸ್ರಕಃ ।
ಪರಾದಿರೂಪೋ ಬಹುಧಾ ಸೋಽನಂತಾತ್ಮಾಽಜಿತಾದಿಕಃ ।

–ಬೃ. ಉ ಭಾ.

3 ...ರೂಪಂ ರೂಪಂ ಪ್ರತಿರೂಪೋ ಬಭೂವ

–ಬೃ. ಉ. 4-5-19

ಭಗವತೋ ರೂಪಂ ರೂಪಂ ಪ್ರತಿ ಜೀವಾಖ್ಯಃ ಪ್ರತಿಬಿಂಬೋ ಬಭೂವ ।

–ಬೃ. ಉ. ಭಾ.

ಭಗವಂತನು ಸ್ವೀಕರಿಸುವ ರೂಪಗಳನ್ನು ಹೀಗೆ ಕ್ರೋಢೀಕರಿಸಿ ತಿಳಿದುಕೊಳ್ಳಬಹುದು— ಭಗವಂತನ ಪದ್ಮನಾಭರೂಪ ಒಂದು, ಜೀವಾತ್ಮರ ಹೃದಯದಲ್ಲಿದ್ದುಕೊಂಡು ಕರ್ಮರಸವನ್ನು ಸ್ವೀಕರಿಸುವ ಆತ್ಮ ಹಾಗೂ ಅಂತರಾತ್ಮ ಎಂಬುದಾಗಿ ಎರಡು ಭಗವದ್ರೂಪಗಳು[1] ವೈಕುಂಠಾದಿ ತ್ರಿಧಾಮಗಳಲ್ಲಿರುವ ಅಮೃತ, ಕ್ಷೇಮ ಹಾಗೂ ಅಭಯ ಎಂಬುದಾಗಿ ಮೂರು ಭಗವದ್ರೂಪಗಳು[2] ಹಾಗೆಯೇ ಸತ್ತ್ವರಜಸ್ತಮೋ ಗುಣಗಳಿಗೆ ಹಾಗೂ ವಾತ, ಪಿತ್ತ, ಕಫ ಎಂಬ ತ್ರಿಧಾತುಗಳಿಗೆ ನಿಯಾಮಕಳಾದ ಅಚ್ಯುತಾನಂತ ಗೋವಿಂದ ಎಂಬ ಭಗವದ್ರೂಪಗಳು ಮೂರು ಸೃಷ್ಟಿ, ಸ್ಥಿತಿ, ಲಯಗಳನ್ನು ನಿರ್ವಹಿಸುವ ರೂಪಗಳು ಮೂರು[3] ಮುಕ್ತಿದಾನಾದಿಗಳನ್ನು ನಿರ್ವಹಿಸುವ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬುದಾಗಿ ನಾಲ್ಕು ಭಗವದ್ರೂಪಗಳು ಹಾಗೆಯೇ ಜಾಗ್ರದವಸ್ಥಾದಿ ಪ್ರೇರಕಗಳಾದ ವಿಶ್ವ ತೈಜಸ, ಪ್ರಾಜ್ಞ ಹಾಗೂ ತುರೀಯ— ಎಂಬುದಾಗಿ ನಾಲ್ಕು ಭಗವದ್ರೂಪಗಳು ನಾರಾಯಣ ಎಂಬ ಮೂಲರೂಪವನ್ನು ಸೇರಿಸಿ ವಾಸುದೇವಾದಿರೂಪಗಳು ಐದು ಸಂಖ್ಯೆಯಲ್ಲಿರುವವು ಹಾಗೆಯೇ ಕೃದ್ಧೋಲ್ಕ, ಮಹೋಲ್ಕ ವೀರೋಲ್ಕ ದ್ಯುಲ್ಕ ಹಾಗೂ ಸಹಸ್ರೋಲ್ಕ ಎಂಬುದಾಗಿ ಐದು ಭಗವದ್ರೂಪಗಳು[4]. ಲೋಕಗಳಲ್ಲಿ ವೃಷ್ಟಿಯಲ್ಲಿ, ನೀರಲ್ಲಿ, ಋತುಗಳಲ್ಲಿ, ಪಶುಗಳಲ್ಲಿ ಹಾಗೂ ಪ್ರಾಣಗಳಲ್ಲಿ ಇರುವ ಉದ್ಗೀಥ, ಪ್ರಸ್ತಾವ, ನಿಧನ, ಹಿಂಕಾರ ಹಾಗೂ ಪ್ರತಿಹಾರ ಎಂಬ ಐದು ಭಗವದ್ರೂಪಗಳು[5] ದೇಹದ ಅನ್ನಮಯಾದಿ

---

1 'ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ । ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್' -ಬೃಹತ್ಸಂಹಿತಾ (ಬ್ರ. ಸೂ ಭಾ. 1-2-11)

2 ತ್ರಿಪಾದಸ್ಯಾಮೃತಂ ದಿವಿ ..। -ಪು. ಸೂ.

ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋಽಧಾಯಿ ಮೂರ್ಧಸು ।

-ಭಾಗ. 2-6-18

3 ಬ್ರಹ್ಮವಿಷ್ಣ್ವೀಶರೂಪಾಣಿ ತ್ರೀಣಿ ವಿಷ್ಣೋರ್ಮಹಾತ್ಮನಃ । ಬ್ರಹ್ಮಣಿ ಬ್ರಹ್ಮರೂಪಃ ಸ ಶಿವರೂಪೀ ಶಿವೇ ಸ್ಥಿತಃ । ಪೃಥಗೇವ ಸ್ಥಿತೋ ದೇವೋ ವಿಷ್ಣುರೂಪೋ ಜನಾರ್ದನಃ ।

-ವಾಮನ ಪುರಾಣ (ಭಾಗ. ತಾ. ನಿ. 1-2-24)

4 ಕ್ರುದ್ಧಮಹಾವೀರದ್ಯುಸಹಸ್ರಸಹಿತೋಲ್ಕಕಾಃ । . ಪೃಥಗ್ರೂಪಾಣಿ ತಾನಿ ಚ । ವಿಷ್ಣೋರೇವ . . । -ಶಂ. ಸಾ. ಸಂ 1-29

5 ಛಾಂದೋಗ್ಯೋಪನಿಷದಿ(2-1)'ಲೋಕೇಷು ಪಂಚವಿಧಂ ಸಾಮೋಪಾಸೀತ... ಪ್ರಾಣೇಷು ಪಂಚವಿಧಂ...' ಇತಿ ಗ್ರಂಥಭಾಗೇ ಇದಂ ರೂಪಪಂಚಕಂ ವಿವೃತಮ್ ।

ಪಂಚಕೋಶಗಳಲ್ಲಿ ಇರುವ ಅನ್ನಮಯಾದಿ ಪಂಚರೂಪಗಳು[1] ಮಾತಿನಲ್ಲಿ, ಆದಿತ್ಯನಲ್ಲಿ ಇರುವ ಹಿಂಕಾರ, ಪ್ರಸ್ತಾವ, ಆದಿ, ಉದ್ಗೀಥ, ಪ್ರತಿಹಾರ, ಉಪದ್ರವ ಹಾಗೂ ನಿಧನ ಎಂಬುದಾಗಿ ಏಳು ಭಗವದ್ರೂಪಗಳು.[2] ವ್ಯಾಹೃತಿಯ ಎಂಟು ಅಕ್ಷರಗಳಿಂದ ವಾಚ್ಯಗಳಾದ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ ಹಾಗೂ ಜ್ಞಾನಾತ್ಮಗಳೆಂಬ ಎಂಟು ರೂಪಗಳು[3] ಅಥವಾ ಕೃಷ್ಣ, ರಾಮ, ನೃಸಿಂಹ, ವರಾಹ, ವಿಷ್ಣು, ಪರಂಜ್ಯೋತಿ, ಪರಂಬ್ರಹ್ಮ ಹಾಗೂ ವಾಸುದೇವಗಳೆಂಬ ಎಂಟು ರೂಪಗಳು[4] ಅಥವಾ ಹೃಷೀಕೇಶ, ಶ್ರೀಧರ, ವಾಮನ, ತ್ರಿವಿಕ್ರಮ, ಮಧುಸೂಧನ, ವಿಷ್ಣು, ಗೋವಿಂದ ಹಾಗೂ ಮಾಧವ ಎಂಬ ಎಂಟು ರೂಪಗಳು ಪಂಚರಾತ್ರದಲ್ಲಿ ಪ್ರತಿಪಾದಿಸಿರುವ ನಾರಾಯಣ, ಪರಂಬ್ರಹ್ಮ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ನಾರಸಿಂಹ, ವರಾಹ ಹಾಗೂ ಪರಂಜ್ಯೋತಿ—ಎಂಬ ಒಂಭತ್ತು ರೂಪಗಳು,[5] ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ

---

1 ತೈತ್ತಿರೀಯೋಪನಿಷದಃ ದ್ವಿತೀಯವಲ್ಲ್ಯಾಂ ಅನ್ನಮಯಾದಯಃ ವಿವೃತಾಸ್ತೇಷಾಂ ಬ್ರಹ್ಮಸ್ವರೂಪತ್ವಂ ಚ 'ಆನಂದಮಯೋऽಭ್ಯಾಸಾತ್' (1-1-12) ಇತಿ ಬ್ರಹ್ಮಸೂತ್ರೇಣ ಸಿದ್ಧಾಂತಿತಮ್ ।

2 ಛಾಂದೋಗ್ಯೋಪನಿಷದಿ (2-1) 'ಅಥ ಸಪ್ತವಿಧಸ್ಯ ವಾಚಿ ಸಪ್ತವಿಧಂ ಸಾಮೋಪಾಸೀತ... ...ಅತಿಮೃತ್ಯು ಸಪ್ತವಿಧಂ ಸಾಮೋಪಾಸ್ತೇ' ಇತಿ ಗ್ರಂಥಭಾಗೇ ಇದಂ ರೂಪಸಪ್ತಕಂ ವಿವೃತಮ್ ।

3 ಸ ವಿಶ್ವತೈಜಸಪ್ರಾಜ್ಞತುರೀಯಾತ್ಮಾಂತರಾತ್ಮನಾಮ್ ।
ಪರಮಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ ॥
—ಶಂ. ಸಾ. ಸಂ. 1-4

4 ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವ ಚ ।
ಪರಂಜ್ಯೋತಿಃ ಪರಂಬ್ರಹ್ಮ ವಾಸುದೇವ ಇತಿ ಕ್ರಮಾತ್ ।
ಅಕಾರಾದೇಸ್ತಥಾ ಶಾಂತಾತಿಶಾಂತಾಂತಸ್ಯ ದೇವತಾಃ ॥
—ಓಂಕಾರಪ್ರಣವಕಲ್ಪ-4

5 ನಾರಾಯಣಃ ಪರಂಬ್ರಹ್ಮ ವಾಸುದೇವಾದಿಕಾಸ್ತಥಾ ।
ನಾರಸಿಂಹವರಾಹೌ ಚ ಪರಂಜ್ಯೋತಿರ್ಹರೇರ್ನವ ।
—ಭಾಗ. ತಾ. 11-16-32

ಹಾಗೂ ಅನುಗ್ರಹಾ—ಎಂಬುದಾಗಿ ಸ್ವರೂಪ ಶಕ್ತಿ ರೂಪಗಳಾದ ಒಂಭತ್ತು ರೂಪಗಳು[1], ಮತ್ಸ್ಯಾದಿ ದಶಾವತಾರಗಳು, ಮಹಾಲಕ್ಷ್ಮಿ ಸ್ವರೂಪಗಳಾದ ಕಾಲ, ಮಾಯಾ, ನಿಯತಿ, ಮತಿ, ವಿದ್ಯಾ, ಕಲಾ, ಪ್ರವೃತ್ತಿ, ಸ್ಫೂರ್ತಿ, ಸಂವಿತ್, ಪ್ರತಿಷ್ಠಾ ಹಾಗಯೇ ಶಕ್ತಿ—ಎಂಬವುಗಳ ಹೆಸರುಳ್ಳ ಭಗವಂತನ ಹನ್ನೊಂದು ರೂಪಗಳು[2]. ಕೇಶವಾದಿ ದ್ವಾದಶ ರೂಪಗಳು, ಸ್ವರಾಕ್ಷರ ಪ್ರತಿಪಾದ್ಯಗಳಾದ ಅಜಾದಿ ಹದಿನಾರು ಭಗವದ್ರೂಪಗಳು, ವ್ಯಂಜನಾಕ್ಷರ ಪ್ರತಿಪಾದ್ಯಗಳಾದ ಕಪಿಲಾದಿ ಮೂವತ್ನಾಲ್ಕು ಭಗವದ್ರೂಪಗಳು[3] ವರ್ಣ ಪ್ರತಿಪಾದ್ಯಗಳಾದ ಅಜಾದಿ ಐವತ್ತು ಭಗವದ್ರೂಪಗಳು, ಕ್ಷ ಸಹಿತವಾಗಿ ಐವತ್ತೊಂದು ವರ್ಣಗಳಿಂದ ವಾಚ್ಯಗಳಾದ ಐವತ್ತೊಂದು ಭಗವದ್ರೂಪಗಳು ಪ್ರಭವಾದಿ ಅರುವತ್ತು ಸಂವತ್ಸರ ನಿಯಾಮಕಗಳಾದ ಅರುವತ್ತು ಭಗವದ್ರೂಪಗಳು, ಐವತ್ತೊಂದು ವರ್ಣ ಪ್ರತಿಪಾದ್ಯಗಳೇ ಮೊದಲಾದ ಕಲಶನಾಮಕರಾದ ನೂರು ಭಗವದ್ರೂಪಗಳು[4], ನೂರ ಒಂದು ಪ್ರಧಾನ ನಾಡಿಗಳಲ್ಲಿರುವ[5] ನೂರ ಒಂದು ಭಗವದ್ರೂಪಗಳು, ನಾರಾಯಣಾಷ್ಟೋತ್ತರ ಶತ ನಾಮ ಸ್ತೋತ್ರ ಪ್ರತಿಪಾದ್ಯಗಳಾದ ನೂರೆಂಟು ಭಗವದ್ರೂಪಗಳು[6], ವಿಷ್ಣುಸಹಸ್ರನಾಮ ಪ್ರತಿಪಾದ್ಯ

---

1 . ವಿಮಲಾದ್ಯಾಸ್ತು ಶಕ್ತಯಃ । ವಿಷ್ಣೋಃ ಸ್ವರೂಪಭೂತಾಃ ..

—ತಂತ್ರನಿರ್ಣಯ (ಭಾಗ. ತಾ. ನಿ. 6-4-27)

2 . ಕಾಲಮಾಯೇ ಚ ನಿಯತಿರ್ಮತಿರೇವ ಚ । ವಿದ್ಯಾ ಕಲಾ ಪ್ರವೃತ್ತಿಶ್ಚ । ಸ್ಫೂರ್ತಿಃ ಸಂವಿತ್ ಪ್ರತಿಷ್ಠಾ ಚ ಶಕ್ತಿರಿತ್ಯಪರಾಣಿ ಚ । . ವಿಷ್ಣೋರಪಿ ಹಿ ರೂಪಾಣಿ ತನ್ನಾಮ್ನ್ಯೇಕಾದಶೈವ ತು ॥ —ತಂ ಸಾ. ಸಂ. 3-130

3 ಅಜ ಆನಂದ .. ಇತ್ಯಾರಭ್ಯ... ಮಮಾಕಾರಾದಿಲಕ್ಷಣಃ' ಇತಿ ಪರ್ಯಂತಂ ತಂತ್ರಸಾರ-ಸಂಗ್ರಹೇ ವರ್ಣವಾಚ್ಯಾನಿ ಭಗವದ್ರೂಪಾಣಿ ನಿರೂಪಿತಾನಿ ।

4 'ಏಕ ಪಂಚಾಶದರ್ಣಾನಾಂ...ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶನಾಮಕಾಃ'

-ತಂ. ಸಾ. ಸಂ. 2-7

5 ಶತಂ ಚೈಕಾ ಹೃದಯಸ್ಯ ನಾಡ್ಯಃ ...। —ಕಾ. ಉ.

6 ವರಾಹ ಪುರಾಣೇ ಧರಣೀಯಜ್ಞವರಾಹ ಸಂವಾದೇ ನಾರಾಯಣಾಷ್ಟೋತ್ತರ ಶತನಾಮ ಸ್ತೋತ್ರಂ ಪಠ್ಯತೇ—ನಾರಾಯಣೋ ನರಃ ಶೌರಿರಿತ್ಯಾದಿನಾ ।

ಗಳಾದ ಹಾಗೂ ಬೃಹತೀಸಹಸ್ರದ ಸಾವಿರ ಋಕ್‌ಗಳಿಂದ ಪ್ರತಿಪಾದ್ಯಗಳಾದ ಸಾವಿರ ಭಗವದ್ರೂಪಗಳು[1] ವಿಷ್ಣು ಹೆಸರಿನ ಅಕ್ಷರ, ಊಷ್ಮ ಹಾಗೂ ಸಂಧಿಗಳಲ್ಲಿ ಇರುವ, ರಾತ್ರಿ, ಹಗಲು ಹಾಗೂ ಸಂಧ್ಯಾಗಳಲ್ಲಿ ಇರುವ, ಜೀವಾತ್ಮರ ಅಸ್ಥಿ ಮಜ್ಜಾ ಹಾಗೂ ಸಂಧಿಗಳಲ್ಲಿರುವ ಸಾವಿರದ ಎಂಭತ್ತು ಭಗವದ್ರೂಪಗಳು[2], ಬೃಹತೀಸಹಸ್ರದ ಮೂವತ್ತಾರು ಸಾವಿರ ಸ್ವರಾಕ್ಷರಗಳಲ್ಲೂ, ಮೂವತ್ತಾರು ಸಾವಿರ ವ್ಯಂಜನಾಕ್ಷರಗಳಲ್ಲೂ ಇರುವ ಹಾಗೂ ಮನುಷ್ಯನ ನೂರು ವರ್ಷಗಳ ಮೂವತ್ತಾರು ಸಾವಿರ ಹಗಲುಗಳಲ್ಲೂ ಮೂವತ್ತಾರು ಸಾವಿರ ರಾತ್ರಿಗಳಲ್ಲೂ ಇರುವ, ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿರುವ ಮೂವತ್ತಾರು ಸಾವಿರ ಸ್ತ್ರೀರೂಪಗಳು, ಮೂವತ್ತಾರು ಸಾವಿರ ಪುರುಷ ರೂಪಗಳು—ಹೀಗೆ ಒಟ್ಟು ಎಪ್ಪತ್ತೆರಡು ಸಾವಿರ ರೂಪಗಳು[3] ನೂರ ಒಂದು ಪ್ರಧಾನ ನಾಡಿಗಳಲ್ಲಿ ಪ್ರತಿಯೊಂದಕ್ಕೂ ಎಪ್ಪತ್ತೆರಡು ಸಾವಿರ ಉಪನಾಡಿಗಳಿದ್ದು ಹೀಗೆ ಒಟ್ಟು ಎಪ್ಪತ್ತೆರಡು ಲಕ್ಷದ ಎಪ್ಪತ್ತೆರಡು ಸಾವಿರ ಉಪನಾಡಿಗಳಲ್ಲಿರುವ ಎಪ್ಪತ್ತೆರಡು ಲಕ್ಷದ ಎಪ್ಪತ್ತೆರಡು ಸಾವಿರ ಭಗವದ್ರೂಪಗಳು, ಮೂವತ್ತ ಮೂರು ಕೋಟಿ ದೇವತೆಗಳಲ್ಲಿರುವ ಮೂವತ್ತಮೂರು ಕೋಟಿ ಭಗವದ್ರೂಪಗಳು, ಶತಕೋಟಿ ಋಷಿಗಳಲ್ಲಿರುವ ಶತ ಕೋಟಿ ಭಗವದ್ರೂಪಗಳು, ಅನಂತ ಜೀವರಾಶಿಗಳಲ್ಲಿ, ಅನಂತ ಜಡ ಪದಾರ್ಥಗಳಲ್ಲಿ ಹಾಗೂ ಅನಂತ ವರ್ಣಗಳಲ್ಲಿರುವ ಅಜಾದಿ ಅನಂತ ಭಗವದ್ರೂಪಗಳು—

---

1 ವಿಷ್ಣೋಃ ಸಹಸ್ರನಾಮ್ನಸ್ತು ಯತ್ ತದ್ ರೂಪಸಹಸ್ರಕಮ್ ।
ಬೃಹತೀಸಹಸ್ರಮೇತಚ್ಚ ತದ್ ವಕ್ತಿ ಹಿ ಪೃಥಕ್ ಪೃಥಕ್ ।
—ಮ. ಐ. ಉ. ಭಾ. (2-2-3-4-1)

2 ಸಂಧ್ಯೂಷ್ಮಾಕ್ಷರಗಾಣ್ಯಸ್ಯ ವಿಷ್ಣೋಃ ರೂಪಾಣಿ ಸರ್ವಶಃ ।
ಸಂಧ್ಯಾರಾತ್ರಿ ದಿವಾಸ್ಥಾನಿ ಸಾಶೀತಿಕಂ ಸಹಸ್ರಕಮ್ ।
ತಾನ್ಯೇವಾಸ್ಥಿಷು ಮಜ್ಜಾಸು ಪರ್ವಸ್ವಪಿ ಚ ಸರ್ವಶಃ ।
—ಮ ಐ. ಉ. ಭಾ. (2-8-2-3)

3 ಷಟ್ ತ್ರಿಂಶದ್ರೂಪವಾನ್ ವಿಷ್ಣುರ್ವ್ಯಂಜನೇಷು ಚ ಸಂಸ್ಥಿತಃ ।
ತಾನ್ಯೇವ ವಿಷ್ಣುರೂಪಾಣಿ ರಾತ್ರೀಣಾಮಪಿ ದೇವತಾಃ ।
... ಷಟ್ ತ್ರಿಂಶತಿ ಸಹಸ್ರಾಣಿ ಸ್ವರಗಾನಿ ಹರೇರಪಿ ।
ತಾನ್ಯೇವಾಹ್ನಾಂ ದೈವತಾನಿ ರೂಪಾಣಿ ಪರಮಾತ್ಮನಃ ।
ದ್ವಾಸಪ್ತತಿ ಸಹಸ್ರಾಣಿ ರೂಪಾಣ್ಯೇವಂ ರಮಾಪತೇಃ ।
ಶತಾಬ್ದಾನಾಮಹೋ ರಾತ್ರದೈವತಾನ್ಯುತ್ತಮಾನಿ ಚ ।
—ಐತರೇಯಸಂಹಿತಾ (ಐ. ಉ. ಭಾ. 2-1-3-1)

ಹೀಗೆ ನಿತ್ಯವೂ ಒಂದೇ ಸ್ವರೂಪದ ಭಗವಂತನು ಲೀಲೆಯಿಂದ ಅನೇಕ ರೂಪಗಳನ್ನು ಸ್ವೀಕರಿಸುವವನು.[1]

೨ ಸಕಲ ಜೀವ ಜಡಗಳಿಗಿಂತ ಭಿನ್ನನಾಗಿರುವವನು ಮತ್ತು ಒಂದೇ ಸ್ವರೂಪ ಉಳ್ಳವನು[2]

ಭಗವಂತನು ಸಕಲ ಜೀವಜಡಗಳಿಗಿಂತ ಭಿನ್ನನಾಗಿರುವನೆಂಬುದು ನಾರಾಯಣ ನಾಮದ ಮೊದಲ ನಕಾರದಿಂದ ಪ್ರತಿಪಾದಿಸಲ್ಪಟ್ಟಿದೆ ಎಂಬುದನ್ನು 'ಬ್ರಹ್ಮಸಾರ' ತಿಳಿಸಿದೆ.[3] ಬಗವಂತನು ಎಲ್ಲೆಡೆಯೂ ಒಂದೇ ಸ್ವರೂಪ ಉಳ್ಳವನು[4]

೩ ಸಂಸಾರ ಬಂಧನದಿಂದ ಬಂಧಕನಾಗಿರುವವನು, ಸ್ವತಂತ್ರನಾಗಿರುವವನು ಹಾಗೂ ಮೋಹವನ್ನುಂಟು ಮಾಡುವವನು[5]

---

1 ಪರಮಾತ್ಮನೇ ಸತತಮೇಕರೂಪಿಣೇ ದಶರೂಪಿಣೇ ಶತಸಹಸ್ರರೂಪಿಣೇ ।
ಅವಿಕಾರಿಣೇ ಸ್ಫುಟಮನಂತರೂಪಿಣೇ ಸುಖಚಿತ್ಸಮಸ್ತತನವೇ ನಮೋ ನಮಃ ॥
-ಸು. ಮ. ವಿ

೨ 2 ಸರ್ವಜೀವೇಭ್ಯಃ ಜಡೇಭ್ಯಶ್ಚ ಅನ್ಯತಾತ್ ನ । ಏಕಂ ರೂಪಂ ಸ್ವರೂಪಂ ಯಸ್ಯ ಸಃ ಏಕರೂಪಃ । ನ ಏಕರೂಪಃ ನೈಕರೂಪಃ ।

3 ಅನ್ಯತ್ವಾತ್ ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ । .. ...ನಾರಾಯಣ ಇತಿ ಪ್ರೋಕ್ತೋ..
-ಬ್ರಹ್ಮಸಾರ (ಐ. ಉ. ಭಾ. 2-2-6-5)

4 ಏಕರೂಪಃ ಪರೋ ವಿಷ್ಣುಃ ಸರ್ವತ್ರಾಪಿ ನ ಸಂಶಯಃ ।
-ಮಾತ್ಸ್ಯ (ಬ್ರ. ಸೂ.ಭಾ. 3-2-11)

5 ನಹ್ಯತಿ ಸಂಸಾರೇಣ ಬಧ್ನಾತೀತಿ ನ । 'ಣಹ ಬಂಧನೇ' । ಸ್ವತಂತ್ರತ್ವಾತ್ ಏಕಃ । ರುಹ್ಯತಿ ವಿಮೋಹಯತೀತಿ ರೂಪಃ । 'ರುಹ ವಿಮೋಹನೇ' ।

ಸ್ವತಂತ್ರನಾಗಿರುವ ಭಗವಂತನು ಜೀವರಲ್ಲಿ ಸ್ವಾತಂತ್ರ್ಯ, ಸ್ವಾಮಿತ್ವ ವಿಷಯಕವಾದ ಮೋಹವನ್ನುಂಟುಮಾಡಿ ಸಂಸಾರ ಬಂಧನದಲ್ಲಿ ಅವರನ್ನು ಬಂಧಿಸುವವನು

೪ ದೋಷವಿರುದ್ಧ ಗುಣ ಸ್ವರೂಪಿ ಹಾಗೂ ಒಂದೇ ಸ್ವಭಾವ ಉಳ್ಳವನು[1]

ಭಗವಂತನು ಸರ್ವ ದೋಷ ವಿರುದ್ಧ ಶ್ರೇಷ್ಠ ಗುಣಪೂರ್ಣ ಸ್ವರೂಪಿಯಾಗಿರುವನೆಂಬುದು ನಾರಾಯಣ ನಾಮದ ಕೊನೆಯ ನಕಾರದಿಂದ ವಾಚ್ಯವಾಗಿದೆ ಎಂಬುದನ್ನು ಬ್ರಹ್ಮಸಾರ ತಿಳಿಸಿದೆ.[2] ಪೂರ್ಣ ಶಕ್ತಿತ್ವ, ಸಾರ್ವಜ್ಞ್ಯ, ಪೂರ್ಣತ್ವ ಹಾಗೂ ಉಪಜೀವ್ಯತ್ವ ಮುಂತಾದ ಅಸಾಧಾರಣ ಗುಣಗಳನ್ನೊಳಗೊಂಡ 'ಈಶತ್ವ'ವು ಭಗವಂತನ ಸ್ವಭಾವವಾಗಿದ್ದು, ಎಂದೂ ಅದು ಒದಲಾಗದು[3]

೫ ಅನೇಕರಿಗೆ ರೂಪ ಕೊಟ್ಟಿರುವವನು[4]

೬ ಅನೇಕರಿಂದ ಸ್ತುತಿಸಲ್ಪಡುವವನು[5]

೭ ಅನೇಕ ಭಕ್ತರನ್ನು ಉದ್ಧರಿಸುವವನು.[6]

---

೪ 1 ದೋಷವಿರುದ್ಧಗುಣರೂಪತ್ವಾತ್ ನ। ಏಕಂ ರೂಪಂ ಸ್ವಭಾವಃ ಯಸ್ಯ ಸಃ ಏಕರೂಪಃ। 'ರೂಪಂ ತು ಸ್ವಭಾವೇ ಚ' —ಹೈಮಃ।

2 '....ನೋ ವಿರುದ್ಧಾರ್ಥವಾಚಕಃ । . ಸರ್ವದೋಷ ವಿರುದ್ಧೋರುಗುಣಪೂರ್ಣ ಸ್ವರೂಪತಃ। ನಾರಾಯಣ ಇತಿ ಪ್ರೋಕ್ತೋ... '
—ಬ್ರಹ್ಮಸಾರ (ಐ. ಉ. ಭಾ. 2-2-65)

3 .. ಈಶತ್ವಂ ತದ್ವಿಪರ್ಯಯಃ। ಸ್ವಾಭಾವಿಕಂ ತಯೋರೇತನ್ನಾನ್ಯಥಾ ಸ್ಯಾತ್ ಕದಾಚನ। —ಮಹಾವಿಷ್ಣುಪುರಾಣ (ಗೀ. ತಾ. 2-20)

೫ 4 ನೈಕಾನ್ ರೂಪಯತೀತಿ ನೈಕರೂಪಃ। 'ರೂಪ ರೂಪಕರಣೇ'

೬ 5 ನೈಕೈಃ ರೂಯತೇ ಸ್ತೂಯತ ಇತಿ ನೈಕರೂಪಃ। 'ರು ಶಬ್ದೇ'

೭ 6 ನೈಕಾನ್ ಅನೇಕಾನ್ ಭಕ್ತಾನ್ ರೋಪಯತಿ ಉಪರಿ ಭಾವಯತಿ, ಉದ್ಧರತೀತಿ ಯಾವತ್ ನೈಕರೂಪಃ। 'ರೂಪೋಪರಿ ಭಾವೇ' ಇತಿ ಚ ಧಾತುಃ।
—ಭಾಗ. ತಾ. ನಿ. 2-10-45

## ಜಿಜ್ಞಾಸೆ

[ಸ್ತ್ರೀಯರ ಅಪೇಕ್ಷೆ ಇಲ್ಲದ ಸೃಷ್ಟಿ]

ಪ್ರ - ಪರಮಾತ್ಮನ ಅನಿರುದ್ಧ ರೂಪವು ಸ್ಥಿತಿಕರ್ತೃ ಎಂದೂ ಪ್ರದ್ಯುಮ್ನರೂಪವು ಮಾತ್ರ ಸೃಷ್ಟಿಕರ್ತೃ ಎಂದು ಶಾಸ್ತ್ರವು ಹೇಳುತ್ತದೆ ಆದರೆ ಎಲ್ಲ ಜೀವರಿಗೆ ಅನಿರುದ್ಧ ದೇಹವು ಇದೆ ಅದು ಅನಿರುದ್ಧರೂಪದಿಂದ ನಿರ್ಮಿತವಾದುದರಿಂದ ಅನಿರುದ್ಧ ದೇಹವೆಂದು ಹೇಳಲ್ಪಡುತ್ತದೆ ಈ ರೀತಿ ಅನಿರುದ್ಧನೂ ಸೃಷ್ಟಿಮಾಡಿದ್ದರಿಂದ ಪ್ರದ್ಯುಮ್ನನು ಮಾತ್ರ ಸೃಷ್ಟಿಕರ್ತೃ ಎಂದು ಶಾಸ್ತ್ರದಲ್ಲಿ ಹೇಳಿದ್ದನ್ನು ಹೇಗೆ ಕೂಡಿಸುವುದು?

ಉ - ಪ್ರದ್ಯುಮ್ನನು ಸೃಷ್ಟಿಕರ್ತೃ ಎಂದರೆ ಸ್ತ್ರೀಪುರುಷದ್ವಾರಾ ಸೃಷ್ಟಿಯಾಗುವದು ಮಾತ್ರ ಪ್ರದ್ಯುಮ್ನ ರೂಪದಿಂದ ಎಂದು ಅಭಿಪ್ರಾಯ ಅನಿರುದ್ಧನು ಸೃಷ್ಟಿಮಾಡಿದರೂ ಸ್ತ್ರೀಪುರುಷ ದ್ವಾರಾ ಸೃಷ್ಟಿ ಮಾಡುವದಿಲ್ಲ ಅನಿರುದ್ಧನು ಲಿಂಗದೇಹಕ್ಕೆ ಅವಶ್ಯಕವಾದ ಸೂಕ್ಷ್ಮ ದೇಹವನ್ನು ಸ್ತ್ರೀಪುರುಷದ್ವಾರ ಇಲ್ಲದೇನೆ ಮಾಡುತ್ತಾನೆ ಈ ಅಭಿಪ್ರಾಯದಿಂದ ಶಾಸ್ತ್ರ ವಾಕ್ಯಗಳ ವಿರೋಧ ವನ್ನು ಪರಿಹರಿಸಬೇಕೆಂದು ಶ್ರೀವಾದಿರಾಜರು ಭಾವಪ್ರಕಾಶಿಕೆಯಲ್ಲಿ ಸ್ಪಷ್ಟೀಕರಿಸಿದ್ದಾರೆ



## ೨೭೨ ಬೃಹದ್ರೂಪಃ

೧ ಗುಣಪೂರ್ಣಗಳಾದ ರೂಪಗಳು ಉಳ್ಳವನು[1]

ಭಗವಂತನ ಸಕಲ ರೂಪಗಳೂ ಅವನ ಸ್ವರೂಪಾತ್ಮಕಗಳೇ ಆಗಿದ್ದು, ಅವನ ಸ್ವರೂಪದಂತೆಯೇ ಗುಣಪೂರ್ಣಗಳೇ ಆಗಿವೆ. ಭಗವಂತನಿಗೆ ಅನಂತರೂಪಗಳಿವೆ—ಎಂದು ಪ್ರತಿಪಾದಿಸಿರುವ ಪ್ರಮಾಣಗಳೆಲ್ಲ, ಆ ಭಗವದ್ರೂಪಗಳೆಲ್ಲ ಅವನಂತೆಯೇ ಪೂರ್ಣಗಳಾಗಿವೆ—ಎಂದೂ ತಿಳಿಸಿವೆ[2]

---

೧ 1 ಬೃಹಂತಿ ಗುಣಪೂರ್ಣಾನಿ ರೂಪಾಣಿ ಯಸ್ಯ ಸಃ ಬೃಹದ್ರೂಪಃ ।

2 ಏಕಸ್ಸನ್ನೋಽಪ್ಯಖಿಲದೋಷಸಮುಜ್ಝಿತೋಽಪಿ ಸರ್ವತ್ರ ಪೂರ್ಣಗುಣಕೋಽಪಿ ಬಹೂಪಮೋಽಭೂತ್ -ಮ. ಭಾ. ತಾ. ನಿ. 1-10

* ‘. ಸರ್ವ ಏವ ಹ್ಯೇತೇ ಪೂರ್ಣಾ ಅಜರಾ ಅಮೃತಾಃ ಪರಮಾಃ ಪರಾನಂದಾಃ’
-ಚತುರ್ವೇದಶಿಖಾ (ಬ್ರ. ಸೂ. ಭಾ. 2-3-47)

* ತಾನಿ ಹವಾ ಏತಾನಿ ಸರ್ವಾಣಿ ಪೂರ್ಣಾನಿ ಸರ್ವಾಣ್ಯನಂತಾನಿ ಸರ್ವಾಣ್ಯಸಮಿತಾನಿ.. ’
-ಚತುರ್ವೇದಶಿಖಾ (ಬ್ರ. ಸೂ. ಭಾ. 2-3-48)

* ...ತದೇತದ್ ಬ್ರಹ್ಮ... -ಬೃ. ಉ. 4-5-19

೨ ಅತಿ ದೊಡ್ಡದಾದ ರೂಪ ಉಳ್ಳವನು[1]

ಭಗವಂತನ ರೂಪಗಳೆಲ್ಲ ಇಷ್ಟೇ ಪರಿಮಾಣ ಎಂದು ಹೇಳಲಾಗದಷ್ಟು ಬೃಹತ್ತಾಗಿ ಇರುವವು[2]. ಭಗವಂತನು ತನ್ನ ವಿಶ್ವರೂಪದಲ್ಲಿ ಈ ಗುಣವನ್ನು ವ್ಯಕ್ತಮಾಡಿರುವನು. ಶ್ರೀಕೃಷ್ಣನ ಅನುಗ್ರಹ ದಿಂದಾಗಿ, ವಿಶ್ವರೂಪವನ್ನು ಕಂಡ ಅರ್ಜುನನು, ನೀನು ಭೂಮಿ ಮತ್ತು ಅಂತರಿಕ್ಷಗಳ ನಡುವೆ ಹಾಗೂ ಸಕಲ ದಿಕ್ಕುಗಳಲ್ಲೂ ವ್ಯಾಪಿಸಿಕೊಂಡಿರುವಿ[3]—ನಿನ್ನ ರೂಪದ ಆದಿ, ಮಧ್ಯ, ಅಂತ್ಯಗಳನ್ನು ಪತ್ತೆ ಹಚ್ಚಲಾರೆ—ಎಂದು ನಿವೇದಿಸಿಕೊಂಡಿರುವನು[4] ಹೀಗೆಯೇ ತ್ರಿವಿಕ್ರಮರೂಪದಲ್ಲೂ ಬೃಹತ್ ಪರಿ ಮಾಣವನ್ನು ಅಭಿವ್ಯಕ್ತಗೊಳಿಸಿರುವನು

೩ ಗುಣಪರಿಪೂರ್ಣನಾಗಿರುವವನು ಮತ್ತು ಎಲ್ಲರಿಂದ ಸ್ತುತಿಸಲ್ಪಡುವವನು.[5]

ಭಗವಂತನು ಗುಣಪೂರ್ಣನಾಗಿರುವನೆಂದು ಛಾಂದೋಗ್ಯೋಪನಿಷತ್ತು, ಅವನನ್ನು 'ಬೃಹತ್' ಎಂದೇ ಕರೆದಿದೆ[6] ಹೀಗೆ ಗುಣಪೂರ್ಣನಾಗಿರುವುದರಿಂದಲೇ ಅವನು ಎಲ್ಲರಿಂದಲೂ ಸ್ತುತ್ಯನಾಗಿರು ವನು

---

೨ 1 ಬೃಹತ್ ಅತಿವೃದ್ಧಂ ರೂಪಂ ಯಸ್ಯ ಸಃ ಬೃಹದ್ರೂಪಃ ।

2 'ಅಸಂಖ್ಯಾತಾ ಜ್ಞಾನಕಾಸ್ತಸ್ಯ ದೇಹಾಃ ಸರ್ವೇ ಪರಿಮಾಣವಿವರ್ಜಿತಾಶ್ಚ'
-ಋಗ್ವೇದಖಿಲ(ಗೀ ಭಾ 11-16)

3 ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।
-ಗೀ. 11-20

4 'ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ'
-ಗೀ. 11-16

೩ 5 ಬೃಹತೀತಿ ಬೃಹತ್ । ರೂಯತೇ ಸರ್ವೈಃ ಸ್ತೂಯತ ಇತಿ ರೂಪಃ । 'ರು ಶಬ್ದೇ'

6 ...ಅದ್ರಿಜಾ ಋತಂ ಬೃಹತ್ । -ಛಾಂ. ಉ. 2-2-2

ಬೃಹತ್ ಪೂರ್ಣಗುಣತ್ವಾಚ್ಚ ಸ ಏವ ಪುರುಷೋತ್ತಮಃ ।
-ಮಹಾಕೌರ್ಮ (ಛಾ. ಉ ಭಾ.)

* ನಾರಾಯಣೋ ಬೃಹತ್ವಾತ್ತು ಬೃಹನ್ನಾಮಾ ಪ್ರಕೀರ್ತಿತಃ । -ಐ.ಉ.ಭಾ.2-7-6-1

೪ ಸಮೃದ್ಧರಾಗಿರುವ ದೇವತೆಗಳ ಸ್ವಭಾವವನ್ನು ನಿಯಮಿಸುವವನು[1]

೫ ಸಮೃದ್ಧರಾಗಿರುವ ದೇವತೆಗಳ ರೂಪವನ್ನು ನಿರ್ಮಿಸಿರುವವನು[2]

೬ ಸಮೃದ್ಧರಾಗಿರುವ ದೇವತೆಗಳಿಗೆ ಸೌಂದರ್ಯವನ್ನು ನೀಡಿರುವವನು[3]

೭ ಸಮೃದ್ಧರಾದ ದೇವತೆಗಳಿಂದಲೂ ಸ್ತುತಿಸಲ್ಪಡುವವನು[4]

೮ ಸಮೃದ್ಧರಾದ ಮುಕ್ತಾತ್ಮರಿಂದಲೂ ಸ್ತುತಿಸಲ್ಪಡುವವನು.[5]

೯ ಸಮೃದ್ಧರಾದ ಮುಕ್ತಾತ್ಮರಿಗೂ ರೂಪವನ್ನು ಅನುಗ್ರಹಿಸಿರುವವನು.[6]

ಸ್ವರ್ಣಕಾರನು ಹೇಗೆ ಬೆಂಕಿಯಲ್ಲಿ ಹಾಕಿ ಚಿನ್ನದ ಮಲವನ್ನು ಹೋಗಲಾಡಿಸಿ, ಶುದ್ಧವಾದ ಚಿನ್ನದಿಂದ ತನಗೆ ಇಷ್ಟವಾದ ಆಭರಣವನ್ನು ರಚಿಸುವನೋ ಹಾಗೆಯೇ ಭಗವಂತನು ಜೀವಾತ್ಮವ

---

೪ 1 ಬೃಹಂತೀತಿ ಬೃಹತಃ ಸಮೃದ್ಧಾಃ ದೇವಾಃ, ತೇಷಾಂ ರೂಪಂ ಸ್ವಭಾವಃ ಯಸ್ಮಾತ್ ಸಃ ಬೃಹದ್ರೂಪಃ । 'ರೂಪಂ ತು ಸ್ವಭಾವೇ ಚ' —ಹೈಮಃ ।

೫ 2 ಬೃಹಂತಃ ಸಮೃದ್ಧಾಃ ದೇವಾಃ, ತಾನ್ ರೂಪಯತೀತಿ ಬೃಹದ್ರೂಪಃ 'ರೂಪ ರೂಪಕರಣೇ' ।

೬ 3 ಬೃಹತಾಂ ರೂಪಂ ಸೌಂದರ್ಯಂ ಯಸ್ಮಾತ್ ಸಃ ಬೃಹದ್ರೂಪಃ । 'ರೂಪಂ ತು... ಸೌಂದರ್ಯೇ...' —ಹೈಮಃ ।

೭ 4 ಬೃಹದ್ಭಿಃ ಸಮೃದ್ಧೈಃ ದೇವೈಃ ರೂಯತೇ ಸ್ತೂಯತೇ ಇತಿ ಬೃಹದ್ರೂಪಃ । 'ರು ಶಬ್ದೇ' ।

೮ 5 ಬೃಹದ್ಭಿಃ ಸಮೃದ್ಧೈಃ ಮುಕ್ತೈಃ ರೂಯತೇ ಸ್ತೂಯತೇ ಇತಿ ಬೃಹದ್ರೂಪಃ । 'ರು ಶಬ್ದೇ' ।

೯ 6 ಬೃಹತಃ ಸಮೃದ್ಧಾನ್ ಮುಕ್ತಾನ್ ರೂಪಯತೀತಿ ಬೃಹದ್ರೂಪಃ । 'ರೂಪ ರೂಪಕರಣೇ'

ಅವಿದ್ಯಾಕಾಮಕರ್ಮಾದಿಮಲವನ್ನು ತನ್ನ ಸಂಪರ್ಕದಿಂದಾಗಿ ಹೋಗಲಾಡಿಸಿ, ಮುಕ್ತಿಯಲ್ಲಿ ಇರಲು ಯೋಗ್ಯವಾದ ರೂಪವನ್ನು ಸ್ವೇಚ್ಛೆಯಿಂದ ನಿರ್ಮಿಸುವನು. ಪಿತೃಜೀವನಿಗೆ ಪಿತ್ರ್ಯ ರೂಪವನ್ನೂ, ಗಂಧರ್ವಜೀವನಿಗೆ ಗಾಂಧರ್ವರೂಪವನ್ನೂ, ಬ್ರಹ್ಮನಿಗೆ ಬ್ರಾಹ್ಮಣರೂಪವನ್ನೂ, ಹೀಗೆ ಬೇರೆ ಬೇರೆ ಮುಕ್ತಾತ್ಮರಿಗೆ ಅವರವರ ಯೋಗ್ಯತೆಗೆ ಅನುಗುಣವಾದ ರೂಪವನ್ನು ನೀಡುವನು—ಎಂಬುದಾಗಿ ಬೃಹದಾರಣ್ಯಕೋಪನಿಷತ್ತು ಸಂದೇಶಿಸಿದೆ.[1]

೧೦ (ಸಿದ್ಧ ಪುರುಷರು) ಬೃಹತ್ ಪರಿಮಾಣದ ರೂಪವನ್ನು ಹೊಂದುವಂತೆ ಅನುಗ್ರಹಿಸುವವನು.[2]

ಆಕಾಶಾದಿ ನಿಯಾಮಕನಾಗಿ ಆಕಾಶಾದಿಗಳಲ್ಲಿರುವ ಭಗವಂತನನ್ನು ಮಹತ್ ಪದಾರ್ಥಗಳ ಪರಿಮಾಣಕ್ಕೆ ಸದೃಶವಾದ ಪರಿಣಾಮ ಉಳ್ಳವನನ್ನಾಗಿ ಧ್ಯಾನಿಸಿ, ಅವನಿಂದ ತನ್ನ ದೇಹದಲ್ಲಿ ಬೃಹತ್ ಪರಿಮಾಣವನ್ನು ಹೊಂದಲು ಬಯಸುವವನು ಅದನ್ನು ಹೊಂದುವನೆಂದು ಶ್ರೀಕೃಷ್ಣನು

---

1 'ತದ್ ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯಾನ್ಯನ್ನವತರಂ ಕಲ್ಯಾಣತರಂ ರೂಪಂ ತನುತ ಏವಮೇವಾಯಮಾತ್ಮೇದಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾಽನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ಪಿತ್ರ್ಯಂ ವಾ ಗಾಂಧರ್ವಂ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾಽನ್ಯೇಷಾಂ ವಾ ಭೂತಾನಾಮ್'

—ಬೃ. ಉ. 6-4-4

ಸ್ವರ್ಣಕಾರೋ ಯಥಾ ಸ್ವರ್ಣಮಲಮಗ್ನೌ ನಿಹತ್ಯ ಚ । ಶುದ್ಧೇನ ತೇನ ಚಾಽತ್ಯೇಷ್ಟಂ ಕುರುತೇ ರೂಪಮಂಜಸಾ । ಏವಂ ಸ ಭಗವಾನ್ ವಿಷ್ಣುರ್ಜೀವಸ್ವರ್ಣಸ್ಯ ಯನ್ಮಲಮ್ । ಅವಿದ್ಯಾಕಾಮಕರ್ಮಾದ್ಯಮಾತ್ಮಾಗ್ನೌ ನಾಶ್ಯ ಸರ್ವಕೃತ್ । ಸ್ವೇಚ್ಛಯಾ ಕುರುತೇ ರೂಪಂ ಯದ್ ಯೋಗ್ಯಂ ತಸ್ಯ ಮುಕ್ತಿಗಮ್ । ಪಿತೃಜೀವಸ್ಯ ಪಿತ್ರ್ಯಂ ಚ ಗಾಂಧರ್ವಂ ತಸ್ಯ ಚೈವ ಹಿ । ದೈವಂ ತು ದೇವಜೀವಸ್ಯ ಪ್ರಾಜಾಪತ್ಯಂ ಪ್ರಜಾಪತೇಃ । ಬ್ರಹ್ಮಣೋ ಬ್ರಾಹ್ಮಮೇವೇತಿ ನಿತ್ಯಾನಂದಸ್ವರೂಪಕಮ್ ।

—ಬೃ. ಉ ಭಾ.

೧೦ 2 ಸಿದ್ಧಾನಾಂ ಬೃಹತ್ ರೂಪಂ ಯಸ್ಮಾತ್ ಸಃ ಬೃಹದ್ರೂಪಃ ।

ಪ್ರಾದೇಶಿಸಿರುವನು[1] ಆದ್ದರಿಂದ ಮಹಿಮಾಸಿದ್ಧಿಯ ಮೂಲಕ ಬೃಹತ್ಪ್ರಮಾಣದ ರೂಪವನ್ನು ಪಡೆಯಲೂ ಭಗವದನುಗ್ರಹ ಅತ್ಯಾವಶ್ಯಕ ಎಂದು ಸಿದ್ಧಿಸುವುದು

### ಜಿಜ್ಞಾಸೆ

[ದೀಪಗಳಲ್ಲಿಯ ಸಮಾನ ಶಕ್ತಿಯಂತೆ]

ಪ್ರ – ಪರಮಾತ್ಮನು ಎಲ್ಲ ರೂಪಗಳಲ್ಲಿಯೂ ಗುಣಪೂರ್ಣನು ಎಂದು ತಿಳಿಯುವದು ಹೇಗೆ? ಇಂದ್ರಾದಿ ದೇವತೆಗಳ ಅರ್ಜುನಾದಿ ರೂಪಗಳು ಎಲ್ಲ ಗುಣಗಳಲ್ಲಿ ಇಂದ್ರಾದಿ ದೇವತೆಗಳಿಗೆ ಸಮಾನವಾಗಿ ಇಲ್ಲ ಇಂದ್ರನಿಗೆ ಎಷ್ಟು ತಿಳುವಳಿಕೆ ಇದೆಯೋ ಅಷ್ಟು ತಿಳುವಳಿಕೆಯು ಅರ್ಜುನನಿಗೆ ಇಲ್ಲ ಅದರಂತೆ ಪರಮಾತ್ಮನ ರೂಪಗಳಲ್ಲಿಯೂ ವ್ಯತ್ಯಾಸಗಳು ಇವೆಯೋ ಎಂಬ ಶಂಕೆಯು ಉಂಟಾಗುತ್ತದೆ ಯಾವ ದೃಷ್ಟಾಂತದಿಂದ ಪರಮಾತ್ಮನು ಎಲ್ಲ ರೂಪಗಳಲ್ಲಿ ಸಮಾನನಾಗಿದ್ದಾನೆಂದು ತಿಳಿಯುವದು?

ಉ – ಒಂದು ದೀಪದಿಂದ ಸಹಸ್ರಾರು ದೀಪಗಳು ಹೊರಡುವವು. ಆ ಎಲ್ಲ ದೀಪಗಳಲ್ಲಿ ಸಮಾನ ದಾಹಕಶಕ್ತಿಯು ಇದೆ ಅದರಂತೆ ಪರಮಾತ್ಮನ ಎಲ್ಲ ರೂಪಗಳು ಸಮಾನಗಳೆಂದು ನಿರ್ಣಯಿಸಬಹುದು.



## ೨೭೩ ಶಿಪಿವಿಷ್ಟಃ

೧ ಪಶುಗಳಲ್ಲಿ ಆಯಾಯ ಹೆಸರು ಉಳ್ಳವನಾಗಿ ಪ್ರವೇಶಿಸಿರುವವನು.[2]

---

1 ಮಹತ್ಯಾತ್ಮನಿ ಮಯಿ ಪರೇ ಯಥಾಸಂಸ್ಥಂ ಮನೋ ದಧತ್ ।
ಮಹಿಮಾನಮವಾಪ್ನೋತಿ ಭೂತಾನಾಂ ಚ ಪೃಥಕ್ ಪೃಥಕ್ ॥
–ಭಾಗ. 11-15-11

ಮಹತಿ (ಭೂತೇ) ಸ್ಥಿತೇ ಆತ್ಮನಿ ಆಕಾಶಾದಿನಿಯಾಮಕೇ ಪರೇ ಮಯಿ ಯಥಾಸಂಸ್ಥಂ ಸೂಕ್ಷ್ಮತ್ವೇನ ಮಹತ್ಸದೃಶಪರಿಮಾಣತ್ವೇನ ಚ ಮನೋ ದಧತ್ ಧ್ಯಾನಂ ಕುರ್ವನ್ ಅಪ್ರತಿಘಾತಂ ದೇಹಮಹತ್ತ್ವಮವಾಪ್ನೋತಿ ಅಣುತ್ವಮಹತ್ತ್ವಪರಿಮಾಣೇ ಪ್ರಾಪ್ನೋತಿ । –ಯಾದವೇಂದ್ರತೀರ್ಥೀಯಮ್ ।

೧ 2 ಶಿಪಯಃ ಪಶವಃ ತೇಷು ವಿಶತಿ ಪ್ರತಿತಿಷ್ಠತೀತಿ ಶಿಪಿವಿಷ್ಟಃ ।
–ಶಾಂ. ಭಾ. ಆಧಾರೇಣ

ಪಶುಗಳಲ್ಲಿ ಪಂಚ ವಿಧ ಸಾಮದಿಂದ ಪ್ರತಿಪಾದ್ಯಗಳಾದ ಭಗವದ್ರೂಪಗಳನ್ನು ಉಪಾಸಿಸ ಬೇಕೆಂದು ಸಂದೇಶಿಸಿದ ಛಾಂದೋಗ್ಯೋಪನಿಷತ್ತು, ಹಿಂಕಾರ ಎನಿಸುವ ಪ್ರದ್ಯುಮ್ನನು ಯಜ್ಞಕ್ಕೆ ಕಾರಣನಾಗಿರುವುದರಿಂದ ಹಾಗೂ ಪುನರ್ಜನ್ಮ ಬರದಂತೆ ಮಾಡುವವನಾದುದರಿಂದ ಅಜ ಎಂದೆನಿಸಿ, ಆಡುಗಳಲ್ಲಿ ಇರುವನೆಂದೂ, ಪ್ರಸ್ತಾವ ಎನಿಸುವ ವಾಸುದೇವನು ಕುರಿಯ ಉಣ್ಣೆಯ ಮೂಲಕ ಚಳಿಯಿಂದ ರಕ್ಷಿಸುವುದರಿಂದ 'ಅವಿ' ಎಂದೆನಿಸಿ ಕುರಿಗಳಲ್ಲಿ ಇರುವನೆಂದೂ, ಉದ್ಗೀಥ ಎನಿಸುವ ನಾರಾಯಣನು ಸದ್ಗತಿಗೆ ಕಾರಣನಾಗಿರುವುದರಿಂದ 'ಗೌ' ಎಂದೆನಿಸಿ ಗೋವುಗಳಲ್ಲಿ ಇರುವನೆಂದೂ. ಪ್ರತಿಹಾರ ಎನಿಸುವ ಅನಿರುದ್ಧನು ಶೀಘ್ರಗಮನವುಳ್ಳ ಪ್ರಯುಕ್ತ ಅಶ್ವ ಎಂದೆನಿಸಿ ಅಶ್ವಗಳಲ್ಲಿ ಇರುವನೆಂದೂ, ನಿಧನ ಎನಿಸುವ ಸಂಕರ್ಷಣನು ಪೂರ್ಣನಾಗಿರುವುದರಿಂದ ಪುರುಷ ಎಂದೆನಿಸಿ ಪುರುಷರಲ್ಲಿ ಇರುವನೆಂದೂ ಪ್ರತಿಪಾದಿಸಿದೆ[1] ಹೀಗೆ ಪಶುಗಳಲ್ಲಿ ಭಗವಂತನು ಇರುವನೆಂದು ಉಪಾಸಿಸುವವನು ಪಶುಗಳನ್ನು ಹೊಂದುವನಲ್ಲದೆ ಪಾಲಿಸುವ ಪ್ರಯುಕ್ತ ಹಾಗೂ ಸುಖರೂಪಿ ಯಾಗಿರುವ ಪ್ರಯುಕ್ತ 'ಪಶು' ಎನಿಸುವ ಭಗವಂತನನ್ನು ಹೊಂದಿ ಮುಕ್ತನಾಗುವನೆಂದೂ ತಿಳಿಸಲಾಗಿದೆ[2]

ಆಡು, ಕುರಿ, ಹಸು, ಅಶ್ವ ಹಾಗೂ ಪುರುಷ—ಈ ಐದು ಪಶುಗಳು ಯಜ್ಞದ ನಿರ್ವಹ ಣೆಗೆ ಆವಶ್ಯಕವಾದವು ಆದ್ದರಿಂದ ಯಜ್ಞನಿಯಾಮಕನಾಗಿದ್ದು ಯಜ್ಞ ಎನಿಸುವ ಭಗವಂತನು

---

1 ಪಶುಷು ಪಂಚವಿಧಂ ಸಾಮೋಪಾಸೀತಾಽಜಾ ಹಿಂಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಂ

-ಛಾಂ. ಉ. 2-1-6

ಯಜ್ಞೋದಜನಿಹೇತುತ್ವಾದಜಸ್ಥೋ ಭಗವಾನಜಃ । ಅವಿಸ್ಥಿತಸ್ತ್ವವಿರೇವೋಕ್ತ ಊರ್ಣಯಾ ಶೀತತೋಽವನಾತ್ । ಗೌಶ್ಚ ಸದ್ಗತಿಹೇತುತ್ವಾದ್ ಗೋಸ್ಥಃ ಸ ಪುರುಷೋ- ತ್ತಮಃ । ಅಶ್ವಶ್ಚಾಶುಗಂತೃತ್ವಾತ್ ಪುರುಷಃ ಪೂರ್ತಿಹೇತುತಃ

-ಛಾಂ ಉ. ಭಾ

2 'ಭವಂತಿ ಹಾಸ್ಯ ಪಶವಃ ಪಶುಮಾನ್ ಭವತಿ ಯ ಏತದೇವಂ ವಿದ್ವಾನ್ ಪಶುಷು ಪಂಚವಿಧಂ ಸಾಮೋಪಾಸ್ತೇ' -ಛಾಂ. ಉ. 2-1-6

ಪಾಲನಾತ್ ಸುಖರೂಪತ್ವಾತ್ ಪಶುನಾಮಾ ಜನಾರ್ದನಃ । ಮುಕ್ತಸ್ತದ್ವಾನ್ ಭವ- ತ್ಯೇವ ಪಶುಷೂಪಾಸಕೋ ಹರೇಃ ' ಛಾಂ. ಉ. ಭಾ.

ಭವಂತಿ ಹಾಸ್ಯ ಪಶವ ಇತಿ ಪ್ರಸಿದ್ಧಪಶವ ಏವ ।

ಛಾ ಉ. ಭಾ.

ಈ ಐದು ಪಶುಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನೆಂದು ತೈತ್ತಿರೀಯಸಂಹಿತೆ ಸಂದೇಶಿಸಿದೆ[1]

೨ ಕಿರಣಗಳಲ್ಲಿ ಪ್ರವೇಶಿಸಿರುವವನು[2]

ಮಧು ಎಂದೆನಿಸಿ ಆದಿತ್ಯನಲ್ಲಿರುವ ಭಗವಂತನಿಗೆ ಸಂಬಂಧಿಸಿದ ಮಧು ವಿದ್ಯೆಯನ್ನು ಪ್ರತಿಪಾದಿಸುತ್ತಿರುವ ಛಾಂದೋಗ್ಯೋಪನಿಷತ್ತು, ಭಗವಂತನು ಸ್ವರಮಾರಣ ಹಾಗೂ ಜ್ಞಾನರೂಪಿಯಾಗಿದ್ದು 'ರಶ್ಮಿ' ಎಂದೆನಿಸಿ, ತನ್ನ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಹಾಗೂ ನಾರಾಯಣ ರೂಪಗಳಿಂದ ಸೂರ್ಯನ ಬೇರೆ ಬೇರೆ ಬದಿಯಲ್ಲಿ ಇರುವ ರಶ್ಮಿಗಳಲ್ಲಿ ಇರುವನೆಂಬುದಾಗಿ ಪ್ರತಿಪಾದಿಸಿದೆ ಋಗ್ವೇದ ಪ್ರತಿಪಾದ್ಯನಾದ ಕೆಂಪುಬಣ್ಣದ ವಾಸುದೇವರೂಪಿಯು ಸೂರ್ಯನ ಪೂರ್ವ ರಶ್ಮಿಗಳಲ್ಲಿ ಇರುವನು ಯಜುರ್ವೇದ ಪ್ರತಿಪಾದ್ಯನಾದ ಬಿಳಿಬಣ್ಣದ ಸಂಕರ್ಷಣ ರೂಪಿಯು ಸೂರ್ಯನ ದಕ್ಷಿಣರಶ್ಮಿಗಳಲ್ಲಿ ಇರುವನು ಸಾಮವೇದ ಪ್ರತಿಪಾದ್ಯನಾದ ಶ್ಯಾಮವರ್ಣದ ಪ್ರದ್ಯುಮ್ನನು ಸೂರ್ಯನ ಪಶ್ಚಿಮದ ರಶ್ಮಿಗಳಲ್ಲಿ ಇರುವನು ಇತಿಹಾಸ ಪುರಾಣಗಳಲ್ಲಿಯೂ ಅಥರ್ವವೇದದಲ್ಲಿಯೂ ಪ್ರತಿಪಾದ್ಯನಾದ ನೀಲವರ್ಣದ ಅನಿರುದ್ಧನು ಸೂರ್ಯನ ಉತ್ತರದ ರಶ್ಮಿಗಳಲ್ಲಿ ಇರುವನು ಉದಯಿಸುವ ಸೂರ್ಯನ ಪ್ರಭೆಯಂತೆ ಪ್ರಭೆ ಉಳ್ಳ ಸರ್ವವೇದವಾಚ್ಯನಾದ ನಾರಾಯಣರೂಪಿಯು ಸೂರ್ಯನ ಊರ್ಧ್ವಭಾಗದ ರಶ್ಮಿಗಳಲ್ಲಿ ಇರುವನು.[3] ಶ್ರುತ್ಯವಿರುವುದ

---

1 'ಯಜ್ಞೋ ವೈ ವಿಷ್ಣುಃ ಪಶವಃ ಶಿಪಿರ್ಯಜ್ಞ ಏವ ಪಶುಷು ಪ್ರತಿತಿಷ್ಠತಿ'
-ತೈ. ಸಂ 2-5-5 (ಶಾಂ. ಭಾ. ಉದ್ಧೃತ)

೨ 2 ಶಿಪಯಃ ರಶ್ಮಯಃ ತೇಷು ನಿವಿಷ್ಟ ಇತಿ । -ಶಾಂ. ಭಾ

3 ' ತದಾದಿತ್ಯಮಭಿತೋಽಶ್ರಯತ್ . ' -ಛಾಂ. ಉ. 3 1-1,2,3,4,5
ಋಕ್ಪ್ರೋಕ್ತೋ ಲೋಹಿತಾಕಾರೋ ವಾಸುದೇವಃ ಪರಃ ಪುಮಾನ್ । ಸ ಏವ ಸೂರ್ಯಲೌಹಿತ್ಯೇ ಪ್ರಾಚ್ಯರಶ್ಮಿಷು ಚ ಸ್ಥಿತಃ । ಸಂಕರ್ಷಣಃ ಶುಕ್ಲವರ್ಣೋ ಯಜು-ರ್ವೇದೋದಿತಃ ಪ್ರಭುಃ । ಶುಕ್ಲೇ ವರ್ಣೇ ಚ ಸೂರ್ಯಸ್ಯ ದಕ್ಷರಶ್ಮಿಷು ಚ ಸ್ಥಿತಃ । ಪ್ರದ್ಯುಮ್ನಃ ಶ್ಯಾಮವರ್ಣಸ್ತು ಸಾಮವೇದೋದಿತಃ ಪ್ರಭುಃ । ಪ್ರತ್ಯಗ್ರಶ್ಮಿಷು ಸೂರ್ಯಸ್ಯ ಶ್ಯಾಮವರ್ಣೇಽಪಿ ಚ ಸ್ಥಿತಃ । ಅನಿರುದ್ಧಸ್ತು ನೀಲಶ್ಚ ಇತಿಹಾಸಪುರಾಣಯೋಃ । ಅಥರ್ವವೇದೇ ಚೋಕ್ತಃ ಸನ್ನುದಗ್ರಶ್ಮಿಷು ಸಂಸ್ಥಿತಃ । ಸುಕೃಷ್ಣೇ ಸೂರ್ಯರೂಪೇ ಚ ಮಧ್ಯೇ ನಾರಾಯಣಃ ಪ್ರಭುಃ । ಊರ್ಧ್ವರಶ್ಮಿಷು ಸಂಸ್ಥಶ್ಚ ಪ್ರೋದ್ಯದಾದಿತ್ಯಸಪ್ರಭಃ ।
. . ಸ ವಾಚ್ಯಃ ಸರ್ವವೇದಾನಾಮೇವಂ ಪಂಚಾತ್ಮಕೋ ಹರಿಃ । .
-ಸಾಮಸಂಹಿತಾ (ಛಾಂ. ಉ. ಭಾ.)

ರಿಂದ ಹಾಗೂ ಭಗವಂತನು ಇವುಗಳಲ್ಲಿ ಶಯನ ಮಾಡಿರುವುದರಿಂದ ಜಲವು 'ಶಿ' ಎನಿಸಿದರೆ, ಅಂತಹ ಜಲವನ್ನು ಹೀರುವುದರಿಂದ ಹಾಗೂ ರಕ್ಷಿಸುವುದರಿಂದ ರಶ್ಮಿಗಳು **'ಶಿಪಿ'** ಎಂದೆನಿಸಿವೆ. ಇವುಗಳಲ್ಲಿ ಭಗವಂತನು ಪ್ರವೇಶಿಸಿರುವುದರಿಂದ 'ಶಿಪಿವಿಷ್ಟ' ಎನಿಸಿರುವನೆಂಬುದಾಗಿ ಪ್ರಮಾಣ ವೊಂದು ಪ್ರತಿಪಾದಿಸಿದೆ[1]

೨ ಪ್ರಾಕೃತ ರೋಮಗಳಿಂದ (ಹಾಗೂ ತದುಪಲಕ್ಷಿತ ಪ್ರಾಕೃತ ಶರೀರದಿಂದ) ರಹಿತ ನಾದವನು ಹಾಗೂ ಎಲ್ಲವನ್ನೂ ಪ್ರವೇಶಿಸಿರುವವನು[2]

ಶ್ರೀಕೃಷ್ಣನು ಅರ್ಜುನನಿಗೆ ತನ್ನ ನಾಮಗಳ ರಹಸ್ಯಾರ್ಥವನ್ನು ತಿಳಿಸುತ್ತ, ಪ್ರಾಕೃತ ರೋಮ ಹಾಗೂ ಉಳಿದ ಪ್ರಾಕೃತ ಅಂಗಾಂಗಗಳನ್ನೊಳಗೊಂಡ ಶರೀರ ಇಲ್ಲದ ತಾನು ಜಗತ್ತೆಲ್ಲ ವನ್ನೂ ಪ್ರವೇಶಿಸಿರುವುದರಿಂದಾಗಿ ಶಿಪಿವಿಷ್ಟ ಎನಿಸಿರುವೆನೆಂದು ತಿಳಿಸಿರುವನು.[3] ಅಲ್ಲದೆ ಯಾಸ್ಕ ಋಷಿಯು ಅನೇಕ ಯಜ್ಞಗಳಲ್ಲಿ ತನ್ನನ್ನು ಈ ಹೆಸರಿನಿಂದಲೇ ಸ್ತುತಿಸಿರುವನೆಂದ ಶ್ರೀಕೃಷ್ಣನು, ತಾನು 'ಶಿಪಿವಿಷ್ಟ' ಎಂಬ ರಹಸ್ಯವಾದ ಹೆಸರುಳ್ಳವನಾಗಿರುವನೆಂದೂ ಹೇಳಿರುವನು.[4] ಯಾಸ್ಕಋಷಿಯು

---

* 'ಪ್ರಾಚ್ಯರಶ್ಮಿಷು ಸಂಸ್ಥಸ್ತು ಸ್ಥರತಿವಾನರೂಪತಃ । ಪ್ರಾಚ್ಯರಶ್ಮಿರಿತಿಪ್ರೋಕ್ತೋ ವಾಸು ದೇವಾಭಿಧೋ ಹರಿಃ ।' –ಸಾಮಸಂಹಿತಾ (ಛಂ ಉ ಭಾ.)

1 ಶೈತ್ಯಾಚ್ಛಯನಯೋಗಾಚ್ಚ ಶೀತಿ ವಾರಿ ಪ್ರಚಕ್ಷತೇ ।
ತತ್ಪಾನಾದ್ರಕ್ಷಣಾಚ್ಚೈವ ಶಿಪಯೋ ರಶ್ಮಯೋ ಮತಾಃ ।
ತೇಷು ಪ್ರವೇಶಾದ್ವಿಶ್ವೇಶಃ ಶಿಪಿವಿಷ್ಟ ಇಹೋಚ್ಯತೇ ।
–ಶಾಂ. ಭಾ. (ಉದ್ಧೃತ)

೨ 2 ಉಪರ್ಯುದಾಹ್ರಿಯಮಾಣಂ ಮಹಾಭಾರತವಚನಮೇವಾತ್ರ ಪ್ರಮಾಣಮ್ । ಹೀನ- ರೋಮೇತ್ಯತ್ರ ರೋಮಶಬ್ದಃ ಸಮಗ್ರಸ್ಯ ಪ್ರಾಕೃತಶರೀರಸ್ಯ ಉಪಲಕ್ಷಕಃ । ಯಥಾ ಈಶಾವಾಸ್ಯೋಪನಿಷದಿ (1-8) 'ಅಸ್ನಾವಿರಂ' ಇತ್ಯನೇನ ಸ್ನಾವೋಪಲಕ್ಷಿತಸಪ್ತಧಾತು- ಮಯಸ್ಥೂಲದೇಹರಹಿತಮಿತ್ಯೇವಾರ್ಥಃ ಸ್ವೀಕ್ರಿಯತೇ ತಥಾಽತ್ರಾಪಿ ।

3 ಶಿಪಿವಿಷ್ಟೇತಿ ಚಾಖ್ಯಾಯಾಂ ಹೀನರೋಮಾ ಚ ಯೋ ಭವೇತ್ ।
ತೇನಾವಿಷ್ಟಂ ತು ಯತ್ಕಿಂಚಿಚ್ಛಿಪಿವಿಷ್ಟೇತಿ ಚ ಸ್ಮೃತಃ ॥
–ಮ. ಭಾರ ಶಾಂತಿ. 342–71

4 ಯಾಸ್ಕೋ ಮಾಮೃಷಿರವ್ಯಗ್ರೋ ನೈಕಯಜ್ಞೇಷು ಗೀತವಾನ್ ।
ಶಿಪಿವಿಷ್ಟ ಇತಿ ಹ್ಯಸ್ಮಾದ್ಗುಹ್ಯನಾಮಧರೋ ಹ್ಯಹಮ್ ॥
–ಮ. ಭಾರ. ಶಾಂತಿ. 342–72

'ಶಿಪಿವಿಷ್ಟ' ಎಂಬ ಹೆಸರಿನಿಂದ ಶ್ರೀಕೃಷ್ಣನನ್ನು ಸ್ತುತಿಸಿ, ನಷ್ಟವಾದ ತನ್ನ ನಿರುಕ್ತಶಾಸ್ತ್ರವನ್ನು ಪಡೆಕೊಂಡನೆಂದೂ ಶ್ರೀಕೃಷ್ಣನು ತಿಳಿಸಿರುವನು.[1]

೪ ಕಟ್ಟಿಗೆಯಲ್ಲಿ ಅಗ್ನ್ಯಂತರ್ಯಾಮಿಯಾಗಿರುವವನು.[2]

೫ ಕಿರಣಗಳಿಂದ ಎಲ್ಲೆಡೆ ಪ್ರವೇಶಿಸಿರುವವನು.[3]

೬ ಸುಖ ಮತ್ತು ಜ್ಞಾನವನ್ನು ಅತಿಶಯವಾಗಿ ಅನುಭವಿಸುತ್ತಿರುವವನು ಮತ್ತು ಎಲ್ಲವನ್ನೂ ಪ್ರವೇಶಿಸಿರುವವನು.[4]

೭ ಸುಖವನ್ನು ಹೊಂದಿರುವವನು, ಎಲ್ಲವನ್ನೂ ರಕ್ಷಿಸುತ್ತಿರುವವನು, ಎಲ್ಲವನ್ನೂ ಪ್ರವೇಶಿಸಿರುವವನು.[5]

ಸುಖಿಯಾದ ಭಗವಂತನು ಎಲ್ಲವನ್ನೂ ಪ್ರವೇಶಿಸಿ, ರಕ್ಷಿಸುತ್ತಿರುವನು.

೮ ನೀರನ್ನು ಹೀರುವವನು, ಸೂರ್ಯನನ್ನು ಪ್ರವೇಶಿಸಿರುವವನು.[6]

---

1 ಸ್ತುತ್ವಾ ಮಾಂ ಶಿಪಿವಿಷ್ಟೇತಿ ಯಾಸ್ಕೋ ಋಷಿರುದಾರಧೀಃ ।
ಮತ್ಪ್ರಸಾದಾದಧೋ ನಷ್ಟಂ ನಿರುಕ್ತಮಭಿಜಗ್ಮಿವಾನ್ ॥
—ಮ. ಭಾರ. ಶಾಂತಿ. 342-73

೪ 2 ಶಿಪಿಷು ಕಾಷ್ಠೇಷು ಅಗ್ನ್ಯಂತರ್ಯಾಮಿತಯಾ ವಿಷ್ಟಃ ಪ್ರವಿಷ್ಟಃ ಶಿಪಿವಿಷ್ಟಃ ।
—ವಾ ರಾ.

೫ 3 ಶಿಪಿಭಿಃ ರಶ್ಮಿಭಿಃ ವಿಷ್ಟಃ ಪ್ರವಿಷ್ಟಃ ಇತಿ ಶಿಪಿವಿಷ್ಟಃ ।

೬ 4 ಶಂ ಸುಖಂ ಇಃ ಜ್ಞಾನಂ, ತೇ ಪಿಬತಿ ಅನುಭವತೀತಿ ಶಿಪಿಃ । 'ತೃತೀಯೋಽತಿಶಯೇ' ಇತಿ ಅತಿಶಯಾರ್ಥೇ ಪೀತ್ಯತ್ರ ಅಕಾರಸ್ಥಾನೇ ಇಕಾರಃ । ಸರ್ವಂ ವಿಶತೀತಿ ವಿಷ್ಟಃ ।

೭ 5 ಶಂ ಸುಖಂ ಅಸ್ಯಾಸ್ತೀತಿ ಶೀ । ಅತಿಶಯೇನ ಪಾತಿ ರಕ್ಷತೀತಿ ಪಿಃ । ಸರ್ವಂ ವಿಶತೀತಿ ವಿಷ್ಟಃ । ಶೀ ಚಾಸೌ ಪಿಶ್ಚ ಶಿಪಿಃ । ಶಿಪಿಶ್ಚಾಸೌ ವಿಷ್ಟಶ್ಚ ಶಿಪಿವಿಷ್ಟಃ ।

೮ 6 ಶಿ ವಾರಿ ಪಾತಿ ಆದತ್ತ ಇತಿ ಶಿಪಿಃ । ಆದಿತ್ಯಂ ವಿಶತೀತಿ ವಿಷ್ಟಃ ।

ಭಗವಂತನು ಆದಿತ್ಯನನ್ನು ಪ್ರವೇಶಿಸಿ ಅವನ ಮೂಲಕ ನೀರನ್ನು ಹೀರುವನು ಅವನು ಆದಿತ್ಯ ಎನಿಸಲು ಇದೂ ಒಂದು ಪ್ರವೃತ್ತಿನಿಮಿತ್ತ[1]

### ಜಿಜ್ಞಾಸೆ

### [ಪಶುಗಳಿಗೆ ಉಪಾಸನಾಧಿಕಾರವಿಲ್ಲ]

ಪ್ರ - 'ಅಂಗುಷ್ಠಮಾತ್ರಃ ಪುರುಷಃ' ಎಂದು ಅವರ ಅವರ ಅಂಗುಷ್ಠದಷ್ಟು ಪರಿಮಾಣವನ್ನು ವ್ಯಕ್ತೀಕರಿಸಿಕೊಂಡು ಮನುಷ್ಯಾದಿಗಳ ಹೃದಯದಲ್ಲಿ ಪರಮಾತ್ಮನು ಇದ್ದಾನೆಂದು ಶ್ರುತಿಯು ಹೇಳುತ್ತದೆ ಪಶುಗಳಿಗೆ ಅಂಗುಷ್ಠವು ಇಲ್ಲವಾದುದರಿಂದ ಪಶುಗಳ ಹೃದಯದಲ್ಲಿ ಪಶುಗಳ ಅಂಗುಷ್ಠ ಪರಿಮಾಣವುಳ್ಳವನಾಗಿ ಪರಮಾತ್ಮನು ಇದ್ದಾನೆಂದು ಶ್ರುತಿಯು ಹೇಳುವದಿಲ್ಲ. ಪಶುಗಳ ಹೃದಯಗಳಲ್ಲಿ ಪರಮಾತ್ಮನು ಯಾವ ಪರಿಮಾಣದಿಂದ ಇದ್ದಾನೆಂದು ತಿಳಿಯುವದು?

ಉ - ಮನುಷ್ಯರು ಪಶುಗಳ ಹೃದಯದಲ್ಲಿ ಪರಮಾತ್ಮನು ಇದ್ದಾನೆಂದು ತಿಳಿದರೆ ಸಾಕು. ಅವನು ಅಲ್ಲಿ ಯಾವ ಪರಿಮಾಣದಿಂದ ಇದ್ದಾನೆಂದು ತಿಳಿಯದೇ ಇದ್ದರೂ ಮನುಷ್ಯರಿಗೆ ಮೋಕ್ಷವು ಆಗುವದು ಪಶುಗಳಿಗೆ ಪರಮಾತ್ಮನ ಉಪಾಸನಾಧಿಕಾರವು ಇಲ್ಲವಾದ್ದರಿಂದ ಅವುಗಳನ್ನು ಕುರಿತು ಅವುಗಳ ಹೃದಯಗಳಲ್ಲಿ ಯಾವ ಪರಿಮಾಣದಿಂದ ಇದ್ದಾನೆಂಬುದನ್ನು ಶ್ರುತಿಯು ಹೇಳುವದಿಲ್ಲ



## ೨೭೪ ಪ್ರಕಾಶನಃ

೧ ಬೆಳಗಿಸುವವನು.[2]

೨ (ಪ್ರಕಾಶಕ ಪದಾರ್ಥಗಳಿಗೆ) ಪ್ರಕಾಶವನ್ನು ತಲುಪಿಸುವವನು[3]

---

1 ' ..ಸ ಆದಿತ್ಯಃ ಆದದಾನಃ ಪ್ರಯಾತಿ . ...'

-ಮಂ. ಭಾ. 14-3

೧ 2 ಪ್ರಕಾಶಯತೀತಿ ಪ್ರಕಾಶನಃ । -ವಿ. ರಾ.

೨ 3 ಪ್ರಕಾಶಂ ಸೂರ್ಯಾದಿಪ್ರಕಾಶಂ ನಯತೀತಿ ಪ್ರಕಾಶನಃ ।

-ಸ. ಸಂ.

ಗೀತಾಚಾರ್ಯನು ತಾನು ಸೂರ್ಯಚಂದ್ರಾದಿಪ್ರಕಾಶಕ ಪದಾರ್ಥಗಳಲ್ಲಿ 'ಪ್ರಭಾ' ನಾಮಕನಾಗಿ ಇದ್ದು ಅವುಗಳ ಮೂಲಕ ಬೆಳಗಿಸುವವನಾಗಿ ಸಂದೇಶಿಸಿರುವನು[1] ಅಗ್ನಿಯು ಅಗ್ನಿನಾಮಕ ಭಗವಂತನಿಂದ ಬೆಳಗುವುದೆಂದು ಋಗ್ವೇದ ಸಂದೇಶಿಸಿದೆ[2] ಸಕಲ ಲೋಕಗಳನ್ನೂ ಪ್ರಕಾಶದಿಂದ ತುಂಬಿಸುವವನು ಭಗವಂತನೇ—ಎಂಬುದಾಗಿ ಐತರೇಯೋಪನಿಷತ್ತು ತಿಳಿಸಿದೆ[3]. ಸವಿತೃನಾಮಕ ಭಗವಂತನಿಗೆ ಪ್ರಕಾಶವು ಅಧೀನವಾಗಿರುವುದರಿಂದ ಅವನು ಪ್ರಕಾಶವನ್ನು ಧರಿಸಿಕೊಂಡಿರುವನೆಂದು ಋಗ್ವೇದ ಬೋಧಿಸಿದೆ[4]. ಭಗವಂತನ ಅಧಿದೈವತಕ್ಕೆ ಸಂಬಂಧಿಸಿದ ಉಪದೇಶವನ್ನು ನೀಡಹೊರಟ ತಲವಕಾರೋಪನಿಷತ್ತು—ಕಪಿಲನಾಮಕ ಭಗವಂತನು ವಿದ್ಯುದಾದಿ ಸಕಲ ಪ್ರಕಾಶಕಪದಾರ್ಥಗಳನ್ನು ಚೆನ್ನಾಗಿ ಬೆಳಗಿಸುವನೆಂಬುದಾಗಿ ಸಂದೇಶಿಸಿದೆ[5]

---

1 '.. ಪ್ರಭಾಽಸ್ಮಿ ಶಶಿಸೂರ್ಯಯೋಃ' —ಗೀತಾ. 7-8

ಸೂರ್ಯಚಂದ್ರಾದಿಷು ಸ್ಥಿತ್ವಾ ಪ್ರಭಾನಾಮಾ ಪ್ರಭಾಸನಾತ್ ।

-ಗೀ. ತಾ.

2 'ಅಗ್ನಿನಾಗ್ನಿಸ್ಸಮಿಧ್ಯತೇ ' -ಋ 12-6

ಯಂ ಸ್ವ್ಯಕಸ್ಯೇ ಹೂಯತೇ ಸೋಽಗ್ನಿಃ ಪರೇಶೇನ ಸಮಿದ್ಧ್ಯತೇ ।

—ಋ ಭಾ.

3 'ಆ ಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ' —ಐ. ಉ. 2-8-3-7

ಆಪೂರಯನ್ ಸರ್ವಲೋಕಾನ್ ಪ್ರಕಾಶೇನ ಜನಾರ್ದನಃ ।

—ಐ. ಉ. ಭಾ.

4 '....ಸವಿತಾ ಚಿತ್ರಭಾನುಃ ತಮೀಷಿಂ ದಧಾನಃ'

-ಋ ವೇ 35-4

ತಮಃ ಪ್ರಕಾಶೌ ಯದಧೀನೌ ಯತಸ್ತೌ ದಧಾನ ಇತ್ಯುಚ್ಯತೇ ವಾಸುದೇವಃ ।

-ಋ. ವೇ. ಭಾ.

5 'ತಸ್ಯೈಷ ಆದೇಶೋ ಯದೇತದ್ ವಿದ್ಯುತೋ ವ್ಯದ್ಯುತದಾ ಇತಿ'

—ತ. ಉ. 5-3

ವ್ಯದ್ಯೋತಯದ್ ವಿದ್ಯುದಾದೀನ್ ಕಪಿಲಾಖ್ಯಸ್ತು ಯೋ ಹರಿಃ ।

—ಬ್ರಹ್ಮಸಾರ (ತ. ಉ. ಭಾ.)

೩ ಸುಖವನ್ನು ಚೆನ್ನಾಗಿ ಅನುಭವಿಸುವವನು ಮತ್ತು (ಎಲ್ಲವನ್ನೂ) ಪ್ರೇರಿಸುವವನು[1]

ಜೀವಾತ್ಮರ ಹೃದಯಾಕಾಶದೊಳಗಿರುವ ಭಗವಂತನು ಚನ್ನಾಗಿ ಸುಖವನ್ನು ಅನುಭವಿಸುವ ಪ್ರಯುಕ್ತ ಆಕಾಶ' ಎಂದೇ ಎನಿಸಿರುವನು.[2] ಎಲ್ಲರನ್ನೂ ಪ್ರೇರಿಸುವ ಪ್ರಯುಕ್ತ 'ಪ್ರಾಣ' ಎನಿಸಿರುವ[3] ಭಗವಂತನು ಪ್ರೇರಿಸದಿದ್ದರೆ ಈ ಜಗತ್ತನ್ನು ಇನ್ನಾರು ಪ್ರೇರಿಸಬೇಕು? ಭಗವಂತನು ಆನಂದಪೂರ್ಣನಾಗದಿದ್ದರೆ ಯಾಕೆ ಪ್ರೇರಿಸಿಯಾನು?—ಎಂದು ತೈತ್ತಿರೀಯೋಪನಿಷತ್ತು ಸವಾಲುಗಳನ್ನೊಡ್ಡುವ[4] ಮೂಲಕ ಈ ಜಗತ್ತನ್ನು ಭಗವಂತನೇ ಪ್ರೇರಿಸುವವನು ಅವನು ಆನಂದ ಪರಿಪೂರ್ಣನಾಗಿರುವುದರಿಂದ ಪ್ರೇರಣೆಯಲ್ಲಿ ತೊಡಗಿರುವನೆಂದು ಸೂಚಿಸಿದೆ

೪ ಚೆನ್ನಾಗಿ ಶೋಭಿಸುವ ಲಕ್ಷ್ಮೀದೇವಿಯನ್ನೂ ಪ್ರೇರಿಸುವವನು[5]

---

೩ 1 ಪ್ರಕರ್ಷೇಣ ಕಂ ಅಶ್ನಾತೀತಿ ಪ್ರಕಾಶಃ ಸರ್ವಂ ನಯತಿ ಪ್ರೇರಯತೀತಿ ನಃ । ಪ್ರಕಾಶ-ಶ್ಚಾಸೌ ನಶ್ಚ ಪ್ರಕಾಶನಃ ।

2 'ಸ ಬ್ರೂಯಾದ್ ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ ' —ಛಾಂ. ಉ. 8-1-2

ಕಿಂ ತದತ್ರ ವಿದ್ಯತ ಇತ್ಯಸ್ಯಾಯಂ ಪರಿಹಾರಃ—ಅಸ್ಮಿನ್ ಭೂತಾಕಾಶೇ ಪರಬ್ರಹ್ಮಾಖ್ಯ ಆಕಾಶೋ ವಿದ್ಯತೇ । .. ಆ ಸಮಂತಾತ್ ಕಮಶ್ನಾತೀತಿ ವಾ ।

—ಛಾಂ ಉ. ಭಾ.

3 ಸ ಏಷಃ .. ಪ್ರಾಣಃ —ಐ. ಉ. 1-6-1

ಪ್ರಾಣನಾಮಾ ಪ್ರಣೇತೃತ್ವಾತ್ ... । —ಐ. ಉ. ಭಾ.

4 ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್ ।

—ತೈ. ಉ. 2-12

ಆದೀಪ್ತಸ್ತ್ವೇಷ ಭಗವಾನ್ ಯದ್ಯಾನಂದೋ ಭವೇನ್ನ ಚ। ಸಾಮಾನ್ಯಚೇಷ್ಟಾ ಧರ್ಮಾರ್ಶ್ಚ ಕಸ್ಯ ಸ್ಯುಸ್ತಮೃತೇ ಪ್ರಭುಮ್ । —ಯಜುಃಸಂಹಿತಾ (ತೈ. ಉ. ಭಾ.)

೪ 5 ಪ್ರಕರ್ಷೇಣ ಕಾಶತ ಇತಿ ಪ್ರಕೃಷ್ಟದೀಪ್ತಿಮತ್ತ್ವಾಲ್ಲಕ್ಷ್ಮೀಃ ಪ್ರಕಾಶಾ । ತಾಂ ನಯತಿ ಪ್ರೇರಯತೀತಿ ಪ್ರಕಾಶನಃ ।

ಚೆನ್ನಾಗಿ ಪ್ರಕಾಶಿಸುವ ಪ್ರಯುಕ್ತ ಲಕ್ಷ್ಮೀದೇವಿಯನ್ನು 'ಆಕಾಶ' ಎಂದೇ ಉಲ್ಲೇಖಿಸಿರುವ ಬೃಹದಾರಣ್ಯಕೋಪನಿಷತ್ತು,[1] ಆಕಾಶ ಶಬ್ದವಾಚ್ಯಳಾದ ಲಕ್ಷ್ಮೀದೇವಿಯು ಅಕ್ಷರ ಶಬ್ದವಾಚ್ಯನಾದ ಭಗವಂತನಲ್ಲಿ ಆಶ್ರಿತಳಾಗಿರುವಳೆಂದು ಸಂದೇಶಿಸುವುದರ[2] ಮೂಲಕ ಅವಳನ್ನು ಭಗವಂತನು ಪ್ರೇರಿಸುವನೆಂಬುದನ್ನು ಸೂಚಿಸಿದೆ

೫ ಪ್ರಕಾಶ ಸ್ವರೂಪಿಗಳಾದ, ಅಥವಾ ಚನ್ನಾಗಿ ಕಾಮಗಳನ್ನು ಅನುಭವಿಸುವ, ಅಥವಾ ಸುಖವನ್ನು ಅನುಭವಿಸುವ ಮುಕ್ತಾತ್ಮರನ್ನು ಪ್ರೇರಿಸುವವನು.[3]

ಸಕಲ ವಿಷಯಕವಾದ ಅಖಂಡ ಸಾಮರ್ಥ್ಯವುಳ್ಳ, ಸ್ವತಂತ್ರನಾದ, ಸರ್ವಜ್ಞನಾದ ರಮಾ ಪತಿಯು—ಇಂತಹ ಸ್ವರೂಪಕ್ಕಿಂತ ಭಿನ್ನ ಸ್ವರೂಪವುಳ್ಳ ಎಲ್ಲವನ್ನೂ—ಮುಕ್ತಾತ್ಮರನ್ನೂ ಬಿಡದೆ ಪ್ರೇರಿಸುವನೆಂಬುದಾಗಿ 'ತತ್ತ್ವೋದ್ಯೋತ' ಎಂಬ ಗ್ರಂಥದ ಪ್ರಾರಂಭದಲ್ಲಿ ಸ್ತುತಿಸಲಾಗಿದೆ[4]

೬ ಚೆನ್ನಾಗಿ ಪ್ರಕಾಶಿಸುವವನು ಅಥವಾ ಕಾಮಗಳನ್ನು ಚೆನ್ನಾಗಿ ಅನುಭವಿಸುವವನು ಮತ್ತು ಸರ್ವ ವಿಲಕ್ಷಣನಾಗಿರುವವನು[5]

---

1 .. ಆಕಾಶ ಓತಶ್ಚ ಪ್ರೋತಶ್ಚೇತಿ। —ಬೃ ಉ 5 8-7

ದೀಪ್ತೇರಾಕಾಶಶಬ್ದೋಕ್ತಾ ಶ್ರೀರ್ಹಿ ಸರ್ವಾಶ್ರಯಾ ಮತಾ।

—ಸ್ಕಾಂದ (ಬೃ ಉ ಭಾ)

2 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ'

—ಬೃ. ಉ. 5 8-11

೫ 3 ಪ್ರಕಾಶರೂಪತ್ವಾತ್, ಪ್ರಕರ್ಷೇಣ ಕಾಮಾನ್ ಅಶ್ನಂತೀತಿ ವಾ ಪ್ರಕರ್ಷೇಣ ಕಮಶ್ನಂತೀತಿ ವಾ ಪ್ರಕಾಶಾಃ ಮುಕ್ತಾತ್ಮಾನಃ। ತಾನ್ ನಯತಿ ಪ್ರೇರಯತೀತಿ ಪ್ರಕಾಶನಃ।

4 ಸರ್ವತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ।

ನಿತ್ಯಾತಾದೃಶಚಿಚ್ಚೇತ್ಯಯಂತೇಷ್ಟೋ ನೋ ರಮಾಪತಿಃ॥

—ತ ದ್ಯೋ.

೬ 5 ಪ್ರಕರ್ಷೇಣ ಕಾಶತೇ ದೀಪ್ತೋ ಭವತೀತಿ, ಪ್ರಕರ್ಷೇಣ ಕಾಮಾನ್ ಅಶ್ನಾತೀತಿ ವಾ ಪ್ರಕಾಶಃ। ಸರ್ವವಿಲಕ್ಷಣತ್ವಾತ್ ನಃ।

ಭಗವಂತನು ಚೆನ್ನಾಗಿ ಪ್ರಕಾಶಿಸುವನು ಅಥವಾ ಕಾಮಗಳನ್ನು ಚೆನ್ನಾಗಿ ಅನುಭವಿಸುವನು ಎಂಬ ಅಭಿಪ್ರಾಯದಲ್ಲಿ ಛಾಂದೋಗ್ಯೋಪನಿಷತ್ತಲ್ಲಿ ಅವನನ್ನು 'ಆಕಾಶ' ಎಂದು ಕರೆಯಲಾಗಿದೆ[1] ಸರ್ವವಿಲಕ್ಷಣನಾಗಿರುವುದರಿಂದ ಭಗವಂತನು ನಾರಾಯಣ ನಾಮದ ಮೊದಲ ನಕಾರದಿಂದ ವಾಚ್ಯನಾಗಿರುವನು

೭ ಪ್ರಕೃಷ್ಟನಾಗಿರುವವನು, ಸುಖಸ್ವರೂಪಿ ಹಾಗೂ (ತನ್ನ ಉಪಾಸಕರಿಗೆ) ಚೆನ್ನಾಗಿ ಸುಖವನ್ನು ತಲುಪಿಸುವವನು.[2]

೮ (ಗೂಢವಾದ ತನ್ನ ಸ್ವರೂಪವನ್ನು) ಶಾಸ್ತ್ರದ ಮೂಲಕ ಪ್ರಕಾಶಪಡಿಸುವವನು.[3]

ಭಗವಂತನು ಗೂಢವಾದ ತನ್ನ ಸ್ವರೂಪವನ್ನು ಶಾಸ್ತ್ರದ ಮೂಲಕ ಸಜ್ಜನರಿಗೆ ಪ್ರಕಾಶ ಪಡಿಸುವನೆಂದು ತಂತ್ರಭಾಗವತ ಪ್ರತಿಪಾದಿಸಿದೆ[4]

೯ ಪ್ರಕೃಷ್ಟನಾಗಿರುವವನು. ಸುಖಸ್ವರೂಪಿ, ಸರ್ವಸಂಹಾರಕ ಹಾಗೂ ಸರ್ವಪ್ರೇರಕ[5]

---

1 ಸ ಬ್ರೂಯಾದ್ ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶಃ —ಛಾಂ. ಉ. 8-1-2

ಆ ಸಮಂತಾತ್ ಕಾಶನಾದಾಕಾಶಃ । 'ಅಸ್ಮಿನ್ ಕಾಮಾಃ ಸಮಾಹಿತಾಃ' ಇತಿ ವಾಕ್ಯಶೇಷಾತ್ ಆ ಸಮಂತಾತ್ ಕಾಮಾನಶಾತೀತಿ ವಾ ।
-ಛಾಂ. ಉ. ಭಾ.

೭ 2 ಪ್ರಕೃಷ್ಟತ್ವಾತ್ ಪ್ರ ಸುಖಸ್ವರೂಪತ್ವಾತ್ ಕಂ, ಸ್ವೋಪಾಸಕೇಭ್ಯಃ ಆ ಸಮ್ಯಕ್ ಶಂ ಸುಖಂ ನಯತಿ ಪ್ರಾಪಯತೀತಿ ಅಶನಃ ।

೮ 3 ತಿರೋಹಿತಂ ಸ್ವಸ್ವರೂಪಂ ಶಾಸ್ತ್ರತಃ ಪ್ರಕಾಶಯತೀತಿ ಪ್ರಕಾಶನಃ ।

4 ತಿರೋಹಿತಂ ಸ್ವರೂಪಂ ತು ಪ್ರಕಾಶಯತಿ ಶಾಸ್ತ್ರತಃ ।
—ತಂತ್ರ ಭಾಗವತ (ಭಾಗ. ತಾ. ನಿ. 2-6-38)

೯ 5 ಪ್ರಕೃಷ್ಟತ್ವಾತ್ ಪ್ರ । ಆನಂದರೂಪತ್ವಾತ್ ಕಂ । ಅಶ್ನಾತಿ ಸರ್ವಮಿತಿ ಅಶಃ । ನಯತಿ ಸರ್ವಂ ಪ್ರೇರಯತೀತಿ ನಃ ।

೧೦ (ಮುಕ್ತಾತ್ಮರು) ಪ್ರಕೃಷ್ಟಾನಂದವನ್ನು ಭೋಗಿಸುವಂತೆ ಮಾಡುವವನು[1]

### ಜಿಜ್ಞಾಸೆ

[ಸ್ವೀಯತ್ವೇನ ದುಃಖಾನುಭವ ಇಲ್ಲ]

ಪ್ರ - ಪರಮಾತ್ಮನು ಸುಖವನ್ನು ಮಾತ್ರ ಅನುಭವಿಸುತ್ತಾನೆ. ದುಃಖವನ್ನು ಅನುಭವಿಸುವದಿಲ್ಲ ಎಂದು ಸಿದ್ಧಾಂತ ಇದೆ ಪರಮಾತ್ಮನು ಸರ್ವಜ್ಞನಾದುದರಿಂದ ಸುಖವನ್ನು ಅನುಭವಿಸುವಂತೆ ದುಃಖವನ್ನೂ ಅನುಭವಿಸಲೇಬೇಕಲ್ಲವೇ? ಅವನಿಗೆ ದುಃಖವು ಇಲ್ಲವಾದರೂ ಜೀವನಿಗೆ ದುಃಖವು ಇದೆ. ಜೀವನ ದುಃಖವನ್ನು ಜೀವನು ಅನುಭವಿಸುವಂತೆ ಅದನ್ನು ಪರಮಾತ್ಮನು ಏಕೆ ಅನುಭವಿಸುವದಿಲ್ಲ?

ಉ - ಪರಮಾತ್ಮನಿಗೆ ದುಃಖಾನುಭವವೂ ಕೂಡ ಇದೆ ಎಂದೇ ಒಪ್ಪಬೇಕು ಆದರೆ ಸ್ವೀಯತ್ವೇನ ದುಃಖಾನುಭವವು ಜೀವನಿಗೆ ಇರುವಂತೆ ಪರಮಾತ್ಮನಿಗೆ ಸ್ವೀಯತ್ವೇನ ದುಃಖದ ಅನುಭವವು ಇಲ್ಲ ಎಂಬ ಅಭಿಪ್ರಾಯದಿಂದ ಅವನಿಗ ದುಃಖಾನುಭವವು ಇಲ್ಲ ಎಂದು ವ್ಯವಹಾರವು ಇದೆ

❦

ಓಜಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ ।
ಋದ್ಧಃ ಸ್ಪಷ್ಟಾಕ್ಷರೋ ಮಂತ್ರಶ್ಚಂದ್ರಾಂಶುರ್ಭಾಸ್ಕರದ್ಯುತಿಃ ॥ ೩೦ ॥

### ೨೭೫ ಓಜಸ್ತೇಜೋದ್ಯುತಿಧರಃ

೧ ಇತರರನ್ನು ಪರಾಭವಗೊಳಿಸುವ ಸಾಮರ್ಥ್ಯ, ಪ್ರತಾಪ ಹಾಗೂ ಪ್ರಕಾಶ— ಇವುಗಳನ್ನು ಧರಿಸಿಕೊಂಡಿರುವವನು[2]

ಧರಣೀದೇವಿಯು, ಶ್ರೀಕೃಷ್ಣಪರಮಾತ್ಮನ ಸ್ವರೂಪಾತ್ಮಕಳಾಗಿ ಪರಿಗಣಿಸಿರುವ ಸತ್ಯವೇ

---

೧೦ 1 ಪ್ರಕೃಷ್ಟಂ ಕಂ ಪ್ರಕಂ ಮೋಕ್ಷಾನಂದಃ । ತತ್ ಮುಕ್ತಾನ್ ಆಶಯತಿ ಭೋಜಯತೀತಿ ಪ್ರಕಾಶನಃ ।

೧ 2 ಧರತೀತಿ ಧರಃ । ಓಜಸ್ತೇಜೋದ್ಯುತೀನಾಂ ಪರಾವಷ್ಟಂಭನಶಕ್ತಿ, ಪ್ರತಾಪ, ಪ್ರಕಾಶಾನಾಂ ಧರಃ ಓಜಸ್ತೇಜೋದ್ಯುತಿಧರಃ । -ಸ. ಸಂ.

ಮೊದಲಾದ ನಲ್ವತ್ತು ಗುಣಗಳಲ್ಲಿ ಶೌರ್ಯ, ಓಜಸ್ಸು ಮತ್ತು ಪ್ರಕಾಶಗಳೂ ಸೇರಿಕೊಂಡಿವೆ[1] ಛಾಂದೋಗ್ಯೋಪನಿಷತ್ತಲ್ಲಿ ವೇದಗಳಿಂದ ಅಭಿವ್ಯಕ್ತನಾದ ಭಗವಂತನಿಗೆ ತೇಜೋರೂಪತ್ವವನ್ನು ಹೇಳಲಾಗಿದೆ[2] ಚತುರ್ವೇದಶಿಖೆಯು ಭಗವಂತನು ಪ್ರಕಾಶಸ್ವರೂಪಿ ಎಂಬ ಅಭಿಪ್ರಾಯದಲ್ಲಿ ಅವನನ್ನು 'ತೇಜಃ' ಎಂದು ಕರೆದಿದೆ.[3] ಪ್ರಕಾಶ ರೂಪವಾದ ದ್ಯುತಿಪ್ರಯುಕ್ತವೂ ಭಗವಂತನು ಮುಖ್ಯವಾಗಿ ದೇವ ಎನಿಸಿರುವನು[4]

ಹೀಗೆ ಓಜಸ್ಸು, ತೇಜಸ್ಸು, ಹಾಗೂ ದ್ಯುತಿಗಳು ಭಗವಂತನ ಸ್ವರೂಪಾತ್ಮಕ ಗುಣಗಳಾಗಿ ಅಲ್ಲಲ್ಲಿ ಹೇಳಲ್ಪಟ್ಟಿವೆ. ಭೇದ ಪ್ರತಿನಿಧಿಯಾದ ವಿಶೇಷದ ಸಾಮರ್ಥ್ಯದಿಂದ ಗುಣಸ್ವರೂಪಿ ಯಾದಂತೆ ಅವುಗಳ ಧಾರಕನೂ ಭಗವಂತನಾಗಿರುವನು[5]

೨ (ಇತರದಲ್ಲಿರುವ) ಓಜಸ್ಸು, ತೇಜಸ್ಸು ಹಾಗೂ ಪ್ರಕಾಶ ಈ ಗುಣಗಳಿಗೆ (ಭಗವಂತನೇ ಒಡೆಯನಾಗಿದ್ದು) ಧಾರಕನಾಗಿರುವವನು[6]

---

1 'ಸತ್ಯಂ ಶೌಚಂ .ಶೌರ್ಯಂ ತೇಜೋ ಓಜೋ ಬಲಂ ಭಗಃ । ಇಮೇ ಚಾನ್ಯೇ ಚ ಭಗವನ್ ನಿತ್ಯಾ ಯತ್ರ ಮಹಾಗುಣಾಃ' -ಭಾಗ 1-16-29

2 ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ...ಅಜಾಯತ -ಛಾಂ. ಉ. 3-1-1

ಯಶಸ್ತೇಜ ಇಂದ್ರಿಯ ವೀರ್ಯಾನ್ನಾದ್ಯರಸತ್ವಂ ಚ ಭಗವಂತಂ ವಿನಾ ಕಸ್ಯ ಮುಖ್ಯತೋ ಯುಜ್ಯತೇ?

3 'ಅಹಂ ತತ್ತೇಜೋ ರಶ್ಮೀತ್.. ' -ಚತುರ್ವೇದಶಿಖಾ (ಬ್ರ. ಸೂ. ಭಾ. 1-1-20)

4 'ಅಗ್ನಿಮೀಳೆ...ದೇವಂ' -ಋ ವೇ. 1-1

'ದ್ಯೋತನಾದ್ ...ದೇವಾಖ್ಯಂ . ' -ಋ. ವೇ 1-11

5 ತದಭಿನ್ನಾ ಗುಣಾ ನಿತ್ಯಮಪಿ ಸರ್ವೇ ವಿಶೇಷತಃ । ಗುಣತ್ವೇನ ಗುಣಿತ್ವೇನ ಭೋಕ್ತೃ-ಭೋಗ್ಯತಯಾ ಸ್ಥಿತಾಃ ॥ -ಅ. ವ್ಯಾ. (3-2-158)

೨ 6 ಅನ್ಯತ್ರ ಸ್ಥಿತಾನಾಂ ಓಜಸ್ತೇಜೋದ್ಯುತೀನಾಂ ಭಗವದಧೀನತ್ವಾತ್ ಸ ಏವ ಧಾರಕ ಇತಿ ಓಜಸ್ತೇಜೋದ್ಯುತಿಧರಃ ।

ಶ್ರೀಕೃಷ್ಣನು ಓಜಸ್ವಿಗಳ ಓಜಸ್ಸು ತನಗೆ ಅಧೀನವಾಗಿರುವುದೆಂದೂ,[1] ತೇಜಸ್ವಿಗಳ ತೇಜಸ್ಸು ತನಗೆ ಅಧೀನವಾದುದೆಂದೂ ಸಂದೇಶಿಸಿರುವನು. ಹಾಗೆಯೇ ಚಂದ್ರ, ಸೂರ್ಯ, ನಕ್ಷತ್ರಾದಿಗಳಲ್ಲಿ 'ಪ್ರಭಾ' ಎಂಬ ಹೆಸರಿಂದ ಇದ್ದು ಪ್ರಕಾಶಪಡಿಸುವವನು ತಾನೇ ಎಂಬುದಾಗಿ ಶ್ರೀಕೃಷ್ಣನು ಸಂದೇಶಿಸಿರುವನು.[3] ವಸುದೇವನು ಶ್ರೀಕೃಷ್ಣನನ್ನು ಸ್ತುತಿಸುತ್ತ—ಚಂದ್ರಾಗ್ನಿ, ಸೂರ್ಯ, ನಕ್ಷತ್ರ ಹಾಗೂ ವಿದ್ಯುತ್ ಇವುಗಳಲ್ಲಿ ಇರುವ ಕಾಂತಿ, ತೇಜಸ್ಸು, ಪ್ರಭೆಗಳೆಲ್ಲ ನಿನಗೆ ಅಧೀನ ಎಂದೂ, ವಾಯುವಿನ ಓಜಸ್ಸು ಬಲಾದಿಗಳು ನಿನಗೆ ಸೇರಿದವು ಎಂದೂ ಉಲ್ಲೇಖಿಸಿರುವನು[4]

ಹೀಗೆ ಇತರರಲ್ಲಿರುವ ಓಜಸ್ಸು ತೇಜಸ್ಸು ಹಾಗೂ ಪ್ರಕಾಶಗಳು ಭಗವದಧೀನಗಳಾಗಿರುವ ಪ್ರಯುಕ್ತ ಅವನು ಅವುಗಳಿಗೆ ಧಾರಕನೂ ಎನಿಸಿರುವನು[5]

---

1 'ಓಜಃ ಸಹೋಬಲವತಾಂ ಅಹಂ ವಿದ್ಧಿ ' -ಭಾಗ 11-16 32

ಸಹಃ ಅವಷ್ಟಂಭನಶಕ್ತಿಃ ಬಲಂ ಚ ಆಭ್ಯಾಂ ಯುಕ್ತಾನಾಂ ಓಜಃ ಅವಷ್ಟಂಭನಶಕ್ತಿ-ರಹಮ್ । ಓಜಃ ಬಲಂ ಚಾಹಮ್ । ಓಜಃಶಬ್ದಸ್ಯ ನಾನಾರ್ಥಸ್ಯಾऽವೃತ್ತಿಃ ।

-ಯಾದವೇಂದ್ರತೀರ್ಥಾಃ ।

2 ..ತೇಜಸ್ತೇಜಸ್ವಿನಾಮಹಮ್ । -ಗೀತಾ 7-10

3 ಪ್ರಭಾ ಸೂರ್ಯೇಂದುತಾರಾಣಾಂ । -ಭಾಗ. 11-16-34

* . ಪ್ರಭಾऽಸ್ಮಿ ಶಶಿಸೂರ್ಯಯೋಃ । -ಗೀ 7-8

4 ಕಾಂತಿಸ್ತೇಜಃ ಪ್ರಭಾ ಸತ್ತಾ ಚಂದ್ರಾಗ್ನ್ಯರ್ಕರ್ಕ್ಷವಿದ್ಯುತಾಮ್ ।

. ಓಜಃ ಸಹೋ ಬಲಂ ಚೇಷ್ಟಾ ಗತಿರ್ವಾಯೋಸ್ತ್ವಮೀಶ್ವರ ॥

-ಭಾಗ. 10 85 8

ಸೂರ್ಯಚಂದ್ರಾದಿಷು ಸ್ಥಿತ್ವಾ ಪ್ರಭಾನಾಮಾ ಪ್ರಭಾಸನಾತ್ ।

-ಗೀ. ತಾ.

5 ' ಕೃಷ್ಣಾ ರಜಾಂಸಿ ತವಿಷೀಂ ದಧಾನಃ' ಇತಿ ಋಗ್ವೇದೇ (35-4) 'ಶಮಃಪ್ರಕಾಶಾ ಯದಧೀನಾ ಯತಸ್ತಾ ದಧಾನ ಇತ್ಯುಚ್ಯತೇ ವಾಸುದೇವಃ' (ಋ. ಭಾ.) ಇತ್ಯುಕ್ತ ದಿಶಾ ಯಥಾ 'ರಜಾಂಸಿ ತವಿಷೀಂ ದಧಾನಃ' ಇತಿ ಪ್ರಯೋಗಃ ತಥಾಽತ್ರಾಪಿ ॥

೩ (ಪರಶುಕ್ಲತ್ರಯರೆನಿಸಿರುವ) ವಾಯುದೇವ, ಲಕ್ಷ್ಮೀದೇವಿ ಹಾಗೂ ಭಾರತೀ ದೇವಿ—ಇವರನ್ನು ಧರಿಸಿಕೊಂಡಿರುವವನು.[1]

೪ ಬಲ, ಪ್ರಕಾಶ ಹಾಗೂ ಕಾಂತಿ—ಇವುಗಳನ್ನು ಧರಿಸಿಕೊಂಡಿರುವವನು.[2]

೫ ಓಜಸ್ವಿಗಳ ಓಜಸ್ಸನ್ನು ನಿಯಮಿಸುವವನು ತೇಜಸ್ವಿಗಳ ತೇಜಸ್ಸನ್ನು ನಿಯಮಿಸು ವವನು ಮತ್ತು ಶೋಭೆಗೆ ದಾರಕನಾಗಿರುವವನು. ಅಥವಾ ಪ್ರಕಾಶಸ್ವರೂಪಿ ಹಾಗೂ ಸರ್ವಾಧಾರ.[3]

---

೩ 1 'ಪ್ರಾಣಂ ವಾವ ಮಹಾನ್ ಸಹ ಓಜೋ ಬಲಮಿತ್ಯಾಚಕ್ಷತೇ' ಇತಿ ಪೈಂಗಿಶ್ರುತ್ಯಾ-ಧಾರೇಣ (ಬ್ರ. ಸೂ 2-3-9) ಓಜಃ ಮುಖ್ಯಪ್ರಾಣಃ । 'ತತ್ರ ಸ್ಥಿತೇನ ರೂಪೇಣ ಸಾಕ್ಷಜ್ಜೈವ ಹಿ ಯತಃ ಸದಾ । ತೇಜ ಇತ್ಯುಚ್ಯತೇ ತಸ್ಮಾಜ್ಜನೀರ್ವಾ ತತ ಏವ ತು' (ಭಾಂ 6-2-1) ಇತ್ಯುಕ್ತದಿಶಾ ತತೇ ವ್ಯಾಪ್ತೇ ಭಗವತಿ ಸ್ಥಿತೇನ ರೂಪೇಣ ನ ಜಾಯತೇ ಇತಿ, ತಸ್ಮಾತ್ ವ್ಯಾಪ್ತಾತ್ ಭಗವತಃ ಸಕಾಶಾತ್ ಜಾಯತೇ ಇತಿ ವಾ ತೇಜಃ ಲಕ್ಷ್ಮೀಃ । 'ಪ್ರಾಣ ವಿದ್ಯುತ್ ' (ಕ ನಿ ) 'ವಾಯೋಃ ಪತ್ನೀ ವಿದ್ಯುದುಕ್ತಾ ವಿಶೇಷದ್ಯುತಿ ಹೇತುತಃ' (ಭಾ ಉ ಭಾ 8-4 1) ಇತ್ಯುಕ್ತದಿಶಾ ವಿಶೇಷೇಣ ದ್ಯೋತಮಾನಾ ಭಾರತೀ ಯಥಾ ದ್ಯುಶಬ್ದವಾಚ್ಯಾ ತಥಾ ದ್ಯುತಿಶಬ್ದವಾಚ್ಯಾಪಿ, ತಥಾಚ ದ್ಯುತಿಃ ಭಾರತೀ । ವಾಯುಂ ಲಕ್ಷ್ಮೀಂ ಭಾರತೀಂ ಚ (ಪರಶುಕ್ಲತ್ರಯಂ) ಧರತೀತಿ ಓಜಸ್ತೇ-ಜೋದ್ಯುತಿಧರಃ ।

೪ 2 'ಓಜೋ ದೀಪ್ತೌ ಬಲೇ.. ' ಇತಿ ಓಜಃ ಬಲಂ, 'ತೇಜಃ ಪ್ರಭಾವೇ ದೀಪ್ತೌ ಬಲೇ ಚ ಇತಿ ತೇಜಃ ದೀಪ್ತಿಃ, ದ್ಯುತಿಃ—ಕಾಂತಿಃ, ಏತಾಸಾಂ ಧಾರಕಃ ಓಜಸ್ತೇಜೋದ್ಯುತಿಧರಃ।

೫ 3 ಓಜಸ್ವಿನಾಂ ಓಜೋನಿಯಾಮಕತ್ವೇನ ಓಜಃ । ಅಗ್ನ್ಯಾದಿಸಂಸ್ಥಃ ಸನ್ ತೇಜಯತೀತಿ ತೇಜ ।ಧರತೀತಿ ಧರಃ ದ್ಯುತೇಃ ಶೋಭಾಯಾಃ ಧರಃ ದ್ಯುತಿಧರಃ।'ದ್ಯುತಿಸ್ತು ಶೋಭಾದೀ-ಧಿತೇೋಃ' । ಓಜಶ್ಚ ತತ್ ತೇಜಶ್ಚ ಓಜಸ್ತೇಜಃ, ಓಜಸ್ತೇಜಶ್ಚಾಸೌ ದ್ಯುತಿಧರಶ್ಚ ಓಜ-ಸ್ತೇಜೋದ್ಯುತಿಧರಃ । ಅಥವಾ ಪ್ರಕಾಶರೂಪತ್ವಾತ್ ದ್ಯುತಿಃ । ಧರತಿ ಸರ್ವಮಿತಿ, ಧರಃ। ಓಜಶ್ಚ ತತ್ ತೇಜಶ್ಚ ಓಜಸ್ತೇಜಃ । ಓಜಸ್ತೇಜಶ್ಚಾಸೌ ದ್ಯುತಿಶ್ಚ ಓಜಸ್ತೇಜೋ-ದ್ಯುತಿಃ । ಓಜಸ್ತೇಜೋದ್ಯುತಿಶ್ಚಾಸೌ ಧರಶ್ಚ ಓಜಸ್ತೇಜೋದ್ಯುತಿಧರಃ ।

ಶ್ರೀಕೃಷ್ಣನು ಓಜಸ್ಸು ಎಂಬ ಹೆಸರಿನ ರೂಪದಿಂದ ಓಜಸ್ವಿಗಳ ಓಜಸ್ಸನ್ನೂ,[1] ತೇಜಸ್ಸು ಎಂಬ ನಾಮದ ರೂಪದಿಂದ ತೇಜಸ್ವಿಗಳ ತೇಜಸ್ಸನ್ನೂ[2] ತಾನು ನಿಯಮಿಸುತ್ತಿರುವುದಾಗಿ ಸಂದೇಶಿಸಿರುವನು. ನಿತ್ಯ ಸುಂದರನಾಗಿರುವ ಭಗವಂತನು ತನ್ನ ಶೋಭೆಯನ್ನು ಧರಿಸಿಕೊಂಡಿರುವುದಲ್ಲದೆ, ಉಳಿದವರ ಶೋಭೆಗೂ ನಿಯಾಮಕನಾಗಿದ್ದು, ಧಾರಕ ಎಂದೆನಿಸಿರುವನು ವಾಮ ಎನಿಸುವ ರಮಾದಿಸ್ತ್ರೀಯರ ಸೌಂದರ್ಯವನ್ನು ಪ್ರೇರಿಸುವುದರಿಂದಲೇ ವಾಮನಿ ಎನಿಸಿರುವವನು ಅವನು[3]

## ಜಿಜ್ಞಾಸೆ

### [ಸ್ವಭಾವಗಳೂ ಅಧೀನ]

ಪ್ರ - ವಸ್ತುಗಳ ಸ್ವಭಾವಕ್ಕೆ ಶ್ರೀಹರಿಯು ನಿಯಾಮಕನು ಎಂದು ಹೇಳಿದರೆ ಶ್ರೀಹರಿಯು ವಸ್ತುಗಳಿಗೆ ನಿಯಾಮಕನು ಅಲ್ಲ ಎಂದು ಅರ್ಥವಾಗುದಿಲ್ಲವೇ? ಲೋಕದಲ್ಲಿ ಇವನ ಮನೆಯ ಮಾಲಿಕನು ಇವನು ಎಂದು ಹೇಳುವಾಗ ಇವನಿಗೆ ಇವನು ಮಾಲಿಕನು ಅಲ್ಲ ಎಂದು ತಿಳಿಯುತ್ತದೆ ಅದರಂತೆ ಪ್ರಕೃತದಲ್ಲಿ ವಸ್ತುಗಳ ಸ್ವಭಾವಕ್ಕೆ ನಿಯಾಮಕನು ಶ್ರೀಹರಿ ಎಂದು ಹೇಳಿದಾಗ ವಸ್ತುಗಳಿಗೆ ನಿಯಾಮಕನು ಅಲ್ಲವೆಂದು ಅರ್ಥ ಆಗುವದು ಸಹಜವಲ್ಲವೇ?

ಉ - ವಸ್ತುಗಳು,ಅವುಗಳ ಆಗಂತುಕ ಧರ್ಮಗಳು ಶ್ರೀಹರಿಯ ಅಧೀನಗಳು. ಆದರೆ ವಸ್ತುಗಳ ನಿತ್ಯಗಳಾದ ಸ್ವಭಾವಭೂತಧರ್ಮಗಳು ಶ್ರೀಹರಿಯ ಅಧೀನವಲ್ಲ. ಎಂದು ಕೆಲವರು ವಾದಿಗಳು ಹೇಳುತ್ತಾರೆ ಅದನ್ನು ನಿವಾರಿಸುವದಕ್ಕೋಸ್ಕರ ಸ್ವಭಾವಗಳೂ ಕೂಡ ಶ್ರೀಹರಿಯ ಅಧೀನ ಎಂಬ ಅಭಿಪ್ರಾಯದಿಂದ ವಸ್ತುಗಳ ಸ್ವಭಾವಗಳು ಶ್ರೀಹರಿಯ ಅಧೀನ ಎಂದು ಶಾಸ್ತ್ರವು ಹೇಳುತ್ತದೆ.



---

1 'ಓಜಃ ಸಹೋಬಲವತಾಂ.. ಅಹಂ ವಿದ್ಧಿ..' -ಭಾಗ. 11-16-32

* 'ಯಸ್ಯ ಯಸ್ಯ ಸ್ವಭಾವೋ ಯಸ್ತತ್ತನ್ನಾಮಾ ಹರಿಃ ಪರಃ । ನಿಯಾಮಕಃ ಸ್ವಭಾವಸ್ಯ ತತಃ ಶಬ್ದಾದಿನಾಮವಾನ್' -ಭಾಗ. ತಾ. ನಿ. 11-16-34

2 ತೇಜಸ್ತೇಜಸ್ವಿನಾಮಹಮ್ । -ಗೀ. 7-10

'ತೇಜಯತ್ಯಗ್ನಿಸಂಸ್ಥಃ ಸಃ.. .' -ಗೀ. ತಾ.

3 ಏಷ ಉ ಏವ ವಾಮನಿರೇಷ ಹಿ ಸರ್ವಾಣಿ ವಾಮಾನಿ ನಯತಿ

-ಛಾಂ. ಉ. 4-15

## ೨೭೬ ಪ್ರಕಾಶಾತ್ಮಾ

### ೧ ಪ್ರಕಾಶಿಸುವ ಸ್ವರೂಪ ಉಳ್ಳವನು[1]

ಜೀವಾತ್ಮನ ಜೊತೆಗೆಯೇ ಅವನ ಶರೀರದಲ್ಲಿರುವ ಭಗವಂತನು ಜೀವಾತ್ಮನಂತೆ ಭೋಗಿಸದಿದ್ದರೂ ಚೆನ್ನಾಗಿ ಪ್ರಕಾಶಿಸುತ್ತಿರುವನೆಂಬುದಾಗಿ ಆಥರ್ವಣೋಪನಿಷತ್ತು ಸಂದೇಶಿಸಿದೆ.[2] ಚೆನ್ನಾಗಿ ಪ್ರಕಾಶಿಸುವ ಪ್ರಯುಕ್ತ ಭಗವಂತನನ್ನು 'ಆಕಾಶ' ಎಂದೇ ಕರೆದಿದೆ. ತೈತ್ತಿರೀಯೋಪನಿಷತ್ತು[3] ಛಾಂದೋಗ್ಯೋಪನಿಷತ್ತು 'ಪರಂ ಜ್ಯೋತಿ' ಎಂದು ಅವನನ್ನು ಕರೆಯುವುದರ ಮೂಲಕ ಅವನು ಪ್ರಕಾಶಸ್ವರೂಪಿ ಎಂದು ಸೂಚಿಸಿದೆ.[4] ಭಗವಂತನು ಪ್ರಕಾಶ ಸ್ವರೂಪಿಯಾಗಿರುವುದರಿಂದಲೇ ತನ್ನನ್ನು ತಿಳಿಯುವುದರಲ್ಲಾಗಲೀ, ಮತ್ತೊಬ್ಬರನ್ನು ತಿಳಿಯುವುದರಲ್ಲಾಗಲೀ ಬೇರೆ ಯಾವುದನ್ನೂ ಅಪೇಕ್ಷಿಸುವುದಿಲ್ಲ ಆದ್ದರಿಂದಲೇ ಮುಖ್ಯವಾಗಿ 'ಸ್ವಪ್ರಕಾಶ' ಎಂದೇ ಎನಿಸಿರುವನು[5]

### ೨ ಪ್ರಕಾಶಿಸುವ ದೇಹ ಉಳ್ಳವನು[6]

ಭಗವಂತನ ಸ್ವರೂಪಾತ್ಮಕ ಶರೀರವೂ ಭಗವಂತನಂತೆಯೇ ಪ್ರಕಾಶಮಯ.

---

೧ 1 **ಪ್ರಕಾಶತ ಇತಿ ಪ್ರಕಾಶಃ ಆತ್ಮಾ ಸ್ವರೂಪಂ ಯಸ್ಯ ಸಃ ಪ್ರಕಾಶಾತ್ಮಾ ।**

2 **ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ।**
**–ಅಥ. ಉ. 3-1-1**

3 **'ಯದೇಷ ಆಕಾಶ ಆನಂದೋ ನ ಸ್ಯಾತ್'**
**–ತೈ. ಉ. 2-12**

**ಆದೀಪ್ತತ್ತ್ವೇಷ ಭಗವಾನ್ ಯದ್ಯಾನಂದೋ ಭವೇನ್ನ ಚ ।**
**–ಯಜುಃಸಂಹಿತಾ (ತೈ ಉ. ಭಾ)**

4 **ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।**
**–ಛಾಂ. ಉ. 8-4-1**

5 **ಸ್ವವೇದನೇಽನ್ಯವಿತ್ತೌ ವಾ ನಾಸಾವನ್ಯದಪೇಕ್ಷತೇ ।**
**ಸ್ವಪ್ರಕಾಶ ಇತಿ ಪ್ರೋಕ್ತಸ್ತೇನೈಕಃ ಪುರುಷೋತ್ತಮಃ ।**
**–ಗೀ. ತಾ. 13-13**

೨ 6 **ಪ್ರಕಾಶತ ಇತಿ ಪ್ರಕಾಶಃ ಪ್ರಕಾಶಃ, ಆತ್ಮಾ ಶರೀರಂ ಯಸ್ಯ ಸಃ ।**

ಅ ಪ್ರಕಾಶನಾದ ಸೂರ್ಯಚಂದ್ರಾದಿಗಳಿಗೆ ಒಡೆಯನಾಗಿರುವವನು[1]

ಆ ಜೀವಾತ್ಮರು ಪ್ರಕಾಶಿಸುವಂತೆ ಅನುಗ್ರಹಿಸುವವನು[2]

ಸಂಸಾರಾವಸ್ಥೆಯಲ್ಲಿ ಅಲ್ಪತೇಜಸ್ವೀಯಾಗಿರುವ ಜೀವನನ್ನು ಭಗವಂತನು ಮುಕ್ತ್ಯವಸ್ಥೆಯಲ್ಲಿ ಸುಮಹತ್ತೇಜಸ್ವೀಯನ್ನಾಗಿ ಮಾರ್ಪಡಿಸುವನೆಂದು ಪ್ರಮಾಣವು ತಿಳಿಸಿದೆ[3]

ಇ ಚತುರ್ಮುಖ ಅಥವಾ ಮುಖ್ಯಪ್ರಾಣ ಚೆನ್ನಾಗಿ ಪ್ರಕಾಶಿಸುವಂತೆ ಅನುಗ್ರಹಿಸುವವನು.[4]

ಈ ಪ್ರಕಾಶಕ್ಕೆ ಒಡೆಯನಾಗಿರುವವನು[5]

ಎಲ್ಲ ಪ್ರಕಾಶಕ ಪದಾರ್ಥಗಳ ಮೂಲಕ ಹೊರಡುವ ಪ್ರಕಾಶಕ್ಕೆ ಸವಿತೃನಾಮಕ ಭಗವಂತನೇ ಒಡೆಯನಾಗಿದ್ದು, ಧಾರಕನಾಗಿರುವನೆಂದು ಋಗ್ವೇದ ಸಂದೇಶಿಸಿದೆ.[6]

---

ಅ 1 ಪ್ರಕಾಶಂತ ಇತಿ ಪ್ರಕಾಶಾಃ ಸೂರ್ಯಚಂದ್ರಾದಯಸ್ತೇಷಾಂ ಆತ್ಮಾ ಸ್ವಾಮೀ ।

ಆ 2 ಪ್ರಕಾಶಂತ ಇತಿ ಪ್ರಕಾಶಾಃ ಪ್ರಕಾಶಾ ಆತ್ಮಾನಃ ಜೀವಾತ್ಮಾನಃ ಯಸ್ಮಾತ್ ಸಃ ಪ್ರಕಾಶಾತ್ಮಾ ।

3 ಅಲ್ಪತೇಜಸ್ತ್ವಥೈವಾಲ್ಪಂ ಜೀವರೂಪಂ ಹಿ ಸಂಸೃತೌ । ತಥೈವ ಸುಮಹತ್ತೇಜಃ ಕರೋತಿ ಭಗವಾನ್ ಮಹತ್ । -ಬೃ. ಉ. ಭಾ. 6-4-4

ಇ 4 ಪ್ರಕಾಶತ ಇತಿ ಪ್ರಕಾಶಃ । ಪ್ರಕಾಶಃ ಆತ್ಮಾ ಚತುರ್ಮುಖಃ ವಾಯುರ್ವಾ ಯಸ್ಮಾತ್ ಸಃ ಪ್ರಕಾಶಾತ್ಮಾ।'.. ಅಥವಾ ಸ್ವಯಮೇವೇತಿ ವಾಯುರ್ಬ್ರಹ್ಮಾಪಿ ವಾ ಭವೇತ್ । ...ಆತ್ಮಶಬ್ದೇನ ಭಣ್ಯತೇ' -ನಾಮಮಹೋದಧಿಃ (ಭಾಗ. ತಾ. ನಿ. 2-6-11)

ಈ 5 ಪ್ರಕಾಶಸ್ಯ ಆತ್ಮಾ ಸ್ವಾಮೀ ಪ್ರಕಾಶಾತ್ಮಾ ।

6 ...ತವೀಷಿಂ ದಧಾನಃ । -ಋ. ವೇ. 35-4

ತವಃ ಪ್ರಕಾಶೋ ಯದಧೀನೋ ಯತಸ್ತಾಂ ದಧಾನ ಇತ್ಯುಚ್ಯತೇ ವಾಸುದೇವಃ ।

-ಋ. ಭಾ.

೭ (ಮುಕ್ತಿಯಲ್ಲಿ) ಜೀವಾತ್ಮರು ಚೆನ್ನಾಗಿ ಕಾಮಗಳನ್ನು ಅನುಭವಿಸುವಂತೆ ಅನುಗ್ರಹಿಸುವವನು[1]

೮ (ಮುಕ್ತಿಯಲ್ಲಿ) ಜೀವಾತ್ಮರು ಚೆನ್ನಾಗಿ ಸುಖವನ್ನು ಅನುಭವಿಸುವಂತೆ ಅನುಗ್ರಹಿಸುವವನು[2].

೯ ಚೆನ್ನಾಗಿ ಕಾಮಗಳನ್ನು ಅನುಭವಿಸುವ ಆತ್ಮನು[3].

೧೦ ಚೆನ್ನಾಗಿ ಸುಖವನ್ನು ಅನುಭವಿಸುವ ಆತ್ಮನು[4]

೧೧ ಪ್ರಕೃಷ್ಟನಾದವನು, ದೀಪ್ತನಾಗಿರುವವನು, ಅಂತರ್ಯಾಮಿ ಆಗಿರುವವನು[5].

೧೨ ಪ್ರಕೃಷ್ಟನಾದವನು, ಸುಖಸ್ವರೂಪಿ, ಆಶಾ ಎನಿಸುವ ಸರಸ್ವತಿಯನ್ನು ಸೊಸೆಯಾಗಿ ಸ್ವೀಕರಿಸಿರುವವನು[6]

---

೭ 1 ಪ್ರಕರ್ಷೇಣ ಕಾಮಾನ್ ಅಶ್ನಂತೀತಿ ಪ್ರಕಾಶಾಃ, ಪ್ರಕಾಶಾಃ ಆತ್ಮಾನಃ ಜೀವಾಃ ಯಸ್ಮಾತ್ ಸಃ ಪ್ರಕಾಶಾತ್ಮಾ ।

೮ 2 ಪ್ರಕರ್ಷೇಣ ಕಂ ಸುಖಮಶ್ನಂತೀತಿ ಪ್ರಕಾಶಾಃ । ಪ್ರಕಾಶಾ ಆತ್ಮಾನಃ ಜೀವಾಃ ಯಸ್ಮಾತ್ ಸಃ ಪ್ರಕಾಶಾತ್ಮಾ ।

೯ 3 ಪ್ರಕರ್ಷೇಣ ಕಾಮಾನ್ ಅಶ್ನಾತೀತಿ ಪ್ರಕಾಶಃ । ಪ್ರಕಾಶಶ್ಚಾಸೌ ಆತ್ಮಾ ಚ ಪ್ರಕಾಶಾತ್ಮಾ ।

೧೦ 4 ಪ್ರಕರ್ಷೇಣ ಕಮಶ್ನಾತೀತಿ ಪ್ರಕಾಶಃ । ಪ್ರಕಾಶ್ಚಾಸಾವಾತ್ಮಾ ಚ ಪ್ರಕಾಶಾತ್ಮಾ ।

೧೧ 5 ಪ್ರಕೃಷ್ಟತ್ವಾತ್ ಪ್ರ । ಕಾಶತೇ ದೀಪ್ತೋ ಭವತೀತಿ ಕಾಶಃ । ಅಂತರ್ಯಾಮಿತ್ವಾತ್ ಆತ್ಮಾ ।

೧೨ 6 ಪ್ರಕೃಷ್ಟತ್ವಾತ್ ಪ್ರ । ಸುಖರೂಪತ್ವಾತ್ ಕಃ । 'ಶಮಿತ್ಯಾನಂದ ಉದ್ದಿಷ್ಟ ಆಶಾ ಪೂರ್ಣಸುಖತ್ವತಃ' ಇತಿ ತತ್ತ್ವವಿವೇಕ (ಛಾಂ. ಉ. ಭಾ. 7-1-16) ನಿರೂಪಿತದಿಶಾ ಆಶಾ ಸರಸ್ವತೀ । ತಾಂ ಸ್ನುಷಾತ್ವೇನ ಆದತ್ತ ಇತಿ ಆಶಾತ್ಮಾ ।

ಜಿಜ್ಞಾಸೆ

[ಧರ್ಮ ಧರ್ಮಿಗಳಿಗೆ ಭೇದ ಇಲ್ಲ]

ಪ್ರ - ದ್ವೈತಸಿದ್ಧಾಂತೇತರ ಸಿದ್ಧಾಂತಿಗಳೆಲ್ಲರೂ ಧರ್ಮಧರ್ಮಿಗಳಿಗೆ ಭೇದವನ್ನು ಹೇಳುತ್ತಾರೆ. ದ್ವೈತ ಸಿದ್ಧಾಂತದಲ್ಲಿಯೂ ಅದೇ ರೀತಿ ಧರ್ಮ ಧರ್ಮಿಗಳಿಗೆ ಭೇದವನ್ನು ಏಕೆ ಹೇಳುವದಿಲ್ಲ?

ಉ - ಪ್ರಕಾಶಾತ್ಮಾ ಎಂಬ ವಿಷ್ಣು ನಾಮವು ಪರಮಾತ್ಮನ ಪ್ರಕಾಶಕ್ಕೂ ಪರಮಾತ್ಮನಿಗೂ ಭೇದವು ಇಲ್ಲ ಎಂದು ಹೇಳುತ್ತದೆ. ಆದುದರಿಂದ ಧರ್ಮ ಧರ್ಮಿಗಳಿಗೆ ಭೇದವು ಇಲ್ಲ ಎಂದು ದ್ವೈತ ಸಿದ್ಧಾಂತದಲ್ಲಿ ನಿಶ್ಚಯಿಸಲಾಗಿದೆ ಧರ್ಮಧರ್ಮಿಭಾವವನ್ನು ಭೇದ ಪ್ರತಿನಿಧಿಯಾದ ವಿಶೇಷದಿಂದ ಕೂಡಿಸಬೇಕು ಎಂದು ಈ ನಾಮದ ಅಭಿಪ್ರಾಯ.



## ೨೭೭ ಪ್ರತಾಪನಃ

೧ ಚೆನ್ನಾಗಿ ತಾಪವನ್ನುಂಟು ಮಾಡುವವನು.[1]

೨ ಚೆನ್ನಾಗಿ ತಾಪವನ್ನುಂಟು ಮಾಡುವ ಸೂರ್ಯ, ಅಗ್ನ್ಯಾದಿಗಳನ್ನು ಪ್ರೇರಿಸುವವನು.[2]

೩ ಸೂರ್ಯನಲ್ಲಿದ್ದುಕೊಂಡು ತಾಪವನ್ನುಂಟು ಮಾಡುವ ಪ್ರಾಣದೇವನನ್ನು ಪ್ರೇರಿಸುವವನು[3]

ಭಗವಂತನು ಪ್ರಕಾಶಕ ಪದಾರ್ಥಗಳಿಂದ ಪ್ರಕಾಶ ಹೊರಡುವಂತೆ ಮಾಡುವಂತೆಯೇ ತಾಪವನ್ನುಂಟುಮಾಡುವ ಬೆಂಕಿ, ಸೂರ್ಯ ಮುಂತಾದ ಪದಾರ್ಥಗಳಿಂದ ತಾಪ ಹೊರಡುವಂತೆಯೂ

---

೧ 1 ಪ್ರಕರ್ಷೇಣ ಸೂರ್ಯಾದಿಷು ಸ್ಥಿತ್ವಾ ತಾಪಯತೀತಿ ಪ್ರತಾಪನಃ ।

-ಸ ಸಂ.

೨ 2 ಪ್ರಕೃಷ್ಟಃ ತಾಪಃ ಯೇಭ್ಯಸ್ತೇ ಪ್ರತಾಪಾಃ ಸೂರ್ಯಾದಯಸ್ತಾನ್ ನಯತಿ ಪ್ರೇರಯತೀತಿ ಪ್ರತಾಪನಃ ।

೩ 3 ಪ್ರಕೃಷ್ಟಃ ತಾಪಃ ಯಸ್ಮಾತ್ ಸಃ ಪ್ರತಾಪಃ ಪ್ರಾಣದೇವಃ । ತಂ ನಯತಿ ಪ್ರೇರಯತೀತಿ ಪ್ರತಾಪನಃ ।

ನಿಯಮಿಸುವವನು ಪ್ರಾಣನಾಮಕ ಭಗವಂತನೇ ಸೂರ್ಯಮಂಡಲದಲ್ಲಿದ್ದು ತಾಪವನ್ನುಂಟು ಮಾಡುವನೆಂದು ಐತರೇಯೋಪನಿಷತ್ತು ಸಂದೇಶಿಸಿದೆ.[1] ಇಂದ್ರಾವಿಷ್ಟನಾದ ಭಗವಂತನು—ತಾನು ಆದಿತ್ಯನಲ್ಲಿರುವವನಾಗಿ ತಾಪವನ್ನುಂಟು ಮಾಡುತ್ತಿರುವುದಾಗಿ ವಿಶ್ವಾಮಿತ್ರರಿಗೆ ಉಪದೇಶಿಸಿರುವನು[2] ಗೀತಾಚಾರ್ಯನೂ ಸೂರ್ಯನಲ್ಲಿದ್ದು ತಾನೇ ತಾಪವನ್ನುಂಟು ಮಾಡುವವನೆಂದು ಸಂದೇಶಿಸಿರುವನು[3] ಸೂರ್ಯನಲ್ಲಿ ಕಾಣಿಸುವ ಬಿಸಿ ಮಾಡುವ, ಪಾಕಮಾಡುವ, ಒಣಗಿಸುವ ಹಾಗೂ ಬೆಳಗಿಸುವ—ಈ ನಾಲ್ಕು ಶಕ್ತಿಗಳೂ ಸೂರ್ಯನಾರಾಯಣನಿಗೇ ಸೇರಿರುವಂತಹವುಗಳೆಂಬುದಾಗಿ ಪಾದ್ಮವು ತಿಳಿಸಿದೆ[4] ಸೂರ್ಯನಲ್ಲಿರುವ ವಾಯುದೇವನು ಶ್ರೀಹರಿಯ ಆಜ್ಞಾನುಸಾರವಾಗಿ ಜಗತ್ತ್ರಯವನ್ನೂ ತಾಪಪಡಿಸುವನು. ವಾಯುದೇವನ ಸಾಮರ್ಥ್ಯದಿಂದಲೇ ಸೂರ್ಯನು ತಾಪಪಡಿಸುವನು—ಎಂಬುದಾಗಿ ಬೃಹತ್ಸಂಹಿತೆಯು ಸಂದೇಶಿಸಿದೆ[5]

ಆದ್ದರಿಂದ ಸ್ವತಂತ್ರವಾಗಿ ತಾಪವನ್ನುಂಟು ಮಾಡುವವನು ಭಗವಂತನೇ

ಳ ಉತ್ತಮರಾದವರ ಸಂತಾಪವನ್ನು ಕಳೆಯುವವನು[6]

---

1 ಪ್ರಾಣೋ ಹ್ಯೇಷ ಯ ಏಷ ತಪತಿ... -ಐ ಉ. 2-1-1-1

* ಯ ಏಷ ಸೂರ್ಯಮಂಡಲೇ ಸ್ಥಿತ್ವಾ ತಪತಿ ಸ ಭಗವಾನ್ನಾರಾಯಣಃ

-ಐ ಉ. ಭಾ

2 ...ಏಷ ತಪನ್ನೇವಾಸ್ಮೀತಿ ಹೋವಾಚ । -ಐ ಉ. 2-1-2-16

3 'ತಪಾಮ್ಯಹಂ..' -ಗೀ 9-19

ಕಿಂಚಾಹಮಾದಿತ್ಯಸ್ಥಸ್ಸನ್ ತಾಪಂ ಕರೋಮಿ ।

-ಗೀ. ವಿ

4 'ತಾಪನೀ ಪಾಚಿಕಾ ಚೈವ ಶೋಷಣೀ ಚ ಪ್ರಕಾಶನೀ । ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ' -ಪಾದ್ಮ (ಐ. ಉ. 2-1-2-16)

5 'ವಾಯುಶ್ಚ ಸೂರ್ಯಸಂಸ್ಥಃ ಸಂಸ್ತಪತ್ಯೇತಜ್ಜಗತ್ತ್ರಯಮ್ । ಆಜ್ಞಯೈವ ಹರೇ-ರ್ವಾಯೋಃ ಶಕ್ತ್ಯಾ ಸೂರ್ಯಸ್ತಪತ್ಯಯಮ್'

-ಬೃಹತ್ಸಂಹಿತಾ (ಐ. ಉ. 2-1-2-9)

ಳ 6 ಪ್ರಕೃಷ್ಟಾನಾಂ ತಾಪಂ ಸಂತಾಪಂ ನಯತಿ ಅಪನಯತೀತಿ ಪ್ರತಾಪನಃ ।

ಭಗವಂತನ ಮುಖಾರವಿಂದವು ಸಂಸಾರದ ಸಂತಾಪವನ್ನು ಪರಿಹರಿಸುವಂತಹದ್ದೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು[1] ಭಗವಂತನು ಆಗಾಗ್ಗೆ ಅವತರಿಸುವುದಕ್ಕೆ ಭಕ್ತರ ಸಂತಾಪವನ್ನು ಪರಿಹರಿಸುವುದೂ ಒಂದು ಉದ್ದೇಶ ಶ್ರೀರಾಮಾವತಾರದಲ್ಲಿ ವಿಶೇಷವಾಗಿ ಈ ಉದ್ದೇಶವನ್ನು ನೆರವೇರಿಸಿದ್ದರಿಂದ, ಶ್ರೀ ಮದಾಚಾರ್ಯರು ರಾಮಾವತಾರವನ್ನು ಸ್ತುತಿಸುವಾಗ— ಶ್ರೀರಾಮಚಂದ್ರನು ತನ್ನ ಭಕ್ತರ ಸಂತಾಪವೆಂಬ ದುರಿಷ್ಟವನ್ನು ಪರಿಹರಿಸಿರುವವನೆಂದು ವಿಶೇಷವಾಗಿ ಉಲ್ಲೇಖಿಸಿರುವರು[2] ಶ್ರೀರಾಮಚಂದ್ರನ ಅನುರಾಗಪೂರ್ವಕವಾದ ನೋಟವು ಸಂಸಾರದ ಸಂತಾಪವನ್ನು ಪರಿಹರಿಸುವ ಅಮೃತ ಸಾಗರವನ್ನೇ ಸ್ಮರಿಸುವಂತಹದ್ದೆಂದು ಶ್ರೀ ಮದಾಚಾರ್ಯರು ಸ್ಮರಿಸಿಕೊಂಡಿರುವರು[3]

ಅ (ದುಷ್ಟರಿಗೆ) ಚೆನ್ನಾಗಿ ತಾಪವನ್ನು ತಲುಪಿಸುವವನು[4]

ಆ ಪ್ರಕೃಷ್ಟನಾಗಿರುವವನು ಮತ್ತು ದುಷ್ಟರಿಗೆ ತಾಪವನ್ನುಂಟು ಮಾಡುವವನು[5]

ಭಗವಂತನು ದುಷ್ಟರನ್ನು ತಾಪಕ್ಕೊಳಪಡಿಸುವವನು ಆ ಪ್ರಯುಕ್ತ ಅವನಿಗೇನೂ ಪಾಪದ ಲೇಪವಿಲ್ಲ ಅವನು ಪ್ರಕೃಷ್ಟನಾಗಿಯೇ ಇರುವನು

ಇ ಸಂತಾಪವುಳ್ಳ ಸಂಸಾರವನ್ನು ತಲುಪಿಸುವವನು[6]

---

1 ಭವತಾಪಾಪನೋದೀಡ್ಯಂ ಶ್ರೀಪತೇರ್ಮುಖಪಂಕಜಮ್ ।
-ದ್ವಾ. ಸ್ತೋ.

2 ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ। .. ಸ್ವಭಕ್ತಸಂತಾಪದುರಿಷ್ಟಹಂತಾ ರಾಮಾವತಾರೋ ಹರಿರೀಶಚಂದ್ರಮಾಃ' -ಮ. ಭಾರ. ತಾ. ನಿ 3-2

3 'ಸ್ಮರಾಮಿ ಭವಸಂತಾಪಹಾನಿದಾಮೃತಸಾಗರಮ್ । ಪೂರ್ಣಾನಂದಸ್ಯ ರಾಮಸ್ಯ ಸಾನುರಾಗಾವಲೋಕನಮ್' —ದ್ವಾ. ಸ್ತೋ.

ಅ 4 ದುಷ್ಟಾನಾಂ ಪ್ರಕೃಷ್ಟಂ ತಾಪಂ ನಯತೀತಿ ವಾ ಪ್ರಕರ್ಷೇಣ ತಾಪಂ ನಯತೀತಿ ಪ್ರತಾಪನಃ ।

5 ಪ್ರಕೃಷ್ಟತ್ವಾತ್ ಪ್ರ । ದುಷ್ಟಾನ್ ಪ್ರತಿ ತಾಪಂ ಸಂತಾಪಂ ನಯತೀತಿ ತಾಪನಃ ।

ಇ 6 ಪ್ರಕೃಷ್ಟಃ ತಾಪಃ ಯಸ್ಮಿನ್ ಸಃ ಪ್ರತಾಪಃ ಸಂಸಾರಃ । ತಂ ನಯತಿ ಪ್ರಾಪಯತೀತಿ ಪ್ರತಾಪನಃ ।

೮ ಸಂತಾಪವುಳ್ಳ ಸಂಸಾರವನ್ನು (ಭಕ್ತರಿಂದ) ಹೋಗಲಾಡಿಸುವವನು.[1]

೯ ಚೆನ್ನಾಗಿ ವ್ಯಾಪಿಸಿರುವವನು ಮತ್ತು ನೀರಿನ ಸಮೂಹವನ್ನು ಪ್ರೇರಿಸುವವನು.[2]

೧೦ (ರಾಜರುಗಳಲ್ಲಿ) ಧನ ಮತ್ತು ಸೈನ್ಯದಿಂದ ಉಂಟಾಗುವ ಸಾಮರ್ಥ್ಯವಿಶೇಷವನ್ನು ಹೊಂದಿಸುವವನು[3]

೧೧ (ಸಂಹಾರಕಾಲದಲ್ಲಿ ಸೂರ್ಯ ಮೊದಲಾದವರ ಮೂಲಕ ಎಲ್ಲವನ್ನೂ) ಸುಡಿಸುವವನು[4]

೧೨ (ಮುಚುಕುಂದನ ಮೂಲಕ ಕಾಲಯವನನನ್ನು) ಸುಡಿಸಿರುವವನು[5]

ದೇವತೆಗಳಲ್ಲಿ ಮುಚುಕುಂದನು ಕೇಳಿದ ನಿದ್ದೆಯ ವರವನ್ನು ಅವರ ಪ್ರಾರ್ಥನಾನುಸಾರವಾಗಿ ಸಾರ್ಥಕಪಡಿಸುವುದಕ್ಕಾಗಿ ಶ್ರೀಕೃಷ್ಣಪರಮಾತ್ಮನು ತನ್ನನ್ನು ಮುಚುಕುಂದನು ಮಲಗಿದ್ದ ಗುಹೆಯ ಒಳಗಿನವರೆಗೆ ಕಾಲಯವನನನ್ನು ಅಟ್ಟಿಸಿಕೊಂಡು ಬರುವಂತೆ ಮಾಡಿ, ಅಲ್ಲಿ ಮುಚುಕುಂದನ ದೃಷ್ಟಿಗೆ ಬಿದ್ದ ಕಾಲಯವನ ಸುಡುವಂತೆ ಮಾಡಿರುವನು. ಶ್ರೀಕೃಷ್ಣ ಪರಮಾತ್ಮನೇ ಅವನನ್ನು ಸುಟ್ಟಿರುವುದಾದರೂ, ಮುಚುಕುಂದನ ಮೂಲಕ ಅದನ್ನು ನಡೆಸಿ ಆ ಪ್ರಯುಕ್ತ

---

೮ 1 ಪ್ರಕೃಷ್ಟಃ ತಾಪಃ ಯಸ್ಮಿನ್ ಸಃ ಪ್ರತಾಪಃ ಸಂಸಾರಃ । ತಂ ಭಕ್ತೇಭ್ಯಃ ಸಕಾಶಾತ್ ಅಪನಯತೀತಿ ಪ್ರತಾಪನಃ ।

೯ 2 ಪ್ರಕರ್ಷೇಣ ತತತ್ವಾತ್ ಪ್ರತಃ ಅಪಾಂ ಸಮೂಹ ಆಪಂ ತತ್ ನಯತೀತ್ಯಾಪನಃ ।
—ಸ. ಸಂ.

೧೦ 3 ಪ್ರತಾಪಂ 'ಸ ಪ್ರತಾಪಃ ಪ್ರಭಾವಶ್ಚ ಯತ್ತೇಜಃ ಕೋಶದಂಡಜಮ್' ಇತ್ಯುಕ್ತರೀತ್ಯಾ, ಕೋಶದಂಡಜಂ ಯತ್ತೇಜಃ, ತಂ ಕ್ಷತ್ರಿಯೇಷು ನಯತೀತಿ ಪ್ರತಾಪನಃ ।

೧೧ 4 ಸಂಹಾರಕಾಲೇ ವಿಶ್ವಂ ಸವಿತ್ರಾದಿಭಿಃ ಪ್ರತಾಪಯತಿ ದಾಹಯತೀತಿ ಪ್ರತಾಪನಃ । 'ತಪ ದಾಹೇ' । -ಶಾಂ. ಭಾ ಆಧಾರೇಣ

೧೨ 5 ಮುಚುಕುಂದೇನ ಕಾಲಯವನಂ ಪ್ರತಾಪಯತಿ ದಾಹಯತೀತಿ ಪ್ರತಾಪನಃ 'ತಪ ದಾಹೇ'

ಅವನಿಗೆ ಪುಣ್ಯ ಬರುವಂತೆ ಶ್ರೀಕೃಷ್ಣನು ಅನುಗ್ರಹಿಸಿರುವವನು[1]

೧೩ (ಯೋಗ್ಯರಿಗೆ ತನ್ನನ್ನು) ಚೆನ್ನಾಗಿ ತಿಳಿಸಿಕೊಡುವವನು[2]

೧೪ ಚೆನ್ನಾಗಿ ವ್ಯಾಪಿಸಿರುವವನು, ಪಾಲಕ ರಹಿತನು ಹಾಗೂ ಸರ್ವ ಪ್ರೇರಕನು[3]

೧೫ ಚೆನ್ನಾಗಿ ವ್ಯಾಪಿಸಿರುವ ಆಕಾಶದಂತೆ ವ್ಯಾಪಿಸಿರುವವನು ಅಥವಾ ಆಕಾಶವನ್ನು ವ್ಯಾಪಿಸಿರುವವನು[4]

## ಜಿಜ್ಞಾಸೆ

### [ಗೊತ್ತಾಗಬಾರದೆಂಬ ಇಚ್ಛೆ ಇಲ್ಲ]

ಪ್ರ – ಪರಮಾತ್ಮನು ಸೂರ್ಯನ ಒಳಗೆ ಇದ್ದು ಜಗತ್ತಿಗೆ ತಾಪವನ್ನು ಕೊಡುವ ಉದ್ದೇಶವು ಏನು? ಬಹಿರಂಗವಾಗಿ ಇದ್ದು ತಾಪವನ್ನು ಕೊಟ್ಟರೆ ಜನರು ತನ್ನನ್ನು ನಿಂದಿಸಿಯಾರು. ಯಾರಿಗೂ ಗೊತ್ತಾಗದೆ ಅಂತರ್ಯಾಮಿಯಾಗಿ ಇದ್ದು ತಾಪವನ್ನು ಕೊಟ್ಟರೆ ತನ್ನನ್ನು ಯಾರೂ ನಿಂದಿಸಲಾರರು. ಅದಕ್ಕಾಗಿ ಅಂತರ್ಯಾಮಿಯಾಗಿ ಅವನು ತಾಪದಾಯಕನು ಆಗಿದ್ದಾನೆಂದು ಊಹಿಸಬಹುದೇ?

ಉ - ಈ ಊಹೆಯು ಯುಕ್ತವಲ್ಲ. ಏಕೆಂದರೆ ಚಂದ್ರನ ಒಳಗೆ ಅವನು ಇದ್ದು ಜಗತ್ತಿನ ಸಂತಾಪವನ್ನು ಪರಿಹರಿಸುತ್ತಾನೆ. ಈ ತನ್ನ ಗುಣವು ಯಾರಿಗೂ ಗೊತ್ತಾಗಬಾರದು ಎಂದು

---

1 ದಶಮಸ್ಕಂಧಭಾಗವತಸ್ಯ ಏಕಪಂಚಾಶತ್ತಮಾಧ್ಯಾಯೇ ಏಷಾ ಆಖ್ಯಾಯಿಕಾ ನಿರೂಪಿತಾ । ತತ್ರಾಸ್ಪಷ್ಟಾ ಅಂಶಾಃ ಮಹಾಭಾರತತಾತ್ಪರ್ಯನಿರ್ಣಯಸ್ಯ ಸಪ್ತದಶಾಧ್ಯಾಯೇ (127 135) ಸ್ಪಷ್ಟೀಕೃತಾಃ ।

೧೩ 2 ಪ್ರಕರ್ಷೇಣ ತಾಪಯತಿ ಯೋಗ್ಯೇಭ್ಯಃ ಸ್ವಾತ್ಮಾನಂ ಜ್ಞಾಪಯತೀತಿ ಪ್ರತಾಪನಃ । 'ತಪ ಆಲೋಚನೇ' ।

೧೪ 3 ಪ್ರಕರ್ಷೇಣ ತತತ್ವಾತ್ ಪ್ರತಃ । ಪಾತೀತಿ ಪಃ ನ ವಿದ್ಯತೇ ಪಃ ಯಸ್ಯ ಸಃ ಅಪಃ । ನಯತಿ ಸರ್ವಂ ಪ್ರೇರಯತೀತಿ ನಃ ।

೧೫ 4 ಪ್ರಕರ್ಷೇಣ ತತತ್ವಾತ್ ಪ್ರತಃ ಆಕಾಶಃ । ತದ್ವತ್ ಆಪ್ನೋತಿ ಅಥವಾ ತಂ ಆಪ್ನೋತೀತಿ ಪ್ರತಾಪನಃ ।

ಚಂದ್ರಾಂತರ್ಯಾಮಿಯಾಗಿ ಸಂತಾಪ ಪರಿಹಾರಕನಾಗುತ್ತಾನೆಂದು ಯಾರೂ ಊಹಿಸುವದಿಲ್ಲ. ತನ್ನ ಗುಣವು ಇನ್ನೊಬ್ಬರಿಗೆ ಗೊತ್ತಾಗಬಾರದು ಎಂದು ಯಾರಿಗೂ ಇಚ್ಛೆಯು ಉಂಟಾಗುವದಿಲ್ಲ ಜಗತ್ತಿಗೆ ತಾಪವನ್ನು ಕೊಡುವದೂ ಅದರಂತೆ ಒಂದು ಗುಣವೇ ಆದುದರಿಂದ ಅದು ತನ್ನ ಗುಣ ಎಂದು ಭಕ್ತರಿಗೆ ಗೊತ್ತು ಮಾಡಬೇಕಾದ್ದರಿಂದ ಅದು ಯಾರಿಗೂ ಗೊತ್ತಾಗಬಾರದು ಎಂಬ ಇಚ್ಛೆಯು ಅವನಿಗೆ ಇಲ್ಲ

ಪ್ರ - ಜಗತ್ತಿಗೆ ತಾಪವನ್ನು ಕೊಡುವದು ಪರಮಾತ್ಮನ ಗುಣವು ಹೇಗೆ?

ಉ - ಜಗತ್ತಿನಲ್ಲಿ ಇರುವ ಕಲ್ಮಲಗಳು ಸುಟ್ಟುಹೋಗಬೇಕಾದರೆ ಅಷ್ಟು ತಾಪವು ಬೇಕು ಪರಮಾತ್ಮನು ಪ್ರತಿ ವಸ್ತುವಿನಲ್ಲಿ ಅಂತರ್ಯಾಮಿಯಾಗಿ ಇದ್ದು, ಆ ವಸ್ತುಗಳಿಗೆ ಶಕ್ತಿಯನ್ನು ಕೊಟ್ಟು ಅವುಗಳನ್ನು ದ್ವಾರಮಾಡಿ ಕಾರ್ಯಗಳನ್ನು ಮಾಡುವದು ಅವನ ಲೀಲೆ ಆದುದರಿಂದ ಸೂರ್ಯಾಂತರ್ಯಾಮಿಯಾಗಿ ಅವನು ಜಗತ್ತಿಗೆ ತಾಪವನ್ನು ಕೊಡುತ್ತಾನೆ



## ೨೭೮ ವೃದ್ಧಃ

೧ ಸ್ವಾಭಾವಿಕವಾಗಿಯೇ ಪರಿಪೂರ್ಣನಾಗಿರುವವನು.[1]

೨ ಅನಾದಿ ನಿತ್ಯನಾಗಿರುವವನು[3]

೩ ಎಲ್ಲೆಡೆ ಇರುವವನು[8]

ಪ್ರಥಮ ವೇದದ್ರಷ್ಟಾರನಾದ ಶ್ರೀ ವಿಷ್ಣುವು ತನ್ನ ಉಪಾಸಕರಲ್ಲೆಲ್ಲ ಶ್ರೇಷ್ಠನಾದ ಚತುರ್ಮುಖನಿಗೆ ತನ್ನನ್ನು ಹೇಗೆ ಉಪಾಸಿಸಬೇಕೆಂಬುದನ್ನು ಉಪದೇಶಿಸುತ್ತ, ತಾನು ಸಹಜ

---

೧ 1 ವೃಧ್ಯತಿ ವರ್ಧತ ಇತಿ ವೃದ್ಧಃ। 'ವೃಧು ವೃದ್ಧೌ'. ಲೋಕಕ್ಷಯಕೃತ್ ಪ್ರವೃದ್ಧಃ' (ಗೀ 11-32) ಇತ್ಯತ್ರ ಪ್ರವೃದ್ಧಶಬ್ದಾತ್ ಸಾರ್ವಕಾಲಿಕತ್ವಾರ್ಥೇ ಯಥಾ ಕ್ತಪ್ರತ್ಯಯಃ ತಥಾತ್ರಾಪಿ । ತಸ್ಮಾತ್ ನಿತ್ಯಂ, ಸ್ವಭಾವತಃ ಪರಿಪೂರ್ಣ ಇತಿ ಲಭ್ಯತೇ ।

೨ 2 ವೃಧ್ಯತಿ ಕಾಲತಃ ವರ್ಧತೇ, ನಿರುಪಚರಿತವೃದ್ಧಿರ್ವಿವಕ್ಷಿತೇತಿ ಸಮಗ್ರಕಾಲೇ ವರ್ತಮಾನತ್ವಂ-ಅನಾದಿನಿತ್ಯತ್ವಂ ಲಭ್ಯತೇ ।

೩ 3 ವೃಧ್ಯತಿ ದೇಶತಃ ವರ್ಧತೇ, ಸಮಗ್ರದೇಶೇ ವರ್ತಮಾನತ್ವಂ ವಿವಕ್ಷಿತಮಿತಿ ಸರ್ವವ್ಯಾಪಿತ್ವಂ ಲಭ್ಯತೇ ।

ವಾಗಿಯೇ ಗುಣಪೂರ್ಣನಾಗಿರುವುದರಿಂದ 'ಸಮೃದ್ಧ' ಎಂದೆನಿಸಿರುವನೆಂದು ತನ್ನನ್ನು ಉಪಾಸಿಸಲು ಆದೇಶಿಸುವವನು.[1] ಗೀತಾಚಾರ್ಯನು ತಾನು ಗುಣತಃ ಹಾಗೂ ಕಾಲತಃ ಪರಿಪೂರ್ಣನಾಗಿರುವವನೆಂಬುದನ್ನು ಸಂದೇಶಿಸಿರುವನು.[2]

೪ (ಮತ್ಸ್ಯಾವತಾರದಲ್ಲಿ ಮತ್ತೆ ತ್ರಿವಿಕ್ರಮಾವತಾರದಲ್ಲಿ ಒಮ್ಮೆಲೇ) ಬೆಳೆದಿರುವವನು[3]

೫ (ರಾಮಕೃಷ್ಣಾದ್ಯವತಾರಗಳಲ್ಲಿ) ಬೆಳೆಯುವವನಂತೆ ತೋರಿಸಿರುವವನು[4]

## ಜಿಜ್ಞಾಸೆ

[ಅಪೂರ್ವತೆ ಇಲ್ಲದ ಅರ್ಥ]

ಪ್ರ - 'ತದಾತ್ಮಾನಮೇವಾವೇತ್ ಅಹಂ ಬ್ರಹ್ಮಾಸ್ಮಿ ಇತಿ' ಎಂಬ ಬೃಹದಾರಣ್ಯ ಶ್ರುತಿಗೆ ಅರ್ಥವನ್ನು ದ್ವೈತಸಿದ್ಧಾಂತದಲ್ಲಿ 'ಅಹಂ' ಅಹೇಯನು ಬ್ರಹ್ಮ ಗುಣಪೂರ್ಣನು 'ಅಸ್ಮಿ' ಅಸ್ತಿತ್ವೇನ ಮೇಯನು ಎಂದು ಕ್ಲಿಷ್ಟವಾಗಿ ಹೇಳುವದು ಯುಕ್ತವಲ್ಲ. ಪರಮತದಲ್ಲಿ ಹೇಳುವಂತೆ ನಾನು ಬ್ರಹ್ಮನಾಗಿದ್ದೇನೆ ಎಂದು ಬ್ರಹ್ಮನು ತಿಳಿದನು. ಎಂದು ಸ್ವರಸವಾದ ಅರ್ಥವನ್ನು ಹೇಳುವದು ಯುಕ್ತವಲ್ಲವೇ?

---

1 ಶಾಂತಿ ಸಮೃದ್ಧಮಮೃತಮ್ । ಇತಿ ಪ್ರಾಚೀನ ಯೋಗ್ಯೋಪಾಸ್ವ ।
-ತೈ. ಉ. 1-14

'ಸ್ವತಃ ಪೂರ್ತೇಃ ಸಮೃದ್ಧಂ ತತ್ಪ್ರಕೀರ್ತಿತಮ್ । ಇತ್ಯುಪಾಸ್ವ ಪ್ರಾಥಮಿಕೋ ಯೋಗ್ಯಸ್ತ್ವಂ ಮದುಪಾಸನೇ । ಪ್ರಾಧಾನ್ಯಾದಿತಿ ಪೂರ್ವಂ ಹಿ ಪ್ರಾಹ ವಿಷ್ಣುಶ್ಚತುರ್ಮುಖಮ್' -ಬ್ರಹ್ಮಸಾರ (ತೈ. ಉ. ಭಾ)

2 ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ..
-ಗೀ. 11-32

ಪ್ರವೃದ್ಧಃ ಪರಿಪೂರ್ಣೋಽನಾದಿವಾನ್ । -ಗೀ. ಭಾ.

೪ 3 ಋಧ್ಯತಿ ಮತ್ಸ್ಯಾವತಾರೇ, ತ್ರಿವಿಕ್ರಮಾವತಾರೇ ಚ ಏಕದೈವ ವರ್ಧತ ಇತಿ ಋದ್ಧಃ ।

೫ 4 ರಾಮಕೃಷ್ಣಾದ್ಯವತಾರೇಷು ಋಧ್ಯತಿ ವರ್ಧತ ಇವ ಋದ್ಧಃ ।

ಉ – ದೇವದತ್ತನೂ ಕೂಡ ನಾನು ದೇವದತ್ತನಾಗಿದ್ದೇನೆಂದು ತಿಳಿಯುತ್ತಾನೆ, ಹೀಗೆ ಎಲ್ಲರೂ ತಾನು ಇಂತಹವನು ಎಂದು ತಿಳಿಯುವದು ಸಹಜ. ಅದರಂತೆ ಬ್ರಹ್ಮನು ನಾನು ಬ್ರಹ್ಮನಾಗಿದ್ದೇನೆಂದು ತಿಳಿದನು. ಎಂದು ಹೇಳುವದರಲ್ಲಿ ಏನೂ ಅಪೂರ್ವತೆಯು ಇಲ್ಲ ಆದುದರಿಂದ ದ್ವೈತಸಿದ್ಧಾಂತದಲ್ಲಿ ಆ ಶ್ರುತಿಗೆ ಹೇಳುವ ಅರ್ಥವೇ ನಿಜವಾದ ಅರ್ಥ. ಈ ಅರ್ಥ ಪ್ರಕಾರ ಪರಮಾತ್ಮನಿಗೆ ತನ್ನ ಪೂರ್ಣತ್ವದ ಅನುಭವವು ಇದ್ದ ಕಾರಣ ಅವನ ಅನುಭವವು ನಿಜ ತಯಥಾರ್ಥವಾದುದರಿಂದ ಅವನು ಪೂರ್ಣನು ಎಂದು ಶ್ರೇಷ್ಠ ಪ್ರಮಾಣವಾದ ಅವನ ಅನುಭವದಿಂದ ಸಿದ್ಧವಾಗುವದು.



## ೨೭೯ ಸ್ಪಷ್ಟಾಕ್ಷರಃ (ಸ್ಪಷ್ಟಾಕ್ಷರಃ)

೧ ಓಂಕಾರವೇ ಮೊದಲಾದ ಅಕ್ಷರಗಳನ್ನು ವ್ಯಕ್ತಪಡಿಸಿರುವವನು[1]

೨ ಅಕಾರ ಮತ್ತು ಓಂಕಾರಗಳಿಂದ ವ್ಯಕ್ತಗಳಾದ ಅಕ್ಷರಗಳಿಂದ ಪ್ರತಿಪಾದ್ಯನಾಗಿರುವವನು.[2]

ಸೃಷ್ಟಿಯ ಆದಿಯಲ್ಲಿ ಚತುರ್ಮುಖನನ್ನು ಸೃಷ್ಟಿಸಿದ ಭಗವಂತನು ಅವನಿಂದ ವಿಚಾರಿಸಲ್ಪಟ್ಟವನಾಗಿ ಅವನಿಗೆ ಹೀಗೆ ಉಪದೇಶಿಸುವನು—ಸಕಲ ಗುಣಪರಿಪೂರ್ಣನಾದ ನಾನು ಅಕಾರ, ಉಕಾರ, ಮಕಾರ, ನಾದ, ಬಿಂದು, ಕಲಾ, ಶಾಂತ ಹಾಗೂ ಅತಿಶಾಂತ—ಎಂಬ ಎಂಟು ಅಕ್ಷರಗಳನ್ನೊಳಗೊಂಡ ಪ್ರಣವದಿಂದ ವಾಚ್ಯನಾಗಿರುವೆನು. ಈ ಎಂಟು ಅಕ್ಷರಗಳಾದರೂ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ ಹಾಗೂ ಜ್ಞಾನಾತ್ಮ ಎಂಬ ನನ್ನ ಎಂಟು ರೂಪಗಳನ್ನು ಪ್ರತಿಪಾದಿಸುವವು[3] ಪ್ರಣವದ ಈ ಎಂಟು ಅಕ್ಷರಗಳಿಂದ ಐವತ್ತು ವರ್ಣಗಳು

---

೧ 1 ಸ್ಪಷ್ಟಾನಿ ಸ್ಫುಟಾನಿ ಅಕ್ಷರಾಣಿ ಅಕಾರಾದಿವರ್ಣಾಃ ಯೇನ ಸಃ ಸ್ಪಷ್ಟಾಕ್ಷರಃ ।

೨ 2 ಸ್ಪಷ್ಟಾನಿ ಅಕಾರೋಂಕಾರಾಭ್ಯಾಂ ವ್ಯಕ್ತಾನಿ ಅಕ್ಷರಾಣಿ ಪ್ರತಿಪಾದಕತ್ವೇನ ಯಸ್ಯ ಸಃ ಸ್ಪಷ್ಟಾಕ್ಷರಃ ।

3 ವಿಧಿಂ ವಿಧಾಯ ಸರ್ಗಾದೌ ತೇನ ಪೃಷ್ಟೋಽಬ್ಜಲೋಚನಃ । ಆಹ ದೇವೋ . ॥ ಆಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ । ಅಕಾರಾದ್ಯತಿಶಾಂತಾಂತಃ ಸೋಽಯಮಷ್ಟಾಕ್ಷರೋ ಮತಃ ॥ ಸ ವಿಶ್ವತೈಜಸಪ್ರಾಜ್ಞತುರೀಯಾತ್ಮಾಂತರಾತ್ಮನಾಮ್ ಪರಮಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ ।
-ತಂ. ಸಾ. ಸಂ 1–2,3,4

ವಕ್ತ್ರಗಳಾಗಿದ್ದು, ಅವುಗಳಿಂದ ನನ್ನ ಐವತ್ತು ಮೂರ್ತಿಗಳು ಪ್ರತಿಪಾದ್ಯಗಳಾಗಿವೆ ಅಜ, ಆನಂದ ಮೊದಲಾದವು ಅಕಾರಾದಿಗಳಿಂದ ವಾಚ್ಯಗಳಾದ ನನ್ನ ಐವತ್ತು ರೂಪಗಳು[1]

ಹೀಗೆ ಭಗವಂತನು ಓಂಕಾರಾದಿ ಅಕ್ಷರಗಳ ಪ್ರತಿಪಾದ್ಯ ರೂಪಗಳನ್ನು ಉಪದೇಶಿಸುವುದರ ಮೂಲಕ ಅಕ್ಷರಗಳನ್ನು ಸ್ಪಷ್ಟಗೊಳಿಸಿರುವನು

ಓಂಕಾರಕ್ಕೂ ಮೂಲ ಅಕ್ಷರವು ಅಕಾರ[2] ಈ ಅಕಾರದಿಂದಲೇ ಓಂಕಾರ, ಹಾಗೂ ಇತರ ಶಬ್ದಗಳೆಲ್ಲ ಅಭಿವ್ಯಕ್ತಗಳಾಗಿವೆ. ಅಕಾರವು ಭಗವಂತನಲ್ಲಿ ಸರ್ವ ಗುಣಪೂರ್ಣತ್ವವನ್ನೂ, ಜೀವ ಜಡ ಭೇದವನ್ನೂ ಸಕಲ ದೋಷದೂರತ್ವವನ್ನೂ ತಿಳಿಸುತ್ತಿದ್ದು—ಈ ಅರ್ಥಗಳ ಏಕದೇಶವನ್ನೇ ಉಳಿದ ಸರ್ವಶಬ್ದಗಳೂ ಹೇಳುತ್ತಿರುವುದರಿಂದ,[3] ಆ ಸರ್ವಶಬ್ದಗಳಲ್ಲಿ ಘಟಕಗಳಾದ, ಸರ್ವವರ್ಣಗಳೂ ಭಗವಂತನನ್ನೇ ಪ್ರತಿಪಾದಿಸುತ್ತಿವೆ

೩ ವೇದವನ್ನು ಅಭಿವ್ಯಕ್ತಗೊಳಿಸುವವನು.[4]

ನಿಯತ ಕ್ರಮದಿಂದ ವಿಶಿಷ್ಟಗಳಾಗಿದ್ದು ಪ್ರಸಿದ್ಧಗಳಾಗಿರುವ ಪ್ರಯುಕ್ತ ವೇದದ ಅಕ್ಷರಗಳೇ

---

1 ತದ್ರೂಪಭೇದಾಃ ಪಂಚಾಶನ್ಮೂರ್ತಯೋ ಮಮ ಚಾಪರಾಃ । ಪಂಚಾಶದ್ವರ್ಣವಾಚ್ಯಾಸ್ತಾ ವರ್ಣಾಸ್ತಾ ರಾರ್ಣಭೇದಿತಾಃ ॥ ಅಜ ಆನಂದ ..ಪಂಚಾಶನ್ಮೂರ್ತಯಸ್ತ್ವೇತಾ ಮಮಾಕಾರಾದಿಲಕ್ಷಕಾಃ ॥ -ತಂ. ಸಾ. ಸಂ 1-5 9

2 ಅಕಾರಸ್ಯ ವಿಕಾರೋಽಯಮೋಂಕಾರ ಇತಿ ಕಥ್ಯತೇ ।
-ಬ್ರಹ್ಮಸಾರ (ಐ ಉ. ಭಾ. 2-2 6-5)

3 'ಅಕಾರಃ ಪ್ರಥಮಂ ನಾಮ ವಿಷ್ಣೋಃ ಸರ್ವಗುಣಾನ್ ಬ್ರುವನ್ । ಸರ್ವದೋಷವಿರುದ್ಧತ್ವಾದ್ ಗುಣಾನಾಮನ್ಯತಾಮಪಿ। ವಿಷ್ಣೋರ್ವದತಿ ಜೀವೇಭ್ಯೋ ಜಡೇಭ್ಯಶ್ಚೈವ ಸರ್ವದಾ। ಅಭಾವಂ ಚೈವ ದೋಷಾಣಾಂ ಸರ್ವೇಷಾಂ ಕೇಶವೇ ವದೇತ್ । ಸಮ್ಯಗ್ ವಕ್ತ್ಯತಸ್ತಸ್ಮಾದಕಾರೋ ಮುಖ್ಯನಾಮ ಹಿ।ತದರ್ಥಾನೇಕದೇಶೇನ ಶಬ್ದಾಃ ಸರ್ವೇಽಪಿ ಚೋದಿರೇ। ವ್ಯಾಖ್ಯಾವ್ಯಾಖ್ಯೇಯರೂಪತ್ವಂ ವಿಕಾರಿತ್ವಮಿಹೋದಿತಮ್ । . ..'
-ಬ್ರಹ್ಮಸಾರ (ಐ. ಉ. ಭಾ. 2-2-6 5)

೩. 4 ಸ್ಪಷ್ಟಾನಿ ಅಭಿವ್ಯಕ್ತಾನಿ ಅಕ್ಷರಾಣಿ ಪ್ರಸಿದ್ಧಾಕ್ಷರಾಣಿ, ವೇದ ಇತಿ ಯಾವತ್, ಯೇನ ಸಃ ಸ್ಪಷ್ಟಾಕ್ಷರಃ ।

ಅಕ್ಷರಗಳೆಂದು ಸಾಮಾನ್ಯವಾಗಿ ಉಲ್ಲೇಖಿಸಲ್ಪಟ್ಟಿವೆ[1] ಇಂತಹ ಅಕ್ಷರಗಳನ್ನು, ಅವುಗಳನ್ನೊಳಗೊಂಡ ವೇದವನ್ನು ಭಗವಂತನೇ ಅಭಿವ್ಯಕ್ತಗೊಳಿಸುವನು. ವೇದಗಳು ಯಾವತ್ತೂ ಶ್ರೀವಿಷ್ಣುವಿನ ಬುದ್ಧಿಯಲ್ಲಿ ಇರುವವು. ಪ್ರತಿ ಸೃಷ್ಟಿಯ ಆರಂಭದಲ್ಲಿ ಭಗವಂತನು ಹಿಂದಿನ ಕಲ್ಪದ ವೇದದ ಕ್ರಮ, ವರ್ಣಗಳು, ಸ್ವರಗಳು—ಇವುಗಳಿಂದ ಕೂಡಿದ ವೇದವನ್ನೇ ಅಭಿವ್ಯಕ್ತಗೊಳಿಸುವನೆಂದು ಬ್ರಹ್ಮಾಂಡ ಬೋಧಿಸಿದೆ.[2]

೪ ಅಕ್ಷರ ಎನಿಸುವ ತನ್ನನ್ನು ಅಭಿವ್ಯಕ್ತಗೊಳಿಸುವವನು[3]

ಅವ್ಯಕ್ತೈಕಸ್ವಭಾವದ ಭಗವಂತನು ತನ್ನ ಅಚಿಂತ್ಯಸಾಮರ್ಥ್ಯದಿಂದಲೇ ತನ್ನನ್ನು ಅಭಿವ್ಯಕ್ತ ಗೊಳಿಸುವನು—ಎಂದು ನಾರಾಯಣಾಧ್ಯಾತ್ಮ ತಿಳಿಸಿದೆ[4]

೫ ನಾರಾಯಣಾಷ್ಟಾಕ್ಷರ ಮಂತ್ರದಿಂದ ಪ್ರತಿಪಾದ್ಯನಾಗಿರುವವನು[5]

---

1 'ಬ್ರಹ್ಮಾಕ್ಷರಸಮುದ್ಭವಮ್' (ಗೀ. 3-15) ಇತ್ಯತ್ರ ಅಕ್ಷರಶಬ್ದಃ ವೇದಪರತಯಾ ಪ್ರಯುಕ್ತ ಇತಿ ಶ್ರೀಮದಾಚಾರ್ಯೈಃ ವ್ಯಾಖ್ಯಾತಮ್-ಅಕ್ಷರಾಣಿ ಪ್ರಸಿದ್ಧಾನಿ । (ಗೀ. ಭಾ) ನಿಯತಾನುಪೂರ್ವೀವಿಶಿಷ್ಟಾನಿ ವೇದ ಇತಿ ಯಾವತ್-ಪ್ರ. ದೀ. । ತಥಾ ಅತ್ರಾಪಿ ಅಕ್ಷರಶಬ್ದಃ ವೇದಪರತಯಾ ಪ್ರಯುಕ್ತಃ ।

2 ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ । ಸರ್ಗೇಸರ್ಗೇಽಮುನೈವೈತ ಉದ್ಗೀರ್ಯಂತೇ ತಥೈವ ಚ। ತತ್ಕ್ರಮೇಣ ಚ ತೈರ್ವರ್ಣೈಸ್ತೈಃ ಸ್ವರೈರೇವ ನಾನ್ಯಥಾ।
-ಬ್ರಹ್ಮಾಂಡ (ವಿ. ತ. ವಿ.)

೪ 3 ಸ್ಪಷ್ಟಃ ಅಭಿವ್ಯಕ್ತಃ ಅಕ್ಷರಃ ಯೇನ ಸಃ ಸ್ಪಷ್ಟಾಕ್ಷರಃ ।

4 ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ ।
-ನಾರಾಯಣಾಧ್ಯಾತ್ಮ (ಬ್ರ. ಸೂ. ಭಾ. 3-2-27)

೫ 5 (ಸ್ಪ) ಶೋಭನಾನಿ '(ಓಂ) ನಮೋ ನಾರಾಯಣಾಯ' ಇತಿ ಅಷ್ಟ ಅಕ್ಷರಾಣಿ ಯಸ್ಯ ಸಃ ತಥೋಕ್ತಃ। -ಪಾ. ರಾ.

ವಾದಿರಾಜೀಯೇ 'ಸ್ಪಷ್ಟಾಕ್ಷರ' ಇತಿ ಪಾಠಮಂಗೀಕೃತ್ಯ ವ್ಯಾಖ್ಯಾತಮ್ ।

೧ (ಸೃಷ್ಟಿಕಾಲದಲ್ಲಿ) ಜಡಪ್ರಕೃತಿ ಸ್ಥೂಲವಾಗುವಂತೆ ಮಾಡುವವನು[1]

೨ ಲಕ್ಷ್ಮೀದೇವಿಯ ಸಾಮರ್ಥ್ಯವು ಅಭಿವ್ಯಕ್ತವಾಗುವಂತೆ ಮಾಡಿರುವವನು.[2]

ಸೂಕ್ಷ್ಮರೂಪವನ್ನು ಹೊಂದಿಸಿ ಪ್ರಲಯಕಾಲದಲ್ಲಿ ಭಕ್ಷಿಸಿದ ಜಡಪ್ರಕೃತಿಯನ್ನು ಭಗವಂತನು ಸೃಷ್ಟಿಕಾಲದಲ್ಲಿ ಸ್ಥೂಲರೂಪ ತಾಳುವಂತೆ ಅನುಗ್ರಹಿಸುವನು ಜಡಪ್ರಕೃತಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯ ಸಾಮರ್ಥ್ಯವನ್ನು ಅಭಿವ್ಯಕ್ತಗೊಳಿಸುವನು ಅಂಭೃಣೀ ಸೂಕ್ತದಲ್ಲಿ ತನ್ನ ಸಾಮರ್ಥ್ಯವನ್ನೆಲ್ಲ ಹೇಳಿಕೊಂಡ ಲಕ್ಷ್ಮೀದೇವಿ ತನ್ನ ಸಾಮರ್ಥ್ಯವನ್ನು ಪ್ರಕಟೀಕರಿಸುವವನು ನಾರಾಯಣನೆಂಬ ಅಭಿಪ್ರಾಯದಲ್ಲಿ ತನಗೆ ಕಾರಣನನ್ನಾಗಿ ಅವನನ್ನು ಉಲ್ಲೇಖಿಸಿರುವಳು[3]

## ಜಿಜ್ಞಾಸೆ

### [ಪರಮಾತ್ಮನಿಂದಲೇ ವ್ಯಕ್ತ]

ಪ್ರ – 'ಅ ಇ ಉ ಣ್' ಮೊದಲಾದ ಸೂತ್ರದಲ್ಲಿ ಅಕಾರಾದಿ ಅಕ್ಷರಗಳು ಇವೆ ಈ ಅಕ್ಷರಗಳು ಮಹೇಶ್ವರನಿಂದ ವ್ಯಕ್ತಗಳಾಗಿವೆ ಆದುದರಿಂದ ಆ ಸೂತ್ರಗಳಿಗೆ ಮಹೇಶ್ವರ ಸೂತ್ರ ಎಂದು ಹೆಸರು ಇದೆ. ಆದುದರಿಂದ ಅಕಾರಾದಿ ಅಕ್ಷರಗಳನ್ನು ವಿಷ್ಣು ವ್ಯಕ್ತಮಾಡಿದ್ದು ಎಂದು ಹೇಗೆ ಹೇಳುವದು?

ಉ - ಪಾಣಿನಿಯು ಕಲಿಯುಗದವನು ಇವನಿಗೆ ಮಹೇಶ್ವರನು ಪ್ರಸನ್ನನಾಗಿ 'ಅ ಇ ಉ ಣ್' ಮೊದಲಾದ ಸೂತ್ರಗಳನ್ನು ವ್ಯಕ್ತ ಮಾಡಿದನು. ಆದರೆ ಅಕಾರಾದಿ ಅಕ್ಷರಗಳ ವ್ಯಕ್ತಿಯು ಕಲಿಯುಗಕ್ಕಿಂತ ಪೂರ್ವದಲ್ಲಿ ಆಗಿತ್ತು. ವೇದಗಳು ಅನಾದಿಗಳು. ಇವುಗಳು ಪರಮಾತ್ಮನಿಂದ ಸೃಷ್ಟ್ಯಾದಿಯಲ್ಲಿ ವ್ಯಕ್ತವಾಗಿವೆ. ಆ ವೇದಗಳಲ್ಲಿ ಅಕಾರಾದಿ ಅಕ್ಷರಗಳು ಇರುವದರಿಂದ ಅಕಾರಾದಿ ಅಕ್ಷರಗಳು ಪರಮಾತ್ಮನಿಂದಲೇ ವ್ಯಕ್ತಗಳು ಎಂದು ಹೇಳಬೇಕು



---

೧ 1 ಸ್ಪಷ್ಟಂ ಸೃಷ್ಟಿಕಾಲೇ ಸ್ಥೂಲತಾಮಾಪನ್ನಂ ಅಕ್ಷರಂ ಜಡಪ್ರಕೃತಿತತ್ತ್ವಂ ಯೇನ ಸಃ ಸ್ಪಷ್ಟಾಕ್ಷರಃ ।

೨ 2 ಸ್ಪಷ್ಟಂ ಅಭಿವ್ಯಕ್ತಸಾಮರ್ಥ್ಯಂ ಅಕ್ಷರಂ ಶ್ರೀತತ್ತ್ವಂ ಯೇನ ಸಃ ಸ್ಪಷ್ಟಾಕ್ಷರಃ ।

3 '. .. ಮಮ ಯೋನಿರಪ್ಸ್ವಂತಸ್ಸಮುದ್ರೇ' -ಅಂ. ಸೂ.

## ೨೮೦ ಮಂತ್ರಃ

೧ ಜ್ಞಾನವನ್ನು ನೀಡಿ ರಕ್ಷಿಸುವವನು[1]

ತನ್ನ ಅರ್ಥದ ಜ್ಞಾನವನ್ನು ನೀಡಿ, ರಕ್ಷಿಸುವದರಿಂದಲೇ ಮಂತ್ರವು ಮಂತ್ರ ಎನಿಸುವು ದೆಂದು ಪೈಂಗಿಶ್ರುತಿ ಪ್ರತಿಪಾದಿಸಿದೆ.[2] ಸಾಮಾನ್ಯವಾದ ಮಂತ್ರವು ತನ್ನ ಅರ್ಥವನ್ನು ಜ್ಞಾಪಿಸಿ ಕೊಡುವ ಮೂಲಕ ರಕ್ಷಿಸುವುದಾದರೆ, ಮುಖ್ಯವಾಗಿ ಮಂತ್ರ ಎನಿಸುವ ಭಗವಂತನಾದರೂ ರಕ್ಷಣ ವಿಷಯಕವಾದ ಜ್ಞಾನಕೊಟ್ಟು ಕಾಪಾಡುವನು. ಧೃತರಾಷ್ಟ್ರನಿಗೆ ವಿದುರನು ಹೀಗೆಯೇ ಭೋಧಿಸುವನು—ಪಶುಗಳನ್ನು ಪಾಲಿಸುವವನು ದಂಡ ಹಿಡಿದುಕೊಂಡು ಪಶುಗಳನ್ನು ಮೇಯಿಸಿ ಸಾಕುವಂತೆ, ದೇವತೆಗಳು ರಕ್ಷಿಸುವುದಿಲ್ಲ ಅವರು ಯಾರನ್ನು ಕಾಪಾಡಲು ಇಚ್ಛಿಸುವರೋ, ಅಂತಹವರಿಗೆ ರಕ್ಷಣೆಯ ವಿಷಯಕವಾದ ಸುಬುದ್ಧಿಯನ್ನು ಅನುಗ್ರಹಿಸಿ, ಆ ಮೂಲಕ ರಕ್ಷಿಸುವರು[3] ದೇವಶ್ರೇಷ್ಠನಾದ ಭಗವಂತನೂ ಹೀಗೆಯೇ. ಹೀಗೆ ಜ್ಞಾನವನ್ನು ನೀಡಿ ರಕ್ಷಿಸುವವನಾದುದ ರಿಂದಲೇ ಭಗವಂತನು ಮಂತ್ರ ಎಂದೆನಿಸಿರುವನೆಂದು ಪ್ರಮಾಣವೊಂದು ಪ್ರತಿಪಾದಿಸಿದೆ.[4]

೨ ಗೌರವವನ್ನು ನೀಡಿ ರಕ್ಷಿಸುವವನು.[5]

ಸಂಭಾವಿತನಾದವನಿಗೆ ಅಪಕೀರ್ತಿ ಸಾವಿಗಿಂತಲೂ ಮಿಗಿಲು.[6] ಹೀಗಾಗದಂತೆ ಅವರವರಿಗೆ

---

೧ 1 ಮನನಾತ್ ತ್ರಾಯತೇ, ಮನನಂ ಪ್ರದಾಯ ರಕ್ಷತೀತಿ ಮಂತ್ರಃ ।

2 ಅನರ್ಥಜ್ಞೋದಿತೋ ಮಂತ್ರೋ ನಿರರ್ಥಸ್ಸ್ಯಾತಿ ಮಾನಸಃ। ಯನ್ಮಂತ್ರಸ್ತೇನ ಕಥಿತೋ .
-ಪೈಂಗಿಶ್ರುತಿ (ಗೀ. ತಾ. 17-23)

3 ನ ದೇವಾ ದಂಡಮಾದಾಯ ರಕ್ಷಂತಿ ಪಶುಪಾಲವತ್ ।
ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ ॥
-ಮ. ಭಾರ. ಉದ್ಯೋಗ 35-40 (ಕ. ವಿ. ಉದ್ಧೃತಮ್)

4 'ಮನನಾತ್ ತ್ರಾತೀತಿ ಮಂತ್ರೋಽಯಂ .' —ಗೀ. ತಾ. 9-16

೨ 5 ಮನನಾತ್ ಮಾನಂ ಸಮ್ಮಾನನಂ ಪ್ರದಾಯ ರಕ್ಷತೀತಿ ಮಂತ್ರಃ ।

6 ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ।
—ಗೀ. 2-34

ಸಂಬಂಧಿಗಳವರ ಮೂಲಕ ಯೋಗ್ಯವಾದ ಗೌರವವನ್ನು ಕೊಡಿಸಿ, ಆ ಪ್ರಯುಕ್ತ ಅವರು ಆತ್ಮ ವಿಶ್ವಾಸವನ್ನು ಪಡೆದು ಬದುಕುವಂತೆ ರಕ್ಷಿಸುವವನು ಭಗವಂತನೇ

ಓ (ದೇಹ ಮತ್ತು ದೇಹ ಸಂಬಂಧಿಗಳ ವಿಷಯದಲ್ಲಿ) ಮಮತೆಯ ಅಭಿಮಾನವನ್ನು ನೀಡಿ ರಕ್ಷಿಸುವವನು[1]

ಜೀವನು ತನ್ನ ದೇಹ ಮತ್ತು ದೇಹ ಸಂಬಂಧಿಗಳ ವಿಷಯದಲ್ಲಿ ಮಮತೆಯ ಅಭಿಮಾನಕ್ಕೆ ಒಳಗಾಗಿ ಅವುಗಳ ರಕ್ಷಣೆಯಲ್ಲಿ ತೊಡಗುವನು ಈ ರೀತಿಯ ಅಭಿಮಾನವನ್ನು ನೀಡುವವನಾದರೂ ಭಗವಂತನೇ[2] ಆದ ಪ್ರಯುಕ್ತ ಅಭಿಮಾನವನು ನೀಡಿ ತನ್ಮೂಲಕ ರಕ್ಷಿಸುವವನೂ ಅವನೇ.

ಳ ವೇದ ಮಂತ್ರಗಳಿಗೆ ಅಂತರ್ಯಾಮಿ ಆಗಿರುವವನು[3]

ದಕ್ಷ ಪ್ರಜಾಪತಿಯ ಯಜ್ಞದ ಸಂದರ್ಭದಲ್ಲಿ ಪ್ರಾದುರ್ಭವಿಸಿದ ಯಜ್ಞೇಶ್ವರನನ್ನು ಬ್ರಾಹ್ಮಣರು ಸ್ತುತಿಸುತ್ತ, ಭಗವಂತನು ಮಂತ್ರಗಳಿಗೆ ಅಂತರ್ಯಾಮಿಯಾಗಿರುವನೆಂಬ ಅಭಿಪ್ರಾಯದಲ್ಲಿ—ತ್ವಂ ಹಿ ಮಂತ್ರಾಃ—ನೀನೇ ಮಂತ್ರಗಳೆಂದು ಉಲ್ಲೇಖಿಸಿರುವರು[4]

ಶ (ಸ್ವತಂತ್ರವಾಗಿ) ಮನನ ಮಾಡುವವನು[5]

---

ಓ 1 ಮಾನಾತ್ ಮಮತಾತ್ಮಕಂ ಅಭಿಮಾನಂ ಪ್ರದಾಯ ರಕ್ಷತೀತಿ ಮಂತ್ರಃ ।

2 ..... ಮಾನದಃ ಪರಃ । —ಗಾರುಡ (ಭಾಗ. ತಾ ನಿ. 7-2-48)

ಳ 3 ಮಂತ್ರಾಂತರ್ಯಾಮಿತ್ವಾತ್ ಮಂತ್ರಃ ।

4 ತ್ವಂ ಹಿ ಮಂತ್ರಾಃ ಸಮಿದ್ದರ್ಭಪಾತ್ರಾಣಿ ಚ ।
-ಭಾಗ 4-7-45

ಸರ್ವಶಬ್ದಾಭಿಧೇಯತ್ವಂ ಸರ್ವಾಂತರ್ಯಾಮಿಕರ್ತೃತಾ ।
-ಮಾತ್ಸ್ಯ (ಭಾಗ. ತಾ. ನಿ )

ಶ 5 ಮಿಮೀತ ಇತಿ ಮಂತ್ರಃ । ('ಮಾಙ್ ಮಾನೇ') —ವಿ. ರಾ.

* ಮನನಕರ್ತೃತ್ವಾತ್ ಮಂತ್ರಃ । (ಮನುತ ಇತಿ ಮಂತ್ರಃ)
—ಶ. ಸಂ.

* ಮಂತ್ರಃ ಮನನಶೀಲಃ । —ವಾ. ರಾ.

ಭಗವಂತನೊಬ್ಬನೇ ಎಲ್ಲರ ಅಂತರ್ಯಾಮಿಯಾಗಿದ್ದು ಸ್ವತಂತ್ರವಾಗಿ ಮನನ ಮಾಡುವವನು[1] ಸ್ವತಂತ್ರವಾಗಿ ಮನನ ಮಾಡುವವನು ಇನ್ನೊಬ್ಬನಿಲ್ಲ[2]

೬ ಜ್ಞಾನಿಗಳಿಂದ ಮನನ ಮಾಡಲ್ಪಡುವವನು[3]

೭ ತನ್ನ ಬಗ್ಗೆ ಮನನ ಮಾಡುವವರನ್ನು (ವಿಶೇಷವಾಗಿ) ಕಾಪಾಡುವವನು[4]

೮ ರಹಸ್ಯನಾಗಿರುವವನು[5]

೯ ದೈತ್ಯರನ್ನು ಅಂಧಂತಮಸ್ಸಿನಲ್ಲಿ ಎಸೆಯುವವನು ಮತ್ತು ಸಾತ್ತ್ವಿಕರನ್ನು ರಕ್ಷಿಸುವವನು[6]

ಸಾತ್ತ್ವಿಕರು ಮುಕ್ತಿಯನ್ನು ಹೊಂದುವಂತೆ ಮಾಡುವುದೇ ಅವರ ಮುಖ್ಯ ರಕ್ಷಣೆ ಎನಿಸಿದೆ.

೧೦ ತಿಳಿಯಲ್ಪಡುವವನು ಮತ್ತು ರಕ್ಷಿಸುವವನು[7]

---

1 'ಶ್ರೋತಾ ಮಂತಾ ಸರ್ವೇಷಾಂ ಭೂತಾನಾಮಂತರ ಪುರುಷಃ ಸಮ ಆತ್ಮೇತಿ ವಿದ್ಯಾತ್' –ಐ. ಉ. 2-8-4-16

2 '.. ನಾನ್ಯೋಽತೋಽಸ್ತಿ ಮಂತಾ .ಏಷ ತ ಆತ್ಮಾಂತರ್ಯಾಮೀ .. ' –ಬೃ. ಉ. 5-8-7-33

' . ನಾನ್ಯೋ ವೇತ್ತಾ ಸ್ವತಂತ್ರೋಽಸ್ತಿ ' –ಮಹಾಮೀಮಾಂಸಾ (ಬೃ. ಉ. ಭಾ.)

೬ 3 ಮೀಯತ ಇತಿ ಮಂತ್ರಃ । –ವಿ. ರಾ.

೭ 4 ಮಂತ್ರೃನ್ ತ್ರಾಯತ ಇತಿ ಮಂತ್ರಃ । –ವಿ. ರಾ.

೮ 5 ಗೋಪ್ಯತ್ವಾನ್ಮಂತ್ರಃ । –ವಿ. ರಾ.

೯ 6 ಮಿನೋತೀತಿ ತ್ರಾತಿ ಚೇತಿ ಮಂತ್ರಃ । ('ಡುಮಿಞ್ ಪ್ರಕ್ಷೇಪಣೇ') –ವಿ. ರಾ

೧೦ 7 ಮೀಯತೇ ತ್ರಾಯತೇ ಚೇತಿ ಮಂತ್ರಃ ।

ಭಗವಂತನಂ ತಾನು ವಿಶೇಷವಾಗಿ ತಿಳಿಯಲ್ಪಟ್ಟಾಗ, ಅಂತಹವರನ್ನು ರಕ್ಷಿಸುವುದರಲ್ಲಿ ತೊಡಗುವವನು.

೧೧ ಮಂತ್ರದಿಂದ ಬೋಧ್ಯನಾಗಿರುವವನು.[1]

೧೨ ರಹಸ್ಯವಾಗಿ ಹೇಳಲ್ಪಡುವವನು[2]

ಅನಧಿಕಾರಿಗಳು ಅವನ ಸ್ವರೂಪವನ್ನು ಯಥಾವತ್ತಾಗಿ ತಿಳಿಯಬಾರದೆಂದು ಪುರಾಣಾದಿಗಳಲ್ಲಿ ಅವನು ರಹಸ್ಯವಾಗಿ ಹೇಳಲ್ಪಡುವವನು

### ಜಿಜ್ಞಾಸೆ

[ಮಂತ್ರ ಹೆಸರಿನಿಂದ ಸೂಚಿತ]

ಪ್ರ: ಪರಮಾತ್ಮನ ಉಪಾಸನೆಯು ಯಥಾರ್ಥವಾಗಬೇಕಾಗಿಲ್ಲ. ಉಪಾಸನೆಯು ಅವಿದ್ಯಮಾನ ವಿಷಯಕವೇ ಎಂದು ಕೆಲವರು ಹೇಳುತ್ತಾರೆ ಅದು ನಿಜವೋ?

ಉ:- ಮಂತ್ರೋಚ್ಚಾರಣೆಯು ಸ್ವರವರ್ಣ ವ್ಯತ್ಯಾಸದಿಂದ ಆದರೆ ಅನರ್ಥವಾಗುವಂತೆ ಮಂತ್ರ ಎಂದು ಹೆಸರುಳ್ಳ ಪರಮಾತ್ಮನ ಉಪಾಸನೆಯೂ ಯಥಾರ್ಥವೇ ಆಗಬೇಕು ಅವಿದ್ಯಮಾನ ವಿಷಯಕ ಉಪಾಸನೆಯಿಂದ ಅನರ್ಥ ಫಲವು ಆಗುತ್ತದೆಂದು 'ಅಚೇತನಾಸತ್ಯಾಯೋಗ್ಯಾನಿ ಅನುಪಾಸ್ಯಾನಿ' ಎಂಬ ಸಂಕರ್ಷಣ ಸೂತ್ರವು ಹೇಳುತ್ತದೆ. ಪರಮಾತ್ಮನಿಗೆ ಮಂತ್ರ ಎಂದು ಹೆಸರು ಇದ್ದದ್ದರಿಂದಲೂ ಈ ವಿಷಯವು ಸೂಚಿತವಾಗುತ್ತದೆ.



## ೨೮೧ ಚಂದ್ರಾಂಶುಃ

೧ (ಸಾವಿರಾರು) ಚಂದ್ರರ ಕಿರಣಗಳಂತೆ ಆಹ್ಲಾದಕಾರಿ ಕಿರಣಗಳು ಉಳ್ಳವನು.[3]

---

೧೧ 1 ಮಂತ್ರಬೋಧ್ಯತ್ವಾತ್-ಮಂತ್ರಃ । -ಶಾಂ. ಭಾ.

೧೨ 2 ಮಂತ್ರ್ಯತೇ ಗುಪ್ತಂ ಭಾಷ್ಯತೇ ಇತಿ ಮಂತ್ರಃ । 'ಮಂತ್ರಿ ಗುಪ್ತಭಾಷಣೇ'

೧ 3 ಚಂದ್ರಾಣಾಂ ಅಂಶವಃ ಕಿರಣಾ ಇವ ಅಂಶವಃ ಯಸ್ಯ ಸಃ ಚಂದ್ರಾಂಶುಃ ।

ಭಗವಂತನ ಮುಖಾರವಿಂದವು ಅನಂತ ಸಹಸ್ರ ಸಂಖ್ಯಾಕ ಚಂದ್ರರ ಕಾಂತಿಯಂತೆ ಕಾಂತಿ ಉಳ್ಳದ್ದೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು.[1] ಭಗವಂತನು ವಿಶೇಷವಾಗಿ ರಾಮಾವತಾರ ದಲ್ಲಿ ಚಂದ್ರನಂತೆ ಸೌಮ್ಯ ಕಿರಣಗಳನ್ನು ವ್ಯಕ್ತಗೊಳಿಸಿರುವನು ಆದ್ದರಿಂದಲೇ ಚಂದ್ರನಂತೆ ಪ್ರಿಯದರ್ಶನವುಳ್ಳವನು ಶ್ರೀರಾಮನೆಂದು ವಾಲ್ಮೀಕಿ ಋಷಿಗಳು ವರ್ಣಿಸಿರುವರು.[2]

ವಾಸ್ತವವಾಗಿ ಚಂದ್ರನ ಕಾಂತಿಯು ಪ್ರಾಕೃತವಾದರೆ, ಭಗವಂತನದು ಅಪ್ರಾಕೃತವಾದ ಕಾಂತಿ[3] ಆದ್ದರಿಂದಲೇ ಅಪ್ರಾಕೃತವಾಗಿರುವ ಪ್ರಯುಕ್ತ ಶೋಭನವಾಗಿರುವ ತನ್ನ ಕಾಂತಿಯಿಂದ ವ್ಯಾಪಿಸಿರುವವನು ಶ್ರೀರಾಮಚಂದ್ರನೆಂಬುದಾಗಿ ಶ್ರೀಮದಾಚಾರ್ಯರು ವಿಶೇಷಿಸಿರುವರು.[4] ಹೀಗಿದ್ದರೂ ಭಗವಂತನ ಕಾಂತಿಯನ್ನು ಪರಿಚಯಿಸಿಕೊಡುವುದಕ್ಕಾಗಿಯಷ್ಟೇ ಚಂದ್ರನ ಹೋಲಿಕೆ ಯನ್ನು ಬಳಸಲಾಗಿದೆ[5]

೨ ಚಂದ್ರನಿಗೆ ಕಾಂತಿಯನ್ನು ಅನುಗ್ರಹಿಸಿರುವವನು[6]

---

1 'ಸ್ಮರೇತ ಯಾಮಿನೀನಾಥಸಹಸ್ರಾಮಿತಕಾಂತಿಮತ್. ಶ್ರೀಪತೇರ್ಮುಖಪಂಕಜಮ್' -ದ್ವಾ ಸ್ತೋ.

ಅಮಿತಂ ಚ ತತ್ ಸಹಸ್ರಂ ಚ ಸಹಸ್ರಾಮಿತಂ ಯಾಮಿನೀನಾಥಾನಾಂ ಸಹಸ್ರಾಮಿತಂ ತಸ್ಯ ಯಾ ಕಾಂತಿಃ ಸಾ ಅಸ್ಯಾಸ್ತೀತಿ । -ವಿ. ಪ ಟೀ.

2 ಸೋಮವತ್ ಪ್ರಿಯದರ್ಶನಃ । -ವಾ ರಾ ಬಾಲ 1-18

3 ಜ್ಞಾನಭಾಃ ಸ ವಿಷ್ಣುಃ ಪರಮಾಕ್ಷರಃ -ಬ್ರ. ಸೂ. ಭಾ. 2-2-4-1

4 'ಸ್ವೈಶ್ವರ್ಯಕಾಂತಿಪ್ರತತಃ ರಾಮಾವತಾರೋ ಹರಿರೀಶಚಂದ್ರಮಾಃ' -ಮ. ಭಾರ. ತಾ. ನಿ. 3-2

ಅಪ್ರಾಕೃತತ್ವಾತ್ ಸು ಶೋಭನೈಶ್ವರ್ಯಕಾಂತೀ ತಾಭ್ಯಾಂ ಪ್ರತತಃ । ಲೌಕಿಕಚಂದ್ರ-ಮಾಸ್ತು ಪ್ರಾಕೃತೈಶ್ವರ್ಯೇಣ ಪ್ರಾಕೃತಕಾಂತ್ಯಾ ಚಾಲ್ಪತತಃ । -ಭಾವ ಪ್ರಕಾಶಿಕಾ.

5 'ತದಪಿ 'ಪಾಕಶಾಸನವಿಕ್ರಮಃ' ಇತ್ಯಾದಿವತ್ ಪ್ರತ್ಯಾಯನಾರ್ಥಮೇವ' (ಗೀ. ಭಾ. 11-12) ಇತಿ ವ್ಯಾಖ್ಯಾನೇಸ್ಸೈವ ಏತದಪಿ ವ್ಯಾಖ್ಯಾತಮ್ ।

೨ 6 ಚಂದ್ರಸ್ಯ ಅಂಶವಃ ಕಿರಣಾಃ ಯಸ್ಮಾತ್ಸಃ ಚಂದ್ರಾಂಶುಃ ।

ಚಂದ್ರನಲ್ಲಿರುವ ಕಾಂತಿಯು ನಿನಗೇ ಸೇರಿದ್ದೆಂಬುದಾಗಿ ವಸುದೇವನು ಶ್ರೀಕೃಷ್ಣನನ್ನು ಸ್ತುತಿಸಿರುವನು[1]

೩. ಆಹ್ಲಾದಕಾರಕಗಳಾದ ಕಿರಣಗಳು ಉಳ್ಳವನು[2].

೪ ಸುಂದರ ಕಿರಣಗಳು ಉಳ್ಳವನು[3]

೫ ಸುವರ್ಣದ ಕಿರಣಗಳಂತೆ ಆಕರ್ಷಕ ಕಿರಣಗಳು ಉಳ್ಳವನು[4]

ಚಿನ್ನದ ಬಣ್ಣದ ಭಗವಂತನ ಕಿರಣಗಳೂ ಚಿನ್ನದ ಕಿರಣದಂತೆ ಆಕರ್ಷಕಗಳಾಗಿರುವವು.

೬ ಸುವರ್ಣಕ್ಕೆ ಪ್ರಭೆಯನ್ನು ಅನುಗ್ರಹಿಸಿರುವವನು[5]

೭ ಆಹ್ಲಾದಕಾರನು ಮತ್ತು (ವೇದವ್ಯಾಸಾವತಾರದಲ್ಲಿ) ವೇದವನ್ನು ವಿಭಜಿಸಿರುವವನು[6]

ಶ್ರೀರಾಮಚಂದ್ರನು ತನ್ನ ಭಕ್ತರ ಸಂತಾಪವನ್ನು ಪರಿಹರಿಸಿ[7] ಮುಕ್ತಿ ಸುಖ ನೀಡಿ ಅವರನ್ನು

---

1 'ಕಾಂತಿಸ್ತೇಜಃ ಪ್ರಭಾ ಸತ್ತಾ ಚಂದ್ರಾಗ್ನ್ಯರ್ಕರ್ಕ್ಷವಿದ್ಯುತಾಮ್ । . ಅರ್ಥತೋ ಭವಾನ್' -ಭಾಗ. 10-85-7

೩ 2 ಚಂದ್ರಾಃ ಆಹ್ಲಾದಕಾರಕಾಃ ಅಂಶವಃ ಕಿರಣಾಃ ಯಸ್ಯ ಸಃ ಚಂದ್ರಾಂಶುಃ ।

೪ 3 'ಚಂದ್ರಾಃ ಚಾರವಃ ಅಂಶವಃ ಕಿರಣಾಃ ಯಸ್ಯ ಸಃ ಚಂದ್ರಾಂಶುಃ ।
'ಚಂದ್ರಃ ಕರ್ಪೂರಕಾಂಪಿಲ್ಲ ಸುಧಾಂಶುಸ್ವರ್ಣಚಾರುಷು' -ಮೇದಿನೀ ।

೫ 4 ಚಂದ್ರಸ್ಯ ಸ್ವರ್ಣಸ್ಯ ಅಂಶವಃ ಇವ ಅಂಶವಃ ಯಸ್ಯ ಸಃ ಚಂದ್ರಾಂಶುಃ ।

೬ 5 ಚಂದ್ರಸ್ಯ ಸ್ವರ್ಣಸ್ಯ ಅಂಶುಃ ಪ್ರಭಾ ಯಸ್ಮಾತ್ ಸಃ ಚಂದ್ರಾಂಶುಃ ।

೭ 6 ಚಂದತಿ ಆಹ್ಲಾದಯತೀತಿ ಚಂದ್ರಃ । 'ಚದಿ ಆಹ್ಲಾದನೇ' । ಅಂಶಯತಿ ವೇದಂ ವಿಭಾಜಯತೀತಿ ಅಂಶುಃ । 'ಅಂಶ ವಿಭಾಜನೇ'

7 '...... ಸ್ವಭಕ್ತಸಂತಾಪದುರಿಷ್ಟಹಂತಾ ರಾಮಾವತಾರೋ ಹರಿರೀಶಚಂದ್ರಮಾಃ '
-ಮ. ಭಾಗ. ತಾ. ನಿ. 3-3

ಆಹ್ಲಾದಪಡಿಸುವವನು [1] ಅದಕ್ಕಾಗಿಯೇ ವೇದವ್ಯಾಸಾವತಾರದಲ್ಲಿ ವೇದವನ್ನು ವಿಭಜಿಸಿ, ಅದರ ಮೂಲಕ ಜ್ಞಾನ ಸಂಪಾದಿಸಲು ಅನುಕೂಲ ಮಾಡಿರುವವನು

೮ (ಸಜ್ಜನರನ್ನು) ಆಹ್ಲಾದಪಡಿಸುವ ಸ್ವರೂಪಾಂಶಗಳುಳ್ಳವನು.[2]

ಭಗವಂತನ ರಾಮಕೃಷ್ಣಾದ್ಯವತಾರಗಳು ಅವನ ಸ್ವರೂಪಾಂಶಗಳೆನಿಸಿವೆ ಇವು ದುಷ್ಟರನ್ನು ನಿಗ್ರಹಿಸುವುದರ ಮೂಲಕ ಸಜ್ಜನರನ್ನು ಆಹ್ಲಾದಪಡಿಸುವವು ಅಲ್ಲದೆ, ತಮ್ಮ ಲೀಲೆಗಳಿಂದಲೂ ಸಜ್ಜನರಿಗೆ ಆಹ್ಲಾದವನ್ನುಂಟು ಮಾಡುವವು

## ಜಿಜ್ಞಾಸೆ

[ಎರಡು ಚಂದ್ರ ಮಂಡಲಗಳು]

ಪ್ರ - ಚಂದ್ರನಿಗೆ ಕಿರಣಗಳು ಸ್ವಾಭಾವಿಕವಾಗಿ ಇಲ್ಲ ಸೂರ್ಯಕಿರಣಗಳು ಚಂದ್ರಮಂಡಲಕ್ಕೆ ಬೀಳುವವು ಕನ್ನಡಿಗೆ ಸೂರ್ಯಕಿರಣವು ಬಿದ್ದರೆ ಆ ಕನ್ನಡಿಯಿಂದ ಪ್ರಕಾಶವು ಹೊರಡುವಂತೆ ಸೂರ್ಯಕಿರಣದ ಸಂಬಂಧವು ಚಂದ್ರಮಂಡಲಕ್ಕೆ ಆಗಿ ಸೂರ್ಯಕಿರಣದ ಪ್ರತಿಬಿಂಬವಾದ ಕಿರಣವು ಚಂದ್ರಮಂಡಲದಿಂದ ಬರುತ್ತದೆಂದು ಕೆಲವರು ಹೇಳುತ್ತಾರೆ. ಅದು ನಿಜವೋ?

ಉ - ಶಾಸ್ತ್ರದಲ್ಲಿ ವಿಜ್ಞಾನಿಗಳು ಹೇಳುವದನ್ನು ನಿಷೇಧ ಮಾಡದೆ ಇದ್ದರೆ ಅದನ್ನೂ ಸ್ವೀಕರಿಸಬಹುದು. ಶಾಸ್ತ್ರದಲ್ಲಿ ಚಂದ್ರನಿಗೆ ಸೂರ್ಯಕಿರಣದ ಸಂಬಂಧದಿಂದ ಕಿರಣವು ಕಾಣುತ್ತದೆಂದು ವಿಜ್ಞಾನಿಗಳು ಹೇಳುವದನ್ನು ನಿಷೇಧ ಮಾಡಲಿಲ್ಲ ಮತ್ತು ಜ್ಯೋತಿಃ ಶಾಸ್ತ್ರವು ಅದನ್ನು ಅನುಮೋದಿಸುತ್ತದೆ ಆದುದರಿಂದ ಅದನ್ನು ಅಂಗೀಕರಿಸಬಹುದು. ಚಂದ್ರಮಂಡಲಗಳು ಎರಡು ಇವೆ ಒಂದು ಸೂರ್ಯನಿಗಿಂತ ಕೆಳಗೆ ಇದೆ ಇನ್ನೊಂದು ಸೂರ್ಯಮಂಡಲಕ್ಕಿಂತ ಊರ್ಧ್ವದೇಶದಲ್ಲಿ ಇದೆ ಆ ಊರ್ಧ್ವದೇಶದಲ್ಲಿ ಇರುವ ಚಂದ್ರಮಂಡಲದ ಪರಿಚಯವು ವಿಜ್ಞಾನಿಗಳಿಗೆ ಇಲ್ಲ ಆ ಚಂದ್ರಮಂಡಲದ ಪರಿಚಯ ಶಾಸ್ತ್ರದಿಂದಲೇ ದೊರಕುವುದು



---

1 'ಉದೀರ್ಣಮಜರಂ ದಿವ್ಯಮಮೃತಸ್ಯಂದ್ಯಧೀಶಿತುಃ। ಆನಂದಸ್ಯ ಪದಂ. '–ದ್ವಾ. ಸ್ತೋ.

೮ 2 ಚಂದಂತಿ ಆಹ್ಲಾದಯಂತೀತಿ ಚಂದ್ರಾಃ । ಚಂದ್ರಾಃ ಅಂಶವಃ ಸ್ವರೂಪಾಂಶಾಃ ಯಸ್ಯ ಸಃ । 'ಅಂಶುರ್ಲೇಶೇ ರವೌ ರಶ್ಮೌ —ವಿಶ್ವಃ ।

## ೨೮೨ ಭಾಸ್ಕರದ್ಯುತಿಃ

೧ (ಸಾವಿರಾರು) ಸೂರ್ಯರ ಪ್ರಕಾಶದಂತೆ ಪ್ರಕಾಶ ಉಳ್ಳವನು.[1]

ಸಂಜಯನು ಭಗವಂತನ ವಿಶ್ವರೂಪವನ್ನು ವರ್ಣಿಸುತ್ತ, ಆಕಾಶದಲ್ಲಿ ಸಾವಿರಾರು ಸೂರ್ಯರು ಒಮ್ಮೆಲೇ ಉದಯಿಸಿದಲ್ಲಿ ಎಷ್ಟು ಪ್ರಕಾಶ ಉಂಟಾಗಬಹುದೋ, ಅಷ್ಟು ಪ್ರಕಾಶ ಆ ವಿಶ್ವರೂಪಿ ಭಗವಂತನದ್ದೆಂದು ತಿಳಿಸಿರುವನು.[2] ಶ್ರೀವೇದವ್ಯಾಸಾವತಾರದ ಸಂದರ್ಭದಲ್ಲೂ ಅನಂತಾನಂತ ಸೂರ್ಯರ ಪ್ರಕಾಶದಂತೆ ತನ್ನ ಪ್ರಕಾಶವನ್ನು ಭಗವಂತನು ಪ್ರಕಟೀಕರಿಸಿರುವನು[3]

ಸೂರ್ಯರ ಪ್ರಕಾಶ ಪ್ರಾಕೃತವಾದರೆ, ಭಗವಂತನ ಪ್ರಕಾಶವು ಅಪ್ರಾಕೃತವಾದದ್ದು; ವಿಜ್ಞಾನಾತ್ಮಕವಾದದ್ದು[4] ಆದುದರಿಂದ ಭಗವಂತನ ಪ್ರಕಾಶದ ಬಗ್ಗೆ ಸಾಮಾನ್ಯವಾದ ಪರಿಚಯವನ್ನು ನೀಡುವುದಕ್ಕಾಗಿಯಷ್ಟೇ ಸೂರ್ಯನ ಕಿರಣದ ಹೋಲಿಕೆಯನ್ನು ನೀಡಲಾಗಿದೆ.[5]

೨ ಸೂರ್ಯನಿಗೆ ಪ್ರಕಾಶವನ್ನು ಅನುಗ್ರಹಿಸುವವನು[6]

---

೧ 1 ಭಾಸ್ಕರಾಣಾಂ ದ್ಯುತಿರಿವ ದ್ಯುತಿರ್ಯಸ್ಯ ಸ ಭಾಸ್ಕರದ್ಯುತಿಃ ।

2 'ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ । ಯದಿ ಭಾಃ ಸದೃಶೀ ಸಾ ಸ್ಯಾದ್ ಭಾಸಸ್ತಸ್ಯ ಮಹಾತ್ಮನಃ' -ಗೀ. 11-12
ಸಹಸ್ರಶಬ್ದೋಽನೇಕವಾಚೀ । -ಗೀ ಭಾ.

3 ದ್ವೀಪೇ ಭಗಿನ್ಯಾಸ್ತು ಯಮಸ್ಯ ವಿಶ್ವಕೃತ್ ಪ್ರಕಾಶತೇ.... ಸಹಸ್ರಲಕ್ಷಾಮಿತಭಾನುದೀಧಿತಿಃ । -ಮ ಭಾರ. ತಾ. ನಿ. 10 51

4 '...ವಿಶ್ವಕೃತ್ಪ್ರಕಾಶತೇ ಜ್ಞಾನಮರೀಚಿಮಂಡಲಃ । ..'
-ಮ. ಭಾರ. ತಾ. ನಿ. 10-51

5 ಅನಂತಸೂರ್ಯೋಪಮಪ್ರಭತ್ವಮಪಿ ಭಗವತೋ ನ ವಾಸ್ತವಮ್ । ನಿರುಪಮತ್ವಾತ್ ; ಕಿಂ ತರ್ಹೀತ್ಯತ ಆಹ-ತದಪಿ 'ಪಾಕಶಾಸನವಿಕ್ರಮ' ಇತ್ಯಾದಿವತ್ ಪ್ರತ್ಯಾಯನಾರ್ಥಮೇವ । ಪ್ರತ್ಯಾಯನಾರ್ಥಂ ಬುದ್ಧಿಪ್ರವೇಶನಾರ್ಥಮೇವೋಚ್ಯತೇ । ಯಥಾ ಭಗವತೋ ದಾಶರಥೇಃ ಪಾಕಶಾಸನೋಪಮ-ಪರಾಕ್ರಮತ್ವಮಿತ್ಯರ್ಥಃ ।
-ಪ್ರ. ದೀ. (ಗೀ. ಭಾ. ಟಿ. 11-12)

೨ 6 ಭಾಸ್ಕರಸ್ಯ ದ್ಯುತಿಃ ಪ್ರಕಾಶಃ ಯಸ್ಮಾತ್ ಸಃ ಭಾಸ್ಕರದ್ಯುತಿಃ ।

೩ ಅಗ್ನಿಗೆ ಪ್ರಕಾಶವನ್ನು ಅನುಗ್ರಹಿಸುವವನು.[1]

ಸಮಗ್ರ ಜಗತ್ತನ್ನು ಬೆಳಗುವ ಸೂರ್ಯನ ಪ್ರಕಾಶ ಹಾಗೂ ಅಗ್ನಿಯ ಪ್ರಕಾಶ ತನಗೆ ಸೇರಿದ್ದೆಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು[2]

೪ ಪ್ರಭೆಯನ್ನುಂಟು ಮಾಡುವವನು ಮತ್ತು ಬೆಳಗಿಸುವವನು[3]

ಸೂರ್ಯಾದಿ ಪ್ರಕಾಶಕ ಪದಾರ್ಥಗಳನ್ನೂ ಬೆಳಗಿಸುವ[4] ಭಗವಂತನೇ ಸೂರ್ಯಾದಿಗಳ ಮೂಲಕ ಪ್ರಭೆಯನ್ನುಂಟು ಮಾಡುವನು. ಆ ಪ್ರಭೆಗಳ ಮೂಲಕ ಬೆಳಗಿಸುವವನೂ ಭಗವಂತನೇ.

೫ (ಸಾತ್ತ್ವಿಕರಲ್ಲಿ) ಜ್ಞಾನವನ್ನು ಉಂಟುಮಾಡುವವನು ಮತ್ತು (ಅವರ ಹೃದಯಾಕಾಶದಲ್ಲಿ) ಪ್ರಕಾಶಿಸುವವನು[5]

೬ ಜ್ಞಾನಪ್ರದರಾದ ಚತುರ್ಮುಖ ಮುಂತಾದವರಿಗೆಲ್ಲ ಜ್ಞಾನ ಪ್ರಕಾಶವನ್ನು ಅನುಗ್ರಹಿಸುವವನು.[6]

---

೩ 1 ಭಾಸ್ಕರಸ್ಯ ಅಗ್ನೇಃ ದ್ಯುತಿಃ ಪ್ರಕಾಶಃ ಯಸ್ಮಾತ್ ಸಃ ಭಾಸ್ಕರದ್ಯುತಿಃ।'ಭಾಸ್ಕರೋ ವಹ್ನಿ-ಸೂರ್ಯಯೋಃ'

2 ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ –ಗೀ 15-12

೪ 3 ಭಾಸಃ ಪ್ರಭಾಃ ಕರೋತಿ ಉತ್ಪಾದಯತೀತಿ ಭಾಸ್ಕರಃ । ದ್ಯೋತತೇಽನೇನೇತಿ ದ್ಯುತಿಃ । 'ದ್ಯುತ ದೀಪ್ತೌ' 'ಇಗುಪಧಾತ್ಕಿತ್'-ಇತೀನ್ ।

4 'ಅಹಂ ತತ್ತೇಜೋ ರಶ್ಮಿತ್. ' –ಚತುರ್ವೇದಶಿಖಾ (ಬ್ರ. ಸೂ. ಭಾ. 1–3–20) 'ಇಂಧೀ ದೀಪ್ತೌ' ಇತಿ ಧಾತುವ್ಯಾಖ್ಯಾನಾತ್ ರಶ್ಮಿತ್ ಭಗವದಪೇಕ್ಷಯಾ ರಶ್ಮಿರೂಪಾಣಾಂ ಅಲ್ಪಾನಾಂ ಸೂರ್ಯಾದಿತೇಜಸಾಂ ಪ್ರಕಾಶಕಮ್.. . –ದೀಪಿಕಾ

೫ 5 ಭಾಸಂ ಜ್ಞಾನಂ ಸಾತ್ತ್ವಿಕೇಷು ಕರೋತಿ ಉತ್ಪಾದಯತೀತಿ ಭಾಸ್ಕರಃ । ದ್ಯೋತತೇ ತೇಷಾಂ ಹೃದಯಾಕಾಶೇ ಪ್ರಕಾಶತ ಇತಿ ದ್ಯುತಿಃ । ಭಾಸ್ಕರಶ್ಚಾಸೌ ದ್ಯುತಿಶ್ಚ ಭಾಸ್ಕರದ್ಯುತಿಃ ।

೬ 6 ಭಾಸ್ಕರಾಃ ಜ್ಞಾನಪ್ರದಾಃ ಚತುರ್ಮುಖಾಃ । ತೇಷಾಮಪಿ ದ್ಯುತಿಃ ಜ್ಞಾನಪ್ರಕಾಶಃ ಯಸ್ಮಾತ್ ಸಃ ಭಾಸ್ಕರದ್ಯುತಿಃ ।

ಲಕ್ಷ್ಮೀದೇವಿ, ಚತುರ್ಮುಖ ಮೊದಲಾದವರಿಗೆಲ್ಲ ಜ್ಞಾನಸ್ಫೂರ್ತಿಯನ್ನು ಅನುಗ್ರಹಿಸುವವನು ಶ್ರೀಹರಿಯೇ ಎಂಬುದಾಗಿ ಶ್ರೀಮದಾಚಾರ್ಯರು ಸ್ತುತಿಸಿರುವರು.[1]

೭ (ಸೂರ್ಯ ಚಂದ್ರಾದಿ ಪ್ರಕಾಶಕ ಪದಾರ್ಥಗಳಿಗೆ) ಪ್ರಕಾಶವನ್ನುಂಟು ಮಾಡುವ ಸ್ವರೂಪ ಪ್ರಕಾಶ ಉಳ್ಳವನು.[2]

ಜಿಜ್ಞಾಸೆ

[ಭ್ರಮ ನಿರಸನಕ್ಕಾಗಿ]

ಪ್ರ:- ಪರಮಾತ್ಮನು ಭಾಸ್ಕರನಕ್ಕಿಂತ ಅನಂತಪಾಲು ದೊಡ್ಡವನು ಅಂತಹ ಪರಮಾತ್ಮನನ್ನು ಭಾಸ್ಕರದ್ಯುತಿಃ ಎಂಬ ನಾಮದಿಂದ ಹೇಳಿದ್ದರಿಂದ ಅವನಿಗೆ ಹೀನೋಪಮೆಯನ್ನು ಹೇಳಿದಂತೆ ಆಗುವದಿಲ್ಲವೇ?

ಉ - ಪರಮಾತ್ಮನನ್ನು ಭಾಸ್ಕರನಿಗಿಂತಲೂ ಕಡಿಮೆ ಪ್ರಕಾಶಾದಿ ಗುಣವುಳ್ಳವನೆಂದು ಕೆಲವರು ರಾಮ ಕೃಷ್ಣಾದಿ ಭಗವದ್ರೂಪಗಳನ್ನು ನೋಡಿ ಭ್ರಮಿಸುತ್ತಾರೆ. ಅಂತಹವರ ಭ್ರಮದ ನಿರಸನಕ್ಕಾಗಿ ಭಾಸ್ಕರದ್ಯುತಿಃ ಎಂಬ ನಾಮವು ಪ್ರವೃತ್ತವಾಗಿದೆ. ಈ ನಾಮಕ್ಕೆ ಭಾಸ್ಕರನಷ್ಟೇ ದ್ಯುತಿಯುಳ್ಳವನೆಂದು ಅರ್ಥವಲ್ಲ. ಅಧಿಕ ಪ್ರಕಾಶವು ಅವನಿಗೆ ಇದೆ ಎಂಬುದನ್ನೂ ಆ ನಾಮವು ಹೇಳುತ್ತದೆ ಆದುದರಿಂದ ಈ ಹೀನ ಉಪಮಾನವು ಅಯುಕ್ತವಾಗುವದಿಲ್ಲ.



ಅಮೃತಾಂಶೂದ್ಭವೋ ಭಾನುಃ ಶಶಬಿಂದುಃ ಸುರೇಶ್ವರಃ ।
ಔಷಧಂ ಜಗತಃಸೇತುಃ ಸತ್ಯಧರ್ಮಪರಾಕ್ರಮಃ ॥ ೩೧ ॥

೨೮೩ ಅಮೃತಾಂಶೂದ್ಭವಃ

೧ ನಾಶಹೊಂದದ ಕಿರಣಗಳುಳ್ಳವನು ಮತ್ತು ಉತ್ಕೃಷ್ಟನಾಗಿರುವವನು.[3]

---

1 ಯಸ್ಮಾದ್ ಬ್ರಹ್ಮೇಂದ್ರರುದ್ರಾದಿ ದೇವತಾನಾಂ ಶ್ರಿಯೋಽಪಿ ಚ । ಜ್ಞಾನಸ್ಫೂರ್ತಿಸ್ಸದಾ ತಸ್ಮೈ ಹರಯೇ ಗುರವೇ ನಮಃ । - ಮಂಗಲಪದ್ಯ (ಈ. ಉ. ಭಾ.)

೭ 2 ಸೂರ್ಯಚಂದ್ರಾದಿಜ್ಯೋತಿಷಾಂ ಭಾಸಂ ಕರೋತೀತಿ ಭಾಸ್ಕರೀ । ತಾದೃಶೀ ದ್ಯುತಿಃ ಸ್ವರೂಪಪ್ರಕಾಶಃ ಯಸ್ಯ ಸಃ ಭಾಸ್ಕರದ್ಯುತಿಃ ।

೧ 3 ಅಮೃತಾಃ ನಾಶರಹಿತಾಃ ಅಂಶವಃ ಕಿರಣಾಃ ಯಸ್ಯ ಸಃ ಅಮೃತಾಂಶುಃ । ಉದ್ಭವತಿ ಉತ್ಕೃಷ್ಟೋ ವರ್ತತ ಇತಿ ಉದ್ಭವಃ। ಅಮೃತಾಂಶುಶ್ಚಾಸೌ ಉದ್ಭವಶ್ಚ ಅಮೃತಾಂಶೂದ್ಭವಃ ।

ಭಗವಂತನು ತನ್ನ ಧನ್ವಂತರಿರೂಪದ ಅಮೃತ ಹಾಗೂ ಉತ್ಕೃಷ್ಟಗಳಾದ ಕಿರಣಗಳಿಂದ ಜಗತ್ತುಗಳಿಗೆ ಚೇತರಿಕೆ ನೀಡುತ್ತಿರವನೆಂದು ಧ್ಯಾನಿಸಲಾಗುವುದು.[1]

೨ ಅಮೃತಯುಕ್ತಗಳಾದ ಕಿರಣಗಳುಳ್ಳ ಚಂದ್ರನ ಉತ್ಪತ್ತಿಗೆ ಕಾರಣನಾಗಿರುವವನು.[2]

ವಿರಾಡ್ರೂಪಿ ಭಗವಂತನ ಮನಸ್ಸಿನಿಂದ ಚಂದ್ರನು ಉತ್ಪನ್ನನಾದನೆಂದು ಪುರುಷಸೂಕ್ತ ತಿಳಿಸಿದೆ.[3] ಮುಂದೆ ಸಮುದ್ರಮಥನದ ಸಂದರ್ಭದಲ್ಲಿ ಚಂದ್ರನು ಮತ್ತೊಮ್ಮೆ ಪ್ರಾದುರ್ಭವಿಸಿದ್ದು,[4] ಸಮುದ್ರ ಮಥನಕ್ಕೆ ಮುಖ್ಯಕಾರಣನಾದ ಭಗವಂತನೇ ಚಂದ್ರನ ಈ ಪ್ರಾದುರ್ಭಾವಕ್ಕೂ ಕಾರಣನಾಗಿರುವನು

೩ (ಧನ್ವಂತರಿ ರೂಪದಿಂದ) ಚಂದ್ರನಲ್ಲಿ ಅಭಿವ್ಯಕ್ತನಾಗುವವನು[5]

೪ (ಧನ್ವಂತರಿ ರೂಪದಿಂದ ಚಂದ್ರನ ಮೂಲಕ) ಅಮೃತಯುಕ್ತಗಳಾದ ಕಿರಣಗಳು ಹೊರಡುವಂತೆ ಮಾಡುವವನು.[6]

ಧನ್ವಂತರಿರೂಪಿ ಭಗವಂತನು ವಿಶೇಷವಾಗಿ ಚಂದ್ರನಲ್ಲಿ ಅಭಿವ್ಯಕ್ತನಾಗಿರುವನು.[7] ಅಲ್ಲಿ ವಿಶೇಷ

---

1 '.. ಅಮೃತೋರುಕರೈರ್ಜಗಂತಿ ಸಂಜೀವಯಂತಂ.. '
-ಶಂ ಸಾ ಸಂ 4-91

2 ಅಮೃತಯುಕ್ತಾಃ ಅಂಶವಃ ಕಿರಣಾಃ ಯಸ್ಯ ಸಃ ಅಮೃತಾಂಶುಃ 'ಸುಧಾಂಶುಃ' ಇತ್ಯೇವ ಪ್ರಸಿದ್ಧಃ ಚಂದ್ರಃ । ಸಃ ಉದ್ಭವತಿ ಪ್ರಾದುರ್ಭವತ್ಯಸ್ಮಾದಿತಿ ಅಮೃತಾಂಶೂದ್ಭವಃ ।

3 ಚಂದ್ರಮಾ ಮನಸೋ ಜಾತಃ । -ಪು ಸೂ

4 ಕ್ಷೀರೋದಾರ್ಣವಸಂಭೂತ ರೋಹಿಣ್ಯಾ ಸಹಿತೋ ಮಮ ।
-ಜಯಂತೀಕಲ್ಪ-8

೩ 5 ಅಮೃತಾಂಶುಃ ಚಂದ್ರಃ,ತಸ್ಮಿನ್ ಉದ್ಭವತಿ ಧನ್ವಂತರಿರೂಪೇಣ ಅಭಿವ್ಯಕ್ತೋ ಭವತೀತಿ ಅಮೃತಾಂಶೂದ್ಭವಃ ।

೪ 6 ಅಮೃತಯುಕ್ತಾಃ ಅಂಶವ ಅಮೃತಾಂಶವಃ । ತೇ ಚಂದ್ರದ್ವಾರಾ ಉದ್ಭವಂತ್ಯಸ್ಮಾದಿತಿ ಅಮೃತಾಂಶೂದ್ಭವಃ ।

7 ' ..ಶೀತಾಂಶುಮಂಡಲಗತಂ ಸ್ಮರತ...' -ಶಂ ಸಾ. ಸಂ 4 91

ವಾಗಿ ಸನ್ನಿಹಿತನಾಗಿ ಅವನ ಮೂಲಕ ಅಮೃತ ಕಿರಣಗಳನ್ನು ಹೊರಡಿಸುವನು ಆದ್ದರಿಂದಲೇ ಗೀತಾಚಾರ್ಯನು ತಾನು ಸೋಮನಲ್ಲಿದ್ದುಕೊಂಡು ಅಮೃತರಸಾತ್ಮಕನಾಗಿ ಸಸ್ಯಾದಿಗಳನ್ನು ಪೋಷಿಸುವುದಾಗಿ ಸಂದೇಶಿಸಿರುವನು.[1]

೫ ಮೋಕ್ಷವನ್ನು ವಿಭಜಿಸುವವನು ಹಾಗು ಉತ್ಪತ್ತಿಯನ್ನು ಅಥವಾ ಸಂಸಾರವನ್ನು ದಾಟಿ ಇರುವವನು[2]

ನಿತ್ಯಮುಕ್ತನಾದ ಭಗವಂತನು ಸಾಧಕರ ಸಾಧನಾನುಷ್ಠಾನಕ್ಕೆ ಅನುಗುಣವಾಗಿ ಸಾಯುಜ್ಯ, ಸಾಮೀಪ್ಯ, ಸಾರೂಪ್ಯ ಹಾಗೂ ಸಾಲೋಕ್ಯ—ಎಂಬುದಾಗಿ ಮೋಕ್ಷವನ್ನು ವಿಭಜಿಸಿ ಹಂಚುವನು.

೬ ಮೋಹಿನೀರೂಪದಿಂದ ಅಮೃತವನ್ನು (ದೈತ್ಯರಿಗೆ ದೊರಕದಂತೆ) ದೇವತೆಗಳಿಗೆ ವಿಭಜಿಸಿರುವವನು ಹಾಗೂ ರುದ್ರನು (ಮಾಯೆಯ ಆಕ್ರಮಣಕ್ಕೆ ಒಳಗಾಗದೆ) ಉತ್ಕೃಷ್ಟನಾಗಿರುವಂತೆ ಅನುಗ್ರಹಿಸಿರುವವನು[3]

ಭಗವಂತನು ಮೋಹಿನೀರೂಪದಿಂದ ಪ್ರಕಟನಾಗಿ ಅಮೃತಕಲಶವನ್ನು ತಾನೇ ಪಡೆಕೊಂಡು ದೇವತೆಗಳಿಗಷ್ಟೇ ಸಿಗುವಂತೆ ಅಮೃತವನ್ನು ಹಂಚುವನು[4] ಹೀಗೆ ಅಸುರರನ್ನು ತನ್ನ ಸೌಂದರ್ಯದಿಂದ ಮೋಹಿಸಿದ ಮೋಹಿನೀರೂಪವನ್ನು ನೋಡಬಯಸಿದ ರುದ್ರದೇವನಿಗೆ ತನ್ನ ಆ ರೂಪವನ್ನು ತೋರಿಸಿ, ಅದನ್ನು ಕಂಡು ಇಂದ್ರಿಯನಿಗ್ರಹ ಕಳಕೊಂಡ ರುದ್ರದೇವನು ಮುಂದೆ ತನ್ನ

---

1 ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ।
—ಗೀ. 15-13

ಅಮೃತರಸಾತ್ಮಕಃ ಸೌಮ್ಯತ್ವಾತ್ ಸೋಮನಾಮಾ ಸೋಮಗಃ ಸನ್ ಸರ್ವಾ ಓಷಧೀಃ ಸಸ್ಯಾದೀನಿ ಪುಷ್ಣಾಮಿ ವರ್ಧಯಾಮಿ ಚ । —ಗೀ. ವಿ.

೫ 2 ಅಮೃತಂ ಮೋಕ್ಷಂ ಅಂಶಯತಿ ಸಾಧಕಾನಾಂ ಸಾಧನಾನುಸಾರೇಣ ವಿಭಜತೀತಿ ಅಮೃತಾಂಶುಃ । 'ಅಮೃತಂ. . ಮೋಕ್ಷೇ ಚ. . .' -ಮೇದಿನೀ । 'ಅಂಶ ವಿಭಾಜನೇ' ಉದ್ಗತಃ ಭವಾದುತ್ಪತ್ತೇಃ ಸಂಸಾರಾದಿತಿ ವಾ ಉದ್ಭವಃ ।

೬ 3 ಮೋಹಿನೀರೂಪೇಣ ಅಮೃತಂ ಪೀಯೂಷಂ ಅಂಶಯತಿ ದೈತ್ಯೈಃ ಲಬ್ಧಂ ಯಥಾ ನ ಸ್ಯಾತ್ ತಥಾ ವಿಭಜತೀತಿ ಅಮೃತಾಂಶುಃ । ಭವಃ ರುದ್ರಃ ಉತ್ಕೃಷ್ಟಃ ಮಾಯಾಭಿಭವರಾಹಿತ್ಯೇನ ಉತ್ತಮಃ ಯಸ್ಮಾತ್, ಯಸ್ಯಾನುಗ್ರಹಾದಿತಿ ಯಾವತ್, ಸಃ ಉದ್ಭವಃ ।

4 ಭಾಗವತಸ್ಯ ಅಷ್ಟಮಸ್ಕಂಧೇ ನವಮಾಧ್ಯಾಯೇ ಇಯಮಾಖ್ಯಾಯಿಕಾ ನಿರೂಪಿತಾ ।

ಒಡೆತನದಲ್ಲಿರುವ ಮಾಯೆಯ ಆಕ್ರಮಣಕ್ಕೆ ಒಳಗಾಗದಂತೆ ಅನುಗ್ರಹಿಸುವುದರ[1] ಮೂಲಕ ಅವ ನನ್ನು ಉತ್ಕೃಷ್ಟನನ್ನಾಗಿಸುವನು

೭ ಮರಣಕ್ಕೊಳಗಾಗದವನು ಅಥವಾ ಮುಕ್ತರು ಮರಣಕ್ಕೊಳಗಾಗದಂತೆ ಅನುಗ್ರಹಿಸುವವನು ಅಥವಾ ಧನ್ವಂತರಿರೂಪಿ ಮತ್ತು ಸೂರ್ಯನ ಉತ್ಪತ್ತಿಗೆ ಕಾರಣ ನಾಗಿರುವವನು[2]

೮ ದೇವತೆಗಳು ಯಾರ ವಿಭಿನ್ನಾಂಶರಾಗಿ ಇರುವರೋ ಅಂತಹವನು ಹಾಗೂ ಎಲ್ಲರಿ ಗಿಂತಲೂ ಉಚ್ಚನಾಗಿರುವವನು ಮತ್ತು ಜಗದುತ್ಪತ್ತಿಗೆ ಕಾರಣನಾಗಿರುವವನು.[3]

೯ ಯಾವುದೇ ರೀತಿಯ ಮರಣಕ್ಕೊಳಗಾಗದೆ ಮತ್ಸ್ಯಾದಿ ಸ್ವರೂಪಾಂಶಗಳ ಪ್ರಾದುರ್ಭಾವಕ್ಕೆ ಕಾರಣನಾಗಿರುವವನು[4]

ಭಗವಂತನ ಪದ್ಮನಾಭ ಹೆಸರಿನ ಮೂಲರೂಪದಿಂದ ಮತ್ಸ್ಯಾದಿ ಸ್ವರೂಪಾಂಶಗಳು ಪ್ರಾದುರ್ಭವಿಸುವವು

ಜಿಜ್ಞಾಸೆ

[ಸಂಕುಚಿತ ಪರಮಸಾಮ್ಯ]

ಪ್ರ ಮೋಕ್ಷದಲ್ಲಿ ಕೆಲವರಿಗೆ ಸಾಯುಜ್ಯವನ್ನು ಕೆಲವರಿಗೆ ಸಾಮೀಪ್ಯ ಸಾಲೋಕ್ಯಾದಿಗಳನ್ನು ಪರಮಾ ತ್ಮನು ಕೊಡುವುದಾದರೆ ಮೋಕ್ಷದಲ್ಲಿ ತಾರತಮ್ಯವು ಇದೆ ಎಂದು ಹೇಳಬೇಕಾಯಿತು. ಆದರೆ

---

1 ಸೇಯಂ ಗುಣಮಯೀ ಮಾಯಾ ನ ತ್ವಾಮಭಿಭವಿಷ್ಯತಿ ।
—ಭಾಗ 8-12-40

೭ 2 ನ ವಿದ್ಯತೇ ಮೃತಂ ಮರಣಮತ್ರೇತಿ ಮುಕ್ತಾಃ ನ ಮ್ರಿಯಂತೇ ಅನೇನೇತಿ ವಾ ಅಮೃತಃ । 'ಅಮೃತಂ . ನಾ ಧನ್ವಂತರಿದೇವಯೋಃ' - ಇತಿ ಧನ್ವಂತರಿರ್ವಾ। ಅಂಶೋಃ ಸೂರ್ಯಸ್ಯ ಉದ್ಭವಃ ಜನ್ಮ ಯಸ್ಮಾದಿತಿ ಅಂಶೂದ್ಭವಃ । 'ಅಂಶುಃ ಕಿರಣೇ ಚಂಡದೀಧಿತೌ' । ಅಮೃತಾಶ್ಚಾಸೌ ಅಂಶೂದ್ಭವಶ್ಚ ಅಮೃತಾಂಶೂದ್ಭವಃ ।

೮ 3 ಅಮೃತಾಃ ಅಮರಾಃ ಅಂಶವಃ ವಿಭಿನ್ನಾಂಶಾಃ ಯಸ್ಯ ಸಃ ಅಮೃತಾಂಶುಃ । ಉಚ್ಚ- ತ್ವಾತ್ ಉತ್ । ಭವತಿ ಉತ್ಪದ್ಯತೇ ಜಗದಸ್ಮಾದಿತಿ ಭವಃ ।

೯ 4 ನ ಮೃತಾಃ ಅಮೃತಾಃ,ಅಮೃತಾಶ್ಚ ತೇ ಅಂಶವಶ್ಚ ಅಮೃತಾಂಶವಃ ಭಗವತಃ ಮತ್ಸ್ಯಾ ದಿಸ್ವರೂಪಾಂಶಾಃ । ತೇ ಉದ್ಭವಂತಿ ಪ್ರಾದುರ್ಭವಂತ್ಯಸ್ಮಾದಿತಿ ಅಮೃತಾಂಶೂದ್ಭವಃ ।

'ಪರಮಂ ಸಾಮ್ಯಮುಪೈತಿ', ಎಂಬ ಶ್ರುತಿಯು ಮುಕ್ತರಿಗೆ ಪರಮ ಸಾಮ್ಯವನ್ನು ಹೇಳುತ್ತದೆ. ಈ ಶ್ರುತಿಯ ವಿರೋಧವನ್ನು ಹೇಗೆ ಪರಿಹರಿಸುವದು?

ಉ - 'ಪರಮಂ ಸಾಮ್ಯಮುಪೈತಿ' ಎಂಬ ಶ್ರುತಿಯು ಮುಕ್ತನು ಯಾರಿಂದ ಪರಮಸಾಮ್ಯವನ್ನು ಹೊಂದುತ್ತಾನೆಂಬುದನ್ನು ಹೇಳುವದಿಲ್ಲ 'ಸಂಕೋಚೇ ಮಾನಾಭಾವಾತ್' ಸರ್ವರಿಂದಲೂ ಪರಮಸಾಮ್ಯವನ್ನು ಹೊಂದುತ್ತಾನೆಂದು ಅರ್ಥವನ್ನು ಆ ಶ್ರುತಿಗೆ ಏಕೆ ಮಾಡಬಾರದು ಎಂದು ಪ್ರಶ್ನೆ ಮಾಡಿದರೆ ಸಂಸಾರಿಗಳಿಂದ ಪರಮಸಾಮ್ಯವು ಮುಕ್ತರಿಗೆ ಬಾಧಿತವಾದ್ದರಿಂದ ಸರ್ವರಿಂದ ಪರಮಸಾಮ್ಯ ಎಂದು ಅರ್ಥವನ್ನು ಹೇಳಬಾರದು ಎಂದು ಉತ್ತರ ಕೊಡುವದಾದರೆ ಸರ್ವಮುಕ್ತರಿಂದ ಪರಮಸಾಮ್ಯವನ್ನು ಹೊಂದುತ್ತಾನೆಂದೂ ಅರ್ಥವನ್ನು ಮಾಡಬಾರದು. ಏಕೆಂದರೆ ಮುಕ್ತರಲ್ಲಿ ಕೆಲವರು ಸಾಯುಜ್ಯವುಳ್ಳವರು ಕೆಲವರು ಸಾಮೀಪ್ಯ ಸಾಲೋಕ್ಯಾದಿಗಳುಳ್ಳವರು ಇದ್ದಾರೆಂದು ನಿರವಕಾಶ ಪ್ರಮಾಣದಿಂದ ಸಿದ್ಧವಾದ ಕಾರಣ ಸರ್ವಮುಕ್ತರಿಂದ ಪರಮಸಾಮ್ಯವು ಬಾಧಿತವಾಗುತ್ತದೆ. ಆದುದರಿಂದ ಆ ಶ್ರುತಿಗೆ ಸಂಕುಚಿತವಾದ ಪರಮಸಾಮ್ಯವನ್ನು ಅರ್ಥವನ್ನಾಗಿ ಹೇಳಲೇಬೇಕಾದುದರಿಂದ ಬ್ರಹ್ಮದೇವರು ಮುಕ್ತಿಯಲ್ಲಿ ಹೋದ ಕಲ್ಪದ ಬ್ರಹ್ಮದೇವರಿಂದ, ಶೇಷದೇವರು ಹೋದ ಕಲ್ಪದಲ್ಲಿ ಮುಕ್ತರಾದ ಶೇಷದೇವರಿಂದ, ಇಂದ್ರದೇವರು ಹೋದಕಲ್ಪದಲ್ಲಿ ಮುಕ್ತರಾದ ಇಂದ್ರದೇವರಿಂದ, ಇದೇ ರೀತಿ ಯಾವನು ಯಾರಿಂದ ಪರಮಸಾಮ್ಯವನ್ನು ಹೊಂದಲು ಯೋಗ್ಯನೋ ಅವನು ಅವರಿಂದ ಮೋಕ್ಷದಲ್ಲಿ ಪರಮಸಾಮ್ಯವನ್ನು ಹೊಂದುತ್ತಾನೆಂದು ಅರ್ಥವನ್ನು ಮಾಡಬೇಕಾದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವು ಇಲ್ಲ.



## ೨೮೪ ಭಾನುಃ

೧ ಪ್ರಕಾಶಸ್ವರೂಪಿ ಎಂದು ಸ್ತುತಿಸಲ್ಪಡುವವನು.[1]

೨ ಪ್ರಕಾಶಸ್ವರೂಪಿ ಮತ್ತು (ಎಲ್ಲ ಜ್ಞಾನಿಗಳಿಂದಲೂ) ಸ್ತುತಿಸಲ್ಪಡುವವನು.[2]

ಭಗವಂತನು ಪ್ರಕಾಶಸ್ವರೂಪಿಯಾಗಿರುವದರಿಂದ, ಹೃದಯದಲ್ಲಿರುವ ಅವನನ್ನು 'ಭಾ' ಎಂದೇ ಉಪಾಸಿಸಬೇಕೆಂದು ಬೃಹದಾರಣ್ಯಕೋಪನಿಷತ್ತು ಸಂದೇಶಿಸಿದೆ.[3]

---

೧ 1 ಪ್ರಕಾಶರೂಪತ್ವಾತ್ ಭಾ ಇತಿ ನೂಯತ ಇತಿ ಭಾನುಃ । 'ಣು ಸ್ತುತೌ'

೨ 2 ಪ್ರಕಾಶರೂಪತ್ವಾತ್ ಭಾಃ । ನೂಯತೇ ಸ್ತೂಯತೇ ಸದ್ಭಿರಿತಿ ನುಃ 'ಣು ಸ್ತುತೌ' । ಭಾಶ್ಚಾಸೌ ನುಶ್ಚ ಭಾನುಃ ।

3 'ಮನೋಮಯೋಽಯಂ ಪುರುಷೋ ಭಾಃ ಸತ್ಯಸ್ತಸ್ಮಿನ್ನಂತರ್ಹೃದಯೇ....'

ಬೃ. ಉ. 7-8-1

ಅಗ್ನಿನಾಮಕ ಭಗವಂತನು ಪ್ರಾಚೀನರಾದ ಈಗ ಇರುವ ಹಾಗೂ ಮುಂದೆ ಬರಲಿರುವ ಜ್ಞಾನಿಗಳಿಂದ—ಹೀಗೆ ಎಲ್ಲ ಕಾಲದಲ್ಲಿರುವ ದೇವತೆಗಳೇ ಮುಂತಾದ ಜ್ಞಾನಿಗಳಿಂದ ಸ್ತುತನಾಗಿರುವನೆಂದು ಅಗ್ನಿಸೂಕ್ತ ಸಾರಿದೆ[1]

೩ ಜ್ಞಾನಸ್ವರೂಪಿಗಳಾದ ಮುಕ್ತಾತ್ಮರಿಂದ ಚೆನ್ನಾಗಿ ಸ್ತುತಿಸಲ್ಪಡುವವನು[2]

ಮುಕ್ತಾತ್ಮರೂ ಸ್ವೇಚ್ಛೆಯಿಂದ ಭಗವಂತನನ್ನು ಉಪಾಸಿಸುವರೆಂದು ಬ್ರಹ್ಮತರ್ಕ ತಿಳಿಸಿದೆ[3]

೪ ಜ್ಞಾನಸ್ವರೂಪಿಗಳಾದ ಮುಕ್ತಾತ್ಮರನ್ನು ಚೆನ್ನಾಗಿ ಪ್ರೇರಿಸುವವನು[4]

ಮುಕ್ತಾತ್ಮರೂ ಭಗವಂತನಿಂದ ಪ್ರೇರಿಸಲ್ಪಡುವರು ಭಗವಂತನ ಅನುಗ್ರಹದಿಂದಲೇ ವಿಷ್ಣು ಲೋಕವನ್ನು ಹೊಂದುವ ಅವರು, ಅಲ್ಲಿ ಭೋಗಗಳನ್ನು ಅನುಭವಿಸುವುದೂ ಭಗವದನುಗ್ರಹ ದಿಂದಲೇ.[5]

---

* '. ಭಾರೂಪಃ ' -ಮಾಹಾತ್ಮ್ಯೇ (ಬೃ. ಉ. ಭಾ.)

* ಭಾರೂಪಃ ಪ್ರಕಾಶರೂಪಃ । -ಭಾ ಬೋ.

1 ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ ।
-ಋ. ವೇ. 1-2

'ಸ ಪೂರ್ವೈರ್ನೂತನೈರೇಷ್ಯೈರ್ವಿಜ್ಞಾನಾದೃಷಿಸಂಜ್ಞಕೈಃ । ಈಡ್ಯೋ ದೇವಾದಿಭಿಃ ಸರ್ವೈಃ . ' । -ಋ. ಭಾ.

ನೂತನೈಃ ನೂತಶಬ್ದೋಽದ್ಯಪರ್ಯಾಯಃ। ತತಃ ಸಾಯಂ ಚಿರಮಿತಿ ತನಃ ವರ್ತಮಾನೈಃ। ಉತಶಬ್ದಾದೇಷ್ಯೈರಾಗಾಮಿಭಿರಪಿ । -ಋ ಭಾ. ಟೀ.

೩ 2 ಜ್ಞಾನರೂಪತ್ವಾತ್ ಭಾಃ ಮುಕ್ತಾತ್ಮಾನಃ । 'ಭಾ ಜ್ಞಾನೇ' । ತೈಃ ಆ ನೂಯತೇ ಸಮ್ಯಕ್ ಸ್ತೂಯತ ಇತಿ ಭಾನುಃ ।

3 ಮುಕ್ತಾ ಅಪಿ ಹಿ ಕುರ್ವಂತಿ ಸ್ವೇಚ್ಛಯೋಪಾಸನಂ ಹರೇಃ ।
-ಬ್ರಹ್ಮತರ್ಕೇ (ಬ್ರ. ಸೂ. ಭಾ. 3-3-27)

೪ 4 ಭಾನ್ ಮುಕ್ತಾನ್ ಆ ನುದತಿ ಸಮ್ಯಕ್ ಪ್ರೇರಯತೀತಿ ಭಾನುಃ । 'ನುದ ಪ್ರೇರಣೇ' ।

5 ...ಪ್ರಜ್ಞಾನೇತ್ರೋಽಲೋಕಃ... -ಐ. ಉ. 2-5-4-3
ಮುಕ್ತಾ ಯೇಽಪಿ ಲೋಕಾನಾಪ್ನುವಾನಾ ನೀಯಂತೇ ತೇಽಪಿ ವಿಷ್ಣುನಾ ।
-ಐತರೇಯಸಂಹಿತಾ (ಐ. ಉ. ಭಾ.)

೫ (ಎಲ್ಲರಿಗೂ) ಒಡೆಯನಾಗಿರುವವನು, ಸ್ವತಂತ್ರವಾಗಿ ಚಟುವಟಿಕೆಗಳನ್ನು ನಡೆಸುವವನು ಮತ್ತು ಸರ್ವೋಚ್ಚನಾಗಿರುವವನು[1]

ಭಗವಂತನು ಸರ್ವೋಚ್ಚನಾಗಿರುವುದರಿಂದಲೇ ಸರ್ವಸ್ವಾಮಿ ಆಗಿರುವನು. ಸ್ವತಂತ್ರವಾಗಿಯೇ ಚಟುವಟಿಕೆಗಳನ್ನು ನಡೆಸುವನು

೬ ಭೂಮಿಯನ್ನು (ದೇವತೆಗಳಿಗೆ) ತಲುಪಿಸಿರುವವನು.[2]

ಭಗವಂತನು ವಾಮನಾವತಾರದಲ್ಲಿ ಬಲಿಯಿಂದ ಭೂಮಿಯನ್ನು ಬೇಡಿ ಪಡೆದು ದೇವತೆಗಳ ವಶಕ್ಕೆ ಒಪ್ಪಿಸಿರುವನು

[ಅರ್ಥವಿಶೇಷಗಳನ್ನು ೧೨೮ನೆಯ 'ಭಾನು' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

ಜಿಜ್ಞಾಸೆ

[ಕೃತಜ್ಞತಾ ರೂಪದಲ್ಲಿ]

ಪ್ರ - ಮುಕ್ತರು ಪರಮಾತ್ಮನನ್ನು ಏಕೆ ಸ್ತೋತ್ರ ಮಾಡುತ್ತಾರೆ? ಅವರಿಗೆ ಯಾವದೂ ಬೇಕಾಗಿಲ್ಲ. ಅವರು ಕೃತಕೃತ್ಯರಲ್ಲವೇ?

---

ಪ್ರೇರಿತೋ ವಿಷ್ಣುಲೋಕಂ ಚ ಪ್ರಾಪ್ಯ ಭೋಗಾನವಾಪ್ಯ ಚ ।
ಭುಂಕ್ತೇ ವಿಷ್ಣುಪ್ರಸಾದೇನ ನ ವಿಷ್ಣೋರವಶಃ ಕ್ವಚಿತ್ ।
-ಬ್ರಹ್ಮಾಂಡ (ಐ. ಉ ಭಾ )

೫ 1 ಭಾತಿ ಸರ್ವಸ್ಯಾಪಿ ಸ್ವಾಮೀ ಭವತೀತಿ ಭಃ । 'ಭ ಸ್ವಾಮಿಭಾವೇ'। ಅನತಿ ಸ್ವಾತಂತ್ರ್ಯೇಣ ಚೇಷ್ಟತ ಇತಿ ಅನಃ ಅನ ಏವ ಅನ್ । ಯಥಾ 'ತಜ್ಜಲಾನಿತಿ ಶಾಂತ ಉಪಾಸೀತ' (ಛಾಂ. ಉ 3-2-9) ಇತ್ಯತ್ರ ಜಲೇ ಅನತೀತ್ಯರ್ಥೇ ಜಲಾನ್ ಇತ್ಯೇವ ಅವಶಿಷ್ಯತೇ ಇತಿ 'ಸದ್ಗುಣೇ' ವ್ಯಾಖ್ಯಾತಮ್-'ತಚ್ಚ ಬ್ರಹ್ಮ ಜಲಾನ್ ಸಾಕ್ಷಾದ್ ಯೋಽಸೌ ವಿಷ್ಣುರ್ಜಲೇಽನತಿ । ಆನೀದವಾತಮಿತಿ ಯಂ ವೇದವಾಗವದತ್ ಸ್ಫುಟಮ್' -ಶಬ್ದವದತ್ರಾಪಿ । ಸರ್ವೋಚ್ಚತ್ವಾದುಃ ।

೬ 2 ಭಾಂ ಭೂಮಿಂ ದೇವಾನ್ ಪ್ರತಿ ನಯತಿ ಪ್ರಾಪಯತೀತಿ ಭಾನುಃ । 'ಭಾ ಭುವ್ಯ-ಲಂಕೃತೌ ದೀಪ್ತೌ ...' ನಾನಾರ್ಥರತ್ನಮಾಲಾ ।

ಉ - ಪರಮಾತ್ಮನಿಂದ ಮುಕ್ತರು ಪರಮೋಪಕಾರವನ್ನು ಪಡೆದಿದ್ದಾರೆ ಪರಮೋಪಕಾರ ಮಾಡಿದವರ ಗುಣಗಾನವನ್ನು ಮಾಡುವದು ಕೃತಜ್ಞತಾ ಎಂಬ ಗುಣರೂಪವಾಗುತ್ತದೆ. ಆದುದರಿಂದ ಮುಕ್ತರು ಪರಮಾತ್ಮನ ಸ್ತೋತ್ರವನ್ನು ಏಕೆ ಮಾಡುತ್ತಾರೆಂದು ಪ್ರಶ್ನೆ ಮಾಡಿದರೆ ಅವರಿಗೆ ಕೃತಜ್ಞತಾ ಎಂಬ ಗುಣವು ಅನಾವಶ್ಯಕವೆಂದು ಒಪ್ಪಿದಂತೆ ಆಗುತ್ತದೆ. ಮುಕ್ತರಿಗೆ ಯೋಗ್ಯಗಳಾದ ಎಲ್ಲ ಗುಣಗಳು ಇದ್ದರೇನೇ ಅವರು ಮುಕ್ತರು ಎಂದು ಹೇಳಬಹುದು ಆದುದರಿಂದ ಅವರು ಪರಮಾತ್ಮನ ಸ್ತೋತ್ರವನ್ನು ಮಾಡುವದು ಉಚಿತವೇ ಆಗಿರುತ್ತದೆ ಮತ್ತು ಮುಕ್ತರಿಗೆ ಇರುವ ಪರಮಾತ್ಮ ಭಕ್ತಿಯು ಆನಂದ ಸ್ವರೂಪವೆಂದು 'ಸ್ವೈವಾನಂದಸ್ವರೂಪೇಣ ನಿತ್ಯಾ ಮುಕ್ತೇಷು ತಿಷ್ಠತಿ' ಎಂಬ ಪ್ರಮಾಣದಿಂದ ಸಿದ್ಧವಾಗಿದೆ. ಆನಂದ ಸ್ವರೂಪವಾದ ಭಕ್ತಿಗೆ ಪ್ರಯೋಜನದ ಪ್ರಶ್ನೆಯು ಇಲ್ಲ ಪರಮಾತ್ಮನ ಸ್ತೋತ್ರವೂ ಅವನ ಭಕ್ತಿಯಲ್ಲಿ ಅಂತರ್ಭೂತವಾದ್ದರಿಂದ ಸ್ತೋತ್ರವು ಏಕೆ ಎಂದು ಪ್ರಶ್ನೆ ಮಾಡಬಾರದು



## ೨೮೫ ಶಶಬಿಂದುಃ

### ೧ ಅತಿ ಸುಖವೇ ಲಕ್ಷಣವಾಗಿ ಉಳ್ಳವನು[1]

ಭಗವಂತನು ಅತಿಶಯಿತ ಸುಖ ಉಳ್ಳವನಾದ ದರಿಂದ 'ಪೈಂಗಿ ಶ್ರುತಿ'ಯು ಅವನನ್ನು 'ಸುಖಸುಖ' ಎಂದೇ ಕರೆದಿದೆ[2] ಅತಿಶಯಿತ ಸುಖವನ್ನು ಅನುಭವಿಸುವ ಪ್ರಯುಕ್ತ ಇಂದ್ರನಾಮಕ ಭಗವಂತನನ್ನು ಋಗ್ವೇದದಲ್ಲಿ 'ಶಾಶದಾನ'—ಎಂದೇ ವಿಶೇಷಿಸಲಾಗಿದೆ[3] ಲಕ್ಷ್ಮೀದೇವಿಯಿಂದ

---

೧ 1 ಶಶಂ ಪೂರ್ಣಸುಖಂ ಬಿಂದುರ್ಲಕ್ಷಣಂ ಯಸ್ಯ ಸಃ ಶಶಬಿಂದುಃ ।

-ವಿ. ರಾ

2 ...ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃ ಪರಮೋಽಕ್ಷರಃ

-ಪೈಂಗಿಶ್ರುತಿ (ಬ್ರ. ಸೂ. ಭಾ.2-2-41)

**ಸುಖಸುಖಃ—ಅತಿಶಯಿತಸುಖಃ ಅರ್ಶಆದ್ಯಜಂತಃ ಸುಖಶಬ್ದಃ ನಿರ್ಧಾರಣಷಷ್ಠ್ಯಾ ಉಕ್ತಾರ್ಥಲಾಭಃ -ದೀಪಿಕಾ**

3 ...ಇಂದ್ರಃ ...ಶಾಶದಾನಃ... -ಋ. ವೇ. 33-13

**...ಸ ಶಾಶದಾನಃ ಸುಖೀ ಸರ್ವದೈವ -ಋ. ವೇ. ಭಾ.**

**ಅತಿಶಯಿತಂ ಶಂ ಸುಖಮ್, ತಸ್ಯಾದನೋ ಭೋಕ್ತಾ, ಕರ್ತರಿ ಲ್ಯುಟ್, ಶಶಾದನಃ ವ್ಯತ್ಯಯೇನ ಶಾಶದಾನಃ ಸದೈವ ಸುಸುಖೀ -ಮಂ. ಮಂ.**

ಪ್ರಾರಂಭಿಸಿ ತೃಣದವರೆಗೆ ಸ್ವಲ್ಪ ಸುಖವಷ್ಟೇ ಇದೆ ಪೂರ್ಣವಾದ ಆನಂದವು ಭಗವಂತನಿಗೊಬ್ಬನಿಗೇ ಇರುವ ಪ್ರಯುಕ್ತ, ಅದು ಅವನ ಲಕ್ಷಣ ಎನಿಸಿದೆ—ಎಂದು ಬ್ರಹ್ಮವೈವರ್ತ[1] ಪ್ರತಿಪಾದಿಸಿದೆ ಅತಿಸುಖವೇ ಭಗವಂತನ ಚಿಹ್ನೆಯಾಗಿ ಇರುವುದರಿಂದ ಅವನನ್ನು 'ಶಶಾಂಕ' ಎಂದು ಅರ್ಜುನನು ಕರೆದಿರುವನು[2]

೨ ಅತಿ ಸುಖಸ್ವರೂಪಿ ಮತ್ತು (ಜೀವಾತ್ಮರ) ಅವಯವಗಳನ್ನು ಮಾಡುವವನು[3]

'ತ್ವಷ್ಟಾ' ಎನಿಸುವ ಸಂಕರ್ಷಣರೂಪಿ ಭಗವಂತನು ಗರ್ಭಿಣಿ ಸ್ತ್ರೀಯರ ಗರ್ಭದಲ್ಲಿ ಮಗುವಿನ ರೂಪವನ್ನು ನಿರ್ಮಿಸುವವನಾಗಿದ್ದು[4], ಅವನೇ ಅವಯವಗಳನ್ನೂ ನಿರ್ಮಿಸುವನು

೩ ಅತಿ ಸುಖಸ್ವರೂಪಿ ಮತ್ತು ಜ್ಞಾನಶೀಲನಾಗಿರುವವನು[5]

೪ ಸುಖಸ್ವರೂಪಿಗಳಾದ ಮುಕ್ತಾತ್ಮರಿಗೆ ಆನಂದದ ಕಣವನ್ನು ಅನುಗ್ರಹಿಸುವವನು[6]

---

1 ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ । ಅವ್ಯಕ್ತಾದಿ ತೃಣಾಂತಾಸ್ತು ವಿಪ್ರುಡಾನಂದಭಾಗಿನಃ । -ಬ್ರಹ್ಮವೈವರ್ತ (ಬ್ರ ಸೂ ಭಾ 1-2-15)

2 ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ. .। -ಗೀ 11-39

...ಶಶಾಂಕೋಽತಿಸುಖಾಂಕಿತಃ । ...ಇತಿ ನಾನಾಭಿಧೋ ಹರಿಃ' -ಗೀ. ತಾ.

೨ 3 ಅತಿಸುಖಸ್ವರೂಪತ್ವಾತ್ ಶಶಃ । ಬಿಂದತಿ ಜೀವಾತ್ಮನಾಂ ಅವಯವಾನ್ ಕರೋತೀತಿ ಬಿಂದುಃ । 'ಬಿದಿ ಅವಯವೇ' (ಅವಯವ ಇತಿ ಅವಯವಕ್ರಿಯೋಚ್ಯತೇ)

4 '...ತ್ವಷ್ಟಾ ರೂಪಾಣಿ ಪಿಂಶತು' -ಬೃ ಉ. 8 5-21

'...ತ್ವಷ್ಟಾ ತ್ವೇಷಾದ್ ದ್ವಿತೀಯಕಃ' -ಛಾಂ. ಉ ಭಾ. (2-1-9)

೩ 5 ಅತಿಸುಖಸ್ವರೂಪತ್ವಾತ್ ಶಶಃ । ವಬಯೋರಭೇದಾತ್ ಬಿಂದುರ್ಜ್ಞಾನೀ । ಶಶಶ್ಚಾಸೌ ಬಿಂದುಶ್ಚ ಶಶಬಿಂದುಃ । -ಸ. ಸಂ.

ವೇದನಶೀಲೋ ವಿಂದುಃ—ವಿಂದುರಿಚ್ಛುಃ ಇತ್ಯುಪ್ರತ್ಯಯೋ ನುಮ್ ನಿಪಾತ್ಯತೇ ।

೪ 6 ಸುಖಸ್ವರೂಪತ್ವಾತ್ ಶಾಃ ಮುಕ್ತಾತ್ಮಾನಃ ತಸ್ಯ ಬಿಂದುಃ ಶಬಿಂದುಃ।ಶಾನಾಂ ಶಬಿಂದುರ್ಯಸ್ಮಾತ್ ಸಃ ಶಶಬಿಂದುಃ ।

ಮುಕ್ತಾತ್ಮರು ಪೂರ್ಣಾನಂದನಾದ ಭಗವಂತನ ಆನಂದದ ಏಕದೇಶಾನಂದಸ್ವರೂಪಿಗಳು[1] ಅವರು ಅಮುಕ್ತರ ಅಪೇಕ್ಷೆಯಿಂದ ಪೂರ್ಣಾನಂದ ಉಳ್ಳವರಾದರೂ, ಬ್ರಹ್ಮನ ಆನಂದದ ಅಪೇಕ್ಷೆಯಿಂದ ಏಕದೇಶಾನಂದವನ್ನಷ್ಟೇ ಅನುಭವಿಸುವರು ಮುಕ್ತಾತ್ಮರ ಈ ಆನಂದವು ಬ್ರಹ್ಮನ ಪ್ರತಿಬಿಂಬವಾಗಿದೆ[2] ಈ ಆನಂದವನ್ನೂ ಭಗವಂತನೇ ಅನುಗ್ರಹಿಸುವನು[3]

೫ (ರಾಮಾವತಾರ ಮೊದಲಾದ ಅವತಾರಗಳಲ್ಲಿ ಬೇಟೆಯಾಡುತ್ತಿದ್ದು, ಬೇಟೆಯಲ್ಲಿ) ಮೊಲದ ರಕ್ತದ ಬಿಂದು ಉಳ್ಳವನು.[4]

೬ ಕುಟಿಲ ಸ್ವಭಾವದ ದುಷ್ಟರನ್ನು ಸಂಹರಿಸುವವನು[5]

೭ ಅತ್ಯುದ್ರಿಕ್ತ ಸುಖ ಉಳ್ಳ ಪ್ರಯುಕ್ತ ಶಶಿ ಎಂಬ ಹೆಸರನ್ನು ಹೊಂದಿರುವವನು.[6]

---

1 ಪೂರ್ಣಾನಂದಸ್ಯ ತಸ್ಯೈವ ಮುಕ್ತಾ ವಿಪ್ರುಟ್ಸುಖಾತ್ಮಕಾಃ ।
-ಬೃಹಚ್ಛ್ರುತಿ (ಬೃ. ಉ. ಭಾ. 5–5-1)

2 ಮುಕ್ತಾನಾಮೇಕದೇಶತ್ವಂ ಬ್ರಹ್ಮಾನಂದವ್ಯಪೇಕ್ಷಯಾ । ವಿಪ್ರುಟ್ತ್ವಂ ಪ್ರತಿಬಿಂಬತ್ವಂ ಶ್ರುತಿಷೂಕ್ತಂ ಹಿ ಸರ್ವಶಃ । ತಥಾಽಪಿ ಪೂರ್ಣಾನಂದತ್ವಮಮುಕ್ತಾನಾಂ ವ್ಯಪೇಕ್ಷಯಾ।
-ಬ್ರಹ್ಮತರ್ಕ (ಬೃ. ಉ. ಭಾ. 5-5-1)

3 ಬ್ರಹ್ಮರುದ್ರಾದಯೋ ಜೀವಾ ದುಃಖಿನಸ್ತತ್ಪ್ರಸಾದತಃ । ದುಃಖಮುಕ್ತಾ ನಿಜಾನಂದಂ ಪ್ರಾಪ್ನುಯುರ್ನಿತ್ಯಮಂಜಸಾ । ಬೃಹಚ್ಛ್ರುತಿ (ಬೃ. ಉ. ಭಾ. 5-5–1

೫ 4 ಮೃಗಯಾಯಾಂ ಶಶಸ್ಯ (ಲೋಹಿತಸ್ಯ) ಬಿಂದುರ್ಯಸ್ಯ ಸಃ ಶಶಬಿಂದುಃ ।
-ವಾ ರಾ.

೬ 5 'ಶಶ ಪ್ಲುತಗತೌ' ಶಶಾನಾಂ ಕುಟಿಲಗತೀನಾಂ ವಿಂದುಃ ಅಪಲಪಿತಾ। 'ಬಿದಿ ಅವಯವೇ'।
-ಪ. ಭ.

೭ 6 ಆಧಿಕ್ಯೇಽಧಿಕವಿತಿ ನ್ಯಾಯೇನ ಶಶಂ ಸುಖಸುಖಂ ಅತ್ಯುದ್ರಿಕ್ತಸುಖಂ ತದಸ್ಯಾಸ್ತೀತಿ ಶಶೀ ಶಶೀತಿ ಆಹ್ವಾನಂ ವಿಂದತೇ ಲಭತ ಇತಿ ಶಶಿಬಿಂದುಃ ।
--ಶೀ. ಜಂ.

* 'ಶಶಿಬಿಂದು' ಇತಿ ಪಾಠಮಂಗೀಕೃತ್ಯಾಯಮರ್ಥ ಉಕ್ತಃ ।

## ಜಿಜ್ಞಾಸೆ

### [ಆನಂದಪೂರ್ಣತ್ವ ಯುಕ್ತಿಸಿದ್ಧ]

ಪ್ರ.– ಪರಮಾತ್ಮನಿಗೆ ಪೂರ್ಣಾನಂದವು ಇದೆ ಎಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ. ಆದರೆ ಆ ವಿಷಯದಲ್ಲಿ ಯುಕ್ತಿಯು ಇದೆಯೋ?

ಉ - ಜಗತ್ಸೃಷ್ಟಿಕರ್ತೃತ್ವವು ಪರಮಾತ್ಮನಿಗೆ ಪೂರ್ಣಾನಂದವನ್ನು ಸಿದ್ಧಿಮಾಡಲಿಕ್ಕೆ ಶ್ರೇಷ್ಠ ಯುಕ್ತಿಯಾಗಿದೆ. ಇದನ್ನು 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿ ಹೇಳಿರುತ್ತದೆ ಆ ಸೂತ್ರದ ಸಾರಾಂಶ—ಯಾವದೇ ಪ್ರವೃತ್ತಿಯು ರಾಗ ದ್ವೇಷ ದುಃಖೋದ್ರೇಕ ಸುಖೋದ್ರೇಕಗಳೆಂಬ ನಾಲ್ಕು ಕಾರಣಗಳ ಪೈಕಿ ಒಂದಾದರೂ ಕಾರಣವು ಇದ್ದರೇನೇ ಆಗುತ್ತದೆ ಭೋಜನಪ್ರವೃತ್ತಿಯು ರಾಗದಿಂದ. ಶತ್ರುವಧದಲ್ಲಿ ಪ್ರವೃತ್ತಿಯು ದ್ವೇಷದಿಂದ. ರೋಧನ ಪ್ರವೃತ್ತಿಯು ದುಃಖೋದ್ರೇಕದಿಂದ, ನರ್ತನ ಪ್ರವೃತ್ತಿಯು ಸುಖೋದ್ರೇಕದಿಂದ. ಈ ರೀತಿ ನಾಲ್ಕು ಕಾರಣಗಳಲ್ಲಿ ಪರಮಾತ್ಮನಲ್ಲಿ ರಾಗದ್ವೇಷದುಃಖೋದ್ರೇಕಗಳು ಇಲ್ಲವಾದ್ದರಿಂದ ಅವನ ಜಗತ್ಸೃಷ್ಟಿ ಪ್ರವೃತ್ತಿಯು ಆನಂದೋದ್ರೇಕದಿಂದ ಎಂದೇ ಹೇಳಬೇಕು ಮಹಾ ಪ್ರವೃತ್ತಿಗೆ ಮಹಾನಂದೋದ್ರೇಕವು ಬೇಕು ಆದುದರಿಂದ ಅನಂತ ಜಗನ್ನಿರ್ಮಾಣ ಪ್ರವೃತ್ತಿ ಅನಂತಾನಂದದ ಕಾರ್ಯವೇ ಆದುದರಿಂದ ಅವನಿಗೆ ಪೂರ್ಣಾನಂದವು ಸಿದ್ಧವಾಗುತ್ತದೆ ಹೀಗೆ ಪರಮಾತ್ಮನ ಪೂರ್ಣಾನಂದವು ತರ್ಕ ಸಿದ್ಧವಾಗಿದ್ದರೂ ತಾರ್ಕಿಕರೆಂದು ಪ್ರಸಿದ್ಧರಾದವರು ಪರಮಾತ್ಮನಿಗೆ ಪೂರ್ಣಾನಂದವನ್ನು ಒಪ್ಪದೇ ಇದ್ದದ್ದು ಆಶ್ಚರ್ಯವೇ ಸರಿ.



## ೨೮೬ ಸುರೇಶ್ವರಃ

೧ ದೇವತೆಗಳಿಗೆ ಒಡೆಯನಾಗಿರುವವನು[1]

೨ ದೇವತೆಗಳಿಗೆ ಒಡೆಯರಾದ (ಚತುರ್ಮುಖಾದಿಗಳ) ವರಿಗಿಂತಲೂ ಉತ್ತಮನಾಗಿರುವವನು[2]

೩ ದೇವತೆಗಳಿಗೆ ಒಡೆಯರಾದ (ಚತುರ್ಮುಖಾದಿಗಳ) ವರಿಗೂ (ಐಶ್ವರ್ಯ

---

೧ 1 ಸುರಾಣಾಂ ದೇವತಾನಾಂ ಈಶ್ವರಃ ಸ್ವಾಮೀ ಸುರೇಶ್ವರಃ ।

೨ 2 ಸುರಾಣಾಂ ದೇವಾನಾಂ ಈಶಾಃ ಚತುರ್ಮುಖಾದಯಃ। ತೇಭ್ಯೋಽಪಿ ವರಃ ಸುರೇಶ್ವರಃ। ಈಶ್ವರನಾಮ್ನಃ (೩೬) ವ್ಯಾಖ್ಯಾನೇ ಏವಮಪಿ ಸಮಾಸಃ ಪ್ರದರ್ಶಿತಃ ।

ಮೊದಲಾದವುಗಳ) ವರವನ್ನು ಅನುಗ್ರಹಿಸುವವನು[1]

ವರವನ್ನು ಅನುಗ್ರಹಿಸುವ ದೇವತೆಗಳಿಗೂ ಒಡೆಯರಾಗಿರುವ ಚತುರ್ಮುಖನೇ ಮೊದಲಾದವರಿಗೂ ಐಶ್ವರ್ಯಾದಿಗಳ ವರವನ್ನು ಅನುಗ್ರಹಿಸುವವನು ವಾಸುದೇವನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು.[2]

೪ ದೇವತೆಗಳ ಒಡೆಯರಿಂದಲೂ ಸ್ವೀಕರಿಸಲ್ಪಡುವವನು[3]

೫ ಚೆನ್ನಾಗಿ ರಮಿಸುವವನು ಅಥವಾ ರಾರಾಜಿಸುವವನು (ಸರ್ವರಿಗೂ) ಒಡೆಯನಾಗಿರುವವನು ಅಥವಾ ಒಡೆಯರೆನಿಸುವವರೆಲ್ಲರಿಗಿಂತಲೂ ಉತ್ತಮನಾಗಿರುವವನು.[4]

೬ ದೇವತೆಗಳು ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸಲು ಸಮರ್ಥರಾಗುವಂತೆ ಅನುಗ್ರಹಿಸುವವನು[5]

---

1 ಸುರಾಣಾಂ ಈಶಾಃ ಸುರೇಶಾಃ ಬ್ರಹ್ಮಾದಯಃ। ತೇಭ್ಯಃ ವರಃ ಐಶ್ವರ್ಯಾದಿಲಕ್ಷಣಃ ವರಃ ಯಸ್ಮಾತ್ ಸಃ ಸುರೇಶ್ವರಃ । ನಿರುಕ್ತತ್ವಾತ್ ಶಕಾರೋತ್ತರಾಕಾರಸ್ಯ ಲೋಪಃ ।

2 ಆದ್ಯಾದಿವರದೇಶವರಪ್ರದಮ್ । –ದ್ವಾ. ಸ್ತೋ.

ಆದೌ ಭವಃ ಅದ್ಯಃ ಚತುರ್ಮುಖಃ ಆದಿರ್ಯೇಷಾಂ ರುದ್ರಾದೀನಾಂ ತೇ ಆದ್ಯಾದಯಃ। ವರಂ ದದತೀತಿ ವರದಾಃ ತೇಷಾಮೀಶಾ ವರದೇಶಾಃ । ಆದ್ಯಾದಯಶ್ಚ ತೇ ವರದೇಶಾಶ್ಚ ಆದ್ಯಾದಿವರದೇಶಾಃ।ವರಮುತ್ಕೃಷ್ಟಮೈಶ್ವರ್ಯಾದಿಲಕ್ಷಣವರಂ ಪ್ರದದಾತೀತಿ ವರಪ್ರದಃ। ಆದ್ಯಾದಿವರದೇಶೇಭ್ಯೋ ವರಪ್ರದಃ ಆದ್ಯಾದಿವರದೇಶವರಪ್ರದಸ್ತಮ್ ।

ವಿ ಪ ಟೀ.

೪ 3 ಸುರಾಣಾಮೀಶಾಃ । ತೈರಪಿ ವ್ರಿಯತೇ ಸ್ವೀಕ್ರಿಯತೇ ಇತಿ ಸುರೇಶ್ವರಃ ।

೫ 4 ಸುಷ್ಠು ರಮತೇ ರಾಜತೇ ಇತಿ ವಾ ಸುರಃ । ಸರ್ವೇಷಾಂ ಸ್ವಾಮಿತ್ವಾತ್ ಈಶೇಭ್ಯೋ ಬ್ರಹ್ಮರುದ್ರಾದಿಭ್ಯೋಽಪಿ ವರ ಇತಿ ವಾ ಈಶ್ವರಃ । ಸುರಶ್ಚಾಸಾವೀಶ್ವರಶ್ಚ ।

೬ 5 ಸುರಾಃ ಈಶ್ವರಾಃ ಸ್ವಸ್ವಕರ್ತವ್ಯನಿರ್ವಹಣೇ ಸಮರ್ಥಾಃ ಯೇನ ಸಃ ಸುರೇಶ್ವರಃ ।

ದೇವತೆಗಳಿಗೆ ಐಶ್ವರ್ಯ ವಿಮುಕ್ತ್ಯಾದಿಗಳನ್ನೆಲ್ಲ ಅನುಗ್ರಹಿಸುವವನು ಭಗವಂತನೆಂಬುದಾಗಿ ದ್ವಾದಶಸ್ತೋತ್ರದಲ್ಲಿ ಸ್ತುತಿಸಲಾಗಿದೆ.[1]

೭ ಚೆನ್ನಾಗಿ ರಮಿಸುವ ಮುಕ್ತಾತ್ಮರು (ತಮ್ಮ ತಮ್ಮ ಕಾಮನೆಗಳನ್ನು ಪೂರೈಸಲು) ಸಮರ್ಥರಾಗುವಂತೆ ಅನುಗ್ರಹಿಸುವವನು[2]

ಹೃದಯಕಾಶದಲ್ಲಿರುವ ಭಗವಂತನು ಬಯಸಿದ್ದೆಲ್ಲ ಆಗುವ ಪ್ರಯುಕ್ತ ಅವನು ಸತ್ಯಕಾಮನು. ಅವನ ಶಾಸನಾನುಸಾರವಾಗಿಯೇ ಮುಕ್ತಾತ್ಮರೂ ಸತ್ಯಕಾಮರೆನಿಸುವರೆಂದು ಛಾಂದೋಗ್ಯೋಪನಿಷತ್ತು ಸಂದೇಶಿಸಿದೆ[3]

೮ ಚೆನ್ನಾಗಿ ನೀಡುವವನು ಮತ್ತು ಸಮರ್ಥನಾಗಿರುವವನು.[4]

ಭಗವಂತನು ನೀಡುವುದಕ್ಕಿಂತ ಅಧಿಕವಾಗಿ ಯಾರೂ ನೀಡಲಾರದಷ್ಟು ಪ್ರಮಾಣದಲ್ಲಿ ಅವನು ನೀಡುವುದರಿಂದಲೇ ಐತರೇಯೋಪನಿಷತ್ತು ಅವನನ್ನು ಅಕ್ಷರ ಎಂದೇ ಕರೆದಿದೆ[5] ಸರ್ವಸ್ವಾಮಿಯಾಗಿರುವ ಅವನು ತಾನು ಯಾವುದನ್ನು ಯಾರಿಗೆ ನೀಡಬೇಕೆಂದು ಬಯಸುವನೋ

---

1 ದಾತಾ ಸರ್ವಾಮರೈಶ್ವರ್ಯ ವಿಮುಕ್ತ್ಯಾದೇರಹೋ ವರಮ್ । ಆನಂದಸ್ಯ ಪದಂ . . '

–ದ್ವಾ ಸ್ತೋ.

೭ 2 ಸುಷ್ಠು ರಮಂತ ಇತಿ ಸುರಾಃ ಮುಕ್ತಾತ್ಮಾನಃ । ತೇ ಸ್ವಸ್ವಕಾಮಪೂರಣೇ ಸಮರ್ಥಾ ಯಸ್ಮಾತ್ ಸಃ ಸುರೇಶ್ವರಃ ।

3 … ..ಯಥಾಕ್ಷನುಶಾಸನಂ ಯಂ ಯಮಂತಮಭಿಕಾಮೋ ಭವತಿ ಯಂ ಜನಪದಂ ಯಂ ಕ್ಷೇತ್ರಭಾಗಂ ತಂ ತಮೇವೋಪಜೀವಂತಿ.. ..

–ಛಾಂ ಉ. ಭಾ.

ಯಂ ಯಂ ಕಾಮಯತೇ ತಂ ತಮೇವೋಪಜೀವಂತಿ ।

–ಛಾಂ ಉ. ಭಾ.

೮ 4 ಸುಷ್ಠು ರಾತಿ ದದಾತೀತಿ ಸುರಃ । ಈಷ್ಟೇ ಇತಿ ಈಶ್ವರಃ । ಸುರಶ್ಚಾಸಾವೀಶ್ವರಶ್ಚ ಸುರೇಶ್ವರಃ ।

5 'ಏಷ ವಾ ಅಕ್ಷರಮೇಷ ಹ್ಯೇಭ್ಯಃ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ ನ ಚೈನಮತಿ ಕ್ಷರಂತಿ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ ನ ಚೈನಮತಿ ಕ್ಷರಂತಿ ತಸ್ಮಾದಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತ ಏತಮೇವ ತಥಾ ಸಂತಮ್' –ಐ. ಉ. 2-1-2-11

ಅದನ್ನು ಕೊಟ್ಟೇ ಕೊಡುವನು ಆದ್ದರಿಂದಲೇ ಅಗ್ನಿಸೂಕ್ತದಲ್ಲಿ—ಅಗ್ನಿನಾಮಕ ಭಗವಂತನನ್ನು ಸಂಬೋಧಿಸಿ, 'ನೀನು ಯಜಮಾನನಿಗೆ ಯಾವುದನ್ನು ಕೊಡಬಯಸುವಿಯೋ, ಅದನ್ನು ಕೊಟ್ಟೇ ಕೊಡುವಿ'—ಎಂದು ಸ್ತುತಿಸಲಾಗಿದೆ.[1]

೯ ಒಳ್ಳೆಯ ಧನ ಉಳ್ಳವರಿಗೆ ಒಡೆಯನಾಗಿರುವವನು.[2]

೧೦ ಉತ್ತಮ ದಾತೃಗಳಿಗೆ ಒಡೆಯನಾಗಿರುವವನು.[3]

೧೧ ಚೆನ್ನಾಗಿ ರಮಿಸುವವನು, ಸರ್ವ ಸ್ವಾಮಿ ಹಾಗೂ ಶ್ರೇಷ್ಠ.[4]

೧೨ ಆನಂದ ಸ್ವರೂಪಿಯಾಗಿದ್ದು 'ಸು' ಎನಿಸುವ ತನ್ನಿಂದ ತಾನೇ ರಮಿಸುವವನು. ಲಕ್ಷ್ಮೀದೇವಿಗೆ ಆನಂದವನ್ನು ಅನುಗ್ರಹಿಸುವವನು. ಮತ್ತು (ಲಕ್ಷ್ಮೀದೇವಿಯ) ವರ

---

ಅಧಿಕಂ ಕ್ಷರತೀತ್ಯಕ್ಷರಮ್ । ಕ್ಷರಣಂ ನಾಮ ಸಂತತದಾನಮ್ । 'ಕ್ಷರ ವಿನಾಶಸಂತತದಾನಯೋಃ' ಇತಿ ಧಾತೋಃ । –ಐ. ಉ. ಭಾ.

1 ಯದಂಗ ದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ । ತವೇತ್ತತ್ಸತ್ಯಮಂಗಿರಃ ।
–ಋ. ವೇ. 1-6

'ಯಜಮಾನಾಯ ಯದ್ ಭದ್ರಂ ಕರ್ತುಮಿಚ್ಛಸಿ ಸತ್ಪ್ರಿಯ । ತ್ವಚ್ಚೇಷ್ಟಯೈವ ಕರ್ಮಾಣಿ ವರ್ತಯಿತ್ವಾ ಶದೀಹನನಮ್ । ತವೈವ ಸತ್ಯಂ.. '
–ಋ. ಭಾ.

ಅಸ್ಮಾ ಇದಂ ದಾಸ್ಯಾಮೀತೀಚ್ಛಸಿ ಚೇದ್ದಾಸ್ಯಸ್ಯೇವೇತಿ ಭಾವಃ ।
–ಮ. ಮ.

೯ ಟಿ. 2 (ಸುರೈವತಾಂ) ಶೋಭನಧನವತಾಂ ಈಶ್ವರಃ ಸುರೇಶ್ವರಃ ।
–ವಿ. ರಾ.

೧೦ 3 (ಸುಷ್ಠು ರಾಂತೀತಿ ಸುರಾಃ ತೇಷಾಂ) ಶೋಭನದಾತೄಣಾಮೀಶ್ವರಃ ।
–ವಿ. ರಾ.

೧೧ 4 ಸುಷ್ಠು ರಮಂತ ಇತಿ ಸುರಃ । ಸರ್ವಸ್ವಾಮಿತ್ವಾದೀಶಃ । ಸರ್ವಶ್ರೇಷ್ಠತ್ವಾದ್ವರಃ ।

ಆಗಿರುವವನು.[1]

ಭಗವಂತನು ಸುಖಸ್ವರೂಪಿಯಾಗಿದ್ದು, ಸ್ವರಮಣನು. ತನ್ನ ಸುಖಕ್ಕೆ ಇನ್ನಾರನ್ನೂ ಅಪೇಕ್ಷಿಸುವುದಿಲ್ಲ[2] ಲಕ್ಷ್ಮೀದೇವಿಯಿಂದ 'ವರ'ನನ್ನಾಗಿ ಆರಿಸಿಕೊಳ್ಳಲ್ಪಟ್ಟಿರುವ[3] ಅವನು ಲಕ್ಷ್ಮೀ ದೇವಿಗೆ ರತಿಸುಖವನ್ನು ಕೊಡುವುದರಿಂದಷ್ಟೇ 'ರಮಾರಮಣ' ಎಂದೆನಿಸಿರುವನು.[4]

## ಜಿಜ್ಞಾಸೆ

[ವರ ಕೊಡುವ ಸಾಮರ್ಥ್ಯ]

ಪ್ರ – ವರಗಳನ್ನು ಕೊಡತಕ್ಕ ಬ್ರಹ್ಮಾದಿ ದೇವತೆಗಳಿಗೂ ಪರಮಾತ್ಮನು ವರವನ್ನು ಕೊಡತಕ್ಕವನೆಂದು ಉಪಾಸನೆಯು ನಮಗೆ ಯಾವ ಫಲವನ್ನು ಕೊಡಬಹುದು? 'ತಂ ಯಥಾ ಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿಯು ನಮಗೆ ಪರಮಾತ್ಮನಿಂದ ವರವು ಸಿಗಬೇಕಾದರೆ ಅವನು ನಮಗೆ ವರವನ್ನು ಕೊಡತಕ್ಕವನು ಎಂದು ಉಪಾಸನೆಯನ್ನು ಮಾಡಬೇಕೆಂದು ಹೇಳುತ್ತದೆ ಆದುದರಿಂದ ಪರಮಾತ್ಮನು ದೇವತೆಗಳಿಗೆ ವರವನ್ನು ಕೊಡತಕ್ಕವನು ಎಂಬ ಉಪಾಸನೆಯು ನಮಗೆ ನಿರರ್ಥಕವಾಗುವದಿಲ್ಲವೇ?

ಉ - ಪರಮಾತ್ಮನು ಬ್ರಹ್ಮಾದಿದೇವತೆಗಳಿಗೆ ವರವನ್ನು ಕೊಡತಕ್ಕವನಾದುದರಿಂದ ನಮಗೆ ಅವನು ವರವನ್ನು ಕೊಡುವ ಸಾಮರ್ಥ್ಯ ಉಳ್ಳವನು ಎಂದು ಅಭಿಪ್ರಾಯದಿಂದ ಅವನನ್ನು ಬ್ರಹ್ಮಾದಿಗಳಿಗೆ ವರವನ್ನು ಕೊಡತಕ್ಕವನು—ಎಂದು ಉಪಾಸನೆಯನ್ನು ನಾವು ಮಾಡಬೇಕು ಆಗ ಆ ಉಪಾಸನೆಯು ನಮಗೆ ಫಲಪ್ರದವಾಗುತ್ತದೆ.



---

1 'ಸ್ವಿತ್ಯಾನಂದಃ ಸಮುದ್ದಿಷ್ಟಃ ' ಇತಿ ಆನಂದರೂಪತ್ವಾತ್ ಭಗವಾನ್ ಸು । ಆನಂದ-ರೂಪೇಣ ಸ್ವೇನೈವ ರಮತ ಇತಿ ಸುರಃ । ಯಾಃ ಈನಾಮ್ನ್ಯಾಃ ಲಕ್ಷ್ಮ್ಯಾಃ ಶಂ ಸುಖಂ ಯಸ್ಮಾತ್ ಸಃ ಈಶಃ । ತಥಾ (ಯಾಃ ಲಕ್ಷ್ಮ್ಯಾಃ) ವರಶ್ಚ ।

2 ರಮಯಾ ರಮಮಾಣೋಽಪಿ ತತ್‌ಸ್ಥೇನೈವ ಸ್ವಿಯಾತ್ಮನಾ । ರಮತೇ ನಾನ್ಯತಃ ಕ್ವಾಪಿ ರತಿರ್ವಿಷ್ಣೋಃ ಸುಖಾತ್ಮನಃ । —ಐ ಉ. ಭಾ. 2-2-6-15

3 'ವವ್ರೇ ವರಂ ಸರ್ವಗುಣೈರಪೇಕ್ಷಿತಂ ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್' —ಭಾಗ. 8-8-23

4 ರಮಯಾ ರಮಣಂ ತಸ್ಮಾದ್ ರಮಾಯಾ ರತಿಪಾತ್ರತಾ । ನೈವಾಸ್ಯಾ ರತಿದಾತೃತ್ವಂ ವಿಷ್ಣೋರ್ನಹ್ಯನ್ಯತೋ ರತಿಃ' —ಐ. ಉ. ಭಾ. 2-2-6-5

## ೨೮೭ ಔಷಧಂ

೧ ಸಂಸಾರದಲ್ಲಿ ತಾಪಕ್ಕೊಳಗಾಗುವವರಿಗೆ ಆಶ್ರಯನಾಗಿರುವವನು[1]

ಅನ್ನರಸಮಯ ನಾಮಕನಾದ ಅನಿರುದ್ಧರೂಪಿ ಭಗವಂತನು ಸರ್ವಭೂತಗಳಿಗಿಂತಲೂ ಜ್ಯೇಷ್ಠನಾಗಿದ್ದು, ಸಂಸಾರತಾಪಕ್ಕೆ ಸಿಲುಕಿ ತಪಿಸುತ್ತಿರುವ ಅವರೆಲ್ಲರಿಗೂ ಆಶ್ರಯನಾಗಿರುವ ಪ್ರಯುಕ್ತ 'ಸರ್ವೌಷಧ' ಎನಿಸಿರುವನೆಂದು ತೈತ್ತಿರೀಯೋಪನಿಷತ್ತು ಸಂದೇಶಿಸಿದೆ.[2]

ಸಂಸಾರತಾಪಕ್ಕೊಳಗಾದವರಿಗೆ ಆಶ್ರಯನಾಗಿರುವುದರಿಂದ ತಾನು 'ಔಷಧ' ಎನಿಸುವೆನೆಂದು ಗೀತಾಚಾರ್ಯನೂ ಸಂದೇಶಿಸಿರುವನು[3]

೨ ವ್ಯಾಧಿಗಳ ಬೇಗೆಯಿಂದ ತಪ್ತರಾದವರಿಗೆ ಧನ್ವಂತರಿರೂಪದಿಂದ ಆಸರೆ ನೀಡುವವನು[4]

ಚಂದ್ರರ ಸಮುದಾಯದ ಕಾಂತಿವುಳ್ಳ, ತನ್ನ ಶ್ರೇಷ್ಠ ಅಮೃತಮಯ ಕಿರಣಗಳಿಂದ ಜಗತ್ತಿಗೆ ಚೈತನ್ಯವನ್ನು ನೀಡುತ್ತಿರುವ, ಅಪರಿಮಿತ ಸುಖವುಳ್ಳ, ಒಂದು ಕೈಯಲ್ಲಿ ಜ್ಞಾನಮುದ್ರೆಯನ್ನೂ

---

೧ 1 'ಉಷ ದಾಹ' ಇತ್ಯತಃ ಕರ್ಮಣಿ ಘಞಿ ಪುಗಂನ್ತೇತಿ ಗುಣೇ ಓಷಾಃ ಸಂಸಾರೇ ದಹ್ಯಮಾನಾಃ । (ಆ ಸಮ್ಯಕ್ ಓಷಾಃ ಔಷಾಃ) ತೇ ಧೀಯಂತೇ ಅಸ್ಮಿನ್ನಿತಿ ಔಷಧಮ್। ಸಂಸಾರದಗ್ಧಾನಾಮಾಶ್ರಯಃ । -ಉ. ಖಂ ಅಧಾರೇಣ

2 ಅನ್ನಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ ಸರ್ವೌಷಧಮುಚ್ಯತೇ ।
-ತೈ. ಉ. 2-3

ಅತ್ತೃತ್ವಾತ್ ಸರ್ವಲೋಕಾನಾಮನ್ನಮಿತ್ಯುಚ್ಯತೇ ಹರಿಃ । ಉಪಜೀವ್ಯಶ್ಚ ಭೂತಾನಾಮಿತಿ ವಾಽನ್ನಂ ಜನಾರ್ದನಃ । ಸ ಜ್ಯಾಯಾನ್ ಸರ್ವಭೂತೇಭ್ಯಸ್ತಸ್ಮಾತ್ ಸರ್ವೌಷಧಂ ಸ್ಮೃತಮ್ । ಸಂಸಾರೇ ದಹ್ಯಮಾನಾನಾಮಾಶ್ರಯತ್ವಾತ್ ಸ ಔಷಧಮ್ ।....
-ಯಜುಃಸಂಹಿತಾ (ಐ. ಉ. ಭಾ.)

3 ಅಹಮೌಷಧಮ್ । -ಗೀ 9-16

. ಆಯುಮುಷ್ಮಾನಾಂ ನಿಧಿರೌಷಧಮ್ । -ಗೀ ತಾ.

೨ 4 ಔಷಧಂ-ವ್ಯಾಧೀನಾಮುಷ್ಮಣಾ ದಗ್ಧಾಃ ಔಷಾಃ 'ಉಷ ದಾಹೇ' ಇತಿ ಧಾತುಃ । ತಾನ್ ಧನ್ವಂತರಿರೂಪೇಣ (ಧತ್ತೇ) ಧಾರಯತೀತ್ಯೌಷಧಮ್ ।
- ವಾ. ರಾ.

ಮತ್ತೊಂದರಲ್ಲಿ ಅಮೃತಕಲಶವನ್ನೂ ಧರಿಸಿಕೊಂಡು ಚಂದ್ರಬಿಂಬದಲ್ಲಿರುವ ಧನ್ವಂತರಿ ಭಗವಂತನು ತನ್ನಲ್ಲೂ,—ತನ್ನ ದೇಹದಲ್ಲೂ ಇದ್ದು ಅನುಗ್ರಹಿಸುವನೆಂದು ಧ್ಯಾನಿಸಬೇಕೆಂದು ಧನ್ವಂತರಿ ಮಂತ್ರದ ಧ್ಯಾನಪದ್ಯದಲ್ಲಿ ಸಂದೇಶಿಸಲಾಗಿದೆ[1]

೩. (ಸೂರ್ಯನಲ್ಲಿದ್ದುಕೊಂಡು) ಸಸ್ಯಗಳನ್ನು ಪೋಷಿಸುವವನು[2]

ಅಮೃತರಸಾತ್ಮಕನಾದ ತಾನು ಚಂದ್ರನಲ್ಲಿ ಸೋಮನಾಮಕನಾಗಿ ಇದ್ದು ಸಕಲ ಸಸ್ಯಗಳನ್ನು ಪೋಷಿಸುತ್ತಿರುವೆನೆಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[3]

೪ ಸಂಸಾರ ರೋಗಕ್ಕೆ ಔಷಧದಂತೆ ಇರುವವನು[4]

೫ ದಾಹಧಾರಕವಾದ ಅಗ್ನಿಗೆ ನಿಯಾಮಕನಾಗಿರುವವನು.[5]

ಅಗ್ನಿಯು ದಾಹಕ್ಕೆ ಧಾರಕನಾಗಿದ್ದು, ಅಂತಹ ಅಗ್ನಿಗೂ ಅಗ್ನಿನಾರಾಯಣನು ನಿಯಾಮಕನು

೬ ತಾಮಸರಿಗೆ ದುಃಖಾದಿಗಳ ಅತ್ಯಂತ ದಾಹವನ್ನು ನೀಡುವವನು ಅಥವಾ ಪೋಷಿಸುವವನು.[6]

---

1 'ಚಂದ್ರೌಘಕಾಂತಿಮಮೃತೋರುಕರೈರ್ಜಗಂತಿ ಸಂಜೀವಯಂತಮಮಿತಾತ್ಮಸುಖಂ ಪರೇಶಮ್ । ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ ಶೀತಾಂಶುಮಂಡಲಗತಂ ಸ್ಮರತಾತ್ಮಸಂಸ್ಥಮ್' —ತಂ ಸಾ ಸಂ 4-91

೩ 2 ಫಲಪಾಕಾಂತಾಃ ವ್ರೀಹಿಯವಾದ್ಯಾಃ ಓಷಧ್ಯಃ । ತಾಸಾಂ ಪೋಷಕತ್ವಾತ್ತತ್ಸಂಬಂಧೀತಿ ಔಷಧಮ್ । 'ಓಷಧೇರಜಾತೌ' ಇತಿ ಓಷಧಿಶಬ್ದಾತ್ ಅಣ್ ।

3 ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ । —ಗೀ. 15-13

೪ 4 ಸಂಸಾರರೋಗಭೇಷಜತ್ವಾದೌಷಧಮ್ । -ವಿ. ರಾ.

೫ 5 ಓಷಂ ದಾಹಂ ಧತ್ತೇ ಧಾರಯತೀತಿ ಓಷಧಿರಗ್ನಿಃ । ತಸ್ಯ ನಿಯಾಮಕತ್ವಾದ್ ಓಷಧೇರಿದಮಿತಿ ಬ್ರಹ್ಮ ಔಷಧಮ್ ।

೬ 6 ಔಷಂ ಅತಿಶಯಿತದುಃಖಾದಿರೂಪಂ ದಾಹಂ ತಾಮಸಾನಾಂ ದಧಾತಿ ದದಾತಿ ಪುಷ್ಣಾತೀತಿ ವಾ ಔಷಧಮ್ । 'ಧಾಞ್ ದಾನೇ' 'ಧಾಞ್ ಧಾರಣಪೋಷಣಯೋಃ' ।

### ಜಿಜ್ಞಾಸೆ

[ವೈದ್ಯನೂ ಔಷಧವೂ]

ಪ್ರ - 'ಔಷಧಂ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ' ಎಂದು ನಾರಾಯಣನು ವೈದ್ಯನೆಂದು ಹೇಳಿರುತ್ತದೆ. ಲೋಕದಲ್ಲಿ ವೈದ್ಯನು ಬೇರೆ ಔಷಧಿಯು ಬೇರೆಯಾದ್ದರಿಂದ ವೈದ್ಯನಾದ ಪರಮಾತ್ಮನು ಔಷಧ ಎಂಬ ನಾಮವುಳ್ಳವನು ಆಗುವದು ಹೇಗೆ?

ಉ - ಭವರೋಗನಿವರ್ತಕನಾದುದರಿಂದ ಶ್ರೀಹರಿಯು ವೈದ್ಯನೂ ಹೌದು. ಔಷಧದ ಒಳಗೆ ಅಂತರ್ಯಾಮಿಯಾಗಿ ಇದ್ದು ಅವುಗಳಿಗೆ ರೋಗನಿವರ್ತಕತ್ವ ಶಕ್ತಿಯನ್ನು ಕೊಡುವದರಿಂದ ಔಷಧ ನಾಮವುಳ್ಳವನೂ ಹೌದು. ರೂಢಿಯಿಂದ ವೈದ್ಯ ಔಷಧ ನಾಮಗಳು ಏಕತ್ರ ವಿರುದ್ಧಗಳಾದರೂ ಯೋಗದಿಂದ ಎರಡೂ ನಾಮಗಳು ಒಬ್ಬ ಪರಮಾತ್ಮನಲ್ಲಿ ಕೂಡುವವು. ಪರಸ್ಪರ ವಿರುದ್ಧಗಳಾದ ನಾಮಗಳನ್ನು ಪರಮಾತ್ಮನಲ್ಲಿ ಯೋಗವೃತ್ತಿಯಿಂದಲೇ ಕೂಡಿಸಬೇಕಾದ್ದರಿಂದ ಎಲ್ಲ ಪರಮಾತ್ಮನ ನಾಮಗಳು ಪರಮಾತ್ಮನಲ್ಲಿ ಯೌಗಿಕಗಳು ಎಂಬ ಶ್ರೀಮದಾಚಾರ್ಯರ ಸಿದ್ಧಾಂತವು ಅವಶ್ಯಾಂಗೀಕಾರ್ಯವಾಗಿದೆ



## ೨೮೮ ಜಗತಃ ಸೇತುಃ

೧ ತನ್ನನ್ನು ಸಂಬಂಧಿಸಿಕೊಂಡಿರುವ ಚರಾಚರ ಪ್ರಪಂಚಕ್ಕೆ ಆಶ್ರಯನಾಗಿರುವವನು.[1]

ಹೇಗೆ ಹರಕು ಬಟ್ಟೆತುಂಡುಗಳು ನೂಲುಗಳಿಂದ ಉದ್ದಕ್ಕೆ ಹಾಗೂ ಅಡ್ಡಕ್ಕೆ ನೇಯಲ್ಪಟ್ಟವುಗಳಾಗಿ ದೃಢವಾಗಿ, ಒಂದಾಗಿ ಇರುವವೋ ಹಾಗೆಯೇ ಸ್ಥಾವರ ಜಂಗಮಾತ್ಮಕವಾದ ಈ ವಿಶ್ವವು ಭಗವಂತನಲ್ಲಿ ಓತಪ್ರೋತವಾಗಿದೆ—ಎಂದು ಯಮನು ತನ್ನ ಭಟರಿಗೆ ತಿಳಿಸುವನು.[2] ಛಾಂದೋಗ್ಯೋಪನಿಷತ್ತಿನಲ್ಲಿ—ಹೃದಯಾಕಾಶದಲ್ಲಿರುವ ಭಗವಂತನ ಮಹಿಮೆಗಳನ್ನು ತಿಳಿಸುತ್ತ—ಅವನು

---

೧ 1 ಸೀಯತೇ ಬಧ್ಯತೇ ಅನೇನೇತಿ ಸೇತುಃ । 'ಷಿಞ್ ಬಂಧನೇ' । ಜಗತಃ ಸೇತುಃ ।

2 'ಪರೋ ಮದನ್ಯೋ ಜಗತಸ್ತಸ್ಥುಷಶ್ಚ ಓತಂ ಪ್ರೋತಂ ಪಟವದ್ ಯತ್ರ ವಿಶ್ವಮ್' —ಭಾಗ. 6-3-12

ಓತಂ ಪ್ರೋತಂ ಪಟವತ್—

'ಯಥಾ ಕಂಥಾಪಟಾಃ ಸೂತ್ರ ಓತಾಃ ಪ್ರೋತಾಶ್ಚ ಸಂಸ್ಥಿತಾಃ । ಏವಂ ವಿಷ್ಣಾವಿದಂ ವಿಶ್ವಮೋತಂ ಪ್ರೋತಂ ಚ ಸಂಸ್ಥಿತಮ್' —ಸ್ಕಾಂದ (ಭಾಗ. ತಾ. ನಿ.)

ಸಕಲ ಲೋಕಗಳಿಗೂ ಆಶ್ರಯನಾಗಿರುವನೆಂಬುದಾಗಿ 'ಸೇತು' ಶಬ್ದವನ್ನು ಉಲ್ಲೇಖಿಸಿಯೇ ಸಂದೇಶಿಸಲಾಗಿದೆ.[1] ಒಂದು ವೇಳೆ ಅವನು ಸಕಲ ಲೋಕಗಳಿಗೆ ಆಶ್ರಯನಾಗದಿದ್ದಲ್ಲಿ ಲೋಕಗಳೆಲ್ಲ ಒಟ್ಟು ಸೇರಿಯಾವು! ಇಲ್ಲವೇ ಪುಡಿಪುಡಿಯಾದಾವು!—ಎಂಬ ಯುಕ್ತಿಯ ಮೂಲಕವೂ ಭಗವಂತನು ಸರ್ವ ಲೋಕಾಶ್ರಯನೆಂದು ಸಮರ್ಥಿಸಲಾಗಿದೆ[2] ಮುಂದೆಯೂ ಅವನನ್ನು 'ಸೇತು' ನಾಮದ ಮೂಲಕವೇ ಉಲ್ಲೇಖಿಸಲಾಗಿದೆ[3] ಹಾಗೆಯೇ ಮತ್ತೊಂದೆಡೆ ಭಗವಂತನ ಸ್ವರೂಪಾತ್ಮಕವಾದ ಆನಂದವನ್ನು ಜಗತ್ತಿಗೆ ಆಧಾರವಾಗಿರುವ ಪ್ರಯುಕ್ತ 'ಸೇತು'—ಎಂದು ಕರೆಯಲಾಗಿದೆ[4]

೨ ವಾಯುದೇವನಿಗೆ ಆಶ್ರಯನಾಗಿರುವವನು.[5]

ಭಗವಂತನು ಚರಾಚರ ಪ್ರಪಂಚಕ್ಕೆ ಆಶ್ರಯನಾಗಿರುವನಾದರೂ ಅದರಲ್ಲೂ ವಿಶೇಷವಾಗಿ ಚರಾತ್ಮಕ ಪ್ರಪಂಚಕ್ಕೆ, ಅದರಲ್ಲೂ ವಾಯುದೇವನಿಗೆ ವಿಶೇಷವಾಗಿ ಆಶ್ರಯನಾಗಿರುವನು ಆದುದರಿಂದಲೇ ವಾಯುದೇವನು ವಿಶೇಷವಾಗಿ 'ಅನಿಲ'—ಎಂದೆನಿಸುವನು.[6]

---

1 'ಅಥ ಯ ಆತ್ಮಾ ಸ ಸೇತುರ್ವಿಧೃತಿಃ...' —ಛಾಂ. ಉ. 8-1-8
ಸಿತಮಸ್ಮಿನ್ ಜಗತ್ ಸರ್ವಮಿತಿ ಸೇತುರಿತೀರಿತಃ । —ಛಾಂ. ಉ. ಭಾ.

2 . . ಏಷಾಂ ಲೋಕಾನಾಮಸಂಭೇದಾಯ . ' —ಛಾಂ. ಉ. 8-1-8
ಯ ಆತ್ಮಾ ಹೃತ್ಪದ್ಮಸ್ಥತ್ವೇನೋಕ್ತಃ ಸಃ ಏಷಾಂ ಲೋಕಾನಾಮಸಂಭೇದಾಯಾಮೇಲನಾಯ ಅವಿದಾರಣಾಯ ವಾ ಸೇತುರಾಶ್ರಯಃ । ಯದಿ ಭಗವಾನಾಶ್ರಯೋ ನ ಸ್ಯಾತ್ತದಾ ಲೋಕಾ ನಿರಾಧಾರಾ ಏಕತ್ರ ಮಿಲಿತಾ ವಿದಾರಿತಾ ವಾ ಸ್ಯುರಿತಿ ಭಾವಃ । —ವೇದೇಶೀಯಮ್

3 ನೈತಂ ಸೇತುಮಹೋರಾತ್ರೇ ತರತೋ ತಸ್ಮಾದ್ ವಾ ಏತಂ ಸೇತುಂ ತೀರ್ತ್ವಾ...
ಏತಂ ಸೇತುಂ ತೀರ್ತ್ವಾऽಪಿ . .' —ಛಾಂ. ಉ 8-1-8

4 'ಏಷ ಸೇತುರ್ವಿಧೃತಿರ್ಯ ಏಷ ಆನಂದಃ ಪರಸ್ಯೈಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' —ಬ್ರ. ಸೂ ಭಾ. 3-2-32

೨ 5 ಜಗತಃ ವಾಯೋಃ ಸೇತುಃ ಆಶ್ರಯಃ ಜಗತ್।'ಸ್ಯಾತ್ ವಿಷ್ಟಪೇ ಕ್ಲೀಬಂ ವಾಯೌ ನಾ ಜಂಗಮೇ ತ್ರಿಷು' —ಮೇದಿನೀ ।

6 ಅದೋಷತ್ವಾದ ಇತ್ಯುಕ್ತೋ ವಾಯುಸ್ತನ್ನಿಲಯೋ ಯತಃ । ಅನಿಲಂ ತತ ಏವಾಸೌ....' —ಬೃ ಉ. ಭಾ. 7-20-3

೩ ಜಗತ್ತಿಗೆ ಅಥವಾ ವಾಯುದೇವರಿಗೆ ಸಂಸಾರವನ್ನು ದಾಟಲು ಸೇತುವೆಯಂತೆ ಇರುವವನು[1]

ಸಂಸಾರ ಸಾಗರವನ್ನು ಭಗವದನುಗ್ರಹದಿಂದಲೇ ದಾಟಬೇಕಾದದ್ದು ಭಗವಂತನ ಹಂಗಿಲ್ಲದೆ ಮೋಕ್ಷವನ್ನು ಪಡೆಯುವುದೆಂದರೆ, ಬಾಹುಗಳಿಂದ ಈಜುತ್ತ ಸಮುದ್ರವನ್ನು ದಾಟಲು ಇಚ್ಛೆಪಡು ವಷ್ಟು ಹಾಸ್ಯಾಸ್ಪದ—ಎಂದು ಚತುರ್ಮುಖನು ಅಭಿಪ್ರಾಯಪಟ್ಟಿರುವನು.[2] ಆದುದರಿಂದ ಸಂಸಾರ ವನ್ನು ದಾಟಲು ಸೇತುವೆಯಂತೆ ಉಪಕಾರಕನಾಗಿರುವವನು ಭಗವಂತನು.

೪ ಜಗತ್ತಿಗೆ ಬಂಧಕನಾಗಿರುವವನು[3]

ಮಾಯಾ] ಎನಿಸುವ ತನ್ನ ಇಚ್ಛೆ ಹಾಗೂ ಜಡಪ್ರಕೃತಿ—ಇವುಗಳಿಂದ ಜಗತ್ತನ್ನು ಬಂಧಿಸಿ, ಸಂಸಾರಬಂಧನದೊಳಗಿಡುವವನು ಭಗವಂತನೇ[4]

೫ ಜಗತ್ತು ಹೋಗಿ ತಲುಪಬೇಕಾದ ದಡದಂತೆ ಇರುವವನು.[5]

ಭಗವಂತನು ತನ್ನನ್ನು ಆರಾಧಿಸುವವರಿಗೆ ಕೊನೆಯದಾಗಿ ತಲುಪಬೇಕಾದ ಗುರಿಯಂತೆ ಇರುವನು ಎಂಬ ಅರ್ಥದಲ್ಲಿ ವಿಷು ಯಾಜಿಗಳಿಗೆ ಭಗವಂತನು 'ಸೇತು'—ಎಂದೇ ಯಮದೇವನು ಉಪದೇಶಿಸಿರುವನು[6]

---

೩ 1 ಸಂಸಾರಸಾಗರೋತ್ತಾರಣೇ ಸೇತುರಿವ ಆಲಿರಿವೇತಿ ಸೇತುಃ ।
ಜಗತಃ ಜಗತ್ಸಂಬಂಧೀ ಸೇತುಃ ಜಗತಃ ಸೇತುಃ ॥

2 ಬಾಹುಭ್ಯಾಂ ಸಾಗರಂ ತರ್ತುಂ ಕ ಇಚ್ಛೇತ ಪುಮಾನ್ ಭುವಿ। ವಾಸುದೇವಮನಾರಾಧ್ಯ ಕೋ ಮೋಕ್ಷಂ ಗಂತುಮಿಚ್ಛತಿ । —ಕೃ ಮಂ. 33

೪ 3 ಸಿನೋತಿ ಬಧ್ನಾತೀತಿ ಸೇತುಃ । 'ಷಿಞ್ ಬಂಧನೇ' । ಜಗತಃ ಸೇತುಃ ।

4 'ಬಂಧಕೋ ಭವಪಾಶೇನ .. ವಿಷ್ಣುರೇವ ನ ಸಂಶಯಃ'
—ವಿ. ತ. ವಿ

೫ 5 ಜಗತಃ ಜಗತ್ಪ್ರಾಪ್ಯತ್ವಸಂಬಂಧವಾನ್ ಸೇತುಃ ಮರ್ಯಾದಾ ಇವ ಜಗತಃ ಸೇತುಃ ।

6 'ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ....' ಕಾ ಉ. 1-7-2

...ಮರ್ಯಾದಾ ವಿಷ್ಣುಯಾಜಿನಾಮ್ । —ಕಾ. ಉ. ಭಾ.

## ಜಿಜ್ಞಾಸೆ

[ಸ್ವೀಯತ್ವೇನ ದುಃಖಾನುಭವವಿಲ್ಲ]

ಪ್ರ:- ಪರಮಾತ್ಮನು ಸರ್ವಲೋಕಗಳಿಗೂ ಹಾಗೆಯೇ ಸರ್ವವಸ್ತುಗಳಿಗೂ ಆಶ್ರಯನಾದರೆ ಸರ್ವವಸ್ತುಗಳಲ್ಲಿ ಸೇರಿದ ದುಃಖಕ್ಕೂ ಆಶ್ರಯನಾಗಬೇಕಲ್ಲವೇ? ಆದುದರಿಂದ ಪರಮಾತ್ಮನಿಗೆ ದೋಷಿತ್ವಾಪಾದಕವಾದ ಜಗತಃ ಸೇತುತ್ವವು ಹೇಗೆ ಅಂಗೀಕಾರಾರ್ಹ?

ಉ:- ಸರ್ವಾಧಾರತಾಪ್ರಯೋಜಕ ಸ್ವರೂಪಸಂಬಂಧದಿಂದ ಪರಮಾತ್ಮನಿಗೆ ದುಃಖಾಶ್ರಯತ್ವ ವಿರುವದು ದೋಷವಲ್ಲ. ಸ್ವನೈಚ್ಛ್ಯಾಪಾದಕತ್ವರೂಪಸ್ವೀಯತ್ವೇನ ದುಃಖಾನುಭವವು ಪರಮಾತ್ಮನಿಗೆ ಸರ್ವಾಧಾರತಾಪ್ರಯೋಜಕ ಸ್ವರೂಪ ಭಿನ್ನ ಸ್ವರೂಪ ಸಂಬಂಧದಿಂದ ಇಲ್ಲವಾದುದರಿಂದ ಅವನು ದುಃಖಾಶ್ರಯನವಲ್ಲ ಎಂದು ಹೇಳುವದು ಕೂಡುತ್ತದೆ.



## ೨೪೯ ಸತ್ಯಧರ್ಮಪರಾಕ್ರಮಃ

೧ ಪಾರಮಾರ್ಥಿಕ ಸತ್ಯಗಳಾದ ಧರ್ಮ ಮತ್ತು ಪರಾಕ್ರಮ ಇವುಗಳು ಉಳ್ಳವನು.[1]

೨ ಸೃಷ್ಟಿಕರ್ತೃತ್ವಾದಿ ಧರ್ಮಗಳಿರುವ ಪ್ರಯುಕ್ತ ಸತ್ಯ ಎನಿಸಿರುವ ತನ್ನ ಸ್ವರೂಪಾತ್ಮಕಗಳಾದ ಧರ್ಮ ಮತ್ತು ಪರಾಕ್ರಮ ಇವುಗಳು ಉಳ್ಳವನು.[2]

೩ ಶೋಭನಗಳಾದ ಧರ್ಮ ಮತ್ತು ಪರಾಕ್ರಮ ಇವುಗಳು ಉಳ್ಳವನು.[3]

---

೧ 1 ಧರ್ಮಶ್ಚ ಪರಾಕ್ರಮಶ್ಚ ಧರ್ಮಪರಾಕ್ರಮೌ । ಸತ್ಯೌ ಪಾರಮಾರ್ಥಿಕಸತ್ಯಭೂತೌ ಧರ್ಮಪರಾಕ್ರಮೌ ಯಸ್ಯ ಸಃ ಸತ್ಯಧರ್ಮಪರಾಕ್ರಮಃ ।

೨ 2 ಸೃಷ್ಟಿಕರ್ತೃತ್ವಾದಿನಾ ಸತ್ಯಃ ಭಗವಾನ್ । ತತ್ಸರೂಪಾತ್ಮಕೌ ಧರ್ಮಪರಾಕ್ರಮೌ ಯಸ್ಯ ಸಃ ಸತ್ಯಧರ್ಮಪರಾಕ್ರಮಃ ।

೩ 3 ಸತ್ಯೌ ಸಾಧೂ ಧರ್ಮಪರಾಕ್ರಮೌ ಯಸ್ಯ ಸಃ ಸತ್ಯಧರ್ಮಪರಾಕ್ರಮಃ । ಸಾಧುತ್ವಂ ಸತ್ಯತಾ ಪ್ರೋಕ್ತಾ... ಶಬ್ದನಿರ್ಣಯ (ಐ, ಉ. ಭಾ. 2-1-2-14)

ಸೃಷ್ಟಿಕರ್ತೃತ್ವಾದಿ ಧರ್ಮಗಳಿರುವುದರಿಂದ ಭಗವಂತನು ಸತ್ಯ ಎನಿಸುವನು[1] ಅವನ ಸೃಷ್ಟಿ-ಕರ್ತೃತ್ವಾದಿ ಧರ್ಮಗಳೂ, ಪರಾಕ್ರಮವೂ ಅವನ ಸ್ವರೂಪಾತ್ಮಕಗಳೇ ಆಗಿವೆ[2] ಆದುದರಿಂದ ಅವನ ವೀರ್ಯ ಬಲಾದಿಗಳು ಅವನಂತೆಯೇ ಜ್ಞಾನಾನಂದಾತ್ಮಕಗಳಾಗಿದ್ದು[3], ಶೋಭನಗಳೆನಿಸಿವೆ[4]. ಅವುಗಳು ಅವನಂತೆಯೇ ಪಾರಮಾರ್ಥಿಕ ಸತ್ಯಗಳಾಗಿವೆ[5]

೪ ಸಜ್ಜನರಿಗೆ ಹಿತಕಾರಿ, ಸಜ್ಜನರ ಧಾರಕ, ನಿರ್ದುಷ್ಟ, ಗುಣಪೂರ್ಣನಾದವನು ಹಾಗೂ ವಿಶ್ವವನ್ನು ವ್ಯಾಪಿಸಿರುವವನು[6]

೫ ಸತ್ಯವಚನವುಳ್ಳವನು ಅದವಾ ಮೂರ್ತಾಮೂರ್ತಜಗತ್ತಿಗೆ ಆಶ್ರಯನಾಗಿರುವವನು, ಧಾರಕನಾಗಿರುವವನು, ಜನಾಗಿ ರಮಿಸುವವನು[7]

---

1 ಸತ್ಯನಾಮ್ನಃ (೧೦೯, ೨೧೯, ೮೬೯) ವ್ಯಾಖ್ಯಾನೇ ಏತದ್ ವಿವೃತಮ್ ।

2 ಯ್ಯೇಷಾ ಚೇಷ್ಟಾ ಭಗವತೋ ಯಚ್ಚ ಜ್ಞಾನಂ ಪರಾತ್ಮನಃ । ತತ್ ಸರ್ವಂ ಭಗವಾನೇವ ಯೇ ಚ ಧರ್ಮಾ ಬಲಾದಯಃ -ಅಥ ಉ. ಭಾ. (1-3-10)

3 ಜ್ಞಾನವೀರ್ಯೋ ಜ್ಞಾನಬಲೋ ಜ್ಞಾನಾನಂದ ಉದೀರಿತಃ ।
-ಬೃಹತ್ಸಂಹಿತಾ (ಭಾಗ. ತಾ. ನಿ. 2-9-22)

4 'ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ । ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃ ಪರಮಾಕ್ಷರಃ' -ಬ್ರ. ಸೂ. ಭಾ 2-2-41

5 '. ಸತ್ಯಸ್ತ್ವೇ ಅಸ್ಯ ಮಹಿಮಾ . ' -ಮ. ಭಾರ ತಾ ನಿ. 1-67

* 'ಸತ್ಯಾ ವಿಷ್ಣೋರ್ಗುಣಾಸ್ಸರ್ವೇ ' -ಮ ಭಾರ. ತಾ ನಿ. 1-68

೪ 6 ಸತಾಮತ್ಯಂತಂ ಹಿತಃ ಸತ್ಯಃ । ಸತಾಂ ಧಾರಕಃ ಧರ್ಮಃ । 'ನಿರ್ದೋಷಗುಣಪೂರ್ಣ-ತ್ವಾತ್ ಪರಂ ಚಾಹುರ್ಜನಾರ್ದನಮ್'-ತಂತ್ರಭಾಗವತ (ಭಾಗ. ತಾ ನಿ. 1-1-1) ವಿಶ್ವಂ ಆ ಸಮ್ಯಕ್ ಕ್ರಮತೇ ವ್ಯಾಪ್ನೋತೀತಿ ಆಕ್ರಮಃ ।

೫ 7 ಸತ್ಯವಚನಾದ್ವಾ ಮೂರ್ತಾಮೂರ್ತಜಗದಾಶ್ರಯತ್ವಾದ್ವಾ ಸತ್ಯಃ । ಧಾರಕತ್ವಾದ್ಧರ್ಮಃ ಪರಾಕ್ ರಮಂತ ಇತಿ ಪರಾಕ್ರಮಃ । ಸತ್ಯಶ್ಚಾಸೌ ಧರ್ಮಶ್ಚಾಸೌ ಪರಾಕ್ರಮಶ್ಚೇತಿ ।
-ಸ. ಸಂ.

ತಾನು ಎಂದೂ ಸುಳ್ಳು ಹೇಳಿಲ್ಲ ಮೂರ್ತಾಮೂರ್ತ ಪ್ರಪಂಚ ತನ್ನಿಂದ ನಿಯಮಿತವಾಗಿದೆ. ಈ ಕಾರಣದಿಂದ ತನ್ನನು ಋಷಿಗಳು ಸತ್ಯ ಎಂದು ತಿಳಿಯುವರೆಂದು ಶ್ರೀಕೃಷ್ಣನು ಅರ್ಜುನನಿಗೆ ತಿಳಿಸಿರುವನು[1]

೬ ಕಲ್ಯಾಣಗುಣಗಳುಳ್ಳ ತನ್ನಲ್ಲಿ ಆಸಕ್ತರಾದವರಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವವನು[2]

ಭಗವಂತನಲ್ಲಿ ಕಲ್ಯಾಣಗುಣಗಳಿರುವುದರಿಂದ ಅಗ್ನಿನಾಮಕನಾದ ಅವನನ್ನು 'ಸತ್ಯಧರ್ಮಾ' ಎಂದೇ ವಿಶೇಷಿಸಲಾಗಿದೆ[3] ಯಾರು ಪ್ರೀತಿಯಿಂದ ತನ್ನಲ್ಲಿ ಇರುವರೋ ತಾನು ಅವರಲ್ಲಿ ಪ್ರೀತಿಯಿಂದ ಇರುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[4]

೭ ಸತ್ಯನಾಮಕ ಭಗವಂತನನ್ನು ಧರಿಸಿಕೊಂಡಿರುವ ಭಕ್ತರಿಗೆ ಸಾಮರ್ಥ್ಯವನ್ನು ಅನುಗ್ರಹಿಸುವವನು[5]

---

1 'ನೋಕ್ತಪೂರ್ವಂ ಮಯಾ ಕ್ಷುದ್ರಮಲೀಕಂ ವಾ ಕದಾಚನ । ಋತಾ ಬ್ರಹ್ಮಸುತಾ ಸಾ ಮೇ ಸತ್ಯಾ ದೇವೀ ಸರಸ್ವತೀ । ಸಚ್ಚಾಸಚ್ಚೈವ ಕೌಂತೇಯ ಮಯಾಽಽವೇಶಿತಮಾತ್ಮನಿ । ಪೌಷ್ಕರೇ ಬ್ರಹ್ಮಸದನೇ ಸತ್ಯಂ ಮಾಮೃಷಯೋ ವಿದುರಿ' (ಮ. ಭಾರ. ಶಾಂತಿ 342-75,76) ತಿ ಮೋಕ್ಷಧರ್ಮೋಕ್ತಿಃ (ಸ. ಸಂ )

೬ 2 ಸತ್ಯಾಃ ಸಾಧವಃ ಧರ್ಮಾಃ ಗುಣಾಃ ಯಸ್ಮಿನ್ ಸಃ ಸತ್ಯಧರ್ಮಾ । ತಸ್ಮಿನ್ ಪರಾಃ ಸತ್ಯಧರ್ಮಪರಾಃ । ತೇಷು ಆ ಸಮ್ಯಕ್ ಕ್ರಮತೇ ಸನ್ನಿಧತ್ತ ಇತಿ ಸತ್ಯಧರ್ಮಪರಾಕ್ರಮಃ ।

3 ಕವಿಮಗ್ನಿಮುಪಸ್ತುಹಿ ಸತ್ಯಧರ್ಮಾಣಮಧ್ವರೇ । -ಋ. ವೇ. 12-7

'ಸತ್ಯಧರ್ಮಾ ಷಡ್ಗುಣಭೃತ್ ..' -ಋ ಭಾ.

4 'ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್' -ಗೀ 9-29

ಪ್ರೀತ್ಯಾ ಮಯಿ ತೇ । -ಗೀ. ತಾ.

ಯೇ ಮಯಿ ಪ್ರೀತ್ಯಾ ವರ್ತಂತೇ ತೇಷ್ವಹಂ ಪ್ರೀತ್ಯಾ ವರ್ತ ಇತ್ಯರ್ಥಃ । -ಗೀ. ವಿ.

೭ 5 ಸತ್ಯಂ ಭಗವಂತಂ ಹೃದಯೇ ಧಾರಯಂತೀತಿ ಸತ್ಯಧರ್ಮಾಃ । ಸತ್ಯಧರ್ಮಾಣಾಂ ಪರಾಕ್ರಮಃ ಸಾಮರ್ಥ್ಯಂ ಯಸ್ಮಾತ್ ಸಃ ಸತ್ಯಧರ್ಮಪರಾಕ್ರಮಃ । 'ಪರಾಕ್ರಮೋ ವಿಕ್ರಮೇ ಸ್ಯಾತ್ ಸಾಮರ್ಥ್ಯೋದ್ಯೋಗಯೋರಪಿ' -ವಿಶ್ವಃ ।

ಭಕ್ತರಿಗೆ ವಿಶೇಷವಾದ ಸಾಮರ್ಥ್ಯವನ್ನು ಅನುಗ್ರಹಿಸುವವನು ಭಗವಂತನು. ಆದ್ದರಿಂದಲೇ ಸಾಧಕನು ಭಗವಂತನಲ್ಲಿ 'ಸತ್ಯಧರ್ಮ' ಎನಿಸಿರುವ ತನಗೆ ಅವನನ್ನು ಕಾಣಲು ಸೂರ್ಯ ಮಂಡಲವನ್ನು ಸರಿಸಿ ಅನುಕೂಲಮಾಡಿಕೊಡಲು ಪ್ರಾರ್ಥಿಸಿಕೊಂಡಿರುವನು[1]

೮ ಸತ್ಯ ಎನಿಸುವ ವಾಯುದೇವ ಚತುರ್ಮುಖ ಹಾಗೂ ಸೂರ್ಯ ಇವರಿಗೆ ಧರ್ಮಗಳನ್ನೂ ಸಾಮರ್ಥ್ಯವನ್ನೂ ಅನುಗ್ರಹಿಸುವವನು[2]

## ಜಿಜ್ಞಾಸೆ

[ಸತ್ಯದಲ್ಲಿ ಪ್ರಕಾರಗಳಿಲ್ಲ]

ಪ್ರ – ಕೆಲವರು ಪಾರಮಾರ್ಥಿಕಸತ್ಯ, ವ್ಯಾವಹಾರಿಕಸತ್ಯ, ಪ್ರಾತಿಭಾಸಿಕಸತ್ಯ ಎಂದು ಸತ್ಯದಲ್ಲಿ ಮೂರು ಪ್ರಕಾರಗಳು ಇವೆ ಎಂದು ಹೇಳುತ್ತಾರೆ ಆ ಮೂರು ಪ್ರಕಾರಗಳನ್ನು ಒಪ್ಪಬೇಕೇ?

ಉ - ಸತ್ಯದಲ್ಲಿ ಮೂರು ಪ್ರಕಾರಗಳನ್ನು ಒಪ್ಪಬಾರದು ಸತ್ಯದಲ್ಲಿ ಮೂರು ಪ್ರಕಾರಗಳು ಇದ್ದರೆ ಸತ್ಯಧರ್ಮಪರಾಕ್ರಮಃ ಇತ್ಯಾದಿ ಸ್ಥಳಗಳಲ್ಲಿ ಧರ್ಮಪರಾಕ್ರಮಾದಿಗಳನ್ನು ಸತ್ಯ ಎಂದು ಹೇಳಿದಾಗ ಇದು ಎಂತಹ ಸತ್ಯ ಎಂಬ ಆಕಾಂಕ್ಷಾ ಹುಟ್ಟುತ್ತದೆ ಆ ಆಕಾಂಕ್ಷೆಗೆ ಪರಿಹಾರವು ಇಲ್ಲದ ಕಾರಣ ನ್ಯೂನತಾ ದೋಷವು ಉಂಟಾಗುತ್ತದೆ ಶಾಸ್ತ್ರಗಳಲ್ಲಿ ಎಲ್ಲ ಕಡೆಗಳಲ್ಲಿ ಸತ್ಯಕ್ಕೆ ವಿಶೇಷಣವನ್ನು ಹಾಕದೆ ಸತ್ಯ ಎಂದು ಇಷ್ಟೇ ಹೇಳುವದು ಕಾಣುತ್ತದೆ. ಅಲ್ಲಿ ಎಲ್ಲ ಸ್ಥಳಗಳಲ್ಲಿ ಈ ಸತ್ಯವು ಯಾವ ಪ್ರಕಾರದ್ದು ಎಂಬ ಸಂಶಯವು ಇದೆ ಎಂದು ಯಾರೂ ಹೇಳುವದಿಲ್ಲ. ಇದರಿಂದ ಸತ್ಯದಲ್ಲಿ ಮೂರು ಪ್ರಕಾರಗಳು ಇಲ್ಲವೆಂದು ಸಿದ್ಧವಾಗುತ್ತದೆ



---

1 'ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ' -ಈ ಉ. 2-1

೮ 2 'ದೇವತಾತ್ರಯಮನ್ಯಚ್ಚ ಪೃಥಕ್ ಸತ್ಯಮಿತೀರ್ಯತೇ । ಶೇಷವೀಂದ್ರಶಿವಾದಿಭ್ಯ ಉತ್ತಮತ್ವಾತ್ ಸದೈವ ಹಿ । ವಾಯುಃ ಸದಿತಿ ಸಂಪ್ರೋಕ್ತೋ ಜೀವೇಷು ತು ಸುಪೂರ್ಣತಃ । ತೀತಿ ಬ್ರಹ್ಮಾ ಸಮುದ್ದಿಷ್ಟಃ . . । ಯಮಿತ್ಯಾದಿತ್ಯ ಉದ್ದಿಷ್ಟೋ ಗಮಯೇದ್ ಯತ್ ಪ್ರಕಾಶಯನ್ । ದೇವತಾತ್ರಯಮೇತತ್ತು ಸಹಿತಂ ಸತ್ಯಮುಚ್ಯತೇ' (ಐ. ಉ. ಭಾ. 1-4-13) ಇತಿ ಸತ್ಯಂ ವಾಯುಃ ಬ್ರಹ್ಮಾ ಆದಿತ್ಯಶ್ಚ ತೇಷಾಂ ಧರ್ಮಃ ಪರಾಕ್ರಮಃ ಸಾಮರ್ಥ್ಯಂ ಚ ಯಸ್ಮಾತ್ ಸಃ ಸತ್ಯಧರ್ಮಪರಾಕ್ರಮಃ ।

ಭೂತಭವ್ಯಭವನ್ನಾಥಃ ಪವನಃ ಪಾವನೋಽನಲಃ ।

ಕಾಮಹಾ ಕಾಮಕೃತ್ ಕಾಂತಃ ಕಾಮಃ ಕಾಮಪ್ರದಃ ಪ್ರಭುಃ ॥ ೩೨ ॥

೨೯೦ ಭೂತಭವ್ಯಭವನ್ನಾಥಃ

೧ ಹಿಂದಿನ, ಮುಂದಿನ ಹಾಗೂ ಈಗಿನ ಒಡೆಯನು.[1]

೨ ಹಿಂದೆ ಇದ್ದ, ಈಗ ಇರುವ ಹಾಗೂ ಮುಂದೆ ಬರುವ ಸಮಸ್ತ ವಸ್ತುಗಳ ಒಡೆಯ.[2]

ಶಾಶ್ವತ ಎಂದೆನಿಸಿರುವ ಭಗವಂತನ ಮಹಾಸಾಮರ್ಥ್ಯ, ಸಾರ್ವಜ್ಞ್ಯ, ಸ್ವಾತಂತ್ರ್ಯ, ಪೂರ್ಣತ್ವ ಹಾಗೂ ಸರ್ವೋಪಜೀವ್ಯತ್ವ—ಇವುಗಳನ್ನೊಳಗೊಂಡ ಈಶತ್ವವು ಸಹಜವಾಗಿಯೇ ಇರುವಂತಹದ್ದು, ಎಂದೆಂದೂ ಬದಲಾಗುವಂತಹದ್ದಲ್ಲ—ಎಂದು ಮಹಾವಿಷ್ಣು ಪುರಾಣ ಪ್ರತಿಪಾದಿಸಿದೆ.[3] ಇಂತಹ ವ್ಯಕ್ತಿ ಹಿಂದೆಯೂ ಇದ್ದಿಲ್ಲ, ಮುಂದೆಯೂ ಇರಲಾರ[4] ಋಗ್ವೇದದಲ್ಲಿ ಭಗವಂತನನ್ನು ಹೇ ವಿಷ್ಣೋ! ಎಂದು ಸಂಬೋಧಿಸಿ, ನಿನ್ನ ಮಹಿಮೆಯ ಪರಮಾವಧಿಯನ್ನು ಈಗ ಹುಟ್ಟಿರುವವ

---

೧ 1 ಭೂತಶ್ಚಾಸೌ ಭವ್ಯಶ್ಚ ಭೂತಭವ್ಯಃ ಭೂತಭವ್ಯಶ್ಚಾಸೌ ಭವನ್ ಚ ಭೂತಭವ್ಯಭವನ್। ಭೂತಭವ್ಯಭವನ್ ಚಾಸೌ ನಾಥಶ್ಚ ಭೂತಭವ್ಯಭವನ್ನಾಥಃ ।

* ಏವಂಪ್ರಾಯಂ ಸ್ವಾಮ್ಯಮೈಶ್ವರ್ಯಂ ವಾ ನ ಕೇವಲಮದ್ಯ ಕಿಂತು ತ್ರಿಕಾಲೇಷ್ವಿತಿ-ಭೂತಭವ್ಯಭವನ್ನಾಥಃ । -ಶ ಭ.

೨ 2 ಭೂತಾನಿ ಚ ಭವ್ಯಾನಿ ಚ ಭವಂತಿ ಚ ಭೂತಭವ್ಯಭವಂತಿ । ತೇಷಾಂ ನಾಥಃ ಈಶ್ವರಃ ।

3 ಅಲ್ಪಶಕ್ತಿರಸಾರ್ವಜ್ಞ್ಯಂ ಪಾರತಂತ್ರ್ಯಮಪೂರ್ಣತಾ । ಉಪಜೀವಕತ್ವಂ ಜೀವತ್ವಮೀಶತ್ವಂ ತದ್ವಿಪರ್ಯಯಃ । ಸ್ವಾಭಾವಿಕಂ ತಯೋರೇತನ್ನಾನ್ಯಥಾ ಸ್ಯಾತ್ ಕದಾಚನ । ವದಂತಿ ಶಾಶ್ವತಾವೇತಾವತ ಏವ ಮಹಾಜನಾಃ

—ಮಹಾವಿಷ್ಣುಪುರಾಣ (ಗೀ. ತಾ. 2-20)

4 ನೈತಾದೃಶಃ ಕ್ವಚ ಬಭೂವನ ಚೈವ ಭಾವ್ಯೋ ನಾಸ್ತ್ಯುತ್ತರಃ......

—ಮ. ಭಾರ. ತಾ. ನಿ. 1-12

ನಾಗಲೀ, ಹಿಂದೆ ಹುಟ್ಟಿದ್ದವನಾಗಲೀ, ಮುಂದೆ ಹುಟ್ಟಲಿರುವವನಾಗಲೀ ಹೊಂದುವುದಿಲ್ಲ— ಎಂದು ನಿವೇದಿಸಿಕೊಳ್ಳಲಾಗಿದೆ[1] ಆದ್ದರಿಂದ ಮೂರು ಕಾಲದಲ್ಲೂ ಅವನೇ ಒಡೆಯನು ಬೃಹದಾರಣ್ಯಕೋಪನಿಷತ್ತಲ್ಲಿ, ಭಗವಂತನು ಅನಾದಿಯಾಗಿ ಅಧಿಪತಿಯಾಗಿ ಇರುವವನು, ಹೊರತು ಅವನ ಆಧಿಪತ್ಯವು ಆದಿವುಳ್ಳದ್ದಲ್ಲ ಎಂಬ ಅಭಿಪ್ರಾಯದಲ್ಲಿ 'ಭೂತಾಧಿಪತಿ' ಎಂದು ಅವನನ್ನು ವಿಶೇಷಿಸಲಾಗಿದೆ[2]

೩ ಹಿಂದಿನ, ಮುಂದಿನ ಹಾಗೂ ಈಗಿನ ಪ್ರಾಣಿಗಳಿಂದ (ಬೇರೆ ಬೇರೆ ಪುರುಷಾರ್ಥಕ್ಕಾಗಿ) ಬೇಡಲ್ಪಡುವವನು[3]

ಭಗವಂತನೇ ಕಾಲತ್ರಯದಲ್ಲೂ ಒಡೆಯನಾಗಿರುವುದರಿಂದ ಬೇರೆ ಬೇರೆ ಪುರುಷಾರ್ಥಕ್ಕಾಗಿ ಮೂರು ಕಾಲದವರೂ ಅವನನ್ನೇ ಮುಖ್ಯವಾಗಿ ಬೇಡುವರು

೪ ಹಿಂದಿನವರನ್ನೂ, ಮುಂದಿನವರನ್ನೂ, ಈಗಿನವರನ್ನೂ, ಸಂಸಾರ ರೋಗದಿಂದ ಹಾಗೂ ಇತರ ರೋಗಗಳಿಂದ ಪೀಡಿತರನ್ನಾಗಿ ಮಾಡುವವನು.[4]

ಸಂಸಾರ ರೋಗವನ್ನು ಮುಖ್ಯವಾಗಿ ಭಗವಂತನೇ ನೀಡುವವನು. ಅಲ್ಲದೆ, ಪ್ರಾರಬ್ಧ ಕರ್ಮಾನುಸಾರ ಶುಭಾಶುಭ ಫಲಗಳನ್ನು ಕೊಡುವ ಕರ್ಮಾಧ್ಯಕ್ಷನಾದ ಅವನು ಜೀವಾತ್ಮರಿಗೆ ಅವರವರ ಪ್ರಾರಬ್ಧಕರ್ಮಾನುಗುಣವಾಗಿ ಜ್ವರಾದಿ ರೋಗಗಳನ್ನೂ ನೀಡುವನು.

---

1 'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ'
—ಋ ವೇ 7-99-12

2 ಏಷ ಸರ್ವೇಶ್ವರಃ ಏಷ ಭೂತಾಧಿಪತಿರೇಷ ಭೂತಪಾಲಃ ।
—ಬೃ. ಉ. 6-4-22

ಭೂತ ಏವಾಧಿಪತಿಃ । ನಾಸ್ಯಾಧಿಪತ್ಯಮಾದಿವತ್ । —ಬೃ. ಉ ಭಾ.

೩ 3 ಭೂತಾಶ್ಚ ಭವ್ಯಾಶ್ಚ ಭವಂತಶ್ಚ ಭೂತಭವ್ಯಭವಂತಃ। ತೈಃ ನಾಥ್ಯತೇ ಪುರುಷಾರ್ಥಾಯ ಯಾಚ್ಯತ ಇತಿ ಭೂತಭವ್ಯಭವನ್ನಾಥಃ । 'ನಾಥೃ ಯಾಂಚಾಯಾಂ' ।

* ಭೂತಭವ್ಯಭವಂತಃ ನಾಥಾಃ ಯಾಚಕಾಃ ಯಸ್ಯ ಸಃ ।
—ವಾ ರಾ.

೪ 4 ಭೂತಭವ್ಯಭವತಃ ನಾಥತಿ ಉಪತಪತೀತಿ ಭೂತಭವ್ಯಭವನ್ನಾಥಃ । 'ನಾಥೃ ಉಪತಾಪೇ' । ಉಪತಾಪೋ ರೋಗಪ್ರಯುಕ್ತಪೀಡಾ ।

೫ ಕಾಲತ್ರಯಂದ ಪ್ರಾಣಿಗಳನ್ನೂ (ಅವುಗಳಿಗೆ ಸೃಷ್ಟ್ಯಾದಿ ನೀಡುವುದಕ್ಕಾಗಿ) ತನಗೆ ಬೇಕೆಂದು ಇಚ್ಛಿಸುವವನು.[1]

ನಾಶಶಾಲಿಗಳಾದ ಭಾವ ಪದಾರ್ಥಗಳಿಗೆ ಜನ್ಮಾದಿಗಳನ್ನು ನೀಡಲು ಇಚ್ಛಿಸುವದರಿಂದಲೂ ತಾನು 'ವಿಷ್ಣು' ಎನಿಸಿರುವೆನೆಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿರುವನು.[2]

೬ ಪರಿಪೂರ್ಣನಾದವನು, ಮಂಗಲ ಸ್ವರೂಪಿ, ಯಾವಾಗಲೂ ಇರುವವನು. ಮತ್ತು ಎಲ್ಲದರ ಒಡೆಯನು.[3]

೭ ಭೂಮಿಯಲ್ಲಿ ಹೆಣೆಯಲ್ಪಟ್ಟಂತೆ ಇರುವ ನಿತ್ಯಸಂಸಾರಿಗಳು, ಜ್ಞಾನ ಶೂನ್ಯರಾದವರು, ಹಾಗೂ ಭಕ್ತರು—ಇವರಿಗೆ ಒಡೆಯನಾದವನು ಅಥವಾ ಇವರಿಂದ ಬೇಡಲ್ಪಡುವವನು.[4]

೮ ಮೂರು ಕಾಲದ ಪ್ರಾಣಿಗಳೂ (ತಮ್ಮ ತಮ್ಮ ಕಾರ್ಯನಿರ್ವಹಣೆಯಲ್ಲಿ) ಸಮರ್ಥರಾಗುವಂತೆ ಅನುಗ್ರಹಿಸುವವನು.[5]

---

೫ 1 ಭೂತಭವ್ಯಭವದ್ಭ್ಯಃ ನಾಥತೇ ಆಶಾಸ್ತೇ 'ಇಮೇ ಮೇ ಭೂಯಾಸುಃ' ಇತಿ ಇಚ್ಛತೀತಿ ಭೂತಭವ್ಯಭವನ್ನಾಥಃ । 'ನಾಥೃ ಆಶಿಷಿ' ।

2 ಅಧಿಭೂತನಿವಿಷ್ಟಶ್ಚ ತದಿಚ್ಛಾಶ್ಚಾಸ್ಮಿ ಭಾರತ । –ಗೀ ಭಾ. 10-22

ತದಿಚ್ಛಃ ಅಧಿಭೂತಸ್ಯ ಜನ್ಮಾದೀಚ್ಛಃ । –ಪ್ರ. ದೀ.

೬ 3 ಪ್ರಭೂತತ್ವಾತ್ ಪರಿಪೂರ್ಣತ್ವಾತ್ ಭೂತಃ । ಮಂಗಲಸ್ವರೂಪತ್ವಾತ್ ಭವ್ಯಮ್ । 'ಭಾವುಕಂ ಭವಿಕಂ ಭವ್ಯಂ ' । ಭವತಿ ಸರ್ವದಾ ವರ್ತತ ಇತಿ ಭವನ್ । ಸರ್ವಸ್ವಾಮಿತ್ವಾತ್ ನಾಥಃ ।

೭ 4 ಭುವಿ ಊತಾ ಭೂತಾಃ ಭವಃ ಸಂಸಾರೋ ಯೇಷಾಮಸ್ತೀತಿ ಭಾವಿನೋಽಭಾ ಜ್ಞಾನಶೂನ್ಯಾ ವನೋ ಭಕ್ತಾಃ 'ವನ ಸಂಭಕ್ತೌ' ಇತ್ಯತಃ ಕ್ವಿಪ್' । ಭೂತಭವ್ಯಭವನಸ್ತೇಷಾಂ ನಾಥಸ್ತೈ ನಾಥ್ಯತ ಇತಿ ವಾ ಭೂತಭವ್ಯಭವನ್ನಾಥಃ । –ಸ ಸಂ.

೮ 5 ಭೂತಭವ್ಯಭವಂತಃ ಪ್ರಾಣಿನಃ ನಾಥಾಃಸ್ವಸ್ವವ್ಯಾಪಾರನಿರ್ವಾಹೇ ಸಮರ್ಥಾಃ ಯಸ್ಮಾತ್ ಸಃ ಭೂತಭವ್ಯಭವನ್ನಾಥಃ ।

ಪ್ರಾಣಿಗಳನ್ನು ಸೃಷ್ಟಿಸಿದ ಭಗವಂತನು ಆಯಾಯ ರೂಪದಿಂದ ಅವುಗಳ ಒಳಹೊಕ್ಕು ಅವುಗಳನ್ನು ಪ್ರೇರಿಸುತ್ತಿರುವುದರಿಂದಷ್ಟೇ ಅವು ಬೇರೆ ಬೇರೆ ಚಟುವಟಿಕೆಗಳನ್ನು ನಿರ್ವಹಿಸುತ್ತಿವೆ.

## ಜಿಜ್ಞಾಸೆ

[ಪೂರ್ಣನಾಗುತ್ತಾನೆಂದಷ್ಟೇ]

ಪ್ರ - ಮುಕ್ತರು ಬ್ರಹ್ಮಸ್ವರೂಪರೇ ಆಗುತ್ತಾರೆಂದು 'ಬ್ರಹ್ಮವಿತ್ ಬ್ರಹ್ಮೈವ ಭವತಿ' ಎಂಬ ಶ್ರುತಿಯ ಆಧಾರದಿಂದ ಕೆಲವರು ಹೇಳುತ್ತಾರೆ. ಇದು ನಿಜವೋ?

ಉ – ಭೂತಭವ್ಯಭವತ್ಪ್ರಭುಃ ಎಂಬ ನಾಮ ಮುಂದಿನವರಿಗೆಲ್ಲರಿಗೂ ಪರಮಾತ್ಮನು ಸ್ವಾಮಿ ಎಂದು ಹೇಳುತ್ತದೆ. ಮುಕ್ತರು ಭವ್ಯರು ಅವರಿಗೆ ಪರಮಾತ್ಮನು ಸ್ವಾಮಿ ಎಂದು ಈ ನಾಮದ ಅಭಿಪ್ರಾಯ ಆದುದರಿಂದ ಮುಕ್ತರು ಬ್ರಹ್ಮ ಸ್ವರೂಪರಾಗುತ್ತಾರೆಂದು ಹೇಳಬಾರದು 'ಬ್ರಹ್ಮೈವ ಭವತಿ' ಎಂದರೆ ಪೂರ್ಣನೇ ಆಗುತ್ತಾನೆಂದು ಅರ್ಥ. ಅವರವರ ಯೋಗ್ಯತಾನುಸಾರಿ ಪೂರ್ಣತ್ವವು ಜೀವರಿಗೆ ಮುಕ್ತಿಯಲ್ಲಿ ಇರುವದು



## ೨೯೧ ಪವನಃ

೧ ಪಾಲಕರಿಂದಲೂ ಸೇವ್ಯನಾಗಿರುವವನು [1]

ತತ್ತ್ವಾಭಿಮಾನಿ ದೇವತೆಗಳು ಜಗತ್ತಿನ ಅವಾಂತರ ಪಾಲಕರು ಇಂತಹವರೂ ತಮ್ಮ ರಕ್ಷಣೆಗಾಗಿ, ವಿಕಾಸಕ್ಕಾಗಿ ಭಗವಂತನನ್ನು ಭಜಿಸುವರು ಸೃಷ್ಟಿಯ ಪ್ರಾರಂಭದಲ್ಲಿ ತತ್ತ್ವಾಭಿಮಾನಿ ದೇವತೆಗಳು, ತಮ್ಮಿಂದ ಯಾವ ಕಾರ್ಯಸಾಧನೆಯನ್ನು ನಡೆಸಲು ಸಂಕಲ್ಪಿಸಿ ಭಗವಂತನು ತಮ್ಮನ್ನು ಸೃಷ್ಟಿಸಿರುವನೋ, ಅಂತಹ ಭಗವಂತನು ತಮಗೆ ಜ್ಞಾನಶಕ್ತಿ, ಕ್ರಿಯಾಶಕ್ತಿಯನ್ನು ಕೊಟ್ಟು ತಮ್ಮ ಮೂಲಕ ಕಾರ್ಯಸಾಧನೆ ನಡೆಯುವಂತೆ ಅನುಗ್ರಹಿಸಬೇಕೆಂದು ಅವನಲ್ಲೇ ಪ್ರಾರ್ಥಿಸಿಕೊಂಡಿರುವರು.[2]

---

೧ 1 ಪಾಂತೀತಿ ಪಾಃ । 'ಪಾ ರಕ್ಷಣೇ' ಕ್ವಿಪ್ । ಪಾಭಿಃ ಪಾಲಕೈಃ ವನನೀಯತ್ವಾದ್ಭಜನೀಯತ್ವಾದ್ ಪವನಃ । -ಗೀ ವಿ. (10-31)

2 'ತತ್ ತೇ ವಯಂ ಲೋಕಸಿಸೃಕ್ಷಯಾऽದ್ಯ ತ್ವಯಾ ವಿಸೃಷ್ಟಾಸ್ತ್ರಿಭಿರಾತ್ಮಭಿಃ ಸ್ಮ । ಸರ್ವೇ ವಿಯುಕ್ತಾಃ ಸ್ವವಿಹಾರತಂತ್ರಂ ನ ಶಕ್ನುಮಸ್ತತ್ ಪ್ರತಿಹರ್ತವೇ ತೇ ॥ ತತೋ ವಯಂ ಸತ್ಪ್ರಮುಖಾ ಯದರ್ಥೇ ಬಭೂವಿಮಾऽತ್ಮನ್ ಕರವಾಮ ಕಿಂ ತೇ। ತ್ವಂ ನಃ ಸ್ವಚಕ್ಷುಃ ಪರಿದೇಹಿ ಶಕ್ತ್ಯಾ ದೇವ ಕ್ರಿಯಾರ್ಥೇ ಯದನುಗ್ರಹಾಣಾಂ'

-ಭಾಗ. 3-6-25,26

ತತ್ತ್ವಾಭಿಮಾನಿಗಳ ಪಾಲಿಗೂ ಭಗವಂತನು ಎಷ್ಟರಮಟ್ಟಿಗೆ ಸೇವ್ಯನಾಗಿರುವನೆಂಬುದು ಇದರಿಂದ ಸ್ಪಷ್ಟವಾಗುವುದು

ನಮ್ಮನ್ನು ನೇರವಾಗಿ ರಕ್ಷಿಸುವವರು ಕ್ಷತ್ರಿಯರು, ರಾಜರು, ಅಂತಹವರಿಂದಲೂ ಭಗವಂತನು ಸೇವ್ಯನಾಗಿರುವನು ಶ್ರೀಕೃಷ್ಣನು ಬ್ರಾಹ್ಮಣರಿಂದ ಯಜ್ಞಗಳ ಮೂಲಕ ಪೂಜಿತನಾಗಿರುವಂತೆ, ವಿಕ್ರಮಶಾಲಿಗಳಾದ ರಾಜರುಗಳಿಂದಲೂ ಯುದ್ಧರೂಪವಾದ ಸ್ವಧರ್ಮದಿಂದ ಪೂಜಿತನಾಗುವನೆಂದು ಮಹಾಭಾರತದಲ್ಲಿ ಹೇಳಿದೆ.[1] ವೇದವಾದೋನ್ಮುಖರಾದ ಬ್ರಾಹ್ಮಣಶ್ರೇಷ್ಠರಿಂದ ಹೇಗೋ ಹಾಗೆಯೇ ಸಮೀಚೀನ ಪ್ರತಾಪವುಳ್ಳ ರಾಜರುಗಳಿಂದಲೂ ಕೂಡಾ ಪೂಜಿತನಾಗಿರುವವನು ವಾಸುದೇವನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು[2]

ಗೀತಾಚಾರ್ಯನು ತಾನು ಪಾಲಕರಿಂದಲೂ ಸೇವ್ಯನಾಗಿರುವುದರಿಂದ 'ಪವನ' ಎಂದೆನಿಸಿ, ಪವನ ಎನಿಸುವ ವಾಯುದೇವನಲ್ಲಿದ್ದು ಅವನು ಶೋಧಕರಲ್ಲೆಲ್ಲ ಶ್ರೇಷ್ಠನೆನಿಸುವಂತೆ ಅನುಗ್ರಹಿಸುತ್ತಿರುವುದಾಗಿ ಸಂದೇಶಿಸಿರುವನು[3]

೨ (ಎಲ್ಲರನ್ನೂ) ರಕ್ಷಿಸುವವನು ಮತ್ತು (ಎಲ್ಲರಿಂದಲೂ) ಸೇವ್ಯನಾಗಿರುವವನು[4]

ಈ ಜಗತ್ತನ್ನು ರಕ್ಷಿಸುತ್ತಿರುವ ಪ್ರಯುಕ್ತ ತಾನು ಇದಕ್ಕೆ 'ಪಿತೃ' ಎಂದೆನಿಸಿರುವೆನೆಂದು ಗೀತಾಚಾರ್ಯನು ಸಂದೇಶಿಸಿರುವನು.[5] ಭಗವಂತನು ಎಲ್ಲೆಡೆ ವ್ಯಾಪಿಸಿರುವುದರಿಂದಲೂ, ಎಲ್ಲರಿಂದಲೂ

---

1 'ಕೃಷ್ಣೋ ಯಜ್ಞೈರಿಜ್ಯತೇ ಸೋಮಪೂತೈಃ ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ'
-ಮ. ಭಾರ. ತಾ. ನಿ. 2-62

2 ವಿಪ್ರಮುಖ್ಯೈಃ ಸದಾ ವೇದವಾದೋನ್ಮುಖೈಃ ಸುಪ್ರತಾಪೈಃ ಕ್ಷಿತೀಶೇಶ್ವರೈಶ್ಚಾರ್ಚಿತಮ್
-ದ್ವಾ. ಸ್ತೋ.

3 ಪವನಃ ಪವತಾಮಸ್ಮಿ ... -ಗೀ. 10-31
'ಪಾಲಕೈರ್ವನನೀಯತ್ವಾತ್ ಪವನೋ... ' -ವಿಭೂತಿತತ್ತ್ವ (ಗೀ. ತಾ.)

೨ 4 ಸರ್ವಂ ಪಾತೀತಿ ಪಃ ಸರ್ವೈಃ ವನನೀಯತ್ವಾತ್ ವನಃ । ಪಶ್ಚಾಸೌ ವನಶ್ಚ ಪವನಃ ।

5 'ಪಿತಾಹಮಸ್ಯ ಜಗತೋ...' -ಗೀ. 9-17
ಪಾತೀತಿ ಸ ಪಿತಾ.... -ಗೀ. ತಾ.

ಸೇವ್ಯನಾಗಿರುವುದರಿಂದಲೂ 'ತದ್ವನಂ' ಎಂದೇ ಪ್ರಸಿದ್ಧನಾಗಿದ್ದು, ಅವನನ್ನು 'ತದ್ವನಂ' ಎಂಬುದಾಗಿ ಉಪಾಸಿಸಬೇಕೆಂದು ತಲವಕಾರೋಪನಿಷತ್ತು ಸಂದೇಶಿಸಿದೆ.[1]

೩ ಚಕ್ರವರ್ತಿಗಳ ಸಮುದಾಯವನ್ನು ಭಾಗ್ಯದಾನದ ಮೂಲಕ ಭಜಿಸುವವನು.[2]

೪ (ಎಲ್ಲವನ್ನೂ) ಪವಿತ್ರಗೊಳಿಸುವವನು.[3]

೫ ಯಾವಾಗಲೂ ಎಲ್ಲೆಡೆ ಸಹಜವಾಗಿ ಚಲಿಸುವವನು.[4]

೬ ಪಾಲಕರಿಗೂ ನಿವಾಸಸ್ಥಾನವನ್ನು ಅನುಗ್ರಹಿಸಿರುವವನು.[5]

೭ ಎಲ್ಲರನ್ನೂ ರಕ್ಷಿಸುವವನು ಮತ್ತು (ರಾಮಕೃಷ್ಣಾದ್ಯವತಾರಗಳಲ್ಲಿ ಗುರು ಬ್ರಾಹ್ಮಣಾದಿಗಳನ್ನು) ಸೇವಿಸಿರುವವನು.[6]

---

1 ...ತದ್ಧ ತದ್ವನಂ ನಾಮ ತದ್ವನಮಿತ್ಯುಪಾಸಿತವ್ಯಮ್
-ತಲ. ಉ 5-4

ಸ ವಿಷ್ಣುಸ್ತದ್ವನಂ ನಾಮ ತತತ್ವಾದ್ ವನನೀಯತಃ ।
-ಬ್ರಹ್ಮವಾರ (ತ. ಉ. ಭಾ.)

೩ 2 ಚಕ್ರವರ್ತಿ ಸಮೂಹಂ(ಪಾಂತೀತಿ ಚಕ್ರವರ್ತಿನಃ ಪಾಃ) ವನತಿ ಭಾಗ್ಯದಾನೇನ ಭಜತೀತಿ ಪವನಃ । -ವಾ. ರಾ. ('...ತ್ವಂ ಮಾಂ ಭಜಸ್ವ ಪದ್ಮಾಕ್ಷಿ'-ಇತ್ಯಾದಾವಿವ ಅತ್ರ ಭಜತಿಃ ಅನುಗ್ರಹಾರ್ಥೇ ಪ್ರಯುಕ್ತಃ)

೪ 3 ಪವತ ಇತಿ ಪವನಃ । -ಶಾಂ. ಭಾ.

೫ 4 ಏವಂ ಸರ್ವದಾ ಸರ್ವತ್ರ ಸ್ವಭಾವಾದೇವ ಪುನಾತೀತಿ ಪವನಃ । ಪವಿರ್ಗತ್ಯರ್ಥಃ ।
-ಪ. ಭ.

೬ 5 ಪಾಂತೀತಿ ಪಾಃ । ತತ್ತ್ವಾಭಿಮಾನಿನಸ್ತೇಷಾಂ ವನಂ ನಿವಾಸಃ ಯಸ್ಮಾತ್ ಸಃ ಪವನಃ । 'ಕ್ಲೀಬಂ ಸ್ಯಾತ್ ಕಾನನೇ ನೀರೇ ನಿವಾಸೇ ನಿಲಯೇ ವನಮ್'—ಇತಿ ರಭಸಃ ।

೭ 6 ಪಾತಿ ಸರ್ವಂ ರಕ್ಷತೀತಿ ಪಃ । ವನತಿ ರಾಮಕೃಷ್ಣಾದ್ಯವತಾರೇಷು ಗುರುವಿಪ್ರಾದೀನ್ ಸಂಭಜತೇ ಇತಿ ವನಃ । ಪಶ್ಚಾಸೌ ವನಶ್ಚ ಪವನಃ ।

ಭಗವಂತನು 'ಲೋಕಸಂಗ್ರಹ'ದ ದೃಷ್ಟಿಯಿಂದ ತನ್ನ ಅವತಾರಗಳಲ್ಲಿ ಗುರುವಿಪ್ರಾದಿಗಳನ್ನು ಚೆನ್ನಾಗಿ ಸೇವಿಸಿರುವನು. ಹೀಗೆ ಗುರುಹಿರಿಯರ ಸೇವೆಯ ಆದರ್ಶವನ್ನು ತೋರಿಸಿಕೊಡುವುದರ ಮೂಲಕ ಸಜ್ಜನರನ್ನು ರಕ್ಷಿಸುವನು

## ಜಿಜ್ಞಾಸೆ

[ಶುದ್ಧತ್ವದಲ್ಲಿ ಸಾದೃಶ್ಯ]

ಪ್ರ - ಪರಮಾತ್ಮನು ತನ್ನ ಪವನ ಎಂಬ ನಾಮವನ್ನು ಮುಖ್ಯ ವಾಯುದೇವರಿಗೆ ಕೊಟ್ಟಿದ್ದಾನೆ ಇದರಿಂದ ವಾಯುದೇವರಲ್ಲಿ ಪರಮಾತ್ಮನ ಸಾದೃಶ್ಯವು ಸೂಚಿತವಾಗುತ್ತದೆ. ಆ ಸಾದೃಶ್ಯವು ಯಾವುದು?

ಉ:- ಶುದ್ಧ ಭಾಗವತ ಧರ್ಮದಲ್ಲಿ ನಿರತರಾಗಿದ್ದಾರೆ ವಾಯುದೇವರು. ಎಂದೂ ಅವರು ಪರಮಾತ್ಮನ ದ್ವೇಷವನ್ನು ಮಾಡುವದಿಲ್ಲ ಯಾವ ಪಾಪಕರ್ಮವನ್ನೂ ಮಾಡುವದಿಲ್ಲ. ಆದುದರಿಂದ ವಾಯುದೇವರು ಪರಿಶುದ್ಧರು ಈ ರೀತಿಯಾಗಿ ಶುದ್ಧತ್ವವು ವಾಯುದೇವರಲ್ಲಿ ಇರುವದರಿಂದ ವಿಶೇಷವಾಗಿ ಶುದ್ಧತ್ವ ಉಳ್ಳ ಪರಮಾತ್ಮನಿಂದ ಸಾದೃಶ್ಯ ಇರುವ ಪ್ರಯುಕ್ತವಾಗಿ ಪರಮಾತ್ಮನು ತನ್ನ ಪವನಃ ಎಂಬ ನಾಮವನ್ನು ವಾಯುದೇವರಿಗೆ ಕೊಟ್ಟಿದ್ದಾನೆ.



## ೨೯೨ ಪಾವನಃ

೧ ಶುದ್ಧಗೊಳಿಸುವವನು [1]

೨ ತನಗೆ ಸಂಬಂಧಿಸಿರುವ ಗಂಗಾದಿಗಳ ಮೂಲಕ ಜಗತ್ತನ್ನು ಪವಿತ್ರಗೊಳಿಸುವವನು. [2]

ಸಹಜವಾಗಿಯೇ ಶುದ್ಧನಾಗಿರುವ ಭಗವಂತನು ತನ್ನ ಸಂಪರ್ಕದಿಂದ, ಸನ್ನಿಧಾನದಿಂದ, ಉಳಿದೆಲ್ಲರನ್ನೂ, ಉಳಿದೆಲ್ಲವುಗಳನ್ನೂ ಶುದ್ಧಗೊಳಿಸುವನು. [3] ಋಗ್ವೇದದಲ್ಲಿ ಸರಸ್ವತೀನಾಮಕ

---

೧ 1 ಪಾವಯತಿ ಶೋಧಯತೀತಿ ಪಾವನಃ ।

೨ 2 ತಥಾ ಸ್ವಸಂಬಂಧಿನೋ ಗಂಗಾದೀನ್ ಜಗತ್ಪಾವನಾನ್ ಪ್ರಯೋಜಯತೀತಿ ಪಾವನಃ । -ಪ. ಭ.

3 'ವೇದ್ಯಂ ಪವಿತ್ರಂ...' -ಗೀ. 9-17

'.. ಪವಿತ್ರಂ ಚಾಹಮೇವ । ..ಅಥವಾ...ಪವಿತ್ರವಸ್ತೂನೋ ಪವಿತ್ರತ್ವಾತ್ ತಥೋಚ್ಯತೇ। -ಗೀ. ವಿ.

ಭಗವಂತನು ನಮ್ಮೆಲ್ಲರನ್ನು ಶುದ್ಧಗೊಳಿಸುವವನೆಂಬ ಅಭಿಪ್ರಾಯದಲ್ಲಿ 'ಪಾವಕಾ' ಎಂದೇ ಅವನನ್ನು ಸ್ತುತಿಸಲಾಗಿದೆ[1]

ಶ್ರೀಕೃಷ್ಣನು ಸುದಾಮನ ಪಾದಗಳನ್ನು ತೊಳೆದು, ಪಾದೋಕವನ್ನು ತನ್ನ ತಲೆಯಲ್ಲಿ ಧರಿಸಿದನೆಂದು ನಿರೂಪಿಸುವಾಗ, ಶುಕಾಚಾರ್ಯರು ಅವನನ್ನು 'ಲೋಕಪಾವನ'—ಸಮಗ್ರ ಲೋಕವನ್ನೇ ಪವಿತ್ರೀಕರಿಸುವವನು—ಎಂದು ವಿಶೇಷಿಸಿರುವರು[2]. ಅಗಸ್ತ್ಯರು ಶ್ರೀರಾಮನನ್ನು ಸ್ತುತಿಸುತ್ತ 'ನೀನೇ ಸಕಲಭೂತಗಳಿಗೂ ಪಾವನನಾಗಿರುವಿ' ಎಂದು ನಿವೇದಿಸಿಕೊಂಡಿರುವರು[3]

ಹೀಗೆ ಭಗವಂತನು ತನ್ನ ದರ್ಶನ, ಸನ್ನಿಧಾನಗಳಿಂದ ಜಗತ್ತನ್ನು ಪವಿತ್ರೀಕರಿಸುವುದಲ್ಲದೆ, ತನ್ನಿಂದಾಗಿ ಪವಿತ್ರಗೊಂಡ ಪದಾರ್ಥಗಳ ಮೂಲಕವೂ ಪವಿತ್ರೀಕರಿಸುವನು

೩. ಪಾಲಕರಿಂದ ಚೆನ್ನಾಗಿ ಸ್ತುತಿಸಲ್ಪಡುವವನು[4]

ಭಗವಂತನ ನಿಯಾಮಕನುಗುಣವಾಗಿ ಜಗತ್ತನ್ನು ರಕ್ಷಿಸುತ್ತಿರುವ ತತ್ತ್ವಾಭಿಮಾನಿ ದೇವತೆಗಳಿಂದಲೂ ರಾಜರುಗಳಿಂದಲೂ ಭಗವಂತನು ಚೆನ್ನಾಗಿ ಸ್ತುತ್ಯನಾಗಿರುವನು.

೪ (ತತ್ತ್ವಾಭಿಮಾನಿ ದೇವತೆಗಳೇ ಮೊದಲಾದ) ಪಾಲಕರಿಂದ ರಕ್ಷಣೆ ದೊರಕುವಂತೆ ಅನುಗ್ರಹಿಸುವವನು[5]

---

1 ಪಾವಕಾ ನಃ ಸರಸ್ವತೀ —ಋ. ವೇ. 3-10

ಶೋಧಕತ್ವಾತ್ತು ಪಾವಕಃ । —ಋ. ವೇ. ಭಾ.

2 ಅಗ್ರಹೀಚ್ಛಿರಸಾ ರಾಜನ್ ಭಗವಾನ್ ಲೋಕಪಾವನಃ ।

—ಭಾಗ. 10-80-21

3 ಪಾವನಃ ಸರ್ವಭೂತಾನಾಂ ತ್ವಮೇವ ರಘುನಂದನ

—ವಾ ರಾ. ಉತ್ತರಕಾಂಡ 82–9

೩. 4 ಪಾಂತೀತಿ ಪಾಃ ತತ್ತ್ವಾಭಿಮಾನ್ಯಾದಯಃ ತೈಃ ಆ ಸಮ್ಯಕ್ ವನ್ಯತೇ ಸಂಸೇವ್ಯತ ಇತಿ ಪಾವನಃ ।

೪ 5 ಪಾಂತೀತಿ ಪಾಃ ತತ್ತ್ವಾಭಿಮಾನ್ಯಾದಯಃ ತೇಭ್ಯೋಽವನಂ ರಕ್ಷಣಂ ಯಸ್ಮಾತ್ ।

* ಪಾಂತೀತಿ ಪಾ ರಾಜಾನಸ್ತೇಭ್ಯೋಽವನಂ ಯಸ್ಮಾತ್ ಪಾವನಃ ।

—ಸ. ಸಂ

ಪಾಲಕರನ್ನು ಒದಗಿಸಿ ಅವರ ಮೂಲಕ ರಕ್ಷಣೆ ನೀಡುವವನು ಭಗವಂತನು

೫ ಪಾಲಕರಿಗೂ ರಕ್ಷಣೆಯನ್ನು ಅನುಗ್ರಹಿಸುವವನು.[1]

೬ ಪಾಲಕರಿಗೆ ಗಮನವನ್ನು ಅಥವಾ ಜ್ಞಾನವನ್ನು ಅನುಗ್ರಹಿಸುವವನು.[2]

೭ ಪಾಲಕರೆನಿಸಿರುವವರು ರಕ್ಷಕರಾಗುವಂತೆ ಅನುಗ್ರಹಿಸುವವನು.[3]

ಭಗವಂತನು ರಕ್ಷಕರೆನಿಸಿರುವ ತತ್ತ್ವಾಭಿಮಾನಿ ದೇವತೆಗಳಿಗೂ, ರಾಜರುಗಳಿಗೂ ರಕ್ಷಣೆ, ಗಮನ ಜ್ಞಾನಾದಿಗಳನ್ನು ಅನುಗ್ರಹಿಸಿ, ಅವರು ರಕ್ಷಕರಾಗುವಂತೆ ಮಾಡುವನು.

೮ ಪಾಲಕರಿಂದಲೂ ಚೆನ್ನಾಗಿ ಬೇಡಲ್ಪಡುವವನು.[4]

೯ ವಾಯು ಯಾವಾಗಲೂ ಸಂಚರಿಸುತ್ತಿರುವಂತೆ ಮಾಡುವವನು[5]

ಭಗವಂತನ ನಿಯತಿಗೆ ಭಯಪಟ್ಟು ವಾಯುದೇವನು ಸರ್ವದಾ ಸಂಚರಿಸುತ್ತಿರುವನೆಂಬುದಾಗಿ ತೈತ್ತಿರೀಯೋಪನಿಷತ್ತು ಸಂದೇಶಿಸಿದೆ[6]

---

೫ 1 ಪಾನ್ ಅಪಿ ಅವತಿ ರಕ್ಷತೀತಿ ಪಾವನಃ ।

೬ 2 ಪಾನಾಂ ಅವನಂ ಗಮನಂ ಜ್ಞಾನಂ ವಾ ಯಸ್ಮಾತ್ ಸಃ ಪಾವನಃ । 'ಅವ ಗತೌ' ।

೭ 3 ಪಾಂತೀತಿ ಪಾಃ ರಕ್ಷಕಾಃ ತತ್ತ್ವಾಭಿಮಾನ್ಯಾದಯಃ ಅವನಾಃ ರಕ್ಷಕಾಃ ಯಸ್ಮಾತ್ ಸಃ ಪಾವನಃ ।

೮ 4 ಪೈಃ ಆ ಸಮ್ಯಕ್ ವನ್ಯತೇ ಯಾಚ್ಯತೇ ಇತಿ ಪಾವನಃ । 'ವನು ಯಾಚನೇ'

೯ 5 ಪಾವಯತೀತಿ ಪಾವನಃ । —ಶಾಂ. ಭಾ.

ಪವತೇ ನಿರಂತರಮನಲಸಃ ಸಂಚರತಿ ವಾಯುಃ ತಸ್ಯ ಪ್ರಯೋಜಕತ್ವಾತ್ ಪರಮೇಶ್ವರಃ ಪಾವನ ಇತ್ಯಾಹ—ಪಾವಯತೀತಿ । —ಶಾಂ. ಭಾ. ವಿ.

6 'ಭೀಷಾಽಸ್ಮಾದ್ ವಾತಃ ಪವತೇ ..' —ತೈ. ಉ. 2-13

'. ತಸ್ಮಾದ್ ವಾಯ್ವಾದಯೋ ದೇವಾ ವಿದ್ವಾಂಸೋಽಪಿ ವಿಶೇಷತಃ । ಭೀತಾಃ ಸ್ವಕರ್ಮ ಕುರ್ವಂತಿ ವಿಷ್ಣೋಃಪ್ರೀತ್ಯರ್ಥಮಂಜಸಾ । —ಯಜುಃಸಂಹಿತಾ(ತೈ ಉ ಭಾ.)

೧೦ ಪ್ರಾಯುವಿಗೆ ನಿಯಾಮಕನಾಗಿರುವವನು[1]

೧೧ (ತನ್ನ ಕಿರಣಗಳ ಮೂಲಕ) ನೀರನ್ನು ಹೀರುವ ಸೂರ್ಯನನ್ನು ನಿಯಾಮಕನಾಗಿ ಪ್ರವೇಶಿಸಿರುವವನು[2]

೧೨ (ಸೂರ್ಯನಲ್ಲಿದ್ದುಕೊಂಡು ಸಮುದ್ರಾದಿಗಳ ನೀರನ್ನು) ಹೀರುವವನು ಮತ್ತು (ಮಳೆ ಬರಿಸುವುದರ ಮೂಲಕ ಎಲ್ಲರನ್ನೂ) ರಕ್ಷಿಸುವವನು[3]

೧೩ (ಎಲ್ಲರನ್ನೂ) ರಕ್ಷಿಸುತ್ತಿರುವವನು ಮತ್ತು (ಎಲ್ಲರೊಳಗೆ) ಪ್ರವೇಶಿಸಿರುವವನು.[4]

ಭಗವಂತನು ಎಲ್ಲರೊಳಗೆ ನಿಯಾಮಕನಾಗಿ ಪ್ರವೇಶಿಸಿ ಅವರನ್ನು ರಕ್ಷಿಸುತ್ತಿರುವವನು.

## ಜಿಜ್ಞಾಸೆ

[ಹೆಣ್ಣುಮಕ್ಕಳ ಮನೆಯಲ್ಲಿ ವಾಸ]

ಪ್ರ - ಸಮುದ್ರದ ನೀರನ್ನು ಸೂರ್ಯಕಿರಣವು ಸೆಳೆದು ಮೇಘಗಳಲ್ಲಿ ಇಟ್ಟು ಇಡೀ ಜಗತ್ತಿಗೆ ಮಳೆಯನ್ನು ಸುರಿಸುವದರಿಂದ ಪ್ರತಿವರ್ಷವೂ ಈ ರೀತಿ ಸಮುದ್ರಜಲವು ಮೇಘದ್ವಾರಾ ಎಲ್ಲ ಕಡೆ ಮಳೆ ಸುರಿಸಿ ಖರ್ಚಾಗುವದರಿಂದ ಸಮುದ್ರವು ಒಂದು ಕಾಲದಲ್ಲಿ ಇಲ್ಲವೆಂದು ಏಕೆ ಆಗುವದಿಲ್ಲ?

ಉ - ಗಂಗಾದಿ ತೀರ್ಥಗಳು ಪರಮಾತ್ಮನ ಪಾದ ಮೊದಲಾದ ಅವಯವಗಳಿಂದ ಹುಟ್ಟಿ ಸಮುದ್ರಕ್ಕೆ ಹೋಗುತ್ತಾ ಇದ್ದದ್ದರಿಂದ ಸಮುದ್ರವು ಎಂದೂ ಇಲ್ಲವೆಂದು ಆಗುವದಿಲ್ಲ ಸಮುದ್ರಕ್ಕೆ

---

೧೦ 1 ಪವನಸ್ಯಾಯಂ ನಿಯಾಮಕತ್ವೇನ ಸಂಬಂಧೀತಿ ಪಾವನಃ ।

೧೧ 2 ಪಿಬತಿ ಸ್ವಕಿರಣದ್ವಾರಾ ಜಲಂ ಸ್ವೀಕರೋತೀತಿ ಪಃ ಸೂರ್ಯಃ । ತಂ ಅವತಿ ನಿಯಾಮಕತಯಾ ಪ್ರವಿಶತೀತಿ ಪಾವನಃ । 'ಅವ ಪ್ರವೇಶೇ' ।

೧೨ 3 ಪಿಬತಿ ಸ್ವಕಿರಣದ್ವಾರಾ ಜಲಂ ಸ್ವೀಕರೋತೀತಿ ಪಃ । ತಜ್ಜಲಸ್ಯ ಮೇಘಾದಿದ್ವಾರಾ ವರ್ಷಣೇನ ಸರ್ವಂ ಅವತೀತಿ ಅವನಃ । ಪಶ್ಚಾಸಾವವನಶ್ಚ ಪಾವನಃ ।

೧೩ 4 ಪಾತಿ ರಕ್ಷತಿ ಸರ್ವಮಿತಿ ಪಃ ಅವತಿ ಪ್ರವಿಶತಿ ಸರ್ವಮಿತಿ ಅವನಃ । 'ಅವ ಪ್ರವೇಶೇ' ಪಶ್ಚಾಸಾವವನಶ್ಚ ಪಾವನಃ ।

‘ಸರಿತಾಂ ಪತಿಃ’ ಎಂದು ಹೆಸರು ಅಂದರೆ ನದಿಗಳಿಗೆಲ್ಲ ಗಂಡ, ಸಮುದ್ರ ಆದುದರಿಂದ ಪರಮಾತ್ಮನು ಸಮುದ್ರಕ್ಕೆ ಮಾವ ಪರಮಾತ್ಮನು ತನ್ನ ಹೆಣ್ಣುಮಕ್ಕಳಾದ ನದಿಗಳಲ್ಲಿ ಪ್ರೇಮದಿಂದ ಹೆಣ್ಣುಮಕ್ಕಳ ಮನೆಯಾದ ಸಮುದ್ರದಲ್ಲಿ ವಾಸಮಾಡುತ್ತಾನೆ ಸಮುದ್ರವು ಪರಮಾತ್ಮನ ವಾಸಸ್ಥಾನವಾದುದರಿಂದ ಸಮುದ್ರವು ಎಂದೂ ಇಲ್ಲವೆಂದು ಆಗುವದಿಲ್ಲ.



## ೨೯೩ ಅನಲಃ

### ೧ ಎಲ್ಲರ ಚಟುವಟಿಕೆಗೂ ಕಾರಣನಾಗಿರುವವನು[1]

ಲಕ್ಷ್ಮೀದೇವಿಯು ಶ್ರುತಿರೂಪದಿಂದ ಭಗವಂತನನ್ನು ಸಂಬೋಧಿಸಿ—ನೀನು ರಮೆಗೆ, ವಿರಿಂಚನಿಗೆ, ರುದ್ರ, ಇಂದ್ರ, ಸೂರ್ಯ, ಚಂದ್ರ ಪ್ರಮುಖರಿಗೆ ಅತಿಶಯವಾದ ಸಾಮರ್ಥ್ಯವನ್ನು ನೀಡುವಿ; ಅವರ ಪ್ರವರ್ತಕನಾಗಿರುವಿ, ನಿವರ್ತಕನಾಗಿರುವಿ, ಪ್ರೇರಕನಾಗಿರುವಿ . ಎಂಬುದಾಗಿ ಶಾಂಡಿಲ್ಯ ಶ್ರುತಿಯಲ್ಲಿ ಸ್ತುತಿಸಿರುವಳು[2]

### ೨ (ಜಗತ್ತಿನ ಚೇಷ್ಟಕನನ್ನಾಗಿ) ವಾಯುದೇವನನ್ನು ಸ್ವೀಕರಿಸುವವನು[3]

‘ಪ್ರಾಣಪ್ರಾಣ’ ಎನಿಸಿರುವ ಭಗವಂತನು ವಾಯುದೇವನ ಮೂಲಕ ಜಗತ್ತಿನ ಚೇಷ್ಟೆಯನ್ನು ನಡೆಸುವನು.[4] ಪ್ರಾಣನಲ್ಲಿದ್ದುಕೊಂಡು, ಪ್ರಾಣನಾಮಕನಾಗಿ ಪ್ರಾಣನ ಮೂಲಕ ಎಲ್ಲ

---

೧ 1 ಅನಿತಿ ಸರ್ವಂ ಚೇಷ್ಟತೇಽನೇನೇತ್ಯನಲಃ । ‘ಅನ ಪ್ರಾಣನೇ’

2 .. ತ್ವಂ ರಮಾಯಾಸ್ತ್ವಂ ವಿರಿಂಚಸ್ಯ ರುದ್ರೇಂದ್ರಸೋಮಸೂರ್ಯಮುಖಾನಾಮ-ದಭ್ರಶಕ್ತಿದೋಽಸಿ ಪ್ರವರ್ತಕೋಽಸಿ ನಿವರ್ತಕೋಽಸ್ಯನೋಽಸಿ......

-ಶಾಂಡಿಲ್ಯ ಶ್ರುತಿ (ಭಾಗ ತಾ ನಿ. 10-94-14)

೨ 3 ಅನಂ ಮುಖ್ಯಪ್ರಾಣಂ ಜಗಚ್ಚೇಷ್ಟಕತ್ವೇನ ಲಾತಿ ಆದತ್ತ ಇತಿ ಅನಲಃ ।

4 ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ । ಪ್ರಾಣಪ್ರಾಣಮತಃ ಪ್ರಾಹುರ್ವಿಷ್ಣುಂ ವಾಯೋರಪಿ ಪ್ರಭುಮ್ ।

-ಭಾಗ. ತಾ. ನಿ. 10-15 50

ರನ್ನೂ ಪ್ರೇರಿಸುತ್ತಿರುವವನು[1]

೩ ಮುಖ್ಯಪ್ರಾಣನನ್ನು ಭಕ್ತೋತ್ತಮನನ್ನಾಗಿ ಸ್ವೀಕರಿಸಿರುವವನು[2]

'ಉಳಿದ ಭಕ್ತರಿಗಿಂತೆಲ್ಲ ಉದ್ಧವನು ಶ್ರೀಕೃಷ್ಣನಿಗೆ ಹೆಚ್ಚು ಪ್ರಿಯನಾಗಿದ್ದರೆ, ಅವನಿಗಿಂತಲೂ ಅರ್ಜುನನು ಅಧಿಕವಾಗಿ ಪ್ರಿಯನಾಗಿದ್ದನು. ಅರ್ಜುನನಿಗಿಂತಲೂ ಬಲರಾಮನು ಹೆಚ್ಚು ಪ್ರಿಯನಾಗಿದ್ದನು ಬಲರಾಮನಿಗಿಂತಲೂ ದ್ರೌಪದಿಯು ಅಧಿಕ ಪ್ರಿಯಳಾಗಿದ್ದಳು. ಅವಳಿಗಿಂತಲೂ ಭೀಮಸೇನನು ಅತ್ಯಧಿಕವಾಗಿ ಪ್ರಿಯನಾಗಿದ್ದು, ಅವನಷ್ಟು ಶ್ರೀಕೃಷ್ಣನಿಗೆ ಪ್ರಿಯರಾದವರು ಮತ್ತೊಬ್ಬರಿಲ್ಲ'—ಎಂಬುದಾಗಿ ಪ್ರಮಾಣವೊಂದು ಸಾರಿದೆ[3] ಹೀಗೆ ಭಗವಂತನು ಕೃಷ್ಣಾವತಾರದಲ್ಲಿ ಮುಖ್ಯಪ್ರಾಣಾವತಾರ ಭೀಮಸೇನನನ್ನು ತನಗೆ ಪ್ರಿಯತಮನನ್ನಾಗಿ ಸ್ವೀಕರಿಸಿರುವುದರ ಮೂಲಕ ತಾನು ಮುಖ್ಯಪ್ರಾಣನನ್ನು ಭಕ್ತೋತ್ತಮನನ್ನಾಗಿ ಸ್ವೀಕರಿಸಿರುವೆನೆಂಬುದನ್ನು ಸ್ಪಷ್ಟೀಕರಿಸಿದ್ದನು

೪ (ಭಕ್ತಾಭೀಷ್ಟವನ್ನು ನೀಡುವುದರಲ್ಲಿ) ಅಲಂಬುದ್ಧಿ—ಸಾಕು ಎಂಬ ಜ್ಞಾನ ಇಲ್ಲದವನು[4]

೫ (ವ್ಯಾಸಾವತಾರದಲ್ಲಿ ಭಾಗವತ ರಚನೆಗಿಂತ ಮೊದಲು) ಅಲಂಬುದ್ಧಿ ರಹಿತನಂತೆ

---

1 'ಪ್ರಾಣಸ್ಥಃ ಪ್ರಾಣನಾಮಾಽಸೌ ನೇತೃತ್ವಾತ್ ಭಗವಾನ್ ಪುರುಷೋತ್ತಮಃ'

-ಐ. ಉ. ಭಾ. 2-1-1-3

೩ 2 ಅನಂ ಮುಖ್ಯಪ್ರಾಣಂ ಲಾತಿ ಭಕ್ತೋತ್ತಮತ್ವೇನ ಆದತ್ತ ಇತಿ ಅನಲಃ । 'ಲಾ ಆದಾನೇ' ।

-ಸ. ಸಂ. ಆಧಾರೇಣ.

3 'ಸರ್ವಭಾಗವತಾಧೀಶ ಉದ್ಧವೋ ಭಗವತ್ಪ್ರಿಯಃ । ತಸ್ಮಾದಭ್ಯಧಿಕೋ ಜಿಷ್ಣುಃ ಪ್ರಿಯತ್ವೇ ಭಕ್ತಿತೋ ಹರೇಃ। ತಸ್ಮಾದಭ್ಯಧಿಕೋ ರಾಮಃ ಕೃಷ್ಣಾ ತ್ವಭ್ಯಧಿಕಾ ತತಃ । ತಸ್ಮಾ ಅಭ್ಯ-ಧಿಕೋ ಭೀಮೋ ನತು ತತ್ಸದೃಶಃ ಕ್ವಚಿತ್'

-ಭಾಗ. ತಾ. ನಿ. 11-16-29

೪ 4 ಭಕ್ತಾಭೀಷ್ಟದಾನೇ ನ ವಿದ್ಯತೇ ಅಲಂಬುದ್ಧಿರ್ಯಸ್ಯ ಸಃ ಅನಲಃ ।

-ವಾ. ರಾ.

ನಟಿಸಿರುವವನು.[1]

ಶ್ರೀವೇದವ್ಯಾಸರು ಮಹಾಭಾರತಾದಿಗಳನ್ನು ಆಗಾಗಲೇ ರಚಿಸಿದ್ದರೂ, ಭಾಗವತ ರಚನೆಯು ಮೊದಲು ಇನ್ನೂ ಭಾಗವತ ಧರ್ಮಾದಿಗಳನ್ನು ನಿರೂಪಿಸಬೇಕೆಂದು ಸ್ವೇಚ್ಛೆಯಿಂದ ಅಲಂಬುದ್ಧಿ ರಹಿತರಾಗಿ,—ಮೂಢರಿಗೆ ತಾನು ಅಲಂಬುದ್ಧಿರಹಿತರಾಗಿರುವಂತೆ ಸರಸ್ವತೀ ತಟದಲ್ಲಿ ಪ್ರದರ್ಶಿಸಿರುವರು.[2]

೬ ಅಗ್ನಿ ಮತ್ತು ಕಾಮ ಇವುಗಳಿಗೆ ಅಲಂಬುದ್ಧಿ ಇಲ್ಲದಂತೆ ಮಾಡಿರುವವನು.[3]

ಅಗ್ನಿಗೆ ಎಷ್ಟೇ ಇಂಧನವನ್ನು ಹಾಕಿದರೂ ಅಲಂಬುದ್ಧಿ ಇಲ್ಲದೆ ಅದನ್ನು ಸುಡುತ್ತಲೇ ಇರುವುದು ಆದುದರಿಂದಲೇ ಅದು ಅನಲ ಎಂದೇ ಎನಿಸಿದೆ ಕಾಮದೋಷವೂ ಅಗ್ನಿಗಿಂತಲೂ ಅಧಿಕವಾಗಿ ಅಲಂಬುದ್ಧಿಯಿಂದ ದೂರವಾದದ್ದು. ಅದರ ಪೂರಣೆಗಾಗಿ ವಿಷಯ ಪದಾರ್ಥಗಳನ್ನು ಒದಗಿಸಿದಷ್ಟು ಅದು ಇನ್ನೂ ಬೇಕು ಮತ್ತೂ ಬೇಕೆಂದು ಅಪೇಕ್ಷಿಸುವುದು. ಆದ್ದರಿಂದ ಅದು ಅಗ್ನಿಗಿಂತಲೂ ಅಧಿಕವಾಗಿ 'ಅನಲ' ಎನಿಸಿದೆ.[4] ಈ ಎರಡರ ಸ್ವಭಾವವನ್ನೂ ಸರ್ವಸ್ವಭಾವ

---

1 ವ್ಯಾಸಾವತಾರೇ ಮಹಾಭಾರತಾದಿನಿರ್ಮಾಣೇನಾಪಿ ಅಲಂಬುದ್ಧಿರಹಿತ ಇವ ಅನಲಃ। ಕಾಮಸ್ಯ ಅನಲತ್ವಸಮರ್ಥನಸಂದರ್ಭೇ 'ಅಗ್ನೇರಪ್ಯನಲಃ ಕಾಲೋ ಯಸ್ಮಾಲವಿುತಿ ಮನ್ಯತೇ' (ಗೀ. ತಾ 3-39) ಇತಿ ಅಲಂಬುದ್ಧಿರಾಹಿತ್ಯಮೇವ ಅನಲಶಬ್ದಪ್ರವೃತ್ತಿನಿಮಿತ್ತಮಿತಿ ಪ್ರದರ್ಶಿತಮ್ ।

2 'ತಸ್ಯೈವಂ ಖಿನ್ನಮಾತ್ಮಾನಂ ಮನ್ಯಮಾನಸ್ಯ ಖಿದ್ಯತಃ' —ಭಾಗ. 1-4-31
ಖೇದೋಽನಲಂಬುದ್ಧಿಃ । 'ಅತುಷ್ಟಿರಪ್ರಸಾದಶ್ಚ ಖೇದೋಽತೃಪ್ತಿಸ್ತಥೈವ ಚ । ಅನಲತ್ವಂ ವದಂತ್ಯೇತೇ ಸರ್ವೇ ಪರ್ಯಾಯವಾಚಕಾಃ' —ಬ್ರಾಹ್ಮ (ಭಾಗ.ತಾ ನಿ.)

೬ 3 ಅಗ್ನೇ ಕಾಮಸ್ಯ ಚ ನ ವಿದ್ಯತೇ ಅಲಂಬುದ್ಧಿಃ ಯಸ್ಮಾತ್ ಸಃ ಅನಲಃ। ತತ್ತ್ವಪ್ರಕಾಶಿಕಾಯಾಃ ಆದ್ಯಮಂಗಲಪದ್ಯಸ್ಯ 'ಅಮಲಂ' ಇತಿ ವಿಶೇಷಣೇ 'ನ ವಿದ್ಯತೇ ಮಲಂ ಸಂಸಾರಾಖ್ಯಂ ಯಸ್ಮಾತ್ತದಮಲಂ ಸಂಸಾರನಿವರ್ತಕಂ ' ಇತಿ ಭಾವದೀಪೇ ಯಥಾ ಸಮಾಸಃ ಆಶ್ರಿತಃ ತದ್ವದತ್ರಾಪಿ ।

4 ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ।
—ಗೀ. 3-39

ನಿಯಾಮಕನಾದ[1], ಭಗವಂತನೇ ನಿಯಮಿಸುತ್ತಿರುವವನು.

೭ ಪರಿಸಮಾಪ್ತಿ ಇಲ್ಲದವನು[2]

೮ ತಡೆಯುವಿಕೆ ಇಲ್ಲದವನು[3]

೯ ಜಗತ್ಸೃಷ್ಟ್ಯಾದಿ ವಿಷಯದಲ್ಲಿ ಸಾಕು ಎಂಬ ಬುದ್ಧಿ ಇಲ್ಲದವನು[4]

೧೦ ಪರಿಪೂರ್ಣನಾಗಿರುವವನು ಮತ್ತು ಎಂದೆಂದೂ ನಾಶಹೊಂದದವನು.[5]

[ಅರ್ಥವಿಶೇಷಗಳನ್ನು ೭೧೦ನೆಯ 'ಅನಲ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

## ಜಿಜ್ಞಾಸೆ

[ವಿಷಯಭೋಗದಿಂದಲೂ ವಿರಕ್ತಿ]

ಪ್ರ - 'ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ।' ಬೆಂಕಿಗೆ ಹವಿಸ್ಸನ್ನು, ಘೃತವನ್ನು ಹಾಕಿದರೆ ಬೆಂಕಿಯು ಮತ್ತಷ್ಟು ಅಭಿವೃದ್ಧಿ

---

ನ ಕೇವಲಂ ದುಷ್ಪೂರಃ, ನಾಲಮಿತಿ ಮನ್ಯತೇ ಚೇತ್ಯನಲಃ । 'ಅಗ್ನೇರಪ್ಯನಲಃ ಕಾಮೋ ಯನ್ನಾಲಮಿತಿ ಮನ್ಯತೇ'' -ಗೀ ತಾ.

1 ಸರ್ವಸ್ವಭಾವೋ ನಿಯತಸ್ತೇನೈವ ಕಿಮುತಃ ಪರಮ್ ।
-ಗೀ. ಭಾ. 7-11

೭ 2 ಅಲಂ ಪರಿಸಮಾಪ್ತಿರಸ್ಯ ನ ವಿದ್ಯತ ಇತ್ಯನಲಃ । -ವಿ ರಾ.

೮ 3 ನ ವಿದ್ಯತೇ ಅಲಂ ವಾರಣಂ ಯಸ್ಯಾಸೌ ಅನಲಃ ।
-ಸ ಸಂ

೯ 4 ಅಲಂ ಜಗತ್ಸೃಷ್ಟ್ಯಾದೌ ಪರ್ಯಾಪ್ತವಿಷಯಿಣೀ ಭೂತಬುದ್ಧಿರ್ನವಿದ್ಯತೇ ಯಸ್ಯ ಸೋಽನಲಃ । -ಸ ಸಂ

೧೦ 5 ಪೂರ್ಣತ್ವಾತ್ ಅಃ । ನ ಲೀಯತೇ ನಶ್ಯತೀತಿ ನಲಃ ಯಥಾ ನ ರೀಯತೇ ಇತ್ಯರ್ಥೇ ನರಃ ಇತಿ ಭವತಿ ತಥಾ । ಅಶ್ಚಾಸೌ ನಲಶ್ಚ ಅನಲಃ ।

ಯನ್ನೇ ಹೊಂದುವಂತೆ ಕಾಮವು ವಿಷಯ ಭೋಗದಿಂದ ಮತ್ತಷ್ಟು ಅಭಿವೃದ್ಧವಾಗುತ್ತದೆಂದು ಶಾಸ್ತ್ರವಚನವು. 'ವಿರಕ್ತಂ ವಿಷಯಾನ್ ಭುಕ್ತ್ವಾ ವ್ಯಥಾನ್ಯಥ್ವೋऽನುಜಾ ಯತಿಂ ಶ್ರೀ ವಿಷ್ಣುತೀರ್ಥರು ಶ್ರೀಮದಾಚಾರ್ಯರ ಸಹೋದರರು ಇವರು ವಿಷಯಗಳಲ್ಲಿ ವಿರಕ್ತರಾದದ್ದು ಅವುಗಳ ಭೋಗದಿಂದ ಎಂದು ಮಧ್ವವಿಜಯವಚನದಿಂದ ವಿರುದ್ಧವಾಗುತ್ತದೆ ಈ ವಿರೋಧದ ಪರಿಹಾರವು ಹೇಗೆ?

ಉ – ಯೋಗ್ಯ ಜೀವರಿಗೆ ಮಾತ್ರ ವಿಷಯುವನ್ನು ಭೋಗಿಸುವಾಗ ಅದರಲ್ಲಿ ಇರುವ ದೋಷಗಳ ಜ್ಞಾನವು ಚೆನ್ನಾಗಿ ಆಗುತ್ತದೆ. ಆದುದರಿಂದ ಅಂತಹ ಯೋಗ್ಯ ಜೀವರಿಗೆ ಮಾತ್ರ ವಿಷಯ ಭೋಗದಿಂದ ವಿರಕ್ತಿಯು ಬರುತ್ತದೆ ಇತರರಿಗೆ ಬರುವದಿಲ್ಲ ಆದುದರಿಂದ ಎರಡೂ ವಚನಗಳು ಅವಿರುದ್ಧಗಳು



## ೨೯೪ ಕಾಮಹಾ

○ (ಮೋಕ್ಷಯೋಗ್ಯರ) ವಿಷಯೇಚ್ಛೆಯನ್ನು ಪರಿಹರಿಸುವವನು.[1]

ಭಗವಂತನನ್ನು ತಿಳಿದುಕೊಳ್ಳದೆ ಕಾಮದ ಜಯವು ಅಸಾಧ್ಯ.[2] ಯಾರು ಭಗವಂತನನ್ನು ಸರ್ವಾತ್ಮನಾ ಆಶ್ರಯಿಸಿ, ಅವನ ಅನುಗ್ರಹಕ್ಕೆ ಒಳಗಾಗುವರೋ, ಅಂತಹವರಷ್ಟೇ ವೈರಾಗ್ಯ ಪಡೆಯುವರೆನ್ನುವುದರ[3] ಮೂಲಕ ಕಾಮದ ಪರಿಹಾರ ಭಗವದನುಗ್ರಹದಿಂದಲೇ ಎಂದು ಸೂಚಿಸಲಾಗಿದೆ. ಭಗವಂತನನ್ನು ಸಾಕ್ಷಾತ್ತಾಗಿ ಕಂಡಾಗ ಮನಸ್ಸಿನ ರಾಗವು ಪರಿಹಾರ ಹೊಂದುವುದು.[4]

---

○ 1 ಕಾಮಂ ಮುಮುಕ್ಷೂಣಾಂ ವಿಷಯೇಚ್ಛಾಂ ಹಂತೀತಿ ಕಾಮಹಾ ।
 –ವಿ. ರಾ.

2 'ಅವಿಜ್ಞಾಯ ಪರಂ ಮತ್ತೋ ಜಯಃ ಕಾಮಸ್ಯ ನೈ ಕುತಃ'
 –ಗೀ. ತಾ. 3–43

3 'ಯೇಷಾಂ ಸ ಏವ ಭಗವಾನ್ ದಯಯೇದನಂತಃ ಸರ್ವಾತ್ಮನಾಶ್ರಿತಪದೋ ಯದಿ ನಿರ್ವ್ಯಲೀಕಮ್ । ನೈಷಾಂ ಮಮಾಹಮಿತಿ ಧೀಃ ಶ್ವಸೃಗಾಲಭಕ್ಷ್ಯೇ'
 –ಭಾಗ. 2–7–42

4 . ರಸೋऽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ।
 –ಗೀ. 2–59

ಹೀಗೆ ಭಗವಂತನ ಅಪರೋಕ್ಷಜ್ಞಾನ ಪಡಕೊಂಡ ಜ್ಞಾನಿಗಳಲ್ಲಿ ಭಗವದಾಶ್ರಯದಿಂದಾಗಿಯೇ ಕಾಮಾದಿಗಳು ಉಂಟಾಗಲಾರವು[1]

ಈ ರೀತಿಯಾಗಿ ಭಗವಂತನೇ ಕಾಮವನ್ನು ಹೋಗಲಾಡಿಸುವವನಾದುದರಿಂದಲೇ ಋಗ್ವೇದದಲ್ಲಿ—ಇಂದ್ರನಾಮಕ ಭಗವಂತನು ಜನರಿಗೆ ಶೋಷಕವಾದ, ಎತ್ತಿನಂತೆ ನಿಗ್ರಹಿಸಲು ಅಶಕ್ಯವಾದ, ತನಗೆ ಇರುವ ವೇಗವನ್ನೆಲ್ಲ, ಸಾಮರ್ಥ್ಯವನ್ನೆಲ್ಲ ಬಳಸಿಕೊಂಡು ಕಾದಾಡುವ ಶತ್ರುವಾದ ಕಾಮವನ್ನು ಒಳ್ಳೆಯ ಜ್ಞಾನದ ಮೂಲಕ ಸಂಹರಿಸಿರುವನೆಂಬುದಾಗಿ ಸ್ತುತಿಸಲಾಗಿದೆ[2]

೨ ಕಾಮಕ್ಕೆ ಅಭಿಮಾನಿಯಾಗಿದ್ದು, ಕಾಮಃ ಎನಿಸುವ ಕಾಲನೇಮಿಯನ್ನು ಸಂಹರಿಸುವವನು[3]

ಕಾಲನೇಮಿಯು ಕಾಮಕ್ಕೆ ಅಭಿಮಾನಿಯಾಗಿದ್ದು, ಇಂದ್ರಿಯಾವಿಷ್ಟನಾಗಿ ವಿಷಯಗಳನ್ನು ಅಗ್ನಿಯಂತೆ ಭೋಗಿಸುತ್ತಿರುವನು. ಭಗವದ್‌ಜ್ಞಾನಾಸ್ತ್ರದಿಂದಲೇ ಅವನ ಹನನ ನಡೆಯುವುದೆಂದು ಬ್ರಹ್ಮತರ್ಕ ತಿಳಿಸಿದೆ ಹೀಗೆ ಭಗವಂತನು ತನ್ನ ಜ್ಞಾನದಿಂದ ಕಾಲನೇಮಿಯ ಪ್ರಭಾವವನ್ನು

---

ಅಸ್ಯ ದೇಹಿನೋ ರಸಃ ಮಾನಸಿಕೋ ರಸವಿಷಯಕೋ ರಾಗಃ ಪರಂ ದೃಷ್ಟ್ವಾ ನಿವರ್ತತೇ । —ಗೀ. ವಿ.

1 'ಕಾಮಾದಯೋ ನ ಜಾಯಂತೇ ಹ್ಯಪಿ ವಿಕ್ಷಿಪ್ತಚೇತಸಾಮ್ । ಜ್ಞಾನಿನಾಂ ಜ್ಞಾನನಿರ್ಧೂತಮಲಾನಾಂ ದೇವಸಂಶ್ರಯಾತ್' —ಗೀ. ಭಾ. 2-55

2 'ನ್ಯಾವಿಧ್ಯತ್ . ವಿಶ್ಯಂಗಿಣಮಭಿನಚ್ಛುಷ್ಣಮಿಂದ್ರಃ । ಯಾವತ್ತರೋ ಮಘವನ್ ಯಾವದೋಜೋ ವಜ್ರೇಣ ಶತ್ರುಮವಧೀಃ ಪೃತನ್ಯುಮ್'

—ಋ. ವೇ. 33-12

...ಶೃಂಗಿಣಂ ಶೋಷಕಂ ಚ ಅಹನ್ನಥೋ ವಾ । ಕಾಮಂ ಯಾವಚ್ಛಕ್ತಿತೋ ವಿಕ್ರಮಾದ್ ವಾ ವೇಗೇನ ವಾ ಶತ್ರುಮಥೋ ಪೃತನ್ಯುಮ್ । ಜಘಂಥ ವಜ್ರೇಣ ಸುಬೋಧಕಃ. —ಋ. ವೇ ಭಾ.

೨ 3 ಕಾಮಂ ಕಾಮಾಭಿಮಾನಿತ್ವಾತ್ ಕಾಮನಾಮಕಂ ಕಾಲನೇಮ್ಯಸುರಂ ಹಂತೀತಿ ಕಾಮಹಾ ।

ಕುಗ್ಗಿಸುವುದಲ್ಲದೆ,[1] ಸಮುದ್ರಮಥನಾವಸರದಲ್ಲಿ ಕಾಲನೇಮಿ ಅಸುರನನ್ನು ಸಂಹರಿಸಿರುವನು.[2]

೩ (ದುರ್ಜನರ) ಇಚ್ಛೆಯನ್ನು ಕೆಡಿಸುವವನು[3]

ಭಗವಂತನು ತನ್ನ ಅವತಾರಗಳಲ್ಲಿ ಅಲ್ಲಲ್ಲಿ ದುರ್ಜನರ ಬಯಕೆಗಳನ್ನು ಕೆಡಿಸಿರುವನು ಅಮೃತವನ್ನು ಕುಡಿಯಬೇಕೆಂಬ ಅಸುರರ ಬಯಕೆಯನ್ನು ಮೋಹಿನೀ ರೂಪದಲ್ಲಿ ಬಂದು ಕೆಡಿಸಿರುವಂತೆ

೪ (ಸಜ್ಜನರ) ಕೆಟ್ಟ ಇಚ್ಛೆಗಳನ್ನು ಹೋಗಲಾಡಿಸುವವನು[4]

ಭಕ್ತ ಬಲಿರಾಜನು ತಾನು ಆಗಾಗಲೇ ಇಂದ್ರಪದವಿಗೆ ಬರಬೇಕೆಂದು ಬಯಸಿದ್ದು ಅಯೋಗ್ಯವಾಗಿದ್ದ ಪ್ರಯುಕ್ತ ಭಗವಂತನು ತ್ರಿವಿಕ್ರಮರೂಪದಲ್ಲಿ ಅವನನ್ನು ಪಾತಾಳಕ್ಕೆ ತಳ್ಳಿ ಅವನ ಅಯೋಗ್ಯ ಇಚ್ಛೆಯನ್ನು ಹೋಗಲಾಡಿಸಿರುವನು. ಇದೇ ರೀತಿಯಾಗಿ ಸಜ್ಜನರಲ್ಲಿ ಶಾಸ್ತ್ರನಿಷಿದ್ಧಗಳಾದ ಇಚ್ಛೆಗಳು ಉಂಟಾದಲ್ಲಿ, ಭಗವಂತನು ಆ ಇಚ್ಛೆಗಳನ್ನು ಹೋಗಲಾಡಿಸಿ, ಅನುಗ್ರಹಿಸುವನು.

---

1 'ತತ್ರ ಕಾಮಃ ಕಾಲನೇಮಿಃ ಸರ್ವಂ ಧೂಮಮಲೋಲ್ಬವತ್ । ಶುಭಮಧ್ಯಾಧಮಜನಂ ಕ್ರಮಾದಾವೃತ್ಯ ತಿಷ್ಠತಿ । ಮಹಾಶನಸ್ಯ ತಸ್ಯೇದಂ ನಾಲಂ ತೇನಾನಲೋಽಗ್ನಿವತ್ । ಭುಂಜಾನ ಇಂದ್ರಿಯಾವಿಷ್ಟೋ ಜ್ಞಾನಾಸ್ತ್ರೇಣೈವ ಹನ್ಯತೇ'

-ಬ್ರಹ್ಮತರ್ಕ (ಗೀ. ತಾ. 3-39)

2 'ದೃಷ್ಟ್ವಾ ಮೃಧೇ ಗರುಡವಾಹಮಿಭಾರಿವಾಹ ಆವಿಧ್ಯ ಶೂಲಮಹಿನೋದಥ ಕಾಲನೇಮಿಃ। ತಲ್ಲೀಲಯಾ ಗರುಡಮೂರ್ಧ್ನಿ ಪತದ್ ಗೃಹೀತ್ವಾ ತೇನಾಹನನ್ನೃಪ ಸವಾಹಮರಿಂ ತ್ರ್ಯಧೀಶಃ' -ಭಾಗ. 8-9-56

ಇಭಾರಿವಾಹಃ ಸಿಂಹವಾಹನಃ ಕಾಲನೇಮಿಃ । ತ್ರ್ಯಧೀಶೋ ಭಗವಾನ್ ತಚ್ಛೂಲಂ ಗೃಹೀತ್ವಾ ತೇನೈವ ಶೂಲೇನ ತಮರಿಂ ಸಸಿಂಹಮಹನ್ । -ಬ. ಗೋ (ಭಾಗ. ಟಿ.)

೩ 3 ದುರ್ಜನಾನಾಂ ಕಾಮಹಂತಾ । -ವಾ. ರಾ.

'ಇಚ್ಛೈವ ಕಾಮೋಽಸ್ಯ...' (ಮ. ಭಾರ. ತಾ. ನಿ 29-59) ಇತೀ ಇಚ್ಛಾಸಾಮಾನ್ಯಸ್ಯಾಪಿ ಕಾಮಶಬ್ದವಾಚ್ಯತ್ವಮಭ್ಯುಪಗತಮ್ ।

೪ 4 'ಕೇತಿ ಕುತ್ಸಿತವಾಚೀ ಸ್ಯಾತ್ ಕುತ್ಸಿತಂ ಮಾನಮೇವ ತು । ಕಾಮಃ. ' (ಗೀ. ತಾ. 2-70) ಇತಿ ಕಾಮಾನ್ ಸಜ್ಜನಾನಾಂ ಕುತ್ಸಿತೇಚ್ಛಾಃ ಹಂತಿ ನಾಶಯತೀತಿ ಕಾಮಹಾ ।

೫ ಕಾಮದಲ್ಲಿ (ಕಾಮನಾಮಕವಾದ ವಿಭೂತಿರೂಪದಿಂದ) ಇರುವವನು[1]

ಭೂತಗಳಲ್ಲಿ ಇರುವ ಧರ್ಮಾವಿರುದ್ಧವಾದ ಕಾಮದಲ್ಲಿ ತಾನು ಕಾಮ ಎನಿಸುವ ವಿಭೂತಿರೂಪದಿಂದ ಇರುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[2]

೬ (ಧರ್ಮವನ್ನು ವರ್ಧಿಸುವ) ಕಾಮನಾಗಿ ಭೂತಗಳಲ್ಲಿ ಪ್ರವೇಶಿಸಿರುವವನು.[3]

ಉಳಿದ ಅರ್ಥಗಳು ಇಚ್ಛಿಸಲ್ಪಟ್ಟವುಗಳಾಗಿ ಧರ್ಮವನ್ನು ಕೆಡಿಸುವವು ಭಗವಂತನು ಇಚ್ಛಿಸಲ್ಪಟ್ಟರೆ, ಅವನು ಧರ್ಮಹಾನಿ ಮಾಡಲಾರ. ಬದಲಾಗಿ ಧರ್ಮದ ವೃದ್ಧಿಯನ್ನು ಮಾಡುವನು ಈ ಅಭಿಪ್ರಾಯದಲ್ಲಿ ಗೀತಾಚಾರ್ಯನು ಧರ್ಮಾವಿರುದ್ಧ ಕಾಮನೆನಿಸಿ ತಾನು ಸಕಲ ಭೂತಗಳಲ್ಲಿ ಇರುವುದಾಗಿ ಸಂದೇಶಿಸಿರುವನು.[4]

೭ (ಕಾಮ್ಯ ಪದಾರ್ಥಗಳು ಕಾಮ್ಯಗಳೆನಿಸುವಂತೆ ಮಾಡುತ್ತ) ಅವುಗಳಲ್ಲಿ ಪ್ರವೇಶಿಸಿರುವನು[5]

---

೫ 1 ಕಾಮಂ ಕಾಮನಾಮಕವಿಭೂತಿರೂಪೇಣ ಹಂತಿ ಗಚ್ಛತಿ ಪ್ರವಿಶತೀತಿ ಯಾವತ್, ಕಾಮಹಾ । 'ಹನ ಹಿಂಸಾಗತ್ಯೋಃ'

2 ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ।
—ಗೀ. 7.-11

೬ 3 ಧರ್ಮವೃದ್ಧಿಕೃತ್ ಕಾಮಃ ಸನ್ ಹಂತಿ ಭೂತೇಷು ಗಚ್ಛತಿ ಪ್ರವಿಶತೀತಿ ಯಾವತ್, ಕಾಮಹಾ ।

4 ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ
-ಗೀ. 7-11

* ಪ್ರಾಯೋ ಹಿ ಕಾಮಿತಾ ಅರ್ಥಾ ಧರ್ಮಂ ಹನ್ಯುರ್ಹರೇಃ ಪುನಃ । ನ ಧರ್ಮಹಾನಿಕೃತ್ ಕಿಂತು ಕಾಮಿತೋ ಧರ್ಮವೃದ್ಧಿಕೃತ್ । ಧರ್ಮಾವಿರುದ್ಧಕಾಮೋಽತೋ ವಿಷ್ಣುರ್ಭೂತೇಷು ಸಂಸ್ಥಿತಃ ।
—ಗೀ. ತಾ.

೭ 5 'ಕಾಮ್ಯಂ ಹಿ ಕಾಮಾಭಿಧಮಾಹುರಾರ್ಯಾಃ .' (ಮ. ಭಾರ. ತಾ. ನಿ. 29-56) ಇತಿ ಕಾಮೇಷು ಕಾಮ್ಯೇಷು ಹಂತಿ ಕಾಮ್ಯತ್ವಪ್ರಯೋಜಕತಯಾ ಗಚ್ಛತಿ, ಪ್ರವಿಶತೀತಿ ಯಾವತ್, ಕಾಮಹಾ ।

ನಮ್ಮ ಕಾಮ್ಯ ಎನಿಸುವ ನಮ್ಮ ಪ್ರಾಣ, ಬುದ್ಧಿ, ಮನಸ್ಸು, ಇಂದ್ರಿಯಗಳು, ದೇಹ, ಮಕ್ಕಳು, ಧನ ಮುಂತಾದವೆಲ್ಲ—ಭಗವಂತನ ಸಂಪರ್ಕದಿಂದಾಗಿಯೇ ಪ್ರಿಯ—ಕಾಮ್ಯ ಎನಿಸಿವೆ.[1]

೮ (ದುರ್ಜನರ) ಸುಖ ಮತ್ತು ಸಮೀಚೀನ ಜ್ಞಾನವನ್ನು ನಾಶಪಡಿಸುವವನು.[2]

ಜಿಜ್ಞಾಸೆ

[ಪ್ರಾರಬ್ಧಕರ್ಮಾಧೀನ ಕಾಮ]

ಪ್ರ:- ಭಗವದಪರೋಕ್ಷಜ್ಞಾನಿಗಳಿಗೆ ಭಗವದನುಗ್ರಹದಿಂದ ಸಮಸ್ತ ಕಾಮಗಳ ನಿವೃತ್ತಿಯನ್ನು 'ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ । ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ' ಎಂಬ ಗೀತಾಶ್ಲೋಕವು ಹೇಳುತ್ತದೆ ಆದರೆ ಸೌಭರಿ ಋಷಿಗಳು ಐವತ್ತು ದೇಹಗಳನ್ನು ಪಡೆದು ಐವತ್ತು ಹುಡುಗಿಯರಿಂದ ಕೂಡಿ ಇದ್ದು, ಮಕ್ಕಳುಗಳನ್ನು ಪಡೆದದ್ದು ಭಾಗವತದಲ್ಲಿ ಉಕ್ತವಾಗಿದೆ, ಇದು ಹೇಗೆ?

ಉ – ಅಪರೋಕ್ಷ ಜ್ಞಾನಿಗಳಿಗೆ ಪ್ರಾರಬ್ಧಕರ್ಮಾಧೀನ ಕಾಮವು ಇದ್ದೇ ಇರುವುದು ಆದರೂ ಪ್ರಾಯಃ ಅವರಿಗೆ ಭಗವದನುಗ್ರಹದಿಂದ ನಿಷಿದ್ಧಕಾಮಗಳು ಇರುವದಿಲ್ಲ ಎಂದೇ ಗೀತಾ ಶ್ಲೋಕದ ಅಭಿಪ್ರಾಯ.



೨೯೫ ಕಾಮಕೃತ್

೧ (ಜೀವಾತ್ಮರಲ್ಲಿ) ಇಚ್ಛೆಯನ್ನು ಉಂಟು ಮಾಡುವವನು.[3]

ಭಗವಂತನು ಇಚ್ಛಿಸಿದಂತೆಯೇ ಜೀವಾತ್ಮನಲ್ಲಿ ಇಚ್ಛೆ ಹುಟ್ಟುವುದು.[4]

---

1 'ಪ್ರಾಣಬುದ್ಧಿಮನಃ ಖಾನಿ ದೇಹಾಪತ್ಯಧನಾದಯಃ । ಯತ್ಸಂಪರ್ಕಾತ್ ಪ್ರಿಯಾ ಆಸನ್... ' –ಭಾ. ತಾ. 1-1-46

೮ 2 ದುರ್ಜನಾನಾಂ ಕಂ ಸುಖಂ ಅಮಂ ಸಮೀಚೀನಂ ಜ್ಞಾನಂ ಚ ಹಂತಿ ನಾಶಯತೀತಿ ಕಾಮಹಾ । ರಾಮೇತ್ಯತ್ರ ಸಮೀಚೀನಂ ಜ್ಞಾನಂ ಅಮಮಿತಿ ಉಲ್ಲಿಖಿತವತ್ ।

೧ 3 ಜೀವಾತ್ಮಸು ಕಾಮಂ ಇಚ್ಛಾಂ ಕರೋತಿ ಉತ್ಪಾದಯತೀತಿ ಕಾಮಕೃತ್ ।

4 ತತ್ಕಾಮಾದಸ್ಯ ಕಾಮಃ ಸ್ಯಾದ್.... –ಬೃ. ಉ. ಭಾ. 6-4-5

೨ ವಿಷಯೇಚ್ಛೆಯನ್ನು ಉಂಟು ಮಾಡುವವನು[1]

ಸಾತ್ವಿಕ, ರಾಜಸ ಹಾಗೂ ತಾಮಸ ಪದಾರ್ಥಗಳನ್ನೆಲ್ಲ ನಿಯಂತ್ರಿಸುವ[2] ಭಗವಂತನೇ ಅಯೋಗ್ಯರಲ್ಲಿ, ಕೆಲವು ಸಂದರ್ಭಗಳಲ್ಲಿ ಯೋಗ್ಯರಲ್ಲೂ ವಿಷಯೇಚ್ಛೆಯನ್ನು ಉಂಟುಮಾಡುವನು

ಬ್ರಹ್ಮಾಂಡದೊಳಗೆ ಸ್ತ್ರೀಪುರುಷರ ಮೂಲಕ ಸೃಷ್ಟಿಯಲ್ಲಿ ತೊಡಗಿರುವ ಪ್ರದ್ಯುಮ್ನರೂಪಿ ಭಗವಂತನು ಕಾಮಾಂತರ್ಯಾಮಿಯಾಗಿ ಸ್ತ್ರೀ ಪುರುಷರೊಳಗೆ ಪರಸ್ಪರವಾಗಿ ಕಾಮ ಹುಟ್ಟುವಂತೆ ಮಾಡಿ ಪುರುಷರಿಂದ ಸ್ತ್ರೀಯರಲ್ಲಿ ಸಂತಾನಪರಂಪರೆ ಬೆಳೆಯುವಂತೆ ಮಾಡುವನು.[3]

ತನ್ನ ಮೋಹಿನೀಅವತಾರದಲ್ಲಿ—ಅಮೃತಕಲಶವನ್ನು ದೈತ್ಯರಿಂದ ತನ್ನ ಕೈಗೆ ತಂದು ಕೊಳ್ಳುವುದಕ್ಕಾಗಿ ತನ್ನ ಸೌಂದರ್ಯದಿಂದಾಗಿ ದೈತ್ಯರಿಗೆ ತನ್ನಲ್ಲಿ ಕಾಮಭಾವನೆ ಉಂಟಾಗುವಂತೆ ಮಾಡಿರುವನು[4] ಮುಂದೆ ಆ ರೂಪವನ್ನು ನೋಡಬಯಸಿದ ರುದ್ರದೇವನಲ್ಲೂ ಕಾಮಭಾವನೆ ಯನ್ನು ಉದ್ದೀಪನಗೊಳಿಸಿರುವನು[5]

ಕೃಷ್ಣಾವತಾರದಲ್ಲಿ ಗೋಪಿಕಾ ಸ್ತ್ರೀಯರಲ್ಲಿ ತನ್ನ ಬಗ್ಗೆ ಕಾಮಭಾವನೆ ಹುಟ್ಟುವಂತೆ ಮಾಡಿರು ವನು 'ನಿನ್ನ ಮುಖವನ್ನು ತೋರಿಸುತ್ತ ನಮ್ಮ ಮನಸ್ಸಲ್ಲಿ ಕಾಮವನ್ನುಂಟು ಮಾಡುವಿ'—

---

೨ 1 ಕಾಮಂ ವಿಷಯೇಚ್ಛಾಂ ಕರೋತಿ ಉತ್ಪಾದಯತೀತಿ ಕಾಮಕೃತ್ ।

2 'ಯೇ ಚೈವ ಸಾತ್ತ್ವಿಕಾ ಭಾವಾಃ ರಾಜಸಾಃ ತಾಮಸಾಶ್ಚ ಯೇ । ಮತ್ತ ಏವೇತಿ ತಾನ್ ವಿದ್ಧಿ .' -ಗೀ. 7-12

3 ಬ್ರಹ್ಮಾಂಡಾಂತಃ ಸ್ತ್ರೀಪುರುಷಸಾಪೇಕ್ಷಾ ಸೃಷ್ಟಿಃ ಪ್ರದ್ಯುಮ್ನಾತ್. ಕಾಮಾಂತರ್ಯಾಮೀ ಸ ಭಗವಾನ್ ಮಿಥೋ ರಾಗಂ ಜನಯಿತ್ವಾ ಪುಂಭ್ಯಃ ಸ್ತ್ರೀಷು ಸಂತಾನಪರಂಪರಾಂ ಸೃಜತಿ । -ಭಾವಪ್ರಕಾಶಿಕಾ (ಮ. ಭಾರ ತಾ ನಿ 1-9)

4 ಸವ್ರೀಡಸ್ಮಿತವಿಕ್ಷಿಪ್ತಭ್ರೂವಿಲಾಸಾವಲೋಕನೈಃ ।
ದೈತ್ಯಯೂಥಪಚೇತಸ್ಸು ಕಾಮಮುದ್ದೀಪಯನ್ ಮುಹುಃ ॥
-ಭಾಗ. 8-8-46

5 ತಯಾಪಹೃತವಿಜ್ಞಾನಸ್ತತ್ಕೃತಸ್ಮರ ವಿಹ್ವಲಃ ।
ಕಾಮಸ್ಯ ಚ ವಶಂ ನೀತಃ . । -ಭಾಗ. 8-12-25,27

ಎಂಬುದಾಗಿ ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನು ಸ್ತುತಿಸಿರುವರು.[1]

೩ (ಭಕ್ತರ) ಅಭಿಲಷಿತವಾದದ್ದನ್ನು ಪೂರೈಸುವವನು[2]

ಭಗವಂತನು ಅಮೃತದ ಬಗ್ಗೆ ದೇವತೆಗಳಿಗೆ ಆಶ್ವಾಸನೆ ನೀಡಿದನೆಂದು ತಿಳಿಸುವ ಸಂದರ್ಭದಲ್ಲಿ 'ಭೃತ್ಯಕಾಮಕೃತ್'—ಎಂದೇ ಅವನನ್ನು ವಿಶೇಷಿಸಲಾಗಿದೆ[3]

೪ (ದುಷ್ಟರ) ಅಭಿಲಷಿತವನ್ನು ಕೆಡಿಸುವವನು.[4]

೫ ಕಾಮದೇವನನ್ನು ಉತ್ಪಾದಿಸಿರುವವನು.[5]

ಕಾಮನು ಶ್ರೀಕೃಷ್ಣ ರುಕ್ಮಿಣಿಯರಲ್ಲಿ ಪ್ರದ್ಯುಮ್ನನಾಗಿ ಹುಟ್ಟಿರುವನು.[6] ಪ್ರದ್ಯುಮ್ನನಾಮಕ

---

1 'ವನರುಹಾನನಂ. . ದರ್ಶಯನ್ ಮುಹುರ್ಮನಸಿ ನಃ ಸ್ಮರಂ ವೀರ ಯಚ್ಛಸಿ'
-ಭಾಗ. 10-31-12

೩ 2 ಕಾಮಂ ಭಕ್ತಾಭಿಲಷಿತಂ ಕರೋತಿ (ಪೂರಯತೀತಿ ಯಾವತ್) ಕಾಮಕೃತ್ ।
-ವಿ. ರಾ.

* ಸತಾಂ ಮನೋರಥಂ ಕರೋತೀತಿ ಕಾಮಕೃತ್ ।
-ವಿ. ರಾ.

3 ಇತಿ ತದ್ದೈನ್ಯಮಾಲೋಕ್ಯ ಭಗವಾನ್ ಭೃತ್ಯಕಾಮಕೃತ್ ।
ಮಾ ಖಿದ್ಯತ ಮಿಥೋಽರ್ಥಂ ವಃ ಸಾಧಯಿಷ್ಯೇ ಸ್ವಮಾಯಯಾ. . . . ।
-ಭಾಗ. 8-8-37

೪ 4 ಕಾಮಂ ದುರ್ಜನಾನಾಂ ಕಾಮ್ಯಂ ಕೃಂತತಿ ಛಿನತ್ತೀತಿ ಕಾಮಕೃತ್ ।

೫ 5 ಕಾಮಂ ಕರೋತೀತಿ ಕಾಮಕೃತ್, ಕಾಮಪಿತಾ ।
-ವಾ. ರಾ.

* ಸ್ಮರಂ ಜನಯತೀತಿ ಕಾಮಕೃತ್ । -ವಿ. ರಾ.

6 ರುಗ್ಮಿಣ್ಯಾಂ ವಾಸುದೇವಸ್ಯ ಲಕ್ಷ್ಮ್ಯಾಂ ಕಾಮೋ ಧೃತವ್ರತಃ ।
ಶಂಬರಾಂತಕರೋ ಜಜ್ಞೇ ಪ್ರದ್ಯುಮ್ನಃ ಕಾಮದರ್ಶನಃ ।
-ಹ. ವಂ. ವಿಷ್ಣು ಪರ್ವ 104-2

ಭಗವದ್ರೂಪದ ಆವೇಶವುಳ್ಳದ್ದರಿಂದಲೇ ಪ್ರದ್ಯುಮ್ನ ಎನಿಸಿರುವ,[1] ಅವನನ್ನು ಶ್ರೀಕೃಷ್ಣ ಪರಮಾತ್ಮನು ಮೂರು ಬಾರಿ ಹುಟ್ಟಿಸಿರುವನು: ನಿತ್ಯಾವಿಯೋಗಿನಿಯಾದ ರುಕ್ಮಿಣಿಯ ಜೊತೆಗೆ ಕ್ರೀಡಿಸಿ ಒಮ್ಮೆ ಅವನನ್ನು ಹುಟ್ಟಿಸಿದ್ದರೆ,[2] ಕೈಲಾಸಯಾತ್ರೆಯ ಸಂದರ್ಭದಲ್ಲಿ ಮತ್ತೊಮ್ಮೆ ಕಾಮನನ್ನು ಹುಟ್ಟಿಸಿರುವನು ವಾಸುದೇವನಿಂದ ಆಗತಾನೇ ಹುಟ್ಟುವ ಕಾಮನಿಂದ ಹೊರತಾಗಿ ತಾನು ಯಾರಿಂದಲೂ ಮೃತನಾಗಬಾರದೆಂದು ಚತುರ್ಮುಖನಿಂದ ವರ ಪಡೆದಿದ್ದ, ವಕ್ರಾಸುರನ ಸಂಹಾರಕ್ಕಾಗಿ ಪ್ರದ್ಯುಮ್ನನನ್ನು ತನ್ನ ಉದರದಲ್ಲಿಟ್ಟುಕೊಂಡು ಶ್ರೀಕೃಷ್ಣನು ಕೈಲಾಸಪರ್ವತಕ್ಕೆ ಹೋಗಿ, ಅಲ್ಲಿ ತನ್ನ ಉದರದಿಂದ ಅವನನ್ನು ಹೊರಬೀಳಿಸಿ ಅವನ ಮೂಲಕ ವಕ್ರಾಸುರನನ್ನು ಕೊಲ್ಲಿಸುವನು ಹೀಗೆ ತನ್ನ ಉದರದಿಂದಲೇ ಹೊರಬರಿಸಿ ಮತ್ತೊಮ್ಮೆ ಪ್ರದ್ಯುಮ್ನನನ್ನು ಹುಟ್ಟಿಸಿದಂತಾಯಿತು ಇದಲ್ಲದೆ, ಪುನಃ ತನ್ನ ಉದರದಲ್ಲಿ ಪ್ರದ್ಯುಮ್ನನನ್ನು ಇರಿಸಿ, ರುಕ್ಮಿಣಿಯ ಮೂಲಕ ಕೂಡಲೇ ಉತ್ಪಾದಿಸುವನು[3] ಈ ರೀತಿಯಾಗಿ ಶ್ರೀಕೃಷ್ಣನು ಕಾಮನನ್ನು ಮೂರು ಬಾರಿ ಹುಟ್ಟಿಸಿರುವನು

೬ ಸುಖಸ್ವರೂಪಿ ಮತ್ತು ಸಜ್ಜನರ ಅಜ್ಞಾನವನ್ನು ಪರಿಹರಿಸುವವನು ಅಥವಾ ದುರ್ಜನರಿಗೆ ಅಜ್ಞಾನವನ್ನು ಉಂಟು ಮಾಡುವವನು[4]

---

1 ಚತುಸ್ತನೋರ್ಹರೇಃ ಪ್ರಭೋಸ್ತೃತೀಯರೂಪ ಸಂಯುತಃ । ತತಸ್ತದಾಹ್ವಯೋಽಭವತ್...... -ಮ. ಭಾರ. ತಾ. ನಿ. 17-182

2 ತಯಾ ರಮನ್ ಜನಾರ್ದನೋ ವಿಯೋಗಶೂನ್ಯಯಾ ಸದಾ ।
ಅಥತ್ತ ಪುತ್ರಮುತ್ತಮಂ ಮನೋಭವಂ ಪುರಾತನಮ್ ॥
-ಮ. ಭಾರ. ತಾ. ನಿ. 17-181

3 ಯೋಽಸುರೋ ವಕ್ರನಾಮಾಽಸೀದವಧ್ಯೋ ಬ್ರಹ್ಮಣೋ ವರಾತ್ । ತದಾ ಜಾತಾದ್ವಾಸುದೇವಪುತ್ರಾತ್ಕಾಮಾದೃತೇ ಕ್ವಚಿತ್ । ತಂ ಹಂತುಮೇವ ಪುತ್ರಂ ಸ್ವಂ ಪ್ರದ್ಯುಮ್ನಮುದರೇಽರ್ಪ್ಯ ಚ । ಆಯಾತ ಇಹ ತಂ ಚಾಪಿ ದದಾಹ ಸ್ವೋದರಾತ್ಸ್ರುತಮ್ । ನಿಸ್ಸಾರಯಿತ್ವಾ ಪುನಶ್ಚ ಸ್ವೋದರೇ ಪುತ್ರಂ ಸ್ಥಾಪಯಾಮಾಸ ಕೇಶವಃ । ಸದ್ಯೋ ಗರ್ಭಂ ಪುನಸ್ತಂ ಚ ರುಗ್ಮಿಣ್ಯಾಂ ಜನಯಿಷ್ಯತಿ ।
-ಮ. ಭಾರ. ತಾ. ನಿ. 22-196.. .200

೬ 4 ಸುಖರೂಪತ್ವಾತ್ ಕಮ್ । ಅಮುಂ ಸಜ್ಜನಾನಾಂ ಅಜ್ಞಾನಂ ಕೃಂತತೀತಿ ದುರ್ಜನಾನಾಂ ಅಜ್ಞಾನಂ ಕರೋತೀತಿ ವಾ ಅಮುಕೃತ್ । ಕಂ ಚಾಸಾವಮುಕೃಚ್ಚ ಕಾಮುಕೃತ್ ।

## ಜಿಜ್ಞಾಸೆ

[ಇನ್ನೊಬ್ಬರ ದ್ವಾರಾ ಭ್ರಾಂತಿ]

ಪ್ರ:- ಪರಮಾತ್ಮನು ಸ್ವಪ್ನಭ್ರಾಂತಿಯನ್ನು ಮುಖ್ಯಪ್ರಾಣಾಂತರ್ಯಾಮಿಯಾಗಿ ಸೃಷ್ಟಿ ಮಾಡುತ್ತಾನೆ. ಸಾಕ್ಷಾತ್ ಭ್ರಾಂತಿಯನ್ನು ಉಂಟುಮಾಡುವದಿಲ್ಲ ಎಂದು ಭಾಗವತ ತಾತ್ಪರ್ಯದಲ್ಲಿ ಪ್ರಮಾಣೋದಾಹರಣಪೂರ್ವಕ ಪ್ರತಿಪಾದಿಸಲಾಗಿದೆ. ಹಾಗಾದರೆ ಅವತಾರಗಳಲ್ಲಿ ತಾನು ಬದ್ಧನು, ಮೃತನು, ಜಾತನು ಇತ್ಯಾದಿ ಭ್ರಾಂತಿಯನ್ನು ಅಂತರ್ಯಾಮಿಯಾಗದೆ, ಸಾಕ್ಷಾತ್ ಮಾಡುತ್ತಾನಲ್ಲ? ಇದು ಭಾಗವತ ತಾತ್ಪರ್ಯದ ಪ್ರಮಾಣ ವಚನದಿಂದ ವಿರುದ್ಧವಲ್ಲವೇ?

ಉ.- ಪರಮಾತ್ಮನು ರಾಮಾವತಾರದಲ್ಲಿ ರಾಮನಿಗೆ ಸೀತಾವಿಯೋಗ ಭ್ರಾಂತಿಯನ್ನು ಮಾಯಾ ಎಂದು ಹೆಸರುಳ್ಳ ಲಕ್ಷ್ಮೀದೇವಿಯ ದ್ವಾರಾ ಉಂಟುಮಾಡಿದ್ದನೆಂದು ಹೇಳಿದ್ದರಿಂದ ಪರಮಾತ್ಮನಿಂದ ಉಂಟಾಗುವ ಭ್ರಾಂತಿಗಳೆಲ್ಲವೂ, ಇನ್ನೊಬ್ಬರ ದ್ವಾರಾ ಮಾಡಲ್ಪಡುವವು ಎಂದೇ ಸಿದ್ಧಾಂತ. ಆದುದರಿಂದ ಭಾಗವತತಾತ್ಪರ್ಯ ವಚನವು ಅವಿರುದ್ಧವು



## ೨೯೬ ಕಾಂತಃ

೧ ಸ್ವಾಭಾವಿಕವಾಗಿಯೇ ಪ್ರಧಾನವಾಗಿ ಪ್ರಿಯನಾಗಿರುವವನು [1]

ನಮಗೆ ಪುತ್ರ, ಪಿತ್ತ, ಮುಂತಾದವೆಲ್ಲ ಪ್ರಿಯಗಳಾಗಿರುತ್ತವೆ. ಆದರೆ ಇವೆಲ್ಲಕ್ಕಿಂತ ಭಗವಂತನು ಮುಖ್ಯವಾಗಿ, ಸ್ವಾಭಾವಿಕವಾಗಿ ಪ್ರಿಯನು [2] ಉಳಿದ ಪ್ರಿಯಪದಾರ್ಥಗಳೂ ನಮಗೆ ಪ್ರಿಯಗಳೆಂದಾಗುವುದು

---

೧ 1 ಸ್ವತಃ ಪ್ರಧಾನತಶ್ಚ ಪ್ರಿಯತ್ವಾತ್ ಕಾಂತಃ । 'ಹೃದಯಂ ಪ್ರಿಯಮುಚ್ಚಿತ್ಕಂ ಕಾಂತಮಿತ್ಯಭಿಧೀಯತೇ'—ಅಭಿಧಾನಮ್ (ಭಾಗ. ತಾ. ನಿ. 2-9-22) 'ಅಸಾಧಾರಣ್ಯೇನ ವ್ಯಪದೇಶಃ' ಇತಿ ಸ್ವತಃ ಪ್ರಧಾನತ ಇತಿ ಚ ಲಭ್ಯತೇ ।

* 'ಕಮು ಕಾಂತೌ' ಕಾಂತಿರಿಚ್ಛಾ, ಇಚ್ಛಾವಿಷಯತ್ವಾತ್ ಕಾಂತಃ ।
-ಶೀ. ಚಂ.

2 ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದಂತರತರಂ ಯದಯಮಾತ್ಮಾ.... -ಬೃ. ಉ. 3-5-2

ಸ ಏಷ ವಿಷ್ಣುರ್ಭಗವಾನ್ ಪುತ್ರಾದ್ ವಿತ್ತಾತ್ ತಥಾಽತ್ಮನಃ । ಅನ್ಯಸ್ಮಾದಪಿ ಸರ್ವಸ್ಮಾತ್ ಪ್ರೇಷ್ಠ ಏವ ಸ್ವಭಾವತಃ । -ಅಧ್ಯಾತ್ಮ (ಬೃ. ಉ. ಭಾ. )

ಅವನ ಇಚ್ಛೆಗನುಗುಣವಾಗಿ[1] ಅವನ ಸಂಪರ್ಕದಿಂದಾಗಿಯೇ ಉಳಿದ ಪ್ರಿಯಪದಾರ್ಥಗಳೂ ನಮಗೆ ಪ್ರಿಯ ಎನಿಸಿವೆ[2] ನಮಗೆ ಎಲ್ಲವುಗಿಂತ ಅಧಿಕಪ್ರಿಯರು ನಾವೇ ಆಗಿದ್ದು, ಹಾಗೆ ನಮಗೆ ನಾವು ಅಧಿಕಪ್ರಿಯರಾಗುವಂತೆ ಅವನೇ ಮಾಡಿರುವ ಪ್ರಯುಕ್ತ[3] ಅವನಷ್ಟು ಪ್ರಿಯರಾದವರು ಮತ್ತೊಬ್ಬರಿಲ್ಲ.[4] ಹೀಗಿದ್ದರೂ ತನಗೆ ಪರಮಾತ್ಮನು ಪ್ರಿಯನಾದವನೆಂಬುದನ್ನು ಜೀವಾತ್ಮನು ತಿಳಿದಿರಲಾರ. ರಾಜನು ತನಗೆ ಪ್ರಿಯನಾರುವನೆಂಬುದು ಭೃತ್ಯನಿಗೆ ತಿಳಿದಿರಬೇಕಾಗಿಲ್ಲ ತಾನೇ?[5]

---

1 ಬೃಹದಾರಣ್ಯಕೋಪನಿಷದಿ (4-4-4) ಯಾಜ್ಞವಲ್ಕ್ಯಃ ಮೈತ್ರೇಯೀಂ ಪ್ರತಿ 'ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ'—ಇತ್ಯಾದಿನಾ ಭಗವದಿಚ್ಛಾನುಗುಣ್ಯೇನೈವ ತದತಿರಿಕ್ತಂ ಪ್ರಿಯಂ ಭವತೀತಿ ಸಮರ್ಥಿತವಾನ್ ।

2 'ಪ್ರಾಣಬುದ್ಧಿಮನಃಸ್ವಾತ್ಮದೇಹಾಪತ್ಯಧನಾದಯಃ । ಯತ್ಸಂಪರ್ಕಾತ್ ಪ್ರಿಯಾ ಆಸನ್.. ' -ಬ್ರಹ್ಮವೈವರ್ತ (ಭಾಗ ತಾ. ನಿ. 3-10-42)

3 'ಸರ್ವತೋऽಪಿ ಪ್ರಿಯೋ ಹ್ಯಾತ್ಮಾ ತಸ್ಯಾಪಿ ಪ್ರಿಯತಾಂ ಹರಿಃ ಆಪಾದಯತಿ . '

-ಬ್ರಹ್ಮವೈವರ್ತ (ಭಾಗ. ತಾ. ನಿ. 3-10-42)

* ಆತ್ಮನೋऽಪಿ ಪ್ರಿಯತ್ವಂ ತು ತೇನೈವ ಕೃತಮಂಜಸಾ ।

-ಅಧ್ಯಾತ್ಮ (ಬೃ. ಉ. ಭಾ. 3-5-2)

* ವಿಷ್ಣೋರಿಚ್ಛಾಬಲೇನೈವ ಸ್ವಯಂ ಚ ಸ್ವಪ್ರಿಯೋ ಭವೇತ್ ।

-ಬೃ. ಉ. ಭಾ. 4-4-5

4 ...ತತಃ ಕೋ ನ್ವಪರಃ ಪ್ರಿಯಃ । -ಅ. ವಾ. 1-1-46

* ಅಸ್ಮಿನ್ ಪ್ರಿಯೇ ಪ್ರಿಯಂ ಸರ್ವಂ ತಸ್ಮಾದೇಕಃ ಪ್ರಿಯೋ ಹರಿಃ ।

-ಅಧ್ಯಾತ್ಮ (ಬೃ ಉ. ಭಾ. 3-5-2)

* ....ತಸ್ಮಾತ್ ಸ್ವಾತ್ಮನೋऽಪಿ ಪ್ರಿಯೋ ಹರಿಃ ।

-ಬ್ರಹ್ಮವೈವರ್ತ (ಭಾಗ. ತಾ. ನಿ. 3-10-42)

5 ಯಥಾ ರಾಜ್ಞಃ ಪ್ರಿಯತ್ವಂ ತು ಭೃತ್ಯೋ ವೇದ ನ ಚಾತ್ಮನಃ । ತಥಾ ಜೀವೋ ನ ಯತ್ಸಖ್ಯಂ ವೇತ್ತಿ ತಸ್ಮೈ ನಮೋऽಸ್ತು ತೇ ।

-ಸ್ಕಾಂದ (ಭಾಗ. ತಾ. ನಿ. 6-4-24)

೨ ಸುಂದರನಾಗಿರುವವನು.[1]

'ಸೌಂದರ್ಯಸಾರ' ಎಂದೇ ಎನಿಸಿರುವ[2] ಭಗವಂತನು ಅತಿಸುಂದರನಾಗಿರುವುದರಿಂದ ಅವನನ್ನು 'ಕಾಂತ' ಎಂದೇ ನಾರಾಯಣ ಪಂಡಿತಾಚಾರ್ಯರು ಉಲ್ಲೇಖಿಸಿರುವರು.[3]

೩ ಸುಖದ ಪರಮಾವಧಿ; ಪೂರ್ಣಸುಖಿಯು.[4]

ಭಗವಂತನು ಸುಖೋನ್ನತಿಯ ಕೊನೆಯ ಸೀಮೆಯಾದ್ದರಿಂದಲೇ 'ಶಾಂತ'[5] 'ಶಾಂತಿ'[6]— ಎಂದೆನಿಸಿರುವನು.

೪ ಸುಖವೇ ಸ್ವರೂಪವಾಗಿ ಉಳ್ಳವನು[7]

ಭಗವಂತನು ಸುಖಸ್ವರೂಪಿಯಾಗಿರುವುದರಿಂದಲೇ 'ಕ' ಎಂದು ಎನಿಸಿರುವನೆಂದು 'ಶಬ್ದ ನಿರ್ಣಯ'[8] ನಿರ್ಣಯಿಸಿದೆ.

---

೨ 1 'ಕಾಂತಂ ಮನೋರಮಂ ರಮ್ಯಂ...' ಇತಿ ಕಾಂತಶಬ್ದಸ್ಯ ಸುಂದರಾರ್ಥಕತ್ವಮಪಿ ವರ್ತತೇ ।

2 'ಧ್ಯಾಯೇದ್ಧರಿನ್ಮಣಿನಿಭಂ ಜಗದೇಕವಂದ್ಯಂ ಸೌಂದರ್ಯಸಾರಂ...ಇಂದಿರೇಶಮ್' -ತಂ. ಸಾ. ಸಂ. 4-39

3 'ಕಾಂತಾಯ....ಶ್ರೀಪ್ರಾಣನಾಥಾಯ ನಮಸ್ಕರೋಮಿ' -ಸು. ವಿ. 1-1

೩ 4 ಕಸ್ಯ ಸುಖಸ್ಯ ಅಂತಃ ಸೀಮಾ ಕಾಷ್ಠಾ ।

5 ....ಶಾಂತಃ ಪೂರ್ಣಸುಖತ್ವತಃ । -ಬ್ರಹ್ಮತರ್ಕ (ಭಾಗ. ತಾ. ನಿ. 2-7-47)

6 ...ಶಾಂತಿನಾಮಾ ಸುಖೋನ್ನತೇಃ । ಅಂತಗತ್ವಾತ್.... । -ಬ್ರಹ್ಮಸಾರ (ತೈ. ಉ. ಭಾ. 1-14)

೪ 7 ಕಂ ಅಂತಃ ಸ್ವರೂಪಂ ಯಸ್ಯ ಸಃ ಕಾಂತಃ । 'ಅಂತಃ ಸ್ವರೂಪೇ ನಿಕಟೇ....' ಹೇಮಚಂದ್ರಃ ।

8 'ಆನಂದತ್ವಾತ್ ಕ ಇತ್ಯುಕ್ತಃ....' -ಶಬ್ದನಿರ್ಣಯಃ (ಬೃ. ಉ. ಭಾ. 5-7-3)

೫ ಸುಖಕ್ಕೆ ಆವಾಸಸ್ಥಾನವಾಗಿರುವವನು[1]

ಮುಖ್ಯವಾಗಿ ಸುಖಕ್ಕೆ ಭಗವಂತನೇ ನೆಲೆಯಾಗಿದ್ದು, ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ ತೃಣದ ವರೆಗಿನ ಉಳಿದವರೆಲ್ಲ ಅವನ ಆನಂದದ ಪ್ರತಿಬಿಂಬವನ್ನಷ್ಟೇ ಅನುಭವಿಸುವರು.[2]

೬ (ಬ್ರಹ್ಮಾದಿಗಳ) ಸುಖದ ನಿರ್ಣಯ ಉಳ್ಳವನು[3]

ಬ್ರಹ್ಮಾದಿಗಳಲ್ಲಿ ಯಾರ್‍ಯಾರಿಗೆ ಎಷ್ಟೆಷ್ಟು ಸುಖ ಎಂಬುದು ಭಗವಂತನಿಂದ ನಿರ್ಣೀತ ವಾಗಿದೆ.

೭ (ಅಸುರರ) ಸುಖವನ್ನು ನಾಶಪಡಿಸುವವನು[4]

೮ (ರಾಮಾವತಾರದಲ್ಲಿ ಸೇತುನಿರ್ಮಾಣದ ಮೂಲಕ) ಸಮುದ್ರದ ಜಲವನ್ನು ಬಂಧಿಸಿರುವವನು[5]

---

೫ 1 ಕಸ್ಯ ಸುಖಸ್ಯ ಅಂತಃ ವಾಸಸ್ಥಾನಂ ಕಾಂತಃ । 'ಅಂತಃ ಸ್ಥಾನಂ...'

—ಬೃ. ಉ. ಭಾ. 6-3-16

2 ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ ।
ಅವ್ಯಕ್ತಾದಿ ತೃಣಾಂತಾಸ್ತು ವಿಪ್ರುಡಾನಂದಭಾಗಿನಃ ।

—ಬ್ರಹ್ಮವೈವರ್ತ (ಬ್ರ ಸೂ ಭಾ.1-2-15)

ವಿಪ್ರುಟ್ತ್ವಂ ಪ್ರತಿಬಿಂಬತ್ವಂ ಶ್ರುತಿಷೂಕ್ತಂ ಸರ್ವಶಃ ।

—ಬ್ರಹ್ಮತರ್ಕ (ಬೃ. ಉ. ಭಾ 5-6-1)

೬ 3 ಕಸ್ಯ ಬ್ರಹ್ಮಾದೀನಾಂ ಸುಖಸ್ಯ ಅಂತಃ ನಿರ್ಣಯಃ ಯಸ್ಯ ಸಃ ಕಾಂತಃ ।

೭ 4 ಕಸ್ಯ ಅಸುರಾಣಾಂ ಸುಖಸ್ಯ ಅಂತಃ ನಾಶಃ ಯಸ್ಮಾತ್ ಸಃ ।

—ಸ. ಸಂ.

೮ 5 ಕಂ ಸಮುದ್ರಸ್ಯ ಜಲಂ ಅಂತತಿ ಬದ್ನಾತೀತಿ ಕಾಂತಃ । '...ಕಂ ಶಿರೋಽಂಬುನೋಃ'
—ಅ. ಕೋ. । 'ಅತಿ ಬಂಧನೇ' ।

೯ ಯಮನನ್ನು ಅಥವಾ ವಾಯುವನ್ನು ಅಥವಾ ಚತುರ್ಮುಖನನ್ನು ಸಂಹರಿಸು ವವನು[1]

ಜಗತ್‌ಸಂಹಾರಕನಾದ ಭಗವಂತನಿಗೆ ಯಮನು ವ್ಯಂಜನರೂಪದಲ್ಲಿ ಇರುವನೆಂಬುದಾಗಿ ಕಾಠಕೋಪನಿಷತ್ತು ಸಂದೇಶಿಸಿದೆ.[2] ವಾಯುದೇವನಿಗೆ ಅರ್ಥಾತ್ ಚತುರ್ಮುಖನಿಗೆ ನಾಶವಿದ ಎಂದು ಈಶಾವಾಸ್ಯೋಪನಿಷತ್ತು ತಿಳಿಸಿದೆ.[3]

೧೦ ಚತುರ್ಮುಖನಿಗೆ ಅಥವಾ ವಾಯುದೇವನಿಗೆ (ವಿಶೇಷವಾಗಿ) ವಾಸಸ್ಥಾನ ಎನಿಸಿ ರುವವನು

[ಅರ್ಥವಿಶೇಷಗಳನ್ನು ಹಿಂದಿನ 'ಕಾಂತ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

## ಜಿಜ್ಞಾಸೆ

[ಜ್ಞಾನಿಗಳಿಗೆ ಪ್ರಿಯನೆಂದು ಗೊತ್ತು]

ಪ್ರ.- ನಮಗೆ ಯಾವುದು ಪ್ರಿಯವೋ ಅದು ನಮಗೆ ಪ್ರಿಯವೆಂದು ತಿಳಿಯದೆ ಇರುವುದಿಲ್ಲ ಪ್ರಿಯತ್ವವು ಜ್ಞಾತೈಕಸತ್ ಆಗಿದೆ ಆದರೆ ಪರಮಾತ್ಮನು ಕಾಂತನು—ಪ್ರಿಯನಾಗಿದ್ದಾನೆಂದು ಹೇಗೆ ಹೇಳುವದು? ಅವನು ಪ್ರಿಯನೆಂದು ನಮಗೆ ಅನುಭವವು ಇಲ್ಲವಲ್ಲ?

ಉ - 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ' ಎಂಬ ಗೀತಾದಲ್ಲಿ ಪರಮಾತ್ಮನ ಜ್ಞಾನಿಗೆ ಪರಮಾತ್ಮನು ಪ್ರಿಯನೆಂದು ಹೇಳಿರುತ್ತದೆ ಜ್ಞಾನವು ಪರೋಕ್ಷಜ್ಞಾನ ಅಪರೋಕ್ಷ ಜ್ಞಾನ ಎಂದು ಎರಡು ಪ್ರಕಾರವುಳ್ಳದ್ದು. ಪರಮಾತ್ಮನು ಪರೋಕ್ಷ ಜ್ಞಾನಿಗಳಿಗೂ ಅಪರೋಕ್ಷ ಜ್ಞಾನಿಗಳಿಗೂ ಪ್ರಿಯನು ಆ ಜ್ಞಾನಿಗಳಿಗೆ ಇಬ್ಬರಿಗೂ ಪರಮಾತ್ಮನು ನಮಗೆ ಪ್ರಿಯನೆಂದು ಗೊತ್ತು ಇದೆ. ಎಲ್ಲರಿಗೂ ಪರಮಾತ್ಮನಲ್ಲಿ ಪ್ರೀತಿ ಉಂಟಾಗಲು ಕಾರಣವಾದ ಜ್ಞಾನವು

---

೯ 1 ಕಸ್ಯ ಯಮಸ್ಯ ಸಮೀರಸ್ಯ ಬ್ರಹ್ಮಣೋ ವಾ ಅಂತಃ ನಾಶಃ ಯಸ್ಮಾತ್ ಸಃ ಕಾಂತಃ । 'ಕೋ ಬ್ರಹ್ಮಣಿ ಸಮೀರಾತ್ಮಯಮದಕ್ಷೇಷು ಭಾಸ್ಕರೇ...' –ಮೇದಿನೀ ।

2 'ಮೃತ್ಯುರ್ಯಸ್ಯೋಪಸೇಚನಂ...' –ಕಾ. ಉ. 1-2-25

3 ....ಅಥೇದಂ ಭಸ್ಮಾಂತಂ ಶರೀರಮ್ । –ಈ. ಉ 2–3

೧೦ 4 ಕಸ್ಯ ಮಾರುತಸ್ಯ ವೇಧಸೋ ವಾ ಅಂತಃ ವಾಸಃ ಕಾಂತಃ । 'ಅಂತಃ ಸ್ಥಾನಂ ಸ್ಥಲಂ ವಾಸಃ ಪ್ರದೇಶ ಇತಿ ಚೋಚ್ಯತೇ' –ಬೃ. ಉ. ಭಾ 6-3-16

ಇಲ್ಲ ಆದ್ದರಿಂದ ಅವರಿಗೆ ಪರಮಾತ್ಮನು ಪ್ರಿಯನಾಗಿಲ್ಲ ಯಾವಾಗ ಅವರು ಜ್ಞಾನಿಗಳು ಆಗುತ್ತಾರೋ ಆಗ ಅವರಿಗೂ ಪರಮಾತ್ಮನು ಪ್ರಿಯನಾಗುತ್ತಾನೆ.



## ೨೯೭ ಕಾಮಃ

### ೧ ಅಪರಿಮಿತ ಆನಂದ ಸ್ವರೂಪಿ[1]

ಮಹಿದಾಸರೂಪಿ ಭಗವಂತನು ರಮಾದೇವಿಗೆ ತನ್ನ ಇಪ್ಪತ್ತಮೂರು ನಾಮಗಳನ್ನು ಉಪದೇಶಿಸಿದ್ದು, ಅವುಗಳಲ್ಲಿ 'ಕಾಮ' ಎಂಬುದೂ ಒಂದು.[2] 'ಅಮೇಯಾನಂದರೂಪಿಯಾಗಿರುವುದರಿಂದ ಅವನು ಕಾಮ ಎನಿಸಿರುವನೆಂದು ಐತರೇಯಸಂಹಿತೆ ವಿವರಿಸಿದೆ.[3]

### ೨ ಸುಖಸ್ವರೂಪಿ ಹಾಗೂ ಅಪರಿಮಿತನಾಗಿರುವವನು.[4]

ಭಗವಂತನು ಆನಂದರೂಪಿ ಹಾಗೂ ಅಪರಿಮಿತನಾಗಿರುವುದರಿಂದಲೇ ಕಾಮ ಎನಿಸಿರುವನೆಂದು ಶಾಂಡಿಲ್ಯಶಾಖೆ ಸಂದೇಶಿಸಿದೆ.[5]

---

೧ 1 ನ ವಿದ್ಯತೇ ಮಾ ಪರಿಮಿತಿ ಅಸ್ಯೇತಿ ಅಮಃ । ಕೇನ ಅಮಃ ಕಾಮಃ । ಅಪರಿಮಿತಸುಖ ಇತಿ ಯಾವತ್ । -ವಿ. ರಾ.

2 'ಯದೇತದ್ಧೃದಯಂ ಮನಶ್ಚೈತತ್ ..ಕಾಮಃ ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ' —ಐ ಉ 2-5-1-2

3 'ಅಯಂ ವಿಷ್ಣುರ್ಹಿ ಕಿಂರೂಪ ಉಪಾಸ್ಯೋಽಸ್ಮಾಭಿರಚ್ಯುತಃ । ಇತ್ಯಪೃಚ್ಛದ್ ರಮಾದೇವೀ ಮಹಿದಾಸಂ ಜನಾರ್ದನಮ್ । ಆಹ ತಾಂ ಮಹಿದಾಸೋಽಥ ..ಅಮೇಯಾನಂದರೂಪತ್ವಾತ್ ಕಾಮ ಇತ್ಯಭಿಧೀಯತೇ' -ಐತರೇಯಸಂಹಿತಾ (ಐ. ಉ. ಭಾ.)

೨ 4 ಸುಖರೂಪತ್ವಾತ್ ಕಃ । ನ ವಿದ್ಯತೇ ಮಾ ಮಾನಂ ಮಿತಿರ್ಯಸ್ಯ ಸಃ ಅಮಃ । ಕಶ್ಚಾಸಾವಮಶ್ಚ ಕಾಮಃ । ಕಾಮೋಽಸ್ಯಸ್ಯ 'ಕಶ್ಚ ಅಮಶ್ಚೇತಿ ವ್ಯುತ್ಪತ್ತಿಃ' ಇತಿ ಯಥಾ ಶ್ರೀಮದಾಚಾರ್ಯೈಃ ಪ್ರದರ್ಶಿತಂ (ಗೀ. ಭಾ. 10-31) ತಥಾಽತ್ರಾಪಿ ।

5 'ಆನಂದರೂಪೋ ನಿಷ್ಪರೀಮಾಣ ಏಷಃ ತೇನ ಕಾಮಃ' -ಶಾಂಡಿಲ್ಯ ಶಾಖಾ (ಗೀ. ಭಾ. 10-31)

೩. ಪೂರ್ಣವಾದ ಸುಖ ಮತ್ತು ಜ್ಞಾನ ಉಳ್ಳವನು[1]

ಭಗವಂತನು ನಿತ್ಯಪೂರ್ಣ ಸುಖಜ್ಞಾನ ಸ್ವರೂಪಿಯಾಗಿರುವುದರಿಂದ ರಾಮ ಎನಿಸಿರುವನೆಂದು ಸ್ಕಾಂದ ತಿಳಿಸಿದೆ[2]

೪ ಜೀವರ ಬಯಕೆಗಳನ್ನು ನಿಯಮಿಸುವವನು[3]

ಜೀವಾತ್ಮರು ಬೇರೆ ಬೇರೆ ಪುರುಷಾರ್ಥವನ್ನು ಇಚ್ಛಿಸುವಂತೆ ಭಗವಂತನು ಪ್ರೇರಿಸುತ್ತಿರುವುದಾದರೂ, ಪ್ರಾಣಿಗಳಲ್ಲಿರುವ ಧರ್ಮಕ್ಕೆ ಅವಿರುದ್ಧ ಇಚ್ಛೆಗಳಲ್ಲಿ ಕಾಮನಾಮಕ ಭಗವದ್ವಿಭೂತಿರೂಪವಿದ್ದು, ಆ ಇಚ್ಛೆಗಳನ್ನು ನಿಯಮಿಸುತ್ತಿರುವುದಾಗಿ ಉಪಾಸಿಸಬೇಕೆಂದು ಗೀತಾಚಾರ್ಯನು ಸಂದೇಶಿಸಿರುವನು.[4]

---

೩. 1 ಕಾಮ ಇತ್ಯತ್ರ ಮಧ್ಯಗತ ಆಕಾರೋ ದೇಹಲೀದೀಪ ಇವ ಪೂರ್ವಂ ಪರಸ್ತಾಚ್ಚಾನ್ವೇತಿ। ಆ ಸಮ್ಯಕ್ ಪೂರ್ಣಂ ಕಂ ಸುಖಂ ಮಾ ಜ್ಞಾನಂ ಚ ಯಸ್ಯಾಸೌ ಕಾಮಃ ಪೂರ್ಣ-ಸುಖಜ್ಞಾನಃ । —ಬ. ಗೋ. ಟಿ. ಆಧಾರೇಣ

2 ನಿತ್ಯಪೂರ್ಣಸುಖಜ್ಞಪ್ತಿಸ್ವರೂಪೋಽಸೌ ಯತೋ ವಿಭುಃ । ಅತೋಽಸ್ಯ ರಾಮ ಇತ್ಯಾಖ್ಯಾ . —ಸ್ಕಾಂದ (ಭಾಗ ತಾ. ನಿ. 9–9-16)

ರಾಮ ಇತ್ಯತ್ರ ಮಧ್ಯಗತ ಆಕಾರೋ ದೇಹಲೀದೀಪ ಇವ ಪೂರ್ವಂ ಪರಸ್ತಾಚ್ಚಾನ್ವೇತಿ ಆ ಸಮ್ಯಕ್ ಪೂರ್ಣಂ ರಂ ರಮಣಂ ಸುಖಂ ಮಂ ಜ್ಞಾನಂ ಚ ಯಸ್ಯಾಸೌ ರಾಮಃ ನಿತ್ಯ ಪೂರ್ಣಸುಖಜ್ಞಾನರೂಪಃ । —ಬ. ಗೋ. (ಭಾಗ. ತಾ. ನಿ. ಟಿ.)

೪ 3 ಕಾಮಯಂತೇ ಲೋಕಾಃ ಇಚ್ಛಂತಿ ಅಸ್ಮಾದಿತಿ ಕಾಮಃ । '..ಲೋಕಶ್ಚೈತಸ್ಮಾದ್ ರಮತೇ ತೇನ ರಾಮಃ' ಇತಿ ರಾಮಶಬ್ದಃ ಶಾಂಡಿಲ್ಯಶಾಖಾಯಾಂ (ಗೀ. ಭಾ. 10-31) ಯಥಾ ವ್ಯಾಖ್ಯಾತಸ್ತದ್ವದಯಮಪಿ ।

4 ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ।

—ಗೀ. 7–11

'ಧರ್ಮಾವಿರುದ್ಧಃ'... ಇತ್ಯಾದ್ಯುಪಾಸನಾರ್ಥಮ್ । ಉಕ್ತಂ ಚ ಗೀತಾಕಲ್ಪೇ— 'ಧರ್ಮಾವಿರುದ್ಧಃ ಕಾಮೋಽಸಾವುಪಾಸ್ಯಃ ಕಾಮಮಿಚ್ಛತಾ...'

—ಗೀ. ಭಾ.

೫ (ಇಷ್ಟವಾಗಿ ಅಥವಾ ಇಷ್ಟಸಾಧನವಾಗಿ)ಎಲ್ಲ ಭಕ್ತರಿಂದಲೂ ಇಚ್ಛಿಸಲ್ಪಡುವವನು.[1]

ಏಕಾಂತಭಕ್ತರು ಭಗವಂತನನ್ನು ಇಷ್ಟವನ್ನಾಗಿ ಬಯಸಿದರೆ ಉಳಿದ ಭಕ್ತರು ಭಗವಂತನನ್ನು ಮೋಕ್ಷಾದಿ ಇಷ್ಟಗಳ ಸಾಧನವನ್ನಾಗಿ ಬಯಸುವರು ಹೀಗೆ ಭಗವಂತನನ್ನು ಎಲ್ಲ ಭಕ್ತರೂ ಇಚ್ಛಿಸುವರು ಭೀಮಸೇನನು ಕಾಮಪುರುಷಾರ್ಥದ ವ್ಯಾಪ್ತಿಯನ್ನು ವಿವೇಚಿಸುತ್ತ ಕಾಮ್ಯವನ್ನೇ ಕಾಮ ಎಂದಿಟ್ಟುಕೊಂಡಲ್ಲಿ, ತನಗೂ, ಉಳಿದವರಿಗೂ ಕಾಮ್ಯನಾಗಿರುವ ಭಗವಂತನೂ 'ಕಾಮ' ಎಂದೆನಿಸುವನೆಂದು ಅಭಿಪ್ರಾಯಪಟ್ಟಿರುವನು.[2] ಪ್ರಾಯಶಃ ಯಾವುದೇ ಪದಾರ್ಥ ಕಾಮಿತವಾದದ್ದಾಗಿ ಧರ್ಮವನ್ನು ನಾಶಪಡಿಸುವುದು ಶ್ರೀಹರಿಯಾದರೂ ಕಾಮಿತನಾಗಿ ಧರ್ಮವನ್ನು ನಾಶಪಡಿಸುವುದಿಲ್ಲ ಬದಲಾಗಿ ಧರ್ಮವನ್ನು ವರ್ಧಿಸುವನು, ಆದ್ದರಿಂದ ಅವನು ಧರ್ಮಾವಿರುದ್ಧ ಕಾಮ ಎಂದೆನಿಸಿರುವನು,[3] ಈ ಅಭಿಪ್ರಾಯದಲ್ಲೇ ಗೀತಾಚಾರ್ಯನು ತಾನು ಪ್ರಾಣಿಗಳಲ್ಲಿ 'ಧರ್ಮಾವಿರುದ್ಧಕಾಮ'ನಾಗಿ ಇರುವೆನೆಂದು ಸಂದೇಶಿಸಿರುವನು[4]

೬ (ಬ್ರಹ್ಮಾದಿಗಳಿಗೆ) ಉಪದೇಶಿಸುವವನು ಮತ್ತು ಸಮೀಚೀನವಾದ ಜ್ಞಾನವನ್ನು ಅನುಗ್ರಹಿಸುವವನು[5]

೭ ಚತುರ್ಮುಖನಿಗೆ ಅಥವಾ ವಾಯುವಿಗೆ ಸಮೀಚೀನವಾದ ಜ್ಞಾನವನ್ನು ಅನುಗ್ರಹಿಸುವವನು[6]

---

೫ 1 ಕಾಮ್ಯತ ಇಷ್ಟತ್ವೇನ ವಾ ಇಷ್ಟಸಾಧನತ್ವೇನ ವಾ ಸರ್ವೈರಿಷ್ಯತ ಇತಿ ಕಾಮಃ ।

2 ಕಾಮ್ಯಂ ಹಿ ಕಾಮಾಭಿಧಮಾಹುರಾರ್ಯಾಃ ..ಪರಾತ್ಪರೋಽವ್ಯಾದಿಪುಮಾನ್ ಹರಿಶ್ಚ ಸ್ವಸ್ಯೇತರೇಷಾಮಪಿ ಕಾಮ್ಯ ಏವ । -ಮ. ಭಾರ. ತಾ. ನಿ. 19-58

3 ಪ್ರಾಯೋ ಹಿ ಕಾಮಿತಾ ಅರ್ಥಾ ಧರ್ಮಂ ಹನ್ಯುರ್ಹರಿಃ ಪುನಃ । ನ ಧರ್ಮಹಾನಿಕೃತ್ ಕಿಂತು ಕಾಮಿತೋ ಧರ್ಮವೃದ್ಧಿಕೃತ್ । ಧರ್ಮಾವಿರುದ್ಧಕಾಮೋಽತೋ ವಿಷ್ಣುರ್ಭೂತೇಷು ಸಂಸ್ಥಿತಃ -ಗೀ. ತಾ 7-11

4 ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ । -ಗೀ. 7-11

೬ 5 ಕಾಯತಿ ಶಬ್ದಂ ಕರೋತಿ, ಉಪದಿಶತೀತಿ ಯಾವತ್ ಕಃ 'ಕೈ ಶಬ್ದೇ' ।

ಆ, ಸಮೀಚೀನಂ ಮಂ ಜ್ಞಾನಂ ಯಸ್ಮಾತ್ ಸಃ ಅಮಃ । ಕಶ್ಚಾಸಾವಮಶ್ಚ ॥

೭ 6 ಕಸ್ಯ ಚತುರ್ಮುಖಸ್ಯ ಮಾರುತಸ್ಯ ವಾ ಆ ಸಮೀಚೀನಂ ಮಂ ಜ್ಞಾನಂ ಯಸ್ಮಾತ್ ಸಃ ಕಾಮಃ ।

೮ ವಾಯುದೇವನಿಗೆ ಸಮೀಚೀನವಾದ ಬಲವನ್ನು ಅನುಗ್ರಹಿಸುವವನು.[1]

೯ ಸುಖಸ್ವರೂಪಿಗಳಾದ ಮುಕ್ತಾತ್ಮರಿಗೆ (ಅವರವರ) ಯೋಗ್ಯತೆಗನುಗುಣವಾಗಿ ಸಮೀಚೀನವಾದ ಮರ್ಯಾದೆಯನ್ನು—ಅವಧಿಯನ್ನು ಅನುಗ್ರಹಿಸಿರುವವನು.[2]

೧೦ ಜಲವನ್ನು ಚೆನ್ನಾಗಿ ಉತ್ಪಾದಿಸಿರುವವನು.[3]

ಪ್ರಲಯಕಾಲದಲ್ಲಿ ಎಲ್ಲವನ್ನೂ ಆವರಿಸಿಕೊಂಡಿದ್ದ ಭಗವಂತನು ತನಗೆ ಶರೀರದಂತಿರುವ ಈ ಎಲ್ಲವನ್ನೂ ಸೃಷ್ಟಿಸಬೇಕೆಂದು ಸಂಕಲ್ಪಿಸಿ, ಅದಕ್ಕೆ ಅನುಗುಣವಾಗಿ ತನ್ನನ್ನು ಪೂಜಿಸಿಕೊಳ್ಳುತ್ತ, ಜಲವನ್ನು ಸೃಷ್ಟಿಸುವನು ಹೀಗೆ ತನ್ನನ್ನು ಅರ್ಚಿಸುತ್ತ ಸೃಷ್ಟಿಸಲ್ಪಟ್ಟವುಗಳಾಗಿರುವ ಪ್ರಯುಕ್ತ ನೀರು ಅರ್ಕ ಎಂದೇ ಎನಿಸಿದೆ. ಹೀಗೆ ಜಲವು ಭಗವಂತನಿಂದ ಸೃಷ್ಟವಾಯಿತೆಂಬುದನ್ನು ತಿಳಿದವನು ಮುಕ್ತನಾಗುವನು ಸುಖಿಯಾಗುವನು.[4]

---

೮ 1 ಕಸ್ಯ ಮಾರುತಸ್ಯ ಆ ಸಮೀಚೀನಾ ಮಾ ಮಾನಂ ಬಲಮಿತಿ ಯಸ್ಮಾತ್ ಸಃ ಕಾಮಃ ।
'ಮಾನಂ . ಬಲಂ ಚ ಕ್ವಚಿದುಚ್ಯತೇ' -ಶಬ್ದನಿರ್ಣಯ (ಬೃ. ಉ. ಭಾ 3-2-5)

೯ 2 ಕಾನಾಂ ಸುಖಾತ್ಮನಾಂ ಮುಕ್ತಾನಾಂ ಆ ಸಮೀಚೀನಾ ಮಾ ಮಾನಂ ಮರ್ಯಾದಾ ಯಸ್ಮಾತ್ ಸಃ ಕಾಮಃ । 'ಮಾನಂ . ಮರ್ಯಾದಾ ಚೈವ ಕಥ್ಯತೇ ' –ಶಬ್ದನಿರ್ಣಯ (ಬೃ. ಉ. ಭಾ. 3-2–5)

೧೦ 3 ಕಸ್ಯ ಅಂಬುನಃ ಆ ಸಮೀಚೀನಾ ಮಾ ಮಾನಂ ಉತ್ಪಾದನಂ ಯಸ್ಮಾತ್ ಸ ಕಾಮಃ । ' ಕಂ ಶಿರೋಽಂಬುನೋಃ' —ಅ. ಕೋ. । 'ಮಾನಂ . ಉತ್ಪಾದನಂ ಚ..... ಕ್ವಚಿದುಚ್ಯತೇ' ।

4 ' ...ತನ್ಮನೋಽಕುರುತ ಆತ್ಮನ್ವೀ ಸ್ಯಾಮಿತಿ ಸೋಽರ್ಚನ್ನಚರತ್ ತಸ್ಯಾರ್ಚತ ಆಪೋಽಜಾಯಂತಾರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯಾರ್ಕತ್ವಂ ಕಂ ಹವಾ ಅಸ್ಮೈ ಭವತಿ ಯ ಏವಮೇತದರ್ಕಸ್ಯಾರ್ಕತ್ವಂ ವೇದ'

–ಬೃ. ಉ. 3-2-1

ಐಚ್ಛದ್ ವಿಷ್ಣುರದೇಹಃ ಸನ್ ದೇಹವಾನ್ ಸ್ಯಾಮಿತಿ ಪ್ರಭುಃ। ಯತೋ ದೇಹ ಇದಂ ಸರ್ವಂ ತಸ್ಯ ವಿಷ್ಣೋರದೇಹಿನಃ । ತದ್ವಶತ್ವಾತ್ ಸ್ವಯಂ ದೇವಶ್ಚಿದಾನಂದಶರೀರಕಃ ।

೧೧ ಕುತ್ಸಿತವಾದ ಅಜ್ಞಾನವನ್ನು ನೀಡುವವನು[1]

ಎಲ್ಲರ ಹೃದಯದಲ್ಲಿದ್ದು ಅನುಭವಗಳನ್ನು ನೀಡುವಂತೆ ವಿಪರೀತ ಜ್ಞಾನವನ್ನೂ ತಾನೇ ನೀಡುವುದಾಗಿ ಶ್ರೀಕೃಷ್ಣನು ಸಂದೇಶಿಸಿರುವನು[2]

೧೨ ಕಾಮದಲ್ಲಿದ್ದು ಕಾಮವನ್ನು ಪ್ರೇರಿಸುತ್ತಿರುವ ಕಾಮನಾಮಕನು.

ಭಗವಂತನು ಕಾಮದಲ್ಲಿದ್ದು ಕಾಮವನ್ನು ಪ್ರೇರಿಸುತ್ತ ಕಾಮನಾಮಕನಾಗಿ ಇರುವನೆಂಬುದಾಗಿ 'ಸತ್ಯಸಂಹಿತೆ' ಅಭಿಪ್ರಾಯಪಟ್ಟಿದೆ.[3] ಸ್ವಾಯಂಭುವಮನು ತನ್ನ ಮೊಮ್ಮಗ ಧ್ರುವನಿಗೆ ಉಪದೇಶಿಸುತ್ತ, ಕೆಲವು ಜ್ಞಾನಿಗಳು ಭಗವಂತನನ್ನು ಕಾಮ ಎಂದೂ ಕರೆಯುವರೆಂದು ತಿಳಿಸಿರುವನು[4] ಮಹಾನಾರಾಯಣೋಪನಿಷತ್ತಿನಲ್ಲಿ ಪ್ರದ್ಯುಮ್ನ ಹಾಗೂ ಅನಿರುದ್ಧರೂಪಿ ಭಗವಂತನನ್ನು ಕಾಮ ಎಂದೇ ಹೆಸರಿಸಿ, ಅಂತಹ ಕಾಮನಿಂದಲೇ ಎಲ್ಲವೂ ನಡೆಯುವುದೆಂದು ಸಂದೇಶಿಸಿದೆ[5]

---

ಸೋತ್ಮಾನಮರ್ಜಯನ್ನಚರದಪ್ಯಲಪ್ಸ್ಯರ್ಥಂ ಜನಾರ್ದನಃ । ಯತ್ ಕುರ್ವನ್ ಯತ್ ಸೃಜೇದೀಶಸ್ತದ್ ಭವೇದ್ಧಿ ತದಾತ್ಮಕಮ್।ಅರ್ದೋऽರ್ಜತೋ ಯತೋ ಜಾತಾ ಅಪೋऽತೋऽರ್ಜನಸಾಧನಃ । ಬ್ರಹ್ಮಾಂಡ (ಬೃ ಉ. ಭಾ)
'ಆಸಾಂ ಹಿ ಸುಖಹೇತೂನಾಂ ನೇದ ವಿಷ್ಣೋರ್ಜನಿಂ ಹಿ ಯಃ।ಸ ಮುಕ್ತಃ ಸುಖಭಾಗೇವ ಸ್ಯಾತ್ ವಿಷ್ಣೋಸ್ತು ಪ್ರಸಾದತಃ' ಮಾಹಾತ್ಮ್ಯ (ಬೃ. ಉ. ಭಾ.)

೧೧ 1 'ಕೇತಿ ಕುತ್ಸಿತವಾಚೀ ಸ್ಯಾತ್ (ಗೀ. ತಾ. 2-70) ಇತ್ಯುಕ್ತದಿಶಾ ಕಂ ಕುತ್ಸಿತಂ ಅಮಂ ಅಜ್ಞಾನಂ ಯಸ್ಮಾತ್ ಸಃ ಕಾಮಃ ।

2 'ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ' —ಗೀ. 15-15
ಮತ್ತಃ ಏವ ಚ. .ಅಪೋಹನಂ ವಿಪರ್ಯಯಶ್ಚ ಭವತಿ। —ಗೀ ವಿ

೧೨ 3 ಕಾಮಂಕರ್ಮಸ್ವಭಾವೇಷು ಕಾಲೇ ಚಾವಸ್ಥಿತೋ ಹರಿಃ । ಸರ್ವಕಾರಣಭೂತಃ ಸಂಸ್ತತ್ತನ್ನಾಮ್ನಾऽಭಿಧೀಯತೇ' —ಸತ್ಯಸಂಹಿತಾ (ಭಾಗ. ತಾ ನಿ. 4-10-52)

4 ...ಏನಂ...ಕಾಮಮುತಾಪರೇ —ಭಾಗ. 4-10-52

5 ಕಾಮೋऽಕಾರ್ಷೀತ್ ಕಾಮಃ ಕರೋತಿ ನಾಹಂ ಕರೋಮಿ ಕಾಮಃ ಕರ್ತಾ ನಾಹಂ ಕರ್ತಾ ಕಾಮಃ ಕಾರಯಿತಾ ನಾಹಂ ಕಾರಯಿತಾ।ಏಷ ತೇ ಕಾಮ ಕಾಮಾಯ ಸ್ವಾಹಾ —ಮ. ನಾ ಉ-6

೧೩ ವಾಯುದೇವನ ಮೂಲಕ ಹೊಂದಲ್ಪಡುವವನು.[1]

ಭಾರತೀದೇವಿಯ ನಾಥನಾದ ವಾಯುದೇವನೇ ಜೀವಾತ್ಮನನ್ನು ಬ್ರಹ್ಮನ ಬಳಿಗೆ ಒಯ್ಯಬೇಕು ಹೊರತು ಬೇರೆ ಯಾರಿಗೂ ಹಾಗೆ ಕೊಂಡೊಯ್ಯಲು ಸಾಮರ್ಥ್ಯವಿಲ್ಲ[2]

## ಜಿಜ್ಞಾಸೆ

[ಏಕಾಂತಭಕ್ತರ ವಿವಕ್ಷೆ]

ಪ್ರ - ಮಹಾಭಾರತದ ಕಥೆ—ಧರ್ಮರಾಜನು ತನ್ನ ತಮ್ಮಂದಿರು ಸೇರಿದ ಸಭೆಯಲ್ಲಿ ಧರ್ಮ, ಅರ್ಥ ಕಾಮ ಮೋಕ್ಷ ಎಂಬ ಪುರುಷಾರ್ಥಗಳಲ್ಲಿ ಯಾವ ಪುರುಷಾರ್ಥವು ಶ್ರೇಷ್ಠ ಎಂದು ಕೇಳಿದಾಗ ಭೀಮಸೇನನು ಕಾಮವು ಶ್ರೇಷ್ಠ ಎಂದು ಹೇಳಿದ್ದಾನೆ ಅನಂತರ ಧರ್ಮರಾಜನು ಮೋಕ್ಷವು ಶ್ರೇಷ್ಠ ಎಂದು ಹೇಳಿದನು ಭೀಮನು ಕಾಮ ಶ್ರೇಷ್ಠ ಎಂದು ಹೇಳಿದ್ದು ಧರ್ಮರಾಜನ ಮತಕ್ಕೆ ವಿರುದ್ಧವಾಗಿಲ್ಲವಾದ ಪ್ರಯುಕ್ತ ಭೀಮನ ಮತವನ್ನು ಧರ್ಮರಾಜನು ಖಂಡಿಸಲಿಲ್ಲ ಎಂದು ಕಥಾ ಇದೆ. ಇಲ್ಲಿ ಒಂದು ಪ್ರಶ್ನೆ—ಪುರುಷಾರ್ಥಗಳಲ್ಲಿ ಕಾಮ ಶ್ರೇಷ್ಠ ಎಂಬ ಭೀಮನ ಮತವು ಮೋಕ್ಷವು ಶ್ರೇಷ್ಠ ಎಂಬ ಧರ್ಮರಾಜನ ಮತಕ್ಕೆ ವಿರುದ್ಧ ಏಕೆ ಆಗಿಲ್ಲ?

ಉ.- ಭೀಮಸೇನನು ಪರಮಾತ್ಮನ ಭಕ್ತನು ಏಕಾಂತ ಭಕ್ತರಿಗೆ ಮೋಕ್ಷವೂ ಕೂಡ ಪರಮಾತ್ಮನು ಸದಾ ಮೋಕ್ಷದಲ್ಲಿ ಸಿಗುತ್ತಾನೆಂಬ ಕಾರಣದಿಂದ ಅಪೇಕ್ಷಿತ ಅವರಿಗೆ ಮೋಕ್ಷವು ಸ್ವರಸ ಸುಂದರವಲ್ಲ ಕಾಮ ಎಂದರೆ ಪರಮಾನಂದಸ್ವರೂಪಿಯಾದ ಪರಮಾತ್ಮನು ಈ ಅರ್ಥವನ್ನು ಇಟ್ಟುಕೊಂಡು ಭೀಮಸೇನನು ಕಾಮವು ಮೋಕ್ಷಕ್ಕಿಂತಲೂ ಶ್ರೇಷ್ಠ ಎಂದು ಏಕಾಂತಭಕ್ತರ ವಿವಕ್ಷೆಯಿಂದ ಹೇಳಿದ್ದು. ಆದ್ದರಿಂದ ಧರ್ಮರಾಜನಿಗೆ ಇದು ಸಂಮತವಾಯಿತು. ಏಕಾಂತಭಕ್ತಿಯಿಲ್ಲದವರ ದೃಷ್ಟಿಯಿಂದ ಧರ್ಮರಾಜನು ಮೋಕ್ಷವನ್ನು ಶ್ರೇಷ್ಠ ಎಂದು ಹೇಳಿದ್ದು



---

೧೩ 1 ಕೇನ ವಾಯುನಾ ಅಮ್ಯತೇ ಗಮ್ಯತ ಇತಿ ಕಾಮಃ । 'ಅಮ ಗತ್ಯಾದಿಷು'

—ಸ. ಸಂ.

2 ವಿದ್ಯುತ್ಪತಿರ್ವಾಯುರೇವ ನಯೇದ್ ಬ್ರಹ್ಮ ನ ಚಾಪರಃ ।
ಕುತೋಽನ್ಯಸ್ಯ ಭವೇಚ್ಛಕ್ತಿಸ್ತಮೃತೇ ಪ್ರಾಣನಾಯಕಮ್ ॥

—ಸ. ಸಂ ಉದ್ಧೃತಾ ಸ್ಮೃತಿಃ ।

## ೨೯೮ ಕಾಮಪ್ರದಃ

೧ (ಭಕ್ತರ) ಅಭಿಲಷಿತಗಳನ್ನು ಚೆನ್ನಾಗಿ ನೀಡುವವನು.[1]

ಶ್ರೀ ನೃಸಿಂಹರೂಪಿ ಭಗವಂತನು ಪ್ರಹ್ಲಾದನೆದುರು ತಾನು ನರರ—ಭಕ್ತಜನರ ಕಾಮಗಳನ್ನು ಪೂರೈಸುವವನೆಂಬುದಾಗಿ ಹೇಳಿಕೊಂಡಿರುವನು.[2] ಸಜ್ಜನರ ಅಭೀಷ್ಟಗಳನ್ನು ಹೊಂದಿಸುವವನು ಶ್ರೀಹರಿ ಎಂಬುದಾಗಿ ಶ್ರೀಮದಾಚಾರ್ಯರು ಸ್ತುತಿಸಿರುವರು.[3] ಸಜ್ಜನರಲ್ಲಿ ಪ್ರಧಾನರು ದೇವತೆಗಳು. ಇವರು ಶ್ರೀ ವಿಷ್ಣುವಿಗೆ ಪ್ರಿಯವಾದದ್ದನ್ನೇ ಬಯಸುವರು, ಎಂದೂ ಅಪ್ರಿಯವಾದದ್ದನ್ನು ಬಯಸುವುದಿಲ್ಲ ಆದ್ದರಿಂದ ಅವನು ಅವರ ಬಯಕೆಗಳನ್ನು ನಿಯತವಾಗಿ ಪೂರೈಸುವನು. ದೇವತೆಗಳು ಒಂದು ವೇಳೆ ಶ್ರೀ ವಿಷ್ಣುವಿಗೆ ಅಪ್ರಿಯವಾದದ್ದನ್ನು ಬಯಸಿದಲ್ಲಿ, ಅವರ ಹಿತೈಷಿಯಾದ ಭಗವಂತನು ಅವರಿಗೆ ಆ ಬಯಕೆಗಳನ್ನು ನೀಡುವುದಿಲ್ಲ—ಎಂದು ತಂತ್ರಭಾಗವತ ತಿಳಿಸಿದೆ.[4]

೨ ಅಪ್ರಮಿತ ಸುಖಸ್ವರೂಪಿಯಾಗಿರುವುದರಿಂದ ಕಾಮ ಎನಿಸಿರುವ ತನ್ನನ್ನು (ತನ್ನ ಭಕ್ತರಿಗೆ) ನೀಡುವವನು[5]

'ತನ್ನ ಪಾದಕಮಲಗಳನ್ನು ಭಜಿಸುವವರಿಗ ತನ್ನನ್ನೇ ನೀಡುವ ಭಗವಂತನು ತನ್ನನ್ನು ಸ್ಮರಿಸುವವರಿಗೆ ಇಷ್ಟಗಳಾದ ಅರ್ಥಕಾಮಗಳನ್ನು ನೀಡಲಾರನೇ?[6]—ಎಂಬುದಾಗಿ ಸುದಾಮನ ಪತ್ನಿ ಅವನೆದುರು ಸಮರ್ಥಿಸಿರುವಳು.

---

೧ 1 ಕಾಮಾನ್ ಭಕ್ತಾನಾಂ ಕಾಮ್ಯಾನ್ ಪ್ರಕರ್ಷೇಣ ದದಾತೀತಿ ಕಾಮಪ್ರದಃ ।

2 ಕಾಮಪೂರೋಽಸ್ಮ್ಯಹಂ ನೃಣಾಮ್ । -ಭಾಗ. 7-9-52

3 'ಜಯತಿ ಹರಿರಚಿಂತ್ಯಃ ..ಅಭೀಷ್ಟಾವಾಪ್ತಿದಸ್ಸಜ್ಜನಾನಾಮ್' -ಮ. ಭಾರ. ತಾ. ನಿ. 2-1

4 'ವಿಷ್ಣೋಃ ಪ್ರಿಯಂ ಕಾಮಯಂತಿ ದೇವಾ ನೈವಾಪ್ರಿಯಂ ಕ್ವಚಿತ್ । ಯದ್ಯಪ್ರಿಯಂ ಕಾಮಯಂತಿ ನ ದಾತೀಶೋ ಹಿತೋ ಯತಃ' -ತಂತ್ರಭಾಗವತ (ಭಾಗ. ತಾ. ನಿ. 6-9-49)

೨ 5 ಕೇ ಅಮತ್ವಾತ್ ಅಮಿತಸುಖತ್ವಾತ್ ಕಾಮಃ ಭಗವಾನ್ । ತಂ ಸ್ವಾತ್ಮಾನಂ ಸ್ವಭಕ್ತೇಭ್ಯಃ ಪ್ರದದಾತೀತಿ ಕಾಮಪ್ರದಃ ।

6 ಸ್ಮರತಃ ಪಾದಕಮಲಮಾತ್ಮಾನಮಪಿ ಯಚ್ಛತಿ । ಕಿಂನ್ವರ್ಥಕಾಮಾನ್ ಭಜತೋ ನಾತ್ಯಭೀಷ್ಟಾನ್ ಜಗದ್ಗುರುಃ -ಭಾಗ. 10 80 11

೩ ಸುಖ ಹಾಗೂ ಒಳ್ಳೆಯ ಜ್ಞಾನ ಇವುಗಳನ್ನು (ಯೋಗ್ಯರಿಗ) ಚೆನ್ನಾಗಿ ನೀಡುವವನು[1]

೪ (ದುರ್ಜನರ) ಅಭಿಲಷಿತಗಳನ್ನು ಚೆನ್ನಾಗಿ ಕೆಡಿಸುವವನು,[2]

೫ (ಅಯೋಗ್ಯರಿಗೆ) ಸುಖ ಹಾಗೂ ಒಳ್ಳೆಯ ಜ್ಞಾನ ದೊರಕದಂತೆ ಮಾಡುವವನು.[3]

೬ (ಯೋಗ್ಯರ) ಕುತ್ಸಿತ ಇಚ್ಛೆಗಳನ್ನು ಚೆನ್ನಾಗಿ ಖಂಡಿಸುವವನು.[4]

ಯೋಗ್ಯರಿಗೆ ಕೆಟ್ಟ ಇಚ್ಛೆಗಳು ಬರದಂತೆ ಭಗವಂತನು ರಕ್ಷಿಸುವನು ಆದುದರಿಂದಲೇ ಬ್ರಹ್ಮಪುತ್ರನಾದ ಸನತ್ಕುಮಾರನಲ್ಲಿ ಪ್ರವೇಶಿಸಿರುವ ಬ್ರಹ್ಮಚಾರಿಯ ಶರೀರವುಳ್ಳ ಸನತ್ಕುಮಾರ ನಾಮಕ ಭಗವಂತನು ನನ್ನನ್ನು ಆಯೋಗ್ಯ ಕಾಮನೆಯಿಂದ ರಕ್ಷಿಸಲಿ—ಎಂದು ಪ್ರಾರ್ಥಿಸಲಾಗಿದೆ[5]

೭ (ಅಯೋಗ್ಯರಿಗೆ) ಕುತ್ಸಿತೇಚ್ಛೆಗಳನ್ನು ಚೆನ್ನಾಗಿ ನೀಡುವವನು[6]

---

೩ 1 ಕಂ ಸುಖಂ ಅಮಂ ಸಮೀಚೀನಂ ಜ್ಞಾನಂ ಚ ಕಾಮೇ । ತೇ ಪ್ರಕರ್ಷೇಣ ದದಾತೀತಿ ಕಾಮಪ್ರದಃ ।

೪ 2 ದುರ್ಜನಾನಾಂ ಕಾಮಾನ್ ಕಾಮ್ಯಾನ್ ಪ್ರಕರ್ಷೇಣ ದ್ಯತಿ ಖಂಡಯತೀತಿ ಕಾಮ-ಪ್ರದಃ ।

೫ 3 ಕಂ ಸುಖಂ ಅಮಂ ಸಮೀಚೀನಂ ಜ್ಞಾನಂ ಚ ಕಾಮೇ। ದುರ್ಜನಾನಾಂ ತೇ ಪ್ರಕರ್ಷೇಣ ದ್ಯತಿ ಖಂಡಯತೀತಿ ನ ಪ್ರಾಪಯತೀತಿ ಯಾವತ್, ಕಾಮಪ್ರದಃ ।

೬ 4 'ಕೇತಿ ಕುತ್ಸಿತವಾಚೀ ಸ್ಯಾತ್ ಕುತ್ಸಿತಂ ಮಾನಮೇವ ತು । ಕಾಮಃ....' (ಗೀ. ತಾ. 2-70) ಇತಿ ಕಾಮಃ ಕುತ್ಸಿತೇಚ್ಛಾ ತಂ ಪ್ರಕರ್ಷೇಣ ದ್ಯತಿ ಖಂಡಯತೀತಿ ಕಾಮಪ್ರದಃ।

5 'ಸನತ್ಕುಮಾರನಾಮಾ ತು ಬ್ರಹ್ಮಚರ್ಯವಪುರ್ಹರಿಃ । ಸನತ್ಕುಮಾರಮುಖರಂ ಬ್ರಹ್ಮ-ಪುತ್ರಂ ವಿವೇಶ ಯಃ । ಸ ಮಾಂ ಯೋಗ್ಯೇತರಾತ್ ಕಾಮಾತ್ ಪಾತು ವಿಶ್ವೇಶ್ವರಃ ಪ್ರಭುಃ' –ಭಾಗ. ತಾ. ನಿ. 6-8-17

೭ 6 ಅಯೋಗ್ಯಾನಾಂ ಕಾಮಾನ್ ಕುತ್ಸಿತೇಚ್ಛಾಃ ಪ್ರಕರ್ಷೇಣ ದದಾತೀತಿ ಕಾಮಪ್ರದಃ ।

೮ (ಭಕ್ತರಿಂದ) ಬಯಸಲ್ಪಡುವವನು ಮತ್ತು (ಭಕ್ತರ ಅಭೀಷ್ಟಗಳನ್ನು) ಚೆನ್ನಾಗಿ ನೀಡುವವನು[1]

೯ ಭಕ್ತರ ಕಾಮ್ಯಗಳನ್ನು ಪೂರ್ಣಗೊಳಿಸುವ (ಗುರುದೇವಾದಿಗಳಿಗೆ) ವರಿಗೂ (ಅಭೀಷ್ಟಗಳನ್ನು) ನೀಡುವವನು[2]

೧೦ (ತಮ್ಮ) ಇಚ್ಛೆಗಳನ್ನೆಲ್ಲ ಪೂರ್ಣಗೊಳಿಸಿರುವ ಮುಕ್ತಾತ್ಮರಿಗೂ ಸುಖವನ್ನು ನೀಡುವವನು.[3]

'ಅಕಾಮಹತ' ಎಂದೇ ಎನಿಸಿರುವ ಮುಕ್ತಾತ್ಮರು ತಾವು ಕಾಮಿಸಿದ್ದನ್ನೆಲ್ಲ ಹೊಂದುವರು.[4] ಇಂತಹವರೂ ಭಗವಂತನಿಂದ ಆನಂದವನ್ನು ಭಿಕ್ಷೆ ಬೇಡುವರು[5]

### ಜಿಜ್ಞಾಸೆ

[ತದೀಯಹಿತಸಾಧನ]

ಪ್ರ - ಶ್ರೀನ್ಯಾಯಸುಧಾ ಗ್ರಂಥದಲ್ಲಿ 'ಅನುಕೂಲೇನ ವಕ್ತ್ರಾ ಅನುಕೂಲಾನ್ ಶ್ರೋತೄನ್ ಪ್ರತಿ ತದೀಯ ಹಿತಸಾಧನ ಬೋಧಾಯ ಉಪದಿಷ್ಟತ್ವಾತ್' ಎಂಬ ಹೇತುವಿನಿಂದ ಬ್ರಹ್ಮಸೂತ್ರಕ್ಕೆ

---

೮ 1 ಕಾಮ್ಯತೇ ಭಕ್ತೈಃ ಇಷ್ಯತ ಇತಿ ಕಾಮಃ । ಪ್ರಕರ್ಷೇಣ ಭಕ್ತೇಭ್ಯಃ ಅಭೀಷ್ಟಾನಿ ದದಾತೀತಿ ಪ್ರದಃ । ಕಾಮಶ್ಚಾಸೌ ಪ್ರದಶ್ಚ ಕಾಮಪ್ರದಃ ।

೯ 2 ಕಾಮಾನ್ ಭಕ್ತಾನಾಂ ಕಾಮ್ಯಾನ್ ಪ್ರಾಂತಿ ಪೂರಯಂತೀತಿ ಕಾಮಪ್ರಾಃ । ಗುರುದೇವಾದಯಃ । 'ಪ್ರಾ ಪೂರಣೇ' । ತೇಭ್ಯಃ ದದಾತಿ ಅಭೀಷ್ಟಮಿತಿ ಕಾಮಪ್ರದಃ ।

೧೦ 3 ಕಾಮಾನ್ ಸ್ವೇಚ್ಛಾಃ ಪ್ರಾಂತಿ ಪೂರಯಂತೀತಿ ಕಾಮಪ್ರಾಃ ಮುಕ್ತಾತ್ಮಾನಃ । 'ಪ್ರಾ ಪೂರಣೇ' । ತೇಭ್ಯೋಽಪಿ ಸುಖಂ ದದಾತೀತಿ ಕಾಮಪ್ರದಃ ।

4 'ಯಃ ಕಾಮಿತಂ ನ ಪ್ರಾಪ್ನೋತಿ ಸ ಕಾಮಹತ ಉಚ್ಯತೇ । ಕಾಮ್ಯಾಪ್ರಾಪ್ತೇಶ್ಚ ಪಾಪಾಚ್ಚ ಪಾಪಾತ್ ಕಾಮಹತಃ ಸ್ಮೃತಃ । ಉಭಯಸ್ಯಾಪ್ಯಭಾವೇನ ಮುಕ್ತೋಽಕಾಮಹತೋ ಮತಃ' -ಬೃ. ಉ. ಭಾ. 6-3-33

5 ಅಥ ಭಿಕ್ಷಾಚರ್ಯಂ ಚರಂತಿ -ಬೃ ಉ. 5-5-1

'ಭಿಕ್ಷಾಚರ್ಯಂ ಚರಂತಿ' ಮುಕ್ತಾ ಅಪಿ ಬ್ರಹ್ಮಾದಯಸ್ತಸ್ಮಾದೇವ ಪರಮೇಶ್ವರಾದ್ ವಿಪುಲಾನಂದಮೇವ ಭಿಕ್ಷಂತೋ ವರ್ತಂತೇ -ಬೃ. ಉ. ಭಾ.

ಆಪ್ತವಾಕ್ಯತ್ವವನ್ನು ಸಾಧಿಸಲಾಗಿದೆ. ಆಪ್ತವಾಕ್ಯತ್ವರೂಪ ಸಾಧ್ಯವಿಲ್ಲದ ಸ್ಥಳವಾದ ಬೌದ್ಧ ವಾಕ್ಯದಲ್ಲಿ ಅನುಕೂಲೇನ ವಕ್ತ್ರಾ ಶ್ರೋತೃನ್ ಪ್ರತಿ ತದೀಯಹಿತಸಾಧನ ಬೋಧಾಯೋ-ಪದಿಷ್ಟತ್ವರೂಪ ಹೇತು ಇದೆ ಎಂದು ಅಂಗೀಕರಿಸಿ ವ್ಯಭಿಚಾರ ಪರಿಹಾರಕ್ಕಾಗಿ ಅನುಕೂಲಾನ್ ಶ್ರೋತೃನ್ ಪ್ರತಿ ಎಂದು ಹೇತುವಿನಲ್ಲಿ ಸೇರಿಸಬೇಕಾಗಿಯೂ ಹೇಳಿರುತ್ತದೆ ಇದರಿಂದ ಬುದ್ಧನು ಶ್ರೋತೃಗಳಿಗೆ ಅವರ ಹಿತಸಾಧನ ಬೋಧವನ್ನು ಉದ್ದೇಶಿಸಿ ಉಪದೇಶ ಮಾಡಿದ್ದಾನೆಂದು ಅರ್ಥವಾಗುತ್ತದೆ ಕಾಮಪ್ರದಃ ಎಂಬ ನಾಮವು ದುರ್ಜನರ ಇಷ್ಟಾರ್ಥಗಳನ್ನು ಪರಮಾತ್ಮನು ನಾಶಮಾಡುತ್ತಾನೆಂದು ಹೇಳಿದರೆ ನ್ಯಾಯಸುಧಾ ಮತ್ತು ಕಾಮಪ್ರದಃ ಎಂಬ ನಾಮಾರ್ಥಗಳಿಗೆ ವಿರೋಧವು ಪ್ರಾಪ್ತವಾಯಿತು ಅಲ್ಲವೇ?

ಉ - 'ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ' ಎಲ್ಲರಿಗೂ ಅವರವರ ಸ್ವಭಾವವು ಅಭಿವ್ಯಕ್ತವಾಗಿ ಅಂತಹ ಸ್ವಭಾವದಿಂದ ಇರುವುದೇ ಮುಕ್ತಿ ಸಜ್ಜನರ ಸ್ವಭಾವವು ಉತ್ತಮವಾದದ್ದು. ದುರ್ಜನರ ಸ್ವಭಾವವು ದುಷ್ಟವಾದದ್ದು. ಮಧ್ಯಮ ಮನುಷ್ಯನ ಸ್ವಭಾವವು ಸದಸತ್ ಮಿಶ್ರಿತವಾದದ್ದು. ಈ ಸ್ವಭಾವಗಳ ಅಭಿವ್ಯಕ್ತಿಗಳು ಅವರವರಿಗೆ ಪುರುಷಾರ್ಥತ್ವೇನ ಅಭಿಮತಗಳು. ಆದರೆ ಕೆಲವು ದುಷ್ಟಜೀವರು ತಮ್ಮ ಸ್ವಭಾವದ ಅಭಿವ್ಯಕ್ತಿಯನ್ನು ಶೂನ್ಯಭಾವದ ಪ್ರಾಪ್ತಿ ಎಂದು ಭ್ರಮಿಸಿದ್ದಾರೆ ಶೂನ್ಯಭಾವದ ಅಭಿವ್ಯಕ್ತಿತ್ವೇನ ಅಭಿಮತ ಸ್ವಸ್ವರೂಪಾಭಿವ್ಯಕ್ತಿಗೆ 'ಅಹಂ ಶೂನ್ಯಂ' 'ಅಹಂ ಶೂನ್ಯಂ' ಎಂಬ ಭಾವನೆಯು ಸಾಧನವೆಂದು ಅವರು ಅಂಗೀಕರಿಸಿದ್ದಾರೆ ಸುಧಾದಲ್ಲಿ ಇರುವ ತದೀಯ ಹಿತ ಎಂಬ ಪದಕ್ಕೆ ಅವರವರಿಗೆ ಹಿತತ್ವೇನ ಅಭಿಮತ ಎಂದು ಅರ್ಥ. ಒಬ್ಬನು ಬಿಳಿ ಬಣ್ಣದ ನೀರನ್ನು ಕ್ಷೀರವಿದು ಎಂದು ಭ್ರಮಿಸಿ ಈ ಕ್ಷೀರವು ನನಗೆ ಬೇಕು ಎಂದು ಕೇಳಿದಾಗ ಅದರ ಪ್ರಾಪ್ತಿಗೆ ಉಪಾಯವನ್ನು ಇನ್ನೊಬ್ಬನು ಹೇಳುವಂತೆ ಅಯೋಗ್ಯಜೀವರು ತಮ್ಮ ದುಷ್ಟಸ್ವಭಾವದ ಅಭಿವ್ಯಕ್ತಿಯನ್ನು ಇದು ಶೂನ್ಯಭಾವದ ಅಭಿವ್ಯಕ್ತಿ ಎಂದು ಭ್ರಮಿಸಿ ನನಗೆ ಶೂನ್ಯಭಾವದ ಅಭಿವ್ಯಕ್ತಿಯು ಬೇಕು ಎಂದು ಕೇಳಿದಾಗ ಆ ಶೂನ್ಯಭಾವದ ಅಭಿವ್ಯಕ್ತಿಗೆ ಸಾಧನವಾದ 'ಶೂನ್ಯಂ ಶೂನ್ಯಂ' ಎಂಬ ಭಾವನೆಯನ್ನು ಬುದ್ಧನು ಉಪದೇಶ ಮಾಡಿದನು ಎಂದು ಸುಧಾ ವಾಕ್ಯದ ಅರ್ಥ ಆದುದರಿಂದ ಪರಸ್ಪರ ವಿರೋಧವು ಇಲ್ಲ.



## ೨೯೯ ಪ್ರಭುಃ

೧ ನಿರ್ವಿಕಾರನಾಗಿ ಇರುವವನು.[1]

೨ ಸರ್ವಜ್ಞನು.[2]

---

೧ 1 ಪ್ರಕರ್ಷೇಣ ಶಶ್ವದೇಕಪ್ರಕಾರೇಣ ಭವತಿ ವರ್ತತ ಇತಿ ಪ್ರಭುಃ ನಿರ್ವಿಕಾರಃ ।

೨ 2 ಪ್ರಕರ್ಷೇಣ ಭವತಿ ಅನುಭವತಿ ಸರ್ವಮಿತಿ ಪ್ರಭುಃ ಸರ್ವಜ್ಞಃ ।

ಮಾಂಡೂಕೋಪನಿಷತ್ತು ಸೃಷ್ಟಿಯ ಕುರಿತು ಹೊರಟ ಪರಿಣಾಮವಾದ, ಮಾಯಾವಾದ—ಮುಂತಾದವುಗಳನ್ನೆಲ್ಲ ನಿರಾಕರಿಸಿ, ಭಗವಂತನ ಇಚ್ಛೆಯಿಂದಲೇ ನಡೆದ ಸೃಷ್ಟಿ ಇದು ಎಂದು ಸಿದ್ಧಾಂತಿಸಿರುವಾಗ ಈ ಅಭಿಪ್ರಾಯಗಳನ್ನಿಟ್ಟುಕೊಂಡೇ ಭಗವಂತನನ್ನು 'ಪ್ರಭು'—ಎಂದು ಉಲ್ಲೇಖಿಸಿದೆ[1] ನಿರ್ವಿಕಾರನಾಗಿರುವುದರಿಂದಲೂ, ಸರ್ವಜ್ಞನಾಗಿರುವುದರಿಂದಲೂ, ಸರ್ವಸಮರ್ಥನಾಗಿರುವುದರಿಂದಲೂ, 'ಪ್ರಭು' ಎನಿಸಿರುವ ಭಗವಂತನಿಂದ ಈ ರೀತಿಯ ಸೃಷ್ಟಿ ಆದೀತೇ ವಿನಹ ಬೇರೆ ವಿಧದ ಸೃಷ್ಟಿಗೆ ಅವಕಾಶವೇ ಇಲ್ಲ—ಎಂಬುದಾಗಿ ಅಲ್ಲಿಯ ಪ್ರಭು ಶಬ್ದ, ಉಪನಿಷತ್ತು ಸೃಷ್ಟಿಯ ಬಗ್ಗೆ ಸಾರಿದಸಿದ್ಧಾಂತಕ್ಕೆ ಪುಷ್ಟಿ ನೀಡುವಂತೆ ಪ್ರಯೋಗಿಸಲಟ್ಟಿದೆ[2]

೩ ಚೆನ್ನಾಗಿ ಹೊಂದುವವನು[3]

ಸರ್ವಸ್ವಾಮಿಯಾಗಿರುವ ಭಗವಂತನು ಎಲ್ಲವನ್ನೂ ತನ್ನದ್ದನ್ನಾಗಿ ಹೊಂದಿರುವನು

೪ ಪ್ರಕೃಷ್ಟವಾದ ಭೋಗವನ್ನೇ ಅನುಭವಿಸುವವನು.[4]

ಭಗವಂತನು ಜೀವಾತ್ಮರ ಇಂದ್ರಿಯಗಳನ್ನು ಅಧಿಷ್ಠಾನ ಮಾಡಿಕೊಂಡು, ವಿಷಯ ಪದಾರ್ಥಗಳನ್ನು ಭೋಗಿಸುವಾಗ ರಸಭಾಗವನ್ನಷ್ಟೇ ಸ್ವೀಕರಿಸುವನು[5]

---

1 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ. ' —ಮಾಂ. ಉ. 1-1-14

2 ' ಪ್ರಭುಪದಸ್ಯ ವ್ಯುತ್ಪತ್ತಿತ್ರಯೇಣ ನಿರ್ವಿಕಾರತ್ವ ಪೂರ್ಣಶಕ್ತಿತ್ವ ಸರ್ವಜ್ಞತ್ವ ರೂಪಾರ್ಥತ್ರಯ ಪರತ್ವಾತ್ ಪ್ರಭುಪದೇನೈವ ಪರಿಣಾಮವಾದಸ್ಯ, ವಿವರ್ತವಾದಸ್ಯ, ಮಾಯಾಸ್ವರೂಪತ್ವವಾದಸ್ಯ ಚ ನಿರಾಸೋ ಜ್ಞೇಯಃ'

—ಮಾಂ. ಉ ಖಂಡಾರ್ಥ

ಪೂರ್ಣಶಕ್ತಿತ್ವರೂಪಾರ್ಥಃ ಇಹ ತಮಸ್ಯ ಪ್ರಭುನಾಮ್ನಃ ವ್ಯಾಖ್ಯಾನೇ ದರ್ಶಿತಃ ।

೩ 3 ಪ್ರಕರ್ಷೇಣ ಭವತೇ ಪ್ರಾಪ್ನೋತೀತಿ ಪ್ರಭುಃ । 'ಭೂ ಪ್ರಾಪ್ತೌ' ।

೪ 4 ಪ್ರ ಪ್ರಕೃಷ್ಟಾನ್ ಭೋಗಾನ್ ಭವತಿ ಅನುಭವತಿ ಭುಂಕ್ತೆ ಇತಿ ಯಾವತ್ ಪ್ರಭುಃ ।

5 ಭುಂಜಾನಂ ವಾ ಗುಣಾನ್ವಿತಮ್ । —ಗೀ. 15-10

ಗುಣಾನ್ವಿತಮೇವ ಭುಂಕ್ತೇ । - ಗೀ. ಭಾ.

೫ ಪ್ರಕೃಷ್ಟನಾದ ತನ್ನನ್ನು (ಯಾವಾಗಲೂ) ಅನುಭವಿಸುತ್ತಿರುವವನು.[1]

ಭಗವಂತನು ಯಾರ ಅನುಗ್ರಹವೂ ಇಲ್ಲದೆ ಸರ್ವಗುಣಪರಿಪೂರ್ಣವಾದ ಸ್ವರೂಪವನ್ನು ಕಾಣುತ್ತ ಅನುಭವಿಸುತ್ತಿರುವವನು.[2]

೬ ಎಲ್ಲದ್ದಕ್ಕಿಂತಲೂ ಮೊದಲು ಇರುವವನು.[3]

[ಅರ್ಥವಿಶೇಷಗಳನ್ನು ೩೫ನೆಯ 'ಪ್ರಭುಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

## ಜಿಜ್ಞಾಸೆ

[ಪ್ರಭುತ್ವ ಯುಕ್ತಿ]

ಪ್ರ - 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬ ಶ್ರುತಿಯು ಪ್ರಭುತ್ವ ಯುಕ್ತಿಯಿಂದ ಈ ಜಗತ್ ಸೃಷ್ಟಿಯು ಮಾಯೆಯಿಂದ ಆದದ್ದು ಅಲ್ಲ, ಸತ್ಯಭೂತವೇ ಆದ ಈ ಸೃಷ್ಟಿಯು ಪರಮಾತ್ಮನ ಇಚ್ಛಾಮಾತ್ರದಿಂದ ಆಗಿರುತ್ತದೆ ಎಂದು ಸಿದ್ಧ ಮಾಡುತ್ತದೆ ಪ್ರಭುತ್ವ ಯುಕ್ತಿಯು ಈ ಸೃಷ್ಟಿಯು ಸತ್ಯ ಎಂಬುದಕ್ಕೆ ಹೇಗೆ ಸಾಧಕವಾಗುತ್ತದೆ?

ಉ – 'ಸತ್ಯಪೀತಾಂಬರಾಲಾಭೇ ಮಾಯಾಪೀತಾಂಬರಂ ಸೃಜೇತ್' ಎಂದು ಯುಕ್ತಿಮಲ್ಲಿಕಾ ಗ್ರಂಥದಲ್ಲಿ ಈ ಯುಕ್ತಿಯನ್ನು ಸ್ಪಷ್ಟೀಕರಿಸಿದ್ದಾರೆ. ಲೋಕದಲ್ಲಿ ಸತ್ಯ ಪೀತಾಂಬರವನ್ನು ಸೃಷ್ಟಿ

---

೫ 1 ಪ್ರ ಪ್ರಕೃಷ್ಟಂ ಸ್ವಾತ್ಮಾನಂ ಸರ್ವದಾ ಭವತಿ ಅನುಭವತೀತಿ ಪ್ರಭುಃ ।

2 ವಿನೈವಾನ್ಯಪ್ರಸಾದೇನ ಪೂರ್ಣಸರ್ವಗುಣಾತ್ಮಕಮ್ । ಪಶ್ಯನ್ನನುಭವತ್ಯೇವ ಸ್ವಂ ರೂಪಂ ಕೇಶವಃ ಪ್ರಭುಃ । –ಬೃಹಚ್ಛ್ರುತಿ (ಬೃ ಉ ಭಾ. 5–4–1)

೬ 3 ಪ್ರಥಮಂ ಭವತಿ ಸರ್ವಸ್ಮಾಪಿ ಆದೌ ಭವತೀತಿ ಅನಾದಿನಿತ್ಯತ್ವಾತ್ ಪ್ರಭುಃ ।

* * *

೨೮ ಅರ್ಥೇಷು ವಿದ್ಯಮಾನಃ ಭಾಧಾತುಃ ಭಾವನಾಮ್ನಃ (೭) ವ್ಯಾಖ್ಯಾನೇ ಪ್ರದರ್ಶಿತಃ । ಸೋಽತ್ರಾಪ್ಯತ್ರ ಉಪಯೋಜ್ಯಃ । ಪ್ರಕರ್ಷೇಣ ಭಾತೀತಿ ಪ್ರಭಃ ಇತಿ ನಿಷ್ಪದ್ಯತೇ ಚೇದಪಿ 'ತೃತೀಯೋಽತಿಶಯೇ' ಇತಿ ಅತಿಶಯಾರ್ಥೇ ಅಕಾರಸ್ಥಾನೇ ಉಕಾರಸ್ಯ ಪ್ರಯೋಗೇ ಸತಿ 'ಪ್ರಭುಃ' ಇತ್ಯೇವ ಸಿದ್ಧ್ಯತಿ । ತಥಾಚ ಅತಿಶಯಮದ್ಯುತ್ಯಾದಿ ನ್ಯೋತ್ಯತೇ ।

ಮಾಡುವ ಸಾಮರ್ಥ್ಯ ಇಲ್ಲದವನು ಮಾಯಾಪೀತಾಂಬರವನ್ನು ಸೃಷ್ಟಿ ಮಾಡುತ್ತಾನೆ ಪರಮಾತ್ಮನು ಸರ್ವಸಮರ್ಥನು ಎಂಬ ಅರ್ಥದಲ್ಲಿ ಪ್ರಭು ಎಂದು ಅನಿಸಿಕೊಂಡಿದ್ದಾನೆ ಇಂತಹ ಪರಮಾತ್ಮನು ಸತ್ಯವಾದ ಪ್ರಪಂಚವನ್ನೇ ಸೃಷ್ಟಿಮಾಡಿದ್ದು ಹೊರತು ಮಾಯಾ ಸೃಷ್ಟಿ ಮಾಡಿದ್ದು ಅಲ್ಲ ಎಂದು ನಿರ್ಣಯವಾಗುತ್ತದೆ.



ಯುಗಾದಿಕೃದ್ ಯುಗಾವರ್ತೋ ನೈಕಮಾಯೋ ಮಹಾಶನಃ ।
ಅದೃಶ್ಯೋ ವ್ಯಕ್ತರೂಪಶ್ಚ ಸಹಸ್ರಜಿದನಂತಜಿತ್ ॥ ೩೩ ॥

## ೩೦೦ ಯುಗಾದಿಕೃತ್

೧ ಯುಗಗಳನ್ನು ಆರಂಭಿಸುವವನು.[1]

ಕಾಲನಿಯಾಮಕನಾಗಿರುವ ಭಗವಂತನು ಆಯಾಯ ಯುಗದಲ್ಲಿ ಜಗತ್ತು ಹೇಗೆ ನಡೆಯಬೇಕೋ ಹಾಗೆ ನಡೆಸುತ್ತ ಒಂದು ಯುಗ ಮುಗಿದಾಗ ಆ ಯುಗಧರ್ಮವನ್ನು ಕೊನೆಗೊಳಿಸಿ, ಮತ್ತೆ ಮುಂದಿನ ಯುಗಧರ್ಮ ನಡೆಯುವಂತೆ ಮಾಡುವುದರ ಮೂಲಕ ಆ ಯುಗವನ್ನು ಪ್ರಾರಂಭಿಸುವನು ಕಲಿಯುಗದ ಧರ್ಮಗಳನ್ನು ಕೊನೆಗೊಳಿಸಿ, ಕೃತಯುಗದ ಧರ್ಮಗಳನ್ನು ಪ್ರವರ್ತಿಸುವುದರ ಮೂಲಕ ಭಗವಂತನು ತನ್ನ ಕಲ್ಕಿರೂಪದಿಂದ ಕೃತಯುಗವನ್ನು ಪ್ರಾರಂಭಿಸುವನು. ಆದ್ದರಿಂದಲೇ ಶ್ರೀಮದಾಚಾರ್ಯರು ಕಲ್ಕಿರೂಪವನ್ನು ಸ್ತುತಿಸುವಾಗ 'ಮೂಲಯುಗದೇ'—ಎಂದು ಭಗವಂತನನ್ನು ಸಂಬೋಧಿಸಿರುವರು[2]

೨ ಯುಗವೇ ಮೊದಲಾದ ಕಾಲವಿಶೇಷಗಳನ್ನು ಸೃಷ್ಟಿಸುವವನು[3]

ಬೇರೆ ಬೇರೆ ಕಾಲವಿಶೇಷಗಳನ್ನು ಉಂಟುಮಾಡುವವನು ಕಾಲನಿಯಾಮಕನಾದ ಭಗವಂತನೇ ಅಧಿಕ ಪುರುಷನೆನಿಸಿರುವ ಅವನಿಂದಲೇ ಕಾಲವಿಶೇಷಗಳಾದ ನಿಮೇಷ, ಕಲಾ,

---

೧ 1 ಯುಗಾನಾಮಾದಿಃ ಆರಂಭಸ್ತಂ ಕರೋತೀತಿ ಯುಗಾದಿಕೃತ್ ।

2 'ದುಷ್ಟಕುಲಾಂತಕ ಕಲ್ಕಿಸ್ವರೂಪ ಧರ್ಮವಿವರ್ಧನ ಮೂಲಯುಗಾದೇ'
—ದ್ವಾ. ಸ್ತೋ.

೨ 3 ಯುಗಾದಿಕಾಲಭೇದಂ ಕರೋತೀತಿ ಯುಗಾದಿಕೃತ್ ।

ಮುಹೂರ್ತ, ಕಾಷ್ಠ, ರಾತ್ರಿ ಹಗಲು, ಪಕ್ಷ, ಮಾಸ, ಋತು, ಸಂವತ್ಸರ, ಮುಂತಾದವುಗಳು ಆವಿರ್ಭವಿಸಿದವೆಂದು ಮಹಾನಾರಾಯಣೋಪನಿಷತ್ತು ಸಂದೇಶಿಸಿದೆ[1]

೩ ಯೋಗಿಗಳಿಂದ ಸರ್ವದಾ ಧ್ಯಾನಿಸಲ್ಪಡುವವನು, ಚತುರ್ಮುಖನನ್ನು ಸೃಷ್ಟಿಸಿರುವವನು.[2]

ಅಗ್ರಜನಾದ ಚತುರ್ಮುಖನನ್ನು ಶ್ರೇಷ್ಠ ಶರೀರವುಳ್ಳವನನ್ನಾಗಿ ಸೃಷ್ಟಿಸಿರುವ ವಾಸುದೇವನನ್ನು ಸಂತೋಷಪಡಿಸುವೆನೆಂಬುದಾಗಿ ಶ್ರೀಮದಾಚಾರ್ಯರು ಸ್ತುತಿಸಿರುವರು[3]

೪ ಮೊದಲನೆಯದಾದ ಸರಸ್ವತೀ ಚತುರ್ಮುಖರ ಜೋಡಿಯನ್ನು ನಿರ್ಮಿಸಿರುವವನು[4]

ಸೃಷ್ಟಿಯ ಪ್ರಾರಂಭದಲ್ಲಿ ಚತುರ್ಮುಖನು ತಾನು ಒಬ್ಬನೇ ಕ್ರೀಡಿಸುವಂತಿಲ್ಲ ಎಂದು ವಿವೇಚಿಸಿ, ದಪ್ಪ ಆಗುವನು—ದಪ್ಪವಾದ ಅವನ ಆ ಶರೀರದಿಂದಲೇ ಪತಿ ಮತ್ತು ಪತ್ನಿಗಳು ಉಂಟಾಗುವರು ಚತುರ್ಮುಖ ಹಾಗೂ ಸರಸ್ವತಿಯರೇ ಆ ಪತಿ ಪತ್ನಿಗಳು ಅವರ ಮೂಲಕವೇ ರುದ್ರಾದಿಗಳು ಜನಿಸುವರು[5] ಹೀಗೆ ಸೃಷ್ಟಿಯ ಆದಿಯಲ್ಲಿ ಸರಸ್ವತೀ ಚತುರ್ಮುಖರ ಜೋಡಿ ಸೃಷ್ಟಿಸಲ್ಪಟ್ಟಿದ್ದು, ಇದಕ್ಕೆ ಭಗವದನುಗ್ರಹವೇ ಮುಖ್ಯ ಕಾರಣ

---

1 ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ। ಕಲಾ ಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ। ಅರ್ಧಮಾಸಾ ಮಾಸಾ ಋತವಃ ಸಂವತ್ಸರಶ್ಚ ಕಲ್ಪಂತಾಮ್ ।
—ಮ. ನಾ. ಉ

೩ 2 ಯುಜ್ಯತೇ ಸಂಬಧ್ಯತೇ ಸರ್ವದಾ ಯೋಗಿಭಿಃ ಸ್ವಹೃದೀತಿ ಯುಗಃ । ಯುಜಿರ್ ಯೋಗೇ । ಆದಿಂ ಆದ್ಯಂ ಚತುರ್ಮುಖಂ ಕರೋತಿ ಸೃಜತೀತಿ ಆದಿಕೃತ್ ।

3 'ಅಗ್ರಜಂ ಯಃ ಸಸರ್ಜಾಜಮಗ್ರ್ಯಾಕೃತಿಂ ಪ್ರೀಣಯಾಮೋ ವಾಸುದೇವಂ .'
—ದ್ವಾ. ಸ್ತೋ.

೪ 4 ಯುಗಾದೇಃ (ಆದಿಶ್ಚಾಸೌ ಯುಗಶ್ಚ ಯುಗಾದಿಃ) ಆದಿಮಿಥುನಸ್ಯ ಸರಸ್ವತೀಬ್ರಹ್ಮಾಖ್ಯಸ್ಯ ಕರ್ತಾ । —ವಿ. ರಾ.

5 ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ ಸ ದ್ವಿತೀಯಮೈಚ್ಛದ್ ಸ ಹೈತಾವಾನಾಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ ದ್ವೇಧಾಪಾತಯತ್ ತತಃ ಪತಿಶ್ಚ ಪತ್ನೀ ಚಾಭವತಾಂ ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ

೫ (ಜೀವಾತ್ಮರಿಗೆ) ಸುಖ ದುಃಖ ದ್ವಂದ್ವಾತ್ಮಕ ಸಂಸಾರಾವಸ್ಥೆ ಪ್ರಾರಂಭಿಸುವವನು.[1]

ಜಿಜ್ಞಾಸೆ

[ವಿಧಿನಿಷೇಧಬದ್ಧನಲ್ಲ]

ಪ್ರ - ಪರಮಾತ್ಮನಿಗೆ ಚತುರ್ಮುಖನು ಮಗನು, ಸರಸ್ವತಿಯು ಮಗಳು ಈ ತನ್ನ ಮಗಳನ್ನು ತನ್ನ ಮಗನಿಗೆ ವಿವಾಹ ಮಾಡಿದ್ದಾನೆ ಪರಮಾತ್ಮನು ಆದರೆ ಶಾಸ್ತ್ರವು ಪರಮಾತ್ಮನ ಆಜ್ಞಾರೂಪವಾಗಿದ ಅಂತಹ ಶಾಸ್ತ್ರವು ಮಗಳನ್ನು ಮಗನಿಗ ವಿವಾಹ ಮಾಡಬಾರದು ಎಂದು ಹೇಳುತ್ತದೆ. ಈ ರೀತಿ ಪರಮಾತ್ಮನು ಸ್ವಕ್ರಿಯಾವಿರೋಧ ರೂಪದೋಷವುಳ್ಳವನಾಗುವುದಿಲ್ಲವೇ?

ಉ - ರಾಜನ ಆಜ್ಞೆಯು ಪ್ರಜೆಗಳಿಗೆ ಬಂಧಕ ರಾಜನಿಗೆ ಬಂಧಕವಾಗುವದಿಲ್ಲ ಅದರಂತೆ ಪರಮಾತ್ಮನ ಆಜ್ಞಾರೂಪ ಶಾಸ್ತ್ರ ವಿದಿ ಬದ್ಧರು ಇತರರು ಹೊರತು ಪರಮಾತ್ಮನು ಅಲ್ಲ. ತಾನು ಯಾವ ವಿಧಿ ನಿಷೇಧ ಬದ್ಧನಲ್ಲ ಎಂದು ತಿಳಿಸುವದಕ್ಕಾಗಿ ಈ ರೀತಿ ಮಾಡುತ್ತಾನೆ



೩೦೧ ಯುಗಾವರ್ತಃ

೧ ಕೃತಾದಿಯುಗಗಳು ಮತ್ತೆ ಮತ್ತೆ ಮರಳಿ ಬರುವಂತೆ ಮಾಡುವವನು.[2]

---

ಸ್ವಾಕ್ತಹ ಯಾಜ್ಞವಲ್ಕ್ಯಸ್ತಸ್ಮಾದಯಮಾಕಾಶಃ ಸ್ತ್ರೀಯಾ ಪೂರ್ಯತ ಏವ ತಾಂ ಸಮ- ಭವತ್‌ತತೋ ಮನುಷ್ಯಾ ಅಜಾಯಂತ । –ಬೃ ಉ. 3-4-3

ನ ರೇಮೇ ಸ ತತೋ ಬ್ರಹ್ಮಾ ತಸ್ಮಾದೇಕಸ್ಯ ನೋ ರತಿಃ । ಅದ್ಯಾಪಿ ಪತ್ನೀಮನ್ವೈಚ್ಛಚ್ಚ ಸ ಸ್ಥೂಲತ್ವಮುಪಾಗತಃ । ದಂಪತೀ ಸಹಿತೋ ಯಾವದ್ ಬ್ರಹ್ಮಾ ಚೈವ ಸರಸ್ವತೀ । ತಾವದ್ದೇಹೋಽಭವತ್ ಬ್ರಹ್ಮಾ ತತೋ ದೇಹಂ ದ್ವಿಧಾಽಕರೋತ್ । ಪಾತನಾತ್ ಪತಿ- ಪತ್ನೀತ್ವಶಬ್ದ ಏನೋರಜಾಯತ । ತಸ್ಮಾತ್ ತಯೋರೇಕಸುಖಂ ಭವತ್ಯೇವಾರ್ಧಪಾತ್ರವತ್ । ತತಸ್ತಸ್ಮಾಮುಮೇಶಾದೀನ್ ದೇವಾನ್ ಸರ್ವಮ್ಸಘೋನಪಿ । ಜನಯಾಮಾಸ ಬೋಧಸ್ಯ ಪ್ರಾಧಾನ್ಯಂ ಹಿ ಮನುಷ್ಯತಾ -ಬ್ರಹ್ಮತರ್ಕ (ಬೃ. ಉ. ಭಾ.)

೫ 1 ಜೀವಾತ್ಮನಾಂ ಯುಗಸ್ಯ ಸುಖದುಃಖಯುಗಲಾತ್ಮಕಸ್ಯ ಸಂಸಾರಸ್ಯ ಆದಿಂ ಪ್ರಾರಂಭಂ ಕರೋತೀತಿ ಯುಗಾದಿಕೃತ್ । 'ಯುಗ್ಮಂ ತು ಯುಗಲಂ ಯುಗಮ್' ।

೧ 2 ಕೃತಾದೀನಿ ಯುಗಾನ್ಯಾವರ್ತಯತೀತಿ ಯುಗಾವರ್ತಃ ।
–ವಿ. ರಾ

ಭಗವಂತನು ಕಾಲಚಕ್ರ ಮತ್ತು ಜಗಚ್ಚಕ್ರವನ್ನು ಹೇಗೋ ಹಾಗೆಯೇ ತನ್ನ ಸಾಮರ್ಥ್ಯದಿಂದಾಗಿ ಯುಗಚಕ್ರವನ್ನೂ ಯಾವಾಗಲೂ ತಿರುಗಿಸುತ್ತಿರುವನೆಂದು ಮಹಾಭಾರತ ತಿಳಿಸಿದೆ[1]

೨ ಕೃತಾದಿಯುಗಗಳು ಚೆನ್ನಾಗಿ ಪ್ರವರ್ತಿಸುವಂತೆ ಮಾಡುವವನು.[2]

೩ (ನಿತ್ಯ ಸಂಸಾರಿಗಳಿಗೆ) ಸುಖ ದುಃಖ ದ್ವಂದ್ವಾತ್ಮಕವಾದ ಸಂಸಾರ ಮತ್ತೆ ಮತ್ತೆ ಬರುವಂತೆ ಮಾಡುವವನು[3]

೪ ಯೋಗಿಗಳಿಂದ ಧ್ಯಾನಿಸಲ್ಪಡುವವನು ಕಾಲಚಕ್ರ, ಜಗಚ್ಚಕ್ರ ಹಾಗೂ ಯುಗಚಕ್ರಗಳನ್ನು ತಿರುಗಿಸುವವನು[4]

೫ (ಕೃಷ್ಣಾವತಾರದಲ್ಲಿ ಅರ್ಜುನನ ಸಾರಥಿಯಾಗಿ) ರಥವನ್ನು ಚನ್ನಾಗಿ ನಡೆಸಿದುವವನು[5]

ಕರ್ಣನು ಅರ್ಜುನನ ಮೇಲೆ ಸರ್ಪಾಸ್ತ್ರವನ್ನು ಪ್ರಯೋಗಿಸಲು ಶ್ರೀಕೃಷ್ಣನು ಅರ್ಜುನನ ರಥವನ್ನು ಪಂಚಾಂಗುಲಗಳಷ್ಟು ಭೂಮಿಯೊಳಗೆ ಇಳಿಸಿ, ಅರ್ಜುನನು ಸರ್ಪಾಸ್ತ್ರದ ಅಪಾಯದಿಂದ ಪಾರಾಗುವಂತೆ ಮಾಡಿರುವನು[6] ಹೀಗೆ ಬೇರೆ ಬೇರೆ ಸಂದರ್ಭಗಳಲ್ಲಿ ಅವನು ರಥ ನಡೆಸುವುದರಲ್ಲೂ ತನ್ನ ನೈಪುಣ್ಯವನ್ನು ವ್ಯಕ್ತಮಾಡಿರುವನು

---

1 ಕಾಲಚಕ್ರಂ ಜಗಚ್ಚಕ್ರಂ ಯುಗಚಕ್ರಂ ಚ ಕೇಶವಃ ।
ಆತ್ಮಯೋಗೇನ ಭಗವಾನ್ ಪರಿವರ್ತಯತೇಽನಿಶಮ್ ॥
-ಮ ಭಾರ ಉದ್ಯೋಗ 68-18

೨ 2 ಯುಗಾನಿ ಕೃತಾದೀನಿ ಆ ಸಮ್ಯಕ್ ವರ್ತಯತಿ ಪ್ರವರ್ತಯತೀತಿ ಯುಗಾವರ್ತಃ ।

೩ 3 ಯುಗಂ ನಿತ್ಯಸಂಸಾರೀಣಾಂ ಸುಖದುಃಖಯುಗಲಾತ್ಮಕಂ ಸಂಸಾರಂ ಆವರ್ತಯತೀತಿ ಯುಗಾವರ್ತಃ ।

೪ 4 ಯೋಗಿಭಿಃ ಹೃದಿ ಯುಜ್ಯತ ಇತಿ ಯುಗಃ । ಕಾಲಚಕ್ರಂ ಜಗಚಕ್ರಂ ಯುಗಚಕ್ರಂ ಚ ಆವರ್ತಯತೀತಿ ಆವರ್ತಃ । ಯುಗಶ್ಚಾಸಾವರ್ತಶ್ಚ ಯುಗಾವರ್ತಃ ।

೫ 5 ಯುಗಂ ಅರ್ಜುನಸ್ಯ ರಥಂ ಆ ಸಮ್ಯಕ್ ವರ್ತಯತಿ ಪ್ರವರ್ತಯತೀತಿ ಯುಗಾವರ್ತಃ।
'ಯುಗೋ ರಥೇ ' -ಮೇದಿನಿ ।

6 ತಂ ವಾಸುದೇವೋ ರಥಮಾನಮಯ್ಯ ಮೋಘಂ ಚಕಾರ ..
-ಮ. ಭಾರ. ಶಾ. ಪ 27-18-7

೬ ರಥದ ಅಂಗವಾದ ಚಕ್ರವನ್ನು ತಿರುಗಿಸುವವನು[1]

## ಜಿಜ್ಞಾಸೆ

['ಯಥಾಪೂರ್ವಮಕಲ್ಪಯತ್']

ಪ್ರ - ಪರಮಾತ್ಮನು ಕಾಲಚಕ್ರವನ್ನು ತಿರುಗಿಸುತ್ತಾನೆ ಎಂದು ಹೇಳಿದಾಗ ಈಗ ಇರುವ ಕಾಲ ಮುಂದೆಯೂ ಬರುತ್ತದೆಂದು ಅರ್ಥವಾಗುವದು. 'ಧಾತಾ ಯಥಾಪೂರ್ವಮಕಲ್ಪಯತ್ ಈ ಶ್ರುತಿಯೂ ಕೂಡ ಇದನ್ನೇ ಹೇಳುತ್ತದೆ ಹಾಗಾದರೆ ನಾವುಗಳು ಈಗಿನ ಹೆಸರು ಉಳ್ಳವ ರಾಗಿ ಯಾವ ರೀತಿಯಲ್ಲಿ ಈಗ ಜೀವನವನ್ನು ಸಾಗಿಸುತ್ತಾ ಇದ್ದೇವೋ ಇದೇ ರೀತಿ ಮುಂದೆ ಇದೇ ಕಾಲವು ಬರುವಾಗ ಇರುವೆವೋ? ಹೇಗೆ? ಹೌದು ಎಂದು ಹೇಳುವದಾದರೆ ನಾವು ಸಾಧನವನ್ನು ಹೆಚ್ಚೆಚ್ಚು ಮಾಡುತ್ತಾ ಅಭಿವೃದ್ಧಿಪಥದಲ್ಲಿ ನಡೆಯುತ್ತಾ ಇರೋಣದರಿಂದ ಮುಂದೆ ನಾವು ಈಗ ಇರುವದಕ್ಕಿಂತಲೂ ಉತ್ತಮ ರೀತಿಯಲ್ಲಿ ಇರಬೇಕಲ್ಲವೇ? ಮುಂದೆಯೂ ನಾವು ಈಗ ಇದ್ದಂತೆ ಇರುವದು ಹೇಗೆ?

ಉ - ವೇದಗಳಲ್ಲಿ ಯಾರು ಯಾರು ಪ್ರತಿಪಾದ್ಯರೋ ಅವರು ಮಾತ್ರ ಮುಂದೆ ಈ ಕಾಲವು ಬರವಾಗ ಇದೇ ನಾಮರೂಪ ಇದೇ ಜೀವನಕ್ರಮವುಳ್ಳವರಾಗುತ್ತಾರೆ. ವೇದಪ್ರತಿಪಾದ್ಯರು ಸಾಧನಾನು-ಷ್ಠಾನ ಮಾಡಿ ಮೇಲಿನ ಕಕ್ಷ್ಯವನ್ನು ಏರಿದಾಗ ಆ ಪದಯೋಗ್ಯಗಣಸ್ಥರು ಅದೇ ನಾಮ ರೂಪವುಳ್ಳವರಾಗಿ ಅದೇ ರೀತಿಯಾದ ಎಲ್ಲ ಕಾರ್ಯಕ್ರಮ ಉಳ್ಳವರಾಗಿ ಬರುತ್ತಾ ಇರುತ್ತಾರೆ ಈ ದೃಷ್ಟಿಯಿಂದ ಕಾಲಚಕ್ರದ ವ್ಯವಹಾರವು ಕೂಡುತ್ತದೆ.



## ೩೦೨ ನೈಕಮಾಯಃ

೧ ಅನಂತ ಶಕ್ತಿಗಳುಳ್ಳವನು[2]

---

೬ 1 ಯುಗಂ ರಥಾಂಗಂ ಚಕ್ರಂ ಆವರ್ತಯತೀತಿ ಯುಗಾವರ್ತಃ । 'ಯುಗೋ ರಥ-ಹಲಾದ್ಯಂಗೇ ' -ಮೇದಿನೀ ।

೧ 2 ನೈಕಾಃ ಅನೇಕಾಃ ಅನಂತಾ ಇತಿ ಯಾವತ್, ಮಾಯಾಃ ಶಕ್ತಯೋ ಯಸ್ಯ ಸಃ ನೈಕ-ಮಾಯಃ । 'ಅನೇಕಬಾಹೂದರವಕ್ತ್ರನೇತ್ರಂ' (ಗೀ-11-16) ಇತ್ಯತ್ರ 'ಅನೇಕ ಶಬ್ದೋಽನಂತವಾಚೀ' ಇತಿ ವ್ಯಾಖ್ಯಾತಂ ತದ್ವದತ್ರಾಪಿ । 'ಮುಖ್ಯಮಾಯಾ ಹರೇಃ ಶಕ್ತಿಃ ' -ಭಾಗ. ತಾ. ನಿ 2-5-11

ಎಲ್ಲ ವಿಧದ ಶಕ್ತಿಗಳೂ ಭಗವಂತನಲ್ಲಿವೆ. ಋಗ್ವೇದವು ಇಂದ್ರನಾಮಕ ಭಗವಂತನಲ್ಲಿ ಸಕಲ ಶಕ್ತಿಗಳೂ ಇವೆ ಎಂಬುದಾಗಿ ಸಾರುತ್ತಿದೆ.[1] ಎಲ್ಲ ಶಕ್ತಿಗಳನ್ನು ಧರಿಸಿಕೊಂಡಿರುವವನು ಭಗವಂತನೆಂದು ಧ್ರುವನೂ ಪ್ರಾರ್ಥಿಸಿರುವನು.[2] ಭಗವಂತನು ಸರ್ವಶಕ್ತಿಗಳಿಂದಲೂ ಕೂಡಿದವನೆಂಬುದಾಗಿ ಸಾರುತ್ತಿರುವ ಚತುರ್ವೇದಶಿಖೆಯ ಆಧಾರದ ಮೇಲೆ ಬ್ರಹ್ಮಸೂತ್ರವೊಂದು, ಭಗವಂತನು ಸರ್ವಶಕ್ತಿಸಂಪನ್ನನೆಂದು ನಿರ್ಣಯಿಸಿದೆ.[3]

೨ ಅನಂತ ಮಹಿಮೆಗಳುಳ್ಳವನು[4]

ವೇದಗಳೆಲ್ಲ ಭಗವಂತನ ಮಹಿಮೆಗಳನ್ನೇ ಸಾರುತ್ತಿದ್ದರೂ, ಅವುಗಳಿಗೆ ಸಮಗ್ರವಾಗಿ ಹೇಳಲಾಗದಷ್ಟು ಮಹಿಮೆಗಳು ಭಗವಂತನದು. ವೇದಗಳು ಸಮಗ್ರವಾಗಿ ಭಗವಂತನನ್ನು ಹೇಳದ ಪ್ರಯುಕ್ತ 'ಅಸಮದರ್ಶನ' ಎಂದೆನಿಸಿವೆ ಎಂದು ತಂತ್ರಭಾಗವತ ತಿಳಿಸಿದೆ.[5] ಪುರುಷಸೂಕ್ತ ಭಗವಂತನ ಮುಕ್ತಾಮುಕ್ತ ನಿಯಾಮಕತ್ವ ಮುಂತಾದ ಮಹಿಮೆಗಳನ್ನು ಹೇಳಿ, ಭಗವಂತನದು ಇಷ್ಟೇ ಮಹಿಮೆ

---

1 ಯಸ್ಮಿನ್ ವಿಶ್ವಾನಿ ಪೌಂಸ್ಯಾ । —ಋ ವೇ. 6-9

'ಪೌರುಷಾಣಿ ಶಕ್ತಯೋ ಯತ್ರ ಚಾಖಿಲಾಃ । ಅತಶ್ಚಾನಂತಶಕ್ತಿತ್ವಾನ್ನ ವೃದ್ಧ್ಯಾದ್ಯಾಃ ಕಥಂಚನ । ಸರ್ವೋಪೇತೇತ್ಯೇತಮರ್ಥಮಭಿಪ್ರೇತ್ಯಾಹ ವೇದರಾಟ್'

—ಋ. ಭಾ.

2 'ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತ್ಯಖಿಲ-ಶಕ್ತಿಧರಃ ' —ಭಾಗ. 4-9-6

3 'ಸರ್ವೋಪೇತಾ ಚ ತದ್ದರ್ಶನಾತ್' —ಬ್ರ ಸೂ. 2-1-31

ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಮಾಹುರಜಸ್ರಶಕ್ತಿಮ್ ।
...ಇತಿ ಚ ಚತುರ್ವೇದಶಿಖಾಯಾಮ್ ।
ಅತೋ ನ ಕೇವಲಂ ವಿಚಿತ್ರಶಕ್ತಿಃ ಸರ್ವಶಕ್ತಿರೇವ ।

೨ 4 ನೈಕಾಃ ಅನೇಕಾಃ ಅನಂತಾ ಇತಿ ಯಾವತ್, ಮಾಯಾಃ ಮಹಿಮಾನಃ ಯಸ್ಯ ಸಃ ನೈಕಮಾಯಃ । 'ಮುಖ್ಯತೋ ವಿಷ್ಣುಮಾಹಾತ್ಮ್ಯಂ ಮಾಯಾಶಬ್ದೋದಿತಂ ಭವೇತ್ । ಪ್ರಧಾನತ್ವಾಚ್ಚ ಮಾತೃತ್ವಾನ್ನೇಯತ್ವಾಚ್ಚೈವ ತಸ್ಯ ಹಿ' (ಭಾಗ. ತಾ. ನಿ. 2-9-41)

5 ಮಹಿಮ್ನಃ ಸರ್ವತೋಽನುಕ್ತೇರ್ವೇದಾಶ್ಚಾಸಮದರ್ಶನಾಃ ।

—ತಂತ್ರಭಾಗವತ (ಭಾಗ. ತಾ. ನಿ. 10.94 24)

ಯೇ? ಅಲ್ಲ, ಇನ್ನೂ ಉತ್ಕೃಷ್ಟನಾದವನು ಅವನು ಎನ್ನುವುದರ[1] ಮೂಲಕ ಅವನು ಅನಂತ ಮಹಿಮೆ ಉಳ್ಳವನೆಂಬುದನ್ನು ಸೂಚಿಸಲಾಗಿದೆ. ಪಾರ್ಥಿವ ಧೂಳಿಕಣಗಳನ್ನು ಎಣಿಸಬಲ್ಲ ಕವಿಯೂ ಶ್ರೀ ವಿಷ್ಣುವಿನ ಮಹಿಮೆಗಳ ಎಣಿಕೆಗೆ ಅರ್ಹನಾಗಲಾರನು ಎನ್ನುವುದರ ಮೂಲಕ ಚತುರ್ಮುಖನು ಭಗವಂತನ ಮಹಿಮೆಗಳು ಅನಂತ ಎಂದು ಸೂಚಿಸಿರುವನು.[2]

೩ ಅನಂತ ಜ್ಞಾನಗಳು ಉಳ್ಳವನು.[3]

೪ ಅನಂತ ಇಚ್ಛೆಗಳು ಉಳ್ಳವನು.[4]

೫ ಶ್ರೀ, ಭೂ, ದುರ್ಗಾ ಮುಂತಾದ ಅನೇಕ ರೂಪಗಳುಳ್ಳ ಲಕ್ಷ್ಮೀದೇವಿ ಪತ್ನಿ ಆಗಿ ಉಳ್ಳವನು.[5]

ಶ್ರೀ, ಭೂ, ದುರ್ಗಾ, ಅಂಭ್ರಣೀ, ಹ್ರೀ, ಮಹಾಲಕ್ಷ್ಮೀ, ದಕ್ಷಿಣಾ, ಸೀತಾ, ಜಯಂತೀ' ಸತ್ಯಾ, ಹಾಗೂ ರುಗ್ಮಿಣೀ ಹೀಗೆ ಹನ್ನೊಂದು ಲಕ್ಷ್ಮೀದೇವಿಯ ರೂಪಗಳನ್ನು ಉಲ್ಲೇಖಿಸಿರುವ

---

1 ಏತಾವಾನಸ್ಯ ಮಹಿಮಾಽತೋ ಜ್ಯಾಯಾಂಶ್ಚ ಪುರುಷಃ ।
-ಪು. ಸೂ

ನ ಕೇವಲಂ ಏತಾವಾನಸ್ಯ ಮಹಿಮಾ ಕಿಂತ್ವತೋ ಜ್ಯಾಯಾಂಶ್ಚ ಪುರುಷಃ ।
-ಕ ನಿ. ಟೀ

2 'ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।' —ಭಾಗ 2-7-40

೩ 3 ನೈಕಾಃ ಅನೇಕಾಃ ಅನಂತಾಃ ಇತಿ ಯಾವತ್, ಮಾಯಾಃ ಜ್ಞಾನಾನಿ ಯಸ್ಯ ಸಃ ನೈಕಮಾಯಃ । 'ತ್ರಿಗುಣಾತ್ಮಿಕಾಥ ಜ್ಞಾನಂ ಚ ವಿಷ್ಣುಶಕ್ತಿಸ್ತಥೈವ ಚ ಮಾಯಾಶಬ್ದೇನ ಭಣ್ಯಂತೇ ಶಬ್ದತತ್ತ್ವಾರ್ಥವೇದಿಭಿಃ'-ನಾಮಹೋದಧಿ (ಭಾಗ ತಾ ನಿ. 1-12-56)

೪ 4 ನೈಕಾಃ ಅನಂತಾಃ ಮಾಯಾಃ ಇಚ್ಛಾಃ ಯಸ್ಯ ಸಃ ನೈಕಮಾಯಃ । 'ಮಾಯೇತೀಚ್ಛಾ ಸಮುದ್ದಿಷ್ಟಾ . ' -(ಮಾಂ. ಉ. ಭಾ. 1-2-9)

೫ 5 ನೈಕಾ ಶ್ರೀ ಭೂದುರ್ಗಾದಿರೂಪೈಃ ಅನೇಕಾ ಅನೇಕರೂಪಾ ಮಾಯಾ ಲಕ್ಷ್ಮೀಃ ಅಸ್ಯ ಪತ್ನೀತ್ವೇನ ಅಸ್ತೀತಿ ನೈಕಮಾಯಃ । 'ಭಗವತ್ತಂತ್ರತಾ ಯಸ್ಮಾತ್ತದ್ಭಾರ್ಯಾತ್ವಂ ಸರೂಪತಾ । ಉಚ್ಯತೇ ಮಾಯಾ ಸಾ ತು ಶ್ರೀಃ
-ಬ್ರ. ತ. (ಭಾಗ. ತಾ ನಿ. 3-10-9)

ಪೈಂಗಿ ಶ್ರುತಿಯು, ಇವೇ ಮೊದಲಾದ ರೂಪಗಳಿಂದ ಲಕ್ಷ್ಮೀದೇವಿಯು ಸ್ವರೂಪಭೂತಗಳಾದ ನಾನಾ ರೂಪಗಳುಳ್ಳವಳು ಎಂದು ತಿಳಿಸಿದೆ[1]

೬ ಅನಂತ ಜೀವಾತ್ಮರಿಗೆ (ಸಂಸಾರ ಬಂಧನಕ್ಕೆ ಕಾರಣವಾದ ಕೈವಲೀ ಎಂಬ) ಮಾಯೆಯನ್ನು ನೀಡುವವನು[2]

ಭಗವಂತನು ಸಂಸಾರ ಬಂಧನಕ್ಕೆ ಕಾರಣವಾದ ಕೈವಲೀ ಎಂಬ ಮಾಯೆಯನ್ನು ನೀಡುವುದರ ಮೂಲಕ ಜೀವಾತ್ಮರನ್ನು ಸಂಸಾರ ಬಂಧನದಲ್ಲಿ ತೊಡಗಿಸುವನು

೭ ಅನಂತ ಜೀವಾತ್ಮರಿಗೆ ಜ್ಞಾನವನ್ನು ಅನುಗ್ರಹಿಸುವವನು[3]

೮ ಸ್ವರೂಪಾತ್ಮಕಗಳಾದ ಗುಣ, ರೂಪ, ಕ್ರಿಯಾದಿಗಳಿಂದ ಅನಂತನಾಗಿರುವವನು ಪ್ರಧಾನ, ಜ್ಞಾತೃ ಹಾಗೂ ಜ್ಞೇಯನು[4]

೯ ಅನೇಕ ವಿಧದ ಜ್ಞಾನಗಳ ಅಥವಾ ವಿದ್ಯೆಗಳ ಫಲವನ್ನು ಅನುಗ್ರಹಿಸುವವನು[5]

---

1 ಶ್ರೀರ್ಭೂರ್ದುರ್ಗಾಽಮ್ಭೃಣೀ ಹ್ರೀಶ್ಚ ಮಹಾಲಕ್ಷ್ಮೀಶ್ಚ ದಕ್ಷಿಣಾ । ಸೀತಾ ಜಯಂತೀ ಸತ್ಯಾ ಚ ರುಗ್ಮಿಣೀತ್ಯಾದಿಭೇದಿತಾ । ಪ್ರಕೃತಿಃ
-ಪೈಂಗಿಶ್ರುತಿ (ಬೃ. ಉ ಭಾ 3-5-4)

೬ 2 ನೈಕೇಷಾಂ ಅನಂತಾನಾಂ ಜೀವಾತ್ಮನಾಂ ಮಾಯಾ ಬಂಧಾತ್ಮಿಕಾ ಕೈವಲೀನಾಮಿಕಾ ಯಸ್ಮಾತ್ ಸಃ ನೈಕಮಾಯಃ । ' ಕೈವಲೀ ನಾಮ ಸಾ ಮಯಾ ಜಗದ್ಬಂಧಾತ್ಮಿಕಾ ಸದಾ'-ಬ್ರಹ್ಮತರ್ಕ (ಭಾಗ ತಾ ನಿ. 3-10-9)

೭ 3 ನೈಕೇಷಾಂ ಅನಂತಾನಾಂ ಜೀವಾತ್ಮನಾಂ ಮಾಯಾ ಜ್ಞಾನಂ ಯಸ್ಮಾತ್ ಸಃ ನೈಕಮಾಯಃ । 'ಮಾಯಾ ವಯುನಂ ಜ್ಞಾನಂ. .' -ವೈದಿಕ ನಿಘಂಟುಃ ।

೮ 4 ನೈಕಃ ಸ್ವರೂಪಾತ್ಮಕೈಃ ಗುಣರೂಪಕ್ರಿಯಾದಿಭಿಃ ಅನಂತಃ । 'ಮುಖ್ಯತೋ ವಿಷ್ಣುಮಾಹಾತ್ಮ್ಯಂ ಮಾಯಾಶಬ್ದೋದಿತಂ ಭವೇತ್ । ಪ್ರಧಾನತ್ವಾಚ್ಚ ಮಾತೃತ್ವಾನ್ಮೇಯತ್ವಾಚ್ಚೈವ ತಸ್ಯ ಹಿ' (ಭಾಗ ತಾ. ನಿ 2-9-41) ಇತ್ಯುಕ್ತದಿಶಾ ಭಗವತಃ ಮಾಹಾತ್ಮ್ಯಮಿವ ಭಗವಾನಪಿ ಪ್ರಧಾನತ್ವಾತ್ ಮಾತೃತ್ವಾತ್ ಮೇಯತ್ವಾಚ್ಚ ಮಾಯಃ ನೈಕಶ್ಚಾಸೌ ಮಾಯಶ್ಚ ನೈಕಮಾಯಃ ।

೯ 5 ನೈಕಾಃ ಮಾಃ ಜ್ಞಾನಾನಿ ವಿದ್ಯಾಃ ವಾ . ತೇಷಾಂ ಆಯಃ ಫಲಂ ಯಸ್ಮಾತ್ ಸಃ ನೈಕಮಾಯಃ । '. . ಆಯಸ್ತು ಫಲಮುದ್ದಿಷ್ಟಂ' ನಿರುಕ್ತ (ಭಾಗ. ತಾ. ನಿ. 11-18-27)

## ಜಿಜ್ಞಾಸೆ

[ಆಶ್ಚರ್ಯದ ಬೋಧನೆ]

ಪ್ರ - ಪರಮಾತ್ಮನ ಮಹಿಮೆಯನ್ನು ಅಥವಾ ಅವನ ಶಕ್ತಿಯನ್ನು ಮಾಯಾ ಶಬ್ದದಿಂದ ಏಕೆ ಹೇಳುವದು? ಮಾಯಾ ಶಬ್ದವು ಇಂದ್ರಜಾಲ ವಿದ್ಯೆಯನ್ನೂ ಹೇಳುತ್ತದೆ ಆದ್ದರಿಂದ ಪರಮಾತ್ಮನ ಮಾಯಾ ಶಬ್ದವು ಭ್ರಾಮಕವಾಗುತ್ತದೆ. ಈ ಭ್ರಾಮಕ ಶಬ್ದ ಪ್ರಯೋಗವನ್ನು ಮಾಡದೆ ಮಹಿಮೆ ಶಕ್ತಿ ಶಬ್ದಗಳನ್ನೇ ಪ್ರಯೋಗಿಸಬಹುದಲ್ಲವೇ?

ಉ - ಮಹಿಮೆ ಶಬ್ದ, ಶಕ್ತಿ ಶಬ್ದಗಳನ್ನು ಪ್ರಯೋಗಿಸಿದಾಗ ಪರಮಾತ್ಮನಲ್ಲಿ ಆಶ್ಚರ್ಯಗಳು ಇವೆ ಎಂಬ ಬುದ್ಧಿಯು ಜನರಿಗೆ ಉಂಟಾಗುವದಿಲ್ಲ ಮಾಯಾ, ಲೋಕದಲ್ಲಿ ಆಶ್ಚರ್ಯಕರವಾದದ್ದು. ಮಾಯಾಶಬ್ದದಿಂದ ಪರಮಾತ್ಮನ ಶಕ್ತಿಯು ಹೇಳಲ್ಪಟ್ಟಿದೆ. ಪರಮಾತ್ಮನು ದೊಡ್ಡ ಆಶ್ಚರ್ಯವುಳ್ಳವನು ಎಂದು ತಿಳಿಯುತ್ತದ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಬ್ರಹ್ಮಸೂತ್ರವು ಪರಮಾತ್ಮನಲ್ಲಿ ಅಪಾರ ಆಶ್ಚರ್ಯಗಳು ಇವೆ ಎಂದು ಹೇಳುತ್ತದೆ ಆ ಸೂತ್ರದ ಅಭಿಪ್ರಾಯ ನೈಕಮಾಯಃ ಎಂಬ ನಾಮವೂ ಹೇಳುತ್ತದೆ.



## ೩೦೩ ಮಹಾಶನಃ

○ ಮಹತ್ತಾದ—ಉತ್ತಮವಾದ ಭೋಜನ ಉಳ್ಳವನು [1]

ಭಗವಂತನ ಭೋಜನದಲ್ಲಿ ಪರಿಮಾಣಕ್ಕೆ ಸಂಬಂಧಿಸಿರುವ ಹಾಗೂ ಗುಣಮಟ್ಟಕ್ಕೆ ಸಂಬಂಧಿಸಿರುವ— ಹೀಗೆ ಎರಡು ರೀತಿಯ ಮಹತ್ತ್ವವನ್ನು ಉಲ್ಲೇಖಿಸಬಹುದು

ಭಗವಂತನು ಸಂಹಾರ ಕಾಲದಲ್ಲಿ ಚರಾಚರಾತ್ಮಕ ವಿಶ್ವವನ್ನೇ ಭಕ್ಷಿಸುವನು ಸಂವತ್ಸರ ಎನಿಸುವ ಚತುರ್ಮುಖನನ್ನೂ, ಅವನ ಪತ್ನಿಯಾಗಿ ಗಾಯತ್ರಿ ಎನಿಸುವ ಸರಸ್ವತಿಯನ್ನೂ ಸೃಷ್ಟಿಸಿದ ಭಗವಂತನು, ಅವರಿಬ್ಬರನ್ನೇ ಭಕ್ಷಿಸಿದಲ್ಲಿ ತನಗೆ ಅಲ್ಪ ಅನ್ನವಷ್ಟೇ ದೊರಕಿದಂತಾಗುವುದು, ಹಾಗಾಗಬಾರದು ತನಗೆ ಬಹು ಅನ್ನಬೇಕು—ಎಂದು ಸಂಕಲ್ಪಿಸಿ ಸಂವತ್ಸರ—ಗಾಯತ್ರಿಯರ ಮೂಲಕ ವೇದಾಭಿಮಾನಿ ದೇವತೆಗಳೇ ಮುಂತಾದವರನ್ನೆಲ್ಲ ಸೃಷ್ಟಿಸಿ, ಸಂಹಾರ ಕಾಲದಲ್ಲಿ ಅವರನ್ನು ಭಕ್ಷಿಸಬೇಕೆಂದು ನಿಶ್ಚಯಿಸಿದನು. ಚತುರ್ಮುಖನಿಂದ ಸೃಷ್ಟವಾದುದೆಲ್ಲವನ್ನೂ ಸಂಹಾರಕಾಲದಲ್ಲಿ

---

○ 1 ಮಹತ್ ಉತ್ತಮಂ ಅಶನಂ 'ಭೋಜನಂ ಯಸ್ಯ ಸಃ ಮಹಾಶನಃ। 'ತೇಜೋಽರ್ಥ ಉತ್ತಮಾರ್ಥೇ ಚ ಪೂಜ್ಯಾರ್ಥೇ ಚ ಪ್ರಯುಜ್ಯತೇ। ಮಹಚ್ಛಬ್ದೋ...' -ಶಬ್ದ ನಿರ್ಣಯ (ಭಾಗ. ತಾ. ನಿ. 4-6-40)

ಭಕ್ಷಿಸುವ ಪ್ರಯುಕ್ತವೇ ಭಗವಂತನು ಅದಿತಿ ಎಂದೆನಿಸಿರುವನು—ಎಂಬುದಾಗಿ ಬೃಹದಾರಣ್ಯಕೋಪನಿಷತ್ತು ಸಂದೇಶಿಸಿದೆ.[1] ಇಲ್ಲಿ ಸಮಸ್ತ ಚರಾಚರಾತ್ಮಕ ವಿಶ್ವವನ್ನು ಭಕ್ಷಿಸುವವನಾಗಿ ಅದಿತಿ ಶಬ್ದದಿಂದ ಹೇಳಲ್ಪಟ್ಟವನು ಭಗವಂತನೇ ಎಂಬುದಾಗಿ ಬ್ರಹ್ಮಸೂತ್ರವೊಂದರಲ್ಲಿ ಸಿದ್ಧಾಂತಿಸಲಾಗಿದೆ[2] 'ಬಹುಭುಕ್' ಎಂಬ ಶಬ್ದವನ್ನು ಸಾಮಾನ್ಯರಲ್ಲಿ ಪ್ರಯೋಗಿಸಿದರೆ, ಅವರನ್ನು ನಿಂದಿಸಿದಂತಾಗುವದಾದರೂ, ದೋಷದೂರನಾದ ಭಗವಂತನಲ್ಲಿ ಪ್ರಯೋಗಿಸಿದರೆ ಹೊಗಳಿದಂತೆಯೇ ಆಗುವುದು[3] ಅಂತೆಯೇ 'ಮಹಾಶನ' ಶಬ್ದವೂ ಭಗವಂತನಲ್ಲಿ ಸರ್ವಸಂಹರ್ತೃತ್ವವನ್ನು ಹೇಳುವುದರ ಮೂಲಕ ಅವನ ಮಹಿಮಾದ್ಯೋತಕವೇ ಆಗಿದೆ.

ಸಂಹಾರಕಾಲದಲ್ಲಿ ಭಗವಂತನು ಎಲ್ಲವನ್ನೂ ಭಕ್ಷಿಸುವನೆಂದರೆ ಎಲ್ಲವನ್ನೂ ತನ್ನುದರದೊಳಗೆ ಸೇರಿಸಿಕೊಳ್ಳುವನೆಂದಷ್ಟೇ ಅರ್ಥ ಹೊರತು ಎಲ್ಲವನ್ನೂ ಅನುಭವಿಸುವನೆಂಬ ಅಭಿಪ್ರಾಯವಲ್ಲ. ಅವನು ಸಾರಭಾಗವನ್ನಷ್ಟೇ ಅನುಭವಿಸುವವನು[4] ಸಕಲ ಜೀವಾತ್ಮರ ಶ್ರೋತ್ರಾದಿ ಇಂದ್ರಿಯಗಳನ್ನು

---

1 ಸ ಐಕ್ಷತ ಯದಿ ಹ ವಾವ ಇಮಮಭಿಮಂಸ್ಯೇ ಕನೀಯೋಽನ್ನಂ ಕರಿಷ್ಯೇ ಇತಿ ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ ಯದಿದಂ ಕಿಂಚರ್ಚೋ ಯಜೂಂಷಿ ಸಾಮಾನಿ ಛಂದಾಂಸಿ ಯಜ್ಞಾನ್ ಪ್ರಜಾಃ ಪಶೂನ್ ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ...

—ಬೃ. ಉ. 3-2-5

2 'ಅತ್ತಾ ಚರಾಚರಗ್ರಹಣಾತ್' —ಬ್ರ. ಸೂ 1-2 9

ನಹಿ ಚರಾಚರಸ್ಯ ಸರ್ವಸ್ಯಾತ್ತೃತ್ವಮದಿತೇಃ । —ಬ್ರ. ಸೂ. ಭಾ.

3 ಬಹುಭುಕ್ತ್ವಂ ಯಥಾ ದೋಷೋ ನೃಷು ನೈವ ಹರೌ ಕ್ವಚಿತ್ ।

—ಬ್ರ. ಸೂ. 1-4-10

ಯಥಾ 'ಬಹುಭುಗ್ ದೇವದತ್ತ' ಇತ್ಯುಕ್ತೇ ಬಹುಭೋಗವಾನಿತಿ ನಿಂದ್ಯತ್ವೇತಿ ಪ್ರತೀಯತೇ । 'ಅಸ್ವರ್ಗ್ಯಂ ಚಾತಿಭೋಜನಮಿತಿ ಸ್ಮೃತೇಃ । ಉಭಯಸ್ಯ ದೇವದತ್ತೇ ಸಂಭವೇನ ಯೋಗ್ಯತ್ವಾತ್ । ಅತ ಏವ ದೇವದತ್ತಾದ್ಭಿರುಣಾ ನೈವ ಪ್ರಯುಜ್ಯತೇ । ಪರಮೇಶ್ವರೇ ತು ಸಂಸಾರಧರ್ಮಾಣಾಮತ್ಯಂತಾಸಂಭವಾನ್ನ ದೋಷಪ್ರತಿಭಾಸಃ । ಕಿಂತು ಸರ್ವಸಂಹರ್ತೃತ್ವಾದಿಕಮೇವ ಪ್ರತೀಯತೇ ಇತಿ ತತ್ರ ತತ್ತ್ವ ಯೋಗಃ ।

—ನ್ಯಾ. ಸು.

4 ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ।

—ಪಾದ್ಮ (ಬ್ರ. ಸೂ. ಭಾ. 1-2-11)

ಅಧಿಷ್ಠಾನವಾಗಿಸಿಕೊಂಡು ಶುಭ ಭೋಗಗಳನ್ನು ಅನುಭವಿಸುವವನು.[1]

ಹೀಗೆ ಭಗವಂತನು ಸಂಹಾರಕಾಲದಲ್ಲಿ ಸಮಸ್ತ ವಿಶ್ವವನ್ನೇ ನುಂಗುವ ಪ್ರಯುಕ್ತ ಹಾಗೂ ಸಕಲರ ಇಂದ್ರಿಯಗಳ ಮೂಲಕ ಶುಭಭೋಗಗಳನ್ನೇ ಅನುಭವಿಸುವ ಪ್ರಯುಕ್ತ, ಪರಿಮಾಣದ ದೃಷ್ಟಿಯಿಂದಲೂ, ಗುಣದ ದೃಷ್ಟಿಯಿಂದಲೂ, ಮಹತ್ತ್ವೋಪೇತವಾದ 'ಅಶನ' ಉಳ್ಳವನಾಗಿರುವನು.

೨ ಪೂಜ್ಯಳಾದ ಆಶಾ ಎನಿಸುವ ಸರಸ್ವತಿ ಪತ್ನಿಯಾಗಿ ಉಳ್ಳ ಚತುರ್ಮುಖನನ್ನು ಪ್ರೇರಿಸುವವನು.[2]

ಚತುರ್ವಿಧ ಪುರುಷಾರ್ಥಗಳಲ್ಲಿನ ಆಶಾರೂಪವಾದ ಮನೋವೃತ್ತಿಯನ್ನು ಉಂಟುಮಾಡುವುದರಿಂದಲೇ ಸರಸ್ವತಿಯು ಆಶಾ ಎನಿಸಿರುವಳು ಅಂತಹ ಆಶಾದೇವಿಗೂ ಪತಿಯಾಗಿರುವ ಚತುರ್ಮುಖನಿಗೆ ಧಾರಕ ಹಾಗೂ ಪೋಷಕನಾಗಿರುವವನು ಭಗವಂತನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು.[3] ಬೃಹದಾರಣ್ಯಕೋಪನಿಷತ್ತಿನ ಅಂತರ್ಯಾಮಿ ಬ್ರಾಹ್ಮಣದಲ್ಲಿ ಚತುರ್ಮುಖನನ್ನು ವಿಜ್ಞಾನ ಶಬ್ದದಿಂದ ಉಲ್ಲೇಖಿಸಿ, ಅವನನ್ನೂ ಅಂತರ್ಯಾಮಿಯಾಗಿ ಪ್ರೇರಿಸುತ್ತಿರುವವನು ಭಗವಂತನೆಂದು ಸಂದೇಶಿಸಲಾಗಿದೆ[4]

---

1 ಭುಂಕ್ತೇ ಹರಿಃ ಶುಭಾನ್ ಭೋಗಾನಿಂದ್ರಿಯೇಷು ವ್ಯವಸ್ಥಿತಃ ।
-ನಾರಾಯಣ ಶ್ರುತಿ (ಗೀ. ತಾ. 15-9)

೨ 2 ಮಹತೀ ಪೂಜ್ಯಾ ಆಶಾ ಸರಸ್ವತೀ ಯಸ್ಯ ಪತ್ನೀತ್ವೇನ ವರ್ತತೇ ಸಃ ಮಹಾಶಃ ಚತುರ್ಮುಖಃ; ತಂ ನಯತಿ ಪ್ರೇರಯತೀತಿ ಮಹಾಶನಃ । ಪೂಜ್ಯಾರ್ಥೇ ಚ ಪ್ರಯುಜ್ಯತೇ । ಮಹಚ್ಛಬ್ದಃ . (ಭಾಗ. ತಾ. ನಿ. 4-6-40)

3 ತ್ರಿಜಗತ್ಪೋತ ಆಶಾಪತಿಧಾತೋ । -ದ್ವಾ ಸ್ತೋ.
ಆಶಾಪತಿಧಾತೋ ಪುರುಷಾರ್ಥಚತುಷ್ಟಯೇ ಆಶಾರೂಪಮನೋವೃತ್ತಿಪ್ರವರ್ತಕತ್ವಾತ್ ಆಶಾ ಸರಸ್ವತೀ ತಸ್ಯಾಃ ಪತಿರ್ಬ್ರಹ್ಮಾ ತಸ್ಯ ಧಾತುರ್ಧಾರಕಃ ಪೋಷಕೋ ವಾ ತತ್ಸಂಬುದ್ಧಿಃ । -ವಿ. ಪ ಟೀ

4 'ಯೋ ವಿಜ್ಞಾನೇ ತಿಷ್ಠನ್ . ಯೋ ವಿಜ್ಞಾನಮಂತರೋ ಯಮಯತಿ...'
-ಬೃ. ಉ. 5-8-22

೩ ಮಹತ್ತಾದ ಭೋಜನವುಳ್ಳ ವಾಯುದೇವನನ್ನು ಪ್ರೇರಿಸುವವನು[1]

ವಾಯುದೇವನು ತುಂಬ ಭಕ್ಷಿಸುವವನು ತನ್ನ ಭೀಮಸೇನಾವತಾರದಲ್ಲೂ, ಮಧ್ವಾವತಾರದಲ್ಲೂ ಅದನ್ನು ಅಭಿವ್ಯಕ್ತಗೊಳಿಸಿರುವವನು. ಬಳಿತ್ಥಾಸೂಕ್ತ ಭೀಮಸೇನನನ್ನು 'ಪಿತುಮಾನ್' ಎಂದು ವಿಶೇಷಿಸಿ, ಅವನು ಬಹುಭುಕ್ ಎಂದು ತಿಳಿಸಿದೆ[2] ಶ್ರೀಮಧ್ವಾವತಾರದಲ್ಲಿ ಅವರು ತಮ್ಮ ಬಹು ಭೋಗಕ್ಕೆ ಕಾರಣವಾದ ಜಾಠರಾಗ್ನಿಯನ್ನು ಪರಿಚಯಿಸಿಕೊಟ್ಟಿರುವರು[3] ಇವರೆಲ್ಲರಿಗೆ ನೇತಾರ ಭಗವಂತ.[4]

೪ ಉತ್ತಮವಾದ ಸುಖವುಳ್ಳ ಮುಕ್ತಾತ್ಮರನ್ನೂ ಪ್ರೇರಿಸುವವನು[5]

೫ ಉತ್ತಮವಾದ ಇಚ್ಛೆವುಳ್ಳ ಜ್ಞಾನಿಗಳನ್ನು (ಅವರ ಇಚ್ಛೆಗನುಗುಣವಾಗಿ)

---

'ಆತ್ಮಾ ವಿಜ್ಞಾನಮಿತಿ ತು ಸರ್ವಜೀವಾಭಿಮಾನವಾನ್ । ಬ್ರಹ್ಮೈವೋಕ್ತಃ... '
-ಮಹಾಮೀಮಾಂಸಾ (ಬೃ. ಉ ಭಾ )

೩ 1 ಮಹಾನ್ ಆಶಃ ಅಶನಂ ಯಸ್ಯ ಸಃ ಮಹಾಶಃ ವಾಯುಃ। ತಂ ನಯತೀತಿ ಮಹಾಶನಃ ಪ್ರಾಶರಾಶಃ ಇತ್ಯದೌ ಆಶಶಬ್ದಃ ಅಶನಾರ್ಥೇ ಪ್ರಯುಜ್ಯತೇ ।

2 'ಪೃಕ್ಷೋ ವಪುಃ ಪಿತುಮಾನ್....' -ಬ. ಸೂ.

'ಭೀಮಸ್ತು ಬಹುಭುಕ್ ಪಿತೋಃ ! ಪೃತನಾಕ್ಷಯಕಾರೀ ಚ ದ್ವಿತೀಯಸ್ತು ....'
-ಐ ಉ ಭಾ. 2-8-7-8

3 ಅಂಗುಷ್ಠಮಾತ್ರಂ ಜಠರೇ ಪ್ರತಿಷ್ಠಿತಂ ಜಾಜ್ವಲ್ಯಮಾನಂ ಮಮ ಜಾತವೇದಸಮ್ ।
ನಿತ್ಯಂ ಹಿತಂ ವಿಶ್ವದಹಂ ಚ ವಿತ್ತ ತಂ ವಿಶ್ವೇಶಚೇತಾ ಇತಿ ಸೋಽಬ್ರವೀತ್ತದಾ ॥
-ಸು ಮ. ವಿ. 5-33

4 'ಪ್ರಯತ್ಪಿತುಃ ಪರಮಾನ್ನೀಯತೇ . ' -ಬ. ಸೂ.

ಏತೇಷಾಂ ಪರಮೋ ವಿಷ್ಣುರ್ನೇತಾ ಸರ್ವೇಶ್ವರೇಶ್ವರಃ । -ಐ. ಉ. ಭಾ.

೪ 5 ಮಹತ್ ಉತ್ತಮಂ ಶಂ ಸುಖಂ ಯೇಷಾಂ ತೇ ಮಹಾಶಾಃ ಮುಕ್ತಾತ್ಮಾನಃ ! ತಾನ್ ನಯತಿ ಪ್ರೇರಯತೀತಿ ಮಹಾಶನಃ ।

ಪ್ರೇರಿಸುವವನು.[1]

೬ ಉತ್ತಮವಾದ ಇಚ್ಛೆ ಉಳ್ಳವನು. (ಅದಕ್ಕೆ ಅನುಗುಣವಾಗಿ ಎಲ್ಲವನ್ನೂ) ಪ್ರೇರಿಸುತ್ತಿರುವವನು.[2]

೭ (ಯೋಗ್ಯರಿಗೆ) ಉತ್ತಮವಾದ ಇಚ್ಛೆಯನ್ನು ನೀಡುವವನು ಮತ್ತು (ಅದಕ್ಕೆ ಅನುಗುಣವಾಗಿ) ಪ್ರೇರಿಸುತ್ತಿರುವವನು.[3]

೮ ಮಹತ್ತಾದ ಅನ್ನದ ಆಶ ಉಳ್ಳ ದೂರ್ವಾಸರಿಗೆ ಅನ್ನವನ್ನು ತಲುಪಿಸಿರುವವನು.[4]

ಶ್ರೀರಾಮಚಂದ್ರನಲ್ಲಿಗೆ ದೂರ್ವಾಸರು ಬಂದು ತಮಗೆ ಅನ್ನವನ್ನು ನೀಡಬೇಕು, ಅದು ಸಿದ್ಧಾನ್ನವಾಗಲೀ, ಸಾಧ್ಯಾನ್ನವಾಗಲೀ ಆಗಿರಬಾರದು—ಎನ್ನುವರು ಅದಕ್ಕೆ ಒಪ್ಪಿದ ಶ್ರೀರಾಮನು ದೂರ್ವಾಸರು ಹಾಗೆ ಹೇಳುತ್ತಿರುವಾಗಲೇ ತನ್ನ ಹಸ್ತದಿಂದ ಹುಟ್ಟಿಕೊಂಡ ಭಕ್ಷ್ಯ, ಭೋಜ್ಯ, ಲೇಹ್ಯ ಹಾಗೂ ಪೇಯ—ಎಂಬ ನಾಲ್ಕು ವಿಧದ ಅಮೃತೋಪಮವಾದ ಅನ್ನವನ್ನು ದೂರ್ವಾಸರಿಗೆ ನೀಡಿ ತೃಪ್ತಿಪಡಿಸಿರುವನು[5]

---

1 ಮಹತೀ ಉತ್ತಮಾ ಆಶಾ ತೃಷ್ಣಾ ಯೇಷಾಂ ತೇ ಮಹಾಶಾಃ ಜ್ಞಾನಿನಸ್ತಾನ್, ತದಿಚ್ಛಾನುಸಾರೇಣ ನಯತಿ ಪ್ರೇರಯತೀತಿ ಮಹಾಶನಃ ।

೬ 2 ಮಹತೀ ಉತ್ತಮಾ ಆಶಾ ಜಗತ್ಸೃಷ್ಟ್ಯಾದಿವಿಷಯಾ ತೃಷ್ಣಾ ಯಸ್ಯ ಸಃ ಮಹಾಶಃ । ನಯತಿ ವಿಶ್ವಂ ಪ್ರೇರಯತೀತಿ ನಃ ।

೭ 3 ಯೋಗ್ಯಾನಾಂ ಮಹತೀ ಉತ್ತಮಾ ಆಶಾ ತೃಷ್ಣಾ ಯಸ್ಮಾತ್ ಸಃ ಮಹಾಶಃ । ಸರ್ವಂ ನಯತೀತಿ ನಃ ।

೮ 4 ಮಹತೀ ಆಶಾ ಅನ್ನಾಶಾ ಯಸ್ಯಾಸೌ ಮಹಾಶೋ ದೂರ್ವಾಸಸ್ತಂ ಪ್ರತಿ ನಯತ್ಯನ್ನಮಿತಿ ಮಹಾಶನಃ । -ಸ. ಸಂ.

5 ' ಅಥ ತನುಸ್ತ್ಯಪರಾ ಹರಸ್ಯ । ದೂರ್ವಾಸನಾಮಾಯುಗಿಹಾಗಮದಾಶು ರಾಮಮಾಂ ಭೋಜಯ ಕ್ಷುಧಿತಮಿತ್ಯಸಕೃದ್ ಬ್ರುವಾಣಾ । ಸಿದ್ಧಂ ನ ದೇಯಮುತ ಸಾಧ್ಯಮಪೀತಿ ವಾಚಂ ಶ್ರುತ್ವಾಽಸ್ಯ ವಾಕ್ಸಮಯಜಾತಮುರು ಸ್ವಹಸ್ತಾತ್ । ಅನ್ನಂ ಚತುರ್ಗುಣಮದಾದಮೃತೋಪಮಾನಂ ರಾಮಸ್ತದಾಪ್ಯ ಬುಭುಜೇಽಥ ಮುನಿಃ ಸುತುಷ್ಟಃ' -ಮ. ಭಾರ. ತಾ. ನಿ 9-49 .51

೯ (ಯಜ್ಞವು ತನ್ನನ್ನು ಉದ್ದೇಶಿಸಿ ಇರಬೇಕೆಂದು) ಯಜ್ಞದ ವಿಷಯದಲ್ಲಿ ಆಶೆ ಉಳ್ಳವನು ಹಾಗೂ ಯಜ್ಞವನ್ನು ಪ್ರೇರಿಸುವವನು.[1]

೧೦ ಎಲ್ಲರಿಗೂ ಪೂಜ್ಯನಾಗಿರುವವನು ಸಂಸಾರಿಗಳಿಗೆ ಸುಖ ದುಃಖಗಳನ್ನೂ, ಮುಕ್ತರಿಗೆ ಕೇವಲ ಸುಖವನ್ನೂ ಉಣ್ಣಿಸುವವನು[2]

೧೧ ಉತ್ತಮ ದಿಕ್ಕುಗಳಿಗೆ ಅಭಿಮಾನಿಗಳಾದ ಇಂದ್ರಾದಿಗಳನ್ನು ಪ್ರೇರಿಸುವವನು[3]

೧೨ (ಮುಕ್ತರಿಗೆ) ಉತ್ತಮವಾದ ಸುಖವನ್ನು ಹೊಂದಿಸುವವನು[4]

೧೩ (ದೇವತೆಗಳಿಗೆ ಹಾಗೂ ಮುಕ್ತಾತ್ಮರಿಗೆ) ಉತ್ತಮವಾದ ಭೋಗವನ್ನು ಅನುಗ್ರಹಿಸುವವನು[5]

೧೪ (ದೇವತೆಗಳೇ ಮೊದಲಾದವರು) ಪೂಜೆಯನ್ನು ಭೋಗಿಸುವಂತೆ ಅನುಗ್ರಹಿಸುವವನು.[6]

---

೯ 1 ಮದುದ್ದೇಶೇನ ಯಾಗೋ ಭವತ್ವಿತಿ ಮಹೇ ಯಜ್ಞವಿಷಯೇ ಆಶಾ ಯಸ್ಯಾಸೌ ಮಹಾಶಃ । ತಂ (ಯಾಗಂ) ನಯತೀತಿ । -ಸ. ಸಂ.

೧೦ 2 ಮಹ್ಯತೇ ಸರ್ವೈಃ ಪೂಜ್ಯತ ಇತಿ ಮಹಃ । ಆಶಯತಿ ಸಂಸಾರಿಣಃ ಸುಖದುಃಖೇ ಮುಕ್ತಾನ್ ದುಃಖಾವಿಮಿಶ್ರಿತಸುಖಂ ಚ ಭೋಜಯತೀತಿ ಆಶನಃ । ಮಹಶ್ಚಾಸಾವಾಶನಶ್ಚ ಮಹಾಶನಃ ।

೧೧ 3 ಮಹತ್ಯಃ ಆಶಾಃ ದಿಶಃ ಯೇಷಾಂ ತೇ ಮಹಾಶಾಃ ದಿಗಭಿಮಾನಿನ ಇಂದ್ರಾದ್ಯಾಃ । ತಾನ್ ನಯತಿ ಪ್ರೇರಯತೀತಿ ಮಹಾಶನಃ ।

೧೨ 4 ಮಹಚ್ಚ ತತ್ ಶಂ ಚ ಮಹಾಶಮ್ । ತತ್ ಮುಕ್ತಾನ್ ನಯತಿ ಪ್ರಾಪಯತೀತಿ ಮಹಾಶನಃ ।

೧೩ 5 ಮಹತ್ ಉತ್ತಮಂ ಆಶನಂ ದೇವಾನಾಂ ಮುಕ್ತಾನಾಂ ಚ ಭೋಗಃ ಯಸ್ಮಾತ್ ಸಃ ಮಹಾಶನಃ ।

೧೪ 6 ಮಹಂ ಪೂಜಾಂ ಆಶಯತಿ ದೇವಾದೀನ್ ಭೋಜಯತೀತಿ ಮಹಾಶನಃ ।

## ಜಿಜ್ಞಾಸೆ

[ಶಿಕ್ಷಣ ನೀಡುವುದಕ್ಕಾಗಿ]

ಪ್ರ - ಪರಮಾತ್ಮನು ಬ್ರಹ್ಮನನ್ನು ಸೃಷ್ಟಿಮಾಡಿ ತಿನ್ನಲಿಕ್ಕೆ ಆರಂಭಿಸಿದನು ಬ್ರಹ್ಮನು ಹೆದರಿಕೆಯಿಂದ ಕೂಗಿದನು ಆಗ ಅವನನ್ನು ತಿನ್ನದೆ ಅವನನ್ನು ಪ್ರಪಂಚ ಸೃಷ್ಟಿಮಾಡಲಿಕ್ಕೆ ಪ್ರೇರಿಸಿದನು ದೊಡ್ಡ ಪ್ರಪಂಚ ಸೃಷ್ಟಿಯಾದರೆ ತನಗೆ ತಿನ್ನಲಿಕ್ಕೆ ದೊಡ್ಡ ಅನ್ನವು ಸಿಗುವದು ಎಂದು ಯೋಚಿಸಿದನು. ಎಂದು ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟಿದೆ ಈ ಕಥೆಯನ್ನು ಕೇಳುವಾಗ ಪರಮಾತ್ಮನು ತಿನ್ನುವ ಆಶ್ಯಾಲೆಯುಳ್ಳವನು ಎಂದು ತೋರುತ್ತದೆ ಇದು ದೋಷ ವೇದದಲ್ಲಿ ಪರಮಾತ್ಮನ ದೋಷವನ್ನು ಹೇಳಿದರೆ ಪರಮಾತ್ಮನು ನಿರ್ದೋಷನು ಎಂದು ಸಿದ್ಧಾಂತ ಮಾಡುವದು ಹೇಗ?

ಉ - ಪರಮಾತ್ಮನು ಲೋಕಾನುಕರಣೆಯನ್ನು ಮಾಡುತ್ತಾ ಇದ್ದಾನೆ. ಇದು ಅನುಕರಣೆಯೇ ಹೊರತು ವಾಸ್ತವವಲ್ಲ ಉಪನಿಷತ್ ಪರಮಾತ್ಮನು ಮಾಡಿದ ಲೋಕಾನುಕರಣೆಯನ್ನು ಪ್ರತಿಪಾದಿಸುತ್ತದೆ

ಪ್ರ - ಪರಮಾತ್ಮನು ಲೋಕಾನುಕರಣೆಯನ್ನು ಏಕೆ ಮಾಡುತ್ತಾನೆ?

ಉ - ಲೋಕಶಿಕ್ಷಣಾರ್ಥವಾಗಿ ಪರಮಾತ್ಮನು ಹೀಗೆ ಮಾಡುತ್ತಾನೆ ಲೋಕದಲ್ಲಿ ಬರುವ ವರ್ಷ ಕೃಷಿಗೋಸ್ಕರ ಬೀಜಗಳನ್ನು ಸಂಗ್ರಹಿಸಿ ಇಡಬೇಕು ಹಾಗೆ ಮಾಡದೆ ಆ ಬೀಜವನ್ನು ಊಟಕ್ಕೆ ತೆಗೆದು ಬಿಡಬಾರದು ಎಂದು ಪರಮಾತ್ಮನು ತೋರಿಸುತ್ತಾನೆ. ತಾನು ಸಂಪಾದಿಸಿದ ವಿದ್ಯೆಯನ್ನು ಮರೆಯಬಾರದು ಅನೇಕ ವಿದ್ಯಾರ್ಥಿಗಳಿಗೆ ಆ ವಿದ್ಯೆಯನ್ನು ಕಲಿಸಿಕೊಡುವದಕ್ಕಾಗಿ ತಾನು ಸಂಪಾದಿಸಿದ ವಿದ್ಯೆಯನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ಇತ್ಯಾದಿ ಶಿಕ್ಷಣವನ್ನು ಮಾಡುವದು ಪರಮಾತ್ಮನ ಗುಣವೇ ಆಗಿದೆ



## ೩೦೪ ಅದೃಶ್ಯಃ

೧ ಸಮಗ್ರವಾಗಿ ಜ್ಞಾನಗೋಚರವಾದ ಪದಾರ್ಥಕ್ಕಿಂತ ಭಿನ್ನನಾಗಿರುವವನು[1]

ತೈತ್ತಿರೀಯೋಪನಿಷತ್ತಲ್ಲಿ ಉಪಾಸಕನು ಧ್ಯಾನಿಸಬೇಕಾದ ಭಗವದ್ರೂಪವನ್ನು 'ಅದೃಶ್ಯ' ಎಂಬುದಾಗಿ ಸಮಗ್ರ ಜ್ಞಾನಗೋಚರವಾಗುವ ಪದಾರ್ಥಕ್ಕಿಂತ ಭಿನ್ನ ಎಂಬ ಅಭಿಪ್ರಾಯದಲ್ಲೇ ವಿಶೇಷಿಸಲಾಗಿದೆ[2] ಆಥರ್ವಣೋಪನಿಷತ್ತಲ್ಲಿ ಪರವಿದ್ಯೆಯಿಂದ ಪ್ರತಿಪಾದ್ಯನಾದ ಅಕ್ಷರನಾಮಕ

---

೧ 1 ಸಾಕಲ್ಯೇನ ಜ್ಞಾನಗೋಚರಃ ದೃಶ್ಯಃ । ದೃಶ್ಯೋ ನ ಭವತೀತಿ ಅದೃಶ್ಯಃ ।

2 'ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇ ಅಭಯಂ ಪ್ರತಿಷ್ಠಾಂ ವಿಂದತೇ'

-ತೈ. ಉ 2-12

ಭಗವಂತನನ್ನು ಈ ಅಭಿಪ್ರಾಯದಲ್ಲೇ 'ಅದ್ರೇಶ್ಯ' ಎಂದು ವಿಶೇಷಿಸಲಾಗಿದೆ.[1] ಭಗವಂತನು ಸಮಗ್ರವಾಗಿ ತಿಳಿಯದ ಪ್ರಯುಕ್ತ 'ಅದ್ರೇಶ್ಯ' ಎನಿಸಿರುವನೇ ಹೊರತು ಸರ್ವಾತ್ಮನಾ ಅಜ್ಞೇಯನಾಗಿರುವುದರಿಂದಲ್ಲ—ಎಂಬುದನ್ನು ಸ್ಪಷ್ಟೀಕರಿಸಲು ಜ್ಞಾನಿಗಳು ಅವನನ್ನು ತಿಳಿಯುವರೆಂದೂ ಅಲ್ಲಿ ತಿಳಿಸಲಾಗಿದೆ.[2] ಇಲ್ಲಿ ಭಗವಂತನಿಗೇ 'ಅದೃಶ್ಯತ್ವ'ವನ್ನು ಹೇಳಲಾಗಿದೆ. ಅದು ಅವನ ಅಸಾಧಾರಣ ಧರ್ಮ ಎಂಬುದಾಗಿ ಬ್ರಹ್ಮಸೂತ್ರವೊಂದರಲ್ಲಿ ಸಿದ್ಧಾಂತಿಸಲಾಗಿದೆ[3] ಈ ಬ್ರಹ್ಮಸೂತ್ರವು ಉಲ್ಲೇಖಿಸಿರುವ ಪ್ರಮಾಣದಲ್ಲಿ ಪರವಿದ್ಯೆಗೆ ವಿಷಯನಾಗಿರುವ ಶ್ರೀಹರಿಯೇ ಅದೃಶ್ಯತ್ವ ಗುಣವುಳ್ಳವನೆಂದು ಪ್ರತಿಪಾದಿಸಲಾಗಿದೆ[4] ದೃಶ್ಯಕ್ಕಿಂತ ಭಿನ್ನವಾದುದೇ ಅದೃಶ್ಯವೆನಿಸಿದ್ದು, ಅದರ ಧರ್ಮವೇ ಅದೃಶ್ಯತ್ವವೆನಿಸಿರುವ ಪ್ರಯುಕ್ತ ಭಾವ ದರ್ಮವಾದ ಆ ಗುಣಕ್ಕೆ ಭಗವತ್ಸ್ವರೂಪತ್ವವನ್ನು ಹೇಳಬಹುದೆಂದು ಶ್ರೀಮದಾಚಾರ್ಯರು ಸಮರ್ಥಿಸಿರುವರು.[5]

---

..... ಸ ಏವೈಕ ಆನಂದಯತಿ ಚಾಖಿಲಮ್ । ತಸ್ಮಾದದೃಶ್ಯೋ ಅಭಯತ್ವೇನ ಯದಾ ಜ್ಞಾನೇನ ತಿಷ್ಠತಿ . -ಯಜುಃಸಂಹಿತಾ (ತೈ. ಉ ಭಾ.)

1 ಯತ್ತದದ್ರೇಶ್ಯಂ.. ... -ಆ ಉ. 1-1-6

ದೃಶ್ಯಾದನ್ಯದದೃಶ್ಯಮ್ । -ಉ. ಖಂ.

2 ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ । -ಆ. ಉ. 1-1-6

ಅದ್ರೇಶ್ಯಮಿತ್ಯುಕ್ತಿರ್ನ ಸರ್ವಥೇತಿ ಭಾವೇನಾಕ್ಷರಸ್ಯ ಗುಣಾಂತರಮಾಹ-ತದವ್ಯಯಮಿತ್ಯಾದಿನಾ । -ಉ. ಖಂ

3 ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ । -ಬ್ರ. ಸೂ. 1-2 21

. ..ಇತ್ಯಾದಿನಾ ತದ್ಧರ್ಮತ್ವೇನಾವಗತಪರವಿದ್ಯಾವಿಷಯತ್ವೋಕ್ತೇರ್ವಿಷ್ಣುರೇವಾದೃಶ್ಯತ್ವಾದಿಗುಣಕಃ । -ಬ್ರ. ಸೂ ಭಾ.

4 '...ಅಥ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ....'

-ಬ್ರ. ಸೂ. ಭಾ 1-2-21

5 ಅಭೇದೋಽಭಾವಧರ್ಮಾಣಾಂ ಬ್ರಹ್ಮಣಾ ಯುಜ್ಯತೇ ಕಥಮ್ ।

ನಾಭಾವೋ ಭಾವ ಇತಿ ಚ ವಿಶೇಷಃ ಪ್ರಾಯಶೋ ಭವೇತ್ ।

-ಅ. ವ್ಯಾ. 1-2-17

೨ (ಬರೇ ಪುರುಷ ಪ್ರಯತ್ನದಿಂದ) ಕಾಣಲು ಅಶಕ್ಯನಾದವನು.[1]

೩ ಅವನ ಅನುಗ್ರಹವಿಲ್ಲದೆ ಕಾಣಲು ಅಶಕ್ಯನಾದವನು.[2]

೪ ಮೂಲರೂಪಗಳಲ್ಲಿ ಪ್ರಾಕೃತೇಂದ್ರಿಯಗಳಿಂದ ಕಾಣಲು ಅಶಕ್ಯನಾಗಿರುವವನು.[3]

೫ ವೇದಾಧ್ಯಯನಾದಿಗಳಿಲ್ಲದೆ ಕಾಣಲು ಅಶಕ್ಯನಾಗಿರುವವನು.[4]

ಭಗವಂತನು ಸರ್ವದಾ ಅವ್ಯಕ್ತನಾಗಿಯೇ ಇರುವವನೆಂದು ಕೌಂರವ್ಯಶ್ರುತಿ ತಿಳಿಸಿದೆ.[5] ನಿತ್ಯಾವ್ಯಕ್ತನಾದ ಅವನನ್ನು ಆರಾಧಿಸಿಯೂ ವ್ಯಕ್ತೀಕರಿಸಿಕೊಳ್ಳಲಾಗದೆಂದು ಬ್ರಹ್ಮವೈವರ್ತ ಸಂದೇಶಿಸಿದೆ.[6]

---

ಅದೃಶ್ಯತ್ವಾದೀನಾಂ ತು ಧರ್ಮಾಣಾಂ ಬ್ರಹ್ಮಣಾಽಭೇದೋ ನ ಯುಜ್ಯತೇ । ತೇಷಾಮಭಾವತ್ವಾದ್ ಬ್ರಹ್ಮಣೋ ಭಾವತ್ವಾತ್ । ಭಾವಾಭಾವಯೋರೈಕ್ಯಸ್ಯ ವಿರುದ್ಧತ್ವಾದಿತಿ ಇಹ ಹಿ ದೃಶ್ಯಾದನ್ಯೋಽದೃಶ್ಯಃ ತಸ್ಯ ಭಾವೋಽದೃಶ್ಯತ್ವಮಿತ್ಯದೃಶ್ಯಾದಿಶಬ್ದೈರ್ದೃಶ್ಯಾದನ್ಯೋನ್ಯಾಭಾವೋಽಭಿಧೀಯತೇ. .. .ತಥಾ ಚಾಭಾವೋ ಅನ್ಯೋನ್ಯಾಭಾವ ಇತಿ ಭಾವ ಇತಿ ಚೈತಯೋರ್ಲೋಕೇಽಪಿ ವಿಶೇಷೋ ಭೇದೋ ನ ಭವೇತ್ । ಏವಂ ಸತಿ ಬ್ರಹ್ಮಣ್ಯೇವ ಕಾಽನುಪಪತ್ತಿಃ । -ನ್ಯಾ. ಸು.

೨ 1 ಪುರುಷಪ್ರಯತ್ನೇನ ದ್ರಷ್ಟುಮಶಕ್ಯತ್ವಾದದೃಶ್ಯಃ ।

-ವಿ ರಾ.

೩ 2 ತಸ್ಯಾನುಗ್ರಹಂ ವಿನಾ ದ್ರಷ್ಟುಮಶಕ್ಯ ಅದೃಶ್ಯಃ ।

೪ 3 ಸ್ವಮೂಲರೂಪೇಷು ಪ್ರಾಕೃತೇಂದ್ರಿಯೈಃ ದ್ರಷ್ಟುಂ ಅಶಕ್ಯಃ ಅದೃಶ್ಯಃ ।

೫ 4 ವೇದಾಧ್ಯಯನಾದಿ ವಿನಾ ದ್ರಷ್ಟುಮಶಕ್ಯಃ ಅದೃಶ್ಯಃ ।

5 ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಳಮ್ ।

-ಕೌಂರವ್ಯಶ್ರುತಿ (ಬ್ರ. ಸೂ ಭಾ. 3-2-42)

6 ನ ತಮಾರಾಧಯಿತ್ವಾಽಪಿ ಕಶ್ಚಿದ್ ವ್ಯಕ್ತೀಕರಿಷ್ಯತಿ । ನಿತ್ಯಾವ್ಯಕ್ತೋ ಯತೋ ದೇವಃ ಪರಮಾತ್ಮಾ ಸನಾತನಃ। -ಬ್ರಹ್ಮವೈವರ್ತ (ಬ್ರ. ಸೂ. ಭಾ. 3-5-24)

ಭಗವಂತನ ಅವತಾರರೂಪಗಳು ಪ್ರಾಕೃತ ಇಂದ್ರಿಯಗಳಿಗೆ ಗೋಚರಿಸುವವಾದರೂ, ಅವನ ಮೂಲರೂಪವು ಬಾಹ್ಯ ಚಕ್ಷುರಾದಿಗಳಿಗೆ ಅಗೋಚರವಾದುದೆಂಬುದಾಗಿ ಕಾಠಕೋಪನಿಷತ್ತು ತಿಳಿಸಿದೆ.[1]

ಆದರೆ ಲಕ್ಷ್ಮೀದೇವಿ ಚತುರ್ಮುಖ ರುದ್ರಾದಿಗಳಿಗಿಂತೆಲ್ಲ ಉತ್ತಮವಾದ ಭಗವಂತನ ಸ್ವರೂಪ ವನ್ನು ಜ್ಞಾನಿಗಳು ಸರ್ವದಾ ಕಾಣುತ್ತಿರುವರೆಂದು ಋಗ್ವೇದ ಸಂದೇಶಿಸಿದೆ[2] ದಕ್ಷಯಜ್ಞ ಭಂಗದ ಪ್ರಸಂಗದಲ್ಲಿ ಪ್ರಾದುರ್ಭೂತನಾದ ಯಜ್ಞೇಶ್ವರನನ್ನು ಲೋಕಪಾಲರು—ಪಾಂಚಭೌತಿಕ ಭಿನ್ನನಾದ ನೀನು ಪಂಚಭೂತನಿರ್ಮಿತಗಳಾದ ನಮ್ಮ ಇಂದ್ರಿಯಗಳಿಗೆ ಗೋಚರಿಸುತ್ತಿರುವುದು ನಿನ್ನ ಮಹಿಮೆಯೇ ಆಗಿದೆ—ಎಂದು ಸ್ತುತಿಸಿರುವರು[3] ಭಕ್ತಿಪೂರ್ವಕವಾದ ವೇದಾಧ್ಯಯನ, ಪಂಚರಾತ್ರಾಧ್ಯಯನ, ಯಜ್ಞಾನುಷ್ಠಾನ—ಮುಂತಾದವುಗಳಿಂದ ತಾನು ದೃಶ್ಯನೇ ಹೊರತು ಅವುಗಳಿಲ್ಲದೆ ಕೋಟಿ ಕೋಟಿ ವರ್ಷಗಳಲ್ಲೂ ದೃಶ್ಯನಾಗಲಾರೆ ಎಂಬುದಾಗಿ ಭಗವಂತನು ವಾರಾಹದಲ್ಲಿ ತಿಳಿಸಿರುವನು.[4] ಇದಕ್ಕೆ ಜೀವಾತ್ಮನು ವೇದಾಧ್ಯಯನಾದಿಗಳನ್ನು ನಡೆಸಿದರಷ್ಟೇ ಅವನಿಗೆ ಭಗವಂತನ ದರ್ಶನವಾಗುವುದೆಂಬ

---

1 'ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ । ಕಶ್ಚಿದೇನಮ್'
-ಕಾ. ಉ. 2-4-10

* ಪ್ರಾದುರ್ಭಾವೇಷ್ವೃತೇ ವಿಷ್ಣುಮಿಂದ್ರಿಯೈರ್ನೈವ ಪಶ್ಯತಿ ।
-ಕಾ. ಉ. ಭಾ.

2 ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ
-ಋ ವೇ. 25-20

ರಮಾಬ್ರಹ್ಮಶಿವಾದಿಭ್ಯೋ ಯದ್ ವಿಷ್ಣೋಃ ಪರಮಂ ಪದಮ್ । ರೂಪಂ ಪಶ್ಯಂತಿ ನಿರ್ಮುಕ್ತಾಃ ಸಂಸಾರಾತ್ ಸೂರಯಃ ಸದಾ ।
-ಋ. ವೇ. ಭಾ.

3 ನೂನಂ ಹ್ಯೇಷಾ ಭವದೀಯಾ ಹಿ ಭೂಮನ್ ಯಸ್ತ್ವಂ ಷಷ್ಠಃ ಪಂಚಭಿರ್ಭಾಸಿ ಭೂತೈಃ । -ಭಾಗ 4-7-37

ಭಗವನ್ಮಹಿಮ್ನೈವಾಸೌ ಯದ್ ದೃಶ್ಯೋ ಭಗವಾನ್ ಸ್ವಯಮ್ ।
-ಭಾಗ. ತಾ. ನಿ.

4 ವೇದೈಶ್ಚ ಪಂಚರಾತ್ರೈಶ್ಚ ಭಕ್ತ್ಯಾ ಯಜ್ಞೈಸ್ತಥೈವ ಚ ।
ದೃಶ್ಯೋಽಹಂ ನಾನ್ಯಥಾ ದೃಶ್ಯೋ ವರ್ಷಕೋಟಿಶತೈರಪಿ ॥
-ವಾರಾಹ (ಆ. ಉ. ಭಾ. 1-1-6)

ಅರ್ಥವೇ ಹೊರತು ವೇದಾಧ್ಯಯನಾದಿಗಳಷ್ಟೇ ಸಾಕು ಎಂಬ ಅರ್ಥವಲ್ಲ ಭಗವದನುಗ್ರಹವಿದ್ದರಷ್ಟೇ ಅವನ ದರ್ಶನವು ಲಭಿಸುವುದು ಭಗವಂತನು ಅವ್ಯಕ್ತೈಕಸ್ವಭಾವದವನು ಎಂಬ ವಿಷಯದಲ್ಲೂ, ಕೆಲವರು ಅವನ ದರ್ಶನ ಪಡೆಯುವರು, ಎಂಬ ವಿಷಯದಲ್ಲೂ ಪ್ರಮಾಣವಿರುವುದರಿಂದ ಅವ್ಯಕ್ತೈಕ ಸ್ವಭಾವದವನೇ ಆದರೂ ಅವನ ದರ್ಶನವು ಅವನ ಅನುಗ್ರಹದಿಂದ ಆಗುವುದೆಂದು ಶ್ರೀವೇದ ವ್ಯಾಸರು ಬ್ರಹ್ಮಸೂತ್ರವೊಂದರಲ್ಲಿ ನಿರ್ಣಯಿಸಿರುವರು[1] ಆದ್ದರಿಂದ 'ಅದೃಶ್ಯ' ನಾಮಕ್ಕೆ ವೇದಾಧ್ಯಯನಾದಿಗಳಿಲ್ಲದೆ, ಅವನ ಅನುಗ್ರಹವಿಲ್ಲದೆ ಕೇವಲ ಪುರುಷಯತ್ನದಿಂದ ಕಾಣಲು ಅಶಕ್ಯನಾಗಿರುವವನು—ಎಂಬ ಅಭಿಪ್ರಾಯವು ಫಲಿಸುವುದು.

೬ (ರಾಜಸ ಮತ್ತು ತಾಮಸರಿಗೆ ಎಂದೆಂದೂ) ಕಾಣಲು ಅಶಕ್ಯನಾಗಿರುವವನು.[2]

೭ ಸಮಗ್ರವಾಗಿ ತಿಳಿಯಲು ಅಶಕ್ಯನಾಗಿರುವವನು[3]

೮ ಪೂರ್ಣನಾಗಿರುವುದರಿಂದ 'ಅ' ಎನಿಸುವ ಅವನ ಅನುಗ್ರಹದಿಂದಲೇ ತಿಳಿಯಲು ಯೋಗ್ಯನಾದವನು[4]

ಯಾರು ಸ್ವರ್ಗಾದಿಕಾಮನಿವೃತ್ತಿಗಾಗಿ ತನ್ನನ್ನು ಆಶ್ರಯಿಸಿಕೊಂಡು ಯತ್ನಿಸುವರೋ ಅವರಷ್ಟೇ ಬ್ರಹ್ಮನನ್ನು ತಿಳಿಯುವರೆಂದು ಗೀತಾಚಾರ್ಯನು ಸಂದೇಶಿಸಿರುವನು.[5] ಭಗವಂತನು ಯಾರನ್ನು

---

1 ಅತೋಽನಂತೇನ ತಥಾ ಹಿ ಲಿಂಗಮ್ । -ಬ್ರ. ಸೂ. 3-2-27

ಉಭಯತ್ರ ಪ್ರಮಾಣಭಾವಾತ್ ತತ್ಪ್ರಸಾದಾದೇವ ಪ್ರಕಾಶೋ ಭವತಿ ।
-ಬ್ರ. ಸೂ. ಭಾ.

೬ 2 ರಾಜಸೈಃ ತಾಮಸೈರ್ವಾ ಕದಾಽಪಿ ದ್ರಷ್ಟುಮಶಕ್ಯಃ ಅದೃಶ್ಯಃ ।

೭ 3 ಸಾಕಲ್ಯೇನ ದ್ರಷ್ಟುಂ ಜ್ಞಾತುಂ ಶಕ್ಯೋ ನ ಭವತೀತಿ ಅದೃಶ್ಯಃ ।

೮ 4 ಏನ ಅನಾಮಕೇನ ಸ್ವೇನ ಸ್ವಸ್ಯ ಪ್ರಸಾದಾದಿತಿ ಯಾವತ್, ದ್ರಷ್ಟುಂ ಜ್ಞಾತುಂ, ಪ್ರೇಕ್ಷಿತುಂ ವಾ ಶಕ್ಯಃ ಅದೃಶ್ಯಃ ।

5 ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ತೇ ಬ್ರಹ್ಮ ತದ್ ವಿದುಃ .. -ಗೀ. 7-29

ತ ಏವ ಚ ವಿದುಃ । 'ಯಮೇವೈಷ ವೃಣುತೇ' ಇತಿ ಶ್ರುತೇಃ ।
-ಗೀ. ಭಾ.

ತನ್ನ ಭಕ್ತರೆಂದು ಸ್ವೀಕರಿಸುವನೋ ಅವನಿಗಷ್ಟೇ ತನ್ನ ಜ್ಞಾನ ಬರುವಂತೆ ಮಾಡುವನು, ದರ್ಶನ ದೊರಕುವಂತೆ ಮಾಡುವನು—ಎಂಬುದಾಗಿ ಆಥರ್ವಣೋಪನಿಷತ್ತು ಸಂದೇಶಿಸಿದೆ[1] ನಿತ್ಯಾವ್ಯಕ್ತನಾದ ಭಗವಂತನು ತನ್ನ ಅಚಿಂತ್ಯ ಸಾಮರ್ಥ್ಯದಿಂದಷ್ಟೇ ಕಾಣಿಸಿಕೊಳ್ಳಲ್ಪಡುವನು ಅವನ ಅನುಗ್ರಹವಿಲ್ಲದೆ ಅವನನ್ನು ಯಾರು ತಾನೇ ನೋಡಬಲ್ಲರು?[2]—ಎನ್ನುವ ನಾರಾಯಣಾಧ್ಯಾತ್ಮವು ಅವನ ದರ್ಶನಕ್ಕೆ ಅವನ ಅನುಗ್ರಹ ಅತ್ಯಾವಶ್ಯಕ ಎಂದು ಸೂಚಿಸಿ ಕೊಟ್ಟಿದೆ

೯ 'ಅ' ಎನಿಸುವ ತನ್ನಿಂದಲೇ (ಸಮಗ್ರವಾಗಿ, ಸ್ವತಂತ್ರವಾಗಿ) ತಿಳಿಯಲು ಶಕ್ಯನಾಗಿರುವವನು[3]

ಅರ್ಜುನನು ವಿಶ್ವರೂಪಿ ಭಗವಂತನನ್ನು ಸಂಬೋಧಿಸಿ,—'ನಿನ್ನ ಸಾಮರ್ಥ್ಯಾತಿಶಯವನ್ನು ದೇವತೆಗಳಾಗಲೀ, ದಾನವರಾಗಲೀ ಸಮಗ್ರವಾಗಿ ಸ್ವತಂತ್ರವಾಗಿ ತಿಳಿಯಲಾರರು ನೀನೊಬ್ಬನೇ ನಿನ್ನ ಸ್ವರೂಪವನ್ನು ಸಮಗ್ರವಾಗಿ ಸ್ವತಂತ್ರವಾಗಿ ತಿಳಿದಿರುವಿ'—ಎಂದು ಸ್ತುತಿಸಿರುವನು[4]

---

1 'ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್'
-ಅ. ಉ. 4-1-3

ಅತ್ರ ಭಗವತಃ ಅಪರೋಕ್ಷಜ್ಞಾನೇ ಇವ ಪರೋಕ್ಷಜ್ಞಾನೇ ಅಪಿ ಭಗವತ್ಪ್ರಸಾದಸ್ಯ ಕಾರಣತ್ವಂ ಸಂದಿಶ್ಯತ ಇತಿ ಶ್ರೀಮದಾಚಾರ್ಯಾಣಾಂ ಸಮ್ಮತಮ್ । ಅತ ಏವ ' .. ಮಾಮಾಶ್ರಿತ್ಯ ಯತಂತಿ ಯೇ । ತೇ ಬ್ರಹ್ಮ ತದ್ ವಿದುಃ' (ಗೀ. 7 29) ಇತಿ ಗೀತಾವ್ಯಾಖ್ಯಾನಸಂದರ್ಭೇ ಭಗವತ್ಪ್ರಸಾದಪಾತ್ರಸ್ಯೈವ ತತ್ಪರೋಕ್ಷಜ್ಞಾನಮಿತಿ ವಿಚಾರೇ ಏತದೇವ ವಾಕ್ಯಂ ಪ್ರಮಾಣತಯಾ ಉದಾಹ್ರಿಯತೇ ।

2 'ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ। ತಮೃತೇ ಪರಮಾತ್ಮಾನಂ ಕಃ ಪಶ್ಯೇತಾಮಿತಂ ಪ್ರಭುಮ್' -ನಾರಾಯಣಾಧ್ಯಾತ್ಮ (ಬ್ರ. ಸೂ. ಭಾ. 3-2-27)

೯ 3 ಏನ ಅನಾಮಕೇನ ಸ್ವೇನೈವ ದೃಶ್ಯಃ ಸಾಕಲ್ಯೇನ ಸ್ವಾತಂತ್ರ್ಯೇಣ ದ್ರಷ್ಟುಂ ಜ್ಞಾತುಂ ಶಕ್ಯಃ ಅದೃಶ್ಯಃ ।

4 ನಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ।
ಸ್ವಯಮೇವಾತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।
-ಗೀ. 10-14,15

೧೦ ಅಯಾಯಾ ಜೀವಾತ್ಮರಿಗೆ ಯೋಗ್ಯಗಳಾದ ವಿಷಯ ಗಳನ್ನು ತಲುಪಿಸುವ ಪ್ರಯುಕ್ತ ಅಥವಾ ಪ್ರಾಜ್ಞ ಮತ್ತು ತೈಜಸರನ್ನು ತನ್ನ ಆದಿಯಾಗಿ ಹೊಂದಿರುವ ಪ್ರಯುಕ್ತ ವಿಶ್ವ ನಾಮಕ ಭಗವಂತನು 'ಅ' ಎನಿಸಿರುವನೆಂದು ತಿಳಿಯಲು ಯೋಗ್ಯನಾಗಿರುವವನು.[1]

ಜೀವಾತ್ಮರ ಜಾಗ್ರದವಸ್ಥೆಗೆ ಪ್ರೇರಕನಾದ ವಿಶ್ವ ಅಥವಾ ವೈಶ್ವಾನರ ಎನಿಸುವ ಭಗವಂತನು ಜೀವಾತ್ಮರಿಗೆ ಯೋಗ್ಯಗಳಾದ ವಿಷಯ ಪದಾರ್ಥಗಳನ್ನು ತಲುಪಿಸುವ ಪ್ರಯುಕ್ತವಾಗಲೀ, ಪ್ರಾಜ್ಞ ಮತ್ತು ತೈಜಸರನ್ನು ಆದಿಯಾಗಿ ಹೊಂದಿರುವುದರಿಂದಾಗಲೀ ಓಂಕಾರದ ಮೊದಲ ಅಕ್ಷರವಾದ ಅಕಾರದಿಂದ ಪ್ರತಿಪಾದ್ಯನಾಗಿರುವನೆಂದು ಸಂದೇಶಿಸುತ್ತಿರುವ ಮಾಂಡೂಕೋಪನಿಷತ್ತು, ಹೀಗೆ ಅಕಾರವಾಚ್ಯನಾದ ವಿಶ್ವನನ್ನು ಬಲ್ಲವನು ತನಗೆ ಯೋಗ್ಯವಾದ ಅಭೀಷ್ಟಗಳನ್ನೆಲ್ಲ ಹೊಂದುವನು ಹಾಗೂ ಅಂತಹ ಅಧಿಕಾರಿ ಮುಕ್ತರಾಗಲು ವಿಶ್ವನಾಮಕ ಭಗವಂತನು ಕಾರಣ ನಾಗುವನೆಂದು ಫಲವನ್ನು ಬೋಧಿಸುವುದರ ಮೂಲಕ ವಿಶ್ವನಾಮಕ ಭಗವಂತನು ಅಕಾರವಾಚ್ಯ ನಾಗಿ ತಿಳಿಯಲು ಯೋಗ್ಯನೆಂಬುದನ್ನು ಸೂಚಿಸಿದೆ[2]

೧೧ ಸಕಲ ಜೀವಜಡಗಳಿಂದ ಭಿನ್ನನಾಗಿರುವುದರಿಂದಾಗಲೀ, ಸಕಲ ದೋಷದೂರನಾಗಿ ರುವುದರಿಂದಾಗಲೀ, ತನ್ನ ಭಕ್ತರ ದೋಷಗಳನ್ನು ಪರಿಹರಿಸುವುದರಿಂದಾಗಲೀ, ಸರ್ವ

---

೧೦ 1 ತತ್ತಜ್ಜೀವಯೋಗ್ಯಭೋಗ್ಯವಿಷಯಾನ್ ಭೋಗಾನ್ ಆಪಯತೀತಿ ವಾ ಪ್ರಾಜ್ಞ-ಸ್ತೈಜಸಶ್ಚಾದೀ ಅಸ್ಯೇತಿ ವಾ 'ಅ' ಇತಿ ದ್ರಷ್ಟುಂ ಜ್ಞಾತುಂ ಯೋಗ್ಯಃ ಅದೃಶ್ಯಃ।

2 ಜಾಗರಿತಸ್ಥಾನೋ ವೈಶ್ವಾನರೋಽಕಾರಃ ಪ್ರಥಮಾ ಮಾತ್ರಾ। ಆಪ್ತೇರಾದಿಮತ್ವಾದ್ ವಾ। ಆಪ್ನೋತಿ ಹ ವೈ ಸರ್ವಾನ್ ಕಾಮಾನಾದಿಶ್ಚ ಭವತಿ ಯ ಏವಂ ವೇದ॥
-ಆ. ಉ. 2-1-1,2

ಅ ಇತ್ಯನೇನಾಭಿಧಾನೇನಾಕ್ರಿಯತ ಇತ್ಯಕಾರಃ। ತತ್ರ ಪೂರ್ವೋಕ್ತೋ ವೈಶ್ವಾನ-ರೋಽಕಾರಃ। ಪ್ರಥಮಾ ಮಾತ್ರೇತ್ಯನುವಾದಃ। ಅಕಾರ ಇತ್ಯಾದಿಕಂ ವಿಧೇಯಮ್।
-ಅ. ಉ. ಭಾ.

'ಅದೃಶ್ಯಸ್ತದಂಶೋ ಹ್ಯಾಪ್ತಿಃ ಸ್ಯಾದ್ ವಿಷಯಾನಾಪಯೇದ್ ಯತಃ। ಜೀವಸ್ಯ ತು ಯತಃ ಪ್ರಾಜ್ಞಾತ್ ತೈಜಸಾದ್ ವಾ ಸಮುತ್ಥಿತಿಃ। ಅವಿಭಾಗೋಽಪಿ ಭಗವಾನಾದಿ-ಮಾಂಸ್ತೇನ ಕೀರ್ತಿತಃ। ತಸ್ಮಾದುತ್ಪದ್ಯತೇ ಮುಕ್ತಸ್ತಜ್ಜ್ಞಾನ್ಯಾನಂದಲಕ್ಷಣಃ। ಆಪ್ನೋತಿ ವಿಷಯಾನ್ ಸರ್ವಾನ್ ' -ಬ್ರಹ್ಮತರ್ಕ (ಅ. ಉ. ಭಾ)

ದೋಷವಿರುದ್ಧ ಗುಣಸ್ವರೂಪಿಯಾಗಿರುವುದರಿಂದಾಗಲೀ—'ಅ' ಎನಿಸಿರುವವನು ಮತ್ತು ತಿಳಿದುಕೊಳ್ಳಲು ಯೋಗ್ಯನಾಗಿರುವವನು[1]

ನಾರಾಯಣ ನಾಮದ ನಾಲ್ಕು ಅಕ್ಷರಗಳೂ ಅಕಾರದಿಂದಲೇ ರೂಪಗೊಂಡಿದ್ದು, ಅದರ ೪ ಅಕ್ಷರಗಳು ಪ್ರತ್ಯೇಕವಾಗಿ ತಿಳಿಸುವ ನಾಲ್ಕು ಅರ್ಥಗಳೂ, ಭೇದ, ಅಭಾವ ಹಾಗೂ ವಿರೋಧ ಎಂಬ ಅರ್ಥಗಳನ್ನೊಳಗೊಂಡ ಅಕಾರದಿಂದಲೇ ಹೊರಡುವವುಗಳೆಂದು 'ಬೃಹತ್ಸಾರ' ತಿಳಿಸಿದೆ[2] ಭಗವಂತನು ಸರ್ವಶ್ರೇಷ್ಠನಾಗಿದ್ದು ಅವನ ಜ್ಞಾನದಿಂದ ಉಳಿದೆಲ್ಲವುಗಳ ಜ್ಞಾನದ ಫಲವೂ ದೊರಕುವುದರಿಂದ[3] ಅವನೇ ನಿಜವಾಗಿ ಜ್ಞೇಯನು.

೧೨ ಗುಣಪೂರ್ಣನಾಗಿರುವವನು ಮತ್ತು ನೋಡಲು ಯೋಗ್ಯನಾದವನು[4].

ಭಗವಂತನು ನೋಡಲು ಯೋಗ್ಯನೆನಿಸಿರುವುದರಿಂದಲೇ, ಅವನನ್ನು ಕಂಡ ಮುಕ್ತರು ತಮ್ಮ ಕಣ್ಣಿನ ಪೂರ್ಣಪ್ರಯೋಜನವನ್ನು ಪಡೆದಂತಾಗುವುದು ಆದ್ದರಿಂದಲೇ ಅವರು 'ಕಣ್ಣುಳ್ಳವ'ರೆಂಬುದಾಗಿ ಶ್ರುತಿಯಲ್ಲಿ ಹೇಳಲ್ಪಟ್ಟಿರುವರೆಂದು ಬೃಹತ್ಸಾರ ತಿಳಿಸಿದೆ.[5]

---

1 ಸರ್ವಜೀವಜಡೇಭ್ಯ ಅನ್ಯತ್ವಾದ್ವಾ, ಸರ್ವದೋಷೋಜ್ಝಿತತ್ವಾದ್ವಾ, ಸ್ವಭಕ್ತೇಭ್ಯಃ ದೋಷಾಣಾಂ ನಿರಾಸನಾದ್ವಾ ಸರ್ವದೋಷ ವಿರುದ್ಧೋರುಗುಣಪೂರ್ಣ ಸ್ವರೂಪತ್ವಾದ್ವಾ ಅಃ। 'ಅನ್ಯತಾ ಚ ನಿಷೇಧಶ್ಚ ವಿರುದ್ಧತ್ವಮಿತಿ ತ್ರಯಃ । ಅಕಾರಾರ್ಥಾಃ ' ಇತಿ ವಾಕ್ಯ ನಿರ್ಣಯಾನುಸಾರೇಣ (ಐ. ಉ. ಭಾ. 2-2-5) ಅಕಾರಸ್ಯ ಅರ್ಥಚತುಷ್ಟಯಾಭಿಧಾಯಕತ್ವವತ್ । ದ್ರಷ್ಟುಂ ಜ್ಞಾತುಂ ಯೋಗ್ಯಃ ದೃಶ್ಯಃ। ಅಶ್ಚಾಸೌ ದೃಶ್ಯಶ್ಚ ಅದೃಶ್ಯಃ।

2 ಅನ್ಯತ್ವಾತ್ ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ । ಸರ್ವದೋಷೋಜ್ಝಿತತ್ವಾಚ್ಚ ಸರ್ವತೋಽಪ್ಯಧಿಕತ್ವತಃ। ನಿರಾಸನಾಚ್ಚ ದೋಷಾಣಾಂ ಸ್ವಭಕ್ತೇಭ್ಯಃ ಸಮಂತತಃ। ಸರ್ವದೋಷವಿರುದ್ಧೋರುಗುಣಪೂರ್ಣಸ್ವರೂಪತಃ । ನಾರಾಯಣ ಇತಿ ಪ್ರೋಕ್ತೋ ಹ್ಯಕಾರಾರ್ಥೋಽಯಮೇವ ಹಿ । —ಬೃಹತ್ಸಾರ (ಐ. ಉ. ಭಾ. 2-2-6-5)

3 ಯಥಾ ಸ್ವರ್ಣಸ್ಯ ವಿಜ್ಞಾನಾತ್ ಸರ್ವೇ ಲೋಹಮಯಾಸ್ತಥಾ । ಪ್ರಾಧಾನ್ಯಾತ್ ವಿಷ್ಣುವಿಜ್ಞಾನಾದ್ ವಿಜ್ಞಾತಂ ಸ್ಯಾಜ್ಜಗತ್ ಸದಾ ।
—ಸಾಮಸಂಹಿತಾ (ಛಾಂ. ಉ. ಭಾ. 6-1-3)

೧೨ 4 ಪೂರ್ಣತ್ವಾತ್ ಅಃ । ದ್ರಷ್ಟುಂ ಪ್ರೇಕ್ಷಿತುಂ ಯೋಗ್ಯಃ ದೃಶ್ಯಃ । ಅಶ್ಚಾಸೌ ದೃಶ್ಯಶ್ಚ ಅದೃಶ್ಯಃ ।

5 'ಅಕ್ಷಣ್ವಂತಃ ಕರ್ಣವಂತಃ ಸಖಾಯೋ.....' —ಋ. ವೇ.

೧೩ ಅಧಿಕನಾಗಿರುವವನು ಮತ್ತು (ಜೀವಾತ್ಮರಿಗೆ) ಕಣ್ಣನ್ನು ಅಥವಾ ಬುದ್ಧಿಯನ್ನು ತಲುಪಿಸಿರುವವನು.[1]

## ಜಿಜ್ಞಾಸೆ

### [ಸ್ವಭಾವದ ಪರಿವರ್ತನೆ ಇಲ್ಲ]

ಪ್ರ - 'ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ' ಎಂಬ ಸೂತ್ರದಲ್ಲಿ ಪರಮಾತ್ಮನ ಗುಣರೂಪವಾದದ್ದು ಅದೃಶ್ಯತ್ವ ಎಂದು ಹೇಳಲ್ಪಟ್ಟಿದೆ ಅವನ ಗುಣವು ನಿತ್ಯ ಭಕ್ತರಿಗೆ ಧ್ಯಾನ ಸಾಧನದಿಂದ ದೃಶ್ಯನಾಗುತ್ತಾನೆ. ಆಗ ನಿತ್ಯವಾದ ಅದೃಶ್ಯತ್ವಗುಣವು ನಾಶವಾಗಬೇಕಲ್ಲವೇ? ಅವನ ಎಲ್ಲ ಗುಣಗಳು ನಿತ್ಯ ಎಂಬ ಸಿದ್ಧಾಂತಕ್ಕೆ ಹಾನಿಯು ಆಗಲಾರದೆ?

ಉ ಪರಮಾತ್ಮನ ಇಚ್ಛೆಯನ್ನು ಹೊರತು ಇನ್ನೊಬ್ಬರ ಪ್ರಯತ್ನ ಮಾತ್ರದಿಂದ ಪರಮಾತ್ಮನು ದೃಶ್ಯನಾಗುವದಿಲ್ಲ ಎಂದು ಅದೃಶ್ಯತ್ವ ಎಂಬ ಶಬ್ದದ ಅರ್ಥ. ಪರಮಾತ್ಮನು ತನ್ನ ಇಚ್ಛೆಯಿಂದಲೇ ದೃಶ್ಯನಾಗುವದರಿಂದ ಅವನ ಗುಣಕ್ಕೆ ನಾಶವಾಗುವ ಪ್ರಸಂಗವು ಇಲ್ಲ .

ಪ್ರ - ಪರಮಾತ್ಮನ ಸ್ವಭಾವವಾಗಿದೆ ಅವನ ಅವ್ಯಕ್ತತ್ವ ಸ್ವಭಾವದ ಪರಿವರ್ತನೆಯು ಆಗಲು ಶಕ್ಯವಿಲ್ಲ ಆದ್ದರಿಂದ ಅವ್ಯಕ್ತ ಸ್ವಭಾವದ ಪರಮಾತ್ಮನು ಹೇಗೆ ವ್ಯಕ್ತನಾಗುತ್ತಾನೆ? ಸ್ವಭಾವಕೂ ಪರಿವರ್ತನೆಯು ಇದೆಯೇ?

ಉ - ಪ್ರಶ್ನೆಯಂನ್ನು ಕೇಳದೆ ತಾನಾಗಿಯೇ ಉತ್ತರವನ್ನು ಹೇಳುವ ಸ್ವಭಾವ ಇಲ್ಲದ ಪುರುಷನು ತನ್ನ ಮಕ್ಕಳಿಗೆ ಪ್ರಶ್ನೆ ಇಲ್ಲದೆನೇ ಉಪದೇಶವನ್ನು ಕೊಡುತ್ತಾನೆ ಇದರಿಂದ ಅವನ ಸ್ವಭಾವ ಪರಿವರ್ತನೆಯಾಗಿಲ್ಲ. ಅದರಂತೆ ಪರಮಾತ್ಮನ ಭಕ್ತರು ಪರಮಾತ್ಮನಿಗೆ ಪ್ರಿಯರು. ಅವರಿಗೆ ತನ್ನ ರೂಪವನ್ನು ತೋರಿಸುವದೂ ಅವನ ಸ್ವಭಾವವೇ ಆಗಿದೆ ಪರಮಾತ್ಮನು ತನ್ನ ಸ್ವಭಾವವನ್ನು ಅನುಸರಿಸಿಯೇ ಎಲ್ಲ ಕಾರ್ಯವನ್ನು ಮಾಡುತ್ತಾನೆ



---

* ' ಅಕ್ಷಣ್ವಂತೋ ದರ್ಶನಾಚ್ಚ ವಿಷ್ಣೋರ್ಮುಕ್ತಾಸ್ತು ಯೇ ಗಣಾಃ'

-ಬ್ರಹ್ಮಸಾರ (ಐ ಉ. ಭಾ. 2-1-2-15)

೧೩ 1 ಅಧಿಕತ್ವಾತ್ ಅಃ । ದೃಶ್ಯಂ ಜೀವಾತ್ಮನಾಂ ನೇತ್ರಂ ಬುದ್ಧಿಂ ವಾ ಯಾಪಯತಿ ಪ್ರಾಪಯತೀತಿ ದೃಶ್ಯಃ । ಅಶ್ಚಾಸೌ ದೃಶ್ಯಶ್ಚ ಅದೃಶ್ಯಃ । 'ದೃಕ್ ಸ್ತ್ರೀಯಾಂ ದರ್ಶನೇ ನೇತ್ರೇ ಬುದ್ಧೌ ಚ ತ್ರಿಷು ವೀಕ್ಷಕೇ' -ಮೇದಿನೀ ।

## ೭೦೫ (ಅ) ವ್ಯಕ್ತರೂಪಃ

೧ (ತನ್ನ ಶಕ್ತಿಯಿಂದ ಭಕ್ತರಿಗೆ) ಕಾಣಿಸಿಕೊಳ್ಳುವ ದೇಹ ಉಳ್ಳವನು[1]

ಭಗವಂತನು ಸಹಜವಾಗಿ ಅವ್ಯಕ್ತ—ಕಾಣಿಸಿಗೊಳ್ಳದವನು[2] ಅವನನ್ನು ಚೆನ್ನಾಗಿ ಆರಾಧಿಸಿದರೂ, ಅದರಿಂದಾಗಿ ಅವನನ್ನು ವ್ಯಕ್ತನನ್ನಾಗಿಸಿಕೊಳ್ಳಲು ಸಾಧ್ಯವಿಲ್ಲ ಜ್ಞಾನಿಗಳು ತಮ್ಮ ಪ್ರತ್ಯಕ್ಷದಿಂದ ಅವನ ಅವ್ಯಕ್ತಸ್ವಭಾವವನ್ನು ಕಂಡು ಕೊಂಡಿರುವರು ಉಳಿದವರು—ಭಗವಂತನು ಅತಿಸೂಕ್ಷ್ಮ ಆಗಿರುವುದರಿಂದ ಪರಮಾಣ್ವಾದಿಗಳಂತೆ ವ್ಯಕ್ತನಲ್ಲ—ಎಂದು ಅನುಮಾನ ಪ್ರಮಾಣದಿಂದ ತಿಳಿದುಕೊಂಡಿರುವರು[3] ಅಗ್ನ್ಯಾದಿಗಳ ರೂಪಗಳಲ್ಲಿ ಸ್ಥೂಲತ್ವ ಹಾಗೂ ಸೂಕ್ಷ್ಮತ್ವ ಎಂಬ ವಿಶೇಷಗಳಿರುವಂತೆ ಭಗವಂತನ ರೂಪಗಳಲ್ಲಿ ಸ್ಥೂಲತ್ವ ಸೂಕ್ಷ್ಮತ್ವ ಮುಂತಾದ ವಿಶೇಷಗಳಿಲ್ಲ. ಎಲ್ಲವೂ ಒಂದೇ ಪ್ರಕಾರಗಳಾಗಿರುವವು ಆದ್ದರಿಂದ ಎಲ್ಲ ರೂಪಗಳಿಂದಲೂ ಅವ್ಯಕ್ತನೇ[4] ಎಂಬುದಾಗಿ ಬಗವಂತನ 'ಅವ್ಯಕ್ತತ್ವ'ವನ್ನು ಬ್ರಹ್ಮಸೂತ್ರಗಳಲ್ಲಿ ಸಮರ್ಥಿಸಿದ ಶ್ರೀವೇದವ್ಯಾಸರು, ಹೀಗಿದ್ದರೂ ಭಗವಂತನು ತನ್ನ ಅಚಿಂತ್ಯಸಾಮರ್ಥ್ಯದಿಂದಾಗಿ ಭಕ್ತರಿಗೆ ಕಾಣಿಸಿಕೊಳ್ಳುವನೆಂದು ಸಿದ್ಧಾಂತಿಸಿರುವರು.[5]

---

೧ 1 ನಿಜಶಕ್ತ್ಯಾ ಭಕ್ತಾನಾಂ ವ್ಯಕ್ತಂ ಸ್ಫುಟಂ ರೂಪಂ ಶರೀರಂ ಯಸ್ಯ ಸಃ ವ್ಯಕ್ತರೂಪಃ ।
-ವಿ. ರಾ. ಆಧಾರೇಣ

2 'ತದವ್ಯಕ್ತಮಾಹ ಹಿ' -ಬ್ರ ಸೂ. 3-2-23

ಅವ್ಯಕ್ತಮೇವ ತದ್ ಬ್ರಹ್ಮ ಸ್ವತಃ । -ಬ್ರ. ಸೂ ಭಾ.

3 'ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್'
-ಬ್ರ. ಸೂ 3-2 24

ಆರಾಧನೇಽಪ್ಯವ್ಯಕ್ತಮೇವ । ಜ್ಞಾನಿಪ್ರತ್ಯಕ್ಷೇಣೇತರೇಷಾಮತಿಸೂಕ್ಷ್ಮತ್ವಲಿಂಗಾದನುಮಾನೇನ । -ಬ್ರ ಸೂ. ಭಾ

4 'ಪ್ರಕಾಶವಚ್ಚಾವೈಶೇಷ್ಯಮ್' -ಬ್ರ. ಸೂ 3-2-25

ಅಗ್ನ್ಯಾದಿವತ್ ಸ್ಥೂಲಸೂಕ್ಷ್ಮತ್ವ ವಿಶೇಷಾಭಾವಃ। 'ಅವ್ಯಕ್ತವ್ಯಕ್ತಭಾವೌ ಚ ನ ಕ್ವಚಿತ್ ಪರಮೇಶ್ವರೇ । ಸರ್ವತ್ರಾವ್ಯಕ್ತರೂಪೋಽಯಂ ಯತ ಏವ ಜನಾರ್ದನಃ'
—ಕೌರ್ಮ (ಬ್ರ. ಸೂ. ಭಾ.)

5 'ಅತೋಽನಂತೇನ ತಥಾ ಹಿ ಲಿಂಗಮ್' -ಬ್ರ. ಸೂ. 3-2-27

ಭಗವಂತನು ನಿತ್ಯ ಅವ್ಯಕ್ತನಾದರೂ ತನ್ನ ಅಚಿಂತ್ಯ ಸಾಮರ್ಥ್ಯದಿಂದಾಗಿ ಪ್ರಕಟನಾಗುವನೆಂಬುದಾಗಿ 'ನಾರಾಯಣಾಧ್ಯಾತ್ಮ' ಸಂದೇಶಿಸಿದೆ[1] ವೇದಗಳನ್ನು ಅಭ್ಯಸಿಸಿ, ಅವನನ್ನು ಉಪಾಸಿಸಿದಾಗ ಅವನು ಪ್ರಕಟನಾಗುವನೆಂದು ತೈತ್ತಿರೀಯೋಪನಿಷತ್ತು ತಿಳಿಸಿದೆ[2]

ಭಗವಂತನ ಮೂಲರೂಪದ ದರ್ಶನವೇ ಜೀವಾತ್ಮರ ಮುಕ್ತಿಗೆ ಕಾರಣವಾದುದು. ಇಂತಹ ಮೂಲರೂಪದ ದರ್ಶನವನ್ನು ಭಗವಂತನು ತನ್ನ ಭಕ್ತರಿಗಷ್ಟೇ ಅನುಗ್ರಹಿಸುವನು.[3] ಭಗವಂತನ ಅವತಾರರೂಪಗಳ ದರ್ಶನವಾದರೂ ಎಲ್ಲರಿಗೂ ದೊರಕುವುದು[4] ಅಪ್ರಾಕೃತಗಳಾದ ಅವತಾರ ರೂಪಗಳು ಪ್ರಾಕೃತೇಂದ್ರಿಯಗಳಿಗೆ ಕಾಣಿಸಿಕೊಳ್ಳಲೂ ಅವನ ಸಾಮರ್ಥ್ಯವೇ ಕಾರಣ[5]

---

ಉಭಯತ್ರ ಪ್ರಮಾಣಭಾವಾತ್ ತತ್ಪ್ರಸಾದಾದೇವ ಪ್ರಕಾಶೋ ಭವತಿ । . ಯುಜ್ಯತೇ ತಸ್ಯಾನಂತಶಕ್ತಿತ್ವಾತ್ । -ಬ್ರ. ಸೂ. ಭಾ.

1 ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ ।
-ನಾರಾಯಣಾಧ್ಯಾತ್ಮ (ಬ್ರ ಸೂ. ಭಾ.3-2-5)

2 ಛಂದೋಭ್ಯೋಽಧ್ಯಮೃತಾತ್ ಸಂಬಭೂವ । -ತೈ ಉ. 1-7

ಛಂದೋಭ್ಯೋಽಮೃತರೂಪೇಭ್ಯಃ ಸುವ್ಯಕ್ತಸ್ತದುಪಾಸನಾತ್ ।
-ತೈ. ಉ. ಭಾ

3 'ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್' ।
-ಕ. ಉ 4-1-3

ಯಂ ಭಕ್ತಮೇಷ ಆತ್ಮಾ ವೃಣುತೇ ಸ್ವೀಕರೋತಿ ಯಸ್ಮೈ ಪ್ರಸೀದತೀತಿ ಯಾವತ್, ತೇನೈವ ಪ್ರಸಾದವಿಷಯೇಣೈವ ಲಭ್ಯಃ ।। ತದ್ವಸಕ್ತಿ—ತಸ್ಯ ಸ್ವಪ್ರಸಾದವಿಷಯಸ್ಯೈಷ ಪ್ರಸನ್ನಃ ಆತ್ಮಾ ಸ್ವಾಂ ತನೂಂ ವಿವೃಣುತೇ ಪ್ರಕಾಶಯತೀತಿ ತಸ್ಯೈವಾಪರೋಕ್ಷ ವಿಷಯೋ ಭವತೀತ್ಯರ್ಥಃ । -ಉ. ಖಂ

4 ಆನಂದೋಽವ್ಯಕ್ತರೂಪಸ್ತು ಮೂಲರೂಪಮುದಾಹೃತಮ್ ।
ಸ ಏವ ವ್ಯಕ್ತಿಮಾಪನ್ನಃ ಪ್ರಾದುರ್ಭಾವ ಉದೀರಿತಃ ॥
-ಭಾಗ ತಾ. ನಿ. (6-4-33)

5 ಮಾಯಾ ಹ್ಯೇಷಾ ಭವದೀಯಾ ಹಿ ಭೂಮನ್ ಯಸ್ತ್ವಂ ಷಷ್ಠಃ ಪಂಚಭಿರ್ಭಾಸಿ ಭೂತೈಃ -ಭಾಗ. 4-7-37

೨ ಬ್ರಹ್ಮಾಂಡಕ್ಕೆ ರೂಪವನ್ನು ಕೊಟ್ಟಿರುವವನು[1]

ಸಮಗ್ರ ಬ್ರಹ್ಮಾಂಡವನ್ನೂ, ಅದರ ಸಕಲ ಪದಾರ್ಥಗಳನ್ನೂ ಸೃಷ್ಟಿಸುವ ಭಗವಂತನು ಆಯಾಯ ಪದಾರ್ಥಗಳಿಗೆ, ಆಯಾಯ ರೂಪವನ್ನು ನೀಡುವನು. ತ್ವಷ್ಟೃನಾಮಕ ಭಗವಂತನು ಎಲ್ಲರಿಗೂ, ಎಲ್ಲದ್ದಕ್ಕೂ ರೂಪವನ್ನು ನೀಡುವುದರಿಂದಲೇ ಅವನನ್ನು 'ವಿಶ್ವರೂಪ'—ಎಂದು ಋಗ್ವೇದದಲ್ಲಿ ವಿಶೇಷಿಸಲಾಗಿದೆ.[2]

೩ ಬ್ರಹ್ಮಾಂಡವನ್ನು ನಿರೂಪಿಸಿರುವವನು[3]

ಭಗವಂತನು ತನ್ನ ವೇದವ್ಯಾಸಾದಿರೂಪಗಳಿಂದ ಭಾಗವತ ಮೊದಲಾದ ಪುರಾಣಗಳಲ್ಲಿ ಬ್ರಹ್ಮಾಂಡದ ಸ್ವರೂಪವನ್ನು ನಿರೂಪಿಸಿರುವನು.

೪ ಪ್ರಾಜ್ಞ ಎಂಬುದಾಗಿ ಸ್ತುತಿಸಲ್ಪಡುವವನು[4]

ಭಗವಂತನಷ್ಟು ತಿಳಿದಿರುವವನು ಮತ್ತೊಬ್ಬನಿಲ್ಲ ಎನ್ನುವಷ್ಟು ಭಗವಂತನು ಪ್ರಾಜ್ಞ ವಾಗಿರುವ ಪ್ರಯುಕ್ತ ಸ್ವಾಯಂಭುವಮನು ಯಜ್ಞನಾಮಕ ಭಗವಂತನನ್ನು 'ವಿಕರ್ಷೇ' ಎಂದೇ

---

೨ 1 ವ್ಯಕ್ತಂ ಬ್ರಹ್ಮಾಂಡಂ ರೂಪಯತಿ ರೂಪವಂತಂ ಕರೋತೀತಿ ವ್ಯಕ್ತರೂಪಃ । 'ರೂಪ ರೂಪಕ್ರಿಯಾಯಾಮ್' ವ್ಯಕ್ತಶಬ್ದಸ್ಯ ಬ್ರಹ್ಮಾಂಡಾರ್ಥಕತ್ವಂ ಚ 'ವ್ಯಕ್ತಂ ಬ್ರಹ್ಮಾಂಡ-ಮುದ್ದಿಷ್ಟಂ...' (ಭಾಗ. ತಾ. ನಿ. 3-13-47) ಇತಿ ಪ್ರಮಾಣೇನ ಸಿದ್ಧ್ಯತಿ ।

* ವ್ಯಕ್ತಂ ಪ್ರಪಂಚಂ ಬ್ರಹ್ಮಾಂಡಾದಿಕಂ ರೂಪಯತಿ ನಿರ್ಮಾತೀತಿ ವ್ಯಕ್ತರೂಪಃ ।
-ಶೇ. ಚಂ.

2 ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ ।
-ಋ. ವೇ. 13-10

ತ್ವಷ್ಟಾ ತೇಜಸ್ತ್ವತೋ ವಿಷ್ಣುರ್ಬಲತ್ವಾತ್ ವಾ ಸಮೀರಿತಃ । ವಿಶ್ವರೂಪಕರತ್ವಾಚ್ಚ ವಿಶ್ವರೂಪಃ । -ಋ. ಭಾ.

೩ 3 ವ್ಯಕ್ತಂ ಬ್ರಹ್ಮಾಂಡಂ ರೂಪಯತಿ ನಿರೂಪಯತೀತಿ ವ್ಯಕ್ತರೂಪಃ ।

೪ 4 ವ್ಯಕ್ತ ಪ್ರಾಜ್ಞ ಇತಿ ರೂಯತೇ ಸ್ತೂಯತ ಇತಿ ವ್ಯಕ್ತರೂಪಃ । 'ವ್ಯಕ್ತಃ ಪ್ರಾಜ್ಞೇಽಪಿ' -ಅ. ಕೋ. । 'ರು ಶಬ್ದೇ' ।

ಸಂಬೋಧಿಸಿ ಸ್ತುತಿಸಿರುವನು[1]

೫ ಪ್ರಾಜ್ಞರಿಂದ ಸ್ತುತಿಸಲ್ಪಡುವವನು[2]

ಅಗ್ನಿನಾಮಕ ಭಗವಂತನು ಹಿಂದಿನ, ಈಗಿನ, ಹಾಗೆಯೇ ಮುಂದಿನ ಜ್ಞಾನಿಗಳಾಗಿರುವ ದೇವತೆಗಳೇ ಮುಂತಾದ ಎಲ್ಲರಿಂದಲೂ ಸ್ತುತ್ಯನಾಗಿರುವನೆಂದು ಋಗ್ವೇದದ ಅಗ್ನಿಸೂಕ್ತ ಸಂದೇಶಿಸಿದೆ.[3]

೬ ಪ್ರಾಜ್ಞರನ್ನಾಗಿ ನಿರ್ಮಿಸುವವನು.[4]

ಅಗ್ನಿನಾಮಕ ಭಗವಂತನನ್ನು ಸಂಬೋಧಿಸಿ, ದೇವತೆಗಳಿಗೆ ಜ್ಞಾನವನ್ನು ನೀಡಿ ಪ್ರಾಜ್ಞರನ್ನಾಗಿ ಮಾಡುವವನೂ, ಜ್ಞಾನವನ್ನು ನೀಡಿ ಋಷಿಗಳನ್ನಾಗಿ ಮಾಡುವವನೂ ನೀನೇ—ಎಂದು ಋಗ್ವೇದದಲ್ಲಿ ಸ್ತುತಿಸಲಾಗಿದೆ[5]

೭ ಪ್ರಾಜ್ಞನಾಗಿರುವವನು (ವೇದವ್ಯಾಸಾದಿ ಅವತಾರಗಳಲ್ಲಿ) ಶಾಸ್ತ್ರವನ್ನು ನಿರೂಪಿಸಿರುವವನು.[6]

---

1 'ಪ್ರೂಪನ್ನೇಕರ್ಷೇ.. ' —ಈ. ಉ.
ನಾನ್ಯೋ ಯತ್ ತಾದೃಶೋ ಜ್ಞಾತಾ ತಸ್ಮಾದೇಕರ್ಷಿರ್ಹರಿಃ ।
—ಬ್ರ ಉ ಭಾ. (7-20 2)

೫ 2 ವ್ಯಕ್ತೈಃ ಪ್ರಾಜ್ಞೈಃ ರೂಯತೇ ಸ್ತೂಯತ ಇತಿ ವ್ಯಕ್ತರೂಪಃ ।

3 ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ ।
—ಋ. ವೇ 1-2

ಸ ಪೂರ್ವೈರ್ನೂತನೈರೇಷ್ಯೈರ್ವಿಜ್ಞಾನಾದ್ಯಷಿನಾಮಕೈಃ । ಈಡ್ಯೋ ದೇವಾದಿಭಿಃ ಸರ್ವೈಃ ' —ಋ. ಭಾ.

೬ 4 ವ್ಯಕ್ತಾನ್ ಪ್ರಾಜ್ಞಾನ್ ರೂಪಯತಿ ನಿರ್ಮಾತೀತಿ ವ್ಯಕ್ತರೂಪಃ ।

5 ...ಪ್ರಮತಿಸ್ತ್ವೋಮ್ಯಾನಾಂ...ಋಷಿಕೃತ್... —ಋ. ವೇ. 31-16
...ಜ್ಞಾನದೋ ದೇವತಾನಾಮ್ । ...ಋಷೀಣಾಂ ಕರ್ತಾ ತಥಾ ಜ್ಞಾನದಾನೇನ ದೇವ । —ಋ. ವೇ ಭಾ.

೭ 6 ಪ್ರಾಜ್ಞತ್ವಾತ್ ವ್ಯಕ್ತಃ । ರೂಪಯತಿ ವೇದವ್ಯಾಸಾದ್ಯವತಾರೈಃ ಶಾಸ್ತ್ರಂ ನಿರೂಪಯತೀತಿ ರೂಪಃ । ವ್ಯಕ್ತಶ್ಚಾಸೌ ರೂಪಶ್ಚ ವ್ಯಕ್ತರೂಪಃ ।

ಭಗವಂತನು ಮುಖ್ಯವಾಗಿ ಪ್ರಾಜ್ಞನಾಗಿದ್ದು, ತನ್ನ ವೇದವ್ಯಾಸಾದಿರೂಪಗಳಿಂದ ಶಾಸ್ತ್ರವನ್ನು ನಿರೂಪಿಸಿರುವನು.

೮ ಪ್ರಾಜ್ಞರೂ ಮೋಹಕ್ಕೊಳಗಾಗುವಂತೆ ಮಾಡುವವನು[1]

ಭಗವಂತನ ಅನುಗ್ರಹವಿಲ್ಲದಿದ್ದಲ್ಲಿ ಅವನ ವಿಷಯದಲ್ಲಿ ಜ್ಞಾನಿಗಳೂ ಮೋಹಕ್ಕೊಳಗಾಗುವರು.[2] ಹೀಗೆ ಭಗವಂತನ ಮಹಿಮೆಯನ್ನು ಪೂರ್ಣವಾಗಿ ತಿಳಿದುಕೊಳ್ಳಲಾಗದ ರೂಪದಲ್ಲಿರುವ 'ಮೋಹ'ವು ಭಗನ್ಮಾಯೆಯಿಂದಲೇ ಚತುರ್ಮುಖ, ರುದ್ರಾದಿಗಳಲ್ಲೂ ಇದೆ. ಎಂದು ರುದ್ರದೇವನು ಭಗವಂತನೆದುರೇ ನಿವೇದಿಸಿಕೊಂಡಿರುವನು.[3]

೯ (ಬರೇ ಪುರುಷ ಪ್ರಯತ್ನದಿಂದ) ವ್ಯಕ್ತವಾಗದ ರೂಪ ಉಳ್ಳವನು.[4]

## ಜಿಜ್ಞಾಸೆ

### [ಬಿಂಬರೂಪದ ಸಾಕ್ಷಾತ್ಕಾರ]

ಪ್ರ.- ಏಕಾದಶಸ್ಕಂಧ ಭಾಗವತ ತಾತ್ಪರ್ಯದಲ್ಲಿ ಋಜುಗಣಸ್ಥರಿಗೆ ನೂರು ಬ್ರಹ್ಮಕಲ್ಪದ ಮೊದಲು ಭಗವದಪರೋಕ್ಷ ಜ್ಞಾನವಾಯಿತು. ಎಂದು ಬರೆಯಲ್ಪಟ್ಟಿದೆ ಪ್ರಮಾಣ ಲಕ್ಷಣದಲ್ಲಿ ಋಜುಗಳಿಗೆ ಅನಾದಿಕಾಲದಿಂದ ಭಗವದಪರೋಕ್ಷ ಜ್ಞಾನವು ಇದೆ ಎಂದು ಹೇಳಲ್ಪಟ್ಟದೆ ಈ ರೀತಿಯಾದ ಪರಸ್ಪರ ವಿರೋಧವನ್ನು ಹೇಗೆ ಪರಿಹರಿಸುವದು?

---

೮ 1 ವ್ಯಕ್ತಾನಪಿ ಪ್ರಾಜ್ಞಾನಪಿ ರೂಪಯತಿ ವಿಮೋಹಯತೀತಿ ವ್ಯಕ್ತರೂಪಃ । 'ರುಪ ವಿಮೋಹನೇ' ।

2 ಮುಹ್ಯಂತಿ ಯಂ ಸೂರಯಃ । -ಭಾಗ 1-1-1

ನಚ ಪ್ರಸಾದಂ ವಿನಾ ಜ್ಞಾತಂ ಶಕ್ಯಃ-ಮುಹ್ಯಂತಿ ಯಂ ಸೂರಯಃ ।

3 ನಾಹಂ ಪರಾಯುರ್ಋಷಯೋ ನ ಮರೀಚಿಮುಖ್ಯಾ ಜಾನಂತಿ ಯದ್ವಿರಚಿತಂ ಖಲು ಸತ್ತ್ವಸರ್ಗಾಃ । ಯನ್ಮಾಯಯಾಮುಷಿತಚೇತಸ ಈಶ...

-ಭಾಗ. 8-12-10

೯ 4 ತದವ್ಯಕ್ತಮಾಹ ಹೀತ್ಯುಕ್ತೇಃ ಅವ್ಯಕ್ತಂ ರೂಪಂ ಯಸ್ಯಾಸಾವವ್ಯಕ್ತರೂಪಃ ।

-ಸ. ಸಂ.

* * *

'ಅವ್ಯಕ್ತರೂಪಃ' ಇತಿ ಪದಚ್ಛೇದಮಂಗೀಕೃತ್ಯ ಅಂತಿಮಃ ಅರ್ಥಃ ವ್ಯಾಖ್ಯಾತಃ ।

ಉ - ಋಜುಗಣಸ್ಥರಿಗೆ ಬ್ರಹ್ಮಾಪರೋಕ್ಷಜ್ಞಾನವು ಅನಾದಿ ಕಾಲದಿಂದ ಇದ್ದರೂ ಭಗವಂತನ ಬಿಂಬರೂಪದ ಸಾಕ್ಷಾತ್ಕಾರವು ಅನಾದಿ ಕಾಲದಿಂದ ಇಲ್ಲ ನೂರು ಬ್ರಹ್ಮಕಲ್ಪದ ಮೊದಲು ಬಿಂಬರೂಪದ ಸಾಕ್ಷಾತ್ಕಾರವು ಅವರಿಗೆ ಆಗುತ್ತದೆ ಈ ರೀತಿ ಎರಡೂ ಗ್ರಂಥಗಳ ವಿರೋಧ ಪರಿಹಾರವಾಗುವದು



## ೩೦೬ ಸಹಸ್ರಜಿತ್

೧ (ಶ್ರೀವಿಷ್ಣುಸಹಸ್ರನಾಮ ಸ್ತೋತ್ರ ಹಾಗೂ ಬೃಹತೀಸಹಸ್ರ ಪ್ರತಿಪಾದ್ಯಗಳಾದ) ಅನಂತರೂಪಗಳನ್ನು ಹೊಂದಿರುವವನು[1]

೨ ತಮಗೆ ಪ್ರತಿಪಾದಕಗಳಾದ ನಾಮಗಳಿಂದ ಕೂಡಿಯೇ ಇರುವ ಪ್ರಯುಕ್ತ 'ಸಹಸ್ರ' ಎನಿಸುವ ವಿಷ್ಣುಸಹಸ್ರನಾಮಪ್ರತಿಪಾದ್ಯಗಳಾದ ಅನಂತರೂಪಗಳನ್ನು ಹೊಂದಿರುವವನು[2]

೩ (ವಿಷ್ಣುಸಹಸ್ರನಾಮ ಹಾಗೂ ಬೃಹತೀಸಹಸ್ರ ಪ್ರತಿಪಾದ್ಯಗಳಾದ ಅನಂತರೂಪ

---

೧ 1 ಸಹಸ್ರಂ ಶ್ರೀವಿಷ್ಣುಸಹಸ್ರನಾಮಬೃಹತೀಸಹಸ್ರಾಭ್ಯಾಂ ಪ್ರತಿಪಾದ್ಯಾನಿ ಅನಂತಾನಿ ರೂಪಾಣಿ ಜಯತಿ ಪ್ರಾಪ್ನೋತೀತಿ ಅನಂತಜಿತ್ । ' ದಶ ದಶತಸ್ತ್ವೇಕ್ಕೃತಂ ದಶ ಶತಾನಿ ॥ ತತ್ ಸಹಸ್ರಂ ತತ್ ಸರ್ವಂ . ' ಇತ್ಯೈತರೇಯೋಪನಿಷ (2-2-4-5) ದುಕ್ತ-ರೀತ್ಯಾ ಸಹಸ್ರ ಶಬ್ದಃ ಅನಂತವಾಚಕಃ । 'ತತ್ ಸರ್ವಮಿತಿ ಶ್ರುತಿಶೇಷಸ್ಯ ತತ್ಸಹಸ್ರಂ ಸರ್ವಂ ಅನಂತಂ ಚ ಭವತಿ । ಅನಂತಮಧ್ಯೇ ಸಹಸ್ರಸ್ಯಾಪಿ ಪ್ರವಿಷ್ಟತ್ವಾದಿತ್ಯರ್ಥಃ' ಇತಿ ಭಾವಪ್ರಕಾಶಿಕಾಯಾಂ (ಮ. ಭಾರ. ತಾ. ನಿ. ಟೀ. 1-17) ಐತರೇಯೋಪನಿಷದಃ ಅಂತಿಮಭಾಗಃ ವ್ಯಾಖ್ಯಾತಶ್ಚ । ಜಯತೇಃ ಪ್ರಾಪ್ತ್ಯರ್ಥಕತ್ವಂ ಶ್ರೀಮದಾಚಾರ್ಯೈಃ ಛಾಂದೋಗ್ಯೋಪನಿಷದ್ಭಾಷ್ಯೇ (2-2-1) ಉಲ್ಲಿಖಿತಮ್—ಜಯೋ ನಾಮ ಪ್ರಾಪ್ತಿ-ರೇವ । 'ಧನಜತೇ ಸ್ವರ್ಜಿತೇ' ಇತ್ಯಾದಿವತ್ । ಇತಿ ।

೨ 2 ಸ್ವಪ್ರತಿಪಾದಕನಾಮಭಿಃ ವಾಚ್ಯತಯಾ ಸ್ವತತ್ವಾತ್ ಸಹಸ್ರಂ ವಿಷ್ಣುಸಹಸ್ರನಾಮಪ್ರತಿ-ಪಾದ್ಯಾನಂತರೂಪಜಾತಮ್ । ತತ್ ಜಯತಿ ಪ್ರಾಪ್ನೋತೀತಿ ಸಹಸ್ರಜಿತ್ ।

ಗಳಿಗೆ ಪ್ರತಿಪಾದಕಗಳಾದ) ಅನಂತ ನಾಮಗಳನ್ನು ಹೊಂದಿರುವವನು[1]

ಳ ತಮ್ಮಿಂದ ಪ್ರತಿಪಾದ್ಯಗಳಾದ ಅನಂತ ರೂಪಗಳಿಂದ ಕೂಡಿಯೇ ಇರುವ ಪ್ರಯುಕ್ತ 'ಸಹಸ್ರ' ಎನಿಸುವ ವಿಷ್ಣುಸಹಸ್ರನಾಮದ ಅನಂತ ನಾಮಗಳ ಸಮೂಹವನ್ನು ಹೊಂದಿರುವವನು[2]

'ಬೃಹತೀಸಹಸ್ರ'ವು ಭಗವಂತನ ಅನಂತ ರೂಪಗಳನ್ನು ಪ್ರತಿಪಾದಿಸುದೆಂಬುದನ್ನು ಸಮರ್ಥಿಸುತ್ತ, ಬೃಹತೀಸಹಸ್ರವು ವಿಷ್ಣುಸಹಸ್ರನಾಮಸ್ತೋತ್ರದ ವ್ಯಾಖ್ಯಾನವಾಗಿದ್ದು ವಿಷ್ಣುಸಹಸ್ರನಾಮ ಸ್ತೋತ್ರವು ತನ್ನಲ್ಲಿಯ ಅನಂತ ನಾಮಗಳಿಂದ ಭಗವಂತನ ಅನಂತರೂಪಗಳನ್ನು ಪ್ರತಿಪಾದಿಸುತ್ತಿರುವ ಪ್ರಯುಕ್ತ ಬೃಹತೀ ಸಹಸ್ರವೂ ಭಗವಂತನ ಅನಂತರೂಪಗಳನ್ನು ಸಾರುತ್ತಿದೆ—ಎಂದು ನಿರ್ಣಯಿಸಲಾಗಿದೆ 'ವಿಷ್ಣುಸಹಸ್ರನಾಮ'—ಎಂಬಲ್ಲಿಯ 'ಸಹಸ್ರ' ಶಬ್ದವು ಅನಂತ ಎಂಬ ಅರ್ಥದಲ್ಲೇ ಬಳಸಲಾಗಿರುವ ಪ್ರಯುಕ್ತ 'ವಿಷ್ಣುಸಹಸ್ರನಾಮ ವು ವಿಷ್ಣುವಿನ ಅನಂತನಾಮಗಳನ್ನು ಒಳಗೊಂಡಿದೆ ಎಂದೇ ಅಭಿಪ್ರಾಯ ಅದು ಸಾವಿರ ನಾಮಗಳನ್ನೇ ಒಳಗೊಂಡಿರುವಂತೆ ಕಂಡರೂ ಭಗವಂತನ ಅನಂತ ರೂಪಗಳನ್ನು ಸಾರುತ್ತಿರುವ ಸಾಮರ್ಥ್ಯವನ್ನು ಒಳಗೊಂಡಿರುವ ಪ್ರಯುಕ್ತ ಅದು ಅನಂತ ನಾಮಗಳನ್ನೊಳಗೊಂಡಂತೆಯೇ ಸಹಸ್ರಶಬ್ದವು ಮುಖ್ಯವಾಗಿ 'ಅನಂತ' ಎಂಬ ಅರ್ಥವನ್ನೇ ಹೇಳುವುದರಿಂದ ವಿಷ್ಣುವಿನ ಸಾವಿರ ನಾಮಗಳಿಂದ ಅನಂತ ರೂಪಗಳು ವಾಚ್ಯವಾಗಿವೆ—ಎಂಬುದನ್ನು ಒಪ್ಪುವುದರ ಮೂಲಕವೇ ನಾಮಗಳಿಗೆ ವಿಶೇಷಿಸಿದ 'ಸಹಸ್ರ' ಶಬ್ದವನ್ನು ಹೊಂದಿಸಬಹುದಾಗಿದೆ[3]

---

1 ಸಹಸ್ರಂ ಶ್ರೀವಿಷ್ಣುಸಹಸ್ರನಾಮಬೃಹತೀಸಹಸ್ರಯೋಃ ಪ್ರತಿಪಾದ್ಯಾನಾಂ ಅನಂತಾನಾಂ ರೂಪಾಣಾಂ ಯಾನಿ ಪ್ರತಿಪಾದಕಾನಿ ಅನಂತನಾಮಾನಿ ತಾನಿ ಜಯತಿ ಪ್ರಾಪ್ನೋತೀತಿ ಸಹಸ್ರಜಿತ್ । ವಿಷ್ಣುಸಹಸ್ರನಾಮ್ನಾಂ 'ಪಂಚಶತದ್ವಯತಯಾ ಪ್ರದರ್ಶನೇಽಪಿ' ಅನಂತರೂಪೇಷು ಶಕ್ತತಯಾ ಶಕ್ತಿವಿವಕ್ಷಯಾಽನಂತತ್ವಂ ನ ವಿರುಧ್ಯತ' ಇತಿ ತಾಮ್ರಪರ್ಣ್ಯಾರ್ಯೋಕ್ತಸಮಾಧಾನಮತ್ರಾಪಿ ಸಂಯೋಜ್ಯಮ್ ।

ಳ 2 ಸ್ವಪ್ರತಿಪಾದ್ಯೈಃ ಅನಂತರೂಪೈಃ ಸಹ ಪ್ರತಿಪಾದಕತಯಾ ಸ್ಯೂತಂ ಸ್ಥಿತಮಿತಿ ವ್ಯುತ್ಪತ್ತ್ಯಾ ಸಹಸ್ರಂ ಅನಂತನಾಮಜಾತಂ ಜಯತಿ ಪ್ರಾಪ್ನೋತೀತಿ ಸಹಸ್ರಜಿತ್ ।

3 ಅನಂತರೂಪೋ ಹಿ ಹರಿಃ ಶಬ್ದೋಽಪ್ಯೇಷ ಹ್ಯನಂತಧಾ । ವಿಷ್ಣೋಃ ಸಹಸ್ರನಾಮ್ನಸ್ತು ಯತ್ತದ್ರೂಪಸಹಸ್ರಕಮ್ । ಬೃಹತೀಸಹಸ್ರಮೇತಚ್ಚ ತದ್ವ್ಯಕ್ತಿ ಹಿ ಪೃಥಕ್ ಪೃಥಕ್ । ಸಹಸ್ರಶಬ್ದೋಽಪ್ಯಮಿತಂ ಯತೋ ವಕ್ತ್ಯಮಿತಾನ್ಯತಃ । ನಾಮಾನಿ ವಿಷ್ಣೋರುಚ್ಯಂತೇ

ಅಲ್ಲದೆ, ವಿಷ್ಣುವಿನ ಸಾವಿರ ನಾಮಗಳ ಕುರಿತು ಹೊರಟ 'ಸಹಸ್ರ' ಶಬ್ದದ ಪ್ರಯೋಗವನ್ನು ಮತ್ತೊಂದು ರೀತಿಯಲ್ಲೂ ಕೂಡಿಸಬಹುದಾಗಿದೆ 'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್'—ಎಂಬ ಶ್ರುತಿಯು, ಪರಬ್ರಹ್ಮನು ಎಷ್ಟು ರೂಪಗಳಿಂದ ಇರುವನೋ, ಆ ರೂಪಗಳನ್ನು ಪ್ರತಿಪಾದಿಸುವ ಅಷ್ಟು ನಾಮಗಳೂ ಇವೆ—ಎಂಬುದಾಗಿ ಸಂದೇಶಿಸಿರುವಂತೆ, ಶ್ರೀವಿಷ್ಣುವಿನ ಸಾವಿರ ಹೆಸರುಗಳು ತಮ್ಮಿಂದ ಪ್ರತಿಪಾದ್ಯಗಳಾದ ವಿಷ್ಣುವಿನ ರೂಪಗಳಿಂದ ಕೂಡಿಯೇ ಇರುವುದರಿಂದಾಗಿ, ಅವುಗಳ ಸಮೂಹ 'ಸಹಸ್ರ' ಎನಿಸಿದೆ ವಿಷ್ಣುಸಹಸ್ರನಾಮದಿಂದ ಪ್ರತಿಪಾದ್ಯಗಳಾದ ಅನಂತ ರೂಪಗಳಾದರೂ ನಾಮಗಳಿಂದ ಕೂಡಿಯೇ ಇರುವುದರಿಂದ ಅವುಗಳ ಸಮೂಹವು 'ಸಹಸ್ರ' ಎನಿಸಿದೆ [1]

ಹೀಗೆ ವಿಷ್ಣುಸಹಸ್ರನಾಮ ಸ್ತೋತ್ರವು ಅನಂತ ಭಗವದ್ರೂಪಗಳನ್ನು ಸಾರುತ್ತಿರುವುದರಿಂದ ಅದರ ವ್ಯಾಖ್ಯಾನರೂಪದಲ್ಲಿರುವ ಬೃಹತೀಸಹಸ್ರವೂ ಅನಂತ ಭಗವದ್ರೂಪಗಳನ್ನೇ ಪ್ರತಿಪಾದಿಸುತ್ತಿದೆ —ಎಂಬುದಾಗಿ ಶ್ರೀಮದಾಚಾರ್ಯರು ಐತರೇಯೋಪನಿಷದ್ಭಾಷ್ಯದಲ್ಲಿ ಸಮರ್ಥಿಸಿರುವರು

ಹೀಗೆ ಶ್ರೀವಿಷ್ಣುಸಹಸ್ರನಾಮದಿಂದ ಹಾಗೂ ಅದರ ವ್ಯಾಖ್ಯಾನರೂಪವಾಗಿ ಇರುವ ಬೃಹತೀಸಹಸ್ರದಿಂದ ಅನಂತ ಭಗವದ್ರೂಪಗಳು ಪ್ರತಿಪಾದ್ಯಗಳಾಗಿವೆ. ಸಹಸ್ರಶಬ್ದಕ್ಕೆ ಅನಂತ ಎಂಬ

---

ಸಹಸ್ರಮಿತಿ ಚಾಖ್ಯಯಾ । ಅನಂತನಾಮಾವಚನೇ ತ್ವಶಕ್ತತ್ವಾತ್ ಸಹಸ್ರಕಮ್ । ವಿಷ್ಣೋರನಂತರೂಪಾಣಾಮುಕ್ತ್ಯಾ ಪಂಚಶತದ್ವಯೇ । ಅಶೀತ್ ಸಹಸ್ರಮಿತ್ಯಾಖ್ಯಾ ಸಹಸ್ರಂ ಮುಖ್ಯತೋಽಮಿತಮ್ । -ಐ. ಉ ಭಾ. 2-2-4-45

1 ಬ್ರಹ್ಮ ಯಾವತ್ ತಾವತೀ ವಾಗಿತಿ ವೇದಪ್ರಮಾಣತಃ । ಸಹೈವಾನಂತರೂಪೈಸ್ತು ಪರೇಣೇನ ಸಹಸ್ರಕಮ್ । ನಾಮ್ನಾ ಸಹ ಸ್ಮೃತೇರೇವ ರೂಪಾಣಾಂ ವಾ ಸಹಸ್ರತಾ । -ಐ. ಉ. ಭಾ.

ಪರಂ ಬ್ರಹ್ಮ ಯಾವದ್ರೂಪೈರ್ವಿಷ್ಠಿತಂ ವಿಶೇಷೇಣ ಸ್ಥಿತಂ ವಾಕ್ ನಾಮಜಾತರೂಪಾ ತಾವತೀ ಸಾಮಾನ್ಯತೋ ವಿಶೇಷತಶ್ಚ ತಾವದ್ರೂಪಪ್ರತಿಪಾದಿಕೇತಿ ವೇದಪ್ರಮಾಣತಃ ಅನಂತರೂಪೈಃ ಸಹಪ್ರತಿಪಾದ್ಯಪ್ರತಿಪಾದಕಭಾವಾನುಸಾರೇಣೈವ ನಾಮಜಾತಂ ಸಹಸ್ರಮಿತ್ಯುಚ್ಯತ ಇತ್ಯರ್ಥಃ । - ತಾ. ಪ. (ಐ ಉ. ಭಾ. ಟೀ.)

2 ಬೃಹತೀ ಸಹಸ್ರಂ ಚೈತಸ್ಮಾದ್ ರೂಪಾನಂತಾಭಿಧಾಯಕಮ್ । -ಐ ಉ. ಭಾ

ಅರ್ಥವಿರುವುದರಿಂದಷ್ಟೇ ಅವು 'ಸಹಸ್ರ' ಎನಿಸಿವೆ ವಿಷ್ಣುವಿನ ಸಾವಿರ ನಾಮಗಳು ಅನಂತ ಭಗವದ್ರೂಪಗಳನ್ನು ಪ್ರತಿಪಾದಿಸುವ ಸಾಮರ್ಥ್ಯವನ್ನು ಹೊಂದಿರುವುದರಿಂದಾಗಿ 'ಅನಂತ' ಎಂಬಾರ್ಥದಲ್ಲಿ 'ಸಹಸ್ರ' ಎನಿಸಿವೆ. ಹಾಗೆಯೇ ನಾಮಗಳಿಂದ ಕೂಡಿಯೇ ಇರುವುದರಿಂದ ರೂಪಗಳು 'ಸಹಸ್ರ' ಎನಿಸಿದರೆ, ರೂಪಗಳಿಂದ ಕೂಡಿಯೇ ಇರುವುದರಿಂದ ನಾಮಗಳು 'ಸಹಸ್ರ' ಎನಿಸಿವೆ. ಈ ರೀತಿಯಾದ ಸಹಸ್ರ ರೂಪಗಳನ್ನು ಹೊಂದಿರುವುದರಿಂದಲೂ, ಸಹಸ್ರ ನಾಮಗಳನ್ನು ಹೊಂದಿರುವುದರಿಂದಲೂ ಭಗವಂತನು 'ಸಹಸ್ರಜಿತ್' ಎನಿಸಿರುವನು

೫ ಸಾವಿರಾರು ತಲೆ ಮುಂತಾದ ಅವಯುವಗಳನ್ನು ಪಡೆದಿರುವವನು.[1]

ಭಗವಂತನು ಸಾವಿರಾರು ತಲೆ ಮುಂತಾದ ಅವಯುವಗಳನ್ನು ಹೊಂದಿರುವನೆಂಬುದಾಗಿ 'ಸಹಸ್ರ' ಶಬ್ದದ ಉಲ್ಲೇಖದೊಂದಿಗೇ ಸಾರಲಾಗಿದೆ[2]

೬ ಸಾವಿರಾರು ಗುಣಗಳಿಂದ ಉತ್ಕೃಷ್ಟನಾಗಿರುವವನು.[3]

ಶ್ರೀಮದಾಚಾರ್ಯರು ಮಾಯಾವಾದ ಖಂಡನದ ಮಂಗಲ ಪದ್ಯದಲ್ಲಿ ಶ್ರೀನರಸಿಂಹನನ್ನು ಶುದ್ಧವಾದ ಜ್ಞಾನ, ಸುಖ ಹಾಗೂ ಶಕ್ತಿಗಳಿಂದ ಅನಂತವಾದ ಕ್ಷೀರಸಾಗರದಂತೆ ಇರುವವನೆಂಬುದಾಗಿ ವಿಶೇಷಿಸಿ, ಆ ಮೂಲಕ ಅವನು ಉತ್ಕೃಷ್ಟನಾಗಿರುವವನೆಂದು ಸಾರಿರುವರು.[4]

---

೫ 1 ಸಹಸ್ರಂ ಅನಂತಾನಿ ಶೀರ್ಷಾದೀನ್ಯಂಗಾನಿ ಜಯತಿ ಪ್ರಾಪ್ನೋತೀತಿ ಸಹಸ್ರಜಿತ್ ।

2 ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
–ಪು. ಸೂ.

ಅತ್ರತ್ಯಃ ಸಹಸ್ರಶಬ್ದಃ ಅನಂತಾರ್ಥಕ ಇತಿ 'ಅನೇಕ ಬಾಹೂದರವಕ್ತ್ರನೇತ್ರಂ . ' (11-16) ಇತಿ ಗೀತಾವಚನೇ 'ಅನೇಕಶಬ್ದೋಽನಂತವಾಚೀ' ಇತಿ ವ್ಯಾಖ್ಯಾತೃಭಿರಾಚಾರ್ಯೈಃ ವ್ಯಾಖ್ಯಾತಪ್ರಾಯಃ ।

೬ 3 ಸಹಸ್ರೇಣ ಅನಂತೈಃ ಗುಣೈಃ ಜಯತಿ ಉತ್ಕೃಷ್ಟೋ ವರ್ತತ ಇತಿ ಸಹಸ್ರಜಿತ್ । 'ಜಯೋರ್ಜಯಾಭಿಭವಯೋರಾನ್ಯೋಽಸಾವಕರ್ಮಕಃ । ಉತ್ಕರ್ಷಪ್ರಾಪ್ತಿರಾದ್ಯೋಽರ್ಥೋ ದ್ವಿತೀಯೋಽರ್ಥೇ ಸಕರ್ಮಕಃ' ಇತಿ ಜಯತೇಃ ಉತ್ಕರ್ಷಪ್ರಾಪ್ತ್ಯರ್ಥೋಽಪಿ ಪ್ರಸಿದ್ಧಃ ।

4 ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ । ಜಯತ್ಯವಿ ತಜ್ಜ್ಞಾನ ಸುಖಶಕ್ತಿಪಯೋನಿಧಿಃ ॥ –ಮಾ. ಖಂ. ಮಂಗಲಪದ್ಯ

೭ ಸಾವಿರಾರು ಅಸುರರನ್ನು ಸೋಲಿಸಿರುವವನು.[1]

## ಜಿಜ್ಞಾಸೆ

### ['ಅನಂತಂ ವಿಷ್ಣುಸನ್ನಿಧೌ']

ಪ್ರ - ಸಹಸ್ರನಾಮ ಪ್ರತಿಪಾದ್ಯಗಳಾದ ಪರಮಾತ್ಮನ ಸಹಸ್ರ ರೂಪಗಳನ್ನು ಪ್ರತಿಪಾದಿಸುವ ಬೃಹತೀ ಸಹಸ್ರಋಕ್‌ಗಳನ್ನು ವಿಶ್ವಾಮಿತ್ರರು ಪಾರಾಯಣ ಮಾಡುತ್ತಿರುವಾಗ ಅದನ್ನು ಕೇಳುವದಕ್ಕಾಗಿ ಪರಮಾತ್ಮನು ಇಂದ್ರದೇವರ ಒಳಗೆ ಆವಿಷ್ಟನಾಗಿ ವಿಶ್ವಾಮಿತ್ರರ ಹತ್ತಿರ ಬಂದು ಕೂತುಕೊಂಡನು. ಇದರಿಂದ ಪರಮಾತ್ಮನು ಸ್ತೋತ್ರಪ್ರಿಯನು ಎಂದು ಅರ್ಥ ವಾಗಲಿಕ್ಕಿಲ್ಲವೇ?

ಉ – 'ಅನಂತಂ ವಿಷ್ಣುಸನ್ನಿಧೌ' ಅಂದರೆ ಸತ್ಕರ್ಮಗಳನ್ನು ವಿಷ್ಣು ಸನ್ನಿಧಿಯಲ್ಲಿ ಮಾಡಿದರೆ ಅನಂತ ಫಲವು ಬರುತ್ತದೆ ಎಂದು ಶಾಸ್ತ್ರವು ಇದೆ ಭಕ್ತರಾದ ವಿಶ್ವಾಮಿತ್ರರಿಗೆ ಬ್ರಹತೀ ಸಹಸ್ರ ಪಾರಾಯಣದಿಂದ ವಿಶೇಷ ಫಲವು ಬರಬೇಕು ಎಂದು ಪರಮಾತ್ಮನಿಗೆ ಇಚ್ಛೆ ಉಂಟಾಯಿತು. ಆದ್ದರಿಂದ ವಿಶ್ವಾಮಿತ್ರರ ಹತ್ತಿರ ಪರಮಾತ್ಮನು ಕೂತುಕೊಂಡನು ಪರಮಾತ್ಮನ ಎಲ್ಲ ವ್ಯಾಪಾರಗಳು ಪರಾರ್ಥಕ್ಕಾಗಿಯೇ ಇವೆ. ಪೂರ್ಣಕಾಮನಿಗೆ ತನ್ನ ಸ್ತೋತ್ರವನ್ನು ಕೇಳಿ ಸಂತೋಷಪಡಬೇಕಾದದ್ದು ಇಲ್ಲ



## ೩೦೭ ಅನಂತಜಿತ್

೧ ಅನಂತ ಗುಣಗಳನ್ನು ಹೊಂದಿರುವವನು[2]

ಮುಖ್ಯವಾಗಿ, ಉತ್ತಮಗುಣಗಳನ್ನು ನಿರವಧಿಕವಾಗಿ ಹೊಂದಿರುವುದರಿಂದಲೇ ಅನಂತ ಎನಿಸಿರುವವನು ಭಗವಂತನು[3]

---

೭ 1 ಸಹಸ್ರಾಣ್ಯಸುರಾಣಾಂ ಜಯತಿ ಅಭಿಭವತೀತಿ ಸಹಸ್ರಜಿತ್ ।

೧ 2 ಅನಂತಾನ್ ಜಯತಿ ಪ್ರಾಪ್ನೋತೀತಿ ಅನಂತಜಿತ್ । ಜಯತೇಃ ಪ್ರಾಪ್ತ್ಯರ್ಥಕತ್ವಂ ಶ್ರೀಮದಾಚಾರ್ಯೈಃ ಛಾಂದೋಗ್ಯೋಪನಿಷದ್ಭಾಷ್ಯೇ (2-2-1) ದರ್ಶಿತಮ್—'ಜಯೋ ನಾಮ ಪ್ರಾಪ್ತಿರೇವ । 'ಧನಜಿತೇ ಸ್ವರ್ಜಿತೇ' ಇತ್ಯಾದಿವತ್ ' ಇತಿ

3 ಯೋಽನಂತಶಕ್ತಿರ್ಭಗವಾನನಂತೋ ಮಹದ್‌ಗುಣತ್ವಾದ್ ಯಮನಂತಮಾಹುಃ

- ಭಾಗ. 1.18-19

೨ ಕಾಲತಃ ಹಾಗೂ ದೇಶತಃ ಅಂತರಹಿತವಾದ ಶ್ರೀತತ್ತ್ವವನ್ನೂ ಜಯಿಸಿರುವವನು.[1]

ಭಗವಂತನಂತೆಯೇ ದೇಶತಃ ಮತ್ತು ಕಾಲತಃ ವ್ಯಾಪ್ತಳಾಗಿದ್ದು 'ಸಮನಾ' ಎಂದೇ ಎನಿಸಿರುವ ಲಕ್ಷ್ಮೀದೇವಿಯು,[2] ಭಗವಂತನಂತೆಯೇ ಕಾಲಿಕ ಹಾಗೂ ದೈಶಿಕ ಅಂತರಹಿತಳು ಆದರೆ ಲಕ್ಷ್ಮೀದೇವಿಯ ಈ ಗುಣ ಭಗವದನುಗ್ರಹದಿಂದ ನಿಯಮಿಸಲ್ಪಟ್ಟವುಗಳಾದರೆ ಭಗವಂತನ ಗುಣಗಳಾದರೂ ಸಹಜವಾದವುಗಳು[8] ಅಲ್ಲದೆ ಲಕ್ಷ್ಮೀದೇವಿಯಲ್ಲಿ ಗುಣಾನಂತ್ಯವಿಲ್ಲ, ಭಗವಂತನಲ್ಲಾದರೂ ಅದೂ ಇದೆ[4] ಆದುದರಿಂದ ಈ ಎರಡು ದೃಷ್ಟಿಗಳಿಂದ ಭಗವಂತನು ಲಕ್ಷ್ಮೀದೇವಿಯನ್ನೂ ಜಯಿಸುವವನು

೩ ದೈಶಿಕ ಹಾಗೂ ಕಾಲಿಕ ಅಂತರಹಿತಗಳಾದ ಶ್ರೀತತ್ತ್ವವನ್ನು ಪತ್ನಿಯನ್ನಾಗಿ ಪಡೆದಿರುವವನು ಅಥವಾ ತನ್ನ ಅಧೀನದಲ್ಲಿ ಇಟ್ಟುಕೊಂಡಿರುವವನು[5]

೪ ದೇಶತಃ ಹಾಗೂ ಕಾಲತಃ ಅಂತರಹಿತಗಳಾದ ಆಕಾಶ, ಕಾಲ ಮುಂತಾದ

---

೨ 1 ಅನಂತಂ ದೇಶತಃ ಕಾಲತಶ್ಚ ಅಂತರಹಿತಂ ಶ್ರೀತತ್ತ್ವಂ ಜಯತಿ ಅಭಿಭವತೀತಿ ಅನಂತಜಿತ್ ।

2 ದೇಶತಃ ಕಾಲತಶ್ಚೈವ ವ್ಯಾಪ್ತ್ಯಾ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮನಾ । —ಬ್ರ. ಸೂ. ಭಾ. 4-2-7

3 ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ ಪ್ರಕೃತೇಃ ಪ್ರಾಕೃತಸ್ಯಾಪಿ ಯೇ ಗುಣಾಸ್ತೇ ತು ವಿಷ್ಣುನಾ । ನಿಯಂತಾ ನೈವ ಕೇನಾಪಿ ನಿಯಂತಾ ಹಿ ಹರೇರ್ಗುಣಾಃ ।
—ಭವಿಷ್ಯತ್ಪರ್ವ (ಬ್ರ. ಸೂ. ಭಾ. 4-2-10)

4 ಜ್ಞಾನಾನಂದೌ ತಥೈಶ್ವರ್ಯಂ ಗುಣಾಶ್ಚಾನ್ಯೇಽಧಿಕಾಃ ಪ್ರಭೋಃ ।
-ತುರಶ್ರುತಿಃ (ಬ್ರ. ಸೂ. ಭಾ 4-2-9)

೩ 5 ಅನಂತಂ ದೈಶಿಕಾನಂತ್ಯಂ ಕಾಲಿಕಾನಂತ್ಯಂ ಚ ಉಪೇತಂ ಶ್ರೀತತ್ತ್ವಂ ಜಯತಿ ಪ್ರಾಪ್ನೋತೀತಿ, ಅಥವಾ ಸ್ವವಶೇ ಸ್ಥಾಪಯತೀತಿ ಅನಂತಜಿತ್ । 'ಪರಾಭೂತಂ ವಶಸ್ಥಂ ಚ ಜಿತಮಿತ್ಯುಚ್ಯತೇ ಬುಧೈಃ' ಇತಿ ಶಬ್ದನಿರ್ಣಯಾ (ಭಾಗ ತಾ. ನಿ. 7-3-20) ನುಸಾರೇಣ ಜಯತೇಃ ವಶಸ್ಥೀಕರಣಾರ್ಥಕತ್ವಮಪಿ ಸಿದ್ಧ್ಯತಿ ।

ಪದಾರ್ಥಗಳನ್ನೂ ಜಯಿಸಿರುವವನು[1]

೫ ಅನಂತಗಳಾದ ಕಾಲಾಕಾಶಾದಿಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವವನು.[2]

ಕಾಲಾಕಾಶಾದಿಗಳಿಗೂ ಅನಂತತ್ವವನ್ನು ನೀಡಿರುವವನು ಭಗವಂತನೇ. ಆದುದರಿಂದ ಪರಾಧೀನಾನಂತ್ಯವನ್ನು ಹೊಂದಿರುವ ಅವನ್ನು ಮೀರಿ ಇರುವನು. ಅನಂತಗಳೆನಿಸಿದರೂ ಕಾಲಾಕಾಶಾದಿಗಳು ಭಗವದಧೀನಗಳು. ಅವುಗಳ ಅನಂತ್ಯಾದಿ ಧರ್ಮಗಳೂ ಅವನ ವಶದಲ್ಲಿರುವವು.

೬ ಅನಂತ ಜೀವಾತ್ಮರನ್ನು, ಅನಂತ ಪದಾರ್ಥಗಳನ್ನು ತನ್ನ ನಿಯಮ್ಯಗಳನ್ನಾಗಿ ಹೊಂದಿರುವವನು[3]

'ಸರ್ವಸ್ವಾಮಿ' ಎನಿಸಿರುವ ಭಗವಂತನಿಗೆ ಅನಂತ ಜೀವಾತ್ಮರು ನಿಯಮ್ಯರು; ಅನಂತ ಪದಾರ್ಥಗಳು ನಿಯಮ್ಯಗಳ .

೭ ಅನಂತ ಜೀವಾತ್ಮರನ್ನೂ ತನ್ನ ವಶದಲ್ಲಿರಿಸಿಕೊಂಡಿರುವವನು[4]

೮ ಅನಂತ ವಿಷಯ ಪದಾರ್ಥಗಳನ್ನು ತನ್ನ ಭೋಗ್ಯಗಳನ್ನಾಗಿ ಪಡೆದಿರುವವನು.[5]

ಅನಂತ ಜೀವಾತ್ಮರು ಭೋಗಿಸುವ ಅನಂತ ಭೋಗಗಳಲ್ಲಿ ಸಾರಭಾಗದ ಭೋಗವು ಭಗವಂತನಿಗೇ ಸಲ್ಲುವುದು

---

1 ಅನಂತಾನ್ ದೇಶತಃ ಕಾಲತಶ್ಚ ಅಂತರಹಿತಾನ್ ಕಾಲಾಕಾಶಾದೀನಪಿ ಜಯತಿ ಅಭಿಭವತೀತಿ ಅನಂತಜಿತ್ ।

೫ 2 ಅನಂತಾನ್ ಕಾಲಾಕಾಶಾದೀನಪಿ ಜಯತಿ ಸ್ವವಶೇ ಸ್ಥಾಪಯತೀತಿ ಅನಂತಜಿತ್ ।

೬ 3 ಅನಂತಾನ್ ಅಸಂಖ್ಯಾನ್ ಜೀವಾತ್ಮನಃ ಪದಾರ್ಥಾಂಶ್ಚ ಜಯತಿ ನಿಯಾಮಕತಯಾ ಪ್ರಾಪ್ನೋತೀತಿ ಅನಂತಜಿತ್ ।

೭ 4 ಅನಂತಾನ್ ಜೀವಾತ್ಮನಃ ಜಯತಿ ಸ್ವವಶೇ ಸ್ಥಾಪಯತೀತಿ ಅನಂತಜಿತ್ ।

೮ 5 ಅನಂತಾನ್ ವಿಷಯಪದಾರ್ಥಾನ್ ತತ್ರಸ್ಥರಸಭಾಗಮಿತಿ ಯಾವತ್, ಸ್ವಭೋಗ್ಯತಯಾ ಜಯತಿ ಪ್ರಾಪ್ನೋತೀತಿ ಅನಂತಜಿತ್ ।

೯ (ಅಚಿಂತ್ಯ ಶಕ್ತಿ ಸಂಪನ್ನನಾಗಿರುವ ಪ್ರಯುಕ್ತ ಯುದ್ಧಕ್ರೀಡೆ ಮುಂತಾದ ಪ್ರತಿಯೊಂದು ಕ್ರಿಯೆಯಲ್ಲೂ) ಸಕಲ ಭೂತಗಳನ್ನೂ ಮೀರಿ ಇರುವವನು[1]

೧೦ ಶೇಷನನ್ನು ತನ್ನ ಹಾಸಿಗೆಯಾಗಿ ಹೊಂದಿರುವವನು[2]

೧೧ ಶೇಷನನ್ನು ಅನಂತ ಎನಿಸುವ ವಿಭೂತಿರೂಪದಿಂದ ಹೊಂದಿರುವವನು[3]

ಅನೇಕ ಶಿರಸ್ಸುಗಳನ್ನು ಹೊಂದಿದ್ದು 'ನಾಗ' ಎನಿಸುವ ಸರ್ಪ ವಿಶೇಷಗಳಲ್ಲಿ ವಿಶಿಷ್ಟನಾಗಿರುವ ಶೇಷನಲ್ಲಿ ತಾನು ಅನಂತ ನಾಮಕ ವಿಭೂತಿರೂಪದಿಂದ ಇದ್ದು, ಅವನ ವೈಶಿಷ್ಟ್ಯಕ್ಕೆ ಪ್ರಯೋಜಕನಾಗಿರುವೆನೆಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು[4]

೧೨ ಆಕಾಶವನ್ನು, ಅದರಲ್ಲಿಯ ಧ್ವನ್ಯಾತ್ಮಕ ಶಬ್ದನಿಯಾಮಕನಾಗಿ ಹೊಂದಿರುವವನು.[5]

ಗೀತಾಚಾರ್ಯನು ತಾನು ಆಕಾಶದಲ್ಲಿ ಧ್ವನ್ಯಾತ್ಮಕ ಶಬ್ದನಿಯಾಮಕನಾಗಿ ಇರುವೆನೆಂದು ಸಂದೇಶಿಸಿರುವನು[6]

೧೩ ಅನೇಕಾನೇಕ ದೈತ್ಯರನ್ನು ಸೋಲಿಸಿರುವವನು[7]

---

೯ 1 ಸರ್ವಭೂತಾನಿ ಯುದ್ಧಕ್ರೀಡಾದಿಷು ಸರ್ವತ್ರಾಚಿಂತ್ಯಶಕ್ತಿತಯಾ ಜಯತೀತಿ ಅನಂತಜಿತ್ । –ಶಾಂ. ಭಾ.

೧೦ 2 ಅನಂತಂ ಶೇಷಂ ಜಯತಿ ಸ್ವಶಯ್ಯಾತ್ವೇನ ಪ್ರಾಪ್ನೋತೀತಿ ಅನಂತಜಿತ್ ।

೧೧ 3 ಅನಂತಂ ಶೇಷಂ ಜಯತಿ ಅನಂತನಾಮಕವಿಭೂತಿರೂಪೇಣ ಪ್ರಾಪ್ನೋತೀತಿ ಅನಂತಜಿತ್ ।

4 'ಅನಂತಶ್ಚಾಸ್ಮಿ ನಾಗಾನಾಂ ' –ಗೀ. 10-29

ನಾಗಾನಾಮನೇಕಶಿರಸಾಂ ದೇಶಕಾಲಗುಣಾನಂತ್ಯಹೇತುನಾಽನಂತನಾಮಾ ಶೇಷಗತಃ । –ಗೀ. ವಿ.

೧೨ 5 ಅನಂತಂ ಆಕಾಶಂ ಜಯತಿ ಶಬ್ದನಿಯಾಮಕೇನ ರೂಪೇಣ ಪ್ರಾಪ್ನೋತೀತಿ ಅನಂತಜಿತ್ । '.. ಅನಂತಂ ಸುರವರ್ತ್ಮ ಖಮ್' –ಅ. ಕೋ.

6 '....ಶಬ್ದಃ ಖೇ...' –ಗೀ. 7-8

೧೩ 7 ಅನಂತಾನ್ ದೈತ್ಯಾನ್ ಜಯತಿ ಅಭಿಭವತೀತಿ ಅನಂತಜಿತ್ ।

## ಜಿಜ್ಞಾಸೆ

### [ಅಧಿಕವಾದ ಅನಂತತ್ವ]

ಪ್ರ - 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಶ್ರುತಿಯು ಪರಮಾತ್ಮನು ಎಲ್ಲ ಮಹತ್ ಪದಾರ್ಥಗಳ ದೆಸೆಯಿಂದ ಮಹಾನ್ ಆಗಿದ್ದಾನೆ ಎಂದು ಹೇಳುತ್ತದೆ. ಆದರೆ ಆಕಾಶದ ದೆಸೆಯಿಂದ ಮಹತ್ವವುಳ್ಳವನು ಪರಮಾತ್ಮನು ಆಗಿದ್ದಾನೆಯೇ?

ಉ - ಒಂದು ವಸ್ತ್ರದ ದೆಸೆಯಿಂದ ಇನ್ನೊಂದು ವಸ್ತ್ರವು ಮಹತ್ವಪೂರ್ಣವುಳ್ಳದ್ದು ಆಗಬೇಕಾದರೆ ಇನ್ನೊಂದು ವಸ್ತ್ರದಲ್ಲಿ ವಸ್ತ್ರದ ಅಂಶಗಳಾದ ನೂಲುಗಳ ಸಂಖ್ಯೆಯು ಅಧಿಕವಾಗಿ ಇರುತ್ತದೆ ಅದರಂತೆ ಆಕಾಶದ ಅಂಶಗಳ ದೆಸೆಯಿಂದ ಪರಮಾತ್ಮನ ಅಂಶಗಳು ಅಧಿಕವಾಗಿ ಇರುವುದರಿಂದ ಆಕಾಶದ ದೆಸೆಯಿಂದ ಪರಮಾತ್ಮನು ಅಧಿಕ ಮಹತ್ವವುಳ್ಳವನು ಎಂದು ಹೇಳಲ್ಪಡುತ್ತಾನೆ ಅನಂತಜಿತ್ ಎಂದರೆ ಆಕಾಶದ ಅಂಶಗಳ ಅನಂತತ್ವದೆಸೆಯಿಂದ ಅಧಿಕವಾದ ಅನಂತತ್ವವುಳ್ಳ ಅಂಶಗಳನ್ನು ಪರಮಾತ್ಮನು ಹೊಂದಿದ್ದಾನೆ ಎಂದು ಅರ್ಥ



ಇಷ್ಟೋ ವಿಶಿಷ್ಟಃ ಶಿಷ್ಟೇಷ್ಟಃ ಶಿಖಂಡೀ ನಹುಷೋ ವೃಷಃ ।
ಕ್ರೋಧಹಾ ಕ್ರೋಧಕೃತ್ ಕರ್ತಾ ವಿಶ್ವಬಾಹುರ್ಮಹೀಧರಃ ॥ ೩೪ ॥

### ೩೦೮ ಇಷ್ಟಃ

೧ (ಸಹಜವಾಗಿ ಹಾಗೂ ಮುಖ್ಯವಾಗಿ) ಪ್ರಿಯನಾಗಿರುವವನು[1]

ನಮಗೆ ಪುತ್ರ, ಧನ ಮುಂತಾದವುಗಳೆಲ್ಲ ಪ್ರಿಯವೆನಿಸಿರುವವು ಆದರೆ ನಮಗೆ ಪ್ರೀತಿ ಪಾತ್ರಗಳಾದ ಪುತ್ರ, ವಿತ್ತ ಮುಂತಾದವುಗಳಿಗಿಂತಲ್ಲ ಅತ್ಯಂತ ಪ್ರಿಯನಾದವನು ಭಗವಂತನೆಂಬುದಾಗಿ ಬೃಹದಾರಣ್ಯಕೋಪನಿಷತ್ತು ಸಂದೇಶಿಸಿದೆ[2] ಭಗವಂತನು ಸಹಜವಾಗಿಯೇ ಪ್ರಿಯನಾಗಿದ್ದು,

---

೧ 1 ಸ್ವಭಾವತಃ ಪ್ರಾಧಾನ್ಯೇನ ಚ ಪ್ರಿಯತ್ವಾದಿಷ್ಟಃ । 'ಇಷ್ಟಂ .. ಪ್ರೇಯಸಿ ತ್ರಿಷು' ಇತಿ ಮೇದಿನ್ಯಾಂ ಇಷ್ಟಶಬ್ದಃ ಪ್ರಿಯಾರ್ಥೇ ಪಠ್ಯತೇ ಚೇದಪಿ ಅಸಾಧಾರಣ್ಯೇನ ವ್ಯಪದೇಶಾ ಭವಂತೀತಿ ಪ್ರಿಯತ್ವೇ ಸ್ವಾಭಾವಿಕತ್ವಂ ಪ್ರಾಧಾನ್ಯಂ ಚ ಲಭ್ಯತೇ ।

2 ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದಂತರಂತರಂ ಯದಯಮಾತ್ಮಾ... . -ಬೃ. ಉ. 3-5-2

ಅವನ ಇಚ್ಛೆಯಿಂದಷ್ಟೇ ಉಳಿದ ಪ್ರಿಯಗಳೂ ಪ್ರಿಯಗಳಾಗಿ ಕಾಣಿಸುವವು[1] ಇತರ ಎಲ್ಲವೂ ಯಾರಿಗಾಗಿ ಪ್ರಿಯಗಳಾಗಿವೆಯೋ, ಅಂತಹ ಪರಮಪ್ರೀತಿಪಾತ್ರನಾದ 'ಆತ್ಮ'ನೂ ತನಗೆ ಪ್ರಿಯನಾಗುವುದು ಭಗವಂತನ ನಿಯಮನಕ್ಕೊಳಗಾಗಿ ಅಂದ ಮೇಲೆ ಅಂತಹ ಭಗವಂತನಿಗಿಂತ ಅತ್ಯಧಿಕ ಪ್ರಿಯ ಮತ್ತೊಬ್ಬನಿರಲು ಸಾಧ್ಯವೇ?[2] ಆದ್ದರಿಂದಲೇ ಭಗವಂತನು ಚತುರ್ಮುಖನಿಗೆ ಉಪದೇಶಿಸುತ್ತ—ತಾನು ಇಷ್ಟಗಳಿಗಿಂತೆಲ್ಲ ಅಧಿಕ ಇಷ್ಟನಾಗಿರುವವನು. ತನ್ನಿಂದಾಗಿಯೇ ದೇಹಾದಿಗಳೂ ಪ್ರಿಯವೆನಿಸಿರುವವು ಆದ್ದರಿಂದ ತನ್ನಲ್ಲಿ ಪ್ರೀತಿಯನ್ನು ಮಾಡಬೇಕೆಂದು ಸಂದೇಶಿಸಿರುವನು[3]

ಹೀಗೆ ಭಗವಂತನು ಸಹಜವಾಗಿ ಹಾಗೂ ಮುಖ್ಯವಾಗಿ ಪ್ರಿಯನಾಗಿರುವನು.

೨ (ಸ್ವತಂತ್ರವಾಗಿ ಹಾಗೂ ಪ್ರಧಾನವಾಗಿ) ಪೂಜಿತನಾಗುವವನು[4]

---

ಸ ಏಷ ವಿಷ್ಣುರ್ಭಗವಾನ್ ಪುತ್ರಾತ್ ವಿತ್ತಾತ್ ತಥಾऽತ್ಮನಃ । ಅನ್ಯಸ್ಮಾದಪಿ ಸರ್ವಸ್ಮಾತ್ ಪ್ರೇಷ್ಠ ಏವ ಸ್ವಭಾವತಃ । -ಅಧ್ಯಾತ್ಮ (ಬೃ ಉ. ಭಾ.)

1 ಆತ್ಮಾ ನಾರಾಯಣಃ। ತಸ್ಯೈವ ಹಿ ಕಾಮೇನ ಪತ್ಯಾದಿಃ ಪ್ರಿಯೋ ಭವತಿ । ನಹಿ ಪತ್ಯಾದಿನಾ ಜಾಯಾದೀನಾಮಹಂ ಪ್ರಿಯಃ ಸ್ಯಾಮಿತಿ ಕಾಮನಾಮಾತ್ರೇಣ ಪ್ರಿಯತ್ವಂ ಭವತಿ । ಭಗವದಿಚ್ಛಯೈವ ಹಿ ತದ್ ಭವತಿ ।

—ಬೃ ಉ. ಭಾ. 4-4-5

* ಅಸ್ಮಿನ್ ಪ್ರಿಯೇ ಪ್ರಿಯಂ ಸರ್ವಂ ತಸ್ಮಾದೇಕಃ ಪ್ರಿಯೋ ಹರಿಃ ।

—ಅಧ್ಯಾತ್ಮ (ಬೃ. ಉ. ಭಾ. 3-5-2)

2 ಸರ್ವತೋऽಪಿ ಪ್ರಿಯೋ ಹ್ಯಾತ್ಮಾ ತಸ್ಯಾಪಿ ಪ್ರಿಯತಾಂ ಹರಿಃ । ಆಪಾದಯತಿ ಯತ್ ತಸ್ಮಾತ್ ಸ್ವಾತ್ಮನೋऽಪಿ ಪ್ರಿಯೋ ಹರಿಃ

—ಬ್ರಹ್ಮವೈವರ್ತ (ಭಾಗ. ತಾ. ನಿ. 3-10-42)

3 ಅಹಮಾತ್ಮಾऽತ್ಮನಾಂ ಧಾತಃ ಪ್ರೇಷ್ಠಃ ಸನ್ ಪ್ರೇಯಸಾಮಪಿ ।
ಅತೋ ಮಯಿ ರತಿಂ ಕುರ್ಯಾದ್ ದೇಹಾದಿರ್ಯತ್ಕೃತೇ ಪ್ರಿಯಃ ॥

-ಭಾಗ. 3-10-42

೨ 4 'ಇಷ್ಟಂ ...ಪೂಜಿತೇ . ತ್ರಿಷು' —ಇತಿ ಮೇದಿನ್ಯಾಂ ಇಷ್ಟಶಬ್ದಃ ಪೂಜಿತಾರ್ಥೇ ಶ್ರೂಯತೇ । 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಇತಿ ನ್ಯಾಯೇನ ಚ ಸ್ವಾತಂತ್ರ್ಯೇಣ ಪ್ರಾಧಾನ್ಯೇನ ಚ ಪೂಜಿತ ಇತ್ಯರ್ಥಃ ಫಲತಿ ।

ನಮಗೆ ಗುರುಹಿರಿಯರು, ದೇವತೆಗಳು ಮೊದಲಾದವರೆಲ್ಲ ಪೂಜ್ಯರೆನಿಸುವರು ಆದರೆ ಇವರೆಲ್ಲ ಭಗವಂತನ ಸನ್ನಿಧಾನದಿಂದಷ್ಟೇ ಪೂಜ್ಯರೆನಿಸಿರುವರು ಆದುದರಿಂದಲೇ ನರನಾರಾಯಣರು ನಾರದರಿಗೆ ಹೀಗೆ ಉಪದೇಶಿಸುವರು—'ಯಾರು ಕರ್ಮ, ಮನಸ್ಸು ಹಾಗೂ ಮಾತುಗಳಿಂದ ಪಿತೃಗಳನ್ನೂ, ದೇವತೆಗಳನ್ನೂ, ಗುರುಗಳನ್ನೂ, ಅತಿಥಿಗಳನ್ನೂ, ಗೋವುಗಳನ್ನೂ, ಬ್ರಾಹ್ಮಣಶ್ರೇಷ್ಠರನ್ನೂ, ಭೂಮಿಯನ್ನೂ, ತಾಯಿಯನ್ನೂ ಆರಾಧಿಸುವರೋ ಅವರು ವಿಷ್ಣುವನ್ನೇ ಪೂಜಿಸುವರು ಯಾಕೆಂದರೆ ಶ್ರೀವಿಷ್ಣುವು ಎಲ್ಲ ಪ್ರಾಣಿಗಳ ಶರೀರಗಳಲ್ಲಿಯೂ ಅಂತರ್ಗತನಾಗಿ ಇರುವನು. ಆದುದರಿಂದ ಪಿತೃಗಳೇ ಮುಂತಾದವರಿಗೆ ಸಲ್ಲಿಸಿದ ಪೂಜೆಯು ಅವರ ಅಂತರ್ಯಾಮಿ ಶ್ರೀವಿಷ್ಣುವಿಗೆ ಸಲ್ಲುವುದು'[1] ಹೀಗೆ ಭಗವಂತನು ಸರ್ವಗತನಾಗಿರುವುದರಿಂದಲೇ ಅವನನ್ನು ಅರ್ಚಿಸಿದೆವೆಂದರೆ ಸಕಲ ದೇವತೆಗಳನ್ನೂ ಅರ್ಚಿಸಿದಂತೆಯೇ—ಎಂದೂ ಸಂದೇಶಿಸಲಾಗಿದೆ[3]

ಪೂಜಿತನಾಗಲು ಬೇಕಾದ ದಾನ, ಸಾಮರ್ಥ್ಯ ಮುಂತಾದ ಹನ್ನೆರಡು ಗುಣಗಳನ್ನು ಉಲ್ಲೇಖಿಸಿ, ಇವೇ ಮುಂತಾದ ಗುಣಗಳಿಂದ ನಿಯತವಾಗಿ ಸಂಪನ್ನನಾಗಿರುವುದರಿಂದ ಅಚ್ಯುತನು ಪೂಜಾರ್ಹನಾಗಿರುವನೆಂದು ಭೀಷ್ಮಾಚಾರ್ಯರು ಅಭಿಪ್ರಾಯಪಟ್ಟಿರುವರು[3] ಆದ್ದರಿಂದಲೇ ಅವರು ಶ್ರೀಕೃಷ್ಣನು ನಮಗಷ್ಟೇ ಪೂಜಾರ್ಹನಲ್ಲ, ಮೂರು ಲೋಕಗಳಿಗೂ ಪೂಜ್ಯನಾಗಿರುವವನೆಂದು ಘೋಷಿಸಿರುವರು[4] ಶ್ರೀಕೃಷ್ಣನು

---

1 ಯೇ ಯಜಂತಿ ಪಿತೄನ್ ದೇವಾನ್ ಗುರೂಂಶ್ಚೈವಾತಿಥೀಂಸ್ತಥಾ ।
ಗಾಶ್ಚೈವ ದ್ವಿಜಮುಖ್ಯಾಂಶ್ಚ ಪೃಥಿವೀಂ ಮಾತರಂ ತಥಾ ॥
ಕರ್ಮಣಾ ಮನಸಾ ವಾಚಾ ವಿಷ್ಣುಮೇವ ಯಜಂತಿ ತೇ ।
ಅಂತರ್ಗತಃ ಸ ಭಗವಾನ್ ಸರ್ವಸತ್ತ್ವಶರೀರಗಃ ॥
-ಮ ಭಾರ. ಶಾಂತಿ 345-26,27

2 ಅರ್ಚಿತೇ ದೇವದೇವೇಶೇ ಶಂಖಚಕ್ರಗದಾಧರೇ ।
ಅರ್ಚಿತಾಃ ಸರ್ವದೇವಾಃ ಸ್ಯುರ್ಯತಃ ಸರ್ವಗತೋ ಹರಿಃ ॥ -ಕೃ. ಮ. 9

3 ದಾನಂ ದಾಕ್ಷ್ಯಂ ಶ್ರುತಂ ಶೌರ್ಯಂ ಹ್ರೀಃ ಕೀರ್ತಿರ್ಬುದ್ಧಿರುತ್ತಮಾ ।
ಸನ್ನತಿಃ ಶ್ರೀರ್ಧೃತಿಸ್ತುಷ್ಟಿಃ ಪುಷ್ಟಿಶ್ಚ ನಿಯತಾಽಚ್ಯುತೇ ॥
ತಮಿಮಂ ಗುಣಸಂಪನ್ನಮಾರ್ಯಂ ಚ ಪಿತರಂ ಗುರುಮ್ ।
ಅರ್ಘ್ಯಮರ್ಚಿತಮರ್ಚಾರ್ಹಂ ॥ -ಮ. ಭಾರ. ಸಭಾ. 38-20,21

* ಅತ್ರ ನಿಯತೇತಿ ಸರ್ವೇಷಾಮಪಿ ಗುಣಾನಾಂ ವಿಶೇಷಣಮ್ । ತಥಾ ಚ ಸಾಮಾನ್ಯೇ ನಪುಂಸಕಮಿತಿ ನಿಯತಾನೀತಿ ಭಾವ್ಯೇ ಪಾದೋಽಸ್ಯ ವಿಶ್ವಾ ಭೂತಾನೀತ್ಯತ್ರೇವ ಅಂತ್ಯಾಕ್ಷರಸ್ಯ ಲೋಪೇ ನಿಯತೇತಿ ಅವಶಿಷ್ಟಮ್ ।

4 ನಹಿ ಕೇವಲಮಸ್ಮಾಕಮಯಮರ್ಚ್ಯತಮೋಽಚ್ಯುತಃ ।
ತ್ರಯಾಣಾಮಪಿ ಲೋಕಾನಾಮರ್ಚನೀಯೋ ಮಹಾಭುಜಃ ॥
-ಮ ಭಾರ. ಸಭಾ. 38-9

ಈ ಲೋಕದಲ್ಲಿ ಪೂಜ್ಯತಮನಾಗಿರುವಂತೆ ಮೂರು ಲೋಕಗಳಲ್ಲೂ ಪೂಜ್ಯತಮನೆಂಬುದು ತನಗೂ ತಿಳಿದಿದೆ ಎಂದು ದುರ್ಯೋಧನನೂ ಒಪ್ಪಿಕೊಂಡಿರುವನು[1]

ಹೀಗೆ ಉಳಿದವರೆಲ್ಲ ಭಗವದಧೀನರಾಗಿ, ಭಗವಂತನ ಸನ್ನಿಧಾನದಿಂದಾಗಿ ಪೂಜ್ಯರೆನಿಸಿದ್ದರೆ, ಭಗವಂತನು ಸ್ವತಂತ್ರವಾಗಿಯೇ, ಪ್ರಧಾನವಾಗಿಯೇ ಪೂಜಿತನಾಗುವನು

೩ (ಯಜ್ಞಗಳಲ್ಲಿ ಪಂಚಾಗ್ನಿಗಳಲ್ಲಿ ಪಂಚರೂಪಗಳಿಂದ ಇದ್ದು ಪಂಚ ಯಾಜುಷ ಮಂತ್ರಗಳಿಂದ) ಯಾಜಿಸಲ್ಪಡುವವನು[2]

ದಕ್ಷಪ್ರಜಾಪತಿಯ ಯಜ್ಞಭಂಗ ಪ್ರಸಂಗದಲ್ಲಿ—ಪ್ರತ್ಯಕ್ಷನಾದ ಯಜ್ಞೇಶಭಗವಂತನನ್ನು ಸಂಬೋಧಿಸಿ,—ಐದು ಪ್ರಭೇದಗಳಲ್ಲಿ ಇರುವ ತನ್ನಲ್ಲಿ ಯಜ್ಞ, ಯಜ್ಞೇಶ, ಯಜ್ಞಪುರುಷ, ಯಜ್ಞಭಾವನ ಹಾಗೂ ಯಜ್ಞಭುಕ್–ಎಂಬ ಐದು ರೂಪಗಳಿಂದ ಇದ್ದು ಐದು ಯಾಜುಷಮಂತ್ರಗಳಿಂದ ಚೆನ್ನಾಗಿ ಯಾಜಿಸಲ್ಪಡುವ ನಿನಗೆ ಪ್ರಣಾಮ—ಎಂದು ಅಗ್ನಿಯು ಸ್ತುತಿಸಿರುವನು[3] ಭೀಷ್ಮಾಚಾರ್ಯರೂ 'ಆಶ್ರಾವಯ' 'ಅಸ್ತು ಶ್ರೌಷಟ್'—ಎಂಬ ನಾಲ್ಕು ಅಕ್ಷರಗಳ ಎರಡು ಮಂತ್ರಗಳಿಂದ 'ಯಜ' ಎಂಬ ಎರಡು ಅಕ್ಷರಗಳ ಮಂತ್ರದಿಂದ, 'ಯೇ ಯಜಾಮಹೇ' ಎಂಬ ಐದು ಅಕ್ಷರಗಳ ಮಂತ್ರದಿಂದ, 'ವಷಟ್' ಎಂಬ ಎರಡು ಅಕ್ಷರಗಳ ಮಂತ್ರದಿಂದ—ಹೀಗೆ–ಒಟ್ಟು ಐದು ಯಾಜುಷಮಂತ್ರಗಳಿಂದ ಹೋಮಮಾಡಲ್ಪಡುವ ಹೋಮಸ್ವಾಮಿಗೆ ಪ್ರಣಾಮವನ್ನು ಸಲ್ಲಿಸಿರುವರು[4]

---

1 ಸ ಹಿ ಪೂಜ್ಯತಮೋ ಲೋಕೇ ಕೃಷ್ಣಃ ಪೃಥುಲಲೋಚನಃ ।
ತ್ರಯಾಣಾಮಪಿ ಲೋಕಾನಾಂ ವಿದಿತಂ ಮಮ ಸರ್ವಥಾ ॥

-ಮ. ಭಾರ. ಉದ್ಯೋಗ 88-5

೩ 2 ಯಾಗೇ ಇಜ್ಯತೇ ಇತಿ ಇಷ್ಟಃ ।

* ಯಾಗಪೂಜಿತತ್ವಾದಿಷ್ಟಃ । –ವಿ. ರಾ.

3 'ತಂ ಯಜ್ಞೇಶಂ ಪಂಚವಿಧಂ ಚ ಪಂಚಭಿಃ ಸ್ವಿಷ್ಟಂ ಯಜುರ್ಭಿಃ ಪ್ರಣತೋಽಸ್ಮಿ ಯಜ್ಞಮ್' –ಭಾಗ. 4-7-41

ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ ।
ಹೂಯತೇ ಚ ಪುನರ್ದ್ವಾಭ್ಯಾಂ ತಸ್ಮೈ ಹೋಮಾತ್ಮನೇ ನಮಃ ।

-ಮ. ಭಾರ. ಶಾಂತಿ. 47-44

ೱ ಎಲ್ಲರ ಅಭಿಲಷಿತಗಳಿಗೂ ನಿಯಾಮಕನಾಗಿರುವವನು[1]

ಭಗವಂತನು ಹೇಗೆ ಮಾಡಿಸುವನೋ, ನಡೆಸುವನೋ ಜೀವಾತ್ಮನು ಅದಕ್ಕೆ ಅನುಗುಣವಾಗಿಯೇ ಮಾಡುವನು, ನಡೆದುಕೊಳ್ಳುವನೆಂದ ಉಪನಿಷತ್ತು, ಇದಕ್ಕೆ ಪೋಷಕವಾಗಿ ಭಗವಂತನು ಹೇಗೆ ಇಚ್ಛಿಸುವನೋ ಅದಕ್ಕೆ ಅನುಗುಣವಾಗಿಯೇ ಜೀವಾತ್ಮನಲ್ಲಿ ಇಚ್ಛೆ ಉಂಟಾಗುವುದು—ಎಂದು ಸಂದೇಶಿಸಿದೆ[2] ಇದರಿಂದಾಗಿ ಅವರ ಅಭಿಲಷಿತಗಳೆಲ್ಲ ಭಗವದಧೀನವಾದವು. ಅವನಿಂದ ನಿಯತವಾದವುಗಳೆಂದು ಸಿದ್ಧಿಸುವುದು

೫ (ಎಲ್ಲರ ಮೂಲಕ ನಡೆಯುವ) ಯಾಗಗಳಿಗೂ ನಿಯಾಮಕನಾಗಿರುವವನು[3]

ಸಕಲ ಯಜ್ಞಗಳಿಗೂ ತಾನೇ ಭೋಕ್ತಾರನೂ, ಸ್ವಾಮಿಯೂ ಆಗಿರುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು[4]

---

ೱ 1 'ಇಷ್ಟಂ ಯಾಗೇ ಚ ದಾನೇ ಚ ವಾಂಛಿತೇಽಪಿ ಪ್ರಯುಜ್ಯತೇ' ಇತ್ಯುಕ್ತದಿಶಾ ಇಷ್ಟಂ ಸರ್ವೇಷಾಂ ವಾಂಛಿತಂ ನಿಯಮ್ಯತಯಾ ಅಸ್ಯಾಸ್ತೀತಿ ಇಷ್ಟಃ, ಸರ್ವೇಷ್ಟನಿಯಾಮಕೇತ್ಯರ್ಥಃ।

2 ' . ಯಥಾಕಾರೀ ಯಥಾಚಾರೀ ತಥಾ ಭವತಿ. . ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ .' -ಬೃ. ಉ. 6-4-5

ಸ ಭಗವಾನ್ ಯಥಾಕಾರೀ ಯಥಾ ಕಾರಯತಿ ಯಥಾಚಾರೀ ಯಥಾ ಚಾರಯತಿ ತಥಾ ಭವತಿ। ಸ ಭಗವಾನ್ ಯಥಾಕಾಮೋ ಭವತಿ ತಥಾಕಾಮೋ ಜೀವೋ ಭವತಿ ಇತ್ಥಂ ಕಾಮೋಽಸ್ಯ ಭೂಯಾದಿತಿ ಭಗವದಿಚ್ಛಾವಶಾದಸ್ಯ ಕಾಮೋ ಭವತೀತ್ಯರ್ಥಃ। ಕ್ರತುರಿತೀತ್ಥಂ ಕರಿಷ್ಯಾಮ್ಯೇವೇತಿ ನಿಶ್ಚಯರೂಪಃ ಕಾಮಃ। ಸ ಭಗವದಿಚ್ಛಯಾ ಹಿ ಭವತಿ। -ಬೃ. ಉ. ಭಾ.

೫ 3 ಇಷ್ಟಂ ಯಾಗಃ ಅಸ್ಯ ನಿಯಮ್ಯತಯಾಽಸ್ತೀತಿ ಇಷ್ಟಃ। ಅರ್ಶ ಆದ್ಯಚ್।

4 ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ।

-ಗೀ. 9-24

## ಜಿಜ್ಞಾಸೆ

[ಉತ್ಕರ್ಷಸಾಧಕ ಪ್ರಿಯತ್ವ]

ಪ್ರ.- ಲೋಕದಲ್ಲಿ ಜನರು ತಮಗೆ ಯಾರಿಂದ ಉಪಕಾರವಾಗುವದೋ ಅವರಲ್ಲಿ ಪ್ರೇಮವನ್ನು ಮಾಡುತ್ತಾರೆ. ಇದು ಸ್ವಾಭಾವಿಕ ಪ್ರೇಮವಲ್ಲ ತಾಯಿಯು ಮಗುವಿನ ಮೇಲೆ ಸ್ವಾಭಾವಿಕ ಪ್ರೇಮವನ್ನು ಮಾಡುತ್ತಾಳೆ. ಆದರೆ ಇದರಿಂದ ಮಗುವಿಗೆ ಉತ್ಕರ್ಷವು ಸಿದ್ಧಿಸುವದಿಲ್ಲ ಆದ್ದರಿಂದ ಪರಮಾತ್ಮನಲ್ಲಿ ಸ್ವಾಭಾವಿಕವಾಗಿ ಇರುವ ಪ್ರಿಯತ್ವವು ಕೂಡ ಪರಮಾತ್ಮನಲ್ಲಿ ಉತ್ಕರ್ಷ ಸಾಧಕವಲ್ಲ. ಇಷ್ಟಃ ಎಂಬ ನಾಮವು ಭಗವಂತನಲ್ಲಿ ಸ್ವಾಭಾವಿಕ ಪ್ರಿಯತ್ವವನ್ನು ಹೇಳಿ ಅವನಲ್ಲಿ ಉತ್ಕರ್ಷವನ್ನು ಹೇಗೆ ಸಿದ್ಧಮಾಡುತ್ತದೆ?

ಉ – ಸದ್ಗುಣವುಳ್ಳ ಸಜ್ಜನರು ಸದ್ಗುಣಗಳುಳ್ಳ ಪರಮಾತ್ಮನಲ್ಲಿ ಸದ್ಗುಣಗಳು ಇದ್ದ ಕಾರಣ ಪ್ರೇಮವನ್ನು ಮಾಡುತ್ತಾರೆ. ಇಂತಹ ಸ್ವಾಭಾವಿಕ ಪ್ರಿಯತ್ವವು ಪರಮಾತ್ಮನಲ್ಲಿ ಉತ್ಕರ್ಷವನ್ನು ಸಿದ್ಧ ಮಾಡುತ್ತದೆ, ಇಷ್ಟಃ ಎಂಬ ನಾಮವು ಇಂತಹ ಸ್ವಾಭಾವಿಕ ಪ್ರಿಯತ್ವವನ್ನು ಹೇಳಿ ಪರಮಾತ್ಮನಿಗೆ ಉತ್ಕರ್ಷವನ್ನು ಸಿದ್ಧಮಾಡುತ್ತದೆ



## ೩೦೯ ವಿಶಿಷ್ಟಃ

೧ (ಪ್ರಲಯಕಾಲದಲ್ಲಿ) ವಿಶೇಷವಾಗಿ ಉಳಿದಿರುವವನು[1]

ಪ್ರಲಯಕಾಲದಲ್ಲಿ ಚತುರ್ಮುಖ, ರುದ್ರಾದಿ ಜೀವರು ಇರುವರಾದರೂ ಸುಪ್ತ್ಯವಸ್ಥೆಯಲ್ಲಿ ಇರುವ ಅವರು ತಮ್ಮ ಗುಣಗಳನ್ನು ಅನುಭವಿಸುವುದಿಲ್ಲ. ಲಕ್ಷ್ಮೀದೇವಿ ಹಾಗೂ ಮುಕ್ತಾತ್ಮರು ತಮ್ಮ ಗುಣಗಳನ್ನು ಅನುಭವಿಸುತ್ತ ಇರುವರಾದರೂ ಸ್ವತಂತ್ರವಾಗಿ ಗುಣಾನುಭವವನ್ನು ಮಾಡುತ್ತಿಲ್ಲ. ಪರಾಧೀನವಾದ ಧನವನ್ನು ಅನುಭವಿಸುತ್ತಿದ್ದರೂ ಭಿಕ್ಷುಕನು 'ಧನೀ' ಎನಿಸಲ್ಪಡುವುದಿಲ್ಲ ಹೇಗೋ ಹಾಗೆಯೇ ಲಕ್ಷ್ಮೀದೇವಿ ಹಾಗೂ ಮುಕ್ತಾತ್ಮರು ಪ್ರಲಯಕಾಲದಲ್ಲಿ ತಮ್ಮ ಗುಣಗಳನ್ನು ಅನುಭವಿಸುತ್ತಿದ್ದರೂ ಪರತಂತ್ರರಾಗಿ ಅನುಭವಿಸುತ್ತಿರುವ ಪ್ರಯುಕ್ತ ಗುಣಾನುಭವ ಉಳ್ಳವರೆಂದು ಹೇಳಲ್ಪಡಲಾರರು ಹೀಗೆ ಪ್ರಲಯಕಾಲದಲ್ಲಿ ಸ್ವತಂತ್ರವಾಗಿ, ಪೂರ್ಣವಾಗಿ ತನ್ನ ಗುಣ

---

೧ 1 ವಿಶೇಷೇಣ ಪ್ರಲಯೇ ಶಿಷ್ಟ (ಅವಶಿಷ್ಟಃ) ಇತಿ ವಿಶಿಷ್ಟಃ ।

–ವಿ. ರಾ.

ಗುಣಗಳನ್ನು ಅನುಭವಿಸುತ್ತಿರುವವನು ಭಗವಂತನೊಬ್ಬನೇ ಆಗಿರುವುದರಿಂದಾಗಿ ಉಪನಿಷತ್ತು—ಪ್ರಲಯಕಾಲದಲ್ಲಿ ತನ್ನ ಗುಣಗಳನ್ನು ಅನುಭವಿಸುತ್ತ ಇರುವವನು 'ಆತ್ಮಾ' ಎನಿಸುವ ಭಗವಂತನೊಬ್ಬನೇ—ಎಂದು ಸಂದೇಶಿಸಿದೆ.[1]

ಆದ್ದರಿಂದ ಪ್ರಲಯ ಕಾಲದಲ್ಲಿ ವಿಶೇಷವಾಗಿ ಉಳಿದಿರುವವನು—ಸ್ವತಂತ್ರವಾಗಿ ತನ್ನ ಗುಣಗಳನ್ನು ಅನುಭವಿಸುತ್ತ ಇರುವವನು—ಭಗವಂತನು

೨ (ಗುರುವಿನಿಂದ ಶಿಷ್ಯರನ್ನು ಕುರಿತು) ವಿಶೇಷವಾಗಿ ಉಪದೇಶಿಸಲ್ಪಡುವವನು[2]

೩ ವಿಶಿಷ್ಟವಾದ ಉಪದೇಶ ಉಳ್ಳವನು[3]

೪ ವಿಶಿಷ್ಟರಾದ ಚತುರ್ಮುಖಾದಿಗಳಿಗೂ ಉಪದೇಶ ನೀಡುವವನು[4]

---

1 'ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ ಕಿಂಚನ ಮಿಷತ್.. ...'

—ಐ. ಉ. 2-3-1-1

'ಏಕೋ ನಾರಾಯಣಸ್ತ್ವಾಸೀತ್ ಪ್ರಳಯೇ ರಮಯಾ ಸಹ ।. ನ ಬ್ರಹ್ಮಾ ನ ಶಿವಶ್ಚಾಽಸೀನ್ನೈವಾನ್ಯಚ್ಚ ಮಿಷತ್ ಕ್ವಚಿತ್ । ಸುಪ್ತಾಸ್ತತ್ರ ಯತೋ ಜೀವಾಃ ಸರ್ವೇ ಬ್ರಹ್ಮಶಿವಾದಿಕಾಃ । ಅಸುಪ್ತಾ ಶ್ರೀಶ್ಚ ಮುಕ್ತಾಶ್ಚ ಸ್ವತಂತ್ರೋನ್ವೇಷವರ್ಜನಾತ್ । ಅನನ್ವೇಷಾ ಏವ ತೇಽಪಿ ಸ್ವತಂತ್ರೋನ್ವೇಷ ಏಕರಾಟ್ । ನಾರಾಯಣೋ ನಚಾನ್ಯೋಽಸ್ತಿ ಪೂರ್ಣೋನಿರ್ಮಲದ್ಗುಣಾತ್ಮಕಃ । ಪರಾಧೀನೇನ ವಿತ್ತೇನ ಭುಂಜನ್ನಪಿ ಹಿ ಭಿಕ್ಷುಕಃ । ವಿತ್ತವಾನಿತಿ ನೈವೋಕ್ತಸ್ತಥಾ ಶ್ರೀರ್ಮುಕ್ತಿಗಾ ಅಪಿ । ಮಿಷಂತೋಽಪ್ಯನ್ಯತಂತ್ರತ್ವಾನ್ನ ಮಿಷಂತಃ ಕಥಂಚನ' ।

—ಐ. ಉ. ಭಾ.

೨ 2 ವಿಶೇಷೇಣ ಗುರುಣಾ ಶಿಷ್ಯಾನ್ ಪ್ರತ್ಯುಪದಿಷ್ಟ ಇತಿ ವಿಶಿಷ್ಟಃ ।

—ವಿ. ರಾ.

೩ 3 ವಿ ವಿಶಿಷ್ಟಂ ಶಿಷ್ಟಂ ಉಪದೇಶಃ ಯಸ್ಮಾತ್ಸಃ ವಿಶಿಷ್ಟಃ ।

೪ ವಿ ವಿಶಿಷ್ಟಾನಾಂ ಬ್ರಹ್ಮಾದೀನಾಂ ಶಿಷ್ಟಂ ಉಪದಿಷ್ಟಂ ಯಸ್ಮಾತ್ಸಃ ।

೫ ವಿಶಿಷ್ಟವಾದ ದಂಡನೆ ನೀಡುವವನು.[1]

೬ ವಿಶಿಷ್ಟರಾದ ರುದ್ರ, ಇಂದ್ರಾದಿಗಳಿಗೂ ದಂಡನೆ ನೀಡುವವನು.[2]

೭ ಯಾರ ವಿಷಯದಲ್ಲಿ ಆದೇಶ ಅಥವಾ ದಂಡನೆ ಇಲ್ಲವೋ ಅಂತಹವನು.[3]

ಸರ್ವಸ್ವಾಮಿಯಾದ ಭಗವಂತನಿಗೆ ಯಾರದ್ದೇ ಆದೇಶವಾಗಲೀ, ದಂಡನೆಯಾಗಲೀ ಇರಲಾರದು

[ಅರ್ಥವಿಶೇಷಗಳನ್ನು ವರ್ಣನೆಯು 'ವಿಶಿಷ್ಟಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

### ಜಿಜ್ಞಾಸೆ

['ನಾನ್ಯತ್ ಕಿಂಚನ ಮಿಷತ್']

ಪ್ರ.- ಅನಂತ ಬ್ರಹ್ಮಕಲ್ಪಗಳ ಅವಸಾನಗಳಲ್ಲಿ ಮುಕ್ತಿಯನ್ನು ಪಡೆದ ಅನಂತ ಜೀವರು ಪ್ರಲಯ ಕಾಲದಲ್ಲಿ ಇದ್ದಾರೆ ಹೀಗೆ ಇರುತ್ತಿರಲು ಪ್ರಲಯಕಾಲದಲ್ಲಿ ಪರಮಾತ್ಮನು ಒಬ್ಬನೇ ಇದ್ದನು ಎಂದು ಹೇಳುವದು ಹೇಗೆ ಕೂಡುತ್ತದೆ.?

ಉ.- ಪ್ರಲಯ ಕಾಲದಲ್ಲಿ ಅನಂತ ಮುಕ್ತಜೀವರುಗಳು ಇದ್ದರೂ ಅವರು ಪರಮಾತ್ಮನ ಧ್ಯಾನ ಮಗ್ನರಾಗಿ ಇರುತ್ತಾರೆ ವ್ಯಾಪಾರಗಳನ್ನು ಮಾಡುತ್ತಾ ಅವರು ಆಗ ಇರುವದಿಲ್ಲ ಪ್ರಲಯ ಕಾಲದ ನಿಯಮನ ವ್ಯಾಪಾರ ವಿಶಿಷ್ಟನಾಗಿ ಪರಮಾತ್ಮನು ಒಬ್ಬನೇ ಇರುತ್ತಾನೆ. ಈ ವಿಷಯವು 'ನಾನ್ಯತ್ ಕಿಂಚನ ಮಿಷತ್' ಎಂಬ ಶ್ರುತಿಯಿಂದ ಸಿದ್ಧವಾಗುತ್ತದೆ ಅರಣ್ಯದಲ್ಲಿ ಅರಣ್ಯವನ್ನು ಕಾಪಾಡುವವನು ಒಬ್ಬನೇ ಇದ್ದಾನೆ. ಎಂದು ಹೇಳುವೆವು. ಅರಣ್ಯದಲ್ಲಿ ಬೇಕಾದಷ್ಟು ವೃಕ್ಷ ಜೀವರುಗಳು ಇದ್ದರೂ ಆ ಜೀವರುಗಳು ವ್ಯಾಪಾರ ವಿಶಿಷ್ಟರಾಗಿ ಅಲ್ಲಿ ಇಲ್ಲ. ಈ ಕಾರಣದಿಂದ ಅರಣ್ಯಪಾಲಕನು ಒಬ್ಬನೇ ಇದ್ದಾನೆಂದು ಹೇಳುವೆವು. ಅದರಂತೆ ಪ್ರಕೃತ ವ್ಯವಹಾರವು ಕೂಡುತ್ತದೆ.



---

೫ 1 ವಿ ವಿಶಿಷ್ಟಂ ಶಿಷ್ಟಂ ದಂಡನಂ ಯಸ್ಮಾತ್ ಸಃ ವಿಶಿಷ್ಟಃ ।

೬ 2 ವಿ ವಿಶಿಷ್ಟಾನಾಂ ರುದ್ರೇಂದ್ರನಾಮಪಿ ಶಿಷ್ಟಂ ದಂಡನಂ ಯಸ್ಮಾತ್ ವಿಶಿಷ್ಟಃ ।

೭ 3 ವಿಗತಂ ಶಿಷ್ಟಂ ಶಾಸನಂ ದಂಡನಂ ವಾ ಯಸ್ಮಾತ್ ವಿಶಿಷ್ಟಃ ।

ಶಾಂಕರಭಾಷ್ಯೇ ಪರಾಶರಭಟ್ಟೀಯೇ ಚ 'ಅವಿಶಿಷ್ಟಃ' ಇತಿ ಪದಚ್ಛೇದಃ ಸ್ವೀಕೃತಃ ।

## ೩೧೦ ಶಿಷ್ಟೇಷ್ಟಃ

೧ ಜ್ಞಾನಿಗಳಿಗೆ ಪ್ರಿಯನಾಗಿರುವವನು.[1]

೨ ಜ್ಞಾನಿಗಳು ಪ್ರಿಯರಾಗಿ ಉಳ್ಳವನು.[2]

ಭಗವಂತನು ಸಾಮಾನ್ಯವಾಗಿ ಎಲ್ಲ ಜೀವಾತ್ಮರಿಗೂ ಪ್ರಿಯನಾಗಿರುವವನು ಆದರೆ ಜೀವಾತ್ಮರೆಲ್ಲರೂ ತಮಗೆ ಭಗವಂತನು ಪ್ರಿಯನಾಗಿರುವವನೆಂಬುದನ್ನು ವಿಶ್ಲೇಷಿಸಿಕೊಳ್ಳುವುದಿಲ್ಲ ರಾಜನೊಬ್ಬನು ತನ್ನ ಪ್ರಜೆಯ ಬಗ್ಗೆ ಪ್ರಿಯನಾಗಿದ್ದರೂ ಪ್ರಜೆ ಅದನ್ನು ಗಮನಿಸಿರುವನೆಂದು ಹೇಳಲಾಗದು ಅಂತೆಯೇ ಭಗವಂತನು ತನ್ನ ಬಗ್ಗೆ[3] ತೋರಿಸುವ ಸಖ್ಯವನ್ನು ಜೀವಾತ್ಮನು ವಿಶ್ಲೇಷಿಸಿಕೊಳ್ಳುವುದಿಲ್ಲ—ಎಂಬ 'ಸ್ಕಾಂದ'ದ ಸಂದೇಶವು, ಸಾಮಾನ್ಯ ಜೀವಾತ್ಮನು ತನಗೆ ಭಗವಂತನು ಪ್ರಿಯನಾಗಿರುವನೆಂಬುದನ್ನು ವಿಶ್ಲೇಷಿಸಿಕೊಳ್ಳುವುದಿಲ್ಲ—ಎಂಬುದನ್ನು ಸೂಚಿಸಿಕೊಡಬಲ್ಲದು ಕಾಮದಿಂದ ಆವೃತವಾದ ಲೋಕವು ಭಗವಂತನು ತನಗೆ ಪ್ರಿಯನೆಂಬುದನ್ನು ತಿಳಿಯಲಾರದೆಂದು ಸತ್ಯವ್ರತ ರಾಜನೂ ಅಭಿಪ್ರಾಯಪಟ್ಟಿರುವನು[4]

ಜ್ಞಾನಿಗಳಾದರೂ ಭಗವಂತನು ತಮಗೆ ಇಷ್ಟನೆಂಬುದನ್ನು ಚೆನ್ನಾಗಿ ವಿವೇಚಿಸಿಕೊಂಡಿರುವರು. ಗೀತಾಚಾರ್ಯನು ತಾನು ಜ್ಞಾನಿಗೆ ಪ್ರಿಯನೆಂದೂ, ಜ್ಞಾನಿಯು ತನಗೆ ಪ್ರಿಯನೆಂದೂ ಸಂದೇಶಿಸಿರುವನು[5] ಜ್ಞಾನಿಗಳಲ್ಲೂ ಏಕಾಂತ ಭಕ್ತರಿಗೆ ವಿಶೇಷವಾಗಿ ಭಗವಂತನು ಪ್ರಿಯನಾಗಿರುವನು. ಮಧ್ಯಮ ಭಕ್ತರ ದೃಷ್ಟಿಯಲ್ಲಿ ಮೋಕ್ಷಕ್ಕಾಗಿ ಭಗವಂತನಾದರೆ, ಏಕಾಂತ ಭಕ್ತರ ದೃಷ್ಟಿಯಲ್ಲಿ

---

೧ 1 ಶಿಷ್ಟಾನಾಂ ಜ್ಞಾನಿನಾಂ ಇಷ್ಟಃ ಪ್ರಿಯಃ ಶಿಷ್ಟೇಷ್ಟಃ ।

೨ 2 ಶಿಷ್ಟಾಃ ಜ್ಞಾನಿನಃ ಇಷ್ಟಾಃ ಪ್ರಿಯಾಃ ಯಸ್ಯ ಸಃ ।

3 ಯಥಾ ರಾಜ್ಞಃ ಪ್ರಿಯತ್ವಂ ತು ಭೃತ್ಯೋ ವೇದ ನ ಚಾತ್ಮನಃ ।
ತಥಾ ಜೀವೋ ನ ಯತ್ಸಖ್ಯಂ ವೇತ್ತಿ ತಸ್ಮೈ ನಮೋ ನಮಃ ॥
–ಸ್ಕಾಂದ (ಭಾಗ ತಾ.ನಿ. 6-4-24)

4 'ತ್ವಂ ಸರ್ವಲೋಕಸ್ಯ ಸುಹೃತ್ ಪ್ರಿಯೇಶ್ವರಃ ಹ್ಯಥಾಪಿ ಲೋಕೋ ನ ಭವಂತಮಂಧಧೀರ್ಜಾನಾತಿ ಸಂತಂ ಹೃದಿ ಬದ್ಧಕಾಮಃ' –ಭಾಗ. 8-24-52

5 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸಚ ಮಮ ಪ್ರಿಯಃ'
–ಗೀ. 7-17

ಭಗವಂತನಿಗಾಗಿಯೇ ಭಗವಂತ; ಹೊರತು ಇನ್ನಾವುದೇ ಪ್ರಯೋಜನಕ್ಕಾಗಿ ಅಲ್ಲ ಮೋಕ್ಷವೇ ಮುಂತಾದ ಉಳಿದ ಪುರುಷಾರ್ಥಗಳೆಲ್ಲ ನಾರಾಯಣ ರೂಪ ಪ್ರಯೋಜನಕ್ಕಾಗಿ—ಎಂದು 'ಗೀತಾ ಕಲ್ಪ' ಸಂದೇಶಿಸಿದೆ.[1] ಏಕಾಂತ ಭಕ್ತರಾದ ಶ್ರೀಮದಾಚಾರ್ಯರು ಅಲ್ಲಲ್ಲಿ ಮಂಗಲಾಚರಣೆಯಲ್ಲಿ ತಮಗೆ ಭಗವಂತನು ಇಷ್ಟನೆಂದೂ, ತಾವು ಭಗವಂತನಿಗೆ ಇಷ್ಟರಾದವರೆಂದೂ ಉಲ್ಲೇಖಿಸಿರುವರು[2]

---

1 'ನಾರಾಯಣಸ್ತು ಮೋಕ್ಷಾರ್ಥೇ ಮೋಕ್ಷೋ ನಾನ್ಯಾರ್ಥ ಇಷ್ಯತೇ । ಏನಂ ಮಧ್ಯಮ-ಭಕ್ತಾನಾಮೇಕಾಂತಾನಾಂ ನ ಕಸ್ಯಚಿತ್ । ಅರ್ಥೇ ನಾರಾಯಣೋ ದೇವಸ್ತ್ವನ್ಯತ್ ಸರ್ವಂ ತದರ್ಥಕಮ್ ' -ಗೀತಾಕಲ್ಪ (ಗೀ. ಭಾ. 7–29)

2 ನಮೋ ಭಗವತೇ ತಸ್ಮೈ ..ಯಸ್ಮಾಹಮಾಪ್ತ ಆಪ್ತೇಭ್ಯೋ ಯೋ ಮ ಆಪ್ತತಮಃ ಸದಾ ॥ -ಕಾ. ಉ. ಭಾ.

* ಪ್ರಿಯೋಽಸ್ತಲಂ ನಾರಾಯಣೋ ಮಮ ಸದೈವ ಸುತುಷ್ಟಿಪೇತು ।
-ಐ ಉ ಭಾ

* ಆನಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ ।
-ಐ ಉ. ಭಾ.

* ಪ್ರೇಷ್ಠಂ ಮೇ ಸತತಂ ಪ್ರಿಯಾತ್ ಪ್ರಿಯತಮಾನ್ನಿತ್ಯಂ ಸದೋಪಾಸ್ಮಹೇ ।
—ಬೃ. ಉ. ಭಾ.

* ಸರ್ವಸ್ಮಾದಧಿಕಂ ಮಮ ಪ್ರಿಯತಮಃ ಸ್ವಿಷ್ಟಾದಪೀಷ್ಟೋತ್ತಮಃ . ಪ್ರೀತೋ ಭವೇನ್ಮೇ ಹರಿಃ । -ಛಾಂ ಉ. ಭಾ.

* ನಮೋಽಸ್ತು ವಿಷ್ಣವೇ ತಸ್ಮೈ ಪ್ರೇಯಸೇ ಮೇ ಪರಾತ್ಮನೇ ।
-ತ ಉ. ಭಾ.

* ಪ್ರೀಯತಾಂ ಭಗವಾನ್ ಮಹ್ಯಂ ಪ್ರೇಷ್ಠಪ್ರೇಷ್ಠತಮಃ ಸದಾ ।
-ಆ. ಉ. ಭಾ.

* ನಮೋ ನಮೋಽಸ್ತು ಹರಯೇ ಪ್ರೇಷ್ಠಪ್ರೇಷ್ಠತಮಾಯ ಮೇ ।
-ಷ. ಉ. ಭಾ.

* ನರಸಿಂಹಃ ಪ್ರಿಯತಮಃ ಪ್ರೀಯತಾಂ ಪುರುಷೋತ್ತಮಃ ।
—ವಾ. ಲ.

* ನಿತ್ಯಾತಾದೃಶಚಿಚ್ಛೇತ್ಯಯಂಶೇಷ್ಟೋ ನೋ ರಮಾಪತಿಃ । -ವಾದ

ಇ ಜ್ಞಾನಿಗಳಿಂದಲೂ ಪೂಜಿತನಾಗುವವನು[1]

ವೇದಶಾಸ್ತ್ರಾದಿ ವಿಚಾರ ನಡೆಸುವ ಸನ್ಯಾಸಿಗಳಿಂದ ಹಾಗೂ ವಾನಪ್ರಸ್ಥಾಶ್ರಮಿಗಳಿಂದ ಶ್ರೀಕೃಷ್ಣನು ಜ್ಞಾನಯಜ್ಞದಿಂದ ಪೂಜಿಸಲ್ಪಡುವವನೆಂದು ಮಹಾಭಾರತ ತಿಳಿಸಿದೆ[2] ಇತರರಿಂದ ಪೂಜೆಯನ್ನು ಸ್ವೀಕರಿಸುವ ಬ್ರಹ್ಮಾದಿಶಿಷ್ಟರೂ ಭಗವಂತನಿಗೆ ಪೂಜೆಯನ್ನು ಸಲ್ಲಿಸುವರೆಂದು ರುಗ್ಮಿಣೀದೇವಿ ಸ್ತುತಿಸಿರುವಳು[3] ಬ್ರಹ್ಮಾದಿಗಳಿಂದ ಸದಾ ಅರ್ಚಿಸಲ್ಪಡುವವನು ವಾಸುದೇವನೆಂದು ಶ್ರೀ ಮಧ್ವಾಚಾರ್ಯರೂ ಹೊಗಳಿರುವರು[4]

ಈ ಜ್ಞಾನಿಗಳಿಂದಲೂ ಯಾಜಿಸಲ್ಪಡುವವನು[5]

ಭಗವಂತನು ಚತುರ್ಮುಖ, ರುದ್ರ, ಇಂದ್ರ ಮುಂತಾದವರಿಂದ ಯಜ್ಞಗಳ ಮೂಲಕ ಸರ್ವದಾ ಯಾಜಿಸಲ್ಪಡುವವನೆಂದು ಶ್ರೀಮಧ್ವಾಚಾರ್ಯರು ಸ್ತುತಿಸಿರುವರು[6]

ಊ ಬ್ರಹ್ಮಾದಿಶಿಷ್ಟರೂ ಪೂಜಿತರಾಗುವಂತೆ ಅನುಗ್ರಹಿಸಿರುವವನು[7]

ಲಕ್ಷ್ಮೀದೇವಿಯು ಭಾಗ್ಯದ ದೇವತೆಯಾದರೆ, ಚತುರ್ಮುಖ ಮತ್ತು ವಾಯು ಗುರುಗಳು, ಸರಸ್ವತೀ ಮತ್ತು ಭಾರತಿ ಇವರು ವಿದ್ಯಾಭಿಮಾನಿನಿಯರು ಆದ್ದರಿಂದ ಇವರು ಶ್ರೀಹರಿಗೆ

---

* ನಮಾಮಿ ನಾರಾಯಣಪಾದಪಂಕಜಂ ಸದಾ ಪ್ರಿಯೇಭ್ಯಃ ಪ್ರಿಯಮಾದರೇಣ ।
-ತಂ. ಸಾ. ಸಂ.

ಇ 1 ಶಿಷ್ಟೈರಿಷ್ಟಃ ಪೂಜಿತಃ ಶಿಷ್ಟೇಷ್ಟಃ । -ವಿ ರಾ.

2 ಕೃಷ್ಣೋ ಯಜ್ಞೈರಿಜ್ಯತೇ ಸಂನ್ಯಾಸಿಭಿಃ -ಮ ಭಾರ. ಶಾ. ನಿ 2-62

3 ಯಸ್ಮೈ ಬಲಿಂ ಬಲಿಭುಜೋಽಪಿ ಹರಂತ್ಯಜಾದ್ಯಾಃ । -ಭಾಗ 10-82-41

4 ಸ್ವರ್ಚ್ಯತೇ ಬ್ರಹ್ಮರುದ್ರೇಂದ್ರಪೂರ್ವೈಸ್ಸದಾ.. . ಪ್ರೀಣಯಾಮೋ ವಾಸುದೇವಂ. .
-ದ್ವಾ. ಸ್ತೋ.

ಈ 5 ಶಿಷ್ಟೈಃ ಇಷ್ಟಃ ಯಾಗೇನ ಪೂಜಿತಃ ಶಿಷ್ಟೇಷ್ಟಃ ।

6 ಯ ಇಜ್ಯತೇ ವಿಧೀಶಾನಶಕ್ರಪೂರ್ವೈಃ ಸದಾ ಮುಖೈಃ । ರಮಾಪ್ರಣಯಿನೇ ತಸ್ಮೈ ಸರ್ವಯಜ್ಞಭುಜೇ ನಮಃ ॥ -ಖಂ. ನಿ. ಮಂ. ಪ.

ಊ 7 ಶಿಷ್ಟಾಃ ಬ್ರಹ್ಮಾದಯಃ ಇಷ್ಟಾಃ ಪೂಜಿತಾಃ ಯಸ್ಮಾತ್ ಸಃ ಶಿಷ್ಟೇಷ್ಟಃ ।

ಅಂತರಂಗ ಪ್ರಿಯರೆನಿಸಿರುವರು. ಭಗವಂತನ ಪ್ರೀತಿಯನ್ನು ಬಯಸುವವನು ಲಕ್ಷ್ಮ್ಯಾದಿಗಳನ್ನು ಚೆನ್ನಾಗಿ ತಿಳಿದುಕೊಂಡು, ಚೆನ್ನಾಗಿ ಪೂಜಿಸಬೇಕು—ಎಂದು ಶ್ರೀ ಮಧ್ವಾಚಾರ್ಯರು ನೀಡಿರುವ ಸಂದೇಶದಿಂದ[1]—ಭಗವದನುಗ್ರಹದಿಂದಲೇ ಅವರು ಪೂಜ್ಯರೆಂದು ಸೂಚ್ಯವಾಗುವುದು.

### ಜಿಜ್ಞಾಸೆ

[ಅಧಮಃ ಫಲಸಾಧನಪಕ್ಷೇ]

ಪ್ರ – ಜ್ಞಾನಿಗಳು ಪರಮಾತ್ಮನ ಉತ್ತಮ ಪ್ರಸಾದ ಪಾತ್ರರು ಕರ್ಮಿಗಳು ಅಧಮ ಪ್ರಸಾದ ಪಾತ್ರರು 'ಕರ್ಮಣಾ ತ್ವಧಮಃ ಪ್ರೋಕ್ತಃ ಪ್ರಸಾದಃ ಶ್ರವಣಾದಿಭಿಃ । ಮಧ್ಯಮೋ ಜ್ಞಾನ-ಸಂಪತ್ತ್ಯಾ ಪ್ರಸಾದಸ್ತೂತ್ತಮೋ ಮತಃ' । ಎಂಬ ಪ್ರಮಾಣವು ಕರ್ಮಜನ್ಯ ಪ್ರಸಾದವು ಅಧಮ ಎಂದು ಜ್ಞಾನದಿಂದ ಆಗುವ ಪ್ರಸಾದವು ಉತ್ತಮವೆಂದು ಹೇಳುತ್ತದೆ ಪರಮಾತ್ಮನ ಪ್ರಸಾದವು ಪರಮಾತ್ಮನ ಗುಣರೂಪವೆಂದು ಸಿದ್ಧಾಂತ ಪರಮಾತ್ಮನ ಗುಣಗಳು, ಪರಮಾತ್ಮನ ಸ್ವರೂಪಾತ್ಮಕ. ಸರ್ವೋತ್ತಮನಾದ ಪರಮಾತ್ಮನ ಸ್ವರೂಪವಾದ ಪ್ರಸಾದವು ಉತ್ತಮವೇ ಆಗಬೇಕು, ಅಧಮವಾಗುವದು ಹೇಗೆ?

ಉ – ಮೋಕ್ಷರೂಪವಾದ ಉತ್ತಮ ಫಲಕ್ಕೆ ಸಾಧನವಾದ್ದರಿಂದ ಪ್ರಸಾದವನ್ನು ಉತ್ತಮವೆಂದು, ಸ್ವರ್ಗರೂಪ ಅಧಮ ಫಲಸಾಧನವಾದ ಪ್ರಸಾದವನ್ನು ಅಧಮವೆಂದು ಹೇಳುವದು ಕೂಡುತ್ತದೆ



### ೩೧೧ ಶಿಖಂಡೀ

೧ ವಿಷಯ ಸುಖಾಸಕ್ತರನ್ನು ಖಂಡಿಸುವವನು.[2]

ವಿಷಯ ಸುಖದಲ್ಲೇ ಆಸಕ್ತರಾಗಿರುವವರು ಮೋಕ್ಷಸುಖದಿಂದ ವಂಚಿತರಾಗುವಂತೆ ಮಾಡುವುದರ ಮೂಲಕ ಭಗವಂತನು ಅಂತಹವನ್ನು ಖಂಡಿಸುವವನು; ನಾಶಪಡಿಸುವವನು.

---

1 ...ಲಕ್ಷ್ಮೀರ್ಭಾರ್ಗಸ್ಯ ದೇವತಾ । ಗುರುರ್ಬ್ರಹ್ಮಾಽಥ ವಾಯುರ್ವಾ ವಿದ್ಯಾದೇವ್ಯಾ ಪ್ರಕೀರ್ತಿತೇ । ತಸ್ಮಾದೇತೇ ಪ್ರಿಯಾ ವಿಷ್ಣೋರಂತರಂಗತಯಾ ಸದಾ । ಜ್ಞೇಯಾಶ್ಚೈವ ಪ್ರಪೂಜ್ಯಾಶ್ಚ ವಿಷ್ಣೋಃ ಪ್ರೀತಿಮಭೀಪ್ಸತಾ ॥ –ತಂ. ಸಾ. ಸಂ. 4-72

೧ 2 ಶಿನಃ (ಶಂ ವಿಷಯಾಮಸ್ತೀತಿ ಶಿನಃ ತಾನ್) ವಿಷಯಸುಖಾಸಕ್ತಾನ್ ಖಂಡಯತೀತಿ ಶಿಖಂಡೀ । –ವಿ. ರಾ.

* ಶಿನಃ ಸುಖಿನಃ ಖಂಡಯತೀತಿ ಶಿಖಂಡೀ । –ಸ. ಸಂ.

೨ (ಅಯೋಗ್ಯರ) ಸುಖವನ್ನೂ, (ಸುಖಕ್ಕೆ ಕಾರಣವಾದ) ಜ್ಞಾನವನ್ನೂ ಖಂಡಿಸುವವನು[1]

೩ (ಅಯೋಗ್ಯರಿಗೆ) ಉತ್ತಮ ಸುಖ ದೊರಕದಂತೆ ಖಂಡಿಸುವವನು[2]

೪ ಪೂರ್ಣಾನಂದನು ಮತ್ತು (ಸಂಹಾರಕಾಲದಲ್ಲಿ ಎಲ್ಲವನ್ನೂ) ಸಂಹರಿಸುವವನು.[3]

೫ ನಿತ್ಯಪ್ರಶಸ್ತವಾದ ಸುಖವನ್ನು ಪಡೆದಿರುವವನು ಹಾಗೂ (ಪರಶುರಾಮಾವತಾರದಲ್ಲಿ ತನ್ನ ತಾಯಿಯ ಹಾಗೂ ಅಣ್ಣಂದಿರ ತಲೆಯನ್ನೇ) ಖಂಡಿಸಿರುವವನು[4]

ಭಗವಂತನು ಪರಶುರಾಮಾವತಾರದಲ್ಲಿ ತನ್ನ ತಂದೆ ಜಮದಗ್ನಿಯ ಆದೇಶದ ಮೇರೆಗೆ ತನ್ನ ಅಣ್ಣಂದಿರ ಹಾಗೂ ತಾಯಿಯ ತಲೆಗಳನ್ನು ಕತ್ತರಿಸಿರುವನು[5]

---

೨ 1 ಶಂ ಚ ಇಶ್ಚ (ಶಕಾರೋತ್ತರಾಕಾರಸ್ಯ ಲೋಪೇ ಸತಿ)ಶೀ ಸುಖಜ್ಞಾನೇ।ಅಯೋಗ್ಯಾನಾಂ ಶೀ ಖಂಡಯತೀತಿ ಶಿಖಂಡೀ।

೩ 2 'ತೃತೀಯೋಽತಿಶಯೇ' ಇತಿ ಅತಿಶಯಾರ್ಥೇ ಅಕಾರಸ್ಥಾನೇ ತೃತೀಯವರ್ಣಃ ಇಕಾರಃ ಭವತೀತಿ ಅತಿಶಯಿತಂ ಸುಖಂ ಶಿ ಇತಿ ಉಲ್ಲಿಖ್ಯತೇ ತಸ್ಯ ಚ ದುಃಖಾಮಿಶ್ರಿತಂ ಮೋಕ್ಷಸುಖಮಿತ್ಯರ್ಥಃ । ತತ್ ಅಯೋಗ್ಯೈಃ ಲಬ್ಧಂ ಯಥಾ ನ ಸ್ಯಾತ್ತಥಾ ಖಂಡಯತೀತಿ ಶಿಖಂಡಿ ।

* ಶಂ ಸುಖಂ ತದೇವಾತಿಶಯಿತಂ ಶಿ ತಸ್ಯ ಖಂಡನಮಸ್ಯಾಸ್ತೀತಿ ಶತ್ರೂಣಾಂ ಅತಿಶಯಿತಂ ಸುಖಂ ಖಂಡಯತೀತಿ ಶಿಖಂಡೀ । —ಶೇ. ಚಂ.

೪ 3 ಶಮಸ್ಯ ವಿದ್ಯತ ಇತಿ ಶೀ ವಿಷ್ಣುಃ । ಪೂರ್ಣಾನಂದತ್ವಾತ್ (ಐ ಉ ಭಾ. 2-4-1-7) ಖಂಡಯತಿ ಸಂಹಾರಕಾಲೇ ಸರ್ವಂ ನಾಶಯತೀತಿ ಖಂಡೀ। ಶೀ ಚಾಸೌ ಖಂಡೀ ಚ ಶಿಖಂಡೀ ।

೫ 4 ಶಮಸ್ಯಾಸ್ತೀತಿ ಶೀ । ಖಂಡಯತಿ ಪರಶುರಾಮಾವತಾರೇ ಸ್ವಮಾತುಃ ಶಿರಃ ಭೇದಯತೀತಿ ಖಂಡೀ । ಶೀ ಚಾಸೌ ಖಂಡೀ ಚ ಶಿಖಂಡೀ ।

5 ರಾಮಃ ಸಂಚೋದಿತಃ ಪಿತ್ರಾ ಭ್ರಾತೄನ್ ಮಾತ್ರಾ ಸಹಾವಧೀತ್ ।
—ಭಾಗ. 9-16-6

೬ (ಸಂಹಾರ ಕಾಲದಲ್ಲಿ ನೃಸಿಂಹರೂಪದಿಂದ) ಸಮುದ್ರದ ನೀರನ್ನು ಭಸ್ಮ ಮಾಡಿರುವವನು[1]

ಸರ್ವಸಂಹಾರದಲ್ಲಿ ತೊಡಗಿರುವ ನೃಸಿಂಹನು ಸಮುದ್ರದ ಮಧ್ಯದಲ್ಲಿದ್ದು, ಅದರ ಅಗಾಧವಾದ ಜಲರಾಶಿಯನ್ನು ಭಸ್ಮಮಾಡುವನೆಂದು ವೈಹಾಯಸ ಸಂಹಿತೆ ತಿಳಿಸಿದೆ[2]

೭ (ಕೃಷ್ಣಾವತಾರದಲ್ಲಿ ಗೋವಳರಂತೆ ತಲೆಯಲ್ಲಿ) ನವಿಲಿನ ಗರಿಯನ್ನು ಧರಿಸಿರುವವನು[3]

೮ (ಕೃಷ್ಣಾವತಾರದಲ್ಲಿ ಬಾಲ್ಯದಲ್ಲಿ) ಜುಟ್ಟನ್ನು ಧರಿಸಿಕೊಂಡಿರುವವನು[4]

ದೇವತೆಗಳು ಯಾವ ಕುಲದಲ್ಲಿ ಅವತರಿಸಿರುವರೋ, ಆ ಕುಲಕ್ಕೆ, ಆ ಯುಗಕ್ಕೆ, ಅವರ ವಯಸ್ಸಿಗೆ ಅನುಗುಣವಾಗಿ ನಡೆದುಕೊಳ್ಳಬೇಕು[5]—ಎಂಬುದನ್ನು ದೇವತೆಗಳಿಗೆ ತಿಳಿಸಿಕೊಡುವುದಕ್ಕಾಗಿ ಭಗವಂತನು ಕೃಷ್ಣಾವತಾರದಲ್ಲಿ ಗೋವಳರಂತೆಯೇ ವೇಷ ಧರಿಸಿದ್ದನು ಗೋವಳರು

---

೬ 1 'ಶೈತ್ಯಾತ್ ಶಯನಯೋಗಾಚ್ಚ ಶೀತಿ ವಾರಿ ಪ್ರಚಕ್ಷತೇ'—ಇತಿ ಶಿಪಿವಿಷ್ಟ ನಾಮ್ನ (೨೭೩) ನಿರ್ವಚನಾವಸರೇ ಉಕ್ತರೀತ್ಯಾ ಶಿ ವಾರಿ । ಸಂಹಾರಕಾಲೇ ನೃಸಿಂಹರೂಪೇಣ ಸಮುದ್ರಸ್ಯ ಶಿ ಖಂಡಯತಿ ಭಸ್ಮ ಕರೋತೀತಿ ಶಿಖಂಡೀ ।

2 'ಭೂತಾದಿಭೂತೋಽಬ್ಧಿನಿಧಾನಮಧ್ಯೇ ಭೂತ್ವಾ ಹರಿಃ ಸರ್ವಹರೋಽತಿಧಾಮ್ನಾ ।
ಅಗಾಧಮಂಭೋ ವಿದಧಾತಿ ಭಸ್ಮ ಯೋ ವಾಡವಾಗ್ನಿರ್ನೃಹರಿರ್ವಿಚಿಂತ್ಯಃ'
-ವೈಹಾಯಸ ಸಂಹಿತಾ (ಶ. ನಿ.)

೭ 3 ಕೃಷ್ಣಾವತಾರೇ ಶಿಖಂಡಃ ಬರ್ಹಂ ಅಸ್ಯಾಸ್ತೀತಿ ಶಿಖಂಡೀ ।

* ಕೃಷ್ಣಾವತಾರೇ ಬಾಲ್ಯೇ ಬರ್ಹಧಾರೀ । ವಾ. ರಾ.

೮ 4 ಕೃಷ್ಣಾವತಾರೇ ಬಾಲ್ಯೇ ಚೂಡಾಧಾರೀ । -ವಾ. ರಾ.

* 'ಶಿಖಂಡೋ ಬರ್ಹಚೂಡಯೋಃ'-ಹೇಮಚಂದ್ರಃ ।

5 'ಪ್ರಜಾಯತೇ ಹಿ ಯತ್ಕುಲೇ ಯಥಾಯುಗಂ ಯಥಾವಯಃ । ತಥಾ ಪ್ರವರ್ತನಂ ಭವೇದ್ದಿವೌಕಸಾಂ ಸಮುದ್ಭವೇ ॥ ಇತಿ ಸ್ವಧರ್ಮಮುತ್ತಮಂ ದಿವೌಕಸಾಂ ಪ್ರದರ್ಶಯನ್ ವಿಡಂಬತೇ ಜನಾರ್ದನಃ' -ಮ. ಭಾರ. ತಾ. ನಿ. 1'-11

ತಲೆಯಲ್ಲಿ ನವಿಲಿನ ಗರಿ ಧರಿಸುವಂತೆ ತಾನೂ ಧರಿಸಿದ್ದನು ಹಸುಗಳ ಧೂಳಿಯಿಂದ ಮಿಶ್ರಿತವಾದ ತಲೆಗೂದಲಲ್ಲಿ ನವಿಲು ಗರಿಯನ್ನೂ, ಕಾಡಿನ ಹೂವುಗಳನ್ನು ಕಟ್ಟಿಕೊಂಡ ಪ್ರಯುಕ್ತ ಸುಂದರನಾಗಿ ಕಾಣಿಸುತ್ತಿದ್ದನೆಂದು ಭಾಗವತದಲ್ಲಿ ನಿರೂಪಿಸಲಾಗಿದೆ[1] ಶ್ರೀಕೃಷ್ಣಾವತಾರದ ಬಗ್ಗೆ ಹೊರಟ ಕೃಷ್ಣಾಷ್ಟೋತ್ತರ ಶತನಾಮ ಸ್ತೋತ್ರದ ಒಂದು ನಾಮದಲ್ಲೂ ನವಿಲುಗರಿಯನ್ನು ಅಲಂಕಾರವಾಗಿ ಧರಿಸಿಕೊಂಡಿರುವವನೆಂದು ಉಲ್ಲೇಖಿಸಲಾಗಿದೆ.[2]

ಕೃಷ್ಣಾವತಾರದ ಬಾಲ್ಯದಲ್ಲಿ ಶ್ರೀಕೃಷ್ಣನಿಗೆ ಶಿಖೆಯನ್ನು ಕಟ್ಟಲಾಗುತ್ತಿತ್ತು, ಆದುದರಿಂದಲೇ ಉಡುಪಿಶ್ರೀಕೃಷ್ಣನ ಪ್ರತಿಮೆಯಲ್ಲೂ ಮೂರು ಗಂಟುಗಳನ್ನೊಳಗೊಂಡ ಶಿಖೆ ಚಿತ್ರಿತವಾಗಿರುವುದು[3]

೯ ನಿದ್ರೆಯನ್ನು ಖಂಡಿಸುವವನು[4]

ಎಚ್ಚರಕ್ಕೆ ಕಾರಣನಾದ ಭಗವಂತನೇ[5] ನಿದ್ರೆಯನ್ನು ಖಂಡಿಸುವನೂ ಕೂಡಾ

೧೦ ಅಪರಿಮಿತವಾದ ಐಶ್ವರ್ಯ, ಎದುರಿಸಲು ಅಶಕ್ಯವಾದ ತೇಜಸ್ಸು ಇವು ಅತಿಶಯವಾಗಿ ಉಳ್ಳವನು.[6]

---

1 'ತಂ ಗೋರಜಶ್ಛುರಿತಕುಂತಲಬದ್ಧಬರ್ಹವನ್ಯಪ್ರಸೂನರುಚಿರೇಕ್ಷಣಚಾರುಹಾಸಮ್'
-ಭಾಗ 10-15-42

2 'ಯುಧಿಷ್ಠಿರಪ್ರತಿಷ್ಠಾತಾ ಬರ್ಹಿಬರ್ಹಾವತಂಸಕಃ '
-ಕೃ. ಸ್ತೋ.

3 ಕೃಷ್ಣಂ ವಂದೇ ಮಂಥಪಾಶಧರಂ ದಿವ್ಯಾರ್ಭಕಾಕೃತಿಮ್ ।
ಶಿಖಾಬಂಧತ್ರಯೋಪೇತಂ ಭೈಷ್ಮೀಮಧ್ವಕರಾರ್ಚಿತಮ್ ॥

೯ 4 'ಶೀಙ್ ಸ್ವಪ್ನೇ' ಇತಿ ಧಾತುಃ ಶಿತಂ ನಿದ್ರಾಂ ಖಂಡಯತೀತಿ ಶಿಖಂಡೀ ।
-ವಾ. ರಾ.

5 'ಅತಃ ಪ್ರಬೋಧೋಽಸ್ಮಾತ್'  -ಬ್ರ ಸೂ. 3-2-8

'ಏಷ ಏವ ಸುಪ್ತಂ ಪ್ರಬೋಧಯತಿ......'
_ಕೌಂಡಿನ್ಯ ಶ್ರುತಿ (ಬ್ರ. ಸೂ. ಭಾ.)

೧೦ 6 ಅಪರಿಮಿತಾಪ್ರಧೃಷ್ಯಮೈಶ್ವರ್ಯಂ ಪರಂ ತೇಜಃ ಶಿಖಂಡಮಸ್ಯಾತಿಶಯಿತಮಿತಿ ಶಿಖಂಡೀ । ಅತಿಶಾಯನೇ ಇನಿಃ ।  -ಪ. ಭ

## ಜಿಜ್ಞಾಸೆ

### [ಮುಸುರೆ ಪಾತ್ರೆ ತೊಳೆಯುವಂತೆ]

ಪ್ರ:- ವಿಷಯ ಸುಖವನ್ನು ಪರಮಾತ್ಮನು ಸೃಷ್ಟಿಮಾಡುತ್ತಾನೆ ಅವನೇ ಅದನ್ನು ನಾಶ ಮಾಡುತ್ತಾನೆ. ಇದು 'ಪ್ರಕ್ಷಾಲನಾತ್' ಎಂಬ ನ್ಯಾಯದಂತೆ ಅಂದರೆ ಕೆಸರನ್ನು ಮೈಗೆ ಹಚ್ಚಿ ಕೊಂಡು ಅದನ್ನು ತೊಳೆಯುವ ಪ್ರಯಾಸದಂತೆ ಆಗುವದಿಲ್ಲವೆ?

ಉ - ಮೈಗೆ ಕೆಸರನ್ನು ಹಚ್ಚಿಕೊಳ್ಳುವದು ವ್ಯರ್ಥ ಅದರಂತೆ ವಿಷಯ ಸುಖದ ಸೃಷ್ಟಿಯು ವ್ಯರ್ಥವಲ್ಲ ಪರಮ ಪುರುಷಾರ್ಥವನ್ನು ಸಾಧಿಸಲಿಕ್ಕೆ ಉತ್ತಮ ದೇಹವು ಬೇಕು. ಆ ದೇಹಕ್ಕೆ ವಿಷಯ ಸುಖವು ಬೇಕು ದೇಹವು ವಿಷಯ ಸುಖವನ್ನು ಅನುಭವಿಸಿ ಪರಮ ಪುರುಷಾರ್ಥವನ್ನು ಸಾಧನ ಮಾಡಿದ ನಂತರ ವಿಷಯ ಸುಖವನ್ನು ನಾಶ ಮಾಡುವದು ದೋಷ ವಲ್ಲ. ಅಡಿಗೆ ಆದ ಮೇಲೆ ಮುಸುರೆ ಪಾತ್ರವನ್ನು ತೊಳೆಯುವದು ಆವಶ್ಯಕ. ಅದರಂತೆ ವಿಷಯ ಸುಖದ ಪ್ರಯೋಜನವಾದ ಮೇಲೆ ಅದನ್ನು ನಾಶ ಮಾಡುವದು ನ್ಯಾಯವಾಗಿದೆ.



### ೩೧೨ ನಹುಷಃ

೧ ಸಂಸಾರದಲ್ಲಿ ಜೀವರನ್ನು ಬಂಧಿಸುವವನು ಮತ್ತು ಜ್ಞಾನ ಉಂಟಾಗಲು ಅವರನ್ನು ಸಂಸಾರ ಬಂಧನದಿಂದ ಬಿಡುಗಡೆಗೊಳಿಸುವವನು[1]

೨ ತನ್ನ ಮಾಯೆಯಿಂದ ಜೀವಾತ್ಮರನ್ನು ಬಂಧಿಸುವವನು[2]

೩ ಸಂಸಾರದಲ್ಲಿ ಜೀವಾತ್ಮರನ್ನು ಬಂಧಿಸುವವನು. (ಬಂಧಿಸಲು ಬೇಕಾದ ಅಜ್ಞಾನವನ್ನು) ನೀಡುವವನು. ಅಥವಾ (ಬಿಡುಗಡೆಗೆ ಬೇಕಾದ) ಜ್ಞಾನವನ್ನು ನೀಡುವವನು.[3]

---

೧ 1 'ಣಹ ಬಂಧನೇ' ಇತಿ ಧಾತೋಃ 'ಷೋಽನ್ತಕರ್ಮಣಿ' ಇತಿ ಚ ಧಾತೋಃ ಸಂಸಾರೇ ಜೀವಾನ್ ಬಧ್ನಾತೀತಿ, ಜ್ಞಾನೇ ಸತಿ ಸಂಸಾರಾಂತಂ ಚ ಕರೋತೀತಿ ನಹುಷಃ ।
-ವಾ. ರಾ.

* ನಹ್ಯತಿ ಸ್ಯತೀತಿ ಚ ನಹುಷಃ ।

೨ 2 ನಹ್ಯತಿ ಭೂತಾನಿ ಬಧ್ನೀತೇ ಸ್ವಮಾಯಯೇತಿ ನಹುಷಃ ।
-ವಿ. ರಾ.

೩. 3 ನಹ್ಯತಿ ಸಂಸಾರೇ ಬಧ್ನಾತಿ 'ಷನೋತಿ ತದರ್ಥಂ ಅಜ್ಞಾನಂ ಅಥವಾ ತದ್ವಿಮೋಚನಾರ್ಥಂ ಜ್ಞಾನಂ ದದಾತಿ ಚೇತಿ ನಹುಷಃ । 'ಷಣು ದಾನೇ' -ವಿ. ಶಾ. ಆಧಾರೇಣ

ಜೀವಾತ್ಮನು ವಾಸ್ತವವಾಗಿ ನಿತ್ಯಜ್ಞಾನಸ್ವರೂಪಿಯಾಗಿರುವವನು ಪ್ರಾಕೃತ ಶರೀರವಾಗಲೀ, ಇಂದ್ರಿಯಗಳಾಗಲೀ, ಅವನಿಗೆ ಇಲ್ಲ ಇಂತಹ ಜೀವಾತ್ಮನಿಗೆ ಪ್ರಾಕೃತ ಶರೀರದ ಸಂಬಂಧ ಬರಲು ಮೊದಲ ಕಾರಣ ಭಗವದಿಚ್ಛೆ ಜಡಪ್ರಕೃತಿಯು ಎರಡನೇ ಕಾರಣ. ಸತ್ತ್ವ,ರಜಸ್ಸು ಹಾಗೂ ತಮಸ್ಸು ಜಡಪ್ರಕೃತಿಯ ಗುಣಗಳಾಗಿದ್ದು, ಅಂತಹ ಗುಣಗಳಿಂದಾಗಿ ಜೀವಾತ್ಮನಿಗೆ ಮಮಕಾರ ಹಾಗೂ ಅಹಂಕಾರಗಳು ಉಂಟಾಗುವವು ಜೀವಾತ್ಮನು ಪ್ರಾಕೃತದೇಹಕ್ಕಿಂತ ಅತ್ಯಂತ ಭಿನ್ನನಾದರೂ ಆ ದೇಹದ ಮೇಲೆ ಇರುವ 'ಅಹಂಭಾವ' ಪ್ರಯುಕ್ತವಾಗಿಯೂ ಷ್ಟೇ ಅವನು ದೇಹಿ[1] ಪ್ರಕೃತಿಯ ಸ್ವತ್ತ್ವಗುಣವು ಜ್ಞಾನೇಂದ್ರಿಯಗಳಿಂದ ಹಾಗೂ ಮನಸ್ಸಿನಿಂದ ಜೀವಾತ್ಮನನ್ನು ಬಂಧಿಸಿದರೆ, ರಜೋಗುಣವು ಕರ್ಮೇಂದ್ರಿಯಗಳಿಂದ ಜೀವಾತ್ಮನನ್ನು ಬಂಧಿಸುವುದು. ತಮೋಗುಣವು ಶರೀರದಿಂದ ಜೀವಾತ್ಮನನ್ನು ಬಂಧಿಸುವುದು. ಯಾಕಂದರೆ ಜ್ಞಾನೇಂದ್ರಿಯಗಳ ಪ್ರಯುಕ್ತವಾದ ಕರ್ತೃತ್ವದ ಅಭಿಮಾನವು ಸತ್ತ್ವಗುಣದಿಂದ ಉಂಟಾದರೆ, ಕರ್ಮೇಂದ್ರಿಯ ಪ್ರಯುಕ್ತವಾದ ಕರ್ತೃತ್ವದ ಅಭಿಮಾನವು ರಜೋಗುಣದಿಂದ ಉಂಟಾಗುವುದು ಶರೀರ ಪ್ರಯುಕ್ತಗಳಾದ ವೇದನಾದಿಗಳಲ್ಲಿ ಅಭಿಮಾನವು ತಮೋಗುಣದಿಂದ ಉಂಟಾಗುವುದು ಹೀಗೆ ಪ್ರಕೃತಿಗುಣಗಳಿಂದಾಗಿ ಅಭಿಮಾನವನ್ನು ಹೊಂದುವುದರಿಂದಲೇ ತಾನೇ ಕರ್ತೃ, ಇಂದ್ರಿಯಗಳು, ಶರೀರ ತನ್ನವು—ಎಂದು ಭ್ರಮಿಸುವನು[2] ತಾನೇ ಧ್ಯಾನಿಸುವೆನು, ಮನನಮಾಡುವೆನು ನೋಡುವೆನು, ಕೇಳುವೆನು—ಎಂದು ಜೀವಾತ್ಮನಿಗೆ ಧ್ಯಾನಾದಿಕ್ರಿಯಾಸ್ವಾತಂತ್ರ್ಯವು ಇಂದ್ರಿಯಗಳ ಮೂಲಕ ಭೋಗವು ಅವನಿಗೆ ಉಂಟಾಗಲೆಂದು ಭಗವದಿಚ್ಛಾನುಸಾರವಾಗಿ ಆರೋಪಿತವಾಗುವುದು[3] ಜೀವಾತ್ಮನಿಗೆ ತನ್ನ ಶರೀರದ ಜೊತೆ ಸ್ವಸ್ವಾಮಿಭಾವಸಂಬಂಧವು ವಾಸ್ತವವಾಗಿ ಇಲ್ಲ

---

1 ಅಶರೀರಸ್ಯ ಜೀವಸ್ಯ ಶರೀರೋತ್ಪತ್ತಿಕಾರಣಮ್ । ಈಶ್ವರೇಚ್ಛಾ ಪ್ರಾಥಮಿಕಾ ತಾಂ ವಿನಾ ನಹಿ ಕಿಂಚನ। ದ್ವಿತೀಯಾ ಪ್ರಕೃತಿಃ ಪ್ರೋಕ್ತಾ ತದ್ರೂಪಾ ಚ ಗುಣಾಸ್ತ್ರಯಃ । ತೇಷಾಂ ಸಂಪಾಪಿತಜೋ ಭಾವೋ ಮಮಾಹಮಿತಿ ಯಾ ಮತಿಃ। ದೇಹಾತ್ ಪರಸ್ಯ ದೇಹಿತ್ವಮಹಂಭಾವಪ್ರಯುಕ್ತಿತಃ ಕೃತಃ -ಭವಿಷ್ಯತ್ಪುರಾಣ (ಭಾಗ. ತಾ ನಿ 2 9-4)

2 ಜ್ಞಾನೇಂದ್ರಿಯೈಶ್ಚ ಮನಸಾ ಸತ್ತ್ವಂ ಬಧ್ನಾತಿ ಪೂರುಷಮ್। ರಜಃ ಕರ್ಮೇಂದ್ರಿಯೈರ್ನಿತ್ಯಂ ಶರೀರೇಣ ತಮಸ್ತಥಾ । ಅಂತರಂ ಯತ್ತು ಕರ್ತೃತ್ವಂ ತತ್ ಸತ್ತ್ವೇನಾಭಿಮನ್ಯತೇ । ರಜಸಾ ತ್ವಭಿಮನ್ಯೇತ ಕರಣೈಃ ಕರ್ಮಕಾರಣೈಃ । ಶಾರೀರಂ ವೇದನಾದ್ಯಂ ತು ತಮಸಾ ತ್ವಭಿಮನ್ಯತೇ । ಅಕರ್ತಾ ಕರಣೈರ್ಹೀನಃ ಶರೀರೇಣ ವಿವರ್ಜಿತಃ । ನಿತ್ಯಜ್ಞಾನಸ್ವರೂಪೋಽಪ್ಯಸೌ ಗುಣೈರೇವಾಭಿಮನ್ಯತೇ
-ಪಾದ್ಮ (ಭಾಗ. ತಾ. ನಿ. 2-5-18)

3 'ಧ್ಯಾಯೇ ಮನ್ಯೇ ತಥಾ ಪಶ್ಯೇ ಶೃಣೋಮೀತಿ ವಿಭಕ್ತತಾ।ಜೀವಸ್ಯ ತು ಹರೇರಿಚ್ಛಾಬಲಾದಿಂದ್ರಿಯಭುಕ್ತಯೇ' -ಷಾಡ್ಗುಣ್ಯ (ಭಾಗ. ತಾ. ನಿ. 3 10-9)

ಭಗವದಧೀನವಾಗಿ ಇರುವ ಶರೀರಾದಿಗಳು ಅಭಿಮಾನ ಪ್ರಯುಕ್ತವಾಗಿಯಷ್ಟೇ ಜೀವಸಂಬಂಧಿಗಳಾಗಿ ಕಾಣುವವು. ಅಭಿಮಾನಪ್ರಯುಕ್ತಗಳಾದ ಜೀವಾತ್ಮನ ಶರೀರಾದಿಗಳು ಭಗವದ್‌ಜ್ಞಾನದಿಂದಾಗಿ ತೊಲಗುವವು.[1] ಹೀಗೆ ಭಗವಂತನಿಂದ ಪ್ರೇರಿತವಾಗಿಯೇ ಸಂಸಾರವನ್ನು ಹೊಂದುವ ಜೀವಾತ್ಮನು,[2] ವಾಸುದೇವನ ಅನುಗ್ರಹದಿಂದಲೇ ಕಾಲ ಹಾಗೂ ಪ್ರಕೃತಿಯಿಂದ ದೂರವಾದ ತನ್ನ ಸ್ವರೂಪವನ್ನು ತಿಳಿಯುವನೋ ಆಗಲೇ ಮುಕ್ತನಾಗುವನು[3]

ಆದುದರಿಂದ ಜೀವಾತ್ಮನನ್ನು ಸಂಸಾರಬಂಧದ ಪಾಶದಿಂದ ಬಂಧಿಸುವವನೂ, ಬಿಡುಗಡೆಗೊಳಿಸುವವನೂ ಭಗವಂತನೇ[4] ಅಂತೆಯೇ ಸಂಸಾರಬಂಧನಕ್ಕೆ ಬೇಕಾದ ಅಜ್ಞಾನವನ್ನೂ, ಸಂಸಾರಬಂಧನದಿಂದ ಬಿಡುಗಡೆ ಹೊಂದಲು ಬೇಕಾದ ಜ್ಞಾನವನ್ನೂ ಅವನೇ ನೀಡುವನು[5]

ಳ ಸರ್ವಜೀವ ಜಡಗಳಿಗಿಂತ ವಿಲಕ್ಷಣನಾಗಿರುವವನು (ಜೀವ ಜಡಗಳಿಗೆ) ಬೇಕಾದುದೆಲ್ಲವನ್ನೂ ನೀಡುವವನು, ಅಥವಾ ಎಲ್ಲವನ್ನೂ ತನ್ನದ್ದನ್ನಾಗಿ ಸ್ವೀಕರಿಸುವವನು, ಮತ್ತು ಎಲ್ಲರನ್ನೂ ಪ್ರೇರಿಸುವವನು, ಮೂರು ವಿಧದ ವ್ಯಾಪ್ತಿಯನ್ನೂ ಹೊಂದಿರುವವನು[6]

---

1 ತನ್ನಾ ಸ್ವಸ್ವಾಮಿಸಂಬಂಧಃ ಪ್ರಪಂಚೋಽಸ್ಯ ಶರೀರಿಣಃ । ವಸ್ತುತೋಽಸ್ಯ ನಚೈವಾಸ್ತಿ ಪರಮಸ್ಯ ವಶೇ ಯತಃ । ತನ್ವಾದಿಕಸ್ತಥಾಽಪ್ಯೇಷ ಹ್ಯಭಿಮಾನಾತ್ ಪ್ರದೃಶ್ಯತೇ । ಅತಃ ಸ ವಿದ್ಯತ ಇತಿ ತ್ವಂಗೀಕಾರೋ ಭವೇದ್ ಯದಿ । ತಥಾಽಪಿ ಭಗವಜ್ಜ್ಞಾನಾತ್ ಸ ನಿವರ್ತೇದಸಂಶಯಮ್ -ಬ್ರಹ್ಮತರ್ಕ (ಮಾಂ. ಉ ಭಾ. 1-2-8)

2 ಏವಂ ಜೀವಃ ಪರೇಣೈವ ಪ್ರೇರಿತಃ ಸಂಸೃತಿಂ ವ್ರಜೇತ್ ।
ಪಾದ್ಮ (ಭಾಗ. ತಾ. ನಿ. 2-5-18)

3 ಯದಾ ಸ್ವರೂಪಂ ಜಾನಾತಿ ಕಾಲಪ್ರಕೃತಿವರ್ಜಿತಮ್ । ವಾಸುದೇವಪ್ರಸಾದೇನ ತದಾ ಮುಕ್ತೋ ಭವತ್ಯಸೌ -ಭವಿಷ್ಯತ್ಪುರಾಣ (ಭಾಗ. ತಾ. ನಿ. 2-9-4)

4 ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ । ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ । -ವಿ. ತ. ನಿ.

5 ಅನಾದಿಮಾಯಯಾ ವಿಷ್ಣೋರಿಚ್ಛಯಾ ಸ್ವಾಪಿತೋ ಯದಾ । ತಯಾ ಪ್ರಬೋಧಮಾಯಾತಿ ತದಾ ವಿಷ್ಣುಂ ಪ್ರಪಶ್ಯತಿ -ಪ್ರಕಾಶಿಕಾ (ಮಾಂ. ಉ. ಭಾ. 1-2-8)

ಳ 6 'ಅನ್ಯತ್ವಾತ್ ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ । .... ನಾರಾಯಣ ಇತಿ ಪ್ರೋಕ್ತೋ' ಬ್ರಹ್ಮಸಾರೇ(ಐ.ಉ ಭಾ.2-2.6.5)ಉಕ್ತ ದಿಶಾ ಸರ್ವ ವಿಲಕ್ಷಣತ್ವಾತ್ ನ।

## ಜಿಜ್ಞಾಸೆ

### [ಅಜ್ಞಾನವೇ ಅಪರಾಧ]

ಪ್ರ - ಪರಮಾತ್ಮನು ಜೀವರಿಗೆ ಸ್ಥೂಲ ಶರೀರದ ಸೃಷ್ಟಿಯನ್ನು ಮಾಡಿದ ನಂತರ ಆ ಜೀವರು ಪರಮಾತ್ಮನಿಗೆ ಅಪರಾಧವನ್ನು ಮಾಡುತ್ತಾರೆ ಜೀವರಿಗೆ ಸ್ಥೂಲಶರೀರದ ಸೃಷ್ಟಿ ಮಾಡುವದು ಜೀವರನ್ನು ಬಂಧಿಸುವದು ಎರಡು ಒಂದೇ ಆದ್ದರಿಂದ ಅಪರಾಧವನ್ನು ಮಾಡುವದು ಆನಂತರ ಬಂಧನವು ಮೊದಲು ಈ ರೀತಿಯಾದ ಪರಮಾತ್ಮನ ವ್ಯಾಪಾರವು ಯುಕ್ತವೋ?

ಉ - ಪರಮಾತ್ಮನ ಸ್ವಾತಂತ್ರ್ಯದ ಅಜ್ಞಾನವು ಅನಾದಿಯಾಗಿ ಇದೆ. ಇದು ಅಪರಾಧವಲ್ಲವೇ? ಈ ಅಪರಾಧದಿಂದಾಗಿ ಜೀವರಿಗೆ ಸ್ಥೂಲ ಶರೀರರೂಪ ಬಂಧನವನ್ನು ಪರಮಾತ್ಮನು ಕೊಡುತ್ತಾನೆ.

ಪ್ರ - ಋಜುಗಣದ ಜೀವರಿಗೆ ಪರಮಾತ್ಮನು ಸ್ವತಂತ್ರ ಎಂದು ಅನಾದಿಕಾಲದಿಂದ ಜ್ಞಾನವು ಇದೆ ಅವರಿಗೆ ಪರಮಾತ್ಮನು ಅಸ್ವತಂತ್ರ ಎಂಬ ಅಜ್ಞಾನವು ಎಂದೂ ಇಲ್ಲ ಆದರೂ ಅವರಿಗೆ ಬಂಧವು ಹೇಗೆ ಇದೆ?

ಉ – ಬ್ರಹ್ಮದೇವರು ತಮ್ಮ ನೂರು ವರ್ಷ ಮುಗಿಯುವಾಗ ಪರಮಾತ್ಮನನ್ನು ಅವರು ಎಷ್ಟು ಗುಣವುಳ್ಳವನೆಂದು ತಿಳಿಯಲಿಕ್ಕೆ ಅರ್ಹರೋ ಅಷ್ಟು ಗುಣವುಳ್ಳವನೆಂದು ಜ್ಞಾನವನ್ನು ಹೊಂದುತ್ತಾರೆ. ಪ್ರತಿಯೊಬ್ಬ ಋಜು ಗಣಸ್ಥರು ತಮಗೆ ಬ್ರಹ್ಮಪದವು ಬಂದ ನಂತರ ಅದು ಮುಗಿಯುವವರೆಗೂ ತಮಗೆ ಯೋಗ್ಯವಾದ ಜ್ಞಾನವನ್ನು ಹೊಂದುವದಿಲ್ಲ. ಈ ಅಜ್ಞಾನವೆಂಬ ಅಪರಾಧದಿಂದ ಅವರಿಗೆ ಬಂಧವು ಇರುತ್ತದೆ.



೩೧೩ ವೃಷಃ

೧ ಭಕ್ತರ ಅಭೀಷ್ಟವನ್ನು ಸುರಿಸುವವನು[1]

೨ ಶ್ರೇಷ್ಠನಾಗಿರುವವನು[2]

---

ಜುಹೋತಿ ದದಾತಿ ಇತಿ ವಾ ಸರ್ವಂ ಆತ್ಮೀಯತಯಾऽऽದದಾತೀತಿ ವಾ ಹುಃ 'ಹೂ ದಾನಾದನಯೋಃ'। '.. ಷಕಾರಃ ಪ್ರಾಣ ಆತ್ಮಾ. ' (ಐ. ಉ. 2-8-7-3) ಇತ್ಯುಕ್ತ-ದಿಶಾ ಪ್ರಾಣತ್ವಾದಾತತತ್ವಾಚ್ಚ ಷಃ ।

೧ 1 ಭಕ್ತೇಷ್ಟವರ್ಷಣಾದ್ ವೃಷಃ ।

೨ 2 ' . ಶ್ರೇಷ್ಠಶ್ಚ ಧರ್ಮಶ್ಚ ವೃಷ ಉಚ್ಯತೇ' (ಮ ಭಾರ. ಶಾಂತಿ. 352-24) ಇತಿ ಮಹಾಭಾರತೇ, ' .ಶ್ರೇಷ್ಠೇ ಸುಕೃತೇ ವೃಷಭೇ ವೃಷ ಉಚ್ಯತೇ' ಇತ್ಯಮರಕೋಶೇ।

ಸತ್ಯವ್ರತರಾಜನು ಮತ್ಸ್ಯರೂಪಿ ಭಗವಂತನಲ್ಲಿ—ನೀನು ಸರ್ವಲೋಕದ ಒಡೆಯು, ಅಭೀಷ್ಟ ಸಿದ್ಧಿಯನ್ನು ನಿಯಮಿಸುವವನೆಂದು ನಿವೇದಿಸಿಕೊಂಡಿರುವನು.[1] ಭಕ್ತರ ಕಾಮನೆಗಳನ್ನು ಸುರಿಸುವ ಪ್ರಯುಕ್ತ ಭಗವಂತನು 'ವೃಷ' ಎನಿಸಿರುವನೆಂದು ಬೃಹತ್ಸಂಹಿತೆ ತಿಳಿಸಿದೆ[2] ಋಗ್ವೇದದಲ್ಲಿ ಇಂದ್ರ ನಾಮಕ ಭಗವಂತನನ್ನು ಅಭೀಷ್ಟವನ್ನು ಸುರಿಸುವವನು ಅಥವಾ ಶ್ರೇಷ್ಠನಾಗಿರುವನು ಎಂಬ ಅರ್ಥದಲ್ಲಿ 'ವೃಷನ್' ಎಂದು ಸಂಬೋಧಿಸಿ, ನಮ್ಮ ಮೋಕ್ಷದಲ್ಲಿಯು ಆನಂದವನ್ನು ಅಭಿವ್ಯಕ್ತ ಗೊಳಿಸಲು ಪ್ರಾರ್ಥಿಸಿಕೊಳ್ಳಲಾಗಿದೆ[3]

ಹೀಗೆ ಎಲ್ಲರಿಗೂ ಅಭೀಷ್ಟವನ್ನು ಸುರಿಸುವ ಭಗವಂತನು ತನ್ನ ಭಕ್ತರಿಗೆ ವಿಶೇಷವಾಗಿ ಅಭೀಷ್ಟಗಳನ್ನು ನೀಡುವನು

೩ ಮಳೆ ಸುರಿಸುವವನು[4]

ಮೇಘಮಂಡಲದಲ್ಲಿದ್ದು ಮಳೆಯನ್ನು ನೀಡುವವನೂ, ಹಿಂತೆಗೆದುಕೊಳ್ಳುವವನೂ ತಾನೇ ಎಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು[5]

೪ ಕಾಮನೆಗಳನ್ನು ನೀಡುವ ಪ್ರಯುಕ್ತ 'ವೃಷ' ಎನಿಸುವ ಧರ್ಮಕ್ಕೆ ನಿಯಾಮಕ ನಾಗಿರುವವನು.[6]

---

1 'ತ್ವಂ ಸರ್ವಲೋಕಸ್ಯ . ಈಶ್ವರೋ ಹ್ಯಾತ್ಮಾ ಅಭೀಷ್ಟಸಿದ್ಧಿಃ'
-ಭಾಗ. 8 24.5।

'ವರ್ಷಣಾದ್ ವೃಷ ಉದ್ದಿಷ್ಟಃ '
—ಬೃಹತ್ಸಂಹಿತಾ (ಐ ಉ. ಭಾ. 2–1-2–12)

3 ಸ ನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾವೃಧಿ ।
- ಋ. ವೇ. 7.6

೩ 4 ಅಸ್ಮದೀಯಂ ಚರುಂ ಭೋಜ್ಯಮಾನಂದಂ ತ್ವಮಪಾವೃಣು । . ನೋ ವೃಷನ್ ।
ಋ ವೇ ಭಾ.

* ಹೇ ವೃಷನ್ ವರ್ಷಿತಃ ಶ್ರೇಷ್ಠ ವಾ । -ಋ. ವೇ ಭಾ ಟೀ.

5 .. . ಅಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
-ಗೀ. 9-19

೪ 6 'ವಿಶ್ವಸ್ಯ ತದಧೀನತ್ವಾತ್ ವಿಶ್ವಂ ವಿಷ್ಣುರುದೀರ್ಯತೇ' ಇತ್ಯಾಗ್ನೇಯೇ (ಭಾಗ ತಾ. ನಿ. 10-15-41) ಯಥಾ ವಿಶ್ವಸ್ವಾಮಿತ್ವಾತ್ ವಿಷ್ಣೋಃ ವಿಶ್ವಾಭಿಧೇಯತ್ವಮುಪ ಪಾದಿತಂ ತಥಾ ವೃಷಸ್ಯ ಭಗವದಧೀನತ್ವಾತ್ ಭಗವಾನ್ ವೃಷ ಇತ್ಯಭಿಧೀಯತೇ ।

ಭಗವಂತನು ಧರ್ಮದ ಸ್ವರೂಪವನ್ನು ಸಂಯೋಜಿಸುವನು[1] ಧರ್ಮವು 'ವೃಷ' ಎಂದು ಲೋಕಗಳಲ್ಲಿ ಪ್ರಸಿದ್ಧವಾಗಿದೆ ಎಂದ ಶ್ರೀಕೃಷ್ಣನು ತನ್ನನ್ನೂ 'ವೃಷ' ಎಂದು ತಿಳಿ—ಎನ್ನುವುದರ ಮೂಲಕ ತಾನು ಧರ್ಮಕ್ಕೆ ಒಡೆಯನಾಗಿರುವ ಪ್ರಯುಕ್ತ ವೃಷ ಎನಿಸುವವನೆಂಬುದಾಗಿ ಸೂಚಿಸಿರುವನು.[2]

೫ ಸಮಗ್ರೈಶ್ವರ್ಯಾದಿ ಆರು ಗುಣಗಳನ್ನು ಯಾವಾಗಲೂ ಸ್ವೀಕರಿಸಿರುವವನು.[3]

ಮುಖ್ಯವಾಗಿ 'ಭಗವಾನ್' ಎನಿಸಿರುವ[4] ಪರಮಾತ್ಮನಲ್ಲಿ ಈ ಆರು ಗುಣಗಳೂ ಸರ್ವದಾ ಇರುವುದು

೬ ಪ್ರೇರಕತ್ವ ಹಾಗೂ ಅಂತರ್ಯಾಮಿತ್ವವನ್ನು ಯಾವಾಗಲೂ ಹೊಂದಿರುವವನು.[5]

## ಜಿಜ್ಞಾಸೆ

[ಸಜ್ಜನರೇ ಭಗವದ್ಭಕ್ತರು]

ಪ್ರ - ಪರಮಾತ್ಮನು ತನ್ನ ಭಕ್ತರಿಗೆ ಅಭೀಷ್ಟಗಳ ವರ್ಷಣವನ್ನು ಮಾಡುತ್ತಾನೆಂಬುದು ಪರಮಾತ್ಮನ ಗುಣವಾಗಬಹುದೇ? ಲೋಕದಲ್ಲಿ ಎಲ್ಲರೂ ತಮಗೆ ಬೇಕಾದವರಿಗೆ ಅಭೀಷ್ಟಗಳನ್ನು ಕೊಡುತ್ತಾರೆ ಪರಮಾತ್ಮನು ಎಲ್ಲರಂತೆ ಆದನು. ಪರಮಾತ್ಮನಿಗೆ ಇದರಿಂದ ಉತ್ಕರ್ಷವು ಸಿದ್ಧಿಸುಸುವದಿಲ್ಲ.

---

1 ..ಭಗವಾನ್ ಧರ್ಮರೂಪಧೃಕ್ । -ಭಾಗ. 2-10-42

ಧರ್ಮರೂಪಧೃಕ್ ಧರ್ಮಸ್ವರೂಪಸಂಪಾದಕಃ । -ಯಾ. ಟೀ. (ಭಾಗ. ಟಿ.)

2 ವೃಷೋ ಹಿ ಭಗವಾನ್ ಧರ್ಮಃ ಖ್ಯಾತೋ ಲೋಕೇಷು ಭಾರತ । ನೈಘಂಟುಕಪದಾಖ್ಯಾನೇ ವಿದ್ಧಿ ಮಾಂ ವೃಷಮುತ್ತಮಮ್ ॥

-ಮ. ಭಾರ. ಶಾಂತಿ. 343-88

೫ 3 ವೃತಾಃ ಷಾಃ ಷಡ್ಗುಣಾಃ ಯೇನ ಸಃ ವೃಷಃ । -ವಾ. ರಾ.

4 ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ।

-ಭಾಗ 1-2-11

೬ 5 'ಷಕಾರಃ ಸ್ಪ್ರಾಣ ಆತ್ಮಾ' ಇತಿ ಐತರೇಯೋಪನಿಷದುಕ್ತರೀತ್ಯಾ ವೃತಃ ಷಃ ಯೇನ ಸಃ।

ಉ – ಪರಮಾತ್ಮನ ಭಕ್ತರು ಸಜ್ಜನರೇ ಆಗಿರುತ್ತಾರೆ. ಪರಮಾತ್ಮನ ಭಕ್ತರು ಪರಮಾತ್ಮನ ಪ್ರೀತಿಗಾಗಿ ಲೋಕೋಪಕಾರವನ್ನೇ ಮಾಡುತ್ತಾ ಇರುತ್ತಾರೆ ಕೇವಲ ಸ್ವಾರ್ಥಿಗಳು ಕೆಲವರು ಪರಮಾತ್ಮನ ಭಕ್ತರಂತೆ ತೋರಿದರೂ ಅವರು ನಿಜವಾಗಿ ಪರಮಾತ್ಮನ ಭಕ್ತರು ಅಲ್ಲ. ಪರಮಾತ್ಮನ ನಿಜವಾದ ಭಕ್ತರಿಗೆ ಭಗವಂತನು ಅಭೀಷ್ಟಗಳನ್ನು ಕೊಡುತ್ತಾ ಇರಲಿ ಎಂದು ಎಲ್ಲರಿಗೂ ಅಪೇಕ್ಷೆಯು ಇದೆ. ಆದ್ದರಿಂದ ಪರಮಾತ್ಮನ ಭಕ್ತರಿಗೆ ಪರಮಾತ್ಮನು ಅಭೀಷ್ಟಗಳ ವರ್ಷಣ ಮಾಡುವದು ಬಹು ಜನರ ಇಷ್ಟಾರ್ಥವಾದ್ದರಿಂದ ಇದು ಲೋಕದ ಸಾಮಾನ್ಯ ಜನರು ಮಾಡುವದಕ್ಕೆ ಸಮಾನವಲ್ಲ ಇದು ಪರಮಾತ್ಮನಲ್ಲಿ ಉತ್ಕರ್ಷವನ್ನು ಸಾಧಿಸುತ್ತದೆ



## ೪೧೪ ಕ್ರೋಧಹಾ

### ೧ ಕ್ರೋಧವನ್ನು ಪರಿಹರಿಸುವವನು[1]

ಕ್ರೋಧವು ಪ್ರಕೃತಿಯ ರಜೋಗುಣದಿಂದ ಉಂಟಾಗುವಂತಹದ್ದು[2]. ರಜೋಗುಣದಿಂದ ಕ್ರೋಧವು ಉಂಟಾಗುವಂತೆ ಕ್ರೋಧಾಭಿಮಾನಿ ಅಸುರನು ಪ್ರೇರಿಸುವನು,[3] ಈ ಅಸುರನು ಅವಾಂತರ ಪ್ರೇರಕನಷ್ಟೇ ಆಗಿದ್ದು ಪ್ರಧಾನಪ್ರೇರಕನು ಭಗವಂತನೇ ಆಗಿರುವನು[4] ಈ ಅಭಿಪ್ರಾಯದಲ್ಲೇ ರಜೋಗುಣದಿಂದ ಹುಟ್ಟುವ ಧರ್ಮಗಳೆಲ್ಲ ತನ್ನ ಪ್ರಯುಕ್ತವೇ ಉಂಟಾಗುವಂತಹವು ಎಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[5]

---

೧ 1 ಕ್ರೋಧಂ ಹಂತಿ ಪರಿಹರತೀತಿ ಕ್ರೋಧಹಾ ।

2 ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ।
–ಗೀ. 3-37

3 ಅಸುರಾ ಅಶುಭೇಷ್ವೇವ ಕಾಮಾದೇರಭಿಮಾನಿನಃ ।
–ಬ್ರಹ್ಮತರ್ಕ (ಗೀ. ತಾ. 3-37)

4 'ಅಖಿಲಪ್ರೇರಕೋ ವಿಷ್ಣುಃ...ತದವಾಂತರಾಃ । ಅಸುರಾಃ . '
–ಬ್ರಹ್ಮತರ್ಕ (ಗೀ. ತಾ. 3-37)

5 ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।
ಮತ್ತ ಏವೇತಿ ತಾನ್ ವಿದ್ಧಿ... ॥ –ಗೀ. 7-12

ಹೀಗೆ ಕ್ರೋಧವು ಭಗವಂತನಿಂದಲೇ ಉಂಟಾಗುವುದೆಂದ ಮೇಲೆ ಅದನ್ನು ಪರಿಹರಿಸುವವನೂ ಅವನೇ ತನ್ನ ಭಕ್ತರ, ಸಜ್ಜನರ ಕ್ರೋಧವನ್ನಂತೂ ವಿಶೇಷವಾಗಿ ಪರಿಹರಿಸುವನು.[1]

೨ ತನ್ನ ಕ್ರೋಧವನ್ನು ತಾನೇ ಉಪಶಮನಗೊಳಿಸುವವನು[2]

ಭಗವಂತನಿಗೆ ಪ್ರಾಕೃತ ಕ್ರೋಧಾದಿಗಳು ಇಲ್ಲ[3] ಆದರೆ ಕ್ಷಮಾಗುಣಾತ್ಮಕವಾದ ಕ್ರೋಧವಿದೆ[4] ಇದನ್ನು ಭಕ್ತರ ಉದ್ಧಾರಕ್ಕಾಗಿ ಅವತಾರಗಳಲ್ಲಿ ಆಗಾಗ್ಗೆ ವ್ಯಕ್ತಪಡಿಸುವನು[5] ಸಂಹಾರಕಾಲದಲ್ಲೂ ವ್ಯಕ್ತಪಡಿಸುವನು 'ಜಿತಕ್ರೋಧ' 'ಜಿತಮನ್ಯು'[6] ಎನಿಸುವ ಅವನು ತನ್ನ ಉದ್ದೇಶವು ಈಡೇರಿದಾಕ್ಷಣ ತನ್ನ ಕ್ರೋಧವನ್ನು ತಾನೇ ಉಪಸಂಹರಿಸಿಕೊಳ್ಳುವನು[7]

೩ ಕ್ರೋಧದಲ್ಲಿ ಅಂತರ್ಯಾಮಿಯಾಗಿ ಪ್ರವೇಶಿಸಿರುವವನು[8]

ಸರ್ವಪದಾರ್ಥಗಳ ಸ್ವಭಾವವೂ ಭಗವಂತನಿಂದಲೇ ನಿಯಮಿಸಲ್ಪಡುವುದರಿಂದ[9] ಕ್ರೋಧದ

---

1 ಸಾಧೂನಾಂ ಕ್ರೋಧಂ ಹಂತೀತಿ ಕ್ರೋಧಹಾ । -ವಿ. ರಾ.

೨ 2 ಕ್ರೋಧಂ ಆತ್ಮಕ್ರೋಧಂ ಹಂತಿ ಉಪಶಮಯತೀತಿ ಕ್ರೋಧಹಾ ।

3 ಕುತೋ ನು ತದ್ಧೇತವ ಈಶ ಮನ್ಯುಲೋಭಾದಯೋ ಯೇಽಬುಧಲಿಂಗಭಾವಾಃ।
ಭಾಗ. 10-24-5

4 ಕ್ರೋಧಃ ಕ್ಷಮಾತ್ಮಕೋ ಯಸ್ಯ ಚಿದಾನಂದಾತ್ಮಕಸ್ತಥಾ । ಅನ್ಯಕ್ರೋಧಸಮಃ ಕ್ರೋಧಸ್ತಸ್ಯ ವಿಷ್ಣೋಃ ಕಥಂ ಭವೇತ್ । -ಮಹಾಮೀಮಾಂಸಾ (ಬೃ. ಉ. ಭಾ 6-4-5)

5 '. ಕ್ರೋಧೋಽಪಿ ತೇಽನುಗ್ರಹ ಏವ ಸಮ್ಮತಃ' (ಭಾಗ 10-15-34) ಇತಿ ಕಾಲೀಯನಾಗಪತ್ನೀಭಿಃ ಯಥಾ ಸ್ತುತಃ ।

6 'ಜಿತಕ್ರೋಧಃ (ವಿ ಸ ನಾ. ೪೩೨) ಜಿತಮನ್ಯುಃ (ವಿ. ಸ ನಾ ೯೩೪)

7 ನೃಸಿಂಹಾವತಾರಾದೌ ಏತತ್ ಸ್ಪಷ್ಟೀಕೃತಮ್ ।

೩ 8 ಕ್ರೋಧಂ ಹಂತಿ ಅಂತರ್ಯಾಮಿತಯಾ ಗಚ್ಛತಿ, ಪ್ರವಿಶತೀತಿ ಯಾವತ್ ಕ್ರೋಧಹಾ 'ಹನ ಹಿಂಸಾಗತ್ಯೋಃ'

9 'ಸರ್ವಸ್ವಭಾವೋ ನಿಯತಸ್ತೇನೈವ ಕಿಮತಃ ಪರಮ್'
-ಗೀ. ಭಾ 7-11

ಸ್ವಭಾವವೂ ಅವನಿಂದಲೇ ನಿಯತ. ಭಗವಂತನು ಕ್ರೋಧದಲ್ಲಿ ಅಂತರ್ಯಾಮಿಯಾಗಿದ್ದು[1] ಅದನ್ನು ಪ್ರೇರಿಸುತ್ತಿರುವನು.

೨ ಕ್ರೋಧಸ್ವರೂಪಿಗಳಾದ ದೈತ್ಯರನ್ನು ಸಂಹರಿಸುವವನು.[2]

ಉತ್ತಮ ಜೀವಾತ್ಮರು ಗುಣಸ್ವರೂಪಿಗಳಾಗಿರುವಂತೆ ದುಷ್ಟರು ದೋಷಸ್ವರೂಪಿಗಳಾಗಿರುವ ಪ್ರಯುಕ್ತ ದೈತ್ಯರು ದೋಷ ಪ್ರಮುಖ ಕ್ರೋಧಸ್ವರೂಪಿಗಳೆನಿಸಿರುವರು[3] ಅಂತಹ ದೈತ್ಯರನ್ನು ಭಗವಂತನೇ ಸಂಹರಿಸುವನು.

೩ ಕ್ರೋಧ ಎನಿಸುವ ರುದ್ರದೇವನನ್ನು (ಸಂಹಾರಕಾಲದಲ್ಲಿ) ಸಂಹರಿಸುವವನು.[4]

ರುದ್ರನು ಕ್ರೋಧಕ್ಕೊಳಗಾದ ಚತುರ್ಮುಖನಿಂದ ಹುಟ್ಟಿಕೊಂಡವನು.[5] ಅವನಿಗೆ ನೀಡಲಾದ ಹೆಸರುಗಳಲ್ಲಿ ಮೊದಲ ಹೆಸರೇ 'ಮನ್ಯು' ಎಂಬುದಾಗಿ[6] ಇಂತಹ ರುದ್ರದೇವನೂ ಪ್ರಲಯಕಾಲದಲ್ಲಿ

---

1 ಯೇ ಚ ಜೀವಾಃ ಪರೇ ಸರ್ವೇ ನಿಯಂತಾ ವಿಷ್ಣುರೇವ ಹಿ । ಜೀವಾನಾಂ ನಿಯಮೋಽತ್ರ-ಜೀವಂ ಶಿವಂ ಪಾಚ್ಯಮಿತಿ ಶ್ರುತಿಃ । ಪೃಥಕ್ ತನ್ನಿಯಮಂ ನೈಷಾ ವಕ್ತಿ ಸಿದ್ಧತ್ವತಃ ಸ್ವತಃ । -ಮಹಾಮೀಮಾಂಸಾ (ಬೃ. ಉ. ಭಾ 5-8-23)

೨ 2 ಕ್ರೋಧಸ್ವರೂಪಾನ್ ದೈತ್ಯಾನ್ ಹಂತೀತಿ ಕ್ರೋಧಹಾ ।
-ಸ ಸಂ.

3 'ಅಜ್ಞಾನಾದಿಸ್ವರೂಪಸ್ತು ಕಲಿರ್ದುರ್ಯೋಧನಃ ಸ್ಮೃತಃ । ವಿಪರೀತಂ ತು ಯದ್-ಜ್ಞಾನಂ ದುಃಶಾಸನ ಇತೀರಿತಃ ॥ ನಾಸ್ತಿಕ್ಯಂ ಶಕುನಿರ್ನಾಮ ಸರ್ವದೋಷಾತ್ಮಕಾಃ ಪರೇ । ಧಾರ್ತರಾಷ್ಟ್ರಾಃ .' -ಮ. ಭಾರ. ತಾ. ನಿ. 2-148,149

೩ 4 ಕ್ರೋಧಂ ಕ್ರೋಧನಾಮಕಂ ರುದ್ರಂ ಹಂತೀತಿ ಕ್ರೋಧಹಾ ।

5 ಕ್ರೋಧಂ ದುರ್ವಿಷಹಂ ಜಾತಂ ನಿಯಂತುಮುಪಚಕ್ರಮೇ ।
ಧಿಯಾ ನಿಗೃಹ್ಯಮಾಣೋಽಪಿ ಭ್ರುವೋರ್ಮಧ್ಯಾತ್ಪ್ರಜಾಪತೇಃ ॥
ಸದ್ಯೋಽಜಾಯತ ತನ್ಮನ್ಯುಃ ಕುಮಾರೋ ನೀಲಲೋಹಿತಃ ।
-ಭಾಗ 3-12-6,7

6 ಮನ್ಯುರ್ಮನುರ್ಮಹಿನಸೋ ..ಗೃಹಾಣೈತಾನಿ ನಾಮಾನಿ .
-ಭಾಗ. 3-12-12,14

ನೃಸಿಂಹನಿಂದ ಭಸ್ಮನಾಗುವನು.[1]

೬ (ಭೀಮಸೇನನ) ಮೂಲಕ ಕ್ರೋಧವಶ ಎಂಬ ಅಸುರನನ್ನು ಸಂಹರಿಸಿದವನು[2]

ವನವಾಸದ ಅವಧಿಯಲ್ಲಿ ದ್ರೌಪದೀದೇವಿಯ ಅಪೇಕ್ಷೆಯಂತೆ ಸೌಗಂಧಿಕ ಪುಷ್ಪವನ್ನು ತರಲು ಮೇರುವಿನ ಶಿಖರದಲ್ಲಿ ಇರುವ ಸೌಗಂಧಿಕ ವನಕ್ಕೆ ಹೋದ ಭೀಮಸೇನನು, ಅಲ್ಲಿ ಮಣಿಮಂತನೆ ಪ್ರಮುಖನಾಗಿ ಉಳ್ಳ ಕ್ರೋಧವಶ ಎಂಬ ರಾಕ್ಷಸರನ್ನು ಸಂಹರಿಸಿರುವನು[3] ಭೀಮನ ಮೂಲಕ ನಡೆದ ಈ ಸಂಹಾರ ಭಗವಂತನಿಂದಲೇ ನೆರವೇರಿರುವಂತಹದ್ದು[4]

---

1 ಯುದ್ಧ್ರೋಷೋತ್ಕಟದಕ್ಷನೇತ್ರಕುಟಿಲಭ್ರಾಂತೋತ್ಥಿತಾಗ್ನಿಸ್ಫುರತ್ ಖದ್ಯೋತೋಪಮವಿಸ್ಫುಲಿಂಗಭಸಿತಾಃ ಬ್ರಹ್ಮೇಶಶಕ್ರೋತ್ಕರಾಃ ॥

-ನ. ಸ್ತು

೬ 2 ಕ್ರೋಧಾನ್ ಭೀಮದ್ವಾರಾ ಕ್ರೋಧವಶಾಖ್ಯಾನ್ ಅಸುರಾನ್ ಹಂತಿ ಸಂಹರತೀತಿ ಕ್ರೋಧಹಾ । 'ನಾಮನಿರ್ದೇಶೇ ನಾಮೈಕದೇಶನಿರ್ದೇಶ' ಇತಿ ಕ್ರೋಧವಶಾಃ ಕ್ರೋಧೇತಿ ನಾಮೈಕದೇಶೇನ ನಿರ್ದಿಷ್ಟಾಃ ।

3 ಅಗ್ರೇ ನಿದಾಘೇ ಮಣಿಮಂತಮಜೇಯಮುಗ್ರಂ ಶಂಭೋರ್ವರಾದ್ವಿವಿಧಶಸ್ತ್ರಮಹಾಸ್ತ್ರವೃಷ್ಟ್ಯಾ । ತಾನ್ ಸರ್ವರಾಕ್ಷಸಗಣಾನ್ ಮಣಿಮತ್ಸಮೇತಾನ್ ಭೀಮೋ ಜಘಾನ ಸಪದಿ ಪ್ರವರೈಃ ಶರೌಘೈಃ । ಅವಧ್ಯಾಂಸ್ತಾನ್ ಕ್ಷಣೇನೈವ ಹತ್ವಾ ಭೀಮೋ ಮಹಾಬಲಃ । ರಣೇ ಕ್ರೋಧವಶಾನ್ ಸರ್ವಾನತಿಷ್ಠದ್ಗಿರಿಮೂರ್ಧನಿ'

—ಮ ಭಾ ತಾ. ನಿ. 22-319,320

4 ಯೇ ವಾ ಮೃಧೇ ಸಮಿತಿಶಾಲಿನ ಆತ್ತಚಾಪಾಃ ಕಾಂಬೋಜಮತ್ಸ್ಯಕುರುಸೃಂಜಯಕೈಕಯಾದ್ಯಾಃ ಯಾಸ್ಯಂತ್ಯದರ್ಶನಮಲಂ ಬಲಭೀಮಪಾರ್ಥವ್ಯಾಜಾಹ್ವಯೇನ ಹರಿಣಾ ನಿಲಯಂ ತದೀಯಮ್' (ಭಾಗ. 2-7 35) ಇತಿ ಚತುರ್ಮುಖೋಪದಿಷ್ಟದಿಶಾ ಭೀಮೇನ ನಿಹತಾ ಅಪಿ ಕ್ರೋಧವಶಾಃ ಭೀಮ ವ್ಯಾಜಾಹ್ವಯೇನ ಹರಿಣೈವ ನಿಹತಾ ಇತಿ ಸಿದ್ಧಮ್ ।

## ಜಿಜ್ಞಾಸೆ

### [ದೋಷರೂಪವಾದ ಕ್ರೋಧದ ನಾಶ]

ಪ್ರ – ಭಗವದ್ಭಕ್ತರಾದ ಸನ್ಯಾಸಿಗಳು 'ಅಹಂ ಬ್ರಹ್ಮಾಸ್ಮಿ' ಎಂದು ಹೇಳುವವರ ಮೇಲೆ ಸಿಟ್ಟನ್ನು ಮಾಡಬೇಕೋ? ಮಾಡಬಾರದೋ? ಸಿಟ್ಟುಮಾಡದೆ ಇದ್ದರೆ ಅದ್ವೈತ ಖಂಡನೆಯನ್ನು ಹೇಗೆ ಮಾಡುವದು? ಅದ್ವೈತ ಖಂಡನೆಯನ್ನು ಮಾಡದೇ ಇರುವದು 'ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ' ಎಂಬ ಶ್ರುತಿವಿರುದ್ಧವಾಗಿದೆ ಮಿಥ್ಯಾಜ್ಞಾನವನ್ನು ಖಂಡಿಸದೆ ತತ್ತ್ವಜ್ಞಾನದಲ್ಲಿಯೇ ಆಸಕ್ತರಾದವರು ಮಿಥ್ಯಾಜ್ಞಾನಿಗಳು ಹೊಂದುವ ತಮಸ್ಸಿಗಿಂತ ಅಧಿಕವಾದ ತಮಸ್ಸನ್ನು ಹೊಂದುತ್ತಾರೆ ಎಂದು ಆ ಶ್ರುತಿಯು ಹೇಳುತ್ತದೆ ಅದ್ವೈತ ಖಂಡನೆಗಾಗಿ ಸನ್ಯಾಸಿಗಳೂ ಕ್ರೋಧವನ್ನು ಮಾಡಬೇಕು ಎಂದು ಹೇಳುವದಾದರೆ ಕ್ರೋಧಹಾ ಎಂಬ ನಾಮದಿಂದ ಪರಮಾತ್ಮನು ಕ್ರೋಧವನ್ನು ನಾಶಮಾಡುತ್ತಾನೆಂದು ಹೇಳಿದ್ದರಿಂದ ಸನ್ಯಾಸಿಗಳ ಕ್ರೋಧವನ್ನು ಪರಮಾತ್ಮನು ನಾಶಮಾಡಿದರೆ ಅದ್ವೈತ ಖಂಡನವನ್ನು ಮಾಡುವದು ಹೇಗೆ?

ಉ - ಪರಮಾತ್ಮನು ದೋಷರೂಪವಾದ ಕ್ರೋಧವನ್ನು ಮಾತ್ರ ನಾಶಮಾಡುತ್ತಾನೆಂದು ಕ್ರೋಧಹಾ ನಾಮದ ಅರ್ಥ. ಸನ್ಯಾಸಿಗಳು ಪರಮತ ಖಂಡನಾರ್ಥವಾಗಿ ಸಿಟ್ಟು ಮಾಡುವದು ಗುಣವಾದ್ದರಿಂದ ಇದನ್ನು ನಾಶಮಾಡುವದಿಲ್ಲ.



### ೩೧೫ ಕ್ರೋಧಕೃತ್

೧ (ಚಿದಾನಂದಾತ್ಮಕವಾದ) ತನ್ನ ಕ್ರೋಧವನ್ನು ಅಭಿವ್ಯಕ್ತೀಕರಿಸುವವನು.[1]

'ತ್ರೈಗುಣ್ಯವರ್ಜಿತ'ನಾದ ಭಗವಂತನಲ್ಲಿ ರಜೋಗುಣದ ಪರಿಣಾಮವಾದ ಕ್ರೋಧವಿಲ್ಲದಿದ್ದರೂ ಕ್ಷಮಾರೂಪವಾದ ಚಿದಾನಂದಾತ್ಮಕವಾದ ಕ್ರೋಧವಿದೆ[2] ಸರ್ವದುಷ್ಟರಿಗೆ ವಿರೋಧಿಯಾಗಿದ್ದು

---

೧ 1 ಕ್ರೋಧಂ ಚಿದಾನಂದಾತ್ಮಕಂ ಸ್ವಕೋಪಂ ಕರೋತಿ ಉತ್ಪಾದಯತಿ ಅಭಿವ್ಯನಕ್ತೀತಿ ಯಾವತ್, ಕ್ರೋಧಕೃತ್ ।

2 ಕ್ರೋಧಃ ಕ್ಷಮಾತ್ಮಕೋ ಯಸ್ಯ ಚಿದಾನಂದಾತ್ಮಕಸ್ತಥಾ ।
ಅನ್ಯಕ್ರೋಧಸಮಃ ಕ್ರೋಧಸ್ತಸ್ಯ ವಿಷ್ಣೋಃ ಕಥಂ ಭವೇತ್ ।
-ಮಹಾಮೀಮಾಂಸಾ (ಬೃ. ಉ. ಭಾ. 6 4-5)

'ಕ್ರೋಧಮಯ' ಎಂದೇ ಎನಿಸುವ ಭಗವಂತನು,[1] ತನ್ನ ಕ್ರೋಧವನ್ನು ಹೆಚ್ಚಾಗಿ ದುಷ್ಟರ ಮೇಲೆ ಅಭಿವ್ಯಕ್ತೀಕರಿಸುವನು ಅನುಗ್ರಹಿಸುವ ದೃಷ್ಟಿಯಿಂದ ಕೆಲವೊಮ್ಮೆ ತನ್ನ ಭಕ್ತರ ಮೇಲೆಯೂ ಕ್ರೋಧವನ್ನು ತೋರಿಸುವನು.[2] ಪ್ರಲಯಕಾಲದಲ್ಲಿ ನೃಸಿಂಹರೂಪಿ ಭಗವಂತನು ಚತುರ್ಮುಖ, ರುದ್ರ, ಇಂದ್ರಾದಿಗಳ ಮೇಲೂ ತನ್ನ ಕ್ರೋಧವನ್ನು ತೋರಿಸುವನು ಆದುದರಿಂದಲೇ ಅಂತಹ ಕ್ರೋಧದಿಂದಾಗಿ ತೀಕ್ಷ್ಣವಾದ ಬಲಗಣ್ಣಿನ ತುದಿಭಾಗದಿಂದ ಹೊರಡುವ ಅಗ್ನಿ ಕಿಡಿಗಳಿಂದ ಬ್ರಹ್ಮಾದಿಗಳೂ ಭಸ್ಮರಾಗುವರೆಂದು ನಖಸ್ತುತಿಯಲ್ಲಿ ಶ್ರೀಪಾದಾಚಾರ್ಯರು ಸ್ತುತಿಸಿರುವರು.[3]

೨ (ಪ್ರಕೃತಿಗುಣದ ಮೂಲಕ) ಕ್ರೋಧವನ್ನು ಉಂಟುಮಾಡುವವನು[4]

೩ ಕ್ರೋಧವನ್ನು ಉಪಶಮನಗೊಳಿಸುವವನು.[5]

ರಜೋಗುಣದಿಂದ ಉಂಟಾಗುವ[6] ಕ್ರೋಧಕ್ಕೆ ಪ್ರಕೃತಿಪ್ರೇರಕನಾದ ಭಗವಂತನೇ ಮುಖ್ಯ

---

1 'ಸ ವಾ ಅಯಮಾತ್ಮಾ ಬ್ರಹ್ಮ ಕ್ರೋಧಮಯಃ '
-ಬೃ. ಉ 6-4-5

ಸರ್ವದುಷ್ಟಪ್ರತೀಪತ್ವಾತ್ ಸ ಹಿ ಕ್ರೋಧಮಯೋ ಮತಃ ।
-ಮಹಾಮೀಮಾಂಸಾ (ಬೃ. ಉ. ಭಾ.)

2 '... ಕ್ರೋಧೋಽಪಿ ತೇಽನುಗ್ರಹ ಏವ ಸಮ್ಮತಃ' (ಭಾಗ. 10-15-34) ಇತಿ ಕಾಲಿಯನಾಗಪತ್ನೀನಾಂ ಪ್ರಾರ್ಥನಸ್ಯಾಭಿಪ್ರಾಯೋಽಯಮೇವ ।

3 ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿತಾಗ್ನಿಸ್ಫುರತ್ ಖದ್ಯೋತೋಪಮವಿಸ್ಫುಲಿಂಗಭಸಿತಾಃ ಬ್ರಹ್ಮೇಶಶಕ್ರೋತ್ಕರಾಃ ।
-ನ. ಸ್ತು

೨ 4 ರಜೋಗುಣದ್ವಾರಾ ಕ್ರೋಧಂ ಕರೋತಿ ಉತ್ಪಾದಯತೀತಿ ಕ್ರೋಧಕೃತ್ ।

೩ 5 ಕ್ರೋಧಂ ಕೃಂತತಿ ಛಿನತ್ತಿ ಉಪಶಮಯತೀತಿ ಯಾವತ್, ಕ್ರೋಧಕೃತ್ । 'ಕೃತೀ ಛೇದನೇ'

6 ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।
-ಗೀ. 3-37

ನಾದ ಪ್ರೇರಕನು.[1] ಆದುದರಿಂದ ಮುಖ್ಯವಾಗಿ ಕ್ರೋಧವನ್ನು ಉತ್ಪಾದಿಸುವವನೂ, ಉಪಶಮನ ಗೊಳಿಸುವವನೂ ಭಗವಂತನೇ

ಭಗವಂತನು ರಜೋಗುಣದ ಪ್ರಭಾವವನ್ನು ಕುಗ್ಗಿಸುವುದರ ಮೂಲಕ ಕ್ರೋಧವನ್ನು ಶಮನ ಗೊಳಿಸುವುದಲ್ಲದೆ, ಶಾಸ್ತ್ರದಲ್ಲಿ ಕ್ರೋಧದ ದುಷ್ಪರಿಣಾಮಗಳನ್ನು ವಿವರಿಸಿ, ಆದುದರಿಂದ ಅದನ್ನು ತ್ಯಜಿಸಬೇಕೆಂದು ಉಪದೇಶಿಸುವುದರ ಮೂಲಕವೂ ಕ್ರೋಧವನ್ನು ತ್ಯಜಿಸುವಂತೆ ಮಾಡಿರುವನು.[2]

ಳ (ಪ್ರಲಯ ಕಾಲದಲ್ಲಿ) ಕ್ರೋಧದಿಂದ ಎಲ್ಲವನ್ನೂ ಸಂಹರಿಸುವವನು.[3]

ಭಗವಂತನು ಪ್ರಲಯಕಾಲದಲ್ಲಿ ಕ್ರೋಧವನ್ನು ನಟಿಸುತ್ತ ಸರ್ವ ಸಂಹಾರವನ್ನು ನಡೆಸುವನು.

ೞ (ಪರಶುರಾಮಾವತಾರದಲ್ಲಿ) ಕ್ರೋಧದಿಂದ ಕಾರ್ತವೀರ್ಯಾರ್ಜುನನ ಸಹಸ್ರ ಬಾಹುಗಳನ್ನೂ, ತಲೆಯನ್ನೂ ಕತ್ತರಿಸಿರುವನು.[4]

ಕಾರ್ತವೀರ್ಯಾರ್ಜುನನು ಜಮದಗ್ನಿ ಋಷಿಯ ಹಸುವನ್ನು ಬಲಾತ್ಕಾರವಾಗಿ ಕೊಂಡೊಯ್ದನೆಂದು ಕೇಳಿ ಸಿಟ್ಟುಗೊಂಡ ಪರಶುರಾಮನು ಭಯಂಕರವಾದ ಪರಶುವೊಂದನ್ನು ಹಿಡಿದುಕೊಂಡು[5] ಕಾರ್ತವೀರ್ಯಾರ್ಜುನನಲ್ಲಿಗೆ ಹೋಗಿ ಆ ಖಡ್ಗದ ಮೂಲಕ ಅವನ ಸಾವಿರ

---

1 'ಅಖಿಲಪ್ರೇರಕೋ ವಿಷ್ಣುಃ...' —ಬೃಹತ್ತರ್ಕ (ಗೀ. ತಾ)

2 ಯಥಾ ಭಗವದ್ಗೀತಾಯಾಂ (16-21) 'ತ್ರಿವಿಧಂ ನರಕಸ್ಯೇದಂ ದ್ವಾರಂ ನ ಶನಮಾ- ತ್ಮನಃ । ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್' ॥

ಳ 3 ಪ್ರಲಯಕಾಲೇ ಕ್ರೋಧೇನ ಸರ್ವಂ ಕೃಂತತಿ ಸಂಹರತೀತಿ ಕ್ರೋಧಕೃತ್ ।

ೞ 4 ಪರಶುರಾಮಾವತಾರೇ ಕ್ರೋಧೇನ ಕೃಂತತಿ ಕಾರ್ತವೀರ್ಯಾರ್ಜುನಸ್ಯ ಬಾಹುಸಹಸ್ರಂ ಶಿರಶ್ಚ ಛಿನತ್ತೀತಿ ಕ್ರೋಧಕೃತ್ ।

5 ಶ್ರುತ್ವಾ ತತ್ ತಸ್ಯ ದೌರಾತ್ಮ್ಯಂ ಚುಕ್ರೋಧಾಹಿರಿವಾಹತಃ ।
ಘೋರಮಾದಾಯ ಪರಶುಂ......

—ಭಾಗ. 9-15-27,28

ತೋಳುಗಳನ್ನೂ, ತಲೆಯನ್ನೂ ಕತ್ತರಿಸಿರುವನು[1]

## ಜಿಜ್ಞಾಸೆ

[ತರ್ಕರೂಪದಿಂದ ಹೊರಟದ್ದು]

ಪ್ರ - ಬ್ರಹ್ಮಾದಿ ದೇವತೆಗಳ ಮೇಲೆ ಪರಮಾತ್ಮನಿಗೆ ಕ್ರೋಧವು ಬಂದಾಗ ಅದರಿಂದ ಅವರು ಭಸ್ಮೀಭೂತರಾಗುವರು. ಎಂದು ನರಸಿಂಹನಖಸ್ತುತಿಯಲ್ಲಿ ವರ್ಣಿತವಾಗಿದೆ. ಇದು ಹೇಗೆ? ಏನೂ ಅಪರಾಧವನ್ನು ಬ್ರಹ್ಮದೇವರು ಮಾಡುವದಿಲ್ಲ. ಅವರು ಶುದ್ಧ ಭಾಗವತ ಧರ್ಮ ನಿರತರು ಅಂತಹವರ ಮೇಲೆ ಪರಮಾತ್ಮನು ಕ್ರೋಧವನ್ನು ಮಾಡುವದು, ಪರಮಾತ್ಮನಿಗೆ ದೋಷವಾಗಲಾರದೆ?

ಉ - ನರಸಿಂಹನಖಸ್ತುತಿಯಲ್ಲಿ ಬ್ರಹ್ಮದೇವರ ಮೇಲೆ ಕ್ರೋಧವು ಬರುತ್ತದೆಂದು ಹೇಳುವ ಅಭಿಪ್ರಾಯವು ಇಲ್ಲ ತರ್ಕರೂಪದಿಂದ ಅಲ್ಲಿಯ ಮಾತನ್ನು ತಿಳಿಯಬೇಕು. ಒಂದು ವೇಳೆ ನರಸಿಂಹ ದೇವರಿಗೆ ಬ್ರಹ್ಮಾದಿಗಳ ಮೇಲೆ ಕ್ರೋಧವು ಬಂದರೆ ಬ್ರಹ್ಮಾದಿಗಳೂ ಕೂಡ ಸುಟ್ಟು ಹೋದಾರು ನರಸಿಂಹದೇವರ ಸಿಟ್ಟಿಗೆ ಅಷ್ಟು ಶಕ್ತಿಯು ಇದೆ ಎಂದು ಹೇಳುವ ಅಭಿಪ್ರಾಯದಿಂದ ನರಸಿಂಹನಖಸ್ತುತಿಯ ಮಾತು ಇದೆ.



## ೩೧೬ ಕರ್ತಾ

೧ (ಪ್ರಲಯಕಾಲದಲ್ಲಿ ಎಲ್ಲವನ್ನೂ) ಸಂಹರಿಸುವವನು[2]

---

1 ಭುಂಜಾನ್ ಕುಠಾರೇಣ ಕರೋರನೇಮಿನಾ ಚಿಚ್ಛೇದ ರಾಮಃ ಪ್ರಸಭಂ ತ್ವಹೇರಿವ ॥ ಕೃತ್ತಬಾಹೋಃ ಶಿರಸ್ತಸ್ಯ ಗಿರೇಃ ಶೃಂಗಮಿವಾಹರತ್'

-ಭಾಗ. 9-15-34,35

*  *  *

ಶಾಂಕರಭಾಷ್ಯೇ ತು 'ಕ್ರೋಧಕೃತ್ಕರ್ತಾ' ಇತ್ಯೇಕನಾಮತಯಾ ವ್ಯಾಖ್ಯಾತಮ್ ।

೧ 2 ಪ್ರಲಯೇ ಸರ್ವಂ ಕೃಣೋತಿ ಹಿನಸ್ತಿ ಸಂಹರತೀತಿ ಯಾವತ್ ಕರ್ತಾ । 'ಕೃಞ್ ಹಿಂಸಾಯಾಮ್' ।

ಕರ್ತನಾತ್ ಕರ್ತಾ । -ವಿ. ರಾ.

೨ ಸಂಸಾರಪಾಶವನ್ನು ಭೇದಿಸುವವನು[1]

ಅನಾದಿಯಾದ ಸಂಸಾರ ಬಂಧನವನ್ನು ಸಂಹರಿಸುವ ಭಗವಂತನೇ ಸಾದಿಯಾದ ಜಗತ್ತಿನ ಸಂಹಾರವನ್ನೂ ನಡೆಸುವನೆಂದು ಬ್ರಹ್ಮಸೂತ್ರವೊಂದರಲ್ಲಿ ಸಿದ್ಧಾಂತಿಸಲಾಗಿದೆ[2]

೩ ದಂಡಿಸುವವನು[3]

ಭಗವಂತನು ಸಜ್ಜನರನ್ನು ಪೀಡಿಸುವ, ಧರ್ಮವನ್ನು ಉಲ್ಲಂಘಿಸುವ ದುಷ್ಟರನ್ನು ವಿಶೇಷವಾಗಿ ದಂಡಿಸುವನು. ಉದ್ಧಾರದ ದೃಷ್ಟಿಯಿಂದ ಸಜ್ಜನರನ್ನೂ ಕೆಲವೊಮ್ಮೆ ದಂಡಿಸುವನು

೪ (ಪರಶುರಾಮಾವತಾರದಲ್ಲಿ) ಕಾರ್ತವೀರ್ಯಾರ್ಜುನನ ಸಾವಿರ ಬಾಹುಗಳನ್ನೂ, ತಲೆಯನ್ನೂ ಕತ್ತರಿಸಿರುವವನು[4]

[ಅರ್ಥವಿಶೇಷಗಳನ್ನು ೩೮೧ನೆಯ 'ಕರ್ತಾ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

## ಜಿಜ್ಞಾಸೆ

[ಸಂಹಾರಕರ್ತೃತ್ವವು ಗುಣರೂಪ]

ಪ್ರ - ಪರಮಾತ್ಮನಿಗೆ ಸಂಹಾರ ಕರ್ತೃತ್ವವು ಇದೆ ಅದು ಲೋಕದೃಷ್ಟಿಯಿಂದ ದೊಡ್ಡ ದೋಷ ಅದು ಪರಮಾತ್ಮನಲ್ಲಿ ಗುಣಸ್ವರೂಪವೆಂದು 'ಯೇ ದೋಷಾ ಇತರತ್ರಾಪಿ ತೇ ಗುಣಾಃ ಪರಮೋ ಮತಾಃ' ಎಂಬ ಪ್ರಮಾಣವು ಹೇಳುತ್ತದೆ ಆದರೆ ಅದು ಗುಣರೂಪವಾಗುವದು ಹೇಗೆ?

---

೨ 1 ಕೃಣೋತಿ ಸಂಸಾರಪಾಶಂ ಹಿನಸ್ತಿ ಛಿನತ್ತೀತಿ ಯಾವತ್, ಕರ್ತಾ ।

2 'ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ' -ಬ್ರ ಸೂ. 2-3-13
'ತಸ್ಯಾಭಿಧ್ಯಾನಾದ್ ಯೋಜನಾತ್ ತತ್ತ್ವಭಾವಾದ್ ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ' ಇತಿ ಬಂಧಲಯಸ್ಯ ತದಭಿಧ್ಯಾನನಿಮಿತ್ತತ್ವಲಿಂಗಾತ್ ತತ್ಕರ್ತೃತ್ವಂ ಪ್ರತೀಯತೇ, ಕಿಮು ಸಾದೇರ್ಜಗತ ಇತ್ಯೇತಸ್ಮಾದೇವ ಸಂಹಾರಕರ್ತಾ ವಿಷ್ಣುರಿತಿ ಪ್ರತೀಯತೇ ಕಿಮು..... -ಬ್ರ. ಸೂ. ಭಾ.

೩ 3 ಕೃಣೋತಿ ಹಿನಸ್ತಿ ದಂಡಯತೀತಿ ಯಾವತ್, ಕರ್ತಾ । ಭಗವತ್ಕರ್ತೃಕದಂಡನಮಧಿಕೃತ್ಯ ಅಧಿಕಃ ವಿಚಾರಃ ಕಾರ್ಯಃ (೨೦೩) ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೪ 4 ...ಕಾರ್ತವೀರ್ಯಸ್ಯ ಚಕ್ರೇ ತಸ್ಯ ಕರ್ತನಂ । -ಪ. ಭ

ಕೃಣೋತಿ ಕಾರ್ತವೀರ್ಯಾರ್ಜುನಸ್ಯ ಬಾಹುಸಹಸ್ರಂ ಶಿರಶ್ಚ ಹಿನಸ್ತಿ ಛಿನತ್ತೀತಿ ಯಾವತ್, ಕರ್ತಾ ।

ಉ - ಮೋಕ್ಷಸಾಧನವನ್ನು ಮಾಡುವದಕ್ಕಾಗಿ ಜೀವರನ್ನು ಪರಮಾತ್ಮನು ಸೃಷ್ಟಿ ಮಾಡಿದ್ದು, ಸೃಷ್ಟಿಯಾದ ನಂತರ ಸಂಹಾರವು ಇಲ್ಲವಾದರೆ ಮೋಕ್ಷ ಸಾಧನವನ್ನು ಮಾಡುವದರಲ್ಲಿ ವಿಳಂಬ ವಾಗುವದು ಖಂಡಿತ. 'ನನಗೆ ಮರಣವು ಇದೆ ಅದು ಯಾವಾಗ ಎಂದು ಗೊತ್ತಿಲ್ಲ' ಎಂದು ಭಾವನೆ ಉಳ್ಳವನು ಈ ದುರ್ಲಭವಾದ ಜನ್ಮವು ಮುಗಿಯುವದರ ಒಳಗೆ ಸಾಧ್ಯವಿದ್ದಷ್ಟು ಹೆಚ್ಚು ಸಾಧನವನ್ನು ಮಾಡಬೇಕು ಎಂದು ಸಂಕಲ್ಪಿಸುತ್ತಾನೆ. ತಾನು ನೋಡುತ್ತಿರುವಂತೆ ಬಹು ಜನರು ಸತ್ತದ್ದನ್ನು ನೋಡಿದಾಗೆಲ್ಲ ಅವರು ಮೋಕ್ಷಸಾಧನವನ್ನು ಮಾಡದೆ ಸತ್ತರು ಅವರ ಜನ್ಮವು ವ್ಯರ್ಥವಾಯಿತು. ನನ್ನ ಜನ್ಮ ಅವರ ಜನ್ಮದಂತೆ ವ್ಯರ್ಥವಾಗಬಾರದು. ಎಂದು ತಿಳಿದು ಮೋಕ್ಷಸಾಧನಾನುಷ್ಠಾನದಲ್ಲಿ ದೃಢ ಸಂಕಲ್ಪವನ್ನು ಮಾಡಿ ಜನ್ಮ ಸಾರ್ಥಕ ಮಾಡಿಕೊಳ್ಳುತ್ತಾನೆ ಇದೇ ಮೊದಲಾದ ಉತ್ತಮ ಪ್ರಯೋಜನಗಳು ಇದ್ದ ಕಾರಣ ಪರಮಾತ್ಮನ ಸಂಹಾರಕರ್ತೃತ್ವವು ದೊಡ್ಡ ಗುಣವು ಆಗುತ್ತದೆ



## ೩೧೭ ವಿಶ್ವಬಾಹುಃ

೧ ಅನಂತ ತೋಳುಗಳುಳ್ಳವನು[1]

ಭಗವಂತನು ಅನಂತ ಚಕ್ಷುಸ್ಸುಗಳುಳ್ಳವನು, ಅನಂತ ಮುಖಗಳುಳ್ಳವನು, ಅನಂತ ಬಾಹುಗಳುಳ್ಳವನು—ಎಂಬುದಾಗಿ ಋಗ್ವೇದ ಹಾಗೂ ಯಜುರ್ವೇದಗಳಲ್ಲಿ ಇದೆ[2] ಬಾಭ್ರವ್ಯಶಾಖೆಯೂ, ಭಗವಂತನು ಅನಂತವಾದಗಳುಳ್ಳವನು, ಅನಂತಬಾಹುಗಳುಳ್ಳವನೆಂದು ಸಂದೇಶಿಸಿದೆ.[3] ಭಗವಂತನ ವಿಶ್ವರೂಪವನ್ನು ಸಾಕ್ಷಾತ್ಕರಿಸಿಕೊಂಡ ಅರ್ಜುನನು, ತಾನು ಅನಂತಬಾಹ್ವಾದಿಗಳನ್ನೊಳಗೊಂಡ

---

೧ 1 ವಿಶ್ವಾಃ ಅನಂತಾಃ ಬಾಹವಃ ಭುಜಾಃ ಯಸ್ಯ ಸಃ ವಿಶ್ವಬಾಹುಃ ।

2 ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್ ।
—ಋ. ವೇ. (ಗೀ. ಭಾ. 11-16)

* 'ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತಸ್ಪಾತ್'
—ಯ ವೇ. (ಗೀ. ಭಾ. 11-16)

* ವಿಶ್ವಶಬ್ದಶ್ಚಾನಂತವಾಚೀ । 'ಸರ್ವಂ ಸಮಸ್ತಂ ವಿಶ್ವಂ ಚ ಅನಂತಂ ಪೂರ್ಣಮೇವ ಚ'
—ಅಭಿಧಾನಮ್ (ಗೀ. ಭಾ. 11-16)

* ತಥಾಚ ವಿಶ್ವತ ಇತಿ ಪ್ರಥಮಾರ್ಥೇ ತಸಿಃ ಇತ್ಯುಕ್ತಂ ಭವತಿ । —ಪ್ರ. ದೀ.

3 'ಅನಂತಪಾದಂ ತಮನಂತಬಾಹುಮನಂತವಕ್ತ್ರಂ ಪುರುರೂಪಮೇಕಮ್'
—ಬಾಭ್ರವ್ಯಶಾಖಾ (ಗೀ. ಭಾ. 11-16)

ರೂಪವನ್ನು ಕಾಣುತ್ತಿರುವುದಾಗಿ ನಿವೇದಿಸಿಕೊಂಡಿರುವನು.[1]

೨ ಗುಣಪೂರ್ಣಗಳಾದ ಬಾಹುಗಳುಳ್ಳವನು.[2]

೩ ಗುಣಪೂರ್ಣನಾಗಿದ್ದು 'ವಿಶ್ವ'ಎನಿಸುವ ತನ್ನ ಸ್ವರೂಪಾತ್ಮಕಗಳಾದ ಬಾಹುಗಳುಳ್ಳವನು.[3]

ಭಗವಂತನ ಶಿರಸ್ಸು ಮೊದಲಾದ ಅಂಗಗಳು ಅವನಿಂದ ಅತ್ಯಂತಾಭಿನ್ನಗಳಾಗಿದ್ದು[4] ಅವನಂತೆಯೇ ಗುಣಪೂರ್ಣಗಳಾಗಿವೆ[5] ಆದುದರಿಂದ ಅವನ ಬಾಹುಗಳೂ ಗುಣಪೂರ್ಣಗಳಾಗಿವೆ ಭಗವಂತನ ಪ್ರದ್ಯುಮ್ನ, ಅನಿರುದ್ಧರೂಪಗಳೇ ಅವನ ಬಲ ಮತ್ತು ಎಡ ಕೈಗಳಾಗಿವೆ—ಎಂದು ಬೃಹತ್ಸಂಹಿತೆ ಸಂದೇಶಿಸಿದೆ.[6]

---

1 'ಅನೇಕಬಾಹೂದರವಕ್ತ್ರನೇತ್ರಂ ಪಶ್ಯಾಮಿ ತ್ವಾ ಸರ್ವತೋಽನಂತರೂಪಮ್'
-ಗೀ. 11-16

ಅನೇಕಶಬ್ದೋಽನಂತವಾಚೀ । -ಗೀ. ಭಾ.

* '......ಅನಂತಬಾಹುಂ ಶಶಿಸೂರ್ಯನೇತ್ರಮ್ । ಪಶ್ಯಾಮಿ ತ್ವಾಂ . '
-ಗೀ. 11-19

೨ 2 ವಿಶಂತಿ ಗುಣಾ ಅತ್ರೇತಿ ವಿಶ್ವಾಃ ಗುಣಪೂರ್ಣಾಃ । ತಾದೃಶಾ ಬಾಹವಃ ಭುಜಾಃ ಯಸ್ಯ ಸಃ ವಿಶ್ವಬಾಹುಃ ।

೩ 3 ಗುಣಪೂರ್ಣತ್ವಾತ್ ವಿಶ್ವಃ ಭಗವಾನ್ । ತದಾತ್ಮಕಾಃ ಬಾಹವಃ ಯಸ್ಯ ಸಃ ವಿಶ್ವಬಾಹುಃ ।

4 ತಸ್ಯೈವ ಶಿರಆದೀನಾಂ ನೈವ ಭೇದೋಽಸ್ತಿ ಕಶ್ಚನ ।
-ಬ್ರಹ್ಮತರ್ಕ (ಬೃ. ಉ. ಭಾ. 3-5-4)

5 ಯಥೈವ ಕೃಷ್ಣಕೇಶಸ್ಯ ಕೃಷ್ಣಸ್ಯ ಬ್ರಹ್ಮತಾಽಖಿಲಾ । ದರ್ಶಿತಾ ಚೈವ ಪಾರ್ಥಾಯ ನಿಸ್ಸೀಮಾಃ ಶಕ್ತಿಯೋಽಸ್ಯ ಹಿ । -ಅನು. 1-1-161

6 '....ಪಕ್ಷೋ ದಕ್ಷಿಣಃ ಸವ್ಯ ಏವ ಚ । ಪ್ರದ್ಯುಮ್ನಶ್ಚಾನಿರುದ್ಧಶ್ಚ.....'
-ಬ್ರ. ಸೂ. ಭಾ. 1-1-15

೪ ಎಲ್ಲೆಡೆ ಪ್ರವೇಶಿಸಿರುವ ಬಾಹುಗಳುಳ್ಳವನು.[1]

ಭಗವಂತನು ಪಾಣಿಪಾದಾದಿಗಳಿಂದ ಕೂಡಿದ ತನ್ನ ಪುಟ್ಟ ಪುಟ್ಟ ರೂಪಗಳಿಂದ ಎಲ್ಲೆಡೆ ಇರುವ ಪ್ರಯುಕ್ತ ಅವನು ಎಲ್ಲೆಡೆ ಪಾಣಿಪಾದಾದಿಗಳುಳ್ಳವನಾಗಿರುವನೆಂದು ಗೀತಾಚಾರ್ಯ ಸಂದೇಶಿಸಿರುವನು.[2]

೫ ಎಲ್ಲರಿಗೂ ಆಧಾರನಾಗಿರುವವನು.[3]

೬ ವಿಶ್ವ ಎನಿಸುವ ವಾಯುದೇವನಿಗೆ ಆಧಾರನಾಗಿರುವವನು.[4]

೭ (ಪ್ರಲಯಕಾಲದಲ್ಲಿ) ವಿಶ್ವವನ್ನು ನಾಶಪಡಿಸುವವನು.[5]

೮ ಧರ್ಮಕಂಟಕರನ್ನು ನಾಶಮಾಡುವುದರ ಮೂಲಕ ಎಲ್ಲರಿಗೂ ಹಿತಕಾರಿಗಳಾದ ಬಾಹುಗಳುಳ್ಳವನು.[6]

---

೪ 1 ವಿಶಂತಿ ಸರ್ವತ್ರ ಪ್ರವಿಶಂತೀತಿ ವಿಶ್ವಾಃ । ತಾದೃಶಾಃ ಬಾಹವಃ ಯಸ್ಯ ಸಃ ವಿಶ್ವಬಾಹುಃ ।

2 'ಸರ್ವತಃಪಾಣಿಪಾದಂ ತತ್...' —ಗೀ. 13-14

ಅಣೋರಣುತರೈ ರೂಪೈಃ ಪಾಣಿಪಾದಾದಿಸಂಯುತೈಃ । ಸರ್ವತ್ರ ಸಂಸ್ಥಿತತ್ವಾದಾ ಸರ್ವತಃಪಾಣಿಪಾದವಾನ್ । -ಗೀ. ತಾ.

೫ 3 ವಿಶ್ವೇಷಾಂ ಪ್ರಾಣಿನಾಂ ಬಾಹುರಿವ ಬಾಹುರಾಲಂಬನತ್ವಾತ್ ವಿಶ್ವಬಾಹುಃ ।
—ಶಾಂ ಭಾ. ವಿ

೬ 4 ವಿಶ್ವಸ್ಯ ಮುಖ್ಯಪ್ರಾಣಸ್ಯ ಬಾಹುರಿವ ಆಲಂಬನತ್ವಾತ್ ಬಾಹುಃ ವಿಶ್ವಬಾಹುಃ ।

೭ 5 ವಿಶ್ವಂ ಬಾಧತೇ ವಿಲೋಡಯತಿ, ಸಂಹರತೀತಿ ಯಾವತ್ ವಿಶ್ವಬಾಹುಃ ।

೮ 6 ....ಕಂಟಕೋದ್ಧಾರೇಣ ವಿಶ್ವಸ್ಮೈ (ಹಿತೌ) ಬಾಹೂ ಯಸ್ಯ ಸಃ ವಿಶ್ವಬಾಹುಃ ।
-ಪ. ಭ.

೧೦ ಎಲ್ಲರನ್ನೂ ಪ್ರಯತ್ನವುಳ್ಳವರನ್ನಾಗಿ- ಮಾಡುವವನು.[1]

೧೧ ಎಲ್ಲ ಕಾರ್ಯವನ್ನೂ (ಸ್ವತಂತ್ರವಾಗಿ) ನಿರ್ವಹಿಸುವವನು

## ಜಿಜ್ಞಾಸೆ

### [ಸ್ವರೂಪ ಭಿನ್ನ ದೇಹವಿಲ್ಲ]

ಪ್ರ:- ರಾಮಾನುಜಾಚಾರ್ಯರು ಪರಮಾತ್ಮನ ದೇಹವು ಪರಮಾತ್ಮನ ಸ್ವರೂಪಭೂತವಾದದ್ದಲ್ಲ, ಪರಮಾತ್ಮನು ಅವ್ಯಕ್ತನು ಆದರೂ ಅವನಿಂದ ಭಿನ್ನವಾದ ದೇಹದಿಂದ ವಿಶಿಷ್ಟವಾದ ರೂಪದಿಂದ ಕಾಣಿಸಿಕೊಳ್ಳುತ್ತಾನೆ, ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ್ದು ತನ್ನಿಂದ ಭಿನ್ನವಾದ ದೇಹದಿಂದ ವಿಶಿಷ್ಟವಾದ ರೂಪವನ್ನೇ ಎಂದು ಹೇಳುತ್ತಾರೆ ಅದು ಯುಕ್ತವೋ?

ಉ - ಪರಮಾತ್ಮನ ದೆಸೆಯಿಂದ ಭಿನ್ನವಾದ ಅವನ ದೇಹವು ಚೇತನವೋ ಅಚೇತನವೋ? ಚೇತನವೇ ಆದರೆ ಚೇತನದ ಸ್ವರೂಪದಲ್ಲಿ ಕರಚರಣಾದಿ ಆಕಾರವು ಇದೆ ಎಂದು ಆಯಿತು ಅವನ ದೇಹರೂಪವಾದ ಚೇತನದ ಸ್ವರೂಪದಲ್ಲಿ ಕರಚರಣಾದ್ಯಾಕಾರವು ಇರುವದಾದರೆ ಅವನಿಗೆ ಸ್ವರೂಪಭೂತವಾದ ದೇಹವನ್ನೇ ಒಪ್ಪಬಹುದಲ್ಲ? ಚೇತನವು ನಿರಾಕಾರವಾದರೆ ಮಾತ್ರ ಪರಮಾತ್ಮನಿಗೆ ಸ್ವರೂಪಭೂತ ದೇಹವನ್ನು ಒಪ್ಪಲಿಕ್ಕೆ ಆಗುವದಿಲ್ಲ ಪರಮಾತ್ಮನ ದೇಹವು ಜಡಸ್ವರೂಪವಾದರೆ ಜಡಗಳು ಪ್ರಕೃತ್ಯಾದಿ ಇಪ್ಪತ್ತನಾಲ್ಕು ಮಾತ್ರವೆಂದು 'ಪಂಚಭಿಃ ಪಂಚಭಿಃ ಬ್ರಹ್ಮ ಚತುರ್ಭಿಃ ದಶಭಿಸ್ತಥಾ। ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಾದಿಕಂ ವಿದುಃ' ಭಾಗವತದಲ್ಲಿ ಲೆಖ್ಖ ಮಾಡಿದ್ದರಿಂದ ಆ ಇಪ್ಪತ್ತನಾಲರಲ್ಲಿ ಪರಮಾತ್ಮನ ಜಡದೇಹವು ಯಾವುದರಲ್ಲಿ ಅಂತರ್ಭೂತ? ಆ ಎಲ್ಲ ಜಡಗಳಿಗೆ ಲಕ್ಷ್ಮ್ಯಾದಿಗಳು ಅಭಿಮಾನಿಗಳು ಇದ್ದಕಾರಣ ಆ ಜಡಸ್ವರೂಪವಾದ ಪರಮಾತ್ಮನ ದೇಹಕ್ಕೆ ಅಭಿಮಾನಿ ದೇವತೆಗಳು ಇದ್ದಾರೆಂದು ಹೇಳಬೇಕು. ಹಾಗೆ ಹೇಳಿದರೆ ಪರಮಾತ್ಮನ ದೇಹವು ಅಭಿಮಾನಿ ದೇವತೆಗಳು ಅಧೀನವಾಗಬೇಕಾಯಿತಲ್ಲ? ಆದ್ದರಿಂದ ಪರಮಾತ್ಮನ ಅನಂತ ಬಾಹುಗಳುಳ್ಳ ದೇಹವು ಅವನ ಸ್ವರೂಪಭೂತವಾದದ್ದು ಎಂದೇ ಹೇಳಬೇಕು ಅರ್ಜುನನಿಗೆ ಪರಮಾತ್ಮನು ಪ್ರಸನ್ನನಾಗಿ ತನ್ನ ಅಚಿಂತ್ಯ

---

೧೦ 1 ವಿಶ್ವಾನ್ ಸರ್ವಾನ್ ಬಾಹಯತಿ ಪ್ರಯತ್ನವತಃ ಕರೋತೀತಿ ವಿಶ್ವಬಾಹುಃ। 'ಬಾಹೃ ಪ್ರಯತ್ನೇ'

೧೧ 2 ವಿಶ್ವಂ ಸರ್ವಂ ಕಾರ್ಯಜಾತಂ ವಹತಿ ನಿರ್ವಹತೀತಿ ವಿಶ್ವವಾಹುಃ। ವಬಯೋರಭೇದಾತ್ ವಿಶ್ವಬಾಹುಃ।

ಶಕ್ತಿಯಿಂದ ಅವ್ಯಕ್ತವಾದ ತನ್ನ ಸ್ವರೂಪವನ್ನು ತೋರಿಸಿದನೆಂದೇ ಹೇಳಬೇಕು. ರಾಮಾನುಜಾಚಾರ್ಯರು ಹೇಳುವಂತೆ ಪರಮಾತ್ಮನು ಅವ್ಯಕ್ತನಾದ್ದರಿಂದ ತಾನು ಕಾಣಿಸಿಕೊಳ್ಳದೆ. ದೇಹವಿಶಿಷ್ಟ ರೂಪದಿಂದ ಕಾಣಿಸಿಕೊಂಡನು ಎಂದು ಹೇಳಬಾರದು.



## ೨೧೮ ಮಹೀಧರ

### ೧ ಕೂರ್ಮರೂಪದಿಂದ ಭೂಮಿಯನ್ನು ಧರಿಸಿಕೊಂಡಿರುವವನು[1]

ಭೂಮಿಗೆ ಮುಖ್ಯಾಭಿಮಾನಿನಿಯಾದ ಲಕ್ಷ್ಮೀದೇವಿಯೂ, ಅವಾಂತರ ಅಭಿಮಾನಿನಿಯೂ 'ಮಹೀ' ಎನಿಸುವಳು. ಇವರಿಗೆ ಆಧಾರನಾಗಿರುವ ಭಗವಂತನೇ ಅವರಿಂದ ಅಭಿಮನ್ಯಮಾನವಾದ ಭೂಮಿಗೂ ಧಾರಕನಾಗಿರುವನು. ಭೂದೇವಿಯನ್ನು 'ಪೃಥ್ವಿ' ಎಂದು ಸಂಬೋಧಿಸಿ, ನಿನ್ನಿಂದ ಲೋಕಗಳೆಲ್ಲ ಧೃತಗಳಾಗಿವೆ. ನೀನಾದರೂ ಶ್ರೀವಿಷ್ಣುವಿನಿಂದ ಧರಿಸಲ್ಪಟ್ಟಿರುವಿ—ಎಂದು ಸ್ತುತಿಸಲಾಗಿದೆ.[2] ಭಗವಂತನು ಕೂರ್ಮರೂಪದಿಂದ ಭೂಮಿಯನ್ನು ಧರಿಸಿಕೊಂಡಿರುವನು. ಆದುದರಿಂದಲೇ ಶ್ರೀಮದಾಚಾರ್ಯರು ಕೂರ್ಮರೂಪಿ ಭಗವಂತನನ್ನು 'ಲೋಕಧಾರಕ'—ಎಂದು ಸಂಬೋಧಿಸಿರುವರು.

### ೨ (ಪರ್ವತಗಳ ಮೂಲಕ) ಭೂಮಿಯನ್ನು ಧರಿಸಿಕೊಂಡಿರುವವನು[4]

'ಭೂಧರ' ಎಂದೇ ಎನಿಸಿರುವ ಪರ್ವತಗಳಿಗೆ ಭೂಮಿಯನ್ನು ಧರಿಸಲು ಬೇಕಾದ ಸ್ಥೈರ್ಯವನ್ನು ನೀಡಿ[5] ಅವುಗಳ ಮೂಲಕ ಭಗವಂತನೇ ಭೂಮಿಯನ್ನು ಧರಿಸಿಕೊಂಡಿರುವನು

---

೧ 1 ಕೂರ್ಮರೂಪೇಣ ಮಹೀಂ ಧಾರಯತೀತಿ ಮಹೀಧರಃ ।
—ಪ. ರಾ.

2 ಪೃಥ್ವಿ! ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ ।

3 ಕೂರ್ಮಸ್ವರೂಪಕ ಲೋಕಧಾರಕ ದೇವವರೇಣ್ಯ
—ದ್ವಾ. ಸ್ತೋ.

ಮಹ್ಯಾಃ ಧಾರಣವಿಷಯೇ ಅಧಿಕಃ ವಿಚಾರಃ ಧರಣೀಧರಃ (235) ಇತಿ ನಾಮ್ನೋ ವ್ಯಾಖ್ಯಾನೇ ದ್ರಷ್ಟವ್ಯಃ ।

೨ 4 ಭೂಧರದ್ವಾರಾ ಮಹೀಂ ಧಾರಯತೀತಿ ಮಹೀಧರಃ ।

5 'ಭೂಧರಾಣಾಮಹಂ ಸ್ಥೈರ್ಯಂ' —ಭಾಗ 11-16-33

೩ ಭೂಮಿಯ ಮೂಲಕ ಭೂತಗಳನ್ನು ಧರಿಸಿರುವವನು, ಪೋಷಿಸುತ್ತಿರುವವನು.[1]

ತಾನು ಭೂಮಿಯನ್ನು ಪ್ರವೇಶಿಸಿ, ಭೂಮಿಯ ಮೂಲಕ ಭೂತಗಳನ್ನು ಧರಿಸಿಕೊಂಡು ಪೋಷಿಸುತ್ತಿರುವುದಾಗಿ ಗೀತಾಚಾರ್ಯ ಸಂದೇಶಿಸಿರುವನು.[2]

೪ (ವರಾಹರೂಪದಿಂದ) ಭೂಮಿಯನ್ನು ಉದ್ಧರಿಸಿರುವವನು.[3]

ಹಿರಣ್ಯಾಕ್ಷನು ಭೂಮಿಯನ್ನು, ಅದರ ಕಕ್ಷೆಯಿಂದ ತಪ್ಪಿಸಿ, ಬೀಳಿಸಲು ಯತ್ನಿಸಿದಾಗ ಭಗವಂತನು ವರಾಹರೂಪದಿಂದ ಅವತರಿಸಿ ಅದನ್ನು ಉದ್ಧರಿಸಿರುವನು.

೫ ತನ್ನ ಮಹಿಮೆಯಿಂದ ಲಕ್ಷ್ಮೀದೇವಿಯನ್ನು ಧರಿಸಿಕೊಂಡಿರುವವನು.[4]

೬ ಉತ್ಸವಕ್ಕೆ ನಿಯಾಮಕನಾಗಿರುವವನು ಮತ್ತು ಕಾಮವನ್ನು ಧರಿಸಿಕೊಂಡಿರುವವನು.[5]

[ಅಧಿಕ ವಿಚಾರವನ್ನು ೩೭೦ನೆಯ 'ಮಹೀಧರ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

## ಜಿಜ್ಞಾಸೆ

### [ಪ್ರವೇಶಕ್ಕೆ ವಿರುದ್ಧ ಪರಿಣಾಮ]

ಪ್ರ - ಈ ಜಗತ್ತು ಬ್ರಹ್ಮನ ಪರಿಣಾಮರೂಪವೆಂದು ಭಾಸ್ಕರಾಚಾರ್ಯರು ಹೇಳುತ್ತಾರೆ. ಇದಕ್ಕೆ ಉದಾಹರಣೆ—ಮಣ್ಣಿನ ಪರಿಣಾಮ ಮಡಿಕೆ. ಅಂದರೆ ಮಣ್ಣು ಮಡಿಕೆಯ ಆಕಾರವುಳ್ಳದ್ದು

---

೩ 1 ಮಹ್ಯಾ ಮಹೀದ್ವಾರೇತಿ ಯಾವತ್, ಧಾರಯತಿ ಭೂತಾನೀತಿ ಮಹೀಧರಃ ।

2 ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।
—ಗೀ. 15-13

೪ 3 ಮಹೀಂ ಧರತಿ ವರಾಹರೂಪೇಣ ಉದ್ಧರತೀತಿ ಮಹೀಧರಃ ।

೫ 4 ಮಹಿನಾ ಸ್ವಮಹಿಮ್ನಾ, ಈಂ ಲಕ್ಷ್ಮೀಂ ಧಾರಯತೀತಿ ಮಹೀಧರಃ ।
'ಮಹೀತ್ಯುಕ್ತಂ ಹಿ ಮಾಹಾತ್ಮ್ಯಂ...' (ಬೃ. ಉ. ಭಾ. 5-9-2) ಕಿಂಚ '.. .. ಮಹಿನಾ ಸಂಬಭೂವ' ಇತ್ಯಂಭೃಣೀಸೂಕ್ತೇ ಮಹಿಮಾರ್ಥೇ ಮಹಿಂಶಬ್ದಃ ಪ್ರಯುಕ್ತಃ ।

೬ 5 ಮಹಃ ಉತ್ಸವಃ ಅಸ್ಯ ನಿಯಮ್ಯತಯಾ ಅಸ್ತೀತಿ ಮಹೀ । ಇಂ ಕಾಮಂ ಧರತೀತಿ ಇಧರಃ । ಮಹೀ ಚಾಸೌ ಇಧರಶ್ಚ ಮಹೀಧರಃ ।

ಆಗುತ್ತವೆ ಅದರಂತೆ ಬ್ರಹ್ಮನೇ ಜಗದ್ರೂಪವನ್ನು ತಾಳಿ ಇರುವನು ಈ ವಿಷಯದಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯು ಪ್ರಮಾಣ ಈ ಶ್ರುತಿಯ ಅರ್ಥ—ಸರ್ವವೂ ಬ್ರಹ್ಮ ಸ್ವರೂಪ ಎಂದು. ಈ ಭಾಸ್ಕರ ಸಿದ್ಧಾಂತಕ್ಕೆ ದೋಷವು ಇದೆಯೇ?

ಉ – 'ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।' ಭೂಮಿಯ ಒಳಗೆ ಇದ್ದು ಪ್ರಾಣಿಗಳನ್ನು ಧರಿಸುತ್ತೇನೆಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ ಮಾತು ಇದರಿಂದ ಭೂಮಿಯು ಸೃಷ್ಟಿಯಾದ ಮೇಲೆ ಅದರ ಒಳಗೆ ಪರಮಾತ್ಮನ ಪ್ರವೇಶವೆಂದು ಹೇಳಲ್ಪಟ್ಟಿದೆ. ಗೃಹ ನಿರ್ಮಾಣವಾದ ನಂತರ ಗೃಹಪ್ರವೇಶ ಮಾಡಿದವನ ಪರಿಣಾಮವು ಗೃಹವು ಆಗಲಾರದು ಅದರಂತೆ 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಭೂಮಿಯನ್ನು ಸೃಷ್ಟಿ ಮಾಡಿ ಅದರ ಒಳಗೆ ಪ್ರವೇಶವನ್ನು ಮಾಡಿದ ಪರಮಾತ್ಮನ ಪರಿಣಾಮವು ಭೂಮಿಯು ಹೇಗೆ ಆಗುತ್ತದೆ? ಆದುದರಿಂದ ಭಾಸ್ಕರ ಸಿದ್ಧಾಂತವು ಗೀತೆಗೆ ವಿರುದ್ಧ 'ಸರ್ವಂ ಖಲ್ವಿದಂ ಬ್ರಹ್ಮ' ಶ್ರುತಿಯು ಬ್ರಹ್ಮನು ಸರ್ವತ್ರ ವ್ಯಾಪ್ತನೆಂದು ಅರ್ಥವನ್ನು ಹೇಳುತ್ತದೆಂದು ಗೀತೆಯಲ್ಲಿ 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' ಎಂಬಲ್ಲಿ ಹೇಳಿರುತ್ತದೆ



## ೩೧೯ ಅಚ್ಯುತಃ

೧ ತನ್ನ ಸ್ಥಾನದಿಂದ ಎಂದೆಂದೂ ಭ್ರಷ್ಟನಾಗದವನು.[1]

೨ ತನ್ನ ಪ್ರಭುತ್ವದಿಂದ ಎಂದೆಂದೂ ಭ್ರಷ್ಟನಾಗದವನು.[2]

೩ ದೇಶಕ್ಕೆ ಸಂಬಂಧಿಸಿದ, ಕಾಲಕ್ಕೆ ಸಂಬಂಧಿಸಿದ ಹಾಗೂ ಗುಣಗಳ ವಿಷಯದಲ್ಲಿ ಚ್ಯುತಿ ಇಲ್ಲದವನು.[3]

ಶಾಶ್ವತ ಎನಿಸಿರುವ ಭಗವಂತನ ಅನಂತ ಶಕ್ತಿಸಂಪನ್ನತೆ, ಸರ್ವಜ್ಞತ್ವ, ಸ್ವಾತಂತ್ರ್ಯ, ಪೂರ್ಣತ್ವ ಹಾಗೂ ಸರ್ವಾಶ್ರತ್ವ—ಇವುಗಳನ್ನೊಳಗೊಂಡ 'ಈಶತ್ವ'ವು ಸ್ವಾಭಾವಿಕವಾಗಿದ್ದು,

---

೧ 1 ಕದಾಽಪಿ ಸ್ವಪದಾತ್ ನ ಚ್ಯವತೇ ಭ್ರಶ್ಯತ ಇತಿ ಅಚ್ಯುತಃ । 'ಚ್ಯುಙ್ ಗತೌ'

೨ 2 ಅಚ್ಯುತಃ ಐಶ್ವರ್ಯಾದ್ । –ರಾ. ಸೂ.

* ಐಶ್ವರ್ಯಾತ್ ಸ್ವಪ್ರಭುತ್ವತಃ ಕದಾಽಪಿ ನ ಚ್ಯವತ ಇತಿ ಅಚ್ಯುತಃ ।

೩ 3 ದೇಶತಃ ಕಾಲತಃ ಗುಣತಶ್ಚ ಚ್ಯುತಿರಹಿತತ್ವಾದಚ್ಯುತಃ ।
–ಷ. ಸಂ.

ಇದರಲ್ಲಿ ಎಂದೆಂದೂ ಬದಲಾವಣೆ ಆಗಲಾರದು[1] ಆದುದರಿಂದಲೇ ಭಗವಂತನಲ್ಲಿ ಹೀಗೆ ನಿವೇದಿಸಿಕೊಳ್ಳಲಾಗಿದೆ—'ಹೇ ಹರೇ!' ಚತುರ್ಮುಖ ರುದ್ರನೇ ಮುಂತಾದ ಮುಕ್ತಾಮುಕ್ತರಿಂದಲೂ ಸರ್ವೋತ್ತಮತ್ವವು ಹೊಂದಲು ಸಾಧ್ಯವೇ ಇಲ್ಲ; ಅಂತಹ ಸರ್ವೋತ್ತಮತ್ವವು ನಿನ್ನ ಸ್ವಾಭಾವಿಕ ಧರ್ಮ ಎನಿಸಿದೆ. ನೀನು ಸರ್ವೋತ್ತಮ[2] ಈ ರೀತಿಯಾಗಿ ಭಗವಂತನ ಸರ್ವೋತ್ತಮ' ಪದವಿಯು ನಿತ್ಯವಾಗಿದ್ದು, ಅದರಿಂದ ಎಂದೆಂದೂ ಅವನಿಗೆ ಪತನವಿಲ್ಲದ ಪ್ರಯುಕ್ತ ಅವನು 'ಅಚ್ಯುತ' ಎನಿಸಿರುವನು. ಅವನಲ್ಲಿಯೇ ಹೀಗೆ ನಿವೇದಿಸಿಕೊಳ್ಳಲಾಗಿದೆ.[3]

[ಅರ್ಥವಿಶೇಷಗಳಿಗೆ ೧೦೧ನೆಯ 'ಅಚ್ಯುತ' ಹೆಸರಿನ ವ್ಯಾಖ್ಯಾನವನ್ನು ನೋಡಬಹುದು.]

## ಜಿಜ್ಞಾಸೆ

### [ಅಚ್ಯುತನಾಮದ ವಿಶೇಷ]

ಪ್ರ:- ಅಚ್ಯುತಾನಂತ ಗೋವಿಂದವೆಂಬ ನಾಮತ್ರಯವನ್ನು ಯಜ್ಞಾದಿ ಸಕಲ ಕರ್ಮಗಳಲ್ಲಿ ಅಂಗ ವೈಕಲ್ಯಾದಿಗಳಿಂದ ಉಂಟಾದ ಅಪೂರ್ಣತೆಯ ಪರಿಹಾರಕ್ಕಾಗಿ ಜಪಿಸುತ್ತಾರೆ 'ಅಚ್ಯುತಾನಂತ ಗೋವಿಂದ ನಾಮೋಚ್ಚಾರಣ ಭೇಷಜಾತ್ । ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಂ ।' ಎಂದು ಶಾಸ್ತ್ರವಚನವು ಸಕಲ ರೋಗ ಪರಿಹಾರವು ಅಚ್ಯುತಾನಂತ ಗೋವಿಂದ ನಾಮೋಚ್ಚಾರಣವನ್ನು ಸರ್ವದಾ ಮಾಡಿದವರಿಗೆ ಆಗುತ್ತದೆಂದು ಶಪಥ ಪೂರ್ವಕವಾಗಿ ಹೇಳುತ್ತದೆ ಇಂತಹ ನಾಮತ್ರಯದಲ್ಲಿ ಅಚ್ಯುತ ಎಂಬ ನಾಮವು ಪ್ರಾಧಮಿಕವಾಗಿದೆ. ಈ ನಾಮದ ಅರ್ಥದಲ್ಲಿ ಏನು ವಿಶೇಷವಿದೆ?

---

1 'ಅಲ್ಪಶಕ್ತಿರಸಾರ್ವಜ್ಞ್ಯಂ ಪಾರತಂತ್ರ್ಯಮಪೂರ್ಣತಾ । ಉಪಜೀವಕತ್ವಂ ಜೀವತ್ವ। ಮೀಶತ್ವಂ ತದ್ವಿಪರ್ಯಯಃ । ಸ್ವಾಭಾವಿಕಂ ತಯೋರೇತನ್ನಾನ್ಯಥಾ ಸ್ಯಾತ್ ಕದಾಚನ-ವದಂತಿ ಶಾಶ್ವತಾವೇತಾವತ ಏವ ಮಹಾಜನಾಃ'

—ಮಹಾ ವಿಷ್ಣುಪುರಾಣ (ಗೀ ತಾ. 2-20)

2 'ಬ್ರಹ್ಮೇಶಾನಾದಿಭಿರ್ದೇವೈರ್ಯತ್ ಪ್ರಾಪ್ತುಂ ನೈವ ಶಕ್ಯತೇ । ತದ್ ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ'

—ಬ್ರ. ಸೂ ಭಾ. 2-1-14

3 'ಚ್ಯವನೋತ್ಪತ್ತಿಯುಕ್ತೇಷು ಬ್ರಹ್ಮೇಂದ್ರವರುಣಾದಿಷು। ಯಸ್ಮಾನ್ನ ಚ್ಯವಸೇ ಸ್ಥಾನಾತ್ತಸ್ಮಾತ್ಸಂಕೀರ್ತ್ಯಸೇಽಚ್ಯುತಃ' —ಪ. ಭ. ಉದಾಹೃತಮ್ ।

ಉ - ಈ ನಾಮದ ಅರ್ಥ ಮತ್ತು ಈ ನಾಮ ಎರಡರಲ್ಲಿಯೂ ವಿಶೇಷವು ಇದೆ 'ತಂ ಯಥಾ ಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿಯು ಪರಮಾತ್ಮನನ್ನು ಪೂರ್ಣಾನಂದ ಎಂದು ಉಪಾಸನೆ ಮಾಡಿದರೆ ಉಪಾಸಕರಿಗೆ ಅವರಿಗೆ ಯೋಗ್ಯವಾದ ಪೂರ್ಣಾನಂದವು ಸಿಗುತ್ತದೆ. ಈ ರೀತಿ ಪರಮಾತ್ಮನ ಉಪಾಸನೆಗೆ ಅನುಗುಣವಾದ ಫಲವು ಉಪಾಸಕರಿಗೆ ಸಿಗುತ್ತದೆಂದು ಹೇಳುತ್ತದೆ. ಆದುದರಿಂದ ಪರಮಾತ್ಮನು ಅಚ್ಯುತ—ಯಾವುದೇ ಚ್ಯುತಿಯು ಇಲ್ಲದವನು ಎಂದು ಅರ್ಥವನ್ನು ಹೇಳುವ ಈ ನಾಮವು ಬಾಯಿಯಲ್ಲಿ ಸರ್ವದಾ ಇದ್ದರೆ ಅವನ ಕರ್ಮಗಳಲ್ಲಿ ಇರುವ ಚ್ಯುತಿಯು ಪರಿಹಾರವಾಗುವದಲ್ಲದೆ ಅವನ ದೇಹದಲ್ಲಿ ಇರುವ ರೋಗಾದಿಗಳಿಂದ ಉಂಟಾಗುವ ಚ್ಯುತಿಯು ಪರಿಹಾರವೂ ಆಗುತ್ತದೆ ಇದು ಅವರ ಅರ್ಥದಲ್ಲಿ ಇರುವ ವಿಶೇಷ ಆ ನಾಮದಲ್ಲಿ ಇರುವ ವಿಶೇಷವು ಅತೀಂದ್ರಿಯವಾದ್ದರಿಂದ ನಮಗೆ ಅದನ್ನು ಹೇಳುವಷ್ಟು ಸಾಮರ್ಥ್ಯವು ಇಲ್ಲ. ಶಾಸ್ತ್ರದಿಂದ ಆ ವಿಶೇಷವು ಸಾಮಾನ್ಯವಾಗಿ ಗೊತ್ತಾಗುತ್ತದೆ



## ೩೨೦ ಪ್ರಥಿತಃ

೧ (ಶಾಸ್ತ್ರದಲ್ಲಿ) ಪ್ರಸಿದ್ಧನಾಗಿರುವವನು[1]

೨ ಅತಿಶಯವಾದ ಪ್ರಸಿದ್ಧಿಯನ್ನು ನಿತ್ಯ ಪಡೆದಿರುವವನು ಮತ್ತು ವ್ಯಾಪ್ತನಾದವನು.[2]

ಇತರ ಎಲ್ಲಕ್ಕಿಂತಲೂ ಸಾರಭೂತನಾದ[3] ಭಗವಂತನು ಇತರರೆಲ್ಲರಿಗಿಂತಲೂ ಅಧಿಕ ಪ್ರಸಿದ್ಧನಾಗಿದ್ದು ಉತ್ತಮ ಕೀರ್ತಿವುಳ್ಳವರಲ್ಲಿ ಹೆಚ್ಚಾಗಿ ಕೀರ್ತಿವುಳ್ಳವನೆನಿಸಿರುವನು.[4]

---

೧ 1 ಶಾಸ್ತ್ರೇ ಪ್ರಸಿದ್ಧತ್ವಾತ್ ಪ್ರಥಿತಃ ।

೨ 2 ಅತಿಶಯಿತಾ ಪ್ರಥಾ ಖ್ಯಾತಿಃ ನಿತ್ಯಮಸ್ಯಾಸ್ತೀತಿ ಪ್ರಥೀ । ಅತಿಶಯೇ ನಿತ್ಯಯೋಗೇ ಚ ಅರ್ಥವಿಶೇಷೇ ವಿವಕ್ಷಿತೇ ಇನಿಃ । ತನೋತೀತಿ ತತಃ ತತ ಏವತಃ । ತಥೌ ಪ್ರಾಣಾತ್ಮಕೌ ಪ್ರೋಕ್ತೌ ವ್ಯಾಪ್ತಿಸ್ಥಿತಿವಿಧಾಯಕೌ'-ಗಾರುಡ (ಬ್ರ. ಸೂ. ಭಾ. 1-1-1) ಪ್ರಥೀ ಚಾಸೌ ತಶ್ಚ ಪ್ರಥಿತಃ ।

3 ಅಸಾರೇ ಖಲು ಸಂಸಾರೇ ಸಾರಾತ್ಸಾರತರೋ ಹರಿಃ ।
-ಕೃ. ಮ. 69

4 ಅಗ್ನಿಃ. ಚಿತ್ರಶ್ರವಸ್ತಮಃ । -ಋ. ವೇ. 1-5

'.. ...ಅಗ್ರ್ಯಕೀರ್ತೀನಾಮುತ್ತಮೋ.. ' । -ಋ. ವೇ ಭಾ

ಭಗವಂತನು ವಿಶೇಷವಾಗಿ ಪ್ರಸಿದ್ಧನಾಗಿರುವುದು ವೈದಿಕ ವಾಙ್ಮಯ ಪ್ರಪಂಚದಲ್ಲಿ ವೇದ, ಇತಿಹಾಸ, ಹಾಗೂ ಪುರಾಣಗಳನ್ನೊಳಗೊಂಡ ವೈದಿಕ ವಾಙ್ಮಯದ ಪ್ರತಿಯೊಂದು ಸ್ವರ, ಅಕ್ಷರ, ಶಬ್ದ, ಹಾಗೂ ವಾಕ್ಯ ಕೂಡಾ ಭಗವಂತನನ್ನು ಪ್ರತಿಪಾದಿಸುತ್ತಿರುವ ಪ್ರಯುಕ್ತ ಅವನು ವೈದಿಕ ವಾಙ್ಮಯದಲ್ಲಿ ಪ್ರಸಿದ್ಧನಾಗಿರುವನು ಗೀತಾಚಾರ್ಯನು ತಾನು ಕ್ಷರಪುರುಷರನ್ನೂ, ಅಕ್ಷರ ಪುರುಷನನ್ನೂ ಮೀರಿ ಉತ್ತಮನಾಗಿರುವುದರಿಂದಲೇ 'ಪುರುಷೋತ್ತಮ' ಎಂಬುದಾಗಿ ಪೌರುಷೇಯಾ-ಪೌರುಷೇಯಾಗಮಗಳಲ್ಲಿ ಪ್ರಸಿದ್ಧನಾಗಿರುವೆನೆಂದು ಸಂದೇಶಿಸಿರುವನು[1] ನಾರಾಯಣ ಶ್ರುತಿಯೂ ಇದಕ್ಕೆ ಸಂವಾದ ನೀಡುತ್ತಿದೆ.[2]

೩ ಬಹಳವಾದ ಅಥವಾ ಪ್ರಕೃಷ್ಟವಾದ ಅನ್ನವನ್ನು ಭಕ್ಷಿಸುವವನು ಮತ್ತು ವ್ಯಾಪಿಸಿರುವವನು[3]

ಪ್ರಲಯಕಾಲದಲ್ಲಿ ಸರ್ವವನ್ನೂ ಭಕ್ಷಿಸುವ ಭಗವಂತನ ದೃಷ್ಟಿಯಲ್ಲಿ ಚರಾಚರಾತ್ಮಕ ಪ್ರಪಂಚವೇ ಅನ್ನವೆನಿಸಿದೆ. ಪ್ರಲಯಕಾಲದಲ್ಲಿ ತಾನು ಬಹಳವಾದ ಅನ್ನವನ್ನು ತಿನ್ನುವಂತಾಗಬೇಕೆಂದು ಸಂಕಲ್ಪಿಸಿಯೇ ಭಗವಂತನು ಚತುರ್ಮುಖ ಸರಸ್ವತಿಯರ ಮೂಲಕ ವಿಸ್ತೃತವಾದ ಪ್ರಪಂಚವನ್ನು ಸೃಷ್ಟಿಸಿದನೆಂದು ಬೃಹದಾರಣ್ಯಕೋಪನಿಷತ್ತು ತಿಳಿಸಿದೆ[4] ಭಗವಂತನಿಗೆ ವಿಶೇಷವಾಗಿ

---

1 ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
-ಗೀ. 15-18

2 ಕ್ಷರಾಕ್ಷರಾತ್ಮನೋರ್ಯಸ್ಮಾದುತ್ತಮಃ ಸ ಸದಾಽನಯೋಃ ।
ಪುರುಷೋತ್ತಮನಾಮ್ನಾಽತಃ ಪ್ರಸಿದ್ಧೋ ಲೋಕವೇದಯೋಃ ।
-ನಾರಾಯಣ ಶ್ರುತಿಃ (ಗೀ. ತಾ.)

೩ 3 ಪ್ರಭೂತಂ ಪ್ರಕೃಷ್ಟಂ ವಾ ಥಮನ್ನಂ ಯಸ್ಯ ಸಃ ಪ್ರಥಿಃ। ಯಥಾ ಅತಿಥಿಶಬ್ದಃ ಅತ್ಯನ್ನ-ಸ್ತ್ವಾತಿಥಿಃ ಪ್ರೋಕ್ತಃ ... ಮಹಾಕೌಷೋರ್ ವ್ಯಾಖ್ಯಾತಃ (ಕಾ. ಉ 2-2.2) ತನೋತಿ ವಿಸ್ತೃತೋ ವರ್ತತ ಇತಿ ತತಃ । ತತ ಏವ ತಃ । ಪ್ರಥಿಶ್ಚಾಸೌ ತಶ್ಚ ಪ್ರಥಿತಃ ।

4 ಸ ಐಕ್ಷತ ಯದಿ ಹ ವಾವ ಇಮಮಭಿಮಂಸ್ಯೇ ಕನೀಯೋಽನ್ನಂ ಕರಿಷ್ಯ ಇತಿ ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ ಯದಿದಂ ಕಿಂಚ....ಯದ್ಯದೇವಾ-ಸೃಜತ ತತ್ತದತ್ತುಮಧ್ರಿಯತ. .' -ಬೃ. ಉ. 3-2-4

ಬ್ರಾಹ್ಮಣತ್ವಜಾತ್ಯಾಂಕ್ರಾಂತವಾದದ್ದೂ, ಕ್ಷತ್ರಿಯತ್ವಜಾತ್ಯಾಂಕ್ರಾಂತವಾದದ್ದೂ ಅನ್ನವೆನಿಸಿದೆ—ಎಂದು ಕಾಠಕೋಪನಿಷತ್ತಲ್ಲಿ ನಿರೂಪಿಸಲಾಗಿದೆ[1] ಮುಕ್ತ ಚತುರ್ಮುಖನು ತಾನು ಭಗವಂತನಿಗೆ ಭೋಗ್ಯನಾಗಿದ್ದು, ಅನ್ನ ಆಗಿರುವೆನೆಂದು ಸಾಮಗಾಯನ ನಡೆಸುತ್ತಿರುವನು[2]

ಹೀಗೆ ಭಗವಂತನು ವಿಪುಲವಾದ ಹಾಗೂ ಸಮೀಚೀನವಾದ ಅನ್ನ ಉಳ್ಳವನಾಗಿರುವನು. ಇದಕ್ಕಾಗಿಯೇ ಅವನನ್ನು 'ಅತಿಥಿ' ಎಂದು ಕಾಠಕೋಪನಿಷತ್ತಲ್ಲಿ ಉಲ್ಲೇಖಿಸಲಾಗಿದೆ[3]

ೞ ವಿಪುಲವಾದ ಅನ್ನವನ್ನು ಭಕ್ಷಿಸುವ ಚತುರ್ಮುಖನಲ್ಲಿ ಅಥವಾ ವಾಯುವಿನಲ್ಲಿ (ವಿಶೇಷವಾಗಿ) ವ್ಯಾಪಿಸಿರುವವನು[4]

---

1 'ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ.. .'

-ಕಾ ಉ 1-6-11

ಯಸ್ಯ ಭಗವತಃ ಬ್ರಹ್ಮ ಬ್ರಾಹ್ಮಣತ್ವಜಾತ್ಯಾಂಕ್ರಾಂತಂ ವಸ್ತು, ಕ್ಷತ್ರಂ ಕ್ಷತ್ರಿಯತ್ವ-ಜಾತ್ಯಾಂಕ್ರಾಂತಂ ಚ...ಉಭೇ ಬ್ರಹ್ಮಕ್ಷತ್ರೇ ಓದನಃ ಅನ್ನಂ ಭವತಃ...

-ಉ. ಖಂ.

2 'ಏತತ್ ಸಾಮ ಗಾಯನ್ನಾಸ್ತೇ....ಅಹಮನ್ನಮಹಮನ್ನಮಹಮನ್ನಮ್. ..'

-ತೈ. ಉ. 3-15

'. ವಿಷ್ಣೋರನ್ನಮಹಂ ಸದಾ.. .'

-ಯಜುಃ ಸಂಹಿತಾ (ತೈ. ಉ ಭಾ )

3 ಹಂಸಃ ಶುಚಿಷದ್.. ಅತಿಥಿರ್ದುರೋಣಸತ್ ।

-ಕಾ. ಉ. 2-2-2

ಅತ್ಯನ್ನಶ್ಚಾತಿಥಿಃ ಪ್ರೋಕ್ತೋ ಯಸ್ಮಾದನ್ನಂ ಧಮುಚ್ಯತೇ ।

-ಮಹಾಕೌರ್ಮ (ಕಾ. ಉ. ಭಾ.)

ೞ 4 ಪ್ರ ಪ್ರಭೂತಂ ಥಂ ಅನ್ನಂ ಅಸ್ಯಾಸ್ತೀತಿ ಪ್ರಥೀ ಚತುರ್ಮುಖಃ ವಾಯುರ್ವಾ । ತತ್ರ ವಿಶೇಷೇಣ ತನೋತಿ ವ್ಯಾಪ್ನೋತೀತಿ ಪ್ರಥಿತತಃ, ಪ್ರಥಿತತ ಏವ ಪ್ರಥಿತಃ ।

ತಾನು ಯಥೇಷ್ಟಾನ್ನಭೋಕ್ತೃ ಹಾಗೂ ಸರ್ವ ಜೀವಾತ್ಮರೂ ತನಗೆ ಅನ್ನ ಎಂದು ಚತುರ್ಮುಖನು ಸಾಮಗಾಯನದಲ್ಲಿ ಉಲ್ಲೇಖಿಸಿರುವನು[1]

ವಾಯುದೇವನು ತನ್ನ ಭೀಮಾವತಾರದಲ್ಲೂ, ಮಧ್ವಾವತಾರದಲ್ಲೂ ಬಹುಭುಕ್ತ್ವ ಗುಣವನ್ನು ಸ್ಪಷ್ಟೀಕರಿಸಿರುವನು ಹೀಗೆ ಬಹುಭುಕ್‌ಗಳಾದ ಚತುರ್ಮುಖ ಹಾಗೂ ವಾಯುದೇವರಲ್ಲಿ ಭಗವಂತನು ವಿಶೇಷವಾಗಿ ಸನ್ನಿಹಿತನಾಗಿದ್ದು, ಅವರಲ್ಲಿ ಅಧಿಕವಾಗಿ ವ್ಯಾಪ್ತನಾಗಿರುವನು.

## ಜಿಜ್ಞಾಸೆ

### [ಶ್ರೇಷ್ಠತ್ವಕ್ಕೆ ಸಾಧಕ]

ಪ್ರ - ಪೌರುಷೇಯಾಪೌರುಷೇಯಾಗಮಗಳಲ್ಲಿ ನಾರಾಯಣನು ಪ್ರಸಿದ್ಧನು ಸಾಮಾನ್ಯ ಜನರಲ್ಲಿ ರುದ್ರನಿಗೆ ಇರುವಷ್ಟು ಪ್ರಸಿದ್ಧಿಯು ನಾರಾಯಣನಿಗೆ ಇಲ್ಲ ಅದೇನು ಕಾರಣ?

ಉ:- ರುದ್ರನಿಗೆ ಇರುವಷ್ಟು ಪ್ರಸಿದ್ಧಿಯು ನಾರಾಯಣನಿಗೆ ಇಲ್ಲದೆ ಇರುವದು ನಾರಾಯಣನಲ್ಲಿರುವ ಶ್ರೇಷ್ಠತೆಗೆ ಲಿಂಗವಾಗಿದೆ ಮೃತಸಂಜೀವನೀ ಮೊದಲಾದ ಔಷಧಿಗಳು ಹನುಮಂತನಿಗೆ ಮಾತ್ರ ಸಿಕ್ಕಿದ್ದಾವೆ. ಇತರರಿಗೆ ಆ ಔಷಧಿಗಳನ್ನು ತರುವದು ಅಸಾಧ್ಯವಾಗಿದೆ ಇದರಿಂದ ಮೃತಸಂಜೀವನೀ ಮೊದಲಾದ ಔಷಧಿಗಳಿಗೆ ಶ್ರೇಷ್ಠತ್ವವು ಹೇಗೆ ಸಿದ್ಧವಾಗುತ್ತದೆಯೋ ಹಾಗೆಯೇ ಶಾಶ್ವತವಾದ ಮೋಕ್ಷವನ್ನು ಕೊಡುವ ನಾರಾಯಣನು ಅತಿ ದುರ್ಲಭನು ಆಗಿರುವದು ಅವನ ಶ್ರೇಷ್ಠತ್ವಕ್ಕೆ ಸಾಧಕವಾಗುತ್ತದೆ ಈ ಕಾರಣದಿಂದ ನಾರಾಯಣನ ಪ್ರಸಿದ್ಧಿಯು ರುದ್ರನಿಗೆ ಇರುವಷ್ಟು ಇಲ್ಲ.



## ೩೨೧ ಪ್ರಾಣಃ

೧ (ತನ್ನ ಭಕ್ತರನ್ನು) ಮೋಕ್ಷಕ್ಕೆ ಕೊಂಡೊಯ್ಯುವವನು[2]

---

1 ಅಹಮನ್ನಾದೋ೩ಹಮನ್ನಾದೋ೩ಹಮನ್ನಾದಃ । ....ಅಹಮನ್ನಮದಂತಮಾ೩ದ್ಮಿ ।
–ತೈ. ಉ. 3-15

ಯಥೇಷ್ಟಮನ್ನಭೋಕ್ತಾ ಚ....ಮಮಾನ್ನಂ ಸರ್ವಜೀವಾಸ್ತು ಭೋಗ್ಯಾ ಮಮ ಯತಃ ಸದಾ । –ಯಜುಃಸಂಹಿತಾ (ತೈ. ಉ. ಭಾ.)

೧ 2 ಸ್ವಾನ್ ಮೋಕ್ಷಂ ಪ್ರತಿ ಪ್ರಣಯತೀತಿ ಪ್ರಾಣಃ ।

ಲಕ್ಷ್ಮೀದೇವಿಯು ಪ್ರಜೆಗಳನ್ನು ಸಂಬೋಧಿಸಿ, ತನ್ನ ಭಕ್ತರನ್ನು ಮೋಕ್ಷಕ್ಕೆ ಕೊಂಡೊಯ್ಯುವ ಪ್ರಯುಕ್ತ ವಾಸುದೇವನು ಪ್ರಾಣ ಎನಿಸಿರುವನು, ಅವನನ್ನು ಕುರಿತು ನಾನು ಶರಣಾಗತ ಳಾಗುವೆನು ನೀವೂ ಹೊಂದಿರಿ—ಎಂದು ಸಂದೇಶಿಸಿರುವಳು[1]

೨ ಚೆನ್ನಾಗಿ ಶಬ್ದವನ್ನು ಮಾಡುವವನು—ಬ್ರಹ್ಮಾದಿಗಳನ್ನು ಉಪದೇಶಿಸುವವನು[2]

ಹಯಗ್ರೀವರೂಪಿ ಭಗವಂತನ ಮೂಗಿನಿಂದಲೂ, ಮುಖದಿಂದಲೂ ನಿರಂತರವಾಗಿ ಸಕಲ ವಿದ್ಯೆಗಳೂ ಹೊರಹೊಮ್ಮುತ್ತಿರುವವು[3]

೩ ಪ್ರಕೃಷ್ಟಗಳಾದ ಯಜ್ಞಾದಿಗಳಲ್ಲಿ ಪ್ರೇರಿಸುವವನು[4]

ಭಗವಂತನು ಆನಂದಪೂರ್ಣನಾಗಿ, ಆನಂದೋದ್ರೇಕದಿಂದ ಜೀವಾತ್ಮರನ್ನು ಯಜ್ಞಾದಿಗಳಲ್ಲಿ ಪ್ರೇರಿಸುವುದಿಲ್ಲವಾದರೆ ಬೇರೆ ಯಾರು ತಾನೇ ಅವರನ್ನು ಯಜ್ಞಾದಿಗಳಲ್ಲಿ ಪ್ರೇರಿಸಿಯಾನು?—ಎಂಬುದಾಗಿ ತೈತ್ತಿರೀಯೋಪನಿಷತ್ತು ಸವಾಲು ಹಾಕುವುದರ ಮೂಲಕ ಭಗವಂತನೇ ನಮ್ಮನ್ನು ಸಾಮಾನ್ಯ ಚೇಷ್ಟೆಗಳಲ್ಲಿ ಪ್ರೇರಿಸುವಂತೆ ಯಜ್ಞಾದಿ ಧಾರ್ಮಿಕ ಚೇಷ್ಟೆಗಳಲ್ಲೂ ಪ್ರೇರಿಸುವನೆಂದು ಸಂದೇಶಿಸಿದೆ[5]

---

1 ..ಪ್ರಾಣಂ ಪ್ರಪದ್ಯ ಇತಿ..। —ಛಾಂ. ಉ 23-21

ಪ್ರಾಣನಾಮಾ ವಾಸುದೇವೋ ಮೋಕ್ಷಂ ನ್ಯಾನ್ ಪ್ರಣಯೇದ್ ಯತಃ ।

—ಛಾಂ ಉ ಭಾ.

೨ 2 ಪ್ರಕರ್ಷೇಣ ಅಣತಿ ಶಬ್ದಂ ಕರೋತಿ (ಬ್ರಹ್ಮಾದೀನ್ ಉಪದಿಶತೀತಿ ಯಾವತ್) ಪ್ರಾಣಃ । —ರಾ. ಸೂ.

3 'ವಂದೇ ತುರಂಗವದನಂ.. ನಸ್ತೋ ಮುಖಾದಪಿ ನಿರಂತರಮುದ್ಗಿರಂತಂ ವಿದ್ಯಾ ಅಶೇಷತಃ...' —ತಂ. ಸಾರ 4-50

೩ 4 ಪ್ರಕೃಷ್ಟಯಜ್ಞಾದಿಪ್ರೇರಕಃ —ವಾ ರಾ

5 .....ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್ ।

—ತೈ. ಉ ಭಾ 2-12

'ಆದೀಪ್ತಸ್ತ್ವೇಷ ಭಗವಾನ್ ಯದ್ಯಾನಂದೋ ಭವೇನ್ನ ಚ । ಸಾಮಾನ್ಯಚೇಷ್ಟಾ ಧರ್ಮಾಶ್ಚ ಕಸ್ಯ ಸ್ಯುಸ್ತಮೃತೇ ಪ್ರಭುಮ್' —ಯಜುಃಸಂಹಿತಾ. (ತೈ ಉ ಭಾ )

೪ ಜೀವಾತ್ಮರಿಗೆ ಜೀವನಪ್ರದನಾಗಿರುವವನು.[1]

ಪ್ರಾಣಮಯನಾದ ಪ್ರದ್ಯುಮ್ನನೇ ಸರ್ವರಿಗೂ ಆಯುಷ್ಯವನ್ನು ನೀಡುವ ಮೂಲಕ ಜೀವನ ಪ್ರದನಾಗಿರುವನೆಂದು ತೈತ್ತಿರೀಯೋಪನಿಷತ್ತು ಸಾರಿದೆ[2]

## ಜಿಜ್ಞಾಸೆ

[ವೇದಾಭಿಮಾನಿಗಳ ಹುಟ್ಟು]

ಪ್ರ - ವೇದಗಳು ಪರಮಾತ್ಮನಿಂದ ಹುಟ್ಟಿದವು ಎಂದು ಶ್ರುತಿಯಲ್ಲಿ ಇದೆ. ವೇದಗಳು ಅಪೌರುಷೇಯಗಳು. ಆದ್ದರಿಂದ ಅವುಗಳು ಹುಟ್ಟುವದು ಹೇಗೆ?

ಉ.- ಚತುರ್ಮುಖ ಬ್ರಹ್ಮದೇವರು ವೇದಗಳನ್ನು ಹೇಳುತ್ತಿರುವಾಗ ಮಧು ಕೈಟಭರು ಆ ವೇದಗಳನ್ನು ಅಪಹರಿಸಿದರು ಎಂದು ಪುರಾಣ ಪ್ರಸಿದ್ಧಿಯು ಇದೆ. ವೇದಗಳು ಶಬ್ದರೂಪಗಳು ಆಗಿ ಇವೆ. ಶಬ್ದಗಳನ್ನು ಅಪಹರಿಸುವದು ಹೇಗೆ? ಇದಕ್ಕೆ ಉತ್ತರವು ಇಷ್ಟೆ 'ಅಭಿಮಾನಿವ್ಯಪದೇಶಸ್ತು...' ಎಂಬ ಬ್ರಹ್ಮಸೂತ್ರದಲ್ಲಿ ಮಾಡಿದ ನಿರ್ಣಯದಂತ ಅಭಿಮನ್ಯಮಾನ ವಾಚಕ ಶಬ್ದವು ಅಭಿಮಾನಿ ದೇವತಾ ವಾಚಕವೂ ಆಗುತ್ತದೆ ಆದ್ದರಿಂದ ವೇದದ ಅಪಹಾರವೆಂದರೆ ವೇದಾಭಿಮಾನಿ ದೇವತೆಗಳ ಅಪಹಾರವೆಂದು ಅರ್ಥವನ್ನು ಹೇಳಬೇಕು ಹಾಗೆಯೇ ವೇದಗಳು ಹುಟ್ಟಿದವು ಎಂಬುದಕ್ಕೆ ವೇದಾಭಿಮಾನಿ ದೇವತೆಗಳು ಪರಮಾತ್ಮನಿಂದ ಹುಟ್ಟಿದರು ಎಂದು ಅರ್ಥ



### ೩೨೨ ಪ್ರಾಣದಃ

೧ (ಮುಕ್ತಿಯೋಗ್ಯರಿಗೆ) ಮುಖ್ಯಪ್ರಾಣನನ್ನು (ಗುರುವನ್ನಾಗಿ) ನೀಡುವವನು[3]

ಮುಕ್ತಿಯೋಗ್ಯರಾದ ಜೀವಾತ್ಮರು ಮುಕ್ತಿಯನ್ನು ಪಡಕೊಳ್ಳಲು ಬೇಕಾದ ಸೌಕರ್ಯವನ್ನು ಅನುಗ್ರಹಿಸುವ ಭಗವಂತನು, ಅವರಿಗೆ ಯೋಗ್ಯ ಗುರುಗಳು ದೊರಕುವಂತೆ ಮಾಡುವನು. ಭಗವಂತನನ್ನು ಬಿಟ್ಟರೆ, ಉಳಿದ ದೇವತೆಗಳಲ್ಲೆಲ್ಲ ವಾಯುದೇವನೇ ಉತ್ತಮನಾದ ಗುರು ಎಂಬುದಾಗಿ

---

೪ 1 ಸರ್ವಪ್ರಾಣನಾತ್ ಪ್ರಾಣಃ -ಪ. ಭ

2 ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷಮುಚ್ಯತೇ ।
-ತೈ ಉ. 2-5

೧ 3 ಪ್ರಾಣಂ ಮುಖ್ಯಪ್ರಾಣಂ ಮುಕ್ತಿಯೋಗ್ಯೇಭ್ಯಃ ಗುರುತ್ವೇನ ದದಾತೀತಿ ಪ್ರಾಣದಃ ।
-ಸ. ಸಂ. ಆಧಾರೇಣ

ಆಚಾರ್ಯಸಂಹಿತೆ' ತಿಳಿಸಿದೆ[1] ಈ ಗುರುವನ್ನೂ ಭಗವಂತನೇ ಅನುಗ್ರಹಿಸುವನು ಪ್ರಾಣದೇವನು ಶ್ರೀಮಧ್ವಾಚಾರ್ಯರಾಗಿ ಅವತರಿಸಿ ಬಂದ ಹಿನ್ನಲೆಯನ್ನು ಪರಿಶೀಲಿಸಿದರೆ ಇದು ಸ್ಪಷ್ಟವಾಗುವುದು. ದೇವತೆಗಳ ಪ್ರಾರ್ಥನೆಗನುಗುಣವಾಗಿ, ಭಗವಂತನು ತನ್ನ ಸದ್ಗುಣಗಳನ್ನು ಪ್ರಚುರಪಡಿಸಿ ಸಜ್ಜನರನ್ನು ರಕ್ಷಿಸಲು ಆದೇಶಿಸಿದಾಗ—ಅದಕ್ಕನುಗುಣವಾಗಿ ಶ್ರೀಮಧ್ವಾಚಾರ್ಯರು ಅವತರಿಸಿ ಬಂದವರು ತಾನೆ?[2]

೨ ಪ್ರಕೃಷ್ಟ ಶಬ್ದರಾಶಿಯಾದ ವೇದ ಶಾಸ್ತ್ರವನ್ನು (ಯೋಗ್ಯರಿಗೆ) ನೀಡುವವನು.[3]

ಮುಕ್ತಿಯೋಗ್ಯರಿಗೆ ಒಳ್ಳೆಯ ಗುರುಗಳನ್ನು ದೊರಕಿಸಿಕೊಡುವ ಭಗವಂತನೇ, ಅವರಿಗೆ ಪ್ರಕೃಷ್ಟ ವಾದ ವೇದಶಾಸ್ತ್ರವನ್ನೂ ತಲುಪಿಸುವನು. ಅವರಿಗೆ ಅದರಲ್ಲಿ ಆಸಕ್ತಿ ಮೂಡುವಂತೆ ಮಾಡುವನು.

೩. ಪ್ರಕೃಷ್ಟವಾದ ಜ್ಞಾನವನ್ನು ನೀಡುವವನು.[4]

ಶಾಸ್ತ್ರದಿಂದ ಪ್ರಕೃಷ್ಟವಾದ ಜ್ಞಾನವು ದೊರಕಬೇಕೆಂದರೂ ಭಗವದನುಗ್ರಹ ಅತ್ಯಾವಶ್ಯಕ ಆದುದರಿಂದಲೇ ಶ್ವೇತಾಶ್ವತರೋಪನಿಷತ್ತು—ಹರಿ ಗುರುಗಳಲ್ಲಿ ಭಕ್ತನಾಗಿರುವವನಿಗಷ್ಟೇ ಶಾಸ್ತ್ರಾರ್ಥವು ಸ್ಫುರಿಸುವುದೆಂದು ಸಂದೇಶಿಸಿದೆ[5]

---

1 ...ದೇವೇಭ್ಯೋ ವಾಯುರುತ್ತಮಃ । ವಾಯೋಶ್ಚ ಭಗವಾನ್ ವಿಷ್ಣುರ್ನ ತಸ್ಮಾದು-ತ್ತಮೋ ಗುರುಃ -ಆಚಾರ್ಯ ಸಂಹಿತಾ (ಛಾಂ. ಉ. ಭಾ. 4-2-10)

2 ಆದೇಶವನ್ಮೌಲಿಮಣಿಮುಜ್ಜ್ವಲವರ್ಣಮೇನಂ ಬದ್ಧಾಂಜಲಿರ್ಮರುದನರ್ಘ್ಯಮುದ್ಧೃತ ಮೂರ್ಧ್ನಾ । ನಿಜಾನ್ನನುಜಿಘೃಕ್ಷುರವಾತಿತೀರ್ಷತ್

-ಸು. ಮ. 2-4

೨ 3 ಪ್ರಕೃಷ್ಟಃ ಅಣಃ ಶಬ್ದಃ ವೇದಾತ್ಮಕಃ, ತಂ ಯೋಗ್ಯೇಭ್ಯಃ ದದಾತೀತಿ ಪ್ರಾಣದಃ।

೩. 4 ಪ್ರಕೃಷ್ಟಃ ಅಣಃ ಜ್ಞಾನಂ, ತಂ ದದಾತೀತಿ ಪ್ರಾಣದಃ । 'ಅಣ ಗತೌ' ।

5 ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ।

-ಶ್ವೇ ಉ.(ಬ್ರ. ಸೂ. ಭಾ. 1-1-1)

೪ (ಮೋಕ್ಷವನ್ನು ಕುರಿತು) ಪ್ರಕೃಷ್ಟವಾದ ಗಮನವನ್ನು ಅನುಗ್ರಹಿಸುವವನು.[1]

ಯೋಗ್ಯರನ್ನು ಮೋಕ್ಷಕ್ಕೆ ಕೊಂಡೊಯ್ಯುವ ಪ್ರಯುಕ್ತ 'ಪ್ರಾಣ' ಎನಿಸಿರುವ[2] ವಾಸುದೇವನೇ ಮೋಕ್ಷಯೋಗ್ಯರಿಗೆ ಮೋಕ್ಷವನ್ನು ಕುರಿತು ಪ್ರಕೃಷ್ಟವಾದ ಗತಿಯನ್ನು ಅನುಗ್ರಹಿಸುವವನು.

೫ ದುಃಖವನ್ನು ಚೆನ್ನಾಗಿ ಪರಿಹರಿಸುವವನು.[3]

೬ ಪ್ರಕೃಷ್ಟನಾಗಿರುವವನು ಮತ್ತು ಚೆನ್ನಾಗಿ ಸುಖವನ್ನು ನೀಡುವವನು.[4]

೭ ಪ್ರಕೃಷ್ಟನಾಗಿರುವವನು ಮತ್ತು ಚೆನ್ನಾಗಿ ಬಲವನ್ನು ನೀಡುವವನು.[5]

ಬಲ, ಆನಂದ ಮುಂತಾದವು. ಜೀವಾತ್ಮನ ಸ್ವರೂಪಭೂತಗಳು ಆದರೆ ಭಗವದನುಗ್ರಹ ದಿಂದಷ್ಟೇ ಅವು ಅಭಿವ್ಯಕ್ತವಾಗುವವು[6] ಮೋಕ್ಷವು ಸುಖಪ್ರಾಪ್ತಿ ಹಾಗೂ ದುಃಖನಿವೃತ್ತಿ ರೂಪದ

---

೪ 1 ಪ್ರಕೃಷ್ಟಃ ಅಣಃ ಮೋಕ್ಷಂ ಪ್ರತಿ ಗತಿಃ ಪ್ರಾಣಸ್ತಂ ಯೋಗ್ಯೇಭ್ಯಃ ದದಾತೀತಿ ಪ್ರಾಣದಃ। '..ಅಣೀಯಸ್ಥ ಶ್ರುತಂ ಮೇ . .' (ಐ. ಉ. 2-6-1-1) ಇತ್ಯತ್ರ ಸ್ಥಿತಸ್ಯ ಅಣೀಶಬ್ದಸ್ಯ ವ್ಯಾಖ್ಯಾನಸಂದರ್ಭೇ ಶ್ರೀಮದಾಚಾರ್ಯೈಃ ಅಣಶಬ್ದಸ್ಯ ಗತಿವಾಚಿತ್ವಮಂಗೀಕೃತಮ್ ।

2 'ಪ್ರಾಣನಾಮಾ ವಾಸುದೇವೋ ಮೋಕ್ಷಂ ಸ್ವಾನ್ ಪ್ರಣಯೇದ್ ಯತಃ'
-ಛಾಂ. ಉ. ಭಾ. 3-3-2

೫ 3 ಣಃ ಸುಖಂ ನ ಭವತೀತಿ ಅಣಃ ದುಃಖಮ್ । ಪ್ರಕರ್ಷೇಣ ತಂ ದ್ಯತಿ ಖಂಡಯತೀತಿ ಪ್ರಾಣದಃ ।

೬ 4 ಪ್ರಕೃಷ್ಟತ್ವಾತ್ ಪ್ರ । ಆ ಸಮ್ಯಕ್ ಣಂ ಸುಖಂ ದದಾತೀತಿ ಆಣದಃ । ಪ್ರ ಆಣದಃ ಪ್ರಾಣದಃ ।

೭ 5 ಪ್ರಕೃಷ್ಟತ್ವಾತ್ ಪ್ರ । ಆ ಸಮ್ಯಕ್ ಣಂ ಬಲಂ ದದಾತೀತಿ ಆಣದಃ । ಪ್ರ ಆಣದಃ ಪ್ರಾಣದಃ ।

6 ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಮ್ । ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ ವಿಭೋಃ ।
-ಗೌಪವನ ಶ್ರುತಿ (ಬ್ರ. ಸೂ. ಭಾ. 2-3-31)

ಎರಡು ದಳಗಳನ್ನು ಹೊಂದಿದ್ದು, ಸುಖಪ್ರಾಪ್ತಿಯನ್ನು ಅನುಗ್ರಹಿಸುವ ಭಗವಂತನೇ ದುಃಖ ನಿವೃತ್ತಿಯನ್ನೂ ಅನುಗ್ರಹಿಸುವನು[1]

೮ ಪ್ರಕೃಷ್ಟನಾಗಿರುವವನು ಮತ್ತು (ಮುಕ್ತಾತ್ಮರ) ಸುಖವನ್ನು ಅಥವಾ ಬಲವನ್ನು ಚೆನ್ನಾಗಿ ರಕ್ಷಿಸುವವನು[2]

ಮುಕ್ತಾತ್ಮರ ಸುಖ, ಬಲಾದಿಗಳು ಅವರ ಸ್ವರೂಪಾತ್ಮಕಗಳಾಗಿದ್ದು ನಿತ್ಯವೆನಿಸಿವೆ. ನಿತ್ಯವೆನಿಸುವ ಪದಾರ್ಥಗಳನ್ನೂ ನಿತ್ಯಗಳನ್ನಾಗಿ ರಕ್ಷಿಸುವ ಭಗವಂತನು ಮುಕ್ತಾತ್ಮರ ಈತೆಹ ಗುಣಗಳನ್ನೂ ನಿತ್ಯಗಳನ್ನಾಗಿ ರಕ್ಷಿಸುತ್ತಿರುವನು

೯ (ಅಯೋಗ್ಯರಿಗೆ) ಪ್ರಕೃಷ್ಟ ಶಬ್ದರೂಪವಾದ ವೇದವು ದೊರಕದಂತೆ ಮಾಡುವವನು[3]

೧೦ (ಅಯೋಗ್ಯರಿಗೆ) ಪ್ರಕೃಷ್ಟಜ್ಞಾನ ಬಾರದಂತೆ ಮಾಡುವವನು.[4]

೧೧ (ಅಯೋಗ್ಯರಿಗೆ ಮುಕ್ತಿಯನ್ನು ಕುರಿತು) ಒಳ್ಳೆಯ ಗತಿ ದೊರಕದಂತೆ ಮಾಡುವವನು.[5]

---

1 ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ
–ಬೃ. ಉ. 5-5-1

* ಅತ್ರ ಪುತ್ರೈಷಣಾದಿಭ್ಯಃ ವ್ಯುತ್ಥಾನಕಥನೇನ ದುಃಖನಿವೃತ್ತಿಃ, ಭಿಕ್ಷಾಚರ್ಯಚರಣಕಥನೇನ ಸುಖಪ್ರಾಪ್ತಿಃ ಕಥ್ಯತೇ ।

೮ 2 ಪ್ರಕೃಷ್ಟತ್ವಾತ್ ಪ್ರ। ಆ ಸಮ್ಯಕ್ ಆಣಂ ಸುಖಂ ಬಲಂ ವಾ ದಯತೇ ರಕ್ಷತೀತಿ ಪ್ರಾಣದಃ। 'ದೇಙ್ ರಕ್ಷಣೇ'

೯ 3 ಪ್ರಕೃಷ್ಟಃ ಅಣಃ ಶಬ್ದಃ ವೇದಾತ್ಮಕಃ, ತಂ ಅಯೋಗ್ಯೇಷು ವಿಷಯೇ ದ್ಯತಿ ಖಂಡಯತಿ' ಲಬ್ಧಃ ಯಥಾ ನ ಸ್ಯಾತ್ತಥಾ ಕರೋತೀತ್ಯರ್ಥಃ ।

೧೦ 4 ಪ್ರಕೃಷ್ಟಃ ಅಣಃ ಜ್ಞಾನಂ, ತಂ ಅಯೋಗ್ಯೇಷು ವಿಷಯೇ ದ್ಯತಿ ಖಂಡಯತಿ, ಲಬ್ಧಃ ಯಥಾ ನ ಸ್ಯಾತ್ತಥಾ ಕರೋತೀತ್ಯರ್ಥಃ ।

೧೧ 5 ಪ್ರಕೃಷ್ಟಃ ಅಣಃ ಮೋಕ್ಷಂ ಪ್ರತಿ ಗತಿಃ ತಂ ಅಯೋಗ್ಯೇಷು ವಿಷಯೇ ದ್ಯತಿ ಖಂಡಯತೀತಿ ।

೧೨ (ಅಯೋಗ್ಯರಿಗೆ) ಚೆನ್ನಾಗಿ ದುಃಖವನ್ನು ನೀಡುವವನು.[1]

೧೩ ಪ್ರಕೃಷ್ಟನಾಗಿರುವವನು ಮತ್ತು (ಅಯೋಗ್ಯರಿಗೆ) ಸ್ವರೂಪಾತ್ಮಕ ಸುಖ ಅಥವಾ ಬಲ ಚೆನ್ನಾಗಿ ದೊರಕದಂತೆ ಮಾಡುವವನು.[2]

ಹೀಗೆ 'ಪ್ರಾಣದ' ಎಂಬ ನಾಮದ ಮೂಲಕ ಮುಕ್ತಿಯನ್ನು ಯೋಗ್ಯರಿಗೆ ತಲುಪಿಸುವುದರಲ್ಲೂ, ಅಯೋಗ್ಯರಿಗೆ ತಲುಪದಂತೆ ಮಾಡುವುದರಲ್ಲೂ ಭಗವಂತನ ಪಾತ್ರ ಎಷ್ಟಿದೆ—ಎಂಬುದರ ಕುರಿತಾಗಿ ಅನೇಕ ಗುಣಗಳನ್ನು ಅನುಸಂಧಾನ ಮಾಡಬಹುದಾಗಿದೆ.

[ಅರ್ಥವಿಶೇಷಗಳನ್ನು ೬೪, ೪೦೮ ಹಾಗೂ ೯೫೬ನೆಯ 'ಪ್ರಾಣದಃ' ನಾಮದ ವ್ಯಾಖ್ಯಾನವನ್ನು ನೋಡಬಹುದು]

## ಜಿಜ್ಞಾಸೆ

### [ತಮೋಗುಣದ ಕಾರ್ಯ]

ಪ್ರ – ದ್ವೈತಜ್ಞಾನ ಅದ್ವೈತಜ್ಞಾನ ಈ ಎರಡೂ ಪ್ರಕೃಷ್ಟಗಳು. ಮೋಕ್ಷಕ್ಕೆ ಎರಡೂ ಸಾಧನಗಳು ದ್ವೈತಾಚಾರ್ಯರಿಗೂ ಅದ್ವೈತಾಚಾರ್ಯರಿಗೂ ಮೋಕ್ಷವೇ ಗುರಿಯಾಗಿದೆ ಒಂದು ಊರಿಗೆ ಹೋಗಲಿಕ್ಕೆ ಅನೇಕ ಮಾರ್ಗಗಳು ಇರುವಂತೆ ದ್ವೈತಜ್ಞಾನ ಅದ್ವೈತಜ್ಞಾನಗಳೆರಡೂ ಮೋಕ್ಷ ಸಾಧನಗಳಾಗಲಿ, ಎರಡೂ ಜ್ಞಾನ ಪ್ರಕೃಷ್ಟವೇ ಆಗಲಿ ಹೀಗೆ ಏಕೆ ಹೇಳಬಾರದು?

ಉ – ಸತ್ವಗುಣತಮೋಗುಣಗಳು ವಿರುದ್ಧಕಾರ್ಯ ಜನಕಗಳು ಎಂದು ಗೀತೆಯಲ್ಲಿ ಸ್ಪಷ್ಟವಾಗಿದೆ. ಗೀತೆಯ ಅಭಿಪ್ರಾಯದಂತೆ ಸತ್ವಗುಣದ ಕಾರ್ಯವಾದ ಜ್ಞಾನವು ಪ್ರಕೃಷ್ಟವಾದದ್ದು. 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ। ತಮೇವ ಶರಣಂ ಗಚ್ಛ' ಎಂದು ಗೀತೆಯ ಉಪಸಂಹಾರ ಶ್ಲೋಕದಲ್ಲಿ ಇಡೀ ಗೀತೆಯ ಸಾರವನ್ನಾಗಿ ಉಪದೇಶಿಸಿದ ಈ ಶ್ಲೋಕದಲ್ಲಿ ಶರಣಾಗತಿಗೆ ಕಾರಣವಾದ ದ್ವೈತಜ್ಞಾನವು ಶ್ರೇಷ್ಠಜ್ಞಾನ ಎಂದು ನಿರೂಪಿತವಾಗಿದೆ ಈ ಜ್ಞಾನವು ಶ್ರೇಷ್ಠ ಜ್ಞಾನವಾದ್ದರಿಂದ ಇದು ಸತ್ವಗುಣದ ಕಾರ್ಯವೆಂದು ಗೀತೆಯ ಅಭಿಪ್ರಾಯ. ಈ ಜ್ಞಾನಕ್ಕೆ

---

೧೨ 1 ಣಃ ನ ಭವತೀತ್ಯಣಃ ದುಃಖಮ್ । ತಂ ಅಯೋಗ್ಯೇಭ್ಯಃ ಪ್ರಕರ್ಷೇಣ ದದಾತೀತಿ ಪ್ರಾಣದಃ ।

೧೩ 2 ಪ್ರಕೃಷ್ಟತ್ವಾತ್ ಪ್ರ । ಣಃ ಅಯೋಗ್ಯಾನಾಂ ಸುಖಂ ಬಲಂ ವಾ ಆ ಸಮ್ಯಕ್ ದ್ಯತಿ ಖಂಡಯತೀತಿ ಆಣದಃ ಪ್ರ ಆಣದಃ ಪ್ರಾಣದಃ ।

ವಿರುದ್ಧವಾದ ಜ್ಞಾನವು ಅದ್ವೈತಜ್ಞಾನವಾದರಿಂದ ಈ ಅದ್ವೈತಜ್ಞಾನವೂ ಕೂಡ ಸತ್ವಗುಣದ ಕಾರ್ಯವಾಗಲಾರದು ಆದುದರಿಂದ ಅದು ತಮೋಗುಣದ ಕಾರ್ಯವಾದ ನಿಕೃಷ್ಟ ಜ್ಞಾನವೆಂದು ಸಿದ್ಧವಾಗುವದು ಅದು ಅಧೋಗತಿಗೆ ಸಾಧನವಾಗಬಹುದೇ ಹೊರತು ಊರ್ಧ್ವಗತಿಗೆ ಸಾಧನವಾಗಲಾರದು



## ೩೨೩ ವಾಸವಾನುಜಃ

೧ ದೇವತೆಗಳ ಪ್ರಾರ್ಥನೆಯನ್ನು ಅನುಸರಿಸಿ ಅವತರಿಸುವವನು[1]

ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿ, ಧರ್ಮವನ್ನು ಸಂಸ್ಥಾಪಿಸುವುದಕ್ಕಾಗಿ ಯುಗಯುಗದಲ್ಲಿ ತಾನು ಅವತರಿಸುವೆನೆಂದು ಆಶ್ವಾಸನೆ ನೀಡಿರುವ[2] ಭಗವಂತನು, ಅಂತಹ ಉದ್ದೇಶವನ್ನು ನಡೆಸುವುದಕ್ಕಾಗಿ ದೇವತೆಗಳು ಪ್ರಾರ್ಥಿಸಿದರೆಂದರೆ ಆ ಪ್ರಾರ್ಥನೆಗನುಗುಣವಾಗಿ ಅವತರಿಸುವನು. ರಾಮಾವತಾರ[3], ವೇದವ್ಯಾಸಾವತಾರ[4] ಹಾಗೂ ಕೃಷ್ಣಾವತಾರ[5]—ಇವುಗಳ ಹಿನ್ನೆಲೆಯನ್ನು ಪರಿಶೀಲಿಸಿದಾಗ ಇದು ಸ್ಪಷ್ಟವಾಗುವುದು

---

೧ 1 ವಸೂನಾಂ ದೇವಾನಾಂ ಇದಂ (ಪ್ರಾರ್ಥನಮ್) ವಾಸವಮ್ । ತತ್ ಅನುಸೃತ್ಯ ಜಾಯತೇ ಪ್ರಾದುರ್ಭವತೀತಿ ವಾಸವಾನುಜಃ । 'ಆದಿತ್ಯಾ ವಸವೋ ರುದ್ರಾ ವಿಶ್ವೇ ಋಭವ ಇತ್ಯಪಿ । ಸರ್ವದೇವಸಮಾಖ್ಯಾ ಚ ...' ಇತಿ ಶಬ್ದನಿರ್ಣಯ (ಐ. ಉ. ಭಾ. 2-2-7-6) ನಿರೂಪಿತದಿಶಾ ವಸುಶಬ್ದಃ ದೇವತಾಸಾಮಾನ್ಯವಾಚಕೋಽಪಿ ।

2 ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥
-ಗೀ 4-8

3 ಇಮೌ ಚ ರಕ್ಷೋಽಧಿಪತೀ ಮತೋದ್ಧತೌ ಜಹಿ ಸ್ವವೀರ್ಯೇಣ ನೃಷು ಪ್ರಭೂತಃ
ಇತೀರಿತೇ ತೈರಖಿಲೈಸ್ಸುರೇಶ್ವರೈರ್ಬಭೂವ ರಾಮೋ ಜಗತೀಪತಿಃ ಪ್ರಭುಃ ।
-ಮ. ಭಾರ. ತಾ ನಿ 3-64

4 ತತೋ ಭವಂತಂ ಶರಣಂ ಗತಾ ವಯಂ ತಮೋನಿಹತ್ಯೈ ನಿಜಬೋಧವಿಗ್ರಹಮ್ । ಇತೀರಿತಸ್ತೈರಭಯಂ ಪ್ರದಾಯ ಸುರೇಶ್ವರಾಣಾಂ ಪರಮೋಽಪ್ರಮೇಯಃ । ಪ್ರಾದುರ್ಬಭೂವಾಮೃತಭೂರಿಲಾಯಾಂ ವಿಶುದ್ಧವಿಜ್ಞಾನಘನಸ್ವರೂಪಃ ॥
-ಮ. ಭಾರ. ತಾ. ನಿ. 10-41

5 'ತೌ ದೇವಕೀವಸುದೇವೌ ಚ ತೇಪತುಸ್ತಪಸ್ತ್ವದೀಯಂ ಸುಕವಿಂಚ್ಛವಮಾನೌ ।

೨ ದೇವತೆಗಳ ಸಮುದಾಯವು ತನ್ನ ಆದೇಶಕ್ಕನುಗುಣವಾಗಿ ಅವತರಿಸುವಂತೆ ಅನುಗ್ರಹಿಸುವವನು.[1]

೩ ದೇವತೆಗಳ ಸಮುದಾಯವನ್ನು ಅನುಸರಿಸಿ ಪ್ರಾದುರ್ಭವಿಸುವವನು.[2]

ಭಗವಂತನು ಭೂಮಿಯಲ್ಲಿ ಅವತರಿಸುವನೆಂದಾದರೆ, ಅವನ ಆಜ್ಞಾನುಸಾರವಾಗಿ, ಅವನ ಸೇವೆಗಾಗಿ ದೇವತೆಗಳು ಮೊದಲೇ ಅವತರಿಸುವರು. ಅವರ ಅವತಾರವನ್ನು ಅನುಸರಿಸಿ ಭಗವಂತನು ಅವತರಿಸುವನು ರಾಮಾವತಾರ[3] ಹಾಗೂ ಕೃಷ್ಣಾವತಾರಗಳಲ್ಲಿ[4] ಇದು ಸ್ಪಷ್ಟವಾಗುವುದು

೪ ಇಂದ್ರನ ತಮ್ಮನಾಗಿ ಅವತರಿಸಿರುವವನು[5]

೫ ಇಂದ್ರನು ತನ್ನ ಆದೇಶಕ್ಕನುಗುಣವಾಗಿ ಅವತರಿಸುವಂತೆ ಅನುಗ್ರಹಿಸುವವನು[6]

---

ತ್ವಾಮೇವ ತಸ್ಮಾತ್ ಪ್ರಥಮಂ ಪ್ರದರ್ಶ್ಯ ತತ್ರ ಸ್ವರೂಪಂ ಹಿ ತತೋ ವ್ರಜಂ ವ್ರಜ ॥
ಇತೀರಿತಸ್ಸೋಽಬ್ಜಭವೇನ ಕೇಶವಸ್ತಥೇತಿ ಚೋಕ್ತ್ವಾ ..
-ಮ ಭಾರ. ತಾ ನಿ. 11-229-230

೨ 1 ವಸೂನಾಂ ದೇವಾನಾಂ ಇದಂ ವಾಸವಂ ನೇವಾನಾಂ ಸಮುದಾಯಃ, ತತ್ ಅನುಸೃತ್ಯ ಜಾಯತೇ ಯಸ್ಮಾತ್ಸಃ ವಾಸವಾನುಜಃ ।

೩ 2 ವಸೂನಾಂ ದೇವಾನಾಂ ಸಮುದಾಯಃ ವಾಸವಂ ತತ್ ಅನುಸೃತ್ಯ ಜಾಯತೇ ಪ್ರಾದುರ್ಭವತೀತಿ ವಾಸವಾನ ಜಃ ।

3 'ತದಾಜ್ಞಯಾ ದೇವಗಣಾ ಬಭೂವಿರೇ ಪುರೈವ ತಸ್ಯ ಭೂಮ್ನಃ । ನಿಷೇವಣಾಯೋರುಗುಣಸ್ಯ ವಾನರೇಷು.....' -ಮ. ಭಾರ. ತಾ. ನಿ. 3-66, 67

4 .....ಪುನರಾಹ ದೇವತಾಃ । ಸರ್ವೇ ಭವಂತೋ ಭವತಾಽಶು ಮಾನುಷೇ ಕಾರ್ಯಾನುಸಾರೇಣ ಯಥಾನುರೂಪತಃ ॥ ಅಥಾವತೀರ್ಣಾಸ್ಸಕಲಾಶ್ಚ ದೇವತಾ ಯ ಥಾ ಯ ಥೈವಾಹ ಹರಿಸ್ತಥಾತಥಾ । -ಮ. ಭಾರ. ತಾ. ನಿ. 11-230

೪ 5 ವಾಸವಂ ಇಂದ್ರಂ ಅನುಸೃತ್ಯ ಜಾಯತೇ ಪ್ರಾದುರ್ಭವತೀತಿ ವಾಸವಾನುಜಃ ।

೫ 6 ಭಗವದಾಜ್ಞಾಂ ಅನುಸೃತ್ಯ ಜಾಯತ ಇತಿ ಅನುಜಃ । ವಾಸವಃ ಅನುಜಃ ಯಸ್ಮಾತ್ಸಃ ವಾಸವಾನುಜಃ ।

ಭಗವಂತನು ಬಲಿಯ ನಿಗ್ರಹಕ್ಕಾಗಿ ಕಶ್ಯಪ—ಅದಿತಿಯರಲ್ಲಿ ವಾಮನನಾಗಿ ಅವತರಿಸುವನು.[1] ಕಶ್ಯಪ—ಅದಿತಿಯರಲ್ಲಿ ಮೊದಲು ಇಂದ್ರನು ಅವತರಿಸಿದ್ದರಿಂದ, ಬಳಿಕ ಅವತರಿಸಿರುವ ವಾಮನನು ಅವನ ಅನುಜ ಎನಿಸಿರುವನು.

೬ ದೇವತೆಗಳ ಒಡೆಯನಾಗಿರುವವನು ಮತ್ತು ತನ್ನ ಇಚ್ಛಾನುಗುಣವಾಗಿ ಅವತರಿಸುವವನು[2]

೭ ಮೋಕ್ಷರೂಪವಾದ ಸಂಪತ್ತಿಗೆ ಒಡೆಯನಾಗಿರುವವನು ಮತ್ತು ಜೀವಾತ್ಮರ ಜನ್ಮವನ್ನು ಅನುಸರಿಸಿ ಪ್ರಾದುರ್ಭವಿಸುವವನು[3].

ಭಗವಂತನು ಮೋಕ್ಷ ಸಂಪತ್ತಿಗೆ ಒಡೆಯನೆನಿಸುವನಾದರೂ, ಸ್ವೇಚ್ಛೆಯಿಂದ ಕ್ರೀಡಾರೂಪವಾಗಿ ಜೀವಾತ್ಮರ ಜೊತೆಗೆ ತಾನೂ ಪ್ರಾದುರ್ಭವಿಸುವನು ಅನ್ನವಲ್ಲಿದ್ದವನಾಗಿ, ಅನ್ನದ ಜೊತೆಗೆ ಪುರುಷನನ್ನು ಪ್ರವೇಶಿಸಿ, ಆ ಅನ್ನವು ರೇತಸ್ಸಾಗುವಾಗ ಅಲ್ಲಿ ಅಂತರ್ಯಾಮಿಯಾಗಿ ಇರುವನು. ಪುರುಷನು ರೇತಸ್ಸನ್ನು ಸ್ತ್ರೀಯಲ್ಲಿ ಹಾಕಿದಾಗ, ಅದರ ಜೊತೆಗೆ ಭಗವಂತನೂ ಸ್ತ್ರೀಯನ್ನು ಪ್ರವೇಶಿಸುವನು. ಇದು ಅವನ ಮೊದಲ ಪ್ರಾದುರ್ಭಾವ ಎನಿಸಿದೆ ರೇತಸ್ಸು ಮಗುವಾಗಿ ಭೂಮಿಯಲ್ಲಿ ಹುಟ್ಟುವಾಗ, ಅದರ ಜೊತೆ ಭಗವಂತನು ಎರಡನೇ ಪ್ರಾದುರ್ಭಾವವನ್ನು ಪಡೆಯುವನು. ಹಾಗೆಯೇ ವೃದ್ಧನಾದ ಪಿತೃ ಮೃತನಾಗಿ ಇನ್ನೊಂದೆಡೆ ಜನಿಸಿದಾಗ, ಅವನ ಜೊತೆ ಭಗವಂತನೂ ಪ್ರಾದುರ್ಭಾವವನ್ನು ಪಡೆಯುವನು ಇದು ಅವನ ಮೂರನೆಯ ಪ್ರಾದುರ್ಭಾವ ಎನಿಸಿದೆ. ಹೀಗೆ ಭಗವಂತನು ಅಂತರ್ಯಾಮಿಯಾಗಿ ಜೀವಾತ್ಮನ ಜನ್ಮವನ್ನು ಅನುಸರಿಸಿ ಪ್ರಾದುರ್ಭಾವವನ್ನು ಹೊಂದುತ್ತಿರುವನೆಂದು ಐತರೇಯಸಂಹಿತೆ ತಿಳಿಸಿದೆ.[4]

---

1 ಇತ್ಥಂ ವಿರಿಂಚಸ್ತುತಕರ್ಮವೀರ್ಯಃ ಪ್ರಾದುರ್ಬಭೂವಾಮೃತಭೂರದಿತ್ಯಾಮ್ ।
ಚತುರ್ಭುಜಃ ಶಂಖಗದಾಬ್ಜಚಕ್ರಃ ಪಿಶಂಗವಾಸಾ ನಲಿನಾಯತೇಕ್ಷಣಃ ॥
-ಭಾಗ. 8-18-1

೬ 2 ವಸವೋ ದೇವಾ ಅಸ್ಯ ಸಂತೀತಿ ವಾಸವಃ, ಅಮರಪ್ರಭುಃ । ಅನು ಸ್ವೇಚ್ಛಾಮನುಸೃತ್ಯ ಜಾಯತೇ ಪ್ರಾದುರ್ಭವತೀತಿ ಅನುಜಃ ವಾಸವಶ್ಚಾಸಾವನುಜಶ್ಚ ವಾಸವಾನುಜಃ।

೭ 3 ಮೋಕ್ಷಾಖ್ಯವಸು ಅಸ್ಯಾಸ್ತೀತಿ ವಾಸವಃ ಅನು ಜೀವಾತ್ಮನಃ ಜನ್ಮ ಅನುಸೃತ್ಯ ಜಾಯತ ಇತಿ ಅನುಜಃ । ವಾಸವಶ್ಚಾಸಾವನುಜಶ್ಚ ವಾಸವಾನುಜಃ ।

4 ಅಯಂ ನಾರಾಯಣೋ ದೇವಃ ಪುರುಷೇ ಪ್ರಥಮಂ ವಿಶೇತ್ । ಅನ್ನಸ್ಥೋಽನ್ನೇನ ಸಹಿತಸ್ತಸ್ಮಿನ್ ರೇತಸ್ತ್ವಮಾಗತೇ । ತಸ್ಮಿನ್ ಸ್ಥಿತಸ್ವರೂಪಂ ಸ ಪುರುಷಸ್ಥೋ ಬಿಭ-

೮ ಜ್ಞಾನ, ಭಕ್ತಿ, ವೈರಾಗ್ಯ—ರೂಪದಲ್ಲಿರುವ ಸಂಪತ್ತಿನ ಸಮೂಹಕ್ಕೆ ಅನುಗುಣವಾಗಿ ಪ್ರಕಟನಾಗುವವನು[1]

ಭಗವಂತನು ತನ್ನ ರೂಪವನ್ನು ಸಾಧಕನ ಜ್ಞಾನ, ಭಕ್ತಿ ವೈರಾಗ್ಯಗಳ ಮಟ್ಟಕ್ಕೆ ಅನುಗುಣವಾಗಿ ಪ್ರಕಟಗೊಳಿಸುವನು.

೯ ದೇವತೆಗಳಿಗೆಲ್ಲ ಒಡೆಯನಾಗಿರುವವನು ಮತ್ತೆ ಮತ್ತೆ ಅವತರಿಸುವವನು: ಅಥವಾ ಸ್ವತಂತ್ರವಾಗಿ ಅವತರಿಸುವವನು[2]

ದೇವತೆಗಳಿಗೆ ಒಡೆಯನಾದ ಭಗವಂತನು, ಅಂತಹ ದೇವತೆಗಳ ಪ್ರಾರ್ಥನಾನುಸಾರವಾಗಿ ಮತ್ತೆ ಮತ್ತೆ ಅವತರಿಸುತ್ತಿರುವನು ಅವನು ಮತ್ತೆ ಮತ್ತೆ ಅವತರಿಸುವವನೆಂಬ ಅಭಿಪ್ರಾಯದಲ್ಲಿ ಅವನನ್ನು 'ಅನುಜಃ' ಎಂದು ಕರೆದಿದೆ ಬೃಹತ್ಸಂಹಿತೆ.[3]

---

ತ್ಯರ್ಜಃ । ತದ್ರೂಪಂ ರೇತಸಾ ಸಾಕಂ ಸ್ವಯಂ ಪುಂಸಿ ಸ್ಥಿತೋ ಹರಿಃ । ಸ್ತ್ರಿಯಾಂ ಸಿಂಚತಿ ತಸ್ಯೈವ ಸ್ಥಾನಾಂತರಗತೇಃ ಪ್ರಭೋಃ । ಪ್ರಥಮಂ ಜನ್ಮ ವಿಷ್ಣೋಸ್ತತ್ ಪೃಥಿವ್ಯಾಂ ಜನ್ಮ ಪುತ್ರಸ್ಯ ದ್ವಿತೀಯಂ ವಿಷ್ಣುಜನ್ಮ ಹಿ । ಏತದ್ರೂಪಂ ನಿಧಾಯ್ಯೈವ ಜೀವಾರ್ಥೇ ಧರ್ಮಕರ್ತವೇ । ಪಿತೃಸ್ಥೇನ ತು ರೂಪೇಣ ಗಚ್ಛತ್ಯನ್ಯತ್ರ ಕೇಶವಃ । ಪಿತುರನ್ಯತ್ರ ಜನನಂ ತೃತೀಯಂ ಜನ್ಮ ತದ್ಧರೇಃ । ಅಂತರ್ಯಾಮಿತಯೈವಂ ಹಿ ಸರ್ವಜೀವೇಷು ಸಂಸ್ಥಿತಮ್ ।.. .' ಐತರೇಯಸಂಹಿತಾ (ಐ. ಉ. ಭಾ. 2-4-1)

೮ 1 ವಸೂನಾಂ ಜ್ಞಾನಭಕ್ತಿವಿರಕ್ತಿರೂಪಾಣಾಂ ಧನಾನಾಂ ಇದಂ ವಾಸವಂ, ಜ್ಞಾನಾದೀನಾಂ ಸಮುದಾಯಃ । ತತ್ ಅನುಸೃತ್ಯ ಜಾಯತೇ ಅಭಿವ್ಯಕ್ತೋ ಭವತೀತಿ ವಾಸವಾನುಜಃ ।

೯ 2 ವಸವಃ ದೇವಾ ಅಸ್ಯ ಸಂತೀತಿ ವಾಸವಃ । ಪುನಃ ಪುನರ್ಜಾಯತೇ ಸ್ವಾತಂತ್ರ್ಯೇಣ ಜಾಯತ ಇತಿ ವಾ ಅನುಜಃ । 'ಅನುಭೂಃ ಪುನಃ ಪುನರವತಾರಾಭಾವಿರ್ಭವವಾನ್, ಸ್ವಾತಂತ್ರ್ಯೇಣ ವಿದ್ಯಮಾನೋ ವಾ' ಇತಿ ಭಾಗವತಸ್ಯ (2-2-7) ಪ್ರಾಚೀನ ವ್ಯಾಖ್ಯಾನೇ ಅನುಭೂಶಬ್ದಃ ಯಥಾ ವ್ಯಾಖ್ಯಾತಸ್ತದ್ವತ್ । ವಾಸವಶ್ಚಾಸಾವನುಜಶ್ಚ ವಾಸವಾನುಜಃ

3 ಯಥೇಷ್ಟಭವನಾದ್ ವಿಷ್ಣುರನುಭೂಃ ಪರಿಕೀರ್ತಿತಃ ।

-ಬೃಹತ್ಸಂಹಿತಾ (ಭಾಗ. ತಾ. ನಿ. 2-2-7)

## ಜಿಜ್ಞಾಸೆ

### [ಗುಣವಂತರಾಗಲು ಪ್ರಯತ್ನಿಸಬೇಕು]

ಪ್ರ - ವಿಷ್ಣುವು ಇಂದ್ರದೇವರ ತಮ್ಮನಾಗಿ ಏಕೆ ಅವತರಿಸಿದ್ದು? ಅನುಜತ್ವವು ನಿಕೃಷ್ಟತ್ವ ಪ್ರಯೋಜಕವಾಗದೆಯಲ್ಲ?

ಉ - ವಾಮನನಿಗೆ ಇಂದ್ರಾನುಜತ್ವವು ಇದ್ದರೂ ಸರ್ವಗುಣಪೂರ್ಣತ್ವವು ಇದ್ದ ಕಾರಣ ವಾಮನ ನಿಗೆ ಅಗ್ರಪೂಜೆಯನ್ನು ದೇವತೆಗಳು, ಋಷಿಗಳು ಮಾಡಿದರು. ಇದರಿಂದ ವಯಸ್ಸಿನಲ್ಲಿ ಜ್ಯೇಷ್ಠತ್ವಕ್ಕಿಂತ ಗುಣಜ್ಯೇಷ್ಠತ್ವವೇ ವಿಶೇಷಪೂಜ್ಯತ್ವಕ್ಕೆ ಪ್ರಯೋಜಕವಾಗಿದೆ. ತಾವು ಎಲ್ಲ ರಿಂದಲೂ ವಿಶೇಷ ಪೂಜ್ಯರಾಗಬೇಕೆಂದು ಬಯಸುವವರೆಲ್ಲ ವಿಶೇಷ ಗುಣವಂತರಾಗಲು ಪ್ರಯತ್ನಿಸಬೇಕು ಎಂದು ಲೋಕಕ್ಕೆ ತಿಳಿವಳಿಕೆಯನ್ನು ಕೊಡುವದಕ್ಕಾಗಿ ವಾಮನನು ವಾಸವಾನುಜನಾದನು.



## ೩೨೪ ಅಪಾಂ ನಿಧಿಃ

೧ ಚೆನ್ನಾಗಿ ಪೂರ್ಣರಾದ ಅಥವಾ ಪಾಲಿಸುವ ದೇವತೆಗಳಿಗೆ ಆಶ್ರಯನಾಗಿರುವವನು.[1]

ಬ್ರಹ್ಮಾದಿ ದೇವತೆಗಳಿಗೆ 'ಅಪ' ಎಂಬ ಹೆಸರು ಹೇಗೆ ಕೂಡುವುದು?—ಎಂಬುದಾಗಿ ಲಕ್ಷ್ಮೀ ದೇವಿಯು ಮಹಿದಾಸ ನಾಮಕ ಭಗವಂತನನ್ನು ವಿಚಾರಿಸಲು, ಅವನು ಹೀಗೆ ಉತ್ತರಿಸುವನು— ಬ್ರಹ್ಮ ಎನಿಸುವ ನಾನು ಗುಣಗಳಿಂದ ಚೆನ್ನಾಗಿ ಪೂರ್ಣನಾಗಿರುವ ಪ್ರಯುಕ್ತ ಅಪ ಎಂದೆನಿಸಿರು ವೆನು ನಾನೇ ಬ್ರಹ್ಮಾದಿಗಳಿಗೆಲ್ಲ ತಂದೆಯಾಗಿರುವ ಪ್ರಯುಕ್ತ ನನ್ನ 'ಅಪ' ಎಂಬ ಹೆಸರು ಬ್ರಹ್ಮ ರುದ್ರಾದಿಗಳಿಗೂ ಬಂದಿರುವುದು ಪುತ್ರನ ಹೆಸರು ಪಿತೃಗೆ ಬರುವಂತೆ, ಪಿತೃನ ಹೆಸರು ಪುತ್ರನಿಗೂ ಬರುವುದೆಂದಿದೆ ಯದು ವಂಶದಲ್ಲಿ ಬಂದವರೆಲ್ಲ 'ಯದುಗಳು' ಕುರುವಂಶದಲ್ಲಿ ಬಂದವರೆಲ್ಲ 'ಕುರು ಗಳು' ರಘುವಂಶದಲ್ಲಿ ಬಂದವರೆಲ್ಲ 'ರಘುಗಳು'—ಎನಿಸುವಂತೆ ಹೀಗೆ 'ಅಪ' ಎಂಬ ತನ್ನ ಹೆಸರನ್ನು ತನ್ನ ಮಕ್ಕಳಾದ ದೇವತೆಗಳಿಗೆ ಕೊಟ್ಟಿರುವುದಾಗಿ ಮಹಿದಾಸನು ತಿಳಿಸುವನು ಹಾಗೆಯೇ ದೇವತೆ ಗಳಲ್ಲಿ ತಾನು ವ್ಯಾಪಿಸಿಕೊಂಡಿರುವುದಾಗಿಯೂ, ದೇವತೆಗಳು ತನ್ನನ್ನು ಆಶ್ರಯಿಸಿಕೊಂಡಿರುವು ದಾಗಿಯೂ ಬೋಧಿಸುವನು. ತಾನೇ ಅನುಗ್ರಹಿಸಿರುವ ಪದವಿಗಳಲ್ಲಿ ಬ್ರಹ್ಮಾದಿಗಳು ಇರುವರು.

---

೧ 1 ಆ ಸಮಂತಾತ್ ಪೃಣಂತಿ ಪಾಲಯಂತೀತಿ ವಾ ಅಪಃ ದೇವತಾಃ । ತಾಸಾಂ ನಿಧಿಃ ಆಶ್ರಯಃ ಅಪಾಂ ನಿಧಿಃ ।

ಅವರಿಗೆ ಜ್ಞಾನ, ಕರ್ಮ, ಬಲ ಹಾಗೂ ಸತ್ತಾ—ಇವುಗಳನ್ನೆಲ್ಲ ಅನುಗ್ರಹಿಸಿ, ಅವರನ್ನು ಪೋಷಿಸುತ್ತಿರುವವನೂ ತಾನೇ ಎಂದು ಮಹಿದಾಸನು ಉಪದೇಶಿಸಿರುವನು[1] ಇದರಿಂದ ಚತುರ್ಮುಖ ಮುಂತಾದ ದೇವತೆಗಳು ಭಗವಂತನನ್ನು ಎಷ್ಟರ ಮಟ್ಟಿಗೆ ಆಶ್ರಯಿಸಿಕೊಂಡಿರುವರೆಂಬುದು ಸ್ಪಷ್ಟವಾಗುವುದು

೨ ಜಲಾಭಿಮಾನಿಗಳಾಗಿದ್ದು, 'ಅಪ್' ಎನಿಸುವ ಚತುರ್ಮುಖ, ಶೇಷ, ಗರುಡ ರುದ್ರಾದಿಗಳಿಗೆ ಆಶ್ರಯನಾಗಿರುವವನು[2]

---

1 ಆಪಾ ಇತ್ಯಾಪ ಇತಿ ತದಿದಮಾಪ ಏವೇದಂ ಸರ್ವಂ ಮೂಲಮುದಕಸ್ತೂಲಮುದಯಂ ಪಿತೈತೇ ಪುತ್ರಾ ಯತ್ರ ಹ ಕ್ವಚನ ಪುತ್ರಸ್ಯ ತತ್ ಪಿತುರ್ಯತ್ರ ವಾ ಪಿತುಸ್ತತ್ ಪುತ್ರಸ್ಯೇತತ್ ತದುಕ್ತಂ ಭವತ್ಯೇತದ್ಧ ಸ್ಮ ವೈ ತದ್ ವಿದ್ವಾನಾಹ ಮಹಿದಾಸ ಐತರೇಯ ಅಹಂ ಮಾಂ ದೇವೇಭ್ಯೋ ವೇದಾ ಓ ಮದ್ ದೇವಾನ್ ವೇದೇತಿ ಪ್ರದಾತಾ ಹ್ಯೇತ ಇತಃ ಸಂಭೃತಾ ಇತಿ .... । —ಐ. ಉ. 1-6-1

ಆಪ ಇತ್ಯೇವ ದೇವಾನಾಂ ಬ್ರಹ್ಮಾದೀನಾಂ ಕಥಂ ಭವೇತ್ ನಾಮೇತ್ಯಪೃಚ್ಛಲ್ಲಕ್ಷ್ಮೀಃ ಮಹಿದಾಸಂ ಜನಾರ್ದನಮ್ । ಆಪ ಇತ್ಯೇವ ನಾಮೈಷಾಂ ಭವತೀತ್ಯಾಹ ಸ ಪ್ರಭುಃ । ಇದಂ ಮದಾಖ್ಯಂ ಯದ್ ಬ್ರಹ್ಮ ಹ್ಯಾಪ ಇತ್ಯಭಿಧೀಯತೇ । ಆ ಪೂರ್ಣತ್ವಾತ್ ಗುಣೈಃ ಸರ್ವೈಸ್ತನ್ಮೂಲಮಖಿಲಸ್ಯ ಚ । ತೂಲಭೂತಂ ತದನ್ಯತ್ತು ಪಿತಾ ಹ್ಯೇಷ ಜನಾರ್ದನಃ । ಪುತ್ರಾ ಬ್ರಹ್ಮಾದಯಃ ಸರ್ವೇ ನೈವಾಯಂ ವೃಕ್ಷವನ್ಮೂಲವತ್ । ಸ್ವತಂತ್ರತ್ವಾಜ್ಜಗನ್ನಾಥಃ ಪಿತೃತ್ವಾತ್ ಪರಮೇಶಿತುಃ । ತನ್ನಾಮಾಸಾಽಪ ಇತಿ ಹ್ಯೇತತ್ ಬ್ರಹ್ಮರುದ್ರಾದೀನಾಂ ಭವೇತ್ । ಯಥಾ ಯದವ ಇತ್ಯೇವ ರಘವಃ ಕುರವಸ್ತಥಾ । ಆಪ ಇತ್ಯೇವ ಸರ್ವೇಷಾಂ ದೇವಾನಾಂ ಪ್ರದದೌ ಹರಿಃ । ಸ್ವಕೀಯಮೇವ . ನಾಮ ಸ ಭಗವಾನ್ ವಿಷ್ಣುರ್ಮಹಿದಾಸಾಭಿಧಃ ಪ್ರಭುಃ । ಜಾನನ್ನಿತ್ಯೋದಿತಜ್ಞಾನಾ ದಾಹ ದೇವೀಮಿದಂ ವಚಃ । ದೇವಪರ್ಯಂತಮಾ ವ್ಯಾಪ್ತಿಂ ವೇದಾಹಂ ಮಮ ಸರ್ವದಾ । ಮತ್ಪರ್ಯಂತಂ ತಥಾ ವ್ಯಾಪ್ತಿಂ ದೇವಾನಾಮಪಿ ಸರ್ವಶಃ । ಮಯಿ ದೇವಾಸ್ತೇಷು ಚಾಹಮಿತಿ ವಿದ್ಧಿ ವರಾನನೇ । ಮಯೈತೇ ಹಿ ಪ್ರದತ್ತಾನಿ ಪದಾನಿ ಬ್ರಹ್ಮಪೂರ್ವಕಾಃ । ಅಧಿತಿಷ್ಠಂತಿ ಸತ್ತಾದ್ಯಾ ಅಪ್ಯೇತೇಷಾಂ ಮದಾಜ್ಞಯಾ । ಜ್ಞಾನಕರ್ಮಬಲೇಹಾದ್ಯಾ ಮದ್ದತ್ತಾ ಇತಿ ಕಿಂ ವದೇ । ಸಂಭೃತಾ ಮತ್ತ ಏವೈತೇ. ।

೨ 2 'ಬ್ರಹ್ಮಶೇಷಸುಪರ್ಣೇಂದ್ರಶಿವಾದ್ಯಾ ಆಪ ಈರಿತಾಃ । ತೇ ವಿಷ್ಣೋರ್ಮನಸಾ ಜಾತಾಃ ಸರ್ವೇ ಚಾಬಭಿಮಾನಿನಃ' (ಐ. ಉ. ಭಾ 1-5-6) ಇತಿ ಅಪಃ ಬ್ರಹ್ಮಶೇಷಸುಪರ್ಣೇಂದ್ರ ಶಿವಾದ್ಯಾಃ । ತಾಸಾಂ ನಿಧಿಃ ।

೬ ಅಪ್ ಎನಿಸುವ ವಾಯುದೇವನಿಗೆ ಆಶ್ರಯನಾಗಿರುವವನು[1]

೭ ಪಾಲಿಸುವ ಪ್ರಯುಕ್ತ 'ಆಪ' ಎನಿಸುವ ವರುಣನಿಗ ಆಶ್ರಯನಾಗಿರುವವನು.[2]

೮ (ಪ್ರಲಯಕಾಲದಲ್ಲಿ) ದೇವತೆಗಳು ಯಾರಲ್ಲಿ ವಿಶೇಷವಾಗಿ ಸೇರಿಕೊಳ್ಳುವರೋ ಅಂತಹವನು[3]

೯ ದೇವತೆಗಳಿಗೆ ನಿಧಿಯಂತೆ ಇರುವವನು[4]

ಭಗವಂತನು ಸಮಸ್ತ ಜಗತ್ತಿಗೂ ಆಧಾರನಾಗಿರುವವನು. ಪ್ರಲಯ ಕಾಲದಲ್ಲಿ ಸಮಸ್ತ ಜಗತ್ತೂ ಪ್ರಕೃತಿಯ ಮೂಲಕ ಅವನನ್ನು ಸೇರಿಕೊಳ್ಳುವುದು[5] ಇಂತಹ ಭಗವಂತನು ಎಲ್ಲರ ಪಾಲಿಗೂ ನಿಧಿಯಂತೆ ಇರುವವನು ಆದರೆ ಇದನ್ನು ಜ್ಞಾನಿಗಳಲ್ಲದವರು ವಿಶ್ಲೇಷಿಸಿಕೊಳ್ಳಲಾರರು. ಜ್ಞಾನಿಶ್ರೇಷ್ಠರಾದ ದೇವತೆಗಳು ಈ ವಿಶ್ಲೇಷಣೆ ಉಳ್ಳವರಾಗಿರುವರು ಆದ್ದರಿಂದಲೇ ವಿಶೇಷವಾಗಿ 'ಅಪಾಂ ನಿಧಿಃ' ಎಂದು ಉಲ್ಲೇಖಿಸಲಾಗಿದೆ[6]

---

೬ 1 'ಮನ್ವಾಖ್ಯಃ ಪ್ರಾಣ ಏವಾಸ್ಯಾ ಅವ್ಯಾವಮಾ ಜಾಯತೇ ಹರೇಃ' (ಛಾಂ. ಉ. ಭಾ. 6-2-1) ಇತ್ಯುಕ್ತ ದಿಶಾ ಆಪಃ ವಾಯುಃ । ತಾಸಾಂ ನಿಧಿಃ ।

೭ 2 'ಆಪೋ ವರುಣ ಉದ್ದಿಷ್ಟೋ ಯದೇತತ್ ಪಾಲಯತ್ಯಸೌ' ಇತಿ ಮಹಾಭಿವಾಂ-ಸಾಯಾಂ (ಬೃ. ಉ. ಭಾ. 5-7-4) ನಿರೂಪಿತದಿಶಾ ಆಪಃ ವರುಣಃ । ತಾಸಾಂ ನಿಧಿಃ ।

೮ 3 ಪ್ರಲಯಕಾಲೇ ನಿಧೀಯಂತೇ ಅತ್ರೇತಿ ನಿಧಿಃ । ಅಪಾಂ ದೇವತಾನಾಂ ನಿಧಿಃ ।

೯ 4 ಅಪಾಂ ದೇವತಾನಾಂ ನಿಧಿರಿವ ಅಪಾಂ ನಿಧಿಃ ।

5 '.. ಅಸ್ಯ ಜಗತೋ ನಿಧಾನಂ . ' -ಗೀ. 9-18

* ...ನಿಧಾನೃತ್ವಾತ್ ನಿಧಾನಮ್... । -ಗೀ. ತಾ.

* ಸಂಹಾರಕಾಲೇ ಪ್ರಕೃತ್ಯಾ ಜಗದತ್ರ ನಿಧೀಯತ ಇತಿ ನಿಧಾನಮ್ ।

-ಗೀ. ಭಾ.

6 ಬುದ್ಧಿಪೂರ್ವಕತ್ವಾಬುದ್ಧಿಪೂರ್ವಕತ್ವೇನ ಭೇದಃ ।

-ಗೀ. ಭಾ. 9-29

೭ ಗುಣಗಳಿಂದ ಪರಿಪೂರ್ಣಗಳಾದ ಮತ್ಸ್ಯಾದಿ–ಅವತಾರಗಳ ಏಕೀಭಾವಕ್ಕೆ ಅಧಿಕರಣನಾಗಿರುವವನು.[1]

ಭಗವಂತನ ಕ್ಷೀರಸಾಗರಶಾಯಿ ಪದ್ಮನಾಭ ರೂಪವು ಮತ್ಸ್ಯಾದಿ ರೂಪಗಳಿಗೆ ಅಭಿವ್ಯಂಜಕವಾಗಿರುವುದರಿಂದ ನಿಧಾನವೂ ಆಗಿದೆ—ಅವತಾರ ಕಾರ್ಯ ಮುಗಿದ ಬಳಿಕ ಆಯಾಯ ಅವತಾರ ಪದ್ಮನಾಭ ರೂಪಿ ಭಗವಂತನಲ್ಲೇ ಏಕೀಭಾವವನ್ನು ಹೊಂದುವುದು—ಎಂಬುದಾಗಿ ಸೂತರು ಬೋಧಿಸಿರುವರು.[2]

೮ ಕರ್ಮಗಳಿಗೆ ವಿಶೇಷವಾಗಿ ಆಧಾರ ಆಗಿರುವವನು.[3]

ಭಗವಂತನು ಅಗ್ನಿಹೋತ್ರಾದಿ ಕ್ರಿಯೆಗಳಲ್ಲಾಗಲೀ, ಕ್ರಿಯಾಜನ್ಯ ಅದೃಷ್ಟದ ಉತ್ಪಾದನೆಯಲ್ಲಾಗಲೀ, ಅದೃಷ್ಟದಿಂದ ಹುಟ್ಟುವ ಫಲದ ಪ್ರಾಪ್ತಿಯಲ್ಲಾಗಲೀ, ಜೀವಾತ್ಮರಿಗೆ ಸ್ವಾತಂತ್ರ್ಯವನ್ನು ನೀಡಿಲ್ಲ ಸ್ವತಂತ್ರನಾದ ತಾನೇ ಈ ಎಲ್ಲವನ್ನೂ ನಿರ್ವಹಿಸುವನು[4]—ಎಂಬುದಾಗಿ ಗೀತಾ

೭. 1 ಆ ವಿಮಂತಾತ ಪೂರ್ಣತ್ವಾತ್ ಅತಃ ಗುಣಪರಿಪೂರ್ಣಾಃ ಮತ್ಸ್ಯಾದಯಃ ಭಗವದ್ರೂಪವಿಶೇಷಾಃ ತಾಸಾಂ ನಿಧಾನತ್ವಾತ್ ನಿಧಿಃ ಪದ್ಮನಾಭರೂಪೀ ।

2 ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಮ್ ।
-ಭಾಗ. 1-3-5

ನಿಧಾನಮ್ ಅತ್ರೈಕೀಭವಂತ್ಯಂತ ಇತಿ । -ಭಾಗ ತಾ. ನಿ.

* ಏತತ್ ಕ್ಷೀರೋದಾರ್ಣವಶಾಯಿ ಪದ್ಮನಾಭಾಭಿಧಂ ರೂಪಂ ನಾನಾವತಾರಾಣಾಂ ಮತ್ಸ್ಯಾದೀನಾಂ ಬೀಜಂ ವ್ಯಂಜಕಮ್ । ನಾನಾವತಾರಾಸ್ತತ ಏವಾವಿರ್ಭವಂತೀತಿ ಯಾವತ್ । ನಿಧಾನಂ ಚ । ನಿಧೀಯಂತೇಽಸ್ಮಿನ್ನಿತಿ ನಿಧಾನಮ್ । ನಾನಾವತಾರಾ ಅಸ್ಮಿನ್ನೇಕೀಭವಂತಿ ಚೇತ್ಯರ್ಥಃ -ಪ್ರಾಚೀನ ವ್ಯ್ ।

೮ 3 ಅಪಾಂ ಕರ್ಮಣಾಂ ನಿಧಿಃ ಆಶ್ರಯಃ ಅಪಾಂ ನಿಧಿಃ । '..ತಸ್ಮಿನ್ನಪೋ ಮಾತರಿಶ್ವಾ ದಧಾತಿ' (ಈ. ಉ. 1-4) ಇತ್ಯತ್ರ ಅಪ್‌ಶಬ್ದಃ ಕರ್ಮಾರ್ಥೇ ಪ್ರಯುಕ್ತಃ ।

4 ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ । ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ -ಗೀ. 5-14

ಚಾರ್ಯನು ಸಂದೇಹಿಸಿರುವನು ಹೀಗೆ ಕರ್ಮಗಳನ್ನು ನಡೆಸುವುದರಲ್ಲಿ ಅವುಗಳಿಂದ ಅದೃಷ್ಟವನ್ನು ಹುಟ್ಟಿಸುವುದರಲ್ಲಿ ಹಾಗೂ ಆ ಅದೃಷ್ಟಕ್ಕನುಗುಣವಾಗಿ ಫಲವನ್ನು ಹೊಂದಿಸುವುದರಲ್ಲಿ—ಭಗವಂತನೇ ವಿಶೇಷವಾಗಿ ಪಾತ್ರಧಾರಿಯಾಗಿದ್ದು, ಕರ್ಮಗಳಿಗೆ ಆಧಾರ ಎನಿಸಿರುವನು ಈ ರೀತಿಯಾಗಿ ಭಗವಂತನು ಕರ್ಮಗಳಿಗೆ ಒಡೆಯನಾಗಿರವುದರಿಂದಲೇ 'ಉದಧಿ' ಎನಿಸಿರುವನೆಂದು ಬೃಹತ್ಸಂಹಿತೆ ತಿಳಿಸಿದೆ[1] ಸರ್ವಕರ್ಮಗಳಿಗೂ ಅವನೇ ಒಡೆಯನಾಗಿರುವುದರಿಂದ ಪ್ರಾಣದೇವರು ತಮ್ಮ ಮಾಧ್ಯಮದಲ್ಲಿ ನಡೆಯುವ ಆ ಸಕಲ ಕರ್ಮಗಳನ್ನೂ ಅವನಿಗೇ ಸಮರ್ಪಿಸುವರು.[2]

೯ (ಅಮೃತಕ್ಕಾಗಿ ಕಡಯಲ್ಪಡುತ್ತಿದ್ದ) ಸಾಗರಕ್ಕೆ ಆಧಾರ ಆಗಿರುವವನು.[3]

೧೦ ಸಕಲ ಭೋಗಗಳನ್ನು ಭೋಗಿಸುವ ಪ್ರಯುಕ್ತ 'ಅಪಃ' ಎನಿಸುವ ಮುಕ್ತ ಚಕ್ರವರ್ತಿಗಳಿಗೆ ಆಶ್ರಯನಾಗಿರುವವನು[4]

'ಆಪಃ' ಎನಿಸುವ ಮುಕ್ತ ಚಕ್ರವರ್ತಿಗಳು ಚಕ್ರ ಎನಿಸುವ, ಮುಕ್ತನಾದ ವಾಯುಸುತ

---

* ಕ್ರಿಯಾಯಾಮದೃಷ್ಟೋತ್ಪಾದನೇ ಫಲೇ ಚ ಸ್ವಾತಂತ್ರ್ಯಂ ಲೋಕಸ್ಯ ನ ಸೃಜತೀಶ್ವರ ಇತ್ಯರ್ಥಃ । .ಸ್ವಭಾವತ್ವಾತ್ ಸ್ವಯಮೇವ ಕರ್ತೃತ್ವಾದಿಷು ಪ್ರವರ್ತತೇ ।
-ಗೀ. ತಾ.

1 'ಉದಧಿಃ ಕರ್ಮಣಾಮೀಶಃ ' —ಬೃಹತ್ಸಂಹಿತಾ (ಭಾಗ. ತಾ. ನಿ 2-2-7)

2 ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ ಈ ಉ 1-4

* ' ತಸ್ಮಿನ್ ಕರ್ಮಾಣ್ಯಧಾನ್ಮರುತ್ । ಮಾರುತ್ಯೇವ ಯತಶ್ಚೇಷ್ಟಾ ಸರ್ವಾಸಾಂ ಹರಯೇಽರ್ಪಯೇತ್' -ಬ್ರಹ್ಮಾಂಡ (ಈ. ಉ. ಭಾ )

೯ 3 ಮಥ್ಯಮಾನಮಹಾರ್ಣವಧಾರಣಾತ್ ಅಪಾಂ ನಿಧಿಃ ।
-ಪ. ಭ.

೧೦ 4 'ಆ ಪಿಬಂತ್ಯಖಿಲಾನ್ ಭೋಗಾನಿತ್ಯಾಪಶ್ಚಕ್ರವರ್ತಿನಃ । ಮುಕ್ತಾಃ. .' ಇತಿ ಬ್ರಹ್ಮಾಂಡ (ಬೃ. ಉ ಭಾ 5-6-1) ನಿರೂಪಿತದಿಶಾ ಅಪಾಂ ಮುಕ್ತಚಕ್ರವರ್ತಿನಾಂ ಆಶ್ರಯತ್ವಾತ್ ನಿಧಿಃ ।

ನನ್ನು ಸಾಕ್ಷಾತ್ತಾಗಿ ಆಧರಿಸಿಕೊಂಡಿರುವರಾದರೂ[1] ಅವರಿಗೆ ಮುಖ್ಯಾಧಾರ ಭಗವಂತನೇ[2]

## ಜಿಜ್ಞಾಸೆ

[ʻಆಪಃʼ ಹೆಸರಿನಿಂದ ತಿಳಿವಳಿಕೆ]

ಪ್ರ- ಈಶ್ವರನು ಇದ್ದಾನೆಯೇ ಎಂದು ಅನೇಕರು ಪ್ರಶ್ನೆ ಮಾಡುತ್ತಾರೆ ಆ ಪ್ರಶ್ನೆಗೆ ಹೇಗೆ ಉತ್ತರ?

ಉ.- ನಮಗೆ ಅಪೂರ್ವ ವ್ಯಕ್ತಿಗಳ ಭೇಟಿಯಾದಾಗ ನಾವು ಅವನ ಹೆಸರು ಏನೆಂದು ಕೇಳುತ್ತೇವೆ. ನನ್ನ ಪಿತಾಮಹನ ಹೆಸರು ನನ್ನ ಹೆಸರು, ನನ್ನ ಪಿತಾಮಹನಿಗೆ ಶ್ರೀನಿವಾಸ ಎಂದು ಹೆಸರು ಎಂದು ಉತ್ತರ ಕೊಟ್ಟಾಗ ಆ ಅಪೂರ್ವ ವ್ಯಕ್ತಿಗೆ ಶ್ರೀನಿವಾಸನೆಂದು ಹೆಸರುಳ್ಳ ಪಿತಾಮಹನು ಇದ್ದನು ಎಂದು ವಿಶ್ವಾಸಪೂರ್ವಕವಾಗಿ ತಿಳಿಯುವೆವು. ಅದರಂತೆ ಋಷಿಗಳಿಗೆ ದೇವತೆಗಳು ಪ್ರತ್ಯಕ್ಷರಾಗುತ್ತಾರೆ ಆಗ ಆ ದೇವತೆಗಳು ತಮ್ಮ ತಂದೆಯಾದ ವಿಷ್ಣುವಿನ ʻಆಪಃʼ ಎಂಬ ಹೆಸರು ನಮಗೂ ಇದೆ ಎಂದು ಹೇಳುತ್ತಾರೆ ಇದರಿಂದ ಎಲ್ಲ ದೇವತೆಗಳ ತಂದೆಯಾದ ವಿಷ್ಣು ಎಲ್ಲ ಗುಣಗಳಿಂದ ಪರಿಪೂರ್ಣನಾದುದರಿಂದ ʻಆಪಃʼ ಎಂಬ ಹೆಸರುಳ್ಳವನು ಇದ್ದಾನೆಂದು ತಿಳಿಯುತ್ತದೆ. ಈ ರೀತಿ ಈಶ್ವರನು ಇದ್ದಾನೆಂದು ತಿಳಿವಳಿಕೆ ಆಗುತ್ತದೆ



## ೩೨೫ ಅಧಿಷ್ಠಾನಮ್

೧ ನಿಖಿಲ ಜಗತ್ತಿಗೂ ಮೂಲಾಧಾರನಾಗಿರುವವನು[3]

---

1 ...ಕಸ್ಮಿನ್ ಖಲ್ವಾಪ ಓತಾಶ್ಚ ಪ್ರೋತಾಶ್ಚೇತಿ ವಾಯೌ ಗಾರ್ಗಿ ..

-ಬೃ. ಉ. 5-6-1

ʻಆ ಪಿಬಂತ್ಯಖಿಲಾನ್ ಭೋಗಾನಿತ್ಯಾಪಶ್ಚಕ್ರವರ್ತಿನಃ। ಮುಕ್ತಾಸ್ತೇಷಾಂ ವಾಯುಸುತಶ್ಚಕ್ರೋ ನಾಮ ವೃಷಾಶ್ರಯಃ । ಮುಕ್ತಃ.. . .ʼ

-ಬ್ರಹ್ಮಾಂಡ(ಬೃ. ಉ. ಭಾ.)

2 ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ । ಬ್ರಹ್ಮಾದಿಮಾನುಷಾಂತಾನಾಂ ಸರ್ವೇಷಾಮವಿಶೇಷತಃ ।

-ವಾರಾಹ(ಬ್ರ.ಸೂ. ಭಾ. 4-4-9)

೧ 3 ಅಧಿಷ್ಠಾನಮಿತಿಪ್ರೋಕ್ತಂ ಮೂಲಾಧಾರಂ ವಿಚಕ್ಷಣೈಃ- ಇತಿ ವಾಮನೇ (ಭಾಗ.ತಾ.ನಿ.2-5-2)ಅಧಿಷ್ಠಾನಶಬ್ದಸ್ಯ ಮೂಲಾಧಾರಾರ್ಥಕತ್ವಂ ವಿಚಕ್ಷಣರೂಢಿಪೂರ್ವಂ ನಿರೂಪಿತಮ್।

ಎಲ್ಲದ್ದಕ್ಕೂ ಮೂಲಾಧಾರ ಭಗವಂತನೇ. ಭೂಮಿಯು ಎಲ್ಲದ್ದಕ್ಕೂ ಆಧಾರ ಎಂಬ ವ್ಯವಹಾರವು ಪೂರ್ಣಪ್ರಮಾಣದಲ್ಲಿ ಸತ್ಯವಲ್ಲ ಭೂಮಿಗೂ ಚತುರ್ಮುಖನು ಆಧಾರ. ಚತುರ್ಮುಖನಿಗೂ ಪ್ರಕೃತಿಯು ಆಧಾರ ಪ್ರಕೃತಿಗೂ ಶ್ರೀವಿಷ್ಣುವು ಆಧಾರ ಹೀಗೆ ಮುಖ್ಯವಾದ ಆಧಾರತ್ವವು ಶ್ರೀವಿಷ್ಣುವಿನಲ್ಲೇ ಇರುವ ಪ್ರಯುಕ್ತ, ಉಳಿದವರು, ಶಿರಸ್ಸಿಗೆ ಕಂಠವು ಆಧಾರವಾಗಿರುವಂತೆ ಔಪಚಾರಿಕವಾಗಿಯಷ್ಟೇ ಆಶ್ರಯ ಎನಿಸಿರುವರು[1] ತಾನು ಇನ್ನೊಬ್ಬರಲ್ಲಿ ಆಶ್ರಿತನಾಗಿರದೆ ಸರ್ವರಿಗೂ ಆಶ್ರಯನಾಗಿರುವವನು ಭಗವಂತನೊಬ್ಬನೇ[2] ಯಾವುದು ಮೂಲಾಧಾರವಾಗಿದೆಯೋ ಅದನ್ನು ಅಧಿಷ್ಠಾನವೆಂದೂ, ಯಾವುದು ಪದಾರ್ಥದ ಸ್ಥಿತಿಗೆ ಆಧಾರವಾಗಿ ಕಾಣುವುದೋ ಅದನ್ನು 'ಸಂಸ್ಥಾನ'ವೆಂದೂ ವಿದ್ವಾಂಸರು ಪರಿಗಣಿಸುವರೆಂದು ಪರಿಚಯಿಸಿಕೊಟ್ಟಿರುವ 'ವಾಮನ'ವು, ಜಗತ್ತಿಗೆ ಅಧಿಷ್ಠಾನವೂ, ಸಂಸ್ಥಾನವೂ ಭಗವಂತನೇ ಆಗಿರುವನೆಂದು ಸಂದೇಶಿಸಿದೆ[3]

೧ ಅಧಿಕವಾದ ಆಧಾರ ಆಗಿರುವವನು.[4]

೨ ಎಲ್ಲರಿಗಿಂತಲೂ ಅಧಿಕನಾಗಿರುವವನು ಹಾಗೂ ಸರ್ವಾಧಾರನಾಗಿರುವವನು.[5]

---

1 ರಾಜಾ ಗೋಪ್ತಾಽಶ್ರಯೋ ಭೂಮಿಃ ಕಾರಣಂ ಚೇತಿ ಲೌಕಿಕಃ । ವ್ಯವಹಾರೋ ನ ತತ್ ಸತ್ಯಂ ತಯೋರ್ಬ್ರಹ್ಮಾಽಽಶ್ರಯೋ ವಿಭುಃ । ಗೋಪ್ತಾ ಚ ತಸ್ಯ ಪ್ರಕೃತಿಸ್ತಸ್ಯಾ ವಿಷ್ಣುಃ ಸ್ವಯಂಪ್ರಭುಃ । . .ಅತಃ ಸರ್ವಾಶ್ರಯಶ್ಚೈವ ಗೋಪ್ತಾ ಚ ಹರಿರೀಶ್ವರಃ । ...ಶಿರ-ಆಧಾರತಾ ಯದ್ವದ್ ಗ್ರೀವಾಯಾಸ್ತದ್ವದೇವ ತು । ಆಶ್ರಯತ್ವಂ ಚ ಗೋಪ್ತೃತ್ವಮನ್ಯೇಷಾಮುಪಚಾರತಃ —ಭಾಗ. ತಾ. ನಿ. 5–12–10,11

2 ಏವಂ ಪ್ರಕೃತ್ಯಾಧಾರಃ ಸ್ವಯಮನನ್ಯಾಧಾರೋ ವಿಷ್ಣುರೇವ ।
—ಭಾಗ. ತಾ. ನಿ. 5-12-10

3 ಅಧಿಷ್ಠಾನಮಿತಿ ಪ್ರೋಕ್ತಂ ಮೂಲಾಧಾರಂ ವಿಚಕ್ಷಣೈಃ । ಯತ್ ಸ್ಥಿತಂ ದೃಶ್ಯತೇ ವಸ್ತು ಸಂಸ್ಥಾನಂ ತದುದೀರಿತಮ್ । ಉಭಯಂ ಹರಿರೇವಾಸ್ಯ ಜಗತೋ ಮುನಿಪುಂಗವ'
—ವಾಮನ (ಭಾಗ. ತಾ. ನಿ. 2 5-2)

೧ 4 ಅಧಿ ಅಧಿಕಂ ಚ ತತ್ ಸ್ಥಾನಂ ಆಧಾರಃ ಅಧಿಷ್ಠಾನಮ್ । 'ಸೋಽಯಮಾತ್ಮಾಽಧ್ಯಕ್ಷರಮೋಂಕಾರೋಽಧಿಮಾತ್ರಂ...' (ಮಾಂ. ಉ. 2-1-1) ಇತ್ಯತ್ರ ಅಧಿಕಾರ್ಥೇ ಅಧಿಶಬ್ದಃ ಪ್ರಯುಕ್ತ ಇತ್ಯಾಚಾರ್ಯೈಃ ವ್ಯಾಖ್ಯಾತಂ—'ಅಧಿಕಂ ಸರ್ವಶ ಅವಿನಾಶಿ ಚೇತ್ಯಧ್ಯಕ್ಷರಮ್ । ಅಧಿಕಾ ಏವ ಮಾತ್ರಾ ಅಂಶಾ ಯಸ್ಯ ತದಧಿಮಾತ್ರಮ್ ।'

೨ 5 ಅಧಿ ಸರ್ವಶಃ ಅಧಿಕಂ, ಸರ್ವಾಧಾರತ್ವಾತ್ ಸ್ಥಾನಂ ಅಧಿಷ್ಠಾನಮ್ ।

ವೈಶ್ವಾನರಾದಿ ನಾಲ್ಕು ರೂಪಗಳನ್ನೊಳಗೊಂಡ ಭಗವಂತನು ಎಲ್ಲರಿಗಿಂತಲೂ ಅಧಿಕನಾಗಿರುವುದರಿಂದ 'ಅಧಿ' ಎನಿಸಿರುವನು. ಅವನು ಸರ್ವಾಧಾರ ಆಗಿರುವುದರಿಂದ 'ಸ್ಥಾನ' ಎಂದೂ ಅವನನ್ನು ಕರೆಯಲಾಗಿದೆ[1]

೪ ಎಲ್ಲರಿಗಿಂತ ಅಧಿಕವಾದ ಸ್ಥಿತಿ ಉಳ್ಳವನು[2]

೫ ಎಲ್ಲೆಡೆ ಸ್ಥಿತಿಯನ್ನು ಹೊಂದಿರುವವನು[3]

ಭಗವಂತನು ಸಕಲ ದೇಶಗಳಲ್ಲಿ ಸಕಲ ಕಾಲಗಳಲ್ಲಿ ಗುಣಪೂರ್ಣನಾಗಿ ಇರುವನು. ಆದುದರಿಂದ ಅವನ ಸ್ಥಿತಿಯು ಅತ್ಯಧಿಕವೆನಿಸಿದೆ

೬ (ಮೋಕ್ಷಾತ್ಮರಿಗೆ) ಅಧಿಕವಾದ ಸ್ಥಿತಿಯನ್ನು ಅನುಗ್ರಹಿಸುವವನು[4]

೭ (ಚತುರ್ಮುಖನೇ ಮೊದಲಾದ ದೇವತೆಗಳಿಗೆ) ಅಧಿಕವಾದ ಸ್ಥಾನವನ್ನು ಅನುಗ್ರಹಿಸಿರುವವನು.[5]

ಭಗವಂತನು ಸರ್ವದೇವತೆಗಳ ಪದವಿಗಳನ್ನು ಅನುಗ್ರಹಿಸುವವನೆಂಬುದಾಗಿ 'ಪ್ರಧಾನಸಂಹಿತೆ' ತಿಳಿಸಿದೆ.[6]

---

1 ಪಿತಾಽಹಮಸ್ಯ ಜಗತೋ . ಸ್ಥಾನಂ . । -ಗೀ. 9-18

ಸ್ಥಾನಂ ಸರ್ವಾಧಾರೋಽಹಮ್ । -ಗೀ. ವಿ.

೪ 2 ಅಧಿ ಸರ್ವತಃ ಅಧಿಕಂ ಸ್ಥಾನಂ ಸ್ಥಿತಿಃ ಯಸ್ಯ ತತ್ ಅಧಿಷ್ಠಾನಮ್ । 'ಅವಕಾಶೇ ಸ್ಥಿತೌ ಸ್ಥಾನಮ್.....' -ಅ. ಕೋ.

೫ 3 ಅಧಿಗತಂ ಸ್ಥಾನಂ ಸರ್ವತ್ರ ಸ್ಥಿತಿರಿತಿ ಅಧಿಷ್ಠಾನಮ್ । ಅಧ್ಯಕ್ಷ ಇತಿವತ್ । ಅಸಾಧಾರಣ್ಯೇನ ವ್ಯಪದೇಶಾತ್ ಸರ್ವತ್ರೇತಿ ಲಭ್ಯತೇ ।

೬ 4 ಮುಕ್ತಾತ್ಮನಾಂ ಅಧಿ ಅಧಿಕಂ ಸ್ಥಾನಂ ಸ್ಥಿತಿರ್ಯಸ್ಮಾತ್ ತತ್ ಅಧಿಷ್ಠಾನಮ್ ।

೭ 5 ಚತುರ್ಮುಖಾದೀನಾಂ ಅಧಿ ಅಧಿಕಂ ಸ್ಥಾನಂ ಪದವೀ ಯಸ್ಮಾತ್ ತತ್ ಅಧಿಷ್ಠಾನಮ್ ।

6 ಪ್ರಾಪಕಃ ಸರ್ವದೇವಾನಾಂ ಪದಾನಾಂ ಪುರುಷೋತ್ತಮಃ ।

-ಪ್ರಧಾನಸಂಹಿತಾ (ಭಾಗ. ತಾ. ನಿ. 10-94-32)

೮ ಅಧಿಕವಾದ ಅವಕಾಶವನ್ನು ನೀಡುವವನು[1]

ಅವಕಾಶಪ್ರದತ್ವವು ಆಕಾಶದ ಧರ್ಮ ಆದರೆ ಆಕಾಶದಲ್ಲಿ ಈ ಧರ್ಮವು ಭಗವದನುಗ್ರಹ ದಿಂದಲೇ ಸಿದ್ಧಿಸಿರುವುದು[2] ಆದುದರಿಂದಲೇ ಭಗವಂತನ ನಿಯಮಕ್ಕೊಳಗಾಗಿಯೇ ಆಕಾಶವು ಅವಕಾಶವನ್ನು ನೀಡುವುದು.[3] ಬಾಯಿಯೊಳಗೆ ತುರುಕುವ ಆಹಾರಕ್ಕೆ ಉದರದೊಳಗೆ ಅವಕಾಶ ನೀಡುವವನು ಆಕಾಶದಲ್ಲಿ ಅಂತರ್ಯಾಮಿಯಾಗಿರುವ ವಾಸುದೇವನು[4] ಶಬ್ದ [illegible] ಗಳ ಮೂಲಕ ಸಂಚರಿಸುವಾಗಲೂ ಅವಕಾಶವನ್ನು ಅನುಗ್ರಹಿಸುವವನು ಆಕಾಶಾಂತರ್ಯಾಮಿ ವಾಸುದೇವನೇ[5] ಹೀಗೆ ಮುಖ್ಯವಾಗಿ ಅವಕಾಶವನ್ನು ಅನುಗ್ರಹಿಸುವವನು ಭಗವಂತನೇ.

೯ ಅಧಿಕನಾಗಿರುವವನು ಸರ್ವಗತ ಹಾಗೂ ಸರ್ವಚೇಷ್ಟಕ[6]

ಜಿಜ್ಞಾಸ

[ನಿರ್ಗುಣನಲ್ಲಿ ಸಾದೃಶ್ಯವಿಲ್ಲ]

ಪ್ರ - ಮಾಯಾವಾದಿಗಳು ಪರಮಾತ್ಮನನ್ನು ಜಗದಾರೋಪಾಧಿಷ್ಠಾನವನ್ನಾಗಿ ಹೇಳುತ್ತಾರೆ ಈ ಅರ್ಥವನ್ನು ಈ ನಾಮಕ್ಕೆ ಹೇಳಬಹುದೇ?

---

೮ 1 ಅಧಿ ಅಧಿಕಂ ಸ್ಥಾನಂ ಅವಕಾಶಃ ಯಸ್ಮಾತ್ ತತ್ ಅಧಿಷ್ಠಾನಮ್ ।

2 'ತಾಮಸಾಚ್ಚ ವಿಕುರ್ವಾಣಾದ್ಭಗವದ್ವೀರ್ಯಚೋದಿತಾತ್ । ಶಬ್ದಮಾತ್ರಮಭೂತ್ತಸ್ಮಾನ್ನಭಃ. ..ಭೂತಾನಾಂ ಛಿದ್ರದಾತೃತ್ವಂ....ನಭಸೋ ವೃತ್ತಿಲಕ್ಷಣಮ್ ।'

-ಭಾಗ, 3-26-34

3 ನಭೋ ದದಾತಿ ಶ್ವಸತಾಂ ಪದಂ ಯನ್ನಿಯಮಾದದಃ ।

-ಭಾಗ. 3-29-43

4 ಅವಕಾಶಪ್ರದೋ ನಿತ್ಯಂ ವಾಸುದೇವೋ ನಭಃಸ್ಥಿತಃ ।

-ಐತರೇಯ ಸಂಹಿತಾ (ಐ. ಉ ಭಾ. 2-2-1-5)

5 ಆಕಾಶಗೋ ವಾಸುದೇವಃ ಪಂಚಪೋಕ್ತಪ್ರವೃತ್ತ್ಯುಪಾಸ್ಯತೇ

-ಐತರೇಯಸಂಹಿತಾ (ಐ. ಉ ಭಾ.)

೯ 6 ಅಧಿಕತ್ವಾತ್ ಅಧಿ । ಸರ್ವತ್ರ ತಿಷ್ಠತೀತಿ ಸ್ಥಮ್ । ಸರ್ವಂ ಅನಯತಿ ಚೇಷ್ಟಯತೀತಿ ಅನಮ್ । ಅಸಾಧಾರಣ್ಯೇನ ವ್ಯಪದೇಶಃ । ಸ್ಥಂ ಚ ತತ್ ಅನಮ್ ಚ ಸ್ಥಾನಮ್ । ಅಧಿ ಚ ತತ್ ಸ್ಥಾನಂ ಚ ಅಧಿಷ್ಠಾನಮ್ ।

ಉ – ಪರಮಾತ್ಮನು ಜಗದಾರೋಪಾಧಿಷ್ಠಾನ ಎಂದು ಮಾಯಾವಾದಿಗಳು ಹೇಳುತ್ತಾರೆ ಆದರೆ ಅದು ಅತ್ಯಂತಾಪ್ರಾಮಾಣಿಕ, ಪರಮಾತ್ಮನನ್ನು ಅವರು ನಿರ್ಗುಣ ಎಂದೂ ಹೇಳುತ್ತಾರೆ ನಿರ್ಗುಣವಸ್ತು ಯಾವುದಕ್ಕೂ ಸದೃಶವಾಗಲಾರದು ಮುತ್ತಿನ ಚಿಪ್ಪು ರಜತಕ್ಕೆ ಸದೃಶವಾದ್ದರಿಂದಲೇ ಆ ಚಿಪ್ಪಿನಲ್ಲಿ ರಜತದ ಆರೋಪವು ಉಂಟಾಯಿತು ಮಾಯಾವಾದಿಗಳ ಮತದಂತೆ ನಿರ್ಗುಣನು ಯಾವುದಕ್ಕೂ ಸದೃಶನಲ್ಲವಾದ್ದರಿಂದ ಆರೋಪಾಧಿಷ್ಠಾನ ಆಗಲಾರನು.



## ೩೨೬ ಅಪ್ರಮತ್ತಃ

೧ (ಎಂದೆಂದೂ) ಪ್ರಮಾದಕ್ಕೊಳಗಾಗದವನು[1]

೨ ಪ್ರಮಾದಕ್ಕೊಳಗಾಗುವ ಜೀವಾತ್ಮನಿಗಿಂತ ಅತ್ಯಂತ ವಿಲಕ್ಷಣನಾಗಿರುವವನು[2]

ಪ್ರಮಾದ ಎನಿಸುವ ಎಚ್ಚರಗೇಡಿತನವು ತಮೋಗುಣದಿಂದ ಉಂಟಾಗುವಂತಹದ್ದು 'ತ್ರೈಗುಣ್ಯವರ್ಜಿತ'ನಾದ ಭಗವಂತನು ಇಂತಹ ಪ್ರಮಾದಕ್ಕೆ ಎಂದೂ ಒಳಗಾಗಲಾರ ಪ್ರಕೃತಿಯ ಪ್ರಭಾವಕ್ಕೆ ಒಳಗಾಗುವ ಜೀವಾತ್ಮರಾದರೂ ಪ್ರಮಾದಕ್ಕೆ ಪಾತ್ರರಾಗುವರು. ಪ್ರಮಾದ ಪ್ರಯುಕ್ತವಾಗಿ ಭಗವಂತನ ವಿಸ್ಮರಣೆ, ಅನ್ಯಥಾಜ್ಞಾನೋಪಾಸನೆ, ಶಾಸ್ತ್ರ ಶ್ರವಣ, ಮನನಾದಿಗಳ ಅಭಾವ, ನಿಷಿದ್ಧಕರ್ಮಗಳ ಅನುಷ್ಠಾನ, ಹಾಗೂ ಸ್ವಧರ್ಮದ ಪರಿತ್ಯಾಗ — ಈ ಐದು ಚಟುವಟಿಕೆಗಳಿಗೆ ಒಳಗಾಗುವರು ಈ ಐದು ಚಟುವಟಿಕೆಗಳ ಅಭಾವವೇ ಜೀವಾತ್ಮರ ಪಾಲಿಗೆ 'ಅಪ್ರಮಾದ' ಎನಿಸುವುದೆಂದು ಪರಿಚಯಿಸಿ ಕೊಡುವ ಪ್ರಮಾಣವು[3]. ಸಾಧಕನು ಯಾವಾಗಲೂ ಇಂತಹ ಅಪ್ರಮಾದವನ್ನು ಅಳವಡಿಸಿಕೊಂಡು ಭಗವಂತನ ಸಾಕ್ಷಾತ್ಕಾರಕ್ಕೆ ಯತ್ನಿಸಬೇಕೆಂದು ಸಂದೇಶಿಸಿದೆ.

---

೧ 1 ಪ್ರಮತ್ತೋ ನ ಭವತಿ, ಕದಾಽಪಿ ಪ್ರಮಾದಸ್ಯ ಪಾತ್ರಂ ನ ಭವತೀತಿ ಯಾವತ್ ಅಪ್ರಮತ್ತಃ ।

೨ 2 ಪ್ರಮತ್ತಃ ಜೀವಾತ್ಮಾ । ಸಃ ನ ಭವತೀತಿ ಅಪ್ರಮತ್ತಃ ।

3 'ಅವಿಸ್ಮೃತಿಃ ಸದಾ ವಿಷ್ಣೋರನ್ಯಥಾಜ್ಞಾನವರ್ಜನಮ್। ಶಾಸ್ತ್ರಾಭ್ಯಾಸಃ ಸದೋದ್ಯೋಗಾಚ್ಛ್ರವಣಾಚ್ಚ ವಿಚಾರತಃ । ನಿಷಿದ್ಧಕರ್ಮಣಾಂ ತ್ಯಾಗಃ ಸ್ವಧರ್ಮಸ್ಯ ಕೃತಿಃ ಸದಾ । ಅಪ್ರಮಾದ ಇತಿ ಪ್ರೋಕ್ತಃ ' -ಭಾಂ. ಉ. ಭಾ. 2-2-18

4 .. ಸರ್ವದೈವಾಪ್ರಮತ್ತಶ್ಚ ಪಶ್ಯೇದ್ ದೇವಂ ಹರಿಂ ಪರಮ್ ।
-ಭಾಂ. ಉ. ಭಾ.

ಆದರೆ ಪ್ರಕೃತಿಯ ಪ್ರಭಾವದಿಂದ ಸರ್ವಾತ್ಮನಾ ದೂರವಾಗುವವರಗ ಜೀವಾತ್ಮನು 'ಪ್ರಮತ್ತ'ನಾಗಿಯೇ ಇರುವನು. ಇಂತಹ ಪ್ರಮತ್ತನೊಳಗೆ ಅಂತರ್ಯಾಮಿಯಾಗಿ ಪ್ರವೇಶಿಸಿರುವ ಭಗವಂತನು, ಅವನನ್ನು ಪ್ರಮಾದದ ಕಾರ್ಯಗಳಲ್ಲಿ ತೊಡಗಿಸುತ್ತಿರುವನು. ತಾನು ಮಾತ್ರ 'ಅಪ್ರಮತ್ತ'ನಾಗಿಯೇ ಇರುವನು—ಎಂದು ಕಪಿಲನಾಮಕ ಭಗವಂತನು ಸಂದೇಶಿಸಿರುವನು.[1]

೩ ಯೋಗ್ಯ ಅಧಿಕಾರಿಯು ಪ್ರಮತ್ತನಾಗದಂತೆ ಅನುಗ್ರಹಿಸುವವನು.[2]

ಸಂಸಾರಯೋಗ್ಯ ಜೀವನು 'ಪ್ರಮತ್ತ'ನಾಗುವಂತೆ ಪ್ರೇರಿಸುವ ಭಗವಂತನೇ ಮುಕ್ತಿ ಯೋಗ್ಯನು ಪ್ರಮತ್ತನಾಗದಂತೆ ಅನುಗ್ರಹಿಸುವನು.

೪ ಪೂರ್ಣನಾಗಿರುವವನು ಹಾಗೂ ಚೆನ್ನಾಗಿ ಪ್ರೀತನಾಗಿರುವವನು.[3]

ಭಗವಂತನು ಗುಣಪೂರ್ಣನಾಗಿರುವುದರಿಂದ, ಯಾವಾಗಲೂ ಚೆನ್ನಾಗಿ ಪ್ರೀತನಾಗಿಯೇ ಇರುವನು[4]

೫ ಪೂರ್ಣನಾಗಿರುವವನು ಮತ್ತು ಪ್ರಕೃಷ್ಟರಾದ ಮುಕ್ತರು ಸಂತುಷ್ಟರಾಗಿ ಇರುವಂತೆ ಅನುಗ್ರಹಿಸುವವನು.[5]

---

1 ಅವಿಶತ್ಯಪ್ರಮತ್ತೋಽಸೌ ಪ್ರಮತ್ತಂ ಜನಮಂತಕೃತ್ ।
—ಭಾಗ. 3-29-39

೩ 2 ಯೋಗ್ಯಾಧಿಕಾರೀ ಪ್ರಮತ್ತೋ ನ ಭವತ್ಯಸ್ಮಾದಿತ್ಯಪ್ರಮತ್ತಃ । ತತ್ತ್ವಪ್ರಕಾಶಿಕಾ-ಮಂಗಲಪದ್ಯೇ ಪಠ್ಯಮಾನಂ 'ಅಮಲಂ' ಇತಿ ವಿಶೇಷಣಂ 'ನ ವಿದ್ಯತೇ ಮಲಂ ಸಂಸಾ-ರಾಖ್ಯಂ ಯಸ್ಮಾತ್ತದಮಲಂ ಸಂಸಾರನಿವರ್ತಕಮಿತಿ ಭಾವದೀಪೇ ಯಥಾ ವ್ಯಾಖ್ಯಾತಂ ತದ್ವತ್ ।

೪ 3 ಪೂರ್ಣತ್ವಾತ್ ಅಃ । ಪ್ರಕರ್ಷೇಣ ಪ್ರೀತತ್ವಾತ್ ಪ್ರಮತ್ತಃ । 'ಹೃಷ್ಟೇ ಮತ್ತಸ್ತೃಪ್ತಃ ಪ್ರಹೃಷ್ಟಃ ಪ್ರಮುದಿತಃ ಪ್ರೀತಃ' —ಅ. ಕೋ.

4 'ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ । ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್' —ಮ. ಭಾರ. ಶಾ. ೩. 32-182

೫ 5 ಪೂರ್ಣತ್ವಾತ್ ಅಃ । ಪ್ರ ಪ್ರಕೃಷ್ಟಾಃ ಮುಕ್ತಾತ್ಮಾನಃ ಮತ್ತಾಃ ಹೃಷ್ಟಾಃ ಯಸ್ಮಾತ್ ಸ ಅಪ್ರಮತ್ತಃ ।

೬ ಭಕ್ತರ ರಕ್ಷಣೆಯಲ್ಲಿ ಚೆನ್ನಾಗಿ ಜಾಗರೂಕನಾಗಿರುವವನು[1]

೭ ಅಧಿಕಾರಿಗಳಿಗೆ ಕರ್ಮಗಳಿಗನುರೂಪವಾಗಿ ಫಲವನ್ನು ನೀಡುವುದರಲ್ಲಿ ಎಂದೂ ಪ್ರಮಾದವನ್ನು ತೋರಿಸದಿರುವವನು[2]

## ಜಿಜ್ಞಾಸೆ

### [ಅಜ್ಞಾನಾಶ್ರಯತ್ವ ಇಲ್ಲ]

ಪ್ರ:- ಮಾಯಾವಾದಿಗಳು ಪರಮಾತ್ಮನಲ್ಲಿ ಅಜ್ಞಾನಾಶ್ರಯತ್ವವು ಇದೆ ಎಂದು ಹೇಳುತ್ತಾರೆ ಇದು ಅಂಗೀಕಾರ್ಯವೋ?

ಉ.- ಅಜ್ಞಾನವು ಜೀವರ ಲಕ್ಷಣ. ಸರ್ವಜ್ಞತ್ವವು ಪರಮಾತ್ಮನ ಲಕ್ಷಣ. ಸರ್ವಜ್ಞನಾದ ಪರಮಾತ್ಮನಲ್ಲಿ ಅಜ್ಞಾನವು ಎಳ್ಳಿನಷ್ಟೂ ಇರಲಾರದು. ಪ್ರಮಾದವೆಂದರೆ ಅಜ್ಞಾನ. ಅಪ್ರಮತ್ತ ಎಂದರೆ ಅಜ್ಞಾನ ರಹಿತನು ಎಂದು ಅರ್ಥ ಈ ಅರ್ಥವುಳ್ಳ ಅಪ್ರಮತ್ತ ಎಂಬ ನಾಮವು ಪರಮಾತ್ಮನಿಗೆ ಇರುವುದರಿಂದ ಪರಮಾತ್ಮನಲ್ಲಿ ಮಾಯಾವಾದಿಗಳು ಅಜ್ಞಾನಾಶ್ರಯತ್ವವನ್ನು ಹೇಳುವದು ಯುಕ್ತವಲ್ಲವೆಂದು ಸಿದ್ಧವಾಗುತ್ತದೆ. 'ತ್ವಮಾದ್ಯಃ ಪುರುಷಃ ಸಾಕ್ಷಾತ್ ಈಶ್ವರಃ ಪ್ರಕೃತೇಃ ಪರಃ । ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ' ಎಂದು ಭಾಗವತದಲ್ಲಿ ಬ್ರಹ್ಮವಸ್ತುವಿನಲ್ಲಿ ಅಜ್ಞಾನಾಶ್ರಯತ್ವವು ಇಲ್ಲ ಎಂದು ಸ್ಪಷ್ಟವಾಗಿ ಹೇಳಿರುತ್ತದೆ.



೩೨೭ ಪ್ರತಿಷ್ಠಿತಃ

೧ ತನ್ನ ಮಹಿಮೆಯನ್ನೇ ಆಧರಿಸಿಕೊಂಡಿರುವವನು.[3]

---

೬ 1 ...ಏವಂ ವಿಧಾನಾಂ (ಭಕ್ತಾನಾಂ) ತ್ರಾಣೇಷು ಅಪ್ರಮತ್ತಃ । ಅತ್ಯಂತಮವಹಿತಃ ।
-ಪ. ಭ.

೭ 2 ಅಧಿಕಾರಿಭ್ಯಃ ಕರ್ಮಾನುರೂಪಂ ಫಲಂ ಪ್ರಯಚ್ಛನ್ ನ ಪ್ರಮಾದ್ಯತೀತಿ ಅಪ್ರಮತ್ತಃ ।
-ಶಾಂ. ಭಾ

೧ 3 ಸ್ವಮಹಿಮ್ನಿ ಪ್ರತಿಷ್ಠಿತತ್ವಾತ್ ಪ್ರತಿಷ್ಠಿತಃ ।
-ವಿ. ರಾ.

ಚರಾಚರಾತ್ಮಕವಾದ ಸಕಲ ಜಗತ್ತೂ, ಮುಕ್ತಾತ್ಮರೂ ಭಗವಂತನಿಂದ ಧೃತರಾಗಿರುವರೆಂದ ಐತರೇಯೋಪನಿಷತ್ತು, ಭಗವಂತನಾದರೂ ತನ್ನಲ್ಲೇ ಪ್ರತಿಷ್ಠಿತನಾಗಿದ್ದು, ಮತ್ತೊಬ್ಬರಲ್ಲಿ ಪ್ರತಿಷ್ಠಿತನಾಗಿಲ್ಲ—ಎಂಬುದನ್ನು 'ಪ್ರತಿಷ್ಠಾ' ಶಬ್ದದ ಉಲ್ಲೇಖದೊಂದಿಗೆ ಸಂದೇಶಿಸಿದೆ.[1] ಭಗವಂತನು ಎಲ್ಲಿ 'ಪ್ರತಿಷ್ಠಿತ'ನಾಗಿರುವನು?—ಎಂದು ನಾರದರು ವಿಚಾರಿಸಲು, ಸನತ್ಕುಮಾರರು—ಭಗವಂತನು ತನ್ನ ಮಹಿಮೆಯಲ್ಲೇ ಪ್ರತಿಷ್ಠಿತನಾಗಿರುವನೆಂದು ಸಂದೇಶಿಸಿರುವರು.[2] ಉಳಿದೆಲ್ಲರೂ ಮತ್ತೊಬ್ಬರ ಮಹಿಮೆಯನ್ನೇ ಆಶ್ರಯಿಸಿಕೊಂಡಿರುವುದರಿಂದ ತನ್ನ ಮಹಿಮೆಯನ್ನೇ ಆಶ್ರಯಿಸಿಕೊಂಡಿರುವುದು ಭಗವಂತನ ಅಸಾಧಾರಣ ಲಕ್ಷಣವೆಂದು ಸನತ್ಕುಮಾರರು ಸಮರ್ಥಿಸಿರುವರು.[3] ಮೈತ್ರೇಯರು ವಿದುರನಿಗೆ 'ಅಪ್ರತಿಷ್ಠಿತ'—ಎಂಬ ಶಬ್ದದ ಮೂಲಕ ಭಗವಂತನು ಅನನ್ಯಾಶ್ರಯನೆಂಬುದನ್ನು ಉಪದೇಶಿಸಿರುವರು.[4] ತನ್ನ ಮಹಿಮೆಯಲ್ಲೇ ಪ್ರತಿಷ್ಠಿತನಾಗಿರುವ ಶ್ರೀಕೃಷ್ಣನಿಗೆ ತಾನು ಅನನ್ಯ

---

1 'ಯತ್ ಕಿಂಚೇದಂ ಪ್ರಾಣಿ ಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋಽಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ' ಐ. ಉ. 2-5-1-3

* 'ಸರ್ವಂ ಜಗದಿದಂ ವಿಷ್ಣೋರ್ವಶೇ ತಿಷ್ಠತಿ ಸರ್ವದಾ । ತೇನೈವ ನೀಯತೇ ನಿತ್ಯಂ ತಸ್ಮಿನ್ನೇವ ಪ್ರತಿಷ್ಠಿತಮ್ । ಮುಕ್ತಾ ಯೇಽಲೋಕನಾಮಾನೋ ನೀಯಂತೇ ತೇಽಪಿ ವಿಷ್ಣುನಾ । ಸ್ವಯಂ ಚಾನನ್ಯನಿಷ್ಠತ್ವಾತ್ ಪ್ರತಿಷ್ಠೇತ್ಯಭಿಧೀಯತೇ'

—ಐತರೇಯ ಸಂಹಿತಾ (ಐ. ಉ. ಭಾ. 2-5-1-3)

2 '..ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ...'

—ಛಾಂ. ಉ. 7-2-9

3 ...ಅನ್ಯೋ ಹ್ಯನ್ಯಸ್ಮಿನ್ ಪ್ರತಿಷ್ಠಿತ ಇತಿ । —ಛಾಂ. ಉ. 7-2-9

ಸ್ವೇ ಮಹಿಮ್ನೀತ್ಯುಕ್ತಂ ನಾತಿಪ್ರಸಕ್ತಮಿತ್ಯಾಹ—ಅನ್ಯ ಇತಿ । ಅಯಂ ತು ಸ್ವಮಹಿಮ್ನ್ಯೇವೇತಿ ತದ್ವಿಲಕ್ಷಣ ಇತ್ಯರ್ಥಃ । —ವೇದೇಶೀಯ (ಛಾಂ ಉ. ಟಿ.)

4 ಗುಣವ್ಯತಿಕರಾಕಾರೋ ನಿರ್ವಿಶೇಷೋಽಪ್ರತಿಷ್ಠಿತಃ ।

—ಭಾಗ. 3-11-11

ಅಪ್ರತಿಷ್ಠಿತಃ ಅನ್ಯತ್ರ। 'ಸ ಭಗವ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಇತಿ ಶ್ರುತೇಃ । -ಭಾಗ. ತಾ. ನಿ.

ರೂಪಗಳೆಂದು ಋಗ್ವೇದೀ ಸ್ತುತಿಸಿರುವಳು[1]

೨ ಇರುವ ಪದಾರ್ಥಗಳಲ್ಲೆಲ್ಲ ಇರುವವನು[2]

ಪ್ರತಿಯೊಂದು ಪದಾರ್ಥದ ಅಸ್ತಿತ್ವ, ಸ್ವಭಾವಾದಿಗಳನ್ನು ನಿಯಮಿಸುವ ಭಗವಂತನು ಅಸ್ತಿತ್ವ ಪಡೆದಿರುವ ಎಲ್ಲ ಪದಾರ್ಥಗಳಲ್ಲೂ ಅಂತರ್ಯಾಮಿಯಾಗಿ ಇರುವನು

೩ ಜೀವವುಳ್ಳವುಗಳಲ್ಲೆಲ್ಲ ಇರುವವನು.[3]

ಭಗವಂತನು ಎಲ್ಲ ಪದಾರ್ಥಗಳಲ್ಲಿ ಇರುವನಾದರೂ ಜೀವಿಸುವ ಜೀವಿಗಳಲ್ಲಿ ವಿಶೇಷವಾಗಿ ಇರುವನು ಆದುದರಿಂದಲೇ ಪ್ರಾಣಿಗಳಲ್ಲಿ ಚಿತ್ತವು ವಿಶೇಷವಾಗಿ ಇರುವುದು—ಎಂದು ಐತರೇಯೋಪನಿಷತ್ತು ಸಂದೇಶಿಸಿದೆ[4]

---

1 'ಕ್ವ ಸ್ವೇ ಮಹಿಮ್ನ್ಯಭಿರತೋ ಭಗವಾಂಸ್ತ್ರ್ಯಧೀಶಃ ಕ್ವಾಹಂ..'

-ಭಾಗ 10-82-38

ಸ್ವೇ ಮಹಿಮ್ನಿ ಪ್ರತಿಷ್ಠಿತಃ, ಸ್ವರತಶ್ಚ । -ಬ ಗೋ. (ಭಾಗ. ಟಿ )

೨ 2 ಸ್ಥಿತೇಷು ಪದಾರ್ಥೇಷು ಪ್ರತಿ ಪ್ರತಿ ಸ್ಥಿತ ಇತಿ ಪ್ರತಿಷ್ಠಿತಃ । ಯಥಾ ಗೀತಾಭಾಷ್ಯೇ (9-2) 'ಅಕ್ಷೇಷ್ವಿಂದ್ರಿಯೇಷು ಪ್ರತಿ ಪ್ರತಿ ಸ್ಥಿತ ಇತಿ ಪ್ರತ್ಯಕ್ಷಃ'—ಇತಿ ಪ್ರತ್ಯಕ್ಷಶಬ್ದಾಭಿಧೇಯತ್ವಂ ಪರಮಾತ್ಮನಃ ಸಮರ್ಥಿತಂ ತಥಾ ।

೩ 3 ಸ್ಥಿತೇಷು ಜೀವನಸಂಪನ್ನೇಷು ಪ್ರತಿ ಪ್ರತಿ ಸ್ಥಿತ ಇತಿ ಪ್ರತಿಷ್ಠಿತಃ । 'ಸ್ಥಿತಿಶಬ್ದೇನ ನಿಯಮಃ ಕ್ವಚಿಜ್ಜೀವನಮುಚ್ಯತೇ । ಉತ್ಥಿತತ್ವಂ ಕ್ವಚಿಚ್ಚೈವ ಕ್ವಚಿದ್ ಗತಿವಿರೋಧಿ ಚ'-ಇತಿ ಶಬ್ದನಿರ್ಣಯೇ (ಭಾಗ ತಾ. ನಿ. 11-11-17) ಸ್ಥಿತಿಶಬ್ದಸ್ಯ ಜೀವನಾರ್ಥಕತ್ವಂ ನಿರೂಪ್ಯತ ಇತಿ ಸ್ಥಿತಶಬ್ದಸ್ಯ ಜೀವನಸಂಪನ್ನಾರ್ಥಕತ್ವಂ ಸಿದ್ಧ್ಯತಿ ।

4 ಚಿತ್ತಂ ಪ್ರಾಣಭೃತ್ಸು ಪ್ರಾಣಭೃತ್ಸು ತ್ವೇವಾಽವಿಸ್ತರಾಮಾತ್ಮಾ ತೇಷು ಹಿ ರಸೋಽಪಿ ದೃಶ್ಯತೇ ನ ಚಿತ್ತಮಿತರೇಷು ॥ -ಐ ಉ. 2 2-2-2

. ವಿಷ್ಣೋರ್ಯದ್ ವಿಶೇಷಾವೇಶನಂ ಸದಾ । ಜಂಗಮೇಷು ಚ ವೃಕ್ಷೇಷು ನೈವ ತಾದೃಕ್ ಶಿಲಾದಿಷು ತಸ್ಮಾದ್ ವೃಕ್ಷಾದಿಷು ರಸಶ್ಚಿತ್ತಂ ಚಲನವತ್ಸು ಚ । ದೃಶ್ಯತೇ ನ ಶಿಲಾದ್ಯೇಷು ।

-ಐ ಉ. ಭಾ 2 2-2-2

೪ ನಿಯಮಸಂಪನ್ನರಲ್ಲಿ (ವಿಶೇಷವಾಗಿ) ಇರುವವನು[1]

೫ ಪ್ರತಿಯೊಬ್ಬ ಜೀವಾತ್ಮನಲ್ಲೂ ನಿಯಾಮಕನಾಗಿ ಇರುವವನು[2]

## ಜಿಜ್ಞಾಸೆ

### [ಇತರೇಚ್ಛಾನಧೀನ ಕರ್ತೃತ್ವ]

ಪ್ರ – 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂಬ ಶ್ರುತಿಯ ಆಧಾರದಿಂದ ಪರಮಾತ್ಮನು ಸ್ವತಂತ್ರನು ಎಂದು ಸಿದ್ಧವಾಗುತ್ತದೆ ಆದರೆ ಪರಮಾತ್ಮನು ಒಬ್ಬನೇ ಸ್ವತಂತ್ರನು. ಇತರರು ಯಾರೂ ಸ್ವತಂತ್ರರು ಅಲ್ಲ ಎಂದು ಹೇಳಬಹುದೋ? ಇತರ ಜೀವರಿಗೆ ದತ್ತಸ್ವಾತಂತ್ರ್ಯವು ಇದೆ ಎಂದು ವಿಷ್ಣು ರಹಸ್ಯ ಪುರಾಣವು ಹೇಳುತ್ತದೆ ಆದುದರಿಂದ ಇತರರೂ ಪರಮಾತ್ಮದತ್ತವಾದ ಸ್ವಾತಂತ್ರ್ಯವುಳ್ಳವರಾದ್ದರಿಂದ ಪರಮಾತ್ಮನು ಮಾತ್ರ ಸ್ವಾತಂತ್ರ್ಯವುಳ್ಳವನೆಂದು ಹೇಗೆ ಹೇಳುವದು?

ಉ - ಜೀವರು ಪರಮಾತ್ಮದತ್ತ ಸ್ವಾತಂತ್ರ್ಯವುಳ್ಳವರು ಎಂಬ ಶಬ್ದದ ಅರ್ಥವು ಹೀಗೆ ಇದೆ. ಪರಮಾತ್ಮನ ಅಧೀನವಾದ ಕಾರ್ಯವನ್ನು ಮಾಡುವ ಶಕ್ತಿಯು ಜೀವನಿಗೆ ಇದೆ ಎಂದು ದತ್ತ ಸ್ವಾತಂತ್ರ್ಯ ಶಬ್ದದ ಅರ್ಥ ಪರಮಾತ್ಮನ ಸ್ವಾತಂತ್ರ್ಯವೆಂದರೆ ಇತರೇಚ್ಛಾನಧೀನವಾದ ಸರ್ವ ಕಾರ್ಯ ಶಕ್ತಿ ಎಂದು ಅರ್ಥ ಈ ಸ್ವಾತಂತ್ರ್ಯವು ಇತರರಿಗೆ ಯಾರಿಗೂ ಇಲ್ಲ



ಸ್ಕಂದಃ ಸ್ಕಂದಧರೋ ಧುರ್ಯೋ ವರದೋ ವಾಯುವಾಹನಃ ।
ವಾಸುದೇವೋ ಬೃಹದ್ಭಾನುರಾದಿದೇವಃ ಪುರಂದರಃ ॥ ೩೬ ॥

೩೨೮ ಸ್ಕಂದಃ

೧ ತನ್ನ ಉದರದಿಂದ ಜಗತ್ತನ್ನು ಹೊರಹಾಕಿರುವವನು[3]

---

೪ 1 'ಸ್ಥಿತಿಶಬ್ದೇನ ನಿಯಮಃ ಕ್ವಚಿತ್....ಉಚ್ಯತೇ ' ಇತಿ ಶಬ್ದನಿರ್ಣಯಾನುಸಾರೇಣ ಸ್ಥಿತಿಃ ನಿಯಮಃ, ತತ್ಸಂಪನ್ನಾಃ ಸ್ಥಿತಾಃ ತೇಷು ಪ್ರತಿ ಪ್ರತಿ ಸ್ಥಿತ ಇತಿ ಪ್ರತಿಷ್ಠಿತಃ ।

೫ 2 ಯಾವಂತೋ ಜೀವಾಸ್ತಾವತಃ ಪ್ರತಿ ಬಹುರೂಪತ್ವೇನ ನಿಯಾಮಕತಯಾ ಸ್ಥಿತಃ ಪ್ರತಿಷ್ಠಿತಃ । –ವಿ ರಾ.

೧ 3 ಸ್ಕಂದನಾತ್ ಸ್ವಸ್ಮಾಜ್ಜಗತೋ ನಿಷ್ಕಾಸನಾತ್ ಸ್ಕಂದನಾಮಾ । ಸ್ಕಂದಿರ್ ಗತಿಶೋಷಣಯೋರಿತಿ ಧಾತೋರಚ್ । –ಗೀ. ವಿ. (10 24)

ಈ ಜಗತ್ತನ್ನು ಸೃಷ್ಟಿಸಿ, ಅದಕ್ಕೆ ನಿಯಾಮಕಗಳಾಗಿ ಬಹುರೂಪವುಳ್ಳವನು ತಾನಾಗಬೇಕೆಂದು ಯೋಚಿಸಿದ ಭಗವಂತನು ಜಗತ್ತನ್ನು ತನ್ನ ಉದರದಿಂದ ಹೊರಹಾಕುವ ರೂಪದ ಸೃಷ್ಟಿಯನ್ನು ನಡೆಸಿದನೆಂದೂ ತೈತ್ತಿರೀಯೋಪನಿಷತ್ತು ಸಂದೇಶಿಸಿದೆ[1] ಹೀಗೆ ಭಗವಂತನು ಜಗತ್ತನ್ನು ತನ್ನ ಮೂಲಕ ಸೃಷ್ಟಿಸುವ ಪ್ರಯುಕ್ತ 'ಸ್ಕಂದ' ಎಂದೆನಿಸುವ ವಿಭೂತಿರೂಪದಿಂದ ಷಣ್ಮುಖನಲ್ಲಿದ್ದು ಕೊಂಡು ಅವನು ಸೇನಾನಿಗಳಲ್ಲೆಲ್ಲ ವಿಶಿಷ್ಟನೆನಿಸುವಂತೆ ಅನುಗ್ರಹಿಸುತ್ತಿರುವುದಾಗಿ ಗೀತೆಯಲ್ಲಿ ಸಂದೇಶಿಸಲಾಗಿದೆ.[2]

೨ ಸೂರ್ಯನ ಮೂಲಕ ನೀರೇ ಮೊದಲಾದ ದ್ರವ ಪದಾರ್ಥಗಳನ್ನು ಒಣಗಿಸುವವನು.[3]

ಸೂರ್ಯನ ಮೂಲಕ ನಾವು ನಾಲ್ಕು ವಿಧದ ಶಕ್ತಿಗಳನ್ನು ಪಡೆದುಕೊಳ್ಳುತ್ತಿದ್ದು, ಅವುಗಳಲ್ಲಿ ಒಣಗಿಸುವ ಶಕ್ತಿಯೂ ಒಂದಾಗಿದೆ. ಈ ಶಕ್ತಿ ಸೂರ್ಯಾಂತರ್ಯಾಮಿಯಾಗಿರುವ ಸೂರ್ಯನಾರಾಯಣನಿಗೆ ಸೇರಿದ್ದೇ ವಿನಹ ಸೂರ್ಯನ ಸಹಜವಾದ ಶಕ್ತಿ ಅಲ್ಲ—ಎಂದು ಪಾದ್ಮ ತಿಳಿಸಿದೆ[4]

---

1 ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದꣳಸರ್ವಮಸೃಜತ । ಯದಿದಂ ಕಿಂಚ ।

—ತೈ. ಉ. 2-11

* ...ಸ ತ್ವಕಾಮಯತ್ । ಸೃಷ್ಟ್ವಾ ಜಗದಿದಂ ಸರ್ವಂ ನಿಯಾಮಕತಯಾಽಸ್ಯ ತು । ಬಹುರೂಪೋ ಭವಾನೀತಿ ಸ್ಯಾಜ್ಜಗಚ್ಚೇತ್ಯಚಿಂತಯತ್ । ...ಸೃಷ್ಟಿರ್ನಾಮ ಸ್ವರೂಪಾತ್ತು ಬಹಿರ್ನಿಷ್ಕ್ರಾಮಣಂ ಸ್ಮೃತಮ್ ।

—ಯಜುಃ ಸಂಹಿತಾ (ತೈ ಉ. ಭಾ)

2 'ಸೇನಾನೀನಾಮಹಂ ಸ್ಕಂದಃ .' —ಗೀ. 10-24

'.. ಸ್ಕಂದೋ ಜಗತಃ ಸ್ಕಂದನಾತ್.... । —ವಿಭೂತಿತತ್ತ್ವ (ಗೀ. ತಾ.)

೨ 3 ಸ್ಕಂದತಿ ಸೂರ್ಯದ್ವಾರಾ ಜಲಾದೀನ್ ಶೋಷಯತೀತಿ ಸ್ಕಂದಃ ।'ಸ್ಕಂದಿರ್ ಶೋಷಣೇ'

4 'ತಾಪನೀ ಪಾಚಿಕಾ ಚೈವ ಶೋಷಣೀ ಚ ಪ್ರಕಾಶನೀ । ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ —ಪಾದ್ಮ (ಐ. ಉ. ಭಾ 2-1-1-1)

೩ ಸೂರ್ಯನ ಮೂಲಕ ಆಯುಷ್ಯವನ್ನು ಹೀರುತ್ತ ಶುಷ್ಕರನ್ನಾಗಿಸುವವನು.[1]

ಮುಖ್ಯವಾಗಿ 'ಆದಿತ್ಯ' ಎನಿಸುವ ಭಗವಂತನು ಸೂರ್ಯನಲ್ಲಿದ್ದುಕೊಂಡು ನಮ್ಮ ಆಯುಷ್ಯವನ್ನು ಹೀರುವುದರಿಂದ 'ಆದಿತ್ಯ' ಎನಿಸಿರುವನು[2] ಹೀಗೆ ಆಯುಷ್ಯವನ್ನು ಹೀರುತ್ತ ಹೀರುತ್ತ ಕ್ರಮೇಣ ನಮ್ಮ ದೇಹವನ್ನು ಶುಷ್ಕವನ್ನಾಗಿಸುವನು.

ಶ್ರೀಕೃಷ್ಣಾವತಾರದಲ್ಲಿ ಮಹಾಭಾರತದ ಯುದ್ಧದ ಸಂವರ್ಭದಲ್ಲಿ ಕೌರವಸೇನೆಯನ್ನೊಮ್ಮೆ ನೋಡುವುದರ ಮೂಲಕವೇ ಅಲ್ಲಿಯ ಸೈನಿಕರ ಆಯುಷ್ಯವನ್ನು ಹೀರಿದ್ದನು. ಆಯುಸ್ಸನ್ನಷ್ಟೇ ಅಲ್ಲದೆ, ಅವರ ಮನಸ್ಸು, ಓಜಸ್ಸು, ಬಲಗಳನ್ನು ಕಸಿದುಕೊಂಡು ಭೀಷ್ಮಾದಿಗಳನ್ನು ಶುಷ್ಕರನ್ನಾಗಿರಿಸಿದ್ದನು[3]

೪ (ನೃಸಿಂಹಾವತಾರದಲ್ಲಿ ಸ್ತಂಭದ ಮೂಲಕ) ತನ್ನನ್ನು ತಾನೇ ಹೊರ ಹಾಕಿರುವವನು.[4]

೫ ಅಸುರ ಮುಂತಾದ ದುಷ್ಟರನ್ನು ಶೋಷಿಸುವವನು.[5]

೬ (ಭಕ್ತರಿಗೆ) ಜ್ಞಾನ ಮತ್ತು ಸುಖವನ್ನು ನೀಡುವವನು.[6]

---

೩ 1 ಸ್ಕಂದತಿ ಸೂರ್ಯದ್ವಾರಾ ಜೀವಾತ್ಮನಾಂ ಆಯುಷಾಂ ಹರಣಾತ್ ಶೋಷಯತೀತಿ ಸ್ಕಂದಃ । 'ಸ್ಕಂದಿರ್ ಶೋಷಣೇ'

2 ಆದಾನಾದಾಯುಷಾಂ ಚೈವ ಸ ಆದಿತ್ಯ ಉದೀರಿತಃ ।
-ಛಾಂ. ಉ. ಭಾ. 2-1-2

3 ಯೋ ಭೀಷ್ಮಕರ್ಣಗುರುಶಲ್ಯಚಮೂಷ್ವದಭ್ರರಾಜನ್ಯವರ್ಯ ರಥಮಂಡಲಮಂಡಿತಾಸು । ಅಗ್ರೇಚರೋ ಮಮ ವಿಭೋ ರಥಯೂಥಪಾನಾಮಾಯುರ್ಮನಾಂಸಿ ಚ ದೃಶಾ ಸಹ ಓಜ ಆರ್ಚ್ಛತ್ ॥ -ಭಾಗ. 1-15-15

೪ 4 ನೃಸಿಂಹಾವತಾರೇ ಸ್ತಂಭದ್ವಾರಾ ಸ್ವಯಮಾತ್ಮಾನಂ ಸ್ಕಂದತಿ ನಿಷ್ಕಾಸಯತೀತಿ ಸ್ಕಂದಃ।

೫ 5 ಸ್ವಯಮಸುರಾದೀನ್ ಸ್ಕಂದಯತಿ-ಶೋಷಯತೀತಿ ಸ್ಕಂದಃ ।
-ಪ. ಭ.

೬ 6 'ಸ್ಕೃ ಗತೌ' ಇತಿ ಧಾತೋಃ ಡಪ್ರತ್ಯಯೇ ಕೃತೇ ಸಂ ಜ್ಞಾನಂ ಕಂ ಸುಖಂ ಚ ಭಕ್ತಾನಾಂ ದದಾತೀತಿ ಸ್ಕಂದಃ । -ವಾ. ರಾ

೭ ಸಮೀಚೀನವಾದ ಸುಖವನ್ನು ಅನುಗ್ರಹಿಸುವವನು.[1]

## ಜಿಜ್ಞಾಸೆ

[ಪರಿಣಾಮಿಕಾರಣವಲ್ಲ]

ಪ್ರ - ಭೂಮಿಯಿಂದ ಮೊಳಕೆಯು ಹೊರಗೆ ಬಂದು ದೊಡ್ಡ ಮರವಾಗಿ ಬೆಳೆಯುತ್ತದೆ. ಈ ಮರಕ್ಕೆ ಭೂಮಿಯು ಉಪಾದಾನ ಕಾರಣವಾಗಿದೆ. ಇದರಂತೆ ಪರಮಾತ್ಮನ ನಾಭಿಯಿಂದ ಸರ್ವಲೋಕಾತ್ಮಕವಾದ ಪದ್ಮವು ಹೊರಗೆ ಬಂದು ದೊಡ್ಡ ಪ್ರಪಂಚವಾಗಿ ಬೆಳೆದಿದೆ. ಭೂಮಿಯು ಹೇಗೆ ವೃಕ್ಷಗಳಿಗೆ ಪರಿಣಾಮಿ ಕಾರಣವೋ ಹಾಗೆಯೇ ಪರಮಾತ್ಮನು ಪ್ರಪಂಚಕ್ಕೆ ಪರಿಣಾಮಿ ಕಾರಣವಾಯಿತಲ್ಲವೇ?

ಉ:- ಜೇಡರ ಹುಳುವು ತಾನು ತಿಂದ ಆಹಾರ ವಸ್ತುವನ್ನು ನೂಲಿನ ರೂಪದಿಂದ ತನ್ನ ದೇಹದಿಂದ ಹೊರಗೆ ಹಾಕುವಂತೆ ಪರಮಾತ್ಮನು ಪ್ರಲಯ ಕಾಲದಲ್ಲಿ ತಿಂದ ಈ ಪ್ರಪಂಚವನ್ನು ಪ್ರಕೃತಿ ರೂಪದಿಂದ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡು ಅದರ ಪರಿಣಾಮರೂಪದಿಂದ ಈ ಪ್ರಪಂಚವನ್ನು ತನ್ನ ದೇಹದ ಹೊರಗೆ ಇಟ್ಟಿದ್ದಾನೆ. ಆದ್ದರಿಂದ ಪರಮಾತ್ಮನು ಪ್ರಪಂಚಕ್ಕೆ ಕರ್ತನೇ ಹೊರತು ಪರಿಣಾಮಿಕಾರಣವು ಅಲ್ಲ.



## ೩೨೯ ಸ್ಕಂದಧರಃ

೧ ಷಣ್ಮುಖನನ್ನು ಧರಿಸಿಕೊಂಡಿರುವವನು.[2]

ತನ್ನಲ್ಲಿ ಸಕಲ ದೇವತೆಗಳೂ ಆಶ್ರಿತರಾಗಿರುವರೆಂದು ಮಹಿದಾಸರೂಪಿ ಭಗವಂತನು ಸಂದೇಶಿಸಿರುವನು.[3] ಸ್ಕಂದ ಎಂಬ ಹೆಸರಿನಿಂದ ತಾನು ಸ್ಕಂದನಲ್ಲಿ ಇದ್ದು, ಅವನು ಸೇನಾನಾಯಕನಲ್ಲೆಲ್ಲ ವಿಶಿಷ್ಟ

---

೭ 1 ಸುಷ್ಠು ಕಂ ಸುಕಂ ಸುಕಮೇವ ಸ್ಕಂ ಉಪಪದಾಂಶ್ಚಲೋಪಃ । ತತ್ ದದಾತೀತಿ ಸ್ಕಂದಃ । -ಶೀ. ಚಂ.

೧ 2 ಸ್ಕಂದಂ ಷಣ್ಮುಖಂ ಧಾರಯತೀತಿ ಸ್ಕಂದಧರಃ । -ವಾ. ರಾ.

* ತಾದೃಶಂ ಸುರಸೇನಾನ್ಯಮಪಿ ಧರತ ಇತಿ ಸ್ಕಂದಧರಃ । -ಪ. ಭ.

3 ಮಯಿ ದೇವಾಃ . . ಇತಿ ವಿದ್ಧಿ ವರಾನನೇ । -ಐ. ಉ. ಭಾ. 1-6-1

ನೆನಿಸುವಂತೆ ಅನುಗ್ರಹಿಸುತ್ತಿರುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು[1]

೨ ಇತರರಿಗೆ ಶೋಭನ ಸುಖವನ್ನು ನೀಡುವ ಬ್ರಹ್ಮಾದಿಗಳನ್ನು ಧರಿಸಿಕೊಂಡಿರುವವನು[2]

೩ ಶೋಭನ ಸುಖವನ್ನು ನೀಡುವ ಜ್ಞಾನವನ್ನು ಧರಿಸಿಕೊಂಡಿರುವವನು.[3]

೪ 'ಸ್ಕಂದ' ಎನಿಸುವ ತನ್ನನ್ನು ತಾನೇ ಧರಿಸಿಕೊಂಡಿರುವವನು[4]

'ಸ್ವಧೃತ' ಎನಿಸಿರುವ[5] ಭಗವಂತನು ತಾನೇ ತನ್ನನ್ನು ಧರಿಸಿಕೊಂಡಿರುವವನು

೫ (ನೀರು ಮೊದಲಾದವನ್ನು) ಒಣಗಿಸುವ ಪ್ರಯುಕ್ತ ಸ್ಕಂದ ಎನಿಸುವ ಸೂರ್ಯನನ್ನು ಧರಿಸಿಕೊಂಡಿರುವವನು.[6]

---

1 'ಸೇನಾನೀನಾಮಹಂ ಸ್ಕಂದಃ ' -ಗೀ 10-24

೨ 2 ಸ್ಕಂ (ಶೋಭನಂ) ಸುಖಂ ಇತರೇಭ್ಯೋ ದದಾತೀತಿ ಸ್ಕಂದಾಃ ಬ್ರಹ್ಮಾದಯಃ ತಾನ್ ಧರತಿ ಬಿಭತೀತಿ ಸ್ಕಂದಧರಃ -ಶೇ. ಚ

೩ 3 ಸು ಶೋಭನಂ ಕಂ ಸುಖಂ ದದಾತೀತಿ ಮುಕ್ತಿಸುಖಪ್ರದಂ ಜ್ಞಾನಮ್ । ತತ್ ಧಾರಯತೀತಿ ಸ್ಕಂದಧರಃ ।

೪ 4 ಸ್ಕಂದಂ ಜಗತಃ ಸ್ಕಂದನಾತ್ ಸ್ಕಂದನಾಮಕಂ ಸ್ವಂ ಧರತೀತಿ ಸ್ಕಂದಧರಃ ।

5 'ಅಧೃತಃ ಸ್ವಧೃತಃ (843) ಸ್ವಾಸ್ಯಃ....' -ವಿ. ಸ.

೫ 6 ಸ್ಕಂದತಿ ಶೋಷಯತೀತಿ ಸ್ಕಂದಃ ಸೂರ್ಯಃ । ತಂ ಧಾರಯತೀತಿ ಸ್ಕಂದಧರಃ ।

೭ ಧರ್ಮಮಾರ್ಗವನ್ನು ಧರಿಸಿಕೊಂಡಿರುವವನು.[1]

## ಜಿಜ್ಞಾಸೆ

[ನಹಿ ದೃಷ್ಟಾಂತೇ ಸರ್ವಸಾಮ್ಯಂ]

ಪ್ರ:- ಯಾವ ಮರವು ಎಲೆಗಳನ್ನು ಧರಿಸುತ್ತದೋ ಅದೇ ಪುಷ್ಪಗಳನ್ನು ಧರಿಸುತ್ತದೆ. ಯಾವ ಮರವು ಪುಷ್ಪಗಳನ್ನು ಧರಿಸುತ್ತದೊ ಅದೇ ಫಲಧಾರಕವಾಗುತ್ತದೆ. ಅದರಂತೆ ಧರ್ಮಧಾರಕನೇ ಜ್ಞಾನಧಾರಕನು. ಜ್ಞಾನಧಾರಕನೇ ಮೋಕ್ಷರೂಪ ಫಲಧಾರಕನು ಎಂಬ ನಿಯಮದಿಂದ ಧರ್ಮ ಧಾರಕನಾದ ಶ್ರೀಹರಿಯೇ ಜ್ಞಾನಧಾರಕನು ಮತ್ತು ಮೋಕ್ಷಧಾರಕನು ಆಗುವದು ಯುಕ್ತ. ಆದರೆ ಕೆಲವು ಮರಗಳು ಎಲೆಗಳನ್ನು ಧರಿಸುತ್ತವೆ ಪುಷ್ಪಗಳನ್ನು ಫಲಗಳನ್ನು ಧರಿಸುವುದಿಲ್ಲ. ಅಥವಾ ಎಲೆಗಳನ್ನು ಪುಷ್ಪಗಳನ್ನು ಧರಿಸುತ್ತವೆ ಫಲವನ್ನು ಧರಿಸುವುದಿಲ್ಲ ಅದರಂತೆ ಪರಮಾತ್ಮನು ಕೆಲವರಿಗೆ ಧರ್ಮಜ್ಞಾನಧಾರಕನಾಗಿ ಮೋಕ್ಷ ರೂಪ ಫಲಧಾರಕನಾಗದೆ ಇರುತ್ತಾನೋ ಹೇಗೆ?

ಉ - 'ನಹಿ ದೃಷ್ಟಾಂತೇ ಸರ್ವಸಾಮ್ಯಂ' ಅಂದರೆ ದೃಷ್ಟಾಂತ ದಾರ್ಷ್ಟಾಂತಿಕಗಳಿಗೆ ಎಲ್ಲಿಯೂ ಸರ್ವ ಸಾಮ್ಯವು ಇರುವದಿಲ್ಲ ಆದ್ದರಿಂದ ಕೆಲವು ಮರಗಳು ಎಲೆ ಪುಷ್ಪಗಳಿಗೆ ಧಾರಕವಾಗಿ ಫಲಧಾರಕ ವಾಗದೆ ಇರುವಂತೆ ಪರಮಾತ್ಮನು ಧರ್ಮಜ್ಞಾನಗಳನ್ನು ಯಾರಿಗೆ ಕೊಡುತ್ತಾನೋ ಅವರಿಗೆ ಮೋಕ್ಷಧಾರಕನಾಗದೆ ಇರುವದಿಲ್ಲ ಬ್ರಹ್ಮಸೂತ್ರದಲ್ಲಿ ಜ್ಞಾನವು ಯಾರಿಗೆ ಬಂದಿದೆಯೋ ಅವರಿಗೆ ಮೋಕ್ಷವು ನಿಯಮೇನ ಆಗುತ್ತದೆಂದು ನಿರ್ಣಯಿಸಲಾಗಿದೆ.



---

ಟಿ 1 ಸ್ಕಂದಂ ಧರ್ಮಪಥಂ ಧಾರಯತೀತಿ ಸ್ಕಂದಧರಃ ।

-ಶಾಂ. ಭಾ.

ಸ್ಕಂದತಿ ಶೋಷಯತಿ ನಾಶಯತ್ಯಧರ್ಮಮಿತಿ ಸ್ಕಂದೋ ಧರ್ಮಃ । ತಥಾಚ ಅಧರ್ಮ-ನಾಶಕಂ ಧರ್ಮಮಾರ್ಗಂ ಧಾರಯತಿ ಸ್ಥಾಪಯತೀತಿ ಸ್ಕಂದಧರಃ । -ವಿವೃತಿಃ॥

* * *

'ಸ್ಕಂದಧರಃ' ಇತ್ಯಪಿ ಪಾಠಃ ಶಾಂಕರಭಾಷ್ಯಸ್ಯ ವಿವೃತೌ ಸೂಚಿತಃ ।

೩೩೦ ಧುರ್ಯಃ

೧ ಎಲ್ಲದರ ಹೊಣೆಯನ್ನು ಹೊತ್ತಿರುವವನು.[1]

೨ (ಭಾರ ಹೊರುವವರಿಗೆ ಹೊರುವ ಸಾಮರ್ಥ್ಯವನ್ನು ನೀಡುವುದರ ಮೂಲಕ) ಎಲ್ಲದರ ಭಾರವನ್ನು ಹೊರುವವನು.[2]

ಬ್ರಹ್ಮಾಂಡದಿಂದ ಪ್ರಾರಂಭಿಸಿ ಪ್ರತಿಯೊಂದು ವಸ್ತುವಿನ ಭಾರವನ್ನೂ ಭಗವಂತನೇ ಹೊರುವವನು. ಜಡಭರತನು ತಾನು ಸೌವೀರರಾಜನ ಪಲ್ಲಕಿಯನ್ನು ಹೊತ್ತವನಲ್ಲ, ಪಲ್ಲಕಿಯ ಭಾರ ತನ್ನ ಮೇಲೆ ಇಲ್ಲ ಎಂದು ಸೂಚಿಸಿರುವುದು ನಿಜವಾಗಿ ಪಲ್ಲಕಿಯನ್ನು ಹೊರುವವನು ಭಗವಂತನೇ— ಎಂಬ ಅಭಿಪ್ರಾಯದಲ್ಲಿ.[3]

೩ ವೃಷಭ ಅಶ್ವಾದಿಗಳಲ್ಲಿ ಆಯಾಯ ರೂಪದಿಂದ ಇದ್ದು ಭಾರವನ್ನು ಹೊರುವವನು.[4]

ನಾರಾಯಣ ಹಾಗೂ ಅನಿರುದ್ಧ ರೂಪಿ ಭಗವಂತನು ಎತ್ತು ಮುಂತಾದ ಪಶುಗಳಲ್ಲಿ ಆಯಾಯ ಪಶುಗಳ ರೂಪದಲ್ಲಿದ್ದು ಆ ಪಶುಗಳ ಮೇಲೆ ಏರಿ ಸವಾರಿಮಾಡುತ್ತಿರುವವರ ಭಾರ

---

೧ 1 ಸರ್ವಸ್ಯ ಧುರಂ ವಹತೀತಿ ಧುರ್ಯಃ ।

೨ 2 ಧುರಂ ಭಾರಂ ವಹತೀತಿ ಧುರ್ಯಃ ।

3 'ತ್ವಯೋದಿತಂ ವ್ಯಕ್ತಮವಿಪ್ರಲಬ್ಧಂ ಭರ್ತುಃ ಸ ಮೇ ಸ್ಯಾದ್ ಯದಿ ವೀರ ಭಾರಃ...'
—ಭಾಗ. 5-10-9

* 'ಭರಣಾದಿಕೃದ್ಧರಿರಿತಿ ಚಿಂತಯನ್ ನೃಪಮಬ್ರವೀತ್'
—ಭಾಗ ತಾ. ನಿ. 5-10-9

* ಭಗವತಃ ಭಾರವಾಹಕತ್ವಮಧಿಕೃತ್ಯ ಅಧಿಕಃ ವಿಚಾರಃ (೩೩) ಭರ್ತಾ ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೩ 4 ವೃಷಭಾಶ್ವಾದಿಷು ವೃಷಭಾಶ್ವಾದಿರೂಪೇಣ ಸನ್ನಿಹಿತಃ ಸನ್ ಧುರಂ ಭಾರಂ ವಹತೀತಿ ಧುರ್ಯಃ ।

ವನ್ನು ಹೊರುತ್ತ ಅವರಿಗೆ ತೃಪ್ತಿಯನ್ನು ಅನುಗ್ರಹಿಸುವವನು[1]

೪ (ವಾಯು ಶೇಷಾದಿಗಳಿಗೆ) ಭಾರವನ್ನು ತಲುಪಿಸುವವನು.[2]

ಭಗವಂತನು ಸ್ವತಂತ್ರನಾಗಿ ಬ್ರಹ್ಮಾಂಡದ ಭಾರವನ್ನು ಹೊತ್ತಿದ್ದರೆ, ಅವನನ್ನು ಆಶ್ರಯಿಸಿ ವಾಯುದೇವನೂ, ವಾಯುದೇವನನ್ನು ಆಶ್ರಯಿಸಿಕೊಂಡು ಶೇಷದೇವನೂ ಹೊತ್ತುಕೊಂಡಿರುವನು ಹೀಗೆ ವಾಯುದೇವ ಮುಂತಾದವರು ಭಾರವನ್ನು ಹೊರುವಂತೆ ನಿಯೋಜಿಸಿರುವವನು ಭಗವಂತನೇ

೫ (ಪ್ರಲಯಕಾಲದಲ್ಲಿ) ಎಲ್ಲರನ್ನೂ ಸಂಹರಿಸುವವನು ಮತ್ತು ಪೂರ್ಣನಾಗಿರುವವನು.[3]

ಭಗವಂತನು ಪೂರ್ಣನಾಗಿರುವುದರಿಂದ, ಅಪೂರ್ಣರಾದ ಉಳಿದೆಲ್ಲರನ್ನೂ ಪ್ರಲಯ ಕಾಲದಲ್ಲಿ ಸಂಹರಿಸುವವನು

೬ ಸಕಲ ದೇವತೆಗಳಿಗೂ ಅಗ್ರಗಾಮಿಯಾಗಿರುವವನು[4]

ಜಿಜ್ಞಾಸೆ

[ತಾಯಿ ಆಡಗಿಕೊಳ್ಳುವಂತೆ]

ಪ್ರ:- ಪರಮಾತ್ಮನು ಜಗದ್ಭಾರವನ್ನು ಹೊತ್ತುಕೊಳ್ಳುವದು ಮತ್ತು ಸಮಯ ವಿಶೇಷದಲ್ಲಿ ಅದನ್ನು ಕೆಳಗೆ ಇಳಿಸುವದು ಶಾಸ್ತ್ರಸಿದ್ಧವಾಗಿದೆ. ಆದರೆ ಇದು 'ಪ್ರಕ್ಷಾಲನಾದ್ಧಿ' ನ್ಯಾಯ ವಿಷಯವಾಗಿದೆ. ಒಬ್ಬನು ಕೆಸರನ್ನು ಮುಟ್ಟಿ ಕೈ ತೊಳೆದು ಕೊಂಡನು. ಅವನ ಮೇಲೆ

---

1 ನಾರಾಯಣಾನಿರುದ್ಧೌ ತು ತಥಾನ್ನಪಶುಷು ಸ್ಥಿತೌ । ವೃಷಭಾಶ್ವಾದಿರೂಪೇಣ ತೃಪ್ತಿದಾವಖಿಲಸ್ಯ ಚ । —ಐತರೇಯಸಂಹಿತಾ (ಐ. ಉ. ಭಾ. 2-2-1-5)

೪ 2 ವಾಯುಶೇಷಾದೀನ್ ಪ್ರತಿ ಧುರಂ ಭಾರಂ ಯಾಪಯತಿ ಪ್ರಾಪಯತೀತಿ ಧುರ್ಯಃ ।

೫ 3 ಧೂರ್ವತಿ ಪ್ರಲಯೇ ಸರ್ವಂ ಹಿನಸ್ತೀತಿ ಧೂಃ'ಧುರ್ವೀ ಹಿಂಸಾಯಾಮ್'। ' ಪೂರ್ಣತ್ವಾದ್ ಯ ಇತೀರ್ಯತೇ' ಇತಿ ಶಬ್ದನಿರ್ಣಯ (ಬೃ. ಉ. ಭಾ. 5-7-3) ನಿರೂಪಿತದಿಶಾ ಪೂರ್ಣತ್ವಾದ್ ಯಃ । ಧೂಶ್ಚಾಸೌ ಯಶ್ಚ ಧುರ್ಯಃ ।

೬ 4 ಅಶೇಷದೇವಾನಾಂ ಧುರಂಧರ ಅಗ್ರಗಾಮೀತಿ ಧುರ್ಯಃ ।

ಆಕ್ಷೇಪ ಏನೆಂದರೆ ಕೆಸರನ್ನು ಮುಟ್ಟಿದ್ದು ಏಕೆ? ಕೆಸರನ್ನು ಮುಟ್ಟಿ ಕೈ ತೊಳೆದು ಕೊಳ್ಳುವದಕ್ಕಿಂತ ಕೆಸರನ್ನು ಮುಟ್ಟದೆ ಇರುವದು ಉತ್ತಮವಲ್ಲವೇ? ಅದರಂತೆ ಪರಮಾತ್ಮನು ಜಗದ್ವ್ಯಾಪಾರವನ್ನು ಹೊತ್ತು ಕೊಳ್ಳದೆ ಇರುವದೇ ಲೇಸು ಅಲ್ಲವೇ? ಈ ಪ್ರಶ್ನೆಗೆ ಏನು ಉತ್ತರ?

ಉ - ತಾಯಿಯು ತನ್ನ ಮಗುವನ್ನು ಒಂದನ್ನೇ ಬಿಟ್ಟು ಕತ್ತಲೆಯಲ್ಲಿ ಅಡಗಿ ಕುತುಕೊಳ್ಳುತ್ತಾಳೆ ಆಗ ಆ ಮಗು ತಾಯಿ ಎಲ್ಲಿದ್ದಾಳೆ? ತಾಯಿಯು ಬೇಕು ಎಂದು ವಿರಹಕಾತುರವಾಗಿ ಅಳುತ್ತಿರುವಾಗ ತಾಯಿಯು ಶೀಘ್ರ ಬಂದು ಅಪ್ಪಿ ಮುದ್ದು ಕೊಟ್ಟು ಸ್ತನಪಾನವನ್ನು ಮಾಡಿಸುತ್ತಾಳೆ ಇದರಂತೆ ಪರಮಾತ್ಮನು ಭಕ್ತರನ್ನು ಹೊತ್ತು ರಕ್ಷಿಸುತ್ತಾ ಇದ್ದವನು ಒಮ್ಮೆ ರಕ್ಷಿಸುವ ವ್ಯಾಪಾರವನ್ನು ಬಿಡುತ್ತಾನೆ ಆಗ ಆ ಭಕ್ತರು ಪರಮಾತ್ಮನಲ್ಲಿ ವಿಶೇಷ ವಾಗಿ ಭಕ್ತಿಯನ್ನು ಮಾಡಿದಾಗ ಪುನಃ ಅವರನ್ನು ರಕ್ಷಿಸುತ್ತಾನೆ. ಇದು ಅವನ ಲೀಲೆ.



## ೩೩೧ ವರದಃ

### ೧ ವರಗಳನ್ನು ನೀಡುವವನು[1]

ಇತರ ದೇವತೆಗಳು ನೀಡುವ ವರಗಳು ನಿಷ್ಫಲಗಳಾಗುವುದೂ ಇದೆ. ದೇವತಾ ಶ್ರೇಷ್ಠನಾದ ಚತುರ್ಮುಖನೂ ಐಹಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಅಸುರರಿಗೆ ನೀಡುವ ವರಗಳಲ್ಲಿ ಕೆಲವನ್ನು ಭಗವಂತನು ಸುಳ್ಳಾಗಿಸುವುದುಂಟು[2]. ಆದರೆ ಭಗವಂತ ನೀಡಿದ ವರ ಯಾವುದೇ ಸಂದರ್ಭದಲ್ಲೂ ಯಾರಿಂದಲೂ ಸುಳ್ಳಾಗುವುದೆಂದಿಲ್ಲ[3] ಭಗವಂತನು ನೀಡುವ ವರವು ಸಂಪೂರ್ಣವಾಗಿ ಫಲಿಸಿಯೇ ತೀರುವುದು[4] ಅಲ್ಲದೆ ಭಗವಂತನಿಂದ ಮೊದಲೇ ನಿಶ್ಚಯಿಸಲ್ಪಟ್ಟುದುದೇ ಇನ್ನೊಬ್ಬರ

---

೧ 1 ವರಾನ್ ದದಾತೀತಿ ವರದಃ ।

2 ಐಹಿಕಂ ತ್ವಸುರೇಷ್ವೇವ ಕ್ವಚಿದ್ಧಂತಿ ಜನಾರ್ದನಃ ।
–ಮ. ಭಾರ. ತಾ. ನಿ. 9-36

3 ನ ವಿಷ್ಣೋರ್ವಚನಂ ಕ್ವಾಪಿ ವ್ಯೃಷಾ ಭವತಿ ಕಸ್ಯಚಿತ್ ।
–ಮ. ಭಾರ. ತಾ. ನಿ. 9-39

4 ವರಾ ವಿಷ್ಣೋಃ ಶ್ರಿಯಶ್ಚ ಸ್ಯುರ್ಬ್ರಹ್ಮಣಶ್ಚ ಯಥಾಕ್ರಮಮ್ । ...ಸಂಪೂರ್ಣಫಲದಾ ಏವ ನಾತ್ರ ಕಾರ್ಯಾ ವಿಚಾರಣಾ । –ಸ್ಕಾಂದ (ಭಾಗ. ತಾ. ನಿ. 6-17-37)

ವರದ ಮೂಲಕ ಸಿದ್ಧಿಸುವಂತಹದ್ದು. ಆದ್ದರಿಂದ ಯಾರಾದ್ದಾದರೂ ವರ ಫಲಿಸುವುದೆಂದರೆ, ಅದು ಭಗವಂತನಿಂದ ಅನುಗೃಹೀತವಾದದ್ದೆಂದೇ ಅರ್ಥ. ಸ್ವತಂತ್ರವಾಗಿ ವರವು ಫಲಿಸುವುದೆಂಬುದು ಭ್ರಮೆಯಷ್ಟೇ—ಎಂಬುದಾಗಿ ಪ್ರಕಾಶಸಹಿಂತೆ ಅಭಿಪ್ರಾಯಪಟ್ಟಿದೆ[1] ದೇವಾದಿಗಳು ಧರ್ಮಾರ್ಥಕಾಮ ಪುರುಷಾರ್ಥಗಳಿಗೆ ಸಂಬಂಧಿಸಿದಂತೆ ವರಗಳನ್ನು ನೀಡಬಲ್ಲರೇ ವಿನಹ ಮೋಕ್ಷಪುರುಷಾರ್ಥಕ್ಕೆ ಸಂಬಂಧಿಸಿದಂತೆ ವರವನ್ನು ನೀಡಲಾರರು ಮುಚುಕುಂದ ರಾಜನಿಗೆ ವರವನ್ನು ನೀಡುವ ಪ್ರಸಂಗದಲ್ಲಿ ದೇವತೆಗಳೇ ಇದನ್ನು ಒಪ್ಪಿಕೊಂಡಿರುವರು[2] ಆದರೆ ಭಗವಂತನು ತನ್ನ ಭಕ್ತರಲ್ಲಿ ತಾನು ಯಾವ ವರವನ್ನೂ ಕೊಡುವುದಾಗಿ ತಿಳಿಸುವನು.[3]

ಹೀಗೆ ಯಾವುದೇ ಸಂದರ್ಭದಲ್ಲಿ ನಿರರ್ಥಕವಾಗದಂತೆ, ತನ್ನ ಸಾಮರ್ಥ್ಯದಿಂದಲೇ ಫಲಿಸುವಂತೆ ಹಾಗೂ ನಾಲ್ಕು ಪುರುಷಾರ್ಥಗಳಿಗೂ ಸಂಬಂಧಿಸಿದಂತೆ ವರಗಳನ್ನು ನೀಡಬಲ್ಲವನು ಭಗವಂತನೊಬ್ಬನೇ ಹಾಗೆಯೇ, ಇತರರಿಗೆ ವರಗಳನ್ನು ನೀಡುವ ಬ್ರಹ್ಮಾದಿಗಳಿಗೂ ವರಪ್ರದನಾದವನು ಭಗವಂತನು[4] ಆದ್ದರಿಂದಲೇ ಭಗವಂತನನ್ನು 'ವರದರ್ಷಭ'—ವರಗಳನ್ನು ನೀಡುವವರಲ್ಲಿ ಶ್ರೇಷ್ಠ

---

1 ಯತ್ತ್ವದ್ ಭಗವತಾ ಕ್ಲೃಪ್ತಂ ತದೇವ ನಿಯತಂ ಭವೇತ್ । ಅತೋಽನ್ಯೇಷಾಂ ವರಃ ಶಾಪೋ ಗುಣದೋಷಪ್ರಕರ್ತೃತಾ । ಸ್ವತಃ ಪ್ರಾಪ್ತ್ಯಾದ್ ಭೇದಕ್ಲೃಪ್ತಿರ್ವಾಸನಾರೂಪಿಣೋ ಯಥಾ । -ಪ್ರಕಾಶಸಂಹಿತಾ (ಭಾಗ ತಾ- ನಿ 6 17–29)

* ಅನ್ಯೇಷಾಂ ವರಃ ಶಾಪಃ ಸುಖದುಃಖಕರ್ತೃತ್ವಂ ವಾ ಅತಃ ಭಗವತಾ ಕ್ಲೃಪ್ತತ್ವಾದೇವ ಯುಜ್ಯತೇ। ಅತ ಏವ ಹೇತೋರನ್ಯೇಷಾಂ ವರಃ ಶಾಪೋ ಗುಣದೋಷಪ್ರಕರ್ತೃತಾ ಇತ್ಯೇತತ್ ಸರ್ವಮಂತತೋ ಭಗವತ್ಯೈವ ಕ್ಲೃಪ್ತವತ್। ಅತಶ್ಚ ಅನ್ಯೇಷಾಂ ಸ್ವಾತಂತ್ರ್ಯೇಣ ವರಃ ಶಾಪೋ ಗುಣದೋಷಪ್ರಕರ್ತೃತಾ ವಾ ಯಥಾ ವಾಸನಾಮಯಸ್ಯ ಸ್ವಾಪ್ನಾರ್ಥಸ್ಯ ಬಾಹ್ಯತ್ವಾದಿಭೇದಕ್ಲೃಪ್ತಿಸ್ತಥಾ ಭ್ರಾಂತಿರೇವ । -ಬ. ಗೋ (ಭಾಗ. ತಾ. ನಿ ಟಿ.)

2 ವರಂ ವೃಣೀಷ್ವ ಭದ್ರಂ ತೇ ಋತೇ ಕೈವಲ್ಯಮದ್ಯ ನಃ ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ ॥
-ಭಾಗ. 10-51-20

3 ಪ್ರಹ್ಲಾದ......ವರಂ ವೃಣೀಷ್ವಾಭಿಮತಂ ಕಾಮಪೂರೋಽಸ್ಮ್ಯಹಂ ನೃಣಾಮ್ ।
-ಭಾಗ. 7-9-52

* ವರಾನ್ ವೃಣೀಷ್ವ ರಾಜರ್ಷೇ ಸರ್ವಾನ್ ಕಾಮಾನ್ ದದಾಮಿ ತೇ ।
-ಭಾಗ. 10-51-44

4 ವಂದೇ ವಂದ್ಯಂ . ಆದ್ಯಾದಿವರದೇಶವರಪ್ರದಮ್ । -ದ್ವಾ. ಸ್ತೋ.

ನಾದವನೇ—ಎಂದೇ ಸಂಬೋಧಿಸಿ, ನೀನು 'ಸರ್ವವರದ'—ಎಲ್ಲರಿಗೂ, ಎಲ್ಲ ವರಗಳನ್ನೂ ನೀಡುವವನು ಆದುದರಿಂದ ವಿವೇಕಿಗಳೆಲ್ಲ ತಮ್ಮ ಶ್ರೇಯಸ್ಸಿಗಾಗಿ ನಿನ್ನ ಪಾದರೇಣುವನ್ನು ಉಪಾಸಿಸುವರು—ಎಂದು ನಿವೇದಿಸಿಕೊಳ್ಳಲಾಗಿದೆ[1] ವಸುದೇವ ದೇವಕಿಯರೆದುರು ಭಗವಂತನು ತನ್ನನ್ನು 'ವರದರಾಟ್' ಎಂದೇ ಪರಿಚಯಿಸಿಕೊಟ್ಟಿರುವನು[2] ಆದುದರಿಂದ ಮುಖ್ಯವಾಗಿ 'ವರದ' ಭಗವಂತನೇ

೨ (ಬ್ರಹ್ಮರುದ್ರಾದಿಗಳ) ವರಗಳನ್ನು ಖಂಡಿಸುವವನು[3]

ಭಗವಂತನು ತಾನು ಬ್ರಹ್ಮರುದ್ರಾದಿಗಳ ವರಶಾಪಗಳನ್ನೂ ಅತಿಕ್ರಮಿಸುವಷ್ಟು ಸಾಮರ್ಥ್ಯಶಾಲಿ—ಎಂಬುದನು ಸಾತ್ತ್ವಿಕರಿಗೆ ತೋರಿಸಿಕೊಡುವುದಕ್ಕಾಗಿ, ಐಹಿಕವಿಷಯಗಳಿಗೆ ಸಂಬಂಧಿಸಿ ಅಸುರರಿಗೆ ನೀಡಲಾದ ಚತುರ್ಮುಖನ ವರಗಳನ್ನು ಕೆಲವೊಮ್ಮೆ ಅತಿಕ್ರಮಿಸುವನು[4] ರುದ್ರಾದಿ ವಾಕ್ಯಗಳನ್ನು ಅಯೋಗ್ಯರ ವಿಷಯದಲ್ಲಿ ನಿಯತವಾಗಿ ಸುಳ್ಳಾಗಿಸಿದರೂ, ಯೋಗ್ಯರ ವಿಷಯದಲ್ಲಿ ಏಕದೇಶೇನ ಸತ್ಯವನ್ನಾಗಿಸುವುದೂ ಇದೆ[5] ತನ್ನ ಈ ನಿಯಮದ ಪಾಲನೆಗಾಗಿಯೂ ಅವನು ಭೂಮಿಯ ಮೇಲೆ ಅವತರಿಸುತ್ತಿರುವುದು[6]

---

1 ತ್ವಂ ಸರ್ವವರದಃ ಪುಂಸಾಂ ವರೇಣ್ಯ ವರದರ್ಷಭ ।
ಅತಸ್ತೇ ಶ್ರೇಯಸೇ ಧೀರಾಃ ಪಾದರೇಣುಮುಪಾಸತೇ ॥

-ಭಾಗ 8-17-36

2 ಪ್ರಾದುರಾಸಂ ವರದರಾಟ್ ಯುವಯೋಃ ಕಾಮದಿತ್ಸಯಾ ।

-ಭಾಗ 10-3-38

೨ 3 ಬ್ರಹ್ಮರುದ್ರಾದೀನಾಂ ವರಾನ್ ದ್ಯತಿ ಖಂಡಯತೀತಿ ವರದಃ । 'ದೋ ಅವಖಂಡನೇ' ।

4 'ಐಹಿಕಂ ತ್ವಸುರೇಷ್ವೇವ ಕ್ವಚಿದ್ಧಂತಿ ಜನಾರ್ದನಃ । ನಿಜಾಧಿಕ್ಯಸ್ಯ ವಿಜ್ಞಪ್ತ್ಯೈ . ..'

-ಮ. ಭಾರ. ತಾ. ನಿ. 9-37

5 ಅಯೋಗ್ಯೇಷು ತು ರುದ್ರಾದಿವಾಕ್ಯಂ ತೌ ಕುರುತೋ ವೃಥಾ ॥
ಏಕದೇಶೇನ ಸತ್ಯಂ ತು ಯೋಗ್ಯೇಷ್ವಪಿ ಕದಾಚನ ।

-ಮ. ಭಾರ. ತಾ. 9-38

6 ಏತದರ್ಥೋಽವತಾರಸ್ತು ವಿಷ್ಣೋರ್ಭವತಿ ಸರ್ವದಾ ।

-ಮ. ಭಾರ. ತಾ. ನಿ. 9-40

೩ (ಯೋಗ್ಯರಿಗೆ) ಶ್ರೇಷ್ಠವಾದ ಸುಖವನ್ನು ನೀಡುವವನು.[1]

೪ (ಅಯೋಗ್ಯರಿಗೆ) ಶ್ರೇಷ್ಠವಾದ ಸುಖ ದೊರಕದಂತೆ ಖಂಡಿಸುವವನು.[2]

ಭಗವಂತನು ಯೋಗ್ಯರಿಗೆ ಮುಕ್ತಿಯ ಶ್ರೇಷ್ಠಸುಖ ದೊರಕುವಂತೆಯೂ, ಅಯೋಗ್ಯರಿಗೆ ದೊರಕದಂತೆಯೂ ನೋಡಿಕೊಳ್ಳುವನು.

೫ ಬಲ ಮತ್ತು ಸುಖವನ್ನು ನೀಡುವವನು.[3]

೬ ಶ್ರೇಷ್ಠಗಳಾದ ಹಲ್ಲುಗಳುಳ್ಳವನು.[4]

೭ ಸುಖಸ್ವರೂಪಗಳಾದ ಹಲ್ಲುಗಳುಳ್ಳವನು.[5]

ಭಗವಂತನ ದಂತಗಳು ಅವನ ಸ್ವರೂಪಾತ್ಮಕಗಳಾಗಿದ್ದು, ಅವನಂತೆಯೇ ಸುಖಸ್ವರೂಪಗಳೆನಿಸಿವೆ.

೮ ಮೋಕ್ಷವನ್ನು ನೀಡುವವನು.[6]

---

೩ 1 ವಂ ವರಂ ಚ ತತ್ ರಂ ಸುಖಂ ವರಂ ಶ್ರೇಷ್ಠಸುಖಮ್ । ತತ್ ದದಾತೀತಿ ವರದಃ । 'ಭುವಃ' ಇತಿ ವ್ಯಾಹೃತೇಃ 'ಭೂತಿವರಃ' ಇತಿ ವ್ಯಾಖ್ಯಾತೃಭಿಃ ಶ್ರೀಮದಾಚಾರ್ಯೈಃ ವಕಾರಸ್ಯ ವರಾರ್ಥಕತ್ವಂ ಸೂಚಿತಮ್ ।

೪ 2 ವರಂ ಶ್ರೇಷ್ಠಸುಖಂ ಅಯೋಗ್ಯೈಃ ಲಬ್ಧಂ ಯಥಾ ನ ಸ್ಯಾತ್ತಥಾ ದ್ಯತಿ ಖಂಡಯತೀತಿ ವರದಃ ।

೫ 3 'ಸುಖಃ ಸುಬಲರೂಪತ್ವಾತ್.. ' (ತೈ. ಉ. ಭಾ. 1-13) ಇತ್ಯತ್ರ ವಕಾರಸ್ಯ ಬಲಾರ್ಥಕತ್ವಂ ಸೂಚಿತಮ್ । ಏವಂ ಚ ವಂ ಬಲಂ ರಂ ಸುಖಂ ಚ ದದಾತೀತಿ ವರದಃ ।

೬ 4 ವಾಃ ವರಾಃ ಶ್ರೇಷ್ಠಾಃ ರದಾಃ ದಂತಾಃ ಯಸ್ಯ ಸಃ ವರದಃ ।

೭ 5 ವಾಃ ಸುಖಾತ್ಮಕಾಃ ರದಾಃ ದಂತಾಃ ಯಸ್ಯ ಸಃ ವರದಃ । 'ಸ್ವಃ' ಇತಿ ವ್ಯಾಹೃತೇಃ 'ಅನಂತಸುಖಃ' ಇತಿ ವ್ಯಾಖ್ಯಾನೇನ ವಕಾರಸ್ಯ ಸುಖಾರ್ಥಕತ್ವಂ ಸೂಚಿತಮ್ ।

೮ 6 ವರದಃ ಮೋಕ್ಷದಃ । -ಸ. ಸಂ.

೯ ದೈತ್ಯರನ್ನು ಹಿಂಸಿಸುವ ಪಾತ್ರಗಳು ಉಳ್ಳವನು[1]

ಜಿಜ್ಞಾಸೆ

[ಪರಿವೇಷಕರಷ್ಟೇ]

ಪ್ರ – ಬ್ರಹ್ಮ ಮತ್ತು ವಿಷ್ಣು ಎಷ್ಟು ಭಕ್ತರಿಗೆ ವರವನ್ನು ಕೊಡುತ್ತಾರೋ ರುದ್ರದೇವರು ಅದಕ್ಕಿಂತಲೂ ಅಧಿಕ ಭಕ್ತರಿಗೆ ವರವನ್ನು ಕೊಡುತ್ತಾ ಇದ್ದಾರೆ. ಆಶುಪ್ರಸನ್ನರಾಗಿ ವರಗಳನ್ನು ಕೊಡುತ್ತಾರೆ ಆದುದರಿಂದ ಅವರ ಭಕ್ತರ ಸಂಖ್ಯೆಯು ಅಧಿಕವಾಗಿದೆ ಆದುದರಿಂದ ವರದ ಎಂಬ ಹೆಸರು ರುದ್ರದೇವರಲ್ಲಿ ಮುಖ್ಯವಾಗಬೇಕಲ್ಲವೆ? ಬಹು ಜನರಿಗೆ ಅನ್ನವನ್ನು ಕೊಡುವವನನ್ನೇ ಅನ್ನದಾನಶೂರ ಎಂದು ಕರೆಯುತ್ತಾರೆ ಕೆಲವೇ ಜನರಿಗೆ ಅನ್ನದಾನ ಮಾಡತಕ್ಕವರು ಬಹುಜನರು ಇದ್ದಾರೆ ಅವರಿಗೆ ಅನ್ನದಾನಶೂರ ಎಂದು ಹೆಸರು ಬರುವದಿಲ್ಲ ಆದರಂತೆ ಅಧಿಕ ಜನರಿಗೆ ವರಗಳನ್ನು ಕೊಡತಕ್ಕ ರುದ್ರದೇವರನ್ನು ಮಾತ್ರ ವರದ ಎಂದು ಕರೆಯಬೇಕಲ್ಲವೆ?

ಉ - ರುದ್ರದೇವರು ಸ್ವತಂತ್ರವಾಗಿ ಭಕ್ತರಿಗೆ ವರವನ್ನು ಕೊಡಲು ಸಮರ್ಥರು ಅಲ್ಲ ರುದ್ರದೇವರ ಅಂತರ್ಯಾಮಿಯಾದ ವಿಷ್ಣುವು ರುದ್ರದೇವರಿಗೆ ವರದಾನ ಶಕ್ತಿಯನ್ನು ಕೊಟ್ಟಾಗ ಮಾತ್ರ ಅವರು ವರಗಳನ್ನು ಕೊಡಬಲ್ಲರು ಒಂದು ದೊಡ್ಡ ಸಂತರ್ಪಣವು ನಡೆದಾಗ ನೂರಾರು ಜನರು ಪರಿವೇಷಕರುಗಳು ಇರುತ್ತಾರೆ ಅವರು ಅನ್ನವನ್ನು ಪರಿವೇಷಿಸಿದರೂ ಅವರನ್ನು ಅನ್ನದಾತಾ ಎಂದು ಕರೆಯುವದಿಲ್ಲ ಆ ಸಂತರ್ಪಣೆಯನ್ನು ಸ್ವತಂತ್ರವಾಗಿ ಯಾರು ನಡೆಸಿದರೋ ಅವರನ್ನೇ ಅನ್ನದಾತಾ ಎಂದು ಕರೆಯುವದು ಕಂಡಿದೆ. ಆದರಂತೆ ಸ್ವತಂತ್ರವಾಗಿ ವರಗಳನ್ನು ಕೊಡತಕ್ಕವನನ್ನೇ ವರದ ಎಂದು ಕರೆಯುವದು ಯುಕ್ತ



೩೩೨ ವಾಯುವಾಹನಃ

೧ ವಾಯುದೇವನೇ ವಾಹನವಾಗಿ ಉಳ್ಳವನು[2]

---

೯ 1 ಹಿಂಸಾರ್ಥಾದವತೇರಚಿ ಅವಾ ದೈತ್ಯಹಿಂಸಕಾ ರದಾ ಯಸ್ಯೇತಿ ಅವರದ ಇತ್ಯಪಿ ವದಂತಿ । —ಸ. ಸಂ.

* ಅಂತಿಮಾರ್ಥಃ 'ಅವರದಃ' ಇತಿ ಪದಚ್ಛೇದಮಂಗೀಕೃತ್ಯೋಕ್ತಃ ।

೧ 2 ವಾಯುಃ ಮುಖ್ಯಪ್ರಾಣಃ ವಾಹನಂ ಯಾನಂ ಯಸ್ಯ ಸಃ ವಾಯುವಾಹನಃ ।

ಯಾರು ಜೀವಾತ್ಮರ ದೇಹವನ್ನು ತ್ಯಜಿಸಲು ನಾನೂ ತ್ಯಜಿಸಲಿ? ಯಾರು ಜೀವಾತ್ಮರ ದೇಹದಲ್ಲಿ ಇರಲು ನಾನೂ ಇರಲಿ?—ಎಂದು ಚಿಂತಿಸಿದ ಭಗವಂತನು, ತನ್ನ ಆಗಮನ ಹಾಗೂ ನಿರ್ಗಮನಗಳಿಗೆ ಪ್ರಯೋಜಕನನ್ನಾಗಿ ಶ್ರೀ ಮುಖ್ಯಪ್ರಾಣನನ್ನು ಸೃಷ್ಟಿಸಿರುವನು[1] ಹೀಗೆ ಭಗವಂತನಿಗೆ ಜೀವಾತ್ಮರ ದೇಹವನ್ನು ಪ್ರವೇಶಿಸಲು ಮುಖ್ಯಪ್ರಾಣನೇ ಮಾರ್ಗದಂತೆ ಇರುವುದರಿಂದ, ಭಗವಂತನನ್ನು 'ಪರಿಸರ ಪದ್ಧತಿ'—ಎಂದೇ ಕರೆಯುವುದಿದೆ[2]

ಪ್ರಾಣದೇವನು ತನ್ನ ಒಂದು ಹೆಗಲ ಮೇಲೆ ಭಗವಂತನನ್ನೂ, ಮತ್ತೊಂದು ಹೆಗಲ ಮೇಲೆ ಜೀವಾತ್ಮನನ್ನೂ ಕುಳ್ಳಿರಿಸಿಕೊಂಡು ಜೀವಾತ್ಮರ ಶರೀರಗಳಲ್ಲಿ ಒಂದರಿಂದ ಮತ್ತೊಂದಕ್ಕೆ ಪ್ರವೇಶಿಸುತ್ತಿರುವನು ರಾಮಾವತಾರ ತಾಳಿದ್ದ ಭಗವಂತನನ್ನು ಹನುಮಂತನು ತನ್ನ ಒಂದು ಹೆಗಲ ಮೇಲೆ ಹೊತ್ತುಕೊಂಡು, ಮತ್ತೊಂದು ಹೆಗಲಲ್ಲಿ ಲಕ್ಷ್ಮಣನನ್ನು ಹೊತ್ತುಕೊಂಡು ಸುಗ್ರೀವನಲ್ಲಿಗೆ ಸಾಗುವಾಗ, ಮಂದಹಾಸ ಬೀರುವ ಶ್ರೀರಾಮಚಂದ್ರನು, ಈ ರೀತಿ ಹೊರುವುದು ತನ್ನ ಮೂಲರೂಪದಲ್ಲೂ ಇದೆ—ಎಂದು ಸೂಚಿಸಿರುವನು[3]

ಹೀಗೆ ಪರಮಾತ್ಮನು ಮುಖ್ಯಪ್ರಾಣನನ್ನು ಮಧ್ಯಮನನ್ನಾಗಿ ಮಾಡಿಕೊಂಡು ಜೀವಾತ್ಮರ ದೇಹದಿಂದ ದೇಹಕ್ಕೆ ಹೋಗುವ ಪ್ರಯುಕ್ತ 'ವಾಯುವಾಹನ' ಎಂದೆನಿಸಿರುವನು

---

* ಶರೀರಾದುತ್ಕ್ರಮಣಕಾಲೇ ವಾಯುರ್ವಾಹನಂ ಯಸ್ಯೇತಿ ।

-ಸ. ಸಂ

1 ಸ ಈಕ್ಷಾಂಚಕ್ರೇ । ಕಸ್ಮಿನ್ನ್ವಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ । ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ॥ ಸ ಪ್ರಾಣಮಸೃಜತ ।

-ಪ್ರ. ಉ. 6-1-5

2 'ಉದರಮುಪಾಸತೇ ಯರ್ಷಿವರ್ತ್ಮನಿ ಸೂಕ್ಷ್ಮದೃಶಃ ಪರಿಸರಪದ್ಧತಿಂ .'

-ಭಾಗ. 10-94-18

ಪರಿಸರಃ ಪ್ರಾಣಃ ಪದ್ಧತಿರ್ಮಾರ್ಗೋ ಯಸ್ಯ ಸ ಪರಿಸರಪದ್ಧತಿಃ ।

-ಭಾಗ. ತಾ. ನಿ.

* '.. .ತಸ್ಮಾದಾಹುಃ ಪ್ರಾಣಪದ್ಧತಿರಿತಿ'

-ಹಿರಣ್ಯನಾಭ ಶ್ರುತಿ (ಭಾಗ. ತಾ. ನಿ.)

3 ಕೃತ್ವಾ ಚ ಸಂವಿದಮನೇನ ಮತೋಽಸ್ಯ ಚಾಂಸಂ ಪ್ರೀತ್ಯಾರುರೋಹ ಸ ಹಸನ್ ಸಹ ಲಕ್ಷ್ಮಣೇನ । -ಮ. ಭಾರ. ತಾ. ನಿ. 6-1

೨ ಮುಖ್ಯಪ್ರಾಣನು ಜೀವಾತ್ಮನ ಶರೀರವನ್ನು ಹೊಂದುವಂತೆ ಮಾಡುವವನು.[1]

ಭಗವಂತನು ಮುಖ್ಯಪ್ರಾಣನನ್ನು ಅನುಸರಿಸಿ ಜೀವಾತ್ಮನ ಬೇರೆ ಬೇರೆ ಶರೀರವನ್ನು ಪ್ರವೇಶಿಸುವಂತೆ, ಶ್ರೀ ಮುಖ್ಯಪ್ರಾಣನು ಭಗವಂತನನ್ನು ಅನುಸರಿಸಿ—ಅವನ ಆದೇಶಾನುಸಾರವಾಗಿ ಬೇರೆ ಬೇರೆ ಶರೀರವನ್ನು ಪ್ರವೇಶಿಸುವನು ಆದ್ದರಿಂದಲೂ ಭಗವಂತನು 'ಪರಿಸರಪದ್ಧತಿ' ಎನಿಸಿರುವನು[2] ಜೀವಾತ್ಮನ ಶರೀರದಲ್ಲಿ ಪ್ರಾಣಾಪಾನರನ್ನು ನಿಯಮಿಸಿ ಜೀವನಪ್ರದ ಎನಿಸುವ ಭಗವಂತನೇ, ಕೊನೆಗೊಮ್ಮೆ ಶರೀರದಿಂದ ಪ್ರಾಣಾಪಾನರನ್ನು ಹೊರಗೆ ಕಳುಹಿಸಿ ಮೃತ್ಯುಪ್ರದನೂ ಆಗುವನೆಂದು ತಿಳಿಸುವ ಪ್ರಮಾಣದಿಂದ[3] ಪ್ರಾಣಾಪಾನಾದಿ ಪ್ರಭೇದಗಳನ್ನೊಳಗೊಂಡ ವಾಯುವಿನ ಆಗಮನ ನಿರ್ಗಮನಗಳು ಭಗವದಧೀನಗಳೆಂದು ಸೂಚಿತಗಳಾಗಿವೆ

೩ ಮುಖ್ಯಪ್ರಾಣನನ್ನು ಪ್ರೇರಿಸುವವನು[*]

ಮುಖ್ಯಪ್ರಾಣನು ಹನುಮಂತ, ಭೀಮಸೇನ, ಹಾಗೂ ಮಧ್ವಾಚಾರ್ಯ—ಹೀಗೆ ಮೂರು ಅವತಾರ ತಾಳಿ ನಡೆಸಿದ ಮಹಿಮೆಗಳನ್ನು ಉಲ್ಲೇಖಿಸಿ ಸ್ತುತಿಸುತ್ತಿರುವ ಬಳಿತ್ಥಾ ಸೂಕ್ತದಲ್ಲಿ—ಭಗವಂತನ ಪ್ರೇರಣೆಗನುಗುಣವಾಗಿ ವಾಯುದೇವನು ತನ್ನ ಅವತಾರಗಳಲ್ಲಿ ಬೇರೆ ಬೇರೆ ಮಹಿಮೆ

---

* ಹನುಮತ್ತ್ವನೇನ ತ್ವಂ ಮೂಲರೂಪೇऽಪಿ ಮಾಂ ಚ ಜೀವಂ ಚ ಸ್ಕಂಧೇ ಆರೋಪ್ಯ ಶರೀರಾಚ್ಛರೀರಾಂತರಂ ಗಚ್ಛಸಿ ಅತೋ ನೇದಮಪೂರ್ವಮಿತಿ ಸೂಚಯತಿ ।

-ಭಾ. ಪ್ರ

೨ 1 ವಾಯುಂ ಜೀವಾತ್ಮನಾಂ ಶರೀರಾಣಿ ಪ್ರತಿ ವಾಹಯತೀತಿ ವಾಯುವಾಹನಃ ।

2 ಅತಃ ಪರಿಸರಸ್ಯ ಪದ್ಧತಿರಿತಿ ವಾ । -ಭಾಗ. ತಾ. ನಿ.

ಪ್ರಾಣಃ ಸದಾ ಭಗವಂತಮನುಗಚ್ಛತೀತಿ ಪರಿಸರಸ್ಯ ವಾಯೋಃ ಪದ್ಧತಿರಿತಿ ವಾ ।

-ಬ ಗೋ (ಭಾಗ ತಾ ನಿ ಟಿ)

3 ಸ ಏವ ಜೀವನಕರೋ ಯದಾऽಪಾನೇನ ಸಂಯುತಃ । ಪ್ರಾಣಂ ನಿಯಮಯತ್ಯಸ್ಮಿನ್ ಶರೀರೇ ಪುರುಷೋತ್ತಮಃ । ಶರೀರಾದ್ ಬಹಿರೇತೌ ತು ಯದಾ ನಿಃಸಾರಯತ್ಯಜಃ । ತದಾ ಮೃತ್ಯುಪ್ರದಶ್ಚಾಯಂ . -ಐ. ಉ. ಭಾ. 1-6-3

೩ 4 ವಾಯುಂ ಮುಖ್ಯಪ್ರಾಣಂ ವಾಹಯತಿ ಪ್ರೇರಯತೀತಿ ವಾಯುವಾಹನಃ।

-ವಿ. ರಾ.

ಗಳನ್ನು ನಡೆಸಿರುವನೆಂದು ಸಂದೇಶಿಸಲಾಗಿದೆ[1] ಜಗತ್ತು ಸಂಪೂರ್ಣವಾಗಿ ವಾಯುದೇವನಲ್ಲಿ ಸಂಬದ್ಧವಾಗಿರುವುದರಿಂದ, ವಾಯುದೇವನು 'ಸೂತ್ರ' ಎನಿಸಿದರೆ, ಅಂತಹ ವಾಯುವಿಗೂ ಅಂತರ್ಯಾಮಿಯಾಗಿ ಪ್ರೇರಿಸುತ್ತಿರುವವನು ಭಗವಂತನೆಂದು ಬೃಹತ್ತರ್ಕ ಸ್ಪಷ್ಟೀಕರಿಸಿದೆ[2] ಅಮಿತ ಶಕ್ತಿಸಂಪನ್ನನಾದ ಕೇಶವನಿಂದ ಪ್ರೇರಿತನಾಗಿಯೇ ವಾಯುದೇವನು ನಿತ್ಯಸಂಚಾರಿ ಹಾಗೂ ಸರ್ವಪ್ರವೃತ್ತಿ ಉಳ್ಳವನೆಂದು ಪ್ರಮಾಣವೊಂದು ಬೋಧಿಸಿದೆ[3]

೪ (ದೇವಾದಿ ಸಾತ್ತ್ವಿಕರಲ್ಲಿ) ಮುಖ್ಯಪ್ರಾಣನ ಮೂಲಕ ಉಪದೇಶಿಸಲ್ಪಡುವವನು.[4]

ಶ್ರೀಮುಖ್ಯಪ್ರಾಣನ ತೃತೀಯಾವತಾರ ಶ್ರೀಮಧ್ವಾಚಾರ್ಯರು, ಕುವಾದಿಗಳಿಂದ ಅಡಗಿಸಲ್ಪಟ್ಟ ಶ್ರೀವಿಷ್ಣುಸರ್ವೋತ್ತಮತ್ವ ತತ್ತ್ವವನ್ನು ಚೆನ್ನಾಗಿ ಸಂಶೋಧಿಸಿದ ಪ್ರಯುಕ್ತ, ರುದ್ರನೇ ಮೊದಲಾದ ಜ್ಞಾನಿಗಳೂ ಗೂಢಗಳಾದ ಭಗವದ್ಗುಣಗಳನ್ನು ತಿಳಿಯುವಂತಾಯಿತೆಂದು ತಿಳಿಸುವ ಬಳಿತ್ಥಾ ಸೂಕ್ತದಿಂದ[5], ದೇವತೆಗಳು ಶ್ರೀಮುಖ್ಯಪ್ರಾಣನ ಮೂಲಕವೇ ಭಗವದ್‌ಜ್ಞಾನವನ್ನು ಪಡೆಯುವುದೆಂದು ಸೂಚಿತವಾಗುವುದು. ಹೀಗೆ ಪರೋಕ್ಷಜ್ಞಾನ ಮಾತ್ರವಲ್ಲ, ಭಗವಂತನ ಅಪರೋಕ್ಷ ಜ್ಞಾನಕ್ಕೂ

---

1 'ಪ್ರ ಯತ್ನಿತುಃ ಪರಮಾಂ ನೀಯತೇ ' -ಬ. ಸೂ.

* ಏತೇಷಾಂ ಪರಮೋ ವಿಷ್ಣುರ್ನೇತಾ ಸರ್ವೇಶ್ವರೇಶ್ವರಃ ।
-ಐ ಉ. ಭಾ. (ಅಂತೇ)

2 ಸ್ಯೂತಂ ಜಗದಿದಂ ಯಸ್ಮಿನ್ ಸೂತ್ರಂ ವಾಯುರಸೌ ಸ್ಮೃತಃ । ತಂ ಚಾಪಿ ಯಮಯೇದ್ ಯಸ್ಮಾದಂತರ್ಯಾಮೀ ಹರಿಃ ಸ್ಮೃತಃ ।
-ಬೃಹತರ್ಕ (ಬೃ ಉ. ಭಾ. 5-7-2)

3 ವಾಯುರ್ಹಿ ನಿತ್ಯಸಂಚಾರೀ ಸದಾ ಸರ್ವಪ್ರವೃತ್ತಿಮಾನ್ । ಚೋದಿತಃ ಕೇಶವೇನೈವ ತತ್ಸ್ಥೇನಾಮಿತಶಕ್ತಿನಾ । -ಐ. ಉ ಭಾ. 1-4-17

೪ 4 ವಾಯುರ್ಮುಖ್ಯಪ್ರಾಣೋ ವಾಹನಃ ಉಪದೇಶೇನ ದೇವಾದಿಷು ಪ್ರಾಪಕೋ ಯಸ್ಯ ಸಃ ವಾಯುವಾಹನಃ । -ವಿ. ರಾ.

5 'ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ ಈಶಾನಾಸಃ ಶವಸಾ ಕ್ರಂತ ಸೂರಯಃ । ಯದೀಮನು ಪ್ರದಿವೋ ಮಧ್ವ ಆಧವೇ ಗುಹಾಸಂತಂ ಮಾತರಿಶ್ವಾ ಮಥಾಯತಿ'
-ಬ. ಸೂ.

ವಾಯುದೇವನ ಪ್ರಸಾದ ಅತ್ಯಾವಶ್ಯಕ ಎಂದು ಆಥರ್ವಣೋಪನಿಷತ್ತು ಸಂದೇಶಿಸಿದೆ.[1] ಹೀಗೆ ಭಗವದ್ವಿಷಯಕವಾದ ಪರೋಕ್ಷ ಜ್ಞಾನವನ್ನೂ, ಅಪರೋಕ್ಷ ಜ್ಞಾನವನ್ನೂ ಅನುಗ್ರಹಿಸುವುದರ ಮೂಲಕ, ಭಗವಂತನನ್ನು ಸಾತ್ತ್ವಿಕರಡೆಗೆ ತಲುಪುವವನು ಶ್ರೀಮುಖ್ಯಪ್ರಾಣನು.

೫ ಶ್ವಾಸವಾಯುವನ್ನು ಧರಿಸಿಕೊಂಡಿರುವ ಜೀವಾತ್ಮರನ್ನು ಪ್ರೇರಿಸುವವನು.[2]

೬ ಸಂಸಾರದಲ್ಲಿ ಬಂಧಿಸುವವನು ಮತ್ತು ಮೋಕ್ಷವನ್ನು ಹೊಂದಿಸುವವನು[3]

೭ ಪ್ರಲಯಕಾಲದಲ್ಲಿ ಎಲ್ಲವೂ ಯಾರಲ್ಲಿ ಸೇರಿಕೊಂಡಿರುವುದೋ ಅಂತವನು ಹಾಗೂ ಮೋಕ್ಷಪ್ರಾಪಕ.[4]

---

* 'ಆ ಸಮಂತಾತ್ ಪತಿತ್ವೇ ತು ಗೂಢಂ ಕಲಿಯುಗೇ ಹರಿಮ್ । ಅಸತ್ಯಮಪ್ರತಿಷ್ಠಂ ಚ ಜಗದೇತದನೀಶ್ವರಮ್ । ವದದ್ಭಿರ್ಗೂಹಿತಂ ಸಂತಂ ತೃತೀಯೋऽಸುರ್ಮಥಾಯತಿ । ಯೇನ ವಿಷ್ಣೋರ್ಹಿ ಮರ್ಯಾಖ್ಯಾನ್ ಗುಣಾನಾಜ್ಞಾಪಿಪುಃ ಪರಾನ್। ಈಶಾನಾಸಃ ಸೂರಯುಶ್ಚ ನಿಗೂಢಾನ್ ನಿರ್ಗುಣೋಕ್ತಿಭಿಃ' –ಐ. ಉ. ಭಾ. (ಅಂತೇ)

1 'ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ ನಿಷ್ಕಳಂ ಧ್ಯಾಯಮಾನಃ'
–ಆ. ಉ. 3-1-8

* 'ನಾನ್ಯೈರ್ದೇವೈರ್ಹರಿಂ ಪಶ್ಯೇಜ್ಜ್ಞಾನರೂಪೇಣ ವಾಯುನಾ । ಬ್ರಹ್ಮಣಾ ಪರಮಜ್ಞಾನರೂಪೇಣ ಹರಿಣಾ ತಥಾ । ಪ್ರಸನ್ನೇನೈವ ತಂ ಪಶ್ಯೇತ್ '
–ಆ ಉ. ಭಾ.

೫ 2 ವಾಯುಂ ಶ್ವಾಸವಾಯುಂ ವಹಂತೀತಿ ವಾಯುವಾಹಾ ಜೀವಾಸ್ತಾನ್ ನಯತಿ ಪ್ರೇರಯತೀತಿ ವಾಯುವಾಹನಃ । –ವಾ. ರಾ.

೬ 3 ವಯತೇ ಸಂಸಾರೇ ಬಧ್ನಾತೀತಿ ವಾಯುಃ 'ವಯ ಬಂಧನೇ' । ವಾಹಯತಿ ಮೋಕ್ಷಂ ಪ್ರಾಪಯತೀತಿ ವಾಹನಃ ।

೭ 4 ವ್ಯೇತಿ ಸರ್ವಮಸ್ಮಿನ್ ಪ್ರಲಯೇ ಇತಿ ವಾಯುಃ। ಮೋಕ್ಷಂ ವಾಹಯತೀತಿ ವಾಹನಃ ।

ಲ (ಎಲ್ಲೆಡೆ) ಇರುವವನಾಗಿ, (ಸರ್ವರಿಗೂ) ಜೀವನಪ್ರದನು ಹಾಗೂ ಸರ್ವ ನಿರ್ವಾಹಕನು[1]

**[ಅರ್ಥವಿಶೇಷಗಳನ್ನು ೮೫೬ನೆಯ 'ವಾಯುವಾಹನಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]**

## ಜಿಜ್ಞಾಸೆ

[ಇತರ ಋಜುಗಳಿಗಿಂತ ವೈಶಿಷ್ಟ್ಯ]

ಪ್ರ - ಮೋಕ್ಷಕ್ಕೆ ವಾಯುದೇವರ ವಿಶೇಷಾನುಗ್ರಹವು ಬೇಕು ಎಂದು 'ಜ್ಞಾನಪ್ರಸಾದೇನ ವಿಶುದ್ಧ ಸತ್ತ್ವಃ' ಈ ಶ್ರುತಿಯು ಹೇಳುತ್ತದೆ. ಬ್ರಹ್ಮದೇವರು, ವಾಯುದೇವರು ಇಬ್ಬರು ಸಮಾನರು, ಬ್ರಹ್ಮದೇವರು ಪದಸ್ಥರಾದ್ದರಿಂದ ವಾಯುದೇವರಿಗಿಂತ ಒಂದು ದೃಷ್ಟಿಯಿಂದ ದೊಡ್ಡವರೂ ಹೌದು. ಇನ್ನು ಬರುವ ಕಲ್ಪದಲ್ಲಿ ವಾಯುದೇವರು ಬ್ರಹ್ಮಪದಸ್ಥರಾಗುತ್ತಾರೆ ಆಗ ಇದೇ ವಾಯುದೇವರ ವಿಶೇಷಾನುಗ್ರಹವನ್ನು ಪಡೆಯುವುದು ಇದ ಆದ್ದರಿಂದ ಈಗಲೂ ವಾಯು ದೇವರ ವಿಶೇಷಾನುಗ್ರಹವನ್ನು ಪಡೆಯುವುದು ಏಕೆ? ವಾಯುದೇವರಿಗೆ ಸಮಾನರಾದ ಇತರ ಋಜುಗಳ ವಿಶೇಷಾನುಗ್ರಹವು ಕೂಡಾ ಬೇಕೆಂದು ಶಾಸ್ತ್ರವು ಏಕೆ ಹೇಳುವುದಿಲ್ಲ?

ಉ - 'ವಿದ್ಯುತ್ಪತಿಃ ಮಾನವಃ ಸ ಏನಾನ್ ಬ್ರಹ್ಮ ಗಮಯತಿ' ಈ ಛಾಂದೋಗ್ಯ ಶ್ರುತಿಯು ಜ್ಞಾನಿಯನ್ನು ಪರಮಾತ್ಮನ ಹತ್ತಿರ ಕಳುಹಿಸುವ ಅಧಿಕಾರ ಉಳ್ಳವರು ವಾಯುದೇವರು ಎಂದು ಹೇಳುತ್ತದೆ. ಇತರ ಋಜುಗಳಿಗೆ ಆ ಅಧಿಕಾರವು ಇಲ್ಲ ಆದ್ದರಿಂದ ವಾಯುದೇವರ ವಿಶೇಷಾನುಗ್ರಹವು ಬೇಕು ಮೋಕ್ಷಕ್ಕಾಗಿ ಎಂದು ಶಾಸ್ತ್ರದ ಅಭಿಪ್ರಾಯ. ಮತ್ತು ಎಲ್ಲ ಋಜುಗಳಿಕ್ಕಿಂತಲೂ ವಾಯುದೇವರು ಭಗವಂತನ ವಿಶೇಷ ಸೇವೆಯನ್ನು ಮಾಡಿ ವಿಶೇಷಾನುಗ್ರಹ ಪಾತ್ರರಾಗಿದ್ದಾರೆ ಯಾರು ದೇವರ ವಿಶೇಷಾನುಗ್ರಹ ಪಾತ್ರರೋ ಅವರಲ್ಲಿ ನಾವು ವಿಶೇಷ ಭಕ್ತಿಯನ್ನು ಮಾಡಿದರೆ ಪರಮಾತ್ಮನ ಅತ್ಯರ್ಥಪ್ರಸಾದವು ಆಗುತ್ತದೆ ವಾಯುದೇವರಲ್ಲಿ ವಿಶೇಷ ಭಕ್ತಿ ಮಾಡಿದರೆ ವಾಯುದೇವರ ವಿಶೇಷಾನುಗ್ರಹವು ಆಗದೆ ಇರುವುದಿಲ್ಲ. ವಾಯುದೇವರಲ್ಲಿ ವಿಶೇಷ ಭಕ್ತಿಯನ್ನು ಮಾಡಬೇಕೆಂದರೂ ವಾಯುದೇವರ ವಿಶೇಷಾನುಗ್ರಹವು ಬೇಕೆಂದರೂ ಒಂದೇ ಅಭಿಪ್ರಾಯ.



---

ಲ 1 **ವಾನ್ ಸರ್ವತ್ರ ಗಚ್ಛನ್ ಸರ್ವಸ್ಯ ಆಯುಃ ಪ್ರದ ಇತಿ ವಾಯುಃ । ಸರ್ವನಿರ್ವಾಹಕತ್ವಾಚ್ಚ ವಾಹನಃ ।**

## ೩೩೩ ವಾಸುದೇವಃ

೧ ಎಲ್ಲವನ್ನೂ ತಿಳಿದಿರುವವನು, ಎಲ್ಲವನ್ನೂ ಉತ್ಪಾದಿಸಿರುವವನು ಹಾಗೂ ಕ್ರೀಡಿಸುವವನು.[1]

೨ ಎಲ್ಲೆಡೆ ವಾಸಿಸಿಕೊಂಡಿರುವವನು ಅಥವಾ ಎಲ್ಲದರ ವಾಸಕ್ಕೆ ಅಧಿಕರಣನಾಗಿರುವವನು ಹಾಗೂ ಪ್ರಕಾಶಿಸುವವನು[2]

೩ ಎಲ್ಲವನ್ನೂ ವ್ಯಾಪಿಸಿರುವವನು ಅಥವಾ ಎಲ್ಲವನ್ನೂ ಅವಿದ್ಯೆ ಮುಂತಾದವುಗಳಿಂದ ಆವರಿಸಿರುವವನು ಹಾಗೂ ಕ್ರೀಡಿಸುವವನು[3]

೪ ಬಲಸ್ವರೂಪಿ, ಪ್ರಾಣರೂಪಿ, ಹಾಗೂ ದಾನಮಾಡುವವನು, ಎಲ್ಲೆಡೆ ಇರುವವನು[4]

ಮೇಲೆ ತಿಳಿಸಿದ ಕಾರಣಗಳಿಗಾಗಿ ವೇದಗಳು ಭಗವಂತನನ್ನು ವಾಸುದೇವ ಎಂದು ಕರೆದಿವೆ

---

೧ 1 ವಾತಿ ಜಾನಾತೀತಿ ವಾಃ । ವಾತೇರ್ವಿಚ್ । ಸೂತೇ ಉತ್ಪಾದಯತೀತಿ ಸುಃ । ಸೂತೇರ್ಡುಃ । ದೀವ್ಯತಿ ಕ್ರೀಡತೇ ಇತಿ ದೇವಃ ದೀವ್ಯತೇರಚ್ । ವಾಶ್ಚಾಸೌ ಸುಶ್ಚಾಸೌ ದೇವಶ್ಚ ವಾಸುದೇವಃ । -ಕ ನಿ ಟೀಕಾಧಾರೇಣ ।

೨ 2 ಸರ್ವತ್ರ ವಸತೀತಿ ಸರ್ವಮತ್ರ ವಸತೀತಿ ವಾ ವಾಸುಃ । ವಸ ನಿವಾಸೇ ಇತ್ಯಸ್ಮಾದುಣ್ । ದೀವ್ಯತಿ ದ್ಯೋತತ ಇತಿ ದೇವಃ । ವಾಸುಶ್ಚಾಸೌ ದೇವಶ್ಚೇತಿ ವಾಸುದೇವಃ ।

-ಕ ನಿ ಟೀಕಾಧಾರೇಣ

೩ 3 ವಸ್ತೇ ಸರ್ವಂ ವ್ಯಾಪ್ನೋತೀತಿ, ಅವಿದ್ಯಾದಿನಾ ಸರ್ವಂ ಆವೃಣೋತೀತಿ ವಾ ವಾಸುಃ । 'ವಸ ಆಚ್ಛಾದನೇ' ಇತ್ಯಸ್ಮಾದುಣ್ । ದೀವ್ಯತಿ ಕ್ರೀಡತ ಇತಿ ದೇವಃ । ವಾಸುಶ್ಚಾಸೌ ದೇವಶ್ಚ ವಾಸುದೇವಃ । -ಕ ನಿ. ಟೀಕಾಧಾರೇಣ

೪ 4 ಬಲಾಢ್ಯಃ । ಅಸುತ್ವಾತ್ ಪ್ರಾಣರೂಪತ್ವಾದಸುಃ । ದಾತೃತಃ ದಾತೃತ್ವಾದ್ವಾ ದಾತೇರೇಕಾರಃ 'ಕೃನ್ಮೇಜಂತಃ' ಇತ್ಯವ್ಯಯಮ್ । ಸರ್ವತ್ರ ವರ್ತತ ಇತಿ ವಃ । 'ವೃತು ವರ್ತನೇ' ಅತೋ ಡಃ । ವಶ್ಚಾಸಾವಸುಶ್ಚಾಸೌ ದೇ ಚಾಸೌ ವಶ್ಚೇತಿ ವಾಸುದೇವಃ ।

-ಕ. ನಿ. ಟೀಕಾಧಾರೇಣ

ಎಂದು ಸೌಕರಾಯಣ ಶ್ರುತಿಯು ತಿಳಿಸಿದೆ.[1] ಸೂರ್ಯನು ತನ್ನ ಕಿರಣಗಳಿಂದ ವ್ಯಾಪಿಸಿರುವಂತೆ ನಾನೂ ಸಮಸ್ತವನ್ನೂ ವ್ಯಾಪಿಸಿರುವೆನು ಸರ್ವಭೂತಗಳೂ ನನ್ನಲ್ಲಿ ವಾಸಿಸಿವೆ ನಾನು ಎಲ್ಲರಲ್ಲೂ ವಾಸಿಸಿರುವೆನು—ಆದುದರಿಂದ ನಾನು ವಾಸುದೇವ ಎಂದೆನಿಸಿರುವೆನೆಂದು ಭಗವಂತನು ತಿಳಿಸಿರುವನು.[2] ಭಗವಂತನಲ್ಲಿ ಎಲ್ಲವೂ, ಎಲ್ಲ ಭೂತಗಳೂ ಇರುವುದರಿಂದ ಹಾಗೂ ಎಲ್ಲೆಡೆ,—ಎಲ್ಲ ಭೂತಗಳಲ್ಲಿ ಸರ್ವಸ್ವಾಮಿಯಾದ ಭಗವಂತನಿರುವುದರಿಂದ ಅವನು ವಾಸುದೇವ ಎಂದೆನಿಸುವನೆಂದು ವಿಷ್ಣು ಪುರಾಣವೂ ತಿಳಿಸಿದೆ.[3]

೫ ಎಲ್ಲೆಡೆ ಇರುವ ಪ್ರಯುಕ್ತ ವಾಸು ಎನಿಸುವ ತನ್ನಿಂದಲೇ ಕ್ರೀಡಿಸುವವನು.[4]

ಸ್ವರತನಾದ ಭಗವಂತನು ಲಕ್ಷ್ಮೀ ಮೊದಲಾದವರಲ್ಲೆಲ್ಲ ಇರುವ ತನ್ನರೂಪದಿಂದಲೇ ಕ್ರೀಡಿಸುವನು

೬ ವಸುಶ್ರೇಷ್ಠನಾದ ಅಗ್ನಿಯೇ ಪ್ರತೀಕವಾಗಿ ಉಳ್ಳವನು.[5]

---

1 ವಾನಾತ್ಸೂತೇರ್ದೇವನಾದ್ವಾಸುದೇವೋ ವಾಸಾದ್ ದ್ಯುತೇಶ್ಛಾದನಾತ್ಕ್ರೀಡಯಾ ವಾ । ಬಲಾದಸುತ್ವಾದ್ಧಾತೃತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ

ಸೌಕರಾಯಣ ಶ್ರುತಿ (ಕ ನಿ)

2 ಛಾದಯಾಮಿ ಜಗತ್ ಸರ್ವಂ ಭೂತ್ವಾ ಸೂರ್ಯ ಇವಾಂಶುಭಿಃ । ಸರ್ವಭೂತಾಧಿವಾಸಶ್ಚ ವಾಸುದೇವಸ್ತತೋ ಹ್ಯಹಮ್ । -ಮೋಕ್ಷಧರ್ಮ (ಗೀ. ಭಾ 10-37)

3 ಸರ್ವತ್ರಾಸೌ ಸಮಸ್ತಂ ಚ ವಸತ್ಯತ್ರೇತಿ ವೈ ಯತಃ । ತತಃ ಸ ವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ ॥ –ವಿ. ಪು. 1–2–12

* ಸರ್ವಾಣಿ ಚ ಭೂತಾನಿ ವಸಂತಿ ಪರಮಾತ್ಮನಿ । ಭೂತೇಷು ಚ ಸ ಸರ್ವಾತ್ಮಾ ವಾಸುದೇವಸ್ತತಃ ಸ್ಮೃತಃ । -ವಿ. ಪು. 6–5–80

೫ 4 ವಸತಿ ಸರ್ವತ್ರೇತಿ ವಾಸುಃ । 'ವಾಸುರ್ನಾರಾಯಣಪುನರ್ವಸುವಿಶ್ವರೂಪಾಃ' ಇತಿ ತ್ರಿಕಾಂಡಶೇಷಃ। ಏವಂ ಚ ವಾಸುನಾಮಕೇನ ಸ್ವೇನೈವ ದೀವ್ಯತಿ ಕ್ರೀಡತ ಇತಿ ವಾಸುದೇವಃ।

೬ 5 ವಸೂನಾಂ ದೇವಃ ಶ್ರೇಷ್ಠಃ ಅಗ್ನಿಃ ವಸುದೇವಃ । ತತ್ಪ್ರತೀಕತ್ವಾತ್ ಭಗವಾನ್ ವಾಸುದೇವಃ ।

೭ ಸಂಸಾರದಲ್ಲಿ ತನ್ನ ಸ್ವರೂಪವನ್ನು ಆಚ್ಛಾದಿಸಿಕೊಳ್ಳುವವನು ಹಾಗೂ ಮೋಕ್ಷದಲ್ಲಿ ತನ್ನ ಸ್ವರೂಪವನ್ನು ಬೆಳಗಿಸುವವನು[1]

೮ (ಯೋಗ್ಯರಲ್ಲಿ) ಜ್ಞಾನವನ್ನು ಸ್ಥಾಪಿಸುವವನು ಅಥವಾ (ಅಯೋಗ್ಯರಲ್ಲಿ) ಜ್ಞಾನವನ್ನು ಹೋಗಲಾಡಿಸುವವನು ಮತ್ತು ಕ್ರೀಡಿಸುವವನು.[2]

* * *

ಶ್ರೀಕೃಷ್ಣಾವತಾರವಲ್ಲದೆ, ವೇದಾನುಸಾರಿ ತಂತ್ರಸಾಂಖ್ಯವನ್ನು ರಚಿಸಿದ ಕಪಿಲನಾಮಕ ಭಗವಂತನೂ, ಧ್ರುವನಿಗೆ ಧ್ರುವಪದವಿ ಹಾಗೂ ಮುಕ್ತಿಯನ್ನು ಅನುಗ್ರಹಿಸಿದ ಭಗವಂತನೂ 'ವಾಸುದೇವ' ಎನಿಸಿರುವನು.[3]

## ಜಿಜ್ಞಾಸೆ

[ನೀರು ಮತ್ತು ಪ್ರಕಾಶಗಳಂತೆ]

ಪ್ರ – ವಾಸುದೇವನು ಸರ್ವತ್ರ ವ್ಯಾಪ್ತನು. ಜೀವನು ವಾಸುದೇವನು ಇರುವ ಸ್ಥಳದಲ್ಲಿ ಇರುತ್ತಾನೆ. ಎರಡು ದ್ರವ್ಯಗಳು ಒಂದೇ ಸ್ಥಳದಲ್ಲಿ ಇರುವದಿಲ್ಲ ಹೀಗೆ ಇರುವಾಗ ಜೀವ ಮತ್ತು ವಾಸುದೇವರಿಬ್ಬರು ಒಂದೇ ಕಡೆಯಲ್ಲಿ ಹೇಗೆ ಇರುತ್ತಾರೆ? ಅದ್ವೈತಮತದ ಪ್ರಕಾರ ಜೀವ ಬ್ರಹ್ಮರುಗಳು ಒಂದೇ ಆದುದರಿಂದ ಆ ಮತದಲ್ಲಿ ಈ ಅನುಪಪತ್ತಿಯು ಇಲ್ಲ ದ್ವೈತಿಗಳು ಈ ಅನುಪಪತ್ತಿಯನ್ನು ಹೇಗೆ ಪರಿಹರಿಸುತ್ತಾರೆ?

---

೭ 1 ವಾಸಯತಿ ಆತ್ಮಸ್ವರೂಪಂ ಸಂಸಾರ ಇತಿ ವಾಸುಃ । ದೇವಯತಿ ದ್ಯೋತಯತಿ ಮೋಕ್ಷೇ ಆತ್ಮಸ್ವರೂಪಮಿತಿ ದೇವಃ ।

೮ 2 ಯೋಗ್ಯೇಷು ಮಂ ಜ್ಞಾನಂ ಅಸ್ಯತಿ ಸ್ಥಾಪಯತೀತಿ ವಾ ಅಯೋಗ್ಯೇಷು ಮಂ ಜ್ಞಾನಂ ಅಸ್ಯತಿ ನಿರಸ್ಯತೀತಿ ವಾ ವಾಸುಃ । ದೀವ್ಯತಿ ಕ್ರೀಡತೇ ಇತಿ ದೇವಃ ।

3 ಕಪಿಲೋ ವಾಸುದೇವಾಖ್ಯಸ್ತಂತ್ರಸಾಂಖ್ಯಂ ಜಗಾದ ಹ ।

–ಪಾದ್ಮ (ಭಾಗ. ತಾ. ನಿ. 1-3-10)

'ಅವತಾರೋ ಮಹಾವಿಷ್ಣೋರ್ವಾಸುದೇವ ಇತೀರಿತಃ । ಯೋ ಧ್ರುವಾಯ ನಿಜಂ ಪ್ರಾದಾತ್ ಸ್ಥಾನಮನ್ಯಾನಧಿಷ್ಠಿತಮ್'

–ಪ್ರಕಾಶಸಂಹಿತಾ (ಭಾಗ ತಾ. ನಿ. 2-7-8)

ಉ - ನೀರಿನ ಒಳಗೆ ಸೂರ್ಯಪ್ರಕಾಶವು ಇರುತ್ತದೆ ನೀರು ಸೂರ್ಯಪ್ರಕಾಶಗಳೆಂಬ ಎರಡು ದ್ರವ್ಯಗಳು ಏಕತ್ರ ಇರುವಂತೆ ಜೀವ ಬ್ರಹ್ಮರು ಭಿನ್ನರಾದರೂ ಏಕತ್ರ ಇರಬಹುದು ಜೀವ ಮತ್ತು ಬ್ರಹ್ಮ ಒಂದೇ ಎಂದು ಹೇಳುವವರು, ಜೀವನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವಾಗ ಬ್ರಹ್ಮಸ್ವರೂಪದಲ್ಲಿ ತೂತುಗಳು ಬೀಳಬೇಕಾಗುತ್ತವೆಂದು ಬರುವ ಆಪತ್ತಿಗೆ ಏನು ಉತ್ತರ ಹೇಳುತ್ತಾರೆ? ಏನೂ ಉತ್ತರವನ್ನು ಕೊಡಲಾರರು. ಆದ್ದರಿಂದ ಅದ್ವೈತಮತದಲ್ಲಿ ಅನಂತ ದೋಷಗಳೇ ಇರುವದರಿಂದ ಅದ್ವೈತಮತವನ್ನು ಸ್ವೀಕರಿಸಿ ಉತ್ತರವನ್ನು ಹೇಳಬಾರದು



## ೩೩೪ ಬೃಹದ್ಭಾನುಃ

೧ ಮಹತ್ತ್ವಪೂರ್ಣವಾದ ತೇಜಸ್ಸು ಉಳ್ಳವನು.[1]

೨ ಮಹತ್ತ್ವಪೂರ್ಣವಾದ ಜ್ಞಾನ ಉಳ್ಳವನು.[2]

ಋಗ್ವೇದದಲ್ಲಿ ಇಂದ್ರನಾಮಕ ಭಗವಂತನನ್ನು 'ಚಿತ್ರಭಾನೋ'—ಎಂದು ಸಂಬೋಧಿಸುತ್ತ, ಅವನ ಜ್ಞಾನದಲ್ಲಿರುವ ಹಾಗೂ ತೇಜಸ್ಸಿನಲ್ಲಿರುವ ಮಹತ್ತ್ವವನ್ನು 'ಚಿತ್ರ' ಎಂಬ ವಿಶೇಷಣದಿಂದ ಸೂಚಿಸಲಾಗಿದೆ.[3] ಭಗವಂತನ ಜ್ಞಾನ ಹಾಗೂ ತೇಜಸ್ಸು ಅದ್ಭುತವಾದದ್ದು ಅವನ ಜ್ಞಾನ ಮತ್ತು ತೇಜಸ್ಸು, ಅವನಿಗಿಂತ ಅತ್ಯಂತಾಭಿನ್ನವಾಗಿದ್ದು ಅವನಂತೆಯೇ ಸರ್ವಜೀವಾತ್ಮರಲ್ಲಿ ನಿಯಾಮಕವಾಗಿ ರತವಾಗಿರುವುದು. ಜಡವಲ್ಲದ ಸುಖರೂಪದಲ್ಲಿರುವಂತಹದ್ದು, ಜ್ಞಾನ ಮತ್ತು ಸುಖರೂಪವಾದದ್ದು ದರ್ಶನೀಯವಾದದ್ದು ಅದವಾ ಪೂಜನೀಯವಾದದ್ದು ಚೈತನ್ಯಸ್ವರೂಪವನ್ನೇ ಅನುಭವಿಸುವಂತಹದ್ದು. ಇವಿಷ್ಟು ಭಗವಂತನ ಜ್ಞಾನ ಮತ್ತು ತೇಜಸ್ಸಿನಲ್ಲಿರುವ ಮಹತ್ತ್ವವನ್ನು 'ಚಿತ್ರ' ಎಂಬ ವಿಶೇಷಣದಿಂದ ಸೂಚಿಸಲಾಗಿದೆ—ಎಂದು ಶ್ರೀಮದಾಚಾರ್ಯರು ಸ್ಪಷ್ಟೀಕರಿಸಿರುವರು.[4]

---

೧ 1 ಬೃಹಂತಃ ಮಹಾಂತಿ ಭಾನವಃ ತೇಜಾಂಸಿ ಯಸ್ಯ ಸಃ ಬೃಹದ್ಭಾನುಃ ।

* ಬೃಹದ್ಭಾನುಃ ಮಹಾಕಾಂತಿಮಾನ್ । —ವಾ. ರಾ.

೨ 2 ಬೃಹಂತಃ ಮಹಾಂತಃ ಭಾನವಃ ರಶ್ಮಯಃ ಜ್ಞಾನಮಿತಿ ಯಾವತ್, ಯಸ್ಯ ಸಃ ಬೃಹದ್ಭಾನುಃ ।

3 'ಇಂದ್ರಾಯಾಹಿ ಚಿತ್ರಭಾನೋ......' —ಋ. ವೇ. 3-4

4 ಚಿತ್ರಂ ಭದ್ರಂ ರತಂ ಚಿತೌ ಚಿದ್ರತೇಶ್ಚಾಯನೀಯತ್ವಾದನನಾದ್ ವಾ ಚಿತೋಽಭಿದಾ । ತಾದೃಶಾ ರಶ್ಮಯೋ ಜ್ಞಾನಮಸ್ಯೇತಿ ಭಗವಾನ್ ಹರಃ ॥ ಚಿತ್ರಭಾನುರಿತಿ ಪ್ರೋಕ್ತಸ್ತೇಜೋ ವಾ ತಾದೃಶಂ ಪ್ರಭೋಃ । —ಋ. ಭಾ.

ಭಗವಂತನ ತೇಜಸ್ಸು ಎಲ್ಲೆಡೆ ವ್ಯಾಪಿಸಿರುವುದಾದರೂ ಜ್ಞಾನಿಗಳಲ್ಲದವರಿಗೆ ಅದು ಕಾಣಿಸುವುದಿಲ್ಲ. ಆದುದರಿಂದಲೇ—ಭಗವಂತನೆಂಬ ಸೂರ್ಯನು ಎಲ್ಲಿರುವನು? ಅವನ ಕಿರಣಗಳು ಯಾವ ಅಂತರಿಕ್ಷದಲ್ಲಿ ವ್ಯಾಪಿಸಿವೆ? ಅದನ್ನು ಯಾರು ತಾನೇ ಕಂಡಿರುವರು?—ಎಂಬುದಾಗಿ ಜ್ಞಾನಿಗಳಲ್ಲದವರಿಗೆ ಭಗವಂತನ ತೇಜಸ್ಸು ಕಾಣಿಸುವುದಿಲ್ಲ—ಎಂದು ಋಷಿಗಳು ಅಭಿಪ್ರಾಯಪಟ್ಟಿರುವುದನ್ನು ಋಗ್ವೇದವು ಉಲ್ಲೇಖಿಸುತ್ತ,[1] ತೇಜಸ್ಸಿನಲ್ಲಿರುವ ಆ ಪ್ರಯುಕ್ತವಾದ ಮಹತ್ತ್ವವನ್ನು ಸೂಚಿಸಿರುವುದು

ಹೀಗೆ ಭಗವಂತನ ತೇಜಸ್ಸಲ್ಲಿ ಅನೇಕ ವಿಧದ ಮಹತ್ತ್ವವಿರುವುದರಿಂದಲೇ ಋಗ್ವೇದದಲ್ಲಿ ಅಗ್ನಿನಾಮಕ ಭಗವಂತನನ್ನು 'ಬೃಹದ್ಭಾನು' ಎಂದೇ ಉಲ್ಲೇಖಿಸಲಾಗಿದೆ.[2]

---

ಚಿತ್ರಂ ಭದ್ರಮಿತ್ಯೇಕೋಽರ್ಥಃ, ಚಿತ್ರಮಾಲೇಖ್ಯಮದ್ಭುತಮಿತ್ಯಭಿಧಾನಾತ್ । ಚಿತೌ ಸರ್ವಜೀವಚೈತನ್ಯೇ ನಿಯಾಮಕತಯಾ ರತಮಿತ್ಯಪರಃ । ಚಿಚ್ಛಬ್ದೋಪಪದಾದ್ರಮತೇರ್ಡಃ । ಚಿದ್ರತೇಃ ಅಜಡಸುಖಾತ್ಮಕತ್ವಾದಿತ್ಯನ್ಯಃ । ಚಿಚ್ಚ ಸಾ ರತಿಶ್ಚೇತಿ ಚಿತ್ರಂ ಪದಸಂಜ್ಞಾನಾಶ್ರಯಣಾತ್ ಜಸ್ತ್ವಾಭಾವಃ । ಚಾಯನೀಯತ್ವಾತ್ ದರ್ಶನೀಯತ್ವಾತ್ ಪೂಜನೀಯತ್ವಾದ್ವೇತ್ಯರ್ಥಾಂತರಮ್ । ಚಾಯೃ ಪೂಜಾನಿಶಾಮನಯೋರಿತ್ಯಸ್ಮಾತ್ ಕರ್ಮಣೀತ್ರಪ್ರತ್ಯಯೋ ಡಿಚ್ಚ । ಚಿತಶ್ಚೈತನ್ಯಸ್ವರೂಪಸ್ಯ ಮಾದನಾದನುಭವಾದ್ವಾ ಚಿತ್ರಂ ರಾತೇರದನಾರ್ಥತ್ವಮನೇಕಾರ್ಥತ್ವಾದ್ಧಾತೂನಾಮ್ । ಭಾನುಶಬ್ದಾರ್ಥಂ ರಶ್ಮಯ ಇತ್ಯನೂದ್ಯ ಜ್ಞಾನಮಿತಿ ವ್ಯಾಖ್ಯಾತಮ್ । ನನು ಚಿತ್ರಾ ರತತ್ವಾದೀನಾಂ ಭಗವದ್ಧರ್ಮಾಣಾಂ ಕಥಂ ಜ್ಞಾನತೇಜೋಧರ್ಮತ್ವಮಿತ್ಯತ ಉಕ್ತಂ ಅಭಿದೇತಿ । ಜ್ಞಾನತೇಜಸೋಃ ಪರಮೇಶ್ವರೇಣಾಭಿದಾಕಾರಣೇನ ಉಕ್ತಂ ಯುಕ್ತಮಿತ್ಯರ್ಥಃ ।

1 ಕ್ವೇದಾನೀಂ ಸೂರ್ಯಃ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾತತಾನ ।
-ಋ. ವೇ. 35-7

'ಪಶ್ಯನ್ ರವೇ ರಶ್ಮಿಗಣಾನಪೀಹ ಸರ್ವವ್ಯಾಪ್ತಾನಪಿ ವಿಷ್ಣೋರ್ನ ರಶ್ಮೀನ್ । ಲೋಕಃ ಪಶ್ಯೇದಿತಿ ಕುತ್ರಾಽತತಾನೇತ್ಯಾಕ್ಷಿಪ್ಯತೇ ವ್ಯಕ್ತಿಮಪೇಕ್ಷ್ಯ ರಶ್ಮೇಃ' -ಋ. ವೇ. ಭಾ.

2 ಉಕ್ಥೈರಗ್ನಿರ್ಬೃಹದ್ಭಾನುಃ । -ಋ. ವೇ. 27-12

ಅಸ್ಮದೀಯಾನಿ ಚೋಕ್ಥಾನಿ ಬೃಹತ್ತೇಜಾಃ ಶೃಣೋತ್ವಥ ।
-ಋ ವೇ. 36-14

* ಪಾಹಿ ನೋ ಅಗ್ನೇ. ....ಬೃಹದ್ಭಾನೋ ಯವಿಷ್ಠ್ಯ
-ಋ. ವೇ. 36-15

೩ (ಮುಕ್ತಾತ್ಮರಿಗೆ) ಮಹತ್ತಾದ ತೇಜಸ್ಸನ್ನು ಅನುಗ್ರಹಿಸುವವನು[1]

ಸಂಸಾರದಲ್ಲಿ ಅಲ್ಪತೇಜಸ್ವಿಯಾಗಿರುವ ಜೀವಾತ್ಮರ ಸ್ವರೂಪವನ್ನು ಮುಕ್ತಿಯಲ್ಲಿ ಮಹಾತೇಜಸ್ವಿಯನ್ನಾಗಿ ಭಗವಂತನು ಮಾರ್ಪಡಿಸುವನು[2]

೪ ತೇಜಸ್ಸಿಂದ ಸಮೃದ್ಧನಾಗಿರುವವನು. ಮತ್ತು (ಸೂರ್ಯಾದಿ ಪ್ರಕಾಶಕ ಪದಾರ್ಥಗಳಿಗೆ) ಕಿರಣಗಳನ್ನು ಪ್ರೇರಿಸುವವನು.[3]

ಭಗವಂತನು ಸಮೃದ್ಧ ತೇಜಸ್ಸುಳ್ಳ ಪ್ರಯುಕ್ತ 'ಬೃಹತ್' ಎನಿಸಿ ಸೂರ್ಯನಲ್ಲಿ ಇರುವನು[4] ಉಳಿದೆಲ್ಲ ಪ್ರಕಾಶಕ ಪದಾರ್ಥಗಳಿಗೂ ಪ್ರಕಾಶವನ್ನೂ ಪ್ರೇರಿಸುವವನು ಭಗವಂತನೇ

೫ ಗುಣಪೂರ್ಣನಾಗಿರುವವನು ಮತ್ತು (ಸ್ವತಂತ್ರವಾಗಿ) ಪ್ರಕಾಶಿಸುವವನು[5]

ಗುಣಪೂರ್ಣನಾಗಿರುವ ಪ್ರಯುಕ್ತ ಭಗವಂತನು 'ಬೃಹತ್' ಎಂದು ಕಾಠಕೋಪನಿಷತ್ತಿನಲ್ಲಿ

---

* ಭಗವತಃ ತೇಜಸಃ ಮಹತ್ತ್ವಮಧಿಕೃತ್ಯ ಅಧಿಕಃ ವಿಚಾರಃ 'ಮಹಾದ್ಯುತಿಃ' (೧೪೦) ಇತಿ ನಾಮ್ನಃ ವ್ಯಾಖ್ಯಾನೇ, ಜ್ಞಾನಸ್ಯ ಮಹತ್ತ್ವಮಧಿಕೃತ್ಯ ಚ ಅಧಿಕಃ ವಿಚಾರಃ ಮಹಾಬುದ್ಧಿಃ (೧೭೭) ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೩ 1 ಮುಕ್ತಾತ್ಮನಾಂ ಬೃಹತ್ ಮಹತ್ ಭಾನುಃ ತೇಜಃ ಯಸ್ಮಾತ್ ಸಃ ಬೃಹದ್ಭಾನುಃ ।

2 'ಅಲ್ಪತೇಜಸ್ತ್ವೇವಾಲ್ಪಂ ಜೀವರೂಪಂ ಹಿ ಸಂಸೃತೌ । ತಥೈವ ಸುಮಹತ್ತೇಜಃ ಕರೋತಿ ಭಗವಾನ್ ಮಹತ್' -ಬೃ. ಉ ಭಾ. (6-4 4)

೪ 3 ತೇಜಸಾ ಬೃಂಹಣಾತ್ ಬೃಹತ್ । ಭಾಃ ಸೂರ್ಯಾದಿ ಕಿರಣಾನ್ ನುದತಿ ಪ್ರೇರಯತೀತಿ ಭಾನುಃ ಬೃಹಚ್ಚಾಸೌ ಭಾನುಶ್ಚ ಬೃಹದ್ಭಾನುಃ ।

4 'ಆಶ್ರಿತಾಃ ಸೂರ್ಯಗಂ ವಿಷ್ಣುಂ ವೃಷಯೋ ಬೃಹದಿತ್ಯಸೌ । ತೇಜಸಾ ಬೃಂಹಣಾದುಕ್ತಃ ' -ಐ. ಉ. ಭಾ. 1-1-4

೫ 5 ಗುಣಸಮೃದ್ಧತ್ವಾತ್ ಬೃಹತ್ । ಭಾತಿ ಸ್ವತಃ ಪ್ರಕಾಶತ ಇತಿ ಭಾನುಃ । ಬೃಹಚ್ಚಾಸೌ ಭಾನುಶ್ಚ ಬೃಹದ್ಭಾನುಃ ।

ಉಲ್ಲೇಖಿಸಲ್ಪಟ್ಟಿರುವವನು[1] ಹಾಗೆಯೇ ಭಗವಂತನೇ ಸ್ವತಂತ್ರವಾಗಿ ಪ್ರಕಾಶಿಸುತ್ತಿದ್ದು, ಉಳಿದ ಪ್ರಕಾಶಕ ಪದಾರ್ಥಗಳೆಲ್ಲ ಅವನಿಗೆ ಅಧೀನವಾಗಿಯಷ್ಟೇ ಪ್ರಕಾಶಿಸುವವು—ಎಂದೂ ಕಾಠಕೋಪನಿಷತ್ತಲ್ಲಿ ಸಂದೇಶಿಸಲಾಗಿದೆ[2]

೬ ಗುಣಪೂರ್ಣನಾಗಿರುವವನು ಪ್ರಕಾಶಸ್ವರೂಪಿ ಹಾಗೂ (ಸಕಲವೇದಗಳಿಂದಲೂ) ಸ್ತುತಿಸಲ್ಪಡುವವನು[3]

೭ ಸಮೃದ್ಧವಾದ ಪ್ರಕಾಶ ಉಳ್ಳವನು. ಮತ್ತು ಎಲ್ಲರಿಂದಲೂ ಚೆನ್ನಾಗಿ ಸ್ತುತಿಸಲ್ಪಡುವವನು[4]

೮ ಸಮೃದ್ಧವಾದ ತೇಜಸ್ಸುಳ್ಳವನೆಂದು ಶಾಸ್ತ್ರದಲ್ಲಿ ಚೆನ್ನಾಗಿ ಸ್ತುತಿಸಲ್ಪಡುವವನು.[5]

## ಜಿಜ್ಞಾಸೆ

[ಕಾಲವ್ಯತ್ಯಾಸ ಗೊತ್ತಾಗದಿರದು]

ಪ್ರ– ಜ್ಞಾನಿಗಳಿಗೆ ಪರಮಾತ್ಮನೆಂಬ ಮಹಾ ತೇಜಸ್ಸು ಕಾಣಿಸುತ್ತದೆ. ಅವರಿಗೆ ರಾತ್ರಿಯಲ್ಲಿ ದೇವರು ಕಾಣಿಸುತ್ತಾ ಇದ್ದರೆ ಅವರಿಗೆ ರಾತ್ರಿಯಾದದ್ದು ಗೊತ್ತಾಗುವದಿಲ್ಲ. ಸೂರ್ಯನು

---

1 ....ಅದ್ರಿಜಾ ಋತಂ ಬೃಹತ್ । –ಕಾ. ಉ. 2–2–2

* ಬೃಹತ್ ಪೂರ್ಣಗುಣತ್ವಾಚ್ಚ ಸ ಏವ ಪುರುಷೋತ್ತಮಃ ।
–ಮಹಾಕೌರ್ಮ (ಕಾ. ಉ. ಭಾ )

2 'ತಮೇವ ಭಾಂತಮನು ಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ'
–ಕಾ. ಉ. 2–3–3

೬ 3 ಗುಣಪೂರ್ಣತ್ವಾತ್ ಬೃಹತ್ । ಪ್ರಕಾಶರೂಪತ್ವಾತ್ ಭಾ । ನೂಯತೇ ಸರ್ವೈಃ ವೇದೈಃ ಸ್ತೂಯತ ಇತಿ ನುಃ । ಬೃಹಚ್ಚಾಸೌ ಭಾ ಚಾಸೌ ನುಶ್ಚ ಬೃಹದ್ಭಾನುಃ ।

೭ 4 ಬೃಹತೀ ಭಾಃ ಯಸ್ಯ ಸಃ ಬೃಹದ್ಭಃ । ಆ ನೂಯತೇ ಸರ್ವೈಃ ಸಮ್ಯಕ್ ಸ್ತೂಯತ ಇತಿ ಆನುಃ । ಬೃಹದ್ಭಶ್ಚಾಸೌ ಆನುಶ್ಚ ಬೃಹದ್ಭಾನುಃ ।

೮ 5 ಬೃಹದ್ಭ ಇತಿ ಶಾಸ್ತ್ರೇ ಆ ನೂಯತೇ ಸಮ್ಯಕ್ ಸ್ತೂಯತ ಇತಿ ಬೃಹದ್ಭಾನುಃ ।

ಅಸ್ತಮಯವಾದದ್ದು ನೋಡಿ ಅವರು ಇದು ರಾತ್ರಿ ಎಂದೂ ತಿಳಿಯುತ್ತಾರೆಂಬುದೂ ಸರಿಯಲ್ಲ ಪರಮಾತ್ಮನು ಜ್ಞಾನಿಗಳಿಗೆ ಕಾಣಿಸುವಾಗ ಪರಮಾತ್ಮನ ಕಣ್ಣನ್ನು ಆಶ್ರಯಿಸಿ ಇರುವ ಸೂರ್ಯನೂ ಆಗ ಕಾಣಿಸುತ್ತಾನೆ ಸೂರ್ಯಾಸ್ತಮಯವು ಅವರಿಗೆ ಗೊತ್ತಾಗುವದಿಲ್ಲ ಹೀಗಾಗಿ ಜ್ಞಾನಿಗಳಿಗೆ ರಾತ್ರಿ ಹಗಲು ಎಂಬ ಕಾಲಭೇದವು ಗೊತ್ತಾಗದೆ ಇರುವದರಿಂದ ಹಗಲು ಮಾಡುವ ಶ್ರಾದ್ಧವನ್ನು ರಾತ್ರಿಯಲ್ಲಿ ಮಾಡುವದು, ಸಾಯಂ ಸಂಧ್ಯಾವಂದನೆಯನ್ನು ಹಗಲಿಗೆ ಮಾಡುವದು, ಈ ರೀತಿಯಾಗಿ ಅವರಿಗೆ ಕರ್ಮದ ವ್ಯತ್ಯಾಸದಿಂದ ಕರ್ಮದ ಫಲದಲ್ಲಿ ವ್ಯತ್ಯಾಸವಾಗಲಿಕ್ಕಿಲ್ಲವೇ?

ಉ – ಜ್ಞಾನಿಗಳು ಅವ್ಯಕ್ತನಾದ ಪರಮಾತ್ಮನನ್ನು ನೋಡುವ ಶಕ್ತಿಯುಳ್ಳವರು ಅಂತಹವರಿಗೆ ರಾತ್ರಿ ಕಾಲ ಯಾವುದು ಎಂದು ತಿಳಿಯುವ ಶಕ್ತಿಯೂ ಭಗವದನುಗ್ರಹದಿಂದ ಇದ್ದೇ ಇರುತ್ತದೆ ಆದ್ದರಿಂದ ಅವರು ಮಾಡುವ ಕರ್ಮಗಳಲ್ಲಿ ಏನೂ ವ್ಯತ್ಯಾಸವು ಬರುವದಿಲ್ಲ



## ೩೩೫ ಆದಿದೇವಃ

೧ ಎಲ್ಲದ್ದಕ್ಕೂ ಕಾರಣನಾಗಿರುವವನು ಮತ್ತು ಪ್ರಕಾಶಿಸುವವನು, ಅಥವಾ ಉತ್ಕೃಷ್ಟನಾಗಿರುವವನು, ಅಥವಾ (ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡಲು) ಇಚ್ಛಿಸುವವನು, ಅಥವಾ (ಎಲ್ಲರಿಂದಲೂ) ಸ್ತುತ್ಯನಾಗಿರುವವನು, ಅಥವಾ (ಜಗತ್ಸೃಷ್ಟ್ಯಾದಿ ವಿಷಯಕ) ವ್ಯವಹಾರವುಳ್ಳವನು ಅಥವಾ ಎಲ್ಲೆಡೆ ಇರುವವನು,ಅಥವಾ ಕ್ರೀಡಿಸುತ್ತಿರುವವನು[1]

ಅಧಿಕಾರಿಯು ಭ್ರಾಂತಿರಹಿತನಾಗಿ ಸರ್ವಪಾಪಗಳಿಂದಲೂ ಬಿಡುಗಡೆ ಹೊಂದಬೇಕಾದರೆ ತಿಳಿಯಲೇ ಬೇಕಾದ ತತ್ತ್ವಗಳಲ್ಲಿ—'ಭಗವಂತನು ಎಲ್ಲದ್ದಕ್ಕೂ ಕಾರಣನಾಗಿರುವನು'—ಎಂಬುದೂ ಒಂದಾಗಿದೆ—ಎಂದು ಗೀತಾಚಾರ್ಯನು ಅಭಿಪ್ರಾಯಪಟ್ಟಿರುವನು[2] ದೇವಶಬ್ದಕ್ಕೆ ಮುಖ್ಯವಾಗಿ

---

೧ 1 ಸರ್ವಕಾರಣತ್ವಾತ್ ಆದಿಃ । ಅಸಾಧಾರಣ್ಯೇನ ವ್ಯಪದೇಶಃ । ದೀವ್ಯತಿ ದ್ಯೋತತೇ, ವಾ ವಿಜಯತೇ ಇಚ್ಛತಿ ಸ್ತೂಯತೇ ವಾ ವ್ಯವಹರತಿ ಗಚ್ಛತಿ ಕ್ರೀಡತೇವಾ ದೇವಃ । ಆದಿಶ್ಚಾಸೌ ದೇವಶ್ಚ ಆದಿದೇವಃ ।

2 'ಯೋ ಮಾಮಜಮನಾದಿಂ ಚ ವೇತ್ತಿ...... ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ' -ಗೀ. 10-3

ಅನಶ್ಚೇಷ್ಟಯಿತಾ ಆದಿಶ್ಚ ಸರ್ವಸ್ಯೇತ್ಯನಾದಿಃ । -ಗೀ. ಭಾ.

ಏಳು ಅರ್ಥಗಳು ಸಂಭವಿಸುತ್ತಿದ್ದು, ಆ ಏಳೂ ಅರ್ಥಗಳನ್ನಿಟ್ಟುಕೊಂಡು ಅಗ್ನಿನಾಮಕ ಜಗವಂತನನ್ನು 'ದೇವ' ಎಂದು ಋಗ್ವೇದದಲ್ಲಿ ವಿಶೇಷಿಸಲಾಗಿದೆ[1]

ಅರ್ಜುನನು ವಿಶ್ವರೂಪವುಳ್ಳ ಶ್ರೀಕೃಷ್ಣನನ್ನು ಸಂಬೋಧಿಸಿ ನೀನೇ 'ಆದಿದೇವ' ಆಗಿರುವಿ ಎಂಬುದಾಗಿ ಸ್ತುತಿಸಿರುವನು[2]

೧ ಮೊದಲ ದೇವನು.[3]

೨ ಮೊದಲಿಗ ಎಂದು (ಚತುರ್ಮುಖನಿಂದ) ಸ್ತುತಿಸಲ್ಪಡುವವನು.[4]

೪ (ಜೀವಾತ್ಮರಲ್ಲೆಲ್ಲ) ಮೊದಲಿಗ ಎನಿಸಿದ ಚತುರ್ಮುಖನಿಂದ ಸ್ತುತಿಸಲ್ಪಡುವವನು[5]

---

1 ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಂ.

-ಋ ವೇ. 1-1

ದ್ಯೋತನಾದ್ ವಿಜಯೇಚ್ಛಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ । ಗತ್ಯಾ ರತ್ಯಾ ಚ ದೇವಾಖ್ಯಂ . ' -ಋ. ಭಾ.

ಕ್ರೀಡಾದ್ಯರ್ಥಕಾದ್ದೀವ್ಯತೇಃ ಕರ್ತರಿ . ಅಚ್‌ಪ್ರತ್ಯಯೇ...... 'ದೇವಮ್' ಇತಿ ನಿಷ್ಪತ್ತೇಃ ಕ್ರೀಡಾದಿಕರ್ತಾರಮಿತ್ಯರ್ಥಃ, ತಥಾ ಸ್ತುತ್ಯರ್ಥಾದ್ದೀವ್ಯತೇಃ ಕರ್ಮಣಿ .. ಘಞ್ ಪ್ರತ್ಯಯೇ ಗುಣೇ ಚ 'ದೇವಮ್' ಇತಿ ರೂಪಸಿದ್ಧೇಃ ಸ್ತುತ್ಯಮಿತ್ಯರ್ಥಃ ।

-ಮಂ. ಮಂ.

2 ತ್ವಮಾದಿದೇವಃ ಅನಂತರೂಪಃ ಗೀ. 11-38

೧ 3 ಆದಿಃ ಆದ್ಯಃ ಸ ಚಾಸೌ ದೇವಶ್ಚ ಆದಿದೇವಃ । 'ಪುಂಸ್ಯಾದಿಃ ಪೂರ್ವಪೌರಸ್ತ್ಯಪ್ರಥಮಾದ್ಯಾಃ -ಅ. ಕೋ.

೨ 4 ಆದಿಃ ಆದ್ಯಃ ಇತಿ ದೀವ್ಯತ ಸ್ತೂಯತ ಇತಿ ಆದಿದೇವಃ ।

೪ 5 ಆದಿಃ ಪ್ರಜಾಸು ಆದ್ಯಃ ಚತುರ್ಮುಖಃ । ಇಂದಿರಾಪತಿಮಾದ್ಯಾದಿವರದೇಶವರಪ್ರದಮಿತ್ಯತ್ರ ಚತುರ್ಮುಖಃ ಆದ್ಯತಯಾ ಉಲ್ಲಖಿತಃ | ತೇನ ದೀವ್ಯತ ಇತಿ ಆದಿದೇವಃ ।

ಚತುರ್ಮುಖನು ವಿಶ್ವದ ಸ್ಥಿತ್ಯಾದಿಗಳಿಗೆ ಕಾರಣನಾದ ಭಗವಂತನು 'ಆದ್ಯ' ಎನಿಸಿರುವನೆಂದು ಸ್ತುತಿಸಿರುವನು[1]

೫ ಸೃಷ್ಟಿಯ ಮೊದಲು—ಪ್ರಲಯಕಾಲದಲ್ಲಿ–ಕ್ರೀಡಿಸುವವನು.[2]

ಭಗವಂತನು ಪ್ರಲಯಕಾಲದಲ್ಲೂ ಲಕ್ಷ್ಮೀದೇವಿಯ ಆಲಿಂಗನಕ್ಕೊಳಗಾಗಿ ಇರುವನು[3] ಈ ಅಭಿಪ್ರಾಯದಲ್ಲೇ ಶ್ರೀಮದಾಚಾರ್ಯರು ಭಗವಂತನನ್ನು 'ಆದಿದೇವ' ಎಂದು ಸ್ತುತಿಸಿರುವರು[4]

೬ ಸೃಷ್ಟಿಯ ಮೊದಲು ಶ್ರುತ್ಯಭಿಮಾನಿ ದೇವತೆಯಿಂದ ಸ್ತುತಿಸಲ್ಪಡುವವನು[5]

ಬ್ರಹ್ಮಾಲಯದಲ್ಲಿ ಲಕ್ಷ್ಮೀದೇವಿಯು ತನ್ನ ಶ್ರೀ ಭೂ ಹಾಗೂ ದುರ್ಗಾರೂಪಗಳಿಂದ ಶ್ರೀವಿಷ್ಣುವಿನ ಜೊತೆಗೆ ಪವಡಿಸಿದ್ದರೆ, ವೇದಾಭಿಮಾನಿನಿಯಾಗಿ ಅನಂತರೂಪಗಳನ್ನು ಧರಿಸಿಕೊಂಡು ನಾರಾಯಣ

---

1 'ವಿಶ್ವಸ್ಯ ಯಃ ಸ್ಥಿತಿಲಯೋದ್ಭವಹೇತುರಾದ್ಯಃ . . '

-ಭಾಗ 3-16-37

೫ 2 ಆದೌ ಸೃಷ್ಟೇಃ ಪೂರ್ವಕಾಲೇ ಪ್ರಲಯಕಾಲ ಇತ್ಯರ್ಥಃ ದೀವ್ಯತಿ ಲಕ್ಷ್ಮ್ಯಾ ಸಹ ಕ್ರೀಡತ ಇತಿ ಆದಿದೇವಃ ।

ಆದೌ ದಿವ್ಯತೀತಿ ಆದಿದೇವಃ । -ವಿ. ರಾ.

3 'ಆಸೀದುದಾರಗುಣವಾರಿಧಿರಪ್ರಮೇಯೋ. ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಜಾಗ್ರೇ' -ಮ. ಭಾರ ತಾ ನಿ 1-2

4 ಆದಿದೇವಾಯ . . ನಮೋ ವರವರಾಯ ತೇ ।

–ದ್ವಾ. ಸ್ತೋ.

ಆದೌ ಸೃಷ್ಟೇಃ ಪೂರ್ವಕಾಲೇ ಪ್ರಲಯಕಾಲ ಇತ್ಯರ್ಥಃ ದೇವಾಯ ಕ್ರೀಡಾಂ ಕುರ್ವತೇ 'ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಜಾಗ್ರೇ' ಇತಿ ವಚನಾತ್ ।

-ವಿ. ಹ. ಟೀ.

೬ 5 ಆದೌ ಸೃಷ್ಟೇಃ ಪೂರ್ವಕಾಲೇ ದೀವ್ಯತೇ ಸ್ತೂಯತ ಇತಿ ಆದಿದೇವಃ ।

ನನ್ನು ಸ್ತುತಿಸುವಳು—ಎಂದು ಜ್ಯೋತಿಃಸಂಹಿತೆ ತಿಳಿಸಿದೆ[1]

[ಅರ್ಥವಿಶೇಷಗಳನ್ನು ೪೯೦ನೆಯ 'ಆದಿದೇವ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

## ಜಿಜ್ಞಾಸೆ

### [ಧನ್ವಂತರಿ ಭಗವದವತಾರ]

ಪ್ರ - ವೈದ್ಯಶಾಸ್ತ್ರದಲ್ಲಿ 'ಅಹಂ ಹಿ ಧನ್ವಂತರಿರಾದಿದೇವಃ ಜರಾರುಜಾಮೃತ್ಯುಹರೋಽಮರಾಣಾಂ ಎಂದು ಧನ್ವಂತರಿಯು ತನ್ನನ್ನು ಆದಿದೇವ ಎಂದು ಹೇಳಿದ್ದಾನೆ. ಈ ಧನ್ವಂತರಿ ಪರಮಾತ್ಮನ ಅವತಾರ ಕಾರ್ಯವು ಜ್ಞಾನಕಾರ್ಯ ಮತ್ತು ಬಲಕಾರ್ಯ ಎಂದು ಎರಡು ಪ್ರಕಾರದ್ದು ಆರೋಗ್ಯಕಾರ್ಯವು ಅವತಾರಕಾರ್ಯವೆಂದು ಶಾಸ್ತ್ರದಲ್ಲಿ ಹೇಳಲಿಲ್ಲ ಆದುದ ರಿಂದ ಆರೋಗ್ಯಕಾರ್ಯವುಳ್ಳ ಧನ್ವಂತರಿಯು ಪರಮಾತ್ಮನ ಅವತಾರವಾಗಲಿಕ್ಕಿಲ್ಲ ಇವನಿಗೆ ಆದಿದೇವ ಎಂಬ ಹೆಸರು ಹೇಗೆ?

ಉ - ಶ್ರೀ ಭಾಗವತ ಧನ್ವಂತರಿಯು ಭಗವದವತಾರವೆಂದು ಸ್ಪಷ್ಟವಾಗಿ ಹೇಳುತ್ತದೆ. ತಾನ ಭವರೋಗವೈದ್ಯನೆಂದು ಭಕ್ತರಿಗೆ ತಿಳಿಸುವದಕ್ಕಾಗಿ ಆಯುರ್ವೇದಪ್ರವರ್ತಕನಾದನು ಶ್ರೀಹರಿ ಭಕ್ತರಿಗೆ ತಾನು ಭವರೋಗವೈದ್ಯನೆಂಬ ಜ್ಞಾನಕಾರ್ಯಕ್ಕಾಗಿ ಅವನ ಅವತಾರ. ಭಗವದವತಾರವಾದ್ದರಿಂದಲೇ ವೈದ್ಯಶಾಸ್ತ್ರದಲ್ಲಿ ಅವನನ್ನು ಅಮರಾಣಾಂ ಜರಾರುಜಾಮೃತ್ಯು-ಹರಃ ಎಂದು ಹೇಳಿರುತ್ತದೆ ದೇವತೆಗಳ ಜರಾರುಜಾಮೃತ್ಯುಪರಿಹಾರಕತ್ವವು ಭಗವಂತನಿ' ಗಲ್ಲದೆ ಇತರರಿಗೆ ಸಾಧ್ಯವಿಲ್ಲ



## ೩೩೬. ಪುರಂದರಃ

೧ (ಜೀವಾತ್ಮರ) ಸಂಸಾರ ರೂಪಗಳಾದ ಪುರಗಳನ್ನು ಸೀಳುವವನು.[2]

---

1 ಶ್ರೀರ್ಭೂರ್ಮಿರಿತಿ ರೂಪಾಭ್ಯಾಂ ಪ್ರಕೃತಿರ್ವಿಷ್ಣುನಾ ಸಹ । ಶೇತೇ ಶ್ರುತಿಸ್ವರೂಪೇಣ ಸ್ತೌತಿ ಬ್ರಹ್ಮಲಯೇ ಹರಿಮ್ । ಏಕಾಽಪ್ಯನಂತರೂಪಾ ಸಾ ವಾಕ್ಯಭೇದಾತ್ ಸರಸ್ವತೀ । ಅನಾದಿನಿಧನಾ ನಿತ್ಯಾ ಸ್ತೌತಿ ನಾರಾಯಣಂ ಪ್ರಭುಮ್'
-ಜ್ಯೋತಿಃ ಸಂಹಿತಾ (10-94-12)

* ಸರಸ್ವತೀ ವೇಧಾಭಿಮಾನಿನೀ ಪ್ರಕೃತಿಃ ।

೧ 2 ಪುರಃ ಸಂಸಾರರೂಪಾಃ ಪುರಃ ದಾರಯತೀತಿ ಪುರಂದರಃ ।
-ನಾ. ಭಾ. (33-13) ಆಧಾರೇಣ

ಜೀವಾತ್ಮರು ಸಂಸಾರ ಬಂಧನದಲ್ಲಿ ಸಿಲುಕಿ ಹಾಕಿಕೊಳ್ಳಲು ಅಹಂಕಾರಾತ್ಮಕವಾದ ಅಂತಃಕರಣವು ಕಾರಣವೆನಿಸಿದೆ[1] ಅಂತಃಕರಣದಲ್ಲೂ ರಜೋಭಾಗ ಹಾಗೂ ತಮೋಭಾಗ ಮಮಕಾರ ಮತ್ತು ಅಹಂಕಾರಗಳಿಗೆ ಕಾರಣವಾಗಿ ಸಂಸಾರಕ್ಕೆ ಕಾರಣವೆನಿಸಿದೆ[2] ಅಂತಃಕರಣದ ಸತ್ತ್ವಭಾಗವು ವಸುದೇವ ಎನಿಸಿದ್ದು ಅದು ಭಗವಂತನ ಜ್ಞಾನಕ್ಕೆ ಅನುಕೂಲವೇ ಆಗಿದೆ[3] ಭಗವಂತನ ದರ್ಶನವಾಗುತ್ತಲೇ ಜೀವಾತ್ಮನ ಅಹಂಕಾರಾತ್ಮಕವಾದ ಅಂತಃಕರಣವು ಸೀಳಿಕೊಳ್ಳುವುದು ಅದರಲ್ಲಿ ಸಂಸಾರಕ್ಕೆ ಕಾರಣಗಳಾದ ರಜೋಭಾಗ ಮತ್ತು ತಮೋಭಾಗಗಳು ಬೇರ್ಪಟ್ಟು ಸತ್ತ್ವಭಾಗ ಮಾತ್ರ ಉಳಿದುಕೊಳ್ಳುವುದು[4]. ಅನಭಿಮತ ಕರ್ಮಗಳೆಲ್ಲವೂ ನಶಿಸುವವು

ಹೀಗೆ ಭಗವಂತನು ಸಂಸಾರಕ್ಕೆ ಕಾರಣವಾದ ಅಂತಃಕರಣವನ್ನು ಬೇರ್ಪಡಿಸುವ ಮೂಲಕ ಸಂಸಾರವನ್ನು ನಾಶಪಡಿಸುವುದಲ್ಲದೆ, ಮುಂದೆ ವಿರಜಾ ನದಿಯಲ್ಲಿ ಸ್ನಾನ ಮಾಡಿದಾಗ—ಪಂಚ ಪ್ರಾಣ, ಪಂಚ ಜ್ಞಾನೇಂದ್ರಿಯ ಮತ್ತು ಪಂಚಕರ್ಮೇಂದ್ರಿಯ ಹಾಗೂ ಮನಸ್ಸು—ಹೀಗೆ ಒಟ್ಟು

---

1 ಅಹಂಕಾರಾತ್ತು ಸಂಸಾರೋ ಭವೇಜ್ಜೀವಸ್ಯ ನ ಸ್ವತಃ । ಕುತಶ್ಚಿದಾನಂದತನೋಃ ಸ್ವರೂಪೇಚ್ಛಾಭಯುತಸ್ಯ ಸಃ -ತಂತ್ರ ಭಾಗವತ (ಭಾಗ ತಾ. ನಿ 11-28-15)

ಜೀವಸ್ಯ ಸುಖರೂಪಸ್ಯ ನ ದುಃಖಂ ಕ್ವಚಿದಿಷ್ಯತೇ । ಅತೋ ಮನೋಽಭಿಮಾನೇನ ದುಃಖೀ ಭವತಿ ನಾನ್ಯಥಾ । -ಭಾರತ (ಭಾಗ. ತಾ. ನಿ. 11-23-53)

2 ...ದ್ವಯಮೇವ ಮಮಾಹಂ ವಾ ಸಂಸೃತಿಸ್ತ್ವಹಮೇವ ವಾ -ಭಾಗ. ತಾ. ನಿ. 5-11-10

3 'ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ ಯದೀಯತೇ ತತ್ರ ಪುಮಾನಪಾವೃತ ' -ಭಾಗ 4-3-23

ವಿಶುದ್ಧಂ ಸತ್ತ್ವಮಂತಃಕರಣಂ ವಸುದೇವಶಬ್ದಿತಮ್ । . ತತ್ರ ವಿಶುದ್ಧೇಽಂತಃಕರಣೇ ಭಗವಾನಪಗತಾವರಣಃ ಪ್ರತೀಯತೇ . '

4 ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ಮಯಿ ದೃಷ್ಟೇಽಖಿಲಾತ್ಮನಿ ॥
-ಭಾಗ. 11-20-31

ಹೃದಯಗ್ರಂಥಿರಂತಃಕರಣಾಖ್ಯೋ ಬಂಧಃ ।
-ಭಾಗ. ತಾ. ನಿ.

ಹದಿನಾರು ಪದಾರ್ಥಗಳನ್ನೊಳಗೊಂಡ ಜೀವಾತ್ಮನ ಲಿಂಗದೇಹವನ್ನು[1] ಭಂಗಪಡಿಸುವನೂ ಕೂಡಾ.

ಹೀಗೆ ಭಗವಂತನು ಸಂಸಾರರೂಪಗಳಾದ ಪುರಗಳನ್ನು ನಾಶಪಡಿಸುವವನಾದುದರಿಂದಲೇ, ಋಗ್ವೇದದಲ್ಲಿ ಇಂದ್ರನಾಮಕ ಭಗವಂತನಿಗೆ 'ಪುರಾಂ ಭಿಂದುಃ'—ಎಂಬ ವಿಶೇಷಣವನ್ನು ನೀಡಲಾಗಿದೆ[2] ಅಲ್ಲದೆ ಋಗ್ವೇದದಲ್ಲೇ ಮತ್ತೊಂದೆಡೆ, ಇಂದ್ರನಾಮಕ ಭಗವಂತನು ಮುಖ್ಯಪ್ರಾಣನ ಉಪದೇಶದಿಂದ ಜೀವಾತ್ಮರ ಸಂಸಾರಕ್ಕೆ ಕಾರಣವಾದ ಲಿಂಗಶರೀರಗಳನ್ನು ಬೇರ್ಪಡಿಸುವನು—ಎಂದು ಸಂದೇಶಿಸಲಾಗಿದೆ[3] ಜೀವಾತ್ಮನ ಲಿಂಗ ಶರೀರವನ್ನು ನಾಶಪಡಿಸುವುದರಿಂದಲೇ ಭಗವಂತನನ್ನು 'ಪುರಂದರ' ಎಂದು ಶ್ರೀಮದಾಚಾರ್ಯರು ಸ್ತುತಿಸಿರುವರು[4]

---

* ಹೃದಯಸ್ಯ ಗ್ರಂಥಿಃ ಅಂತಃಕರಣಾವಿದ್ಯಯೋಃ ಬಂಧಃ । ರಜಸ್ತಮೋಭಾಗಾವಿತ್ಯರ್ಥಃ । ಧ್ಯಾನೋತ್ಕರ್ಷೇಣ ಅಖಿಲಾತ್ಮನಿ ಚೇತನದೇಹಾದ್ಯಂತರ್ಯಾಮಿಣಿ ಮಯಿ ದೃಷ್ಟೇ ಸತ್ಯೇವ । ಕ್ಷೀಯಂತೇ ಸರ್ವಾಣ್ಯನಭಿಮತಕರ್ಮಾಣಿ ಅಶ್ಲೇಷಾದಿಲಕ್ಷಣಂ ಕ್ಷಯಂ ಯಾಂತೀತ್ಯರ್ಥಃ —ಯಾದವೇಂದ್ರ ತೀರ್ಥಾಃ

1 ಪ್ರಾಣೇಂದ್ರಿಯಾಂತಃಕರಣಭೇದೇನ ತ್ರಿವಿಧಂ ಮತಮ್ । ಪಂಚ ಪಂಚೈವ ತೇ ಸರ್ವೇ ಪ್ರಾಣಾ ಬುದ್ಧೀಂದ್ರಿಯಾಣಿ ಚ । ಕರ್ಮೇಂದ್ರಿಯಾಣಿ ಚ ತಥಾ ತಸ್ಮಾತ್ ಪಂಚವಿಧಂ ಸ್ಮೃತಮ್ । ಲಿಂಗಂ ಷೋಡಶಕಂ ಪ್ರಾಹುರ್ಮನಸಾ ಸಹ ತತ್ ಪುನಃ'
-ಬ್ರಾಹ್ಮ (ಭಾಗ. ತಾ ನಿ. 4-28-76)

2 ಪುರಾಂ ಭಿಂದುರ್ಯುವಾ ಕವಿಃ ' ಋ. ವೇ. 11-4

3 ಅಭಿಸಿಧ್ಮಃ ವಿತಿಗ್ಮೇನ ವೃಷಭೇಣಾ ಪುರೋಽಭೇತ್ ।
ಋ. ವೇ 33-13

ಪುರಶ್ಚ । ಸಂಸಾರರೂಪಾ ಅಭಿನದ್ ವೃಷೇಣ ಪ್ರಾಣೇನ ತಿಗ್ಮೇನ ವಿರೋಧಿನಃ ಪುತಿ।
—ಋ ವೇ. ಭಾ.

* ವೃಷಭೇಣ ವೃಷೇಣ ಜೀವಶ್ರೇಷ್ಠೇನ ಪ್ರಾಣೇನ ಪ್ರಾಣಿನಾಂ ಸಂಸಾರರೂಪಾಃ ಪುರೋ ವ್ಯಭೇತ್ ಅಭಿನತ್ । ಸಂಸಾರರೂಪಂ ಲಿಂಗಂ ಹಿ ಪ್ರಾಣಿನಾಂ ಪುರಮಿವ । ತಚ್ಚ ಪ್ರಾಣೋಪದೇಶಾದಿದ್ವಾರೇಣೇಶ್ವರೋ ಭಿನತ್ತಿ।
-ಋ. ಭಾ. ಟೀ

4 ಗೋವಿಂದ ಗೋವಿಂದ ಪುರಂದರ ವಂದೇ . ದ್ವಾ. ಸ್ತೋ.
ಪುರಂ ಸ್ವಾಚ್ಛಾದಕಲಿಂಗದೇಹಾಖ್ಯಪುರಂ ದಾರಯತಿ ನಾಶಯತೀತಿ ಪುರಂದರಃ.. ।
-ವಿ ಪ. ಟೀ.

೨ (ಇಂದ್ರನಲ್ಲಿದ್ದವನಾಗಿ) ಶಂಬರಾಸುರನ ಪುರಗಳನ್ನು ನಾಶಪಡಿಸಿರುವವನು.[1]

ಶಚೀಪತಿಯು 'ಪುರಂದರ' ಎನಿಸಿಲು ಮುಖ್ಯ ಕಾರಣ, ಶತ್ರುಗಳ ಪುರಗಳನ್ನು ನಾಶಪಡಿಸಿದುದು ವಿಶೇಷವಾಗಿ ಅವನು ಶಂಬರಾಸುರನ ಪುರಗಳನ್ನು ನಾಶಪಡಿಸಿದುದನ್ನು ಋಗ್ವೇದವು ಅಲ್ಲಲ್ಲಿ ಉಲ್ಲೇಖಿಸುವುದು[2] ಆದರೆ ಮುಂದೆ ವಾಮದೇವ ಕಂಡ ಸೂಕ್ತದಲ್ಲಿ—ಶಚೀಪತಿಯಲ್ಲಿ ಅಂತರ್ಯಾಮಿಯಾಗಿದ್ದು ಅಹಂ ಎನಿಸುವ ಭಗವಂತನೇ ಶಂಬರಾಸುರನ ಪುರಗಳನ್ನು ನಾಶಪಡಿಸಿದುದು ಎಂದು ಸಂದೇಶಿಸಲಾಗಿದೆ[3] ಆದುದರಿಂದ ಆವನೇ ಮುಖ್ಯವಾಗಿ ಪುರಂದರ

೩ (ರುದ್ರನ ಮೂಲಕ) ಮಯನಿರ್ಮಿತ ತ್ರಿಪುರಗಳನು ನಾಶಪಡಿಸಿರುವವನು.[4]

---

1 ಪುರಃ ಶಂಬರಪುರಃ ದಾರಯತೀತಿ ಪುರಂದರಃ ।

2 ಪುರಾಂ ಭಿಂದುರ್ಯುವಾ ಕವಿಃ ಇದ್ರಃ ' ಋ ಸಂ. 11-4

'ಪುರಃ ಶಂಬರಸ್ಯ ಪುರಾಣಾಂ ಬಿಂದುಃ ಭೇತ್ತಾ '
ಮಂ ಮಂ

* ' ವಿ ತಿಗ್ಮೇನ ವೃಷಭೇಣಾ ಪುರೋ ಅಭೇತ್ । ಸಂ ವಜ್ರೇಣ '
-ಋ. ವೇ. 33-13

ವೃಷಭೇಣ ವರ್ಷಣಸ್ಯಾಂಗೇನ ತಿಗ್ಮೇನ ತೀಕ್ಷ್ಣೇನ (ವಜ್ರೇಣ) ಶಂಬರಸ್ಯ ಪುರಃ (ವಿ ಅಭೇತ್) ಅಭಿನತ್ । -ಮಂ.ಮಂ.

3 'ಅಹಂ ಪುರೋ ಮಂದಸಾನೋ ವ್ಯೈರಂ ನವ ಸಾಕಂ ನವತೀಃ ಶಂಬರಸ್ಯ'
-ಋ. ವೇ. 4-26-3

* ಅಹೇಯಂ ಚ ಗುಹ್ಯೈಃ ಪೂರ್ಣಂ ನಿತ್ಯಾಸ್ತಿ ಜ್ಞಾನಗೋಚರಮ್ । ಬ್ರಹ್ಮ ಪಶ್ಯನ್ ವಾಮದೇವಃ ಸೂಕ್ತಮೇತದ್ ದದರ್ಶ ಹ । ಅಹಂ ಮನುಃ ಸೂರ್ಯ ಇತಿ ಸ್ವಾಂತರ್ಯಾಮಿವ್ಯಪೇಕ್ಷಯಾ । ಅಹಂಶಬ್ದೋ ಯತೋ ವಿಷ್ಣೌ ತತಶ್ಶ್ರೋತ್ರಮುಪೂರುಷಾಃ, ವರ್ತಂತೇಽಭವಮಿತ್ಯಾದ್ಯಾಃ ಸರ್ವಾಂತಸ್ಥೇ ಜನಾರ್ದನೇ । .. ಸ ಏವ ಶಂಬರಪುರೋ ಬಿಭೇದೇಂದ್ರೇ ವ್ಯವಸ್ಥಿತಃ । ಸರ್ವಾಂತರ್ಯಾಮಕತ್ವಾತ್ತು ಸರ್ವಕರ್ಮಾ ಸ ಏವ ಹಿ ।
-ಭವಿಷ್ಯತ್ಪರ್ವ (ಬೃ ಉ. ಭಾ 3-5-4)

೩ 4 ಪುರಃ ಮಯನಿರ್ಮಿತಾಃ ತ್ರಿಪುರಃ ರುದ್ರದ್ವಾರಾ ದಾರಯತೀತಿ ಪುರಂದರಃ ।

ಮಯನು ತಾರಕಾಸುರನ ಮೂವರು ಮಕ್ಕಳಿಗಾಗಿ ರಚಿಸಿದ್ದ ಚಿನ್ನದ, ಬೆಳ್ಳಿಯ ಹಾಗೂ ಕಬ್ಬಿಣದ ತ್ರಿಪುರಗಳನ್ನು ರುದ್ರನು ಸಂಹರಿಸುವನು. ರುದ್ರನು ಆ ತ್ರಿಪುರಗಳನ್ನು ಸಂಹರಿಸಲು ಬಳಸಿದ ಬಾಣದಲ್ಲಿ ಭಗವಂತನ ವಿಶೇಷ ಸನ್ನಿಧಾನವನ್ನಿತ್ತು,[1] ಅಲ್ಲದೆ ಭಗವಂತನು ರುದ್ರನಲ್ಲೂ ವಿಶೇಷವಾಗಿ ಸನ್ನಿಹಿತನಾಗಿದ್ದ ತ್ರಿಪುರಗಳಲ್ಲಿದ್ದರಿಂದಲೇ ಅಸುರರು ರುದ್ರನ ಧನಸ್ಸು, ಬಾಣಗಳ ಸ್ಪರ್ಶವನ್ನೂ ಸಹಿಸಲೂ ಅಸಮರ್ಥರಾಗಿದ್ದರು[2]

ಆದುದರಿಂದ 'ತ್ರಿಪುರ'ಗಳ ನಾಶದಲ್ಲೂ ಭಗವಂತನದೇ ಪ್ರಧಾನ ಪಾತ್ರ.

೪ ದೇವತೆಗಳ ಶತ್ರುಗಳ ಪುರಗಳನ್ನು ನಾಶಪಡಿಸುವವನು[3]

೫ (ಜೀವಾದಿಗಳ ಜೊತೆಗೆಯೇ ಅವರ ಶರೀರಗಳಿಂದ ಹೊರಡುತ್ತ) ಅವುಗಳನ್ನು ನಾಶಪಡಿಸುವವನು[4]

೬ (ನೃಸಿಂಹಾವತಾರದಲ್ಲಿ ಹಿರಣ್ಯಕಶಿಪುವಿನ) ಶರೀರವನ್ನು ಸೀಳಿರುವವನು.[5]

## ಜಿಜ್ಞಾಸೆ

[ಜನ್ಮ ಮರಣಗಳಿಗೆ ಕಾರಣ]

ಪ್ರ ಲಿಂಗಶರೀರವನ್ನು ಸಂಸಾರ ಎಂದು ಹೇಳುವದು ಯಾವ ಕಾರಣದಿಂದ?

---

1 'ಇಷುಶ್ಚಾಭವದ್ವಿಷ್ಣುಃ . .'
—ಮ. ಭಾರ. ಕರ್ಣ 34-49

2 ವಿಷ್ಣುಶ್ಚಾತ್ಮಾ ಭಗವತೋ ಭವಸ್ಯಾಮಿತತೇಜಸಃ ।
ತಸ್ಮಾದ್ಧನುರ್ಜ್ಯಾಸಂಸ್ಪರ್ಶಂ ನ ವಿಷೇಹುರ್ಹರಸ್ಯ ತೇ ।
—ಮ. ಭಾರ. ಕರ್ಣ 34-50

೪ 3 ಪರಪುರಂ ದಾರಯತೀತಿ ಪುರಂದರಃ । —ನಾ. ರಾ.

* ಸುರಶತ್ರು ಪುರಾಣಿ ಧಾರಯತೀತಿ ಪುರಂದರಃ । —ವಿ. ರಾ.

೫ 4 ಜೀವಾದಿಭಿಃ ಸಹೋತ್ಕ್ರಾಮನ್ ಶರೀರಂ ವಿನಾಶಯತೀತಿ ಪುರಂದರಃ ।
—ವಿ. ರಾ

೬ 5 ನೃಸಿಂಹಾವತಾರೇ ಹಿರಣ್ಯಕಶಿಪೋಃ ಪುರಂ ಶರೀರಂ ದಾರಯತೀತಿ ಪುರಂದರಃ ।

ಉ- ತೆಂಗಿನಕಾಯಿಗೆ ಸಿಪ್ಪೆ ಇರುವ ತನಕ ಅದರಲ್ಲಿ ಮೊಳಕೆಯು ಉಂಟಾಗುತ್ತದೆ ಸಿಪ್ಪೆಯನ್ನು ತೆಗೆದರೆ ಮೊಳಕೆಯು ಉಂಟಾಗುವದಿಲ್ಲ ಅದರಂತೆ ಲಿಂಗ ಶರೀರವು ಇರುವ ತನಕ ಜೀವನಿಗೆ ಜನ್ಮಗಳು ಬರುವವು ಲಿಂಗ ಶರೀರವು ಹೋದ ಮೇಲೆ ಜನ್ಮವು ಬರುವದಿಲ್ಲ ಆದುದರಿಂದ ಜನ್ಮ ಮರಣಕ್ಕೆ ಕಾರಣವಾದ ಲಿಂಗ ಶರೀರವನ್ನು ಸಂಸಾರವೆಂದು ಹೇಳುವದು ಎಂದು ಶ್ರೀ ಮಧ್ವಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ಹೇಳಿದ್ದಾರೆ



ಅಶೋಕಸ್ತಾರಣಸ್ತಾರಃ ಶೂರಃ ಶೌರಿರ್ಜನೇಶ್ವರಃ ।

ಅನುಕೂಲಃ ಶತಾವರ್ತಃ ಪದ್ಮೀ ಪದ್ಮನಿಭೇಕ್ಷಣಃ ॥ ೩೭ ॥

೩೩೭ ಅಶೋಕಃ

೧ ಶೋಕವಿಲ್ಲದವನು[1]

ಹೃದಯಕಮಲದಲ್ಲಿರುವ ಭಗವಂತನನ್ನು 'ವಿಶೋಕ' ಎಂದು ವಿಶೇಷಿಸುವುದರ ಮೂಲಕ, ಅವನು ಶೋಕದಿಂದ ದೂರನಾದವನೆಂದು ಸಂದೇಶಿಸಲಾಗಿದೆ[2] ಶೋಕವನ್ನು ಅತಿಕ್ರಮಿಸಿ ಇರುವ ಭಗವಂತನು[3] ಶೋಕದಿಂದ ರಹಿತನಾಗಿರುವ ಪ್ರಯುಕ್ತ ಶುಕ್ರ ಎಂದೆನಿಸಿರುವನು.[4]

೨ ಪೂರ್ಣನಾದವನು ಮತ್ತು ಸುಖಕ್ಕೆ ಆಶ್ರಯನಾದವನು[5]

---

೧ 1 ನ ವಿದ್ಯತೇ ಶೋಕೋ ಯಸ್ಯ ಸೋಽಶೋಕಃ ।

-ಸ. ಸಂ

2 '...ಏಷ ಆತ್ಮಾ ...ವಿಶೋಕಃ ' -ಛಾಂ. ಉ 8-1-2

3 '...ಯೋ...ಶೋಕಂ...ಅತ್ಯೇತಿ ತಂ ಹೈ ತಮಾತ್ಮಾನಂ... '

-ಬೃ. ಉ. 5-5-1

4 ಸ ಪರ್ಯಗಾಚ್ಛುಕ್ರಂ... ಈ. ಉ. 1-8

'ಶುಕ್ರಂ ಶಚ್ಛೋಕರಾಹಿತ್ಯಾತ್...' -ವಾರಾಹ (ಈ. ಉ. ಭಾ.)

೨ 5 ಅಶ್ಚ ಸುಖಸ್ಯೌಕೋ ವಾ । -ವಿ. ರಾ.

೩ ಪೂರ್ಣವಾದ ಸುಖಕ್ಕೆ ಆಶ್ರಯನಾದವನು[1]

ಭಗವಂತನು 'ಪರಮ ಸುಖನಿಧಿ' ಆಗಿರುವನೆಂದು ಸ್ತುತಿಸುವ[2] ಶ್ರೀ ಮಧ್ವಾಚಾರ್ಯರು— ಮುಕ್ತಾತ್ಮರ ಉತ್ತಮಸುಖಕ್ಕೆ ಆಶ್ರಯನಾಗಿರುವವನು ಭಗವಂತನೆಂದು ಸಂದೇಶಿಸಿರುವರು

೪ (ಜೀವಾತ್ಮರು) ಯಾರ ಅನುಗ್ರಹದಿಂದ ಶೋಕರಹಿತರಾಗುವರೋ ಅಂತಹವನು.[3]

ಮುಕ್ತಾತ್ಮನು ಸರ್ವ ಶೋಕಗಳನ್ನೂ ಅತಿಕ್ರಮಿಸುವನು[4]. ಭಗವಂತನು ಶೋಕರಹಿತನಾಗಿರುವ ಪ್ರಯುಕ್ತ ಅವನನ್ನು ಹೊಂದುವ ಮುಕ್ತಾತ್ಮನೂ ಶೋಕರಹಿತನಾಗುವನೆಂದು ಈಶಾವಾಸ್ಯೋಪನಿಷತ್ತು ಸಂದೇಶಿಸಿದೆ[5]

---

ಪೂರ್ಣತಾತ್ ಅಃ । ಶಂ ಸುಖಂ ತಸ್ಯ ಓಕಃ ಆಶ್ರಯಃ ಶೋಕಃ । ಶಕಾರೋತ್ತರಾಕಾರಸ್ಯ ಲೋಪಃ । ಓಕಃ ಸದಾಶ್ರಯಶ್ಚೌಕಾಃ (ಅ ಕೋ.) ಇತ್ಯದಂತೋಽಪ್ಯಸ್ತಿ ಓಕಶಬ್ದಃ । ಅಶ್ಚಾಸೌ ಶೋಕಶ್ಚ ಅಶೋಕಃ ।

೩ 1 ಅಂ ಪೂರ್ಣಂ ಚ ತತ್ ಶಂ ಸುಖಂ ಚ ಅಶಂ ಪೂರ್ಣಸುಖಮ್। ತಸ್ಯ ಓಕಃ ಆಶ್ರಯಃ ಅಶೋಕಃ । ಶಕಾರೋತ್ತರಾಕಾರಸ್ಯ ಲೋಪಃ ।

2 'ಪ್ರಾಣದೇರೀಶಿತಾರಂ ಪರಮಸುಖನಿಧಿಂ...ವಿಷ್ಣುಂ ವಂದೇ ಸದಾಽಹಂ...'
-ಬೃ. ಉ. ಮಂಗಲಪದ್ಯಮ್ ।

೪ 3 ನ ವಿದ್ಯತೇ ಶೋಕಃ ಯಸ್ಮಾತ್ ಸಃ ಅಶೋಕಃ ।

4 ' ತೀರ್ಣೋ ಹಿ ತದಾ ಸರ್ವಾಞ್-ಛೋಕಾನ್ ಹೃದಯಸ್ಯ ಭವತಿ'
-ಬೃ. ಉ. 6-3-22

5 ತತ್ರ ಕಃ ಶೋಕಃ.. । ಸ ಪರ್ಯಗಾಚ್ಛುಕ್ರಂ . '
-ಈ ಉ 1-7-8

ತಾವತಾ ಕಥಂ ಶೋಕಾದ್ಯಭಾವ ಇತ್ಯತಸ್ತದ್ವಿಶಿನಷ್ಟಿ—ಶುಕ್ರಮಿತ್ಯಾದಿನಾ । ...ಏವಂ-ಭೂತಹರಿಸಾರೂಪ್ಯಲಕ್ಷಣಾಂ ತದ್ಗತಿಂ ಗತಸ್ಯ ಶೋಕಾದ್ಯಭಾವೋ ಯುಕ್ತ ಇತಿ ಭಾವಃ । -ಈ. ಉ. ಖಂ

೫ ಪೂರ್ಣನಾದವನು; ಸುಖಸ್ವರೂಪಿ ಹಾಗೂ ಸರ್ವಾಶ್ರಯನು.[1]

೬ ಶೋಕ, ತದುಪಲಕ್ಷಿತಗಳಾದ ಹಸಿವು, ಬಾಯಾರಿಕೆ, ಮೋಹ, ವೃದ್ಧಾಪ್ಯ ಹಾಗೂ ಮರಣಗಳಿಲ್ಲದವನು.[2]

೭ ಸುಖದುಃಖವನ್ನು ಅನುಭವಿಸುವ ಜೀವಾತ್ಮರಿಗೆ ಆಶ್ರಯನಾಗಿರುವವನು.[3]

೮ ನಿದ್ರಾರಹಿತರಾದ ದೇವತೆಗಳಿಗೆ ಉತ್ಕೃಷ್ಟಾನಂದವನ್ನು ಅನುಗ್ರಹಿಸುವವನು[4]

೯ ನಿದ್ರಾರಹಿತನಾದವನು ಮತ್ತು ಉತ್ಕೃಷ್ಟವಾದ ಆನಂದ ಉಳ್ಳವನು.[5]

ರಜೋಗುಣದ ವಿಕಾರವಾದ ನಿದ್ದೆ ಭಗವಂತನಿಗಿಲ್ಲ. ಆದರೆ ಯಾವತ್ತೂ ಅವನು ಉತ್ಕೃಷ್ಟನಾದ ಆನಂದ ಉಳ್ಳವನು.

---

೫ 1 ಗುಣಪೂರ್ಣತ್ವಾತ್ ಅಃ । ಸುಖರೂಪತ್ವಾತ್ ಶಮ್ । ಸರ್ವಾಶ್ರಯತ್ವಾದೋಕಃ ।

೬ 2 ಶೋಕಾದಿಷಡೂರ್ಮಿವರ್ಜಿತಃ—ಅಶೋಕಃ । -ಶಾಂ. ಭಾ.

ಶೋಕಪದಂ 'ಅಶನಾಯಾಪಿಪಾಸಾಶೋಕಮೋಹಜರಾಮರಣಾನೀತಿ ಶ್ರುತ್ಯುಕ್ತಾನಾಮನ್ಯೇಷಾಮುಪಲಕ್ಷಣಮ್ । ಏತೇ ಊರ್ಮಯ ಇವ ಆವರ್ತಮಾನಾಃ ಸಂಸಾರೇ ಊರ್ಮಯ ಉಚ್ಯಂತೇ । ತದ್ರಹಿತಃ ಪರಮಾತ್ಮಾ ಅಶೋಕ ಇತ್ಯುಚ್ಯತ ಇತ್ಯಾಹ ಶೋಕಾದೀತಿ । -ವಿವೃತಿಃ ।

೭ 3 ಅಶ್ನಂತಿ ಸುಖದುಃಖೇ ಇತಿ ಅಶಾ ಜೀವಾಃ ತೇಷಾಂ ಓಕಃ ಆಶ್ರಯಃ ಅಶೋಕಃ ।

೮ 4 ನ ಶೇರತೇ ಇತ್ಯಶಾಃ ನಿದ್ರಾರಹಿತಾಃ ದೇವಾಃ । 'ಶಯಾನೇ ಶಃ ಸಮಾಖ್ಯಾತಃ' -ಏಕಾಕ್ಷರ ಕೋಶಃ । ತೇಷಾಂ ಉತ್ಕೃಷ್ಟಂ ಕಂ ಸುಖಂ ಯಸ್ಮಾತ್ಸಃ ಅಶೋಕಃ ।

೯ 5 ನ ಶೇತೇ ಇತ್ಯಶಃ । ಉತ್ಕೃಷ್ಟಂ ಕಂ ಯಸ್ಯ ಸಃ ಉಕಃ । ಅಶಶ್ಚಾಸೌ ಉಕಶ್ಚ ಅಶೋಕಃ ।

೧೦ ಅಧಿಕಾನಂದ ಉಳ್ಳವನು ಮತ್ತು ಉತ್ಕೃಷ್ಟನಾದ ಕರ್ತೃ ಆಗಿರುವವನು[1]

## ಜಿಜ್ಞಾಸೆ

[ನಮ್ಮಂತೆ ನಿದ್ರೆ ಇಲ್ಲ]

ಪ್ರ – ದೇವತೆಗಳಿಗ ನಿದ್ರೆ ಇಲ್ಲದ ಪ್ರಯುಕ್ತ ಅವರಿಗೆ ಅಸ್ವಪ್ನರು ಎಂದು ಹೆಸರು ಇದೆ ಆದರೆ ಪ್ರಲಯಕಾಲದಲ್ಲಿ ಅವರು ಪರಮಾತ್ಮನ ಉದರದಲ್ಲಿ ನಿದ್ರೆಯನ್ನು ಮಾಡುತ್ತಾರೆಂದು ಶಾಸ್ತ್ರವು ಹೇಳುತ್ತದೆ ಆದ್ದರಿಂದ ಅವರನ್ನು ಅಸ್ವಪ್ನರು ಎಂದು ಹೇಗೆ ಕರೆಯುವದು?

ಉ - ದೇವತೆಗಳಿಗೆ ಪ್ರಲಯಕಾಲದಲ್ಲಿ ದೇಹನಾಶರೂಪವಾದ ಮರಣವಿದ್ದರೂ ಅವರಿಗೆ ಅಮರರು ಎಂಬ ಹೆಸರು ನಮ್ಮಂತೆ ಅವರಿಗೆ ಮರಣವಿಲ್ಲವಾದ್ದರಿಂದ ಅದರಂತೆ ಅವರಿಗೆ ನಮ್ಮಂತೆ ನಿದ್ರೆ ಇಲ್ಲವಾದ್ದರಿಂದ ಅಸ್ವಪ್ನ ಎಂಬ ಹೆಸರು ಯುಕ್ತ



೩೩೮ ತಾರಣಃ

೧ ಸಂಸಾರ ಸಾಗರದಿಂದ ದಾಟಿಸುವವನು[2]

ಸಂಸಾರವೆಂಬುದು ದಾಟಲು ಕಷ್ಟಸಾಧ್ಯವಾದ ಸಾಗರವೆನಿಸಿದ್ದು, ಇದರಿಂದ ದಾಟಿಸುವವನು ಭಗವಂತನು[3]. ಸಂಸಾರ ಸಾಗರವನ್ನು ದಾಟಲು ದೋಣಿಯಾಗಿರುವವನು ಅವನೆಂದು ಕಾಶಿಕರು ಸಂದೇಶಿಸಿರುವರು[4] ಭಗವಂತನ ಚರಣಾರವಿಂದವೆಂಬ ದೋಣಿಯು, ಇತರ ದೋಣಿಯಂತೆ ಅಲ್ಲ.

---

೧೦ 1 ಅಧಿಕಂ ಶಂ ಯಸ್ಯ ಸಃ ಅಶಃ ಅಧಿಕಾನಂದಃ। ಉತ್ಕೃಷ್ಟಃ ಕರ್ತಾ ಉಕಃ।... 'ಏಕಃ.. ಏಷ ಏವ ಕರೋತಿ ಯತ್''(ಗೀ.ತಾ 11–42) ಇತ್ಯುಕ್ತದಿಶಾ ಏಷ ಏವ ಕರೋತೀತ್ಯರ್ಥೇ ಏಕಃ ಇತಿ ಯಥಾ ಪ್ರಯುಜ್ಯತೇ ತಥಾ ಉತ್ಕೃಷ್ಟಃ ಕರ್ತಾ ಉಕ ಇತಿ । ಅಶಶ್ಚಾಸೌ ಉಕಶ್ಚ ಅಶೋಕಃ।

೧ 2 ಸಂಸಾರಸಾಗರಾತ್ ತಾರಯತೀತಿ ತಾರಣಃ ।

3 'ಸ ಪ್ರೀಯತಾಂ ಪರಶಮಃ ಪರಮಾದನಂತಃ ಸಂತಾರಕಃ ಸತತಸಂಸೃತಿದುಸ್ತರಾರ್ಣಾತ್... ' –ಮ. ಭಾರ. ತಾ. ನಿ. 2-188

4 '... ಸಂಸಾರೋದಧಿನೌರ್ಹರಿಃ' –ಕೃ. ಮ. 68

ಮಹಾ ಭಗವದ್ಭಕ್ತರು ಅದರ ಮೂಲಕ ಭವಾರ್ಣವವನ್ನು ದಾಟಿ, ಅದನ್ನು ಶಿಷ್ಯರಿಗಾಗಿ ಭವಾರ್ಣವದಲ್ಲೇ ಸ್ಥಾಪಿಸಿ, ತಾವೂ ಅದನ್ನೇ ಏರಿ ಇರುವರೆಂದು ತಿಳಿಸುತ್ತಿರುದ ವಾಮನವು[1]— ಸಂಸಾರ ಸಾಗರವನ್ನು ದಾಟಿಸುವವನು ಭಗವಂತನೆಂದು ಸ್ಪಷ್ಟೀಕರಿಸಿದೆ

೨ ಸಂಸಾರ–ಸಾಗರವನ್ನು ದಾಟಿದವರಿಗೆ ಸುಖವನ್ನು ನೀಡುವವನು[2]

ಪುತ್ರೈಷಣಾ, ವಿತ್ತೈಷಣಾ ಹಾಗೂ ಲೋಕೈಷಣಾ—ಎಂಬ ಮೂರು ವಿಧದ ಆಸೆಯನ್ನು ಅತಿಕ್ರಮಿಸಿ ಮುಕ್ತರಾದವರು ಭಗವಂತನಿಂದ ಆನಂದಭಿಕ್ಷೆಯನ್ನು ಬೇಡುವರು—ಎಂಬುದಾಗಿ ಬೃಹದಾರಣ್ಯಕೋಪನಿಷತ್ತು[3] ಸಂದೇಶಿಸಿದೆ

೩ ಅನಿಷ್ಟಸಮೂಹವನ್ನು ತೊಲಗಿಸುವವನು ಮತ್ತು ಸುಖಸ್ವರೂಪಿ.[4]

ಭಗವಂತನು ತಾನು ಸುಖಸ್ವರೂಪಿಯಾಗಿದ್ದು ಇತರರ ಅನಿಷ್ಟವನ್ನು ತೊಲಗಿಸಿ ಸುಖಕ್ಕೆ ಕಾರಣನಾಗಿರುವನು.

೪ ತಾರ ಎನಿಸುವ ಓಂಕಾರದ ಮೂಲಕ ಸುಖ ಸಿಗುವಂತೆ ಅನುಗ್ರಹಿಸುವವನು[5]

---

1 ಭಗವತ್ಪಾದಪೋತೋಽಸೌ ನಾನ್ಯಪೋತಸಮೋ ಬಕ । ಸನ್ನಿಧಾಯಾಪಿ ಶಿಷ್ಯೇಷು- ತಮೇವ ಪ್ರಾಪ್ನುಯುರ್ಯತಃ' -ವಾಮನ (ಭಾಗ ತಾ 10-3-31)

೨ 2 ತಾರಯಂತಿ ಸಂಸಾರಸಾಗರಂ ತರಂತೀತಿ ತಾರಾಃ ಮುಕ್ತಾತ್ಮಾನಃ । 'ಬಹುಲಮೇತನ್ನಿ- ದರ್ಶನಮ್' ಇತಿ ಚುರಾದಿಗಣಸೂತ್ರಾತ್ ಸ್ವಾರ್ಥೇ ಣಿಚ್ । ತೇಷಾಂ ಣಃ ಸುಖಂ ಯಸ್ಮಾತ್ಸಃ ತಾರಣಃ । '...ಣೋ ಹಿ ನಿರ್ವೃತಿವಾಚಕಃ' (ವಿು. ಭಾ. 3–12)

3 ...ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ... -ಬೃ. ಉ. 5–5–1

೩ 4 ತರಂತಿ ಅನೇನ ಅನಿಷ್ಟನಿಚಯಮಿತಿ ತಾರಃ । ಸುಖರೂಪತ್ವಾತ್ ಣಃ । ತಾರಶ್ಚಾಸೌ ಣಶ್ಚ ತಾರಣಃ ।

೪ 5 ತಾರೇಣ ಪ್ರಣವೇನ ಣಃ ಸುಖಂ ಯಸ್ಮಾತ್ ಸಃ ತಾರಣಃ ।

೫ ಓಂಕಾರದ ಮೂಲಕ ಮುಕ್ತಿಗೆ ಒಯ್ಯುವವನು[1]

ಓಂಕಾರವು ಯೋಗ್ಯ ಜೀವಾತ್ಮರ ಅನಿಷ್ಟಸಮೂಹವನ್ನು ತೊಲಗಿಸುವುದರ[2] ಮೂಲಕ ಸುಖಕ್ಕೆ ಕಾರಣವಾಗಿರುವುದರಿಂದ 'ತಾರ' ಎಂದೆನಿಸಿದೆ ಸರ್ವವೇದಗಳಲ್ಲೂ ಪ್ರಣವವು ವಿಶಿಷ್ಟ ಎನಿಸುವಂತೆ ಅನುಗ್ರಹಿಸಿರುವ[3] ಭಗವಂತನ ವಿಭೂತಿರೂಪದಿಂದಾಗಿಯೇ ಪ್ರಣವವು ಅನಿಷ್ಟವನ್ನು ತೊಲಗಿಸುವ ಮಹಿಮೆಯನ್ನೂ ಪಡೆದಿರುವುದು.

೬ ಓಂಕಾರದ ಮೂಲಕ ಸ್ತುತಿಸಲ್ಪಡುವವನು[4]

೭ ಓಂಕಾರದ ಮೂಲಕ ಯಾರ ಸ್ವರೂಪದ ನಿರ್ಧಾರವಾಗುವುದೋ ಅಂತಹವನು.[5]

೮ ಸೂರ್ಯನಿಗೆ ಸ್ವಾಮಿ ಆಗಿರುವವನು.[6]

೯ ಸೂರ್ಯಮಂಡಲಾಂತರ್ಯಾಮಿ[7]

೧೦ ಸೂರ್ಯವಂಶದಲ್ಲಿ ಅವತರಿಸಿರುವವನು.[8]

---

೫ 1 ತಾರೇಣ ನೀಯತೇ ಮುಕ್ತಿಂ ಪ್ರತೀತಿ ತಾರಣಃ ।

2 ತರಂತಿ ಅನೇನ ಅನಿಷ್ಟನಿಚಯಮಿತ್ಯೋಂಕಾರಸ್ತಾರಃ ।
-ಸುಧಾ (1-1-1)

3 'ಪ್ರಣವಃ ಸರ್ವವೇದೇಷು ..' -ಗೀ. 7-8

೬ 4 ತಾರೇಣ ನೂಯತ ಸ್ತೂಯತ ಇತಿ ತಾರಣಃ ।

೭ 5 ತಾರೇಣ ಣಃ ನಿಶ್ಚಯಃ ಸ್ವರೂಪನಿರ್ಧಾರಃ ಯಸ್ಯ ಸಃ ತಾರಣಃ । 'ಣಕಾರಃ ಸೂಕರೇ ಜ್ಞಾನೇ ನಿಶ್ಚಯೇ ನಿರ್ಣಯೇಽಪಿ ಚ' -ಏಕಾಕ್ಷರಕೋಶಃ ।

೮ 6 ತರಣೇಃ ಸೂರ್ಯಸ್ಯಾಯಂ ಸ್ವಾಮೀ ತಾರಣಃ ।
-ಸ. ಸಂ.

೯ 7 ತರಣೀರಯಂ ತಾರಣಃ ಸೂರ್ಯಮಂಡಲಾಂತರ್ಗತತ್ವಾತ್ ತಾರಣಃ ।
-ಸ. ಸಂ.

೧೦ 8 ಸೂರ್ಯವಂಶೋದ್ಭವತ್ವಾತ್ ತಾರಣಃ । -ಸ. ಸಂ.

೧೧ ವ್ಯಾಪ್ತನಾಗಿರುವವನು ಹಾಗೂ (ಸಜ್ಜನರ ಶತ್ರುಗಳ ಜೊತೆಗೆ) ಸಮೀಚೀನವಾದ ಹೋರಾಟ ಉಳ್ಳವನು. ಅಥವಾ (ಸಜ್ಜನರಿಗೆ) ಸಮೀಚೀನ ಉಪದೇಶವನ್ನು ನೀಡಿರುವವನು.[1]

೧೨ (ಮುಕ್ತಿಯೋಗ್ಯರನ್ನು) ಸಂಸಾರ ಸಾಗರದಿಂದ ದಾಟಿಸುವವನು ಮತ್ತು (ಮುಕ್ತ್ಯಯೋಗ್ಯರನ್ನು ಸಂಸಾರದಲ್ಲಿ) ಬಂಧಿಸುವವನು.[2]

೧೩ (ಆಪತ್ತಿಗೊಳಗಾಗಿ ಶರಣಾಗತರಾದವರನ್ನು) ಆಪತ್ಸಮುದ್ರದಿಂದ ದಾಟಿಸುವವನು[3]

ಪಾಂಡವರು ಹೆಜ್ಜೆ ಹೆಜ್ಜೆಗೆ ಬೇರೆ ಬೇರೆ ರೀತಿಯ ಆಪತ್ತಿಗೊಳಗಾಗಿದ್ದು, ಅವುಗಳಿಂದೆಲ್ಲ ಪಾರಾದುದು ಶ್ರೀಕೃಷ್ಣನ ಅನುಗ್ರಹದಿಂದಲೇ ಹೀಗೆಂದು ಕುಂತೀದೇವಿ ಶ್ರೀಕೃಷ್ಣನಲ್ಲಿ ನಿವೇದಿಸಿಕೊಂಡಿರುವಳು[4]

೧೪ ಜೀವಾತ್ಮರು ಅನಿಷ್ಟವನ್ನು ದಾಟುವಂತೆ ಹಾಗೂ ಸುಖವನ್ನು ಹೊಂದುವಂತೆ ಅನುಗ್ರಹಿಸುವವನು[5]

ಮುಕ್ತಿಯು ಅನಿಷ್ಟಪರಿಹಾರ ಹಾಗೂ ಇಷ್ಟಪ್ರಾಪ್ತಿರೂಪವಾದ ಎರಡು ದಳಗಳನ್ನು ಹೊಂದಿದ್ದು, ಇವುಗಳಲ್ಲಿ ಅನಿಷ್ಟ ಪರಿಹಾರ ರೂಪವಾದ ದಳವು ಭಗವಂತನ ಸಂಹಾರಕರ್ತೃತ್ವ

---

೧೧ 1 'ತತತ್ವಾತ್ ತಃ । 'ತಥಾ ಪ್ರಾಣಾತ್ಮಕೌ ಪ್ರೋಕ್ತೌ ವ್ಯಾಪ್ತಿಸ್ಥಿತಿವಿಧಾಯಕೌ'-ಗಾರುಡ (ಬ್ರ ಸೂ. ಭಾ 1-1-1) ಆ ಸಮ್ಯಕ್ ರಣಃ ಸಮರಃ ರವೋ ವಾ ಯಸ್ಮಾತ್ ಸಃ ಆರಣಃ ತಶ್ಚಾಸೌ ಆರಣಶ್ಚ ತಾರಣಃ ।

೧೨ 2 ಮುಕ್ತಿಯೋಗ್ಯಾನ್ ಸಂಸಾರಪಾತ್ತಾರಯತೀತಿ ತಾರಃ । ಮುಕ್ತ್ಯಯೋಗ್ಯಾನ್ ಸಂಸಾರೇ ನಹ್ಯತಿ ಬಧ್ನಾತೀತಿ ನಃ । ತಾರಶ್ಚಾಸೌ ನಶ್ಚ ತಾರಣಃ ।

೧೩ 3 ಆಪನ್ನತ್ವೇನ ಪ್ರಪನ್ನಾನಾಪತ್ಸಮುದ್ರಾತ್ ತಾರಯತೀತಿ ತಾರಣಃ ।

4 'ವಿಮೋಚಿತಾಹಂ ಚ ಸಹಾತ್ಮಜಾ ವಿಭೋ ತ್ವಯೈವ ನಾಥೇನ ಮುಹುರ್ವಿಪದ್ಗಣಾತ್'
–ಭಾಗ 1-8-23

೧೪ 5 ತರಂತ್ಯನಿಷ್ಟನಿಚಯಮನೇನೇತಿ ತಾರಃ । ಣಃ ಸುಖಮಸ್ಯ ನಿಯಮ್ಯತಯಾ ಅಸ್ತೀತಿ ಣಃ । ಅರ್ಶ ಆದ್ಯಚ್ । ತಾರಶ್ಚಾಸೌ ಣಶ್ಚ ತಾರಣಃ ।

ಗುಣದ ಜ್ಞಾನದಿಂದಲೂ, ಆನಂದಾನುಭವರೂಪವಾದ ಇಷ್ಟಪ್ರಾಪ್ತಿರೂಪವಾದ ದಳವು ಭಗವಂತನ ಸೃಷ್ಟಿ, ತದುಪಲಕ್ಷಿತ ಅನಂತಗುಣಾತ್ಮಕತ್ವ ಜ್ಞಾನದಿಂದಲೂ ಸಿದ್ಧಿಸುವುದೆಂದು ಈಶಾವಾಸ್ಯೋಪನಿಷತ್ತು ಸಂದೇಶಿಸುವುದರ[*1] ಮೂಲಕ ದ್ವಿದಳಾತ್ಮಕವಾದ ಮೋಕ್ಷದ ಪ್ರಾಪ್ತಿಗೂ ಭಗವದನುಗ್ರಹ ಬೇಕು ಎಂಬುದನ್ನು ಸೂಚಿಸಿರುವುದು.

೧೪ ವ್ಯಾಪ್ತನಾಗಿರುವವನು ಹಾಗೂ ಸರ್ವವೇದಗಳಿಂದಲೂ ಚೆನ್ನಾಗಿ ಸ್ತುತಿಸಲ್ಪಡುವವನು.[2]

೧೫ ವ್ಯಾಪ್ತಳಾಗಿರುವ ಲಕ್ಷ್ಮೀದೇವಿಗೆ ಕ್ರೀಡೆಯನ್ನೂ, ಸುಖವನ್ನೂ ಅನುಗ್ರಹಿಸುವವನು.[3]

ಜಿಜ್ಞಾಸೆ

[ಅರಮನೆಯೂ ಹೌದು]

ಪ್ರ - ಲೋಕದಲ್ಲಿ ನೌಕೆಯಿಂದ ನದಿಯನ್ನು ದಾಟಿ ಆ ನೌಕೆಯನ್ನು ಬಿಟ್ಟು ಬಿಡುತ್ತಾರೆ, ಆದರೆ ಜ್ಞಾನಿಗಳು ಪರಮಾತ್ಮನ ಪಾದ ನೌಕೆಯಿಂದ ಸಂಸಾರ ಸಾಗರವನ್ನು ದಾಟಿ ಪುನಃ ಆ ನೌಕೆಯನ್ನೇ ಆಶ್ರಯಿಸಿಕೊಂಡು ಇರುತ್ತಾರೆ ಇದು ಏಕೆ?

ಉ - ಪರಮಾತ್ಮನ ಪಾದವು ಭವಾರ್ಣವವನ್ನು ದಾಟುವದಕ್ಕೆ ನೌಕೆ ಮಾತ್ರವಲ್ಲ ಸುಖವಾಸಾರ್ಥ ಶ್ರೇಷ್ಠ ಅರಮನೆಯೂ ಹೌದು, ಆದ್ದರಿಂದ ಜ್ಞಾನಿಗಳು ಪರಮಾತ್ಮನ ಪಾದವನ್ನು ಸದಾ

---

1 ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ ।
ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ ॥
—ಈ. ಉ. 1-14

* ಸರ್ವಕರ್ತಾರಮೀಶೇಶಂ ಸರ್ವಸಂಹಾರಕಾರಕಮ್ । ಯೋ ವೇದ ಸಂಹೃತಿಜ್ಞಾನಾದ್ ದೇಹಬಂಧಾದ್ ವಿಮುಚ್ಯತೇ । ಸುಖಜ್ಞಾನಾದಿಕರ್ತೃತ್ವಜ್ಞಾನಂ ತದ್ವ್ಯಕ್ತಿಮಾವ್ರಜೇತ್ —ಕೌರ್ಮೆ (ಈ. ಉ. ಭಾ.)

೧೪ 2 ತತತ್ವಾತ್ ತಃ । ಆ ಸಮ್ಯಕ್ ರಣ್ಯತೇ ಶಬ್ದ್ಯತೇ ಸರ್ವವೇದೈರಿತಿ ಆರಣಃ । ತಶ್ಚಾಸೌ ಆರಣಶ್ಚ ತಾರಣಃ ।

೧೫ 3 ತತತ್ವಾತ್ ತಾ ಲಕ್ಷ್ಮೀಃ । ತಸ್ಯಾಃ ರಂ ರಮಣಂ ಣಂ ಸುಖಂ ಚ ಯಸ್ಮಾತ್ ಸಃ ತಾರಣಃ ।

ಆಶ್ರಯಿಸುತ್ತಾ ಇರುತ್ತಾರೆ. ಇದನ್ನು ತಿಳಿಯದ ಅಜ್ಞಾನಿಗಳು ಸದಾ ಭವಾರ್ಣವದಲ್ಲಿ ಮುಳುಗಿ ದುಃಖಪಡುತ್ತಾ ಇದ್ದಾರೆ



## ೩೩೯ ತಾರಃ

೧ ಪ್ರಣವದಿಂದ ಪ್ರತಿಪಾದ್ಯನಾಗಿರುವವನು[1]

ಭಗವಂತನು ಜಗತ್ತಿಗೆ ಆಶ್ರಯನಾಗಿರುವುದರಿಂದ, ನಿಯಾಮಕನಾಗಿ ಜಗತ್ತನ್ನು ಪ್ರವೇಶಿಸಿರುವುದರಿಂದ, ಜಗತ್ತನ್ನು ರಕ್ಷಿಸುತ್ತಿರುವುದರಿಂದ, ಸರ್ವವನ್ನೂ ಬಲ್ಲವನಾದುದರಿಂದ, ಅಧಿಕನಾಗಿ ಉಚ್ಚನಾಗಿರುವುದರಿಂದ, ಅಧಿಕೋಚ್ಚನೆಂದು ವೇದಗಳಿಂದ ಪ್ರಮಿತನಾಗಿರುವುದರಿಂದ, ಆನಂದ ಮತ್ತು ಓಜೋಗುಣಗಳನ್ನು ಧರಿಸಿರುವುದರಿಂದ 'ಓಂ' ಎನಿಸಿರುವನೆಂದು 'ಸಮನ್ವಯ' ಸಂದೇಶಿಸಿದೆ[2]

ಓಂ ಎನಿಸುವ ಭಗವಂತನ ವೈಶ್ವಾನರ, ತೈಜಸ ಹಾಗೂ ಪ್ರಾಜ್ಞ ಎಂಬ ಮೂರು ಸ್ವರೂಪಾಂಶಗಳು ಓಂಕಾರ ಘಟಕಗಳಾದ ಅ, ಉ ಹಾಗೂ ಮವರ್ಣಗಳಿಂದ ಕರೆಯಲ್ಪಡುವವು ಜೀವಾತ್ಮರ ಜಾಗ್ರದವಸ್ಥೆಯನ್ನು ನಿಯಮಿಸುವ ವೈಶ್ವಾನರನು ಜೀವಾತ್ಮರಿಗೆ ವಿಷಯಪದಾರ್ಥಗಳ ಸಂಬಂಧವನ್ನು ಹಚ್ಚುವ ಪ್ರಯುಕ್ತ ಹಾಗೂ ಪ್ರಾಜ್ಞ ಮತ್ತು ತೈಜಸರೂಪಗಳೇ ಆದಿಗಳಾಗಿ ಉಳ್ಳ ಪ್ರಯುಕ್ತ

---

೧ 1 ತಾರಃ ಪ್ರಣವಪ್ರತಿಪಾದ್ಯಃ । -ರಾ ಸೂ.

ಯಥಾ ಪ್ರಥಮಾ ಯಾ ಮಹಾನಾಮ್ನೀ ತದ್ವಾಚ್ಯಃ ಪಾರ್ಥಿವೋ ಹರಿಃ । ದ್ವಿತೀಯಾಯಾ ಅಂತರಿಕ್ಷ್ಯಸ್ತೃತೀಯಾಯಾ ದ್ಯುಗಃ ಪ್ರಭುಃ' ಇತಿ ಋಕ್ಸಂಹಿತಾ (ಕ ನಿ.) ನಿರೂಪಿತದಿಶಾ 'ಪ್ರತಿಪಾದ್ಯಪ್ರತಿಪಾದಕಯೋಃ ಅಭೇದಃ' ಇತ್ಯಭಿಪ್ರಾಯೇಣ 'ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನ್ಯಂತರಿಕ್ಷಲೋಕೋ ದ್ವಿತೀಯಾಽಸೌ ಲೋಕಸ್ತೃತೀಯಾ .' (ಐ. ಬ್ರಾ. ಪಂ. 4 ಅ. 1 ಖಂ. 4 ವಾಕ್ಯ. 1) ಇತಿ ಪ್ರಯೋಗಃ ಪ್ರವೃತ್ತಃ ಏವಮೇವ ತಾರಪ್ರತಿಪಾದ್ಯಃ ತಾರ ಇತ್ಯೇವ ವ್ಯವಹ್ರಿಯತೇ ।

2 'ಓತತ್ವಾದವನಾನ್ನಾದಧಿಕೋಚ್ಚತ್ವಕಾರಣಾತ್ । ಆನಂದಾದೋಜಸಶ್ಚೈವ ಭರಣಾದೋಮುದಾಹೃತಃ' -ಸಮನ್ವಯ (ಛಾಂ. ಉ. ಭಾ 1-1-1)

ಓಂಕಾರದ ಅವರ್ಣದಿಂದ ವಾಚ್ಯನಾಗಿರುವನು ಜೀವಾತ್ಮರ[1] ಸ್ವಪ್ನಾವಸ್ಥೆಯನ್ನು ನಿಯಮಿಸುವ ತೈಜಸನು ಜೀವಾತ್ಮರಿಗೆ ದೇಹಾಭಿಮಾನವನ್ನು ಬಿಡಿಸಿ, ಅವರನ್ನು ಸ್ವಪ್ನಮಂಡಲಕ್ಕೆ ಎಳೆಯುವ ಪ್ರಯುಕ್ತ ಅದವಾ ನಿದ್ದೆ ಮತ್ತು ವಾಸನಾಮಯ ವಿಷಯಾನುಭವ ಈ ಉಭಯಗಳಿಗೆ ಕಾರಣನಾಗಿರುವ ಪ್ರಯುಕ್ತ ಓಂಕಾರದ ಉವರ್ಣದಿಂದ ಪ್ರತಿಪಾದ್ಯನಾಗಿರುವನು[2] ಜೀವಾತ್ಮರ ಸುಷುಪ್ತಿಗೆ ನಿಯಾಮಕನಾದ ಪ್ರಾಜ್ಞನು ಜೀವಾತ್ಮನನ್ನು ತನ್ನಲ್ಲಿ ಸೇರಿಸಿಕೊಳ್ಳುವ ಪ್ರಯುಕ್ತ ಹಾಗೂ ಅವನ ಜ್ಞಾನವನ್ನು ನಾಶಗೊಳಿಸುವ ಪ್ರಯುಕ್ತ ಓಂಕಾರದ ಮವರ್ಣದಿಂದ ವಾಚ್ಯನಾಗಿರುವನು— ಎಂಬುದಾಗಿ ಮಾಂಡೂಕೋಪನಿಷತ್ತು ಸಂದೇಶಿಸಿದೆ[3]

ಓಂಕಾರವು ಅಕಾರ,ಉಕಾರ, ಮಕಾರ ನಾದ, ಬಿಂದು, ಕಲಾ, ಶಾಂತ ಹಾಗೂ ಅತಿಶಾಂತ—, ಎಂಬ ಎಂಟು ಅಕ್ಷರಗಳನ್ನೊಳಗೊಂಡಿದ್ದು, ಇವುಗಳಿಂದ ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ ತುರೀಯ, ಆತ್ಮ ಅಂತರಾತ್ಮ ಪರಮಾತ್ಮ ಹಾಗೂ ಜ್ಞಾನಾತ್ಮ—ಎಂಬ ನನ್ನ ಎಂಟು ರೂಪಗಳು ವಾಚ್ಯಗಳಾಗಿರುವ ಪ್ರಯುಕ್ತ ಅಷ್ಟಾಕ್ಷರದ ಪ್ರಣವದಿಂದ ಪ್ರತಿಪಾದ್ಯನಾದವನು ನಾನೇ—ಎಂಬುದಾಗಿ ಭಗವಂತನು ಚತುರ್ಮುಖನಿಗೆ ಸಂದೇಶಿಸಿರುವನು.[4]

ಓಂಕಾರಕ್ಕೂ ಮೂಲವಾದ ಅಕಾರವು ಭಗವದ್ವಾಚಕವೇ ಆಗಿರುವುದರಿಂದ, ಅದರ ವ್ಯಾಖ್ಯಾನ ರೂಪವಾದ ಓಂಕಾರವೂ ಭಗವಂತನನ್ನೇ ಹೇಳುವುದು, ಇನ್ನಾರನ್ನೂ ಹೇಳುವುದಿಲ್ಲ—ಎಂದು

---

1 ...ಓಂಕಾರೋಽಧಿಮಾತ್ರಂ ಪಾದಾ ಮಾತ್ರಾ ಅಕಾರ ಉಕಾರ ಮಕಾರ ಇತಿ । ಜಾಗರಿತಸ್ಥಾನೋ ವೈಶ್ವಾನರೋಽಕಾರಃ ಪ್ರಥಮಾ ಮಾತ್ರಾ । ಆಪ್ತೇರಾದಿಮತ್ತ್ವಾದ್ ವಾ ।
-ಮಾಂ. ಉ. (2-1-1)

2 ಸ್ವಪ್ನಸ್ಥಾನಸ್ತೈಜಸಃ ಉಕಾರೋ ದ್ವಿತೀಯಾ ಮಾತ್ರಾ । ಉತ್ಕರ್ಷಾದುಭಯತ್ವಾದ್ ವಾ .. । -ಮಾಂ. ಉ (2-1-3)

3 ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ । ಮಿತೇರಪೀತೇರ್ವಾ ।
-ಮಾಂ. ಉ. 2-1-4

4 ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ ।
ಅಕಾರಾದ್ಯತಿಶಾಂತಾಂತಃ ಸೋಽಯಮಷ್ಟಾಕ್ಷರೋ ಮತಃ ॥
ಸ ವಿಶ್ವತೈಜಸಪ್ರಾಜ್ಞತುರೀಯಾತ್ಮಾಂತರಾತ್ಮನಾಮ್ ।
ಪರಮಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ ॥
-ತ . ಸಾ 1-2,3

'ತತ್ತ್ವಸಾರ'ವು—ಓಂಕಾರದ ಅಕಾರದಿಂದ ಚತುರ್ಮುಖನ ಅಂತರ್ಯಾಮಿಯಾಗಿದ್ದು ಸೃಷ್ಟಿಕಾರ್ಯ ನಡೆಸುವ ಬ್ರಹ್ಮನಾಮಕ ಭಗವದ್ರೂಪವು ಅಕಾರದಿಂದಲೂ, ವೈಕುಂಠ ಲೋಕದಲ್ಲಿದ್ದು ಪಾಲನೆಯನ್ನು ನಡೆಸುತ್ತಿರುವ ವಿಷ್ಣುರೂಪವು ಉಕಾರದಿಂದಲೂ, ಶಿವಾಂತರ್ಯಾಮಿ ಆಗಿದ್ದು ಸಂಹಾರವನ್ನು ನಡೆಸುವ ನೃಸಿಂಹನು ಮಕಾರದಿಂದಲೂ, ಪ್ರದ್ಯುಮ್ನನು ನಾದದಿಂದಲೂ, ಅನಿರುದ್ಧನು ಬಿಂದುವಿನಿಂದಲೂ, ಸಂಕರ್ಷಣನು ಕಲಾದಿಂದಲೂ, ವಾಸುದೇವನು ಶಾಂತದಿಂದಲೂ, ನಾರಾಯಣನು ಅತಿಶಾಂತದಿಂದಲೂ ವಾಚ್ಯರಾಗಿರುವರು ಅಥವಾ ಬಗವಂತನ ಹೃಷೀಕೇಶ, ಶ್ರೀಧರ, ವಾಮನ, ತ್ರಿವಿಕ್ರಮ, ಮಧುಸೂಧನ, ವಿಷ್ಣು, ಗೋವಿಂದ ಹಾಗೂ ಮಾಧವ ಎಂಬ ಭಗವದ್ರೂಪಗಳು ಪ್ರಣವದ ಎಂಟು ಅಕ್ಷರಗಳಿಂದ ವಾಚ್ಯಗಳಾಗಿದ್ದು, ಪ್ರಣವವು ಭಗವಂತನನ್ನು ಬಿಟ್ಟು ಇನ್ನಾರನ್ನೂ ಪ್ರತಿಪಾದಿಸಲಾರದೆಂದು ಸ್ಪಷ್ಟೀಕರಿಸಿದೆ[1]

ಓಂಕಾರದ ಎಂಟು ಅಕ್ಷರಗಳಿಂದ ಕ್ರಮವಾಗಿ ಕೃಷ್ಣ, ರಾಮ, ನೃಸಿಂಹ, ವರಾಹ, ವಿಷ್ಣು, ಪರಂಜ್ಯೋತಿ, ಪರಂಬ್ರಹ್ಮ ಹಾಗೂ ವಾಸುದೇವ, ಎಂಬ ಎಂಟು ಭಗವದ್ರೂಪಗಳು ವಾಚ್ಯಗಳಾಗಿವೆ

---

1 ಯತೋಽಕಾರಃ ಸದಾ ವಿಷ್ಣೋರ್ವಾಚಕತ್ವೇನ ಸಂಸ್ಥಿತಃ । ತಸ್ಮಾದ್ ವರ್ಣತ್ರಯಾತ್ಮಾಽಯಂ ಪ್ರಣವೋಽಪಿ ತ್ರಯಾತ್ಮಕಮ್ । ಹರಿಮೇವ ಸದಾ ವಕ್ತಿ ನೈವಾನ್ಯಂ ಕಂಚನ ಕ್ವಚಿತ್ । ಸೃಷ್ಟಿಕರ್ತಾ ಬ್ರಹ್ಮನಾಮಾ ಯೋಽಸೃಜಚ್ಚತುರಾನನಮ್ । ಅಂತರ್ಯಾಮೀ ವಿರಿಂಚಸ್ಯ ಸೋಽಕಾರಾರ್ಥೋ ಜನಾರ್ದನಃ । ವೈಕುಂಠಲೋಕ ಆಸ್ತೇ ಸ ದ್ವಿತೀಯಃ ಪುರುಷೋ ಹರಿಃ । ಉಕಾರವಾಚ್ಯಃ ಸ ವಿಭುರ್ನೃಸಿಂಹೋ ರುದ್ರನಾಮಕಃ । ರೌದ್ರತ್ವಾತ್ ಸ ಶಿವಸ್ಯಾಪಿ ಸ್ರಷ್ಟಾ ಸಂಹಾರಕಾರಕಃ । ಅಂತರ್ಯಾಮೀ ಶಿವಸ್ಯಾಪಿ ಮಕಾರಾರ್ಥಃ ಪ್ರಕೀರ್ತಿತಃ। ಏವಂ ತ್ರ್ಯಾತ್ಮಕಂ ವಿಷ್ಣುಂ ಪ್ರಣವೋಽಪಿ ತ್ರಯಾತ್ಮಕಃ। ಏಕಂ ಪೃಥಗಿವಾಚಷ್ಟೇ ಬಿಂದುರ್ವಕ್ತ್ಯನಿರುದ್ಧಕಮ್ । ಪ್ರದ್ಯುಮ್ನಾದೀನ್ ನಾದಪೂರ್ವಾಃ ಸರ್ವಾನ್ ನಾರಾಯಣಾತ್ಮಕಾನ್ । ಪದ್ಮನಾಭಾದಿಕಾ ಏವ ಮೂರ್ತಿರ್ನಾರಾಯಣೋತ್ತರಾಃ । ಪ್ರಣವೋಽಯಂ ವದತ್ಯಷ್ಟೌ ತಸ್ಮಾನ್ನಾನ್ಯಾಭಿಧಾಯಕಃ ।
-ತತ್ತ್ವಸಾರ (ಐ ಉ. ಭಾ. 2-2-7-5)

ಕೇಶವಾದಿದ್ವಾದಶಮೂರ್ತಯಃ ವ್ಯತ್ಕ್ರಮೇಣ ಪರ್ಯಂತೇ ಚೇತ್ ದಾಮೋದರಃ-ಪ್ರಥಮಾ, ಪದ್ಮನಾಭಃ ದ್ವಿತೀಯಾ ತದಾದ್ಯಾಃ ಹೃಷಿಕೇಶಪ್ರಮುಖಾಃ ಮೂರ್ತಯಃ । ತಾಸು ಮಾಧವಃ ಅಷ್ಟಮಾ ಮೂರ್ತಿಃ ನಾರಾಯಣೋತ್ತರಾ ಚ ಸಂಭವತಿ । ಏತದೇವ ಪದ್ಮನಾಭಾದಿಕಾ ಇತ್ಯಾದಿನಾ ಅಭಿಪ್ರೇತಮ್ ।

ಎಂದು 'ಯತಿಪ್ರಣವ ಕಲ್ಪ'ದಲ್ಲಿ ಸಂದೇಶಿಸಲಾಗಿದೆ.[1]

ಹೀಗೆ ಪ್ರಣವವು ಅಖಂಡವಾಗಿ, ವರ್ಣತ್ರಯೋಪೇತವಾಗಿ ಹಾಗೂ ಅಷ್ಟವರ್ಣೋಪೇತವಾಗಿಯೂ ಭಗವಂತನನ್ನೇ ಪ್ರತಿಪಾದಿಸುತ್ತಿದೆ. ಈ ರೀತಿಯಾಗಿ ಸರ್ವಾತ್ಮನಾ ಪ್ರಣವಪ್ರತಿಪಾದ್ಯನು ಭಗವಂತನೆಂದು ತಿಳಿಯಬೇಕೆಂದು ಮಾಂಡೂಕೋಪನಿಷತ್ತು ಸಂದೇಶಿಸಿದೆ.[2]

೨ ಗರ್ಭ, ಜನ್ಮ, ವೃದ್ಧಾಪ್ಯ, ಮರಣರೂಪದ ಸಂಸಾರವೆಂಬ ಮಹಾಭಯದಿಂದ ದಾಟಿಸುವವನು.[3]

ಗರ್ಭ, ಜನ್ಮ, ಜರಾ, ಮರಣರೂಪದ ಸಂಸಾರ ಮಹಾ ಭಯದಿಂದ ಭಗವಂತನು ದಾಟಿಸುವವನಾದುದರಿಂದ ತಾರ ಎಂದೆನಿಸಿರುವನೆಂದು ಅಥರ್ವಶಿರಸ್ಸಲ್ಲಿ ಸಂದೇಶಿಸಲಾಗಿದೆ.[4]

೩ (ಜೀವಾತ್ಮರು) ಅನಿಷ್ಟಗಳ ಸಮೂಹವನ್ನು ದಾಟುವಂತೆ ಅನುಗ್ರಹಿಸುವವನು.[5]

೪ ವ್ಯಾಪ್ತನಾಗಿರುವವನು ಮತ್ತು ಚೆನ್ನಾಗಿ ಕ್ರೀಡಿಸುವವನು ಅಥವಾ (ಮುಕ್ತರು) ಚೆನ್ನಾಗಿ ಕ್ರೀಡಿಸುವಂತೆ ಅನುಗ್ರಹಿಸುವವನು.[6]

---

1 ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವ ಚ । ಪರಂಜ್ಯೋತಿಃ ಪರಂಬ್ರಹ್ಮ ವಾಸುದೇವ ಇತಿ ಕ್ರಮಾತ್ । ಅಕಾರಾದೇಸ್ತಥಾ ಶಾಂತಾತಿಶಾಂತಾಂತಸ್ಯ ದೇವತಾಃ ॥
—ಓಂ. ಪ್ರ. ಕ.-4

2 'ಪ್ರಣವಂ ಹೀಶ್ವರಂ ವಿದ್ಯಾತ್' -ಮಾಂ. ಉ 2-2-6

೨ 3 ತಾರಸ್ತಾರಕಃ । -ಸ. ಸಂ

4 ತಾರಶಬ್ದಾರ್ಥೋಽಥರ್ವಶಿರಸ್ಯಭಿಹಿತಃ-'ಗರ್ಭಜನ್ಮಜರಾಮರಣ (ರೂಪ) ಸಂಸಾರಮಹಾಭಯಾತ್ ತಾರಯತೀತಿ ತಸ್ಮಾದುಚ್ಯತೇ ತಾರ ಇತಿ' -ವಿ. ರಾ.

೩ 5 ತರಂತ್ಯನಿಷ್ಟನಿಚಯಮನೇನೇತಿ ತಾರಃ । ಶ್ರೀಮನ್ನ್ಯಾಯಸುಧಾಯಾಂ ಪ್ರಣವಸ್ಯ ತಾರಪದವಾಚ್ಯತ್ವೇ ದರ್ಶಿತಾ ವ್ಯುತ್ಪತ್ತಿಃ ಮುಖ್ಯತಯಾ ಭಗವತಿ ಸಮನ್ವೇತಿ ।

೪ 6 ತತತ್ವಾತ್ ತಃ । ಆ ಸಮ್ಯಕ್ ರಮತೇ ಮುಕ್ತಾನ್ ರಮಯತೀತಿ ವಾ ಆರಃ ತಶ್ಚಾಸೌ ಆರಶ್ಚ ತಾರಃ ।

೫ ವ್ಯಾಪ್ತನಾಗಿರುವವನು ಮತ್ತು ಯಾವುದೇ ರೀತಿಯ ನಾಶಕ್ಕೊಳಗಾಗದವನು[1]

೬ (ತಾನು ಸೃಷ್ಟಿಸಿದ ಜಗತ್ತಿನ ಒಳಗೆ) ಈಜುವವನು,—ಪ್ರವೇಶಿಸಿರುವವನು ಹಾಗೂ (ಅಲ್ಲಿ) ಸಂಸಾರವನ್ನು ಮೀರಿ ಇರುವವನು[2]

## ಜಿಜ್ಞಾಸೆ

[ಮೂರು ರೂಪಗಳ ವಾಚಕ]

ಪ್ರ – 'ಅಕಾರಃ ಸರ್ವವಾಗಾತ್ಮಾ' 'ಅಕಾರೋ ವೈ ಸರ್ವಾ ವಾಕ್' ಎಂಬ ಶ್ರುತಿ ಸ್ಮೃತಿಗಳಲ್ಲಿ ಅಕಾರವು ಅನಂತ ಶಬ್ದಗಳಿಂದ ಹೇಳಲ್ಪಡುವ ಅನಂತಾರ್ಥವನ್ನು ಹೇಳುತ್ತದೆ. ಅಂತಹ ಅಕಾರದಿಂದ ಕೂಡಿದ್ದು ಓಂಕಾರ ಓಂಕಾರದಲ್ಲಿ ಅಕಾರ ಉಕಾರ ಮಕಾರಗಳು ಈ ಮೂರು ಅಕ್ಷರಗಳು ಘಟಕಗಳು, ಒಂದು ಅಕಾರವು ಸರ್ವಾರ್ಥವನ್ನು ಹೇಳುತ್ತದೆ ಅದು ಒಂದೇ ಸಾಕು ಇನ್ನು ಎರಡು ಅಕ್ಷರಗಳು ಓಂಕಾರದಲ್ಲಿ ಏಕೆ ಸೇರಿ ಇವೆ?

ಉ – ಅಕಾರವಾಚ್ಯ ಭಗವದ್ರೂಪ ಉಕಾರವಾಚ್ಯ ಭಗವದ್ರೂಪ ಮಕಾರವಾಚ್ಯ ಭಗವದ್ರೂಪ ಈ ರೀತಿ ಮೂರು ಭಗವದ್ರೂಪಗಳನ್ನು ಧ್ಯಾನಮಾಡುತ್ತಾ ಓಂಕಾರವನ್ನು ಜಪಿಸಬೇಕು. ಹಾಗೆ ಜಪಿಸಿದರೆ ಪೂರ್ಣಫಲವು ಬರುತ್ತದೆ ಆ ರೂಪಗಳ ಹೆಸರು ವಿಶ್ವತೈಜಸ ಪ್ರಾಜ್ಞವೆಂದು. ಈ ಕಾರಣದಿಂದ ಮೂರು ಅಕ್ಷರಗಳು ಓಂಕಾರದಲ್ಲಿ ಘಟಕಗಳಾಗಿವೆ



## ೩೪೦ ಶೂರಃ

೧ ವಿಕ್ರಮಶಾಲಿಯಾಗಿರುವವನು.[3]

---

೫ 1 ತನೋತೀತಿ ತಃ । ನ ರೀಯತೇ ಕ್ಷಯತಿ ಇತಿ ಅರಃ । ತಶ್ಚಾಸೌ ಅರಶ್ಚ ತಾರಃ । 'ರೀಙ್ ಕ್ಷಯೇ' ।

೬ 2 ತೄ ಪ್ಲವನ ತರಣಯೋಃ ಇತಿಧಾತುಃ । ಕರ್ತರಿ ಘಞ್ ಕೃತೇ ವೃದ್ಧೌ ಚ ಕೃತಾಯಾಂ 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' 'ಅಸಂಗೋ ಹ್ಯಯಂ ಪುರುಷಃ' ಇತಿ ಶ್ರುತೇಶ್ಚ ಸೃಷ್ಟಜಗದಂತಃ ಪ್ಲವತಿ, ತತ್ರಾಪಿ ಸಂಸಾರಾದುತ್ತೀರ್ಣ ಇತಿ ತಾರಃ ।

—ವಾ. ರಾ.

೧ 3 ಶೂರಯತಿ ವಿಕ್ರಾಮತೀತಿ ಶೂರಃ । 'ಶೂರ ವೀರ ವಿಕ್ರಾಂತೌ' ।

ಭೀಷ್ಮರು ಅಗ್ರಪೂಜೆಗೆ ಶ್ರೀಕೃಷ್ಣನೇ ಅರ್ಹನೆಂದು ಸಮರ್ಥಿಸುತ್ತ, ಅವನಲ್ಲಿ ನಿಯತವಾಗಿ ಇರುವವೆಂದು ಉಲ್ಲೇಖಿಸಿದ ಹನ್ನೆರಡು ಗುಣಗಳಲ್ಲಿ 'ಶೌರ್ಯ'ವೂ ಒಂದಾಗಿದೆ.[1] ಭಗವಂತನು ಯಾವುದೇ ರೀತಿಯ ಪ್ರತಿಬಂಧದಿಂದ ರಹಿತವಾದ ಪರಾಕ್ರಮ ಉಳ್ಳವನೆಂಬುದಾಗಿ ಶ್ರೀಂಗಿಶ್ರುತಿ 'ಸತ್ಪರಾಕ್ರಮ'—ಎಂಬ ವಿಶೇಷಣದಿಂದ ಸಂದೇಶಿಸಿದೆ.[2] ಹೀಗೆ ಭಗವಂತನು ಶ್ರೇಷ್ಠ ಶೂರನಾಗಿರುವುದರಿಂದಲೇ ಶ್ರೀಮದಾಚಾರ್ಯರು, ಕೇಶವನಾಮಕ ಭಗವಂತನನ್ನು 'ಶೂರವರೇಶ'—ಶೂರಶ್ರೇಷ್ಠರಿಗೂ ಒಡೆಯನಾಗಿರುವವನೆಂದು ವಿವೇಚಿಸಿರುವರು.[3]

೨ ಸುಖಶೀಲನೂ ಮತ್ತು ಉಚ್ಚನಾಗಿರುವವನು ಹಾಗೂ ಯಾವಾಗಲೂ ಕ್ರೀಡಿಸುತ್ತಿರುವವನು.[4]

೩ ಸುಖಶೀಲನಾದ, ಉಚ್ಚನಾದ ತನ್ನಿಂದಲೇ ತಾನು ಕ್ರೀಡಿಸುತ್ತಿರುವವನು.[5]

---

1 ದಾನಂ ದಾಕ್ಷ್ಯಂ ಶ್ರುತಂ ಶೌರ್ಯಂ ಹ್ರೀಃ ಕೀರ್ತಿರ್ಬುದ್ಧಿರುತ್ತಮಾ ।
ಸನ್ನತಿಃ ಶ್ರೀರ್ಧೃತಿಸ್ತುಷ್ಟಿಃ ಪುಷ್ಟಿಶ್ಚ ನಿಯತಾಚ್ಯುತೇ ॥
-ಮ. ಭಾರ. ಸಭಾ 38-20

ಅತ್ರ ನಿಯತೇತಿ 'ಸಾಮಾನ್ಯೇ ನಪುಂಸಕಮ್' ಇತಿ ಸರ್ವೇಷಾಂ ದಾನಾದಿಗುಣಾನಾಂ ವಿಶೇಷಣತಯಾ ಪ್ರಯುಕ್ತಮ್ । ನಿಯತಾನೀತ್ಯತ್ರ ನೀತ್ಯಸ್ಯ ಚ ಲೋಪಃ 'ವಿಶ್ವಾ ಭೂತಾನಿ' ಇತ್ಯತ್ರೇವ ।

2 ಸದ್ದೇಹಃ ಸುಖಗಂಧಶ್ಚ . ಸತ್ಪರಾಕ್ರಮಃ । .. ಸ ವಿಷ್ಣುಃ ಪರಮಾಕ್ಷರಃ'
-ಬ್ರ. ಸೂ. ಭಾ. 2-2-41

* ಸತ್ಪರಾಕ್ರಮಃ ಅಪ್ರತಿಹತಪರಾಕ್ರಮಃ ।
-ದೀಪಿಕಾ.

3 ಕೇಶವ ಕೇಶವ . ಶೂರವರೇಶ ।
-ದ್ವಾ. ಸ್ತೋ.

೨ 4 ಸುಖಶೀಲತ್ವಾತ್ ಶುಃ । ಉಚ್ಚತ್ವಾತ್ ಉಃ । ಶಂಶೀಲಕೋಽಹಂ ಯತ ಏವ ಚೋಚಃ ಶುನಾಮ । ಕಃ...' (ಮ. ಭಾರ. ತಾ ನಿ. 32-157) ಇತ್ಯತ್ರ ಏವಮೇವ ವ್ಯಾಖ್ಯಾತಮ್ । ರಮತೇ ಸರ್ವದಾ ಇತಿ ರಃ । ಅಸಾಧಾರಣ್ಯೇನ ವ್ಯಪದೇಶಃ । ಶುಶ್ಚಾಸೌ ಉಶ್ಚಾಸೌ ರಶ್ಚ ಶೂರಃ ।

೩ 5 ಸುಖಶೀಲತ್ವಾದುಚ್ಚತ್ವಾಚ್ಚ ಶೂಃ । ತಾದೃಶೇನ ಸ್ವೇನೈವ ರಮತ ಇತಿ ಶೂರಃ ।

ಸರ್ವೋಚ್ಚನಾಗಿರುವ ಭಗವಂತನು ಸಹಜವಾಗಿಯೇ ಸುಖಿ ಆದುದರಿಂದಲೇ ಯಾವಾಗಲೂ ತನ್ನಿಂದ ತಾನೇ ಕ್ರೀಡಿಸುತ್ತಿರುವನು.

೪ ಸುಖಶೀಲನಾಗಿರುವವನು ಮತ್ತು ಶ್ರೇಷ್ಠವಾದ, ಅಥವಾ ಉತ್ಕೃಷ್ಟವಾದ ರಮಣ ಉಳ್ಳವನು[1]

೫ ಸುಖಶೀಲನು ಮತ್ತು (ಇತರರಿಗಿಂತ) ಉತ್ಕೃಷ್ಟರಾದ ಬ್ರಹ್ಮಾದಿಗಳನ್ನು ಕ್ರೀಡಿಸುವಂತೆ ಮಾಡುವವನು[2]

ಸ್ವಯಂ ಸುಖಿಯಾಗಿರುವ ಭಗವಂತನು, ಉತ್ಕೃಷ್ಟರಾದ ಬ್ರಹ್ಮಾದಿ ದೇವತೆಗಳನ್ನೂ ಅವರವರ ಉತ್ಕೃಷ್ಟತೆಗೆ ಅನುಗುಣವಾಗಿ ಕ್ರೀಡಿಸುವಂತೆ ಅನುಗ್ರಹಿಸುವವನು

೬ ಸುಖಶೀಲರಾದ ಮುಕ್ತಾತ್ಮರು ಅಧಿಕವಾಗಿ ಕ್ರೀಡಿಸುವಂತೆ ಮಾಡುವವನು.[3]

೭ ಎಲ್ಲೆಡೆ ಇರುವವನು[4]

೮ (ಯಾವಾಗಲೂ) ಸುಖವನ್ನು ಸ್ವೀಕರಿಸುವವನು[5]

೯ ಯುದ್ಧಕ್ಕೆ ಹೋಗುವವನು[6]

---

೪ 1 ಸುಖಶೀಲತ್ವಾತ್ ಶುಃ । ಉಚ್ಚಂ ಉತ್ಕೃಷ್ಟಂ ವಾ ರಂ ರಮಣಂ ಯಸ್ಯ ಸಃ ಉರಃ । ಶುಶ್ಚಾಸೌ ಉರಶ್ಚ ಶೂರಃ ।

೫ 2 ಸುಖಶೀಲತ್ವಾತ್ ಶುಃ । ಊನ್ ಇತರಾಪೇಕ್ಷಯಾ ಉಚ್ಚಾನ್ ಬ್ರಹ್ಮಾದೀನ್ ರಮಯತೀತಿ ಉರಃ । ಶುಶ್ಚಾಸೌ ಉರಶ್ಚ ಶೂರಃ ।

೬ 3 ಶೂನ್ ಸುಖಶೀಲಾನ್ ಮುಕ್ತಾನ್ ಉಚ್ಚೈಃ ರಮಯತೀತಿ ಶೂರಃ ।

೭ 4 ಶವತಿ ಸರ್ವತ್ರ ಗಚ್ಛತೀತಿ ಶೂರಃ । 'ಶು ಗತೌ' । 'ಸುಸಿಚಿಮೀನಾಂ ದೀರ್ಘಶ್ಚ' ಇತಿ ಶವತೇಃ ಕ್ರನ್ ।

೮ 5 ಊರೀಕೃತಸುಖಃ ಶೂರಃ । -ಸ. ಸಂ

೯ 6 ಶುವತಿ (ಶವತಿ) ಸಂಗ್ರಾಮಮಿತಿ । -ಸ. ಸಂ.

೧೦ ಭಯಪೀಡಿತರಿಂದ ಹೊಂದಲ್ಪಡುವವನು.[1]

ಜಿಜ್ಞಾಸೆ

[ಅಪ್ರಾಕೃತ ಶೌರ್ಯ]

ಪ್ರ - ಜಗತ್ಸೃಷ್ಟಿಕರ್ತನಾದ ಈಶ್ವರನೇ ಎಲ್ಲರಿಗೂ ಶೌರ್ಯವನ್ನು ಸೃಷ್ಟಿಮಾಡಿದ್ದಾನೆ ಅಂತಹ ಈಶ್ವರನಲ್ಲಿ ಅಪರಿಮಿತವಾದ ಶೌರ್ಯವು ಇರಲೇಬೇಕು. ಆದ್ದರಿಂದ ಆತನನ್ನು ಶೂರ ಎಂದು ಹೇಳುವದು ಸಿದ್ಧಸಾಧನ ದೋಷಯುಕ್ತವಾಗುವದಿಲ್ಲವೇ?

ಉ - ಅವನು ಸೃಷ್ಟಿ ಮಾಡಿದ ಶೌರ್ಯವು ಪ್ರಾಕೃತ ಅವನಲ್ಲಿ ಇದ್ದ ಶೌರ್ಯವು ಅಪ್ರಾಕೃತ ಮತ್ತು ಸರ್ವಗುಣಾತ್ಮಕ ಭಗವಂತನ ಶೌರ್ಯಾದಿ ಸರ್ವ ಗುಣಗಳೂ ಸರ್ವ ವಿಲಕ್ಷಣಗಳಾದ್ದರಿಂದ ಅಂತಹ ಗುಣಗಳನ್ನು ಶಾಸ್ತ್ರದಿಂದ ತಿಳಿಸಬೇಕು ಅವುಗಳ ಸ್ವರೂಪವು ಸ್ವತಃ ದುಜ್ಞೇಯವಾದ್ದರಿಂದ ಅದನ್ನು ಹೇಳುವದು ಸಿದ್ಧಸಾಧನವಾಗುವದಿಲ್ಲ.



೩೪೧ ಶೌರಿ

೧ ಪರಾಕ್ರಮಿಯಾಗಿರುವುದರಿಂದ 'ಶೂರ' ಎನಿಸಿರುವ ವಾಯುದೇವನ ಪುತ್ರನಂತೆ ಇರುವವನು.[2]

ಬಲದೇವತೆ ಆಗಿದ್ದು, ಕ್ಷತ್ರಿಯಜಾತಿಗೆ ಅಭಿಮಾನಿಯಾಗಿರುವ[3] ವಾಯುದೇವನು ಉಳಿದೆಲ್ಲರಿಗಿಂತ ಅಧಿಕವಾಗಿ ಶೂರನು. ಅಂತಹ ವಾಯುದೇವನ ಮೂಲಕ ಭಗವಂತನು ಅಭಿವ್ಯಂಗ್ಯನಾಗುವ ಪ್ರಯುಕ್ತ ಭಗವಂತನು ಅವನ ಪುತ್ರನೆಂಬುದಾಗಿ ಶಾಸ್ತ್ರದಲ್ಲಿ ವ್ಯವಹರಿಸಲಾಗುವುದು.[4]

---

೧೦ 1 ಶೂಯಂತೇಽಸೌ ಭಯಾರ್ತೈರಿತಿ । -ಸ. ಸಂ.

೧ 2 ಪರಾಕ್ರಮಿತ್ವಾತ್ ಶೂರಃ ವಾಯುದೇವಃ। ತಸ್ಯಾಪತ್ಯಮಿತ್ಯರ್ಥೇ 'ಅತ ಇಞ್' ಶೌರಿಃ। ತದ್ವ್ಯಂಗ್ಯತ್ವಾದೇವ ತದಪತ್ಯತ್ವಂ ನತು ಮುಖ್ಯತ ಇತಿ ಅಪತ್ಯಮಿವೇತಿ ಫಲತಿ ।

3 'ಕ್ಷತ್ರಜಾತ್ಯಭಿಮಾನೀ ತು ಪವನಃ ...'

-ಬ್ರಹ್ಮಾಂಡ (ಬೃ. ಉ. ಭಾ. 3-5-11)

4 ತ್ವಂ ತ್ವೇಭಿರಾಗಹಿ ವಾಜೇಭಿರ್ದುಹಿತರ್ದಿವಃ । -ಋ. ವೇ. 39-22

೨ ಸುಖಶೀಲನಾದ ಹಾಗೂ ಶ್ರೇಷ್ಠನಾದ ಭಗವಂತನನ್ನು ಸಂತೋಷ ಪಡಿಸುವ ಅಥವಾ ಭಗವಂತನನ್ನು ಬಲ್ಲ ಜ್ಞಾನಿಗಳ ಪುತ್ರನಂತೆ ಇರುವವನು[1]

ಭಗವಂತನನ್ನು ತಿಳಿದುಕೊಂಡ ಜ್ಞಾನಿಯು, ಜಗತ್ತಿಗೆ ಪಿತೃ ಆದ ಭಗವಂತನಿಗೂ ತಂದೆ ಎನಿಸಿರುವನೆಂದು ಶ್ರುತಿಯು ಸಂದೇಶಿಸಿದೆ.[2] ಪಾರಾಶರ್ಯಾಯಣ ಶ್ರುತಿಯು ಜ್ಞಾನಿಯಾದ ಜೀವಾತ್ಮನು ಪರಮಾತ್ಮನ ತಂದೆಯಂತೆ ಎಂದು ಉಲ್ಲೇಖಿಸಿವೆ.[3]

೩. ಶೂರ ಎಂಬವನ ಕುಲದಲ್ಲಿ ಅವತರಿಸಿರುವವನು.[4]

---

ಪ್ರಾಣವಾಕ್‌ಸುತೇ । ತದ್ವ್ಯಂಗ್ಯತ್ವಾದ್ಧರಿಶ್ಚೈವ ದಿವಃಪುತ್ರ ಉದಾಹೃತಃ ।

-ಋ ಭಾ.

೨ 1 ಶುಶೀಲಕೋಽಹಂ ಯತ ಏವ ಚೋಚ್ಚಃ ಶುನಾಮಕಃ . .' ಇತ್ಯುಕ್ತದಿಶಾ (ಭಾರ. ಶಾ. ನಿ. 32–157) ಸುಖಶೀಲತ್ವಾತ್ ಶುಃ । ಉಚ್ಚತ್ವಾತ್ ಉಃ । ತಾದೃಶಂ ಶೂನಾಮಕಂ ರಮಯಂತೀತಿ ಶೂರಾಃಜಗವದ್‌ಜ್ಞಾನಿನಃ। ಅಥವಾ ಶವಂತಿ ಭಗವಂತಂ ಗಚ್ಛಂತಿ ಅವಗಚ್ಛಂತೀತಿ ಯಾವತ್, ಶೂರಾಃ ಭಗವದ್‌ಜ್ಞಾನಿನಃ। 'ಶು ಗತೌ'। ತೇಷಾಂ ಅಪತ್ಯಂ ಪ್ರಮಾನ್ ಶೌರಿಃ ।

2 'ಯಸ್ತದ್ವೇದ ಸ ಪಿತುಷ್ಪಿತಾಽಸತ್'

-ಋ ವೇ. (1-164-18)

* ಯಸ್ತದ್ ಬ್ರಹ್ಮ ವೇದ ಸ ಪಿತುಸ್ತಸ್ಯ ಜಗತ್ಕಾರಣಸ್ಯ ಪಿತಾ ಅಸತ್ ಅಭವತ್ ।

-ಕ. ನಿ. ಟೀ.

* 'ಯಸ್ತಾ ವಿಜಾನಾತ್ಸ ಪಿತುಷ್ಪಿತಾಽಸತ್'

-ಮ. ನಾ. ಉ. (2-4)

* ಯಶ್ಚ ತಾ (ಭಗವನ್ಮೂರ್ತೀಃ) ವ್ಯಜಾನಾತ್ ಸ ಪಿತುಃ ಪಿತಾಽಸತ್ ।

-ಕ. ನಿ. ಟೀ.

3 '. ನಾನಾ ಹ್ಯೇನಂ ವ್ಯಪದಿಶಂತಿ । ಪಿತೇತಿ. ..'

-ಪಾರಾಶರ್ಯಾಯಣಶ್ರುತಿ (ಬ. ಸೂ. 2-3-42)

೩. 4 ಶೂರಕುಲೋತ್ಪನ್ನತ್ವಾಚ್ಛೌರಿಃ । -ವಿ. ರಾ.

ವಸುದೇವನ ತಂದೆ ಶೂರಸೇನನು ಶೂರ ಎಂದೂ ಎನಿಸಿರುವನು ಭಗವಂತನು ಕೃಷ್ಣಾವತಾರದಲ್ಲಿ ಅಂತಹ ಶೂರನ ಗೋತ್ರದಲ್ಲಿ ಪ್ರಾದುರ್ಭವಿಸಿರುವನು

೪ ಶೂರ ಎನಿಸಿರುವ ತನ್ನ ಪುತ್ರನಂತೆ ಇರುವವನು[1]

ಭಗವಂತನು ತನ್ನ ಅವತಾರಕ್ಕೆ ದಶರಥ, ವಸುದೇವಾದಿಗಳನ್ನು ನಿಮಿತ್ತ ಮಾತ್ರ ಮಾಡಿಕೊಂಡಿರುವನು ಮುಖ್ಯವಾಗಿ ತನ್ನಿಂದಲೇ ತಾನು ಅವತರಿಸುವವನು[2] ಆದುದರಿಂದ ತಾನೇ ತನ್ನ ಪುತ್ರ ಎನಿಸಿರುವನು

[ಅರ್ಥವಿಶೇಷಗಳನ್ನು ೬೪೪ನೆಯ 'ಶೌರಿ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

## ಜಿಜ್ಞಾಸ

[ಸದ್ಗತಿ ಆಗದಿಂದು]

ಪ್ರ - 'ಅಪುತ್ರಸ್ಯ ಗತಿರ್ನಾಸ್ತಿ' ಈ ಶ್ರುತಿಯು ಪುತ್ರರಹಿತರಿಗೆ ಸದ್ಗತಿಯಾಗುವದಿಲ್ಲ ಎಂದು ಹೇಳುತ್ತದೆ ಆದ್ದರಿಂದ ನಾವು ಶಾಸ್ತ್ರಾಭ್ಯಾಸ ಮಾಡಿ ಬ್ರಹ್ಮಜ್ಞಾನವನ್ನು ಸಂಪಾದಿಸಿದರೂ ಮಕ್ಕಳು ಹುಟ್ಟದೆ ಇದ್ದರೆ ಸದ್ಗತಿಯಾಗದೆ ಇರುವ ಸಂಭವ ಇದೆ. ಆದ್ದರಿಂದ ಪುತ್ರರಹಿತನು ಬ್ರಹ್ಮಜ್ಞಾನವನ್ನು ಸಂಪಾದಿಸಿದ್ದು ವ್ಯರ್ಥವಾಗಲಿಕ್ಕಿಲ್ಲವೇ?

ಉ - 'ಯದೀಯರೂಪಂ ಪ್ರಕಟೀಕರೋತಿ ಪಿತಾ ಸ ತಸ್ಯೇತಿ ಹಿ ವೇದವಾದಃ' ಅಂದರೆ ಯಾರ ಸ್ವರೂಪವನ್ನು ಯಾರು ಪ್ರಸಿದ್ಧ ಮಾಡುತ್ತಾರೋ ಅವರಿಗೆ ಅವರು ತಂದೆ ಎಂದು ವೇದವಾಕ್ಯವು ಹೇಳುತ್ತದೆಂದು ರುಕ್ಮಿಣೀಶ ವಿಜಯದಲ್ಲಿ ಹೇಳಿರುತ್ತದೆ ಆದ್ದರಿಂದ ಶಾಸ್ತ್ರಾಭ್ಯಾಸವನ್ನು ಮಾಡಿ ಬ್ರಹ್ಮ ಸ್ವರೂಪವನ್ನು ಇತರರಿಗೆ ಬೋಧಿಸಿ ಪ್ರಸಿದ್ಧಿ ಮಾಡಿದಾಗ ಬ್ರಹ್ಮನ ತಂದೆಯು ಅವನು ಆಗುತ್ತಾನೆ ಆದ್ದರಿಂದ ಅವನಿಗೆ ಸದ್ಗತಿಯು ಖಂಡಿತವಾಗಿ ಆಗುತ್ತದೆ. ಲೌಕಿಕ ಪುತ್ರ ರಹಿತನೆಂಬ ಕಾರಣದಿಂದ ಅವನಿಗೆ ಗತಿ ಇಲ್ಲವೆಂದು ಆಗುವದಿಲ್ಲ



---

೪ 1 ವಿಶ್ವಮಿತ್ರಾಚ್ಛೂರಃ ಭಗವಾನ್ । ತಸ್ಯೈವಾಪತ್ಯಮಿತ್ಯರ್ಥೇ ಇಞ್ ಶೌರಿಃ ।

2 ಆತ್ಮೈವ......ಸೃಜತಿ ಪ್ರಭುಃ ।

-ಭಾಗ. 11 28-1

## ೩೪೨ ಜನೇಶ್ವರಃ

೧ ಜೀವಾತ್ಮರಿಗೆ ಪ್ರಭು ಆಗಿರುವವನು[1]

ಭಗವಂತನು ಯಾವಾಗಲೂ ಜೀವಾತ್ಮರಿಗೆ ಒಡೆಯನಾಗಿಯೇ ಇರುವವನು[2] ಸಕಲ ಜೀವಾತ್ಮರಿಗೂ ಅವನು ಒಡೆಯನಾಗಿರುವುದರಿಂದಲೇ ಇಂದ್ರನಾಮಕ ಭಗವಂತನನ್ನು 'ವಿಶ್ವಚರ್ಷಣೇ' ಎಂದೇ ಋಗ್ವೇದದಲ್ಲಿ ಸಂಬೋಧಿಸಲಾಗಿದೆ.[3]

೨ ಜೀವಾತ್ಮರಿಗೆ ಒಡೆಯರಾದವರಲ್ಲೆಲ್ಲ ಶ್ರೇಷ್ಠನಾಗಿರುವವನು.[4]

ಜೀವಾತ್ಮರಿಗೆ ಒಡೆಯರಾದ ಬ್ರಹ್ಮ ರುದ್ರಾದಿಗಳಿಗಿಂತೆಲ್ಲ ಶ್ರೇಷ್ಠನಾಗಿರುವುದರಿಂದಲೇ 'ಈಶ್ವರ' ಎನಿಸಿರುವವನು ಭಗವಂತನು—ಎಂದು 'ಬ್ರಹ್ಮವೈವರ್ತ' ಅಭಿಪ್ರಾಯಪಟ್ಟಿದೆ[5]

---

೧ 1 ಜನಾನಾಂ ಜೀವಾತ್ಮನಾಂ ಈಶ್ವರಃ ಪ್ರಭುಃ ಜನೇಶ್ವರಃ । 'ಜನಶಬ್ದಃ ಸ್ಮೃತೋ ಜೀವೇ ಕ್ವಚಿದ್ ದೇಹೇ ಚ ವರ್ತತೇ' ಇತಿ 'ಪ್ರಯೋಗೇ' (ಭಾಗ. ತಾ. ನಿ. 11–23-51) ಜನಶಬ್ದಸ್ಯ ಜೀವಾರ್ಥಕತ್ವಂ ಉಲ್ಲಿಖಿತಮ್ ।

2 '. ವಿಷ್ಣುಶ್ಚಿದಾನಂದತನುಃ ಸ ಹಿ ಜೀವಾಧಿಪಃ ಸದಾ'

–ಸತ್ತತ್ತ್ವ (ಭಾಗ. ತಾ. ನಿ 11-28 24)

3 '.. .ವಿಶ್ವಚರ್ಷಣೇ' –ಋ. ವೇ (9-3)

ವಿಶ್ವಜೀವೇಶ ..' –ಋ ಭಾ.

೨ 4 ಜನಾನಾಂ ಜೀವಾನಾಂ ಈಶಾಃ ಸ್ವಾಮಿನಃ ಜನೇಶಾಃ । ತೇಷು ವರಃ ಜನೇಶ್ವರಃ ।

5 ಈಶೇಭ್ಯೋ ಬ್ರಹ್ಮರುದ್ರಶ್ರೀಶೇಷಾದಿಭ್ಯೋ ಯತೋ ಭವಾನ್ ।
ವರೋऽತ ಈಶ್ವರಾಖ್ಯಾ ತೇ ಮುಖ್ಯಾ ನಾನ್ಯಸ್ಯ ಕಸ್ಯಚಿತ್ ।

–ಬ್ರಹ್ಮವೈವರ್ತ (ಗೀ. ಭಾ. 4-6)

೧ ಹುಟ್ಟದಿರುವವನು ಹಾಗೂ ಪ್ರಭು ಆಗಿರುವವನು[1]

೨ ಹುಟ್ಟದಿರುವವನು, ಸಮರ್ಥನಾದವನು ಹಾಗೂ ಉತ್ತಮನಾದವನು[2]

೩ ಎಲ್ಲವನ್ನೂ ಉತ್ಪಾದಿಸುವವನು, ತನಗೊಬ್ಬ ಒಡೆಯನಿಲ್ಲದವನು.[3]

೪ ದೇಹಗಳಿಗೆ ಪ್ರಭು ಆಗಿರುವವನು[4]

೫ ದೇಹಗಳಿಗೆ ಒಡೆಯರಾದ ತತ್ತ್ವಾಭಿಮಾನಿ ದೇವತೆಗಳಿಗಿಂತ ಶ್ರೇಷ್ಠನಾದವನು[5]

೬ ದೇಹಗಳಿಗೆ ಒಡೆಯರಾದ ತತ್ತ್ವಾಭಿಮಾನಿದೇವತೆಗಳಿಂದಲೂ ಆಶ್ರಯಿಸಲ್ಪಡುವವನು[6]

---

೧ 1 ನ ಜಾಯತ ಇತಿ ಜನಃ । ಜನಾರ್ದನ ಇತ್ಯತ್ರ ಜನಶಬ್ದಾರ್ಥಃ ಏವಮೇವ ಶ್ರೀಮದಾಚಾರ್ಯೈಃ ವ್ಯಾಖ್ಯಾತಃ—'ನ ಜಾಯತೇ ಅರ್ದಯತಿ ಚ ಸಂಸಾರಮಿತಿ ಜನಾರ್ದನಃ ।' ಜನಶ್ಚಾಸೌ ಈಶ್ವರಶ್ಚ ಜನೇಶ್ವರಃ ।

೨ 2 ನ ಜಾಯತ ಇತಿ ಜನಃ । ಈಷ್ಟೇ ಇತಿ ಈಶಃ । ಉತ್ತಮತ್ವಾತ್ ವರಃ । ಜನಶ್ಚಾಸೌ ಈಶಶ್ಚ ಜನೇಶಃ । ಜನೇಶಶ್ಚಾಸೌ ವರಶ್ಚ ಜನೇಶ್ವರಃ ।

೩ 3 ಸರ್ವಂ ಜನಯತಿ ಉತ್ಪಾದಯತೀತಿ ಜಃ ಜನೇರ್ಡಃ । ನ ಈಶ್ವರೋಽಸ್ಯಾಸ್ತೀತಿ ನೇಶ್ವರಃ । ಜಶ್ಚಾಸೌ ನೇಶ್ವರಃ ಜನೇಶ್ವರಃ ।
-ಶೇ. ಚಂ. ಆಧಾರೇಣ ।

೪ 4 ಜನಾನಾಂ ದೇಹಾನಾಂ ಈಶ್ವರಃ ಜನೇಶ್ವರಃ । 'ಜನಶಬ್ದಃ ಸ್ಮೃತೋ ಜೀವೇ ಕ್ವಚಿದ್ ದೇಹೇ ಚ ವರ್ತತೇ'-ಪ್ರಯೋಗೇ ಜನಶಬ್ದಸ್ಯ ದೇಹಾರ್ಥಕತ್ವಂ ಉಲ್ಲಿಖಿತಮ್ ।

೫ 5 ಜನಾನಾಂ ದೇಹಾನಾಂ ಈಶಾಃ ತತ್ತ್ವಾಭಿಮಾನಿನಃ ಜನೇಶಾಃ । ತೇಭ್ಯೋಽಪಿ ವರಃ ಜನೇಶ್ವರಃ ।

೬ 6 ಜನೇಶಾಃ ದೇಹಾನಾಂ ಸ್ವಾಮಿನಃ ತತ್ತ್ವಾಭಿಮಾನಿದೇವಾಃ । ತೈರಪಿ ವ್ರಿಯತೇ ಆಶ್ರಿಯತ ಇತಿ ಜನೇಶ್ವರಃ ।

ಜೀವಾತ್ಮರ ಶರೀರಕ್ಕೆ ತತ್ತ್ವಾಭಿಮಾನಿ ದೇವತೆಗಳು ಒಡೆಯರಾಗಿರುವರು. ಅವರೆಲ್ಲರಿಗೆ ಒಡೆಯನಾಗಿರುವವನು ಭಗವಂತನು ವಿಷ್ಣುನಾಮಕನಾದ ಭಗವಂತನು ಚತುರ್ಮುಖನ ಶರೀರವನ್ನು ಪ್ರವೇಶಿಸಿದ ಮೇಲೆಯೇ ಉಳಿದ ತತ್ತ್ವಾಭಿಮಾನಿದೇವತೆಗಳು ತಮ್ಮ ತಮ್ಮ ಪ್ರವೃತ್ತಿಯನ್ನು ಮಾಡಲು ಸಮರ್ಥರಾದಂತೆ,[1] ಉಳಿದ ಎಲ್ಲ ಜೀವರಲ್ಲೂ ಭಗವಂತನು ಮುಖ್ಯವಾಗಿ ಪ್ರೇರಿಸುತ್ತಿರುವುದರಿಂದಲೇ[2] ತತ್ತ್ವಾಭಿಮಾನಿದೇವತೆಗಳು ತಮ್ಮ ಚಟುವಟಿಕೆಯನ್ನು ನಿರ್ವಹಿಸುತ್ತಿರುವರು

೯ ಜನನವಿಲ್ಲದ ಮುಕ್ತಾತ್ಮರಿಗೆ ಒಡೆಯನಾಗಿರುವವನು[3]

೧೦ ಜನನವಿಲ್ಲದ ಮುಕ್ತಾತ್ಮರಿಗೆ ಒಡೆಯರಲ್ಲೆಲ್ಲ ಶ್ರೇಷ್ಠನಾಗಿರುವವನು[4]

ಮುಕ್ತಾತ್ಮರಿಗೆ ಪ್ರಾಣನಿಂದ ಪ್ರಾರಂಭಿಸಿ ಉಷಾ ದೇವಿಯವರೆಗೆ ಎಲ್ಲರೂ ಒಡೆಯರೇ ಶ್ರೀವಿಷ್ಣು ಎಲ್ಲ ಮುಕ್ತಾತ್ಮರಿಗೂ ಶ್ರೇಷ್ಠನಾದ ಒಡೆಯನೆನಿಸಿರುವನೆಂದು 'ವಾರಾಹ' ತಿಳಿಸಿದೆ[5]

೧೧ ಜನನವಿಲ್ಲದವನು ಹಾಗೂ ಲಕ್ಷ್ಮೀದೇವಿಗೆ ಒಡೆಯನಾಗಿರುವವನು[6]

---

1 ವಿಷ್ಣುರಿತ್ಯಭಿಧಾ ಮುಖ್ಯಂ ಸಾ ನ ಯುಕ್ತಾ ದಿವೌಕಸಾಮಪಿ । ಸ್ವತಂತ್ರತ್ವೇ ತತಃ ಸರ್ವೇ ಮದ್ವಶಾ ಏವ ನಾನ್ಯಥಾ । ತಸ್ಮಾದೇಷಾಂ ಪ್ರವೃತ್ತ್ಯರ್ಥಂ ಪ್ರವೇಕ್ಷ್ಯೇ ಸಹ ವಾಯುನಾ । ಇತಿ ಮತ್ವಾ ವಿರಿಂಚಸ್ಯ ಶರೀರಂ ಪ್ರವಿವೇಶ ಸಃ ।

- ಐತರೇಯ ಸಂಹಿತಾ (ಐ. ಉ. ಭಾ. 2 3-8)

2 ತಥಾ ಜೀವೇಷು ಸರ್ವೇಷು ಪ್ರವಿಷ್ಟಃ ಪ್ರೇರಣೇಚ್ಛಯಾ । ಕೋ ಹ್ಯನ್ಯಸ್ತ್ವಮೃತೇ ವಿಷ್ಣೋ ಏತತ್ ಕರ್ಮ ಕರಿಷ್ಯತಿ ।

–ಐತರೇಯ ಸಂಹಿತಾ (ಐ ಉ. ಭಾ. 2–3 9)

೯ 3 ನ ಜಾಯಂತ ಇತಿ ಜನಾಃ ಮುಕ್ತಾಃ । ತೇಷಾಮೀಶ್ವರಃ ಜನೇಶ್ವರಃ ।

೧೦ 4 ನ ಜಾಯಂತ ಇತಿ ಜನಾಃ ಮುಕ್ತಾಃ । ತೇಷಾಮೀಶಾಃ ಜನೇಶಾಃ ತೇಭ್ಯಃ ವರಃ ಜನೇಶ್ವರಃ ।

5 ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ । ಬ್ರಹ್ಮಾದಿಮಾನುಷಾಂತಾನಾಂ ಸರ್ವೇಷಾಮವಿಶೇಷತಃ । ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್।

–ವಾರಾಹ (ಬ್ರ. ಸೂ. ಭಾ. 4–4-9)

೧೧ 6 ನ ಜಾಯತೇ ಇತಿ ಜನಃ । ಅಸ್ಯ ಸ್ತ್ರೀ ಈ । ಯಾಃ ಈಶ್ವರಃ ಈಶ್ವರಃ । ಜನಶ್ಚಾಸಾವೀಶ್ವರಶ್ಚೇತಿ । –ಸ. ಸಂ

## ಜಿಜ್ಞಾಸೆ

['ಯದನುಗ್ರಹತಃ ಸಂತಿ']

ಪ್ರ - ಜೀವಾತ್ಮರಿಗೆ ಉತ್ಪತ್ತಿ ನಾಶಗಳು ಇಲ್ಲ. ಉತ್ಪತ್ತಿ ನಾಶಗಳು ಇಲ್ಲದ ವಸ್ತುಗಳಿಗೆ ಸರ್ವದಾ ಸ್ಥಿತಿಯು ಸ್ವತಃ ಇರುತ್ತದೆ ಆದುದರಿಂದ ಜೀವಾತ್ಮರಿಗೆ ಪರಮಾತ್ಮನು ಪ್ರಭು ಆಗುವುದು ಹೇಗೆ?

ಉ.- 'ಈ ವಸ್ತುವು ಸದಾ ಇರಲಿ' ಎಂದು ಪರಮಾತ್ಮನಿಗೆ ಇಚ್ಛೆ ಇದ್ದುದ್ದರಿಂದಲೇ ಜೀವನು ಉತ್ಪತ್ತಿ ನಾಶವಿಲ್ಲದೆ ಸದಾ ಇರುತ್ತಾನೆ. ಆ ಇಚ್ಛೆಯು ಪರಮಾತ್ಮನಿಗೆ ಇಲ್ಲವಾದರೆ ಜೀವಾದಿ ನಿತ್ಯ ವಸ್ತುಗಳು ಸದಾ ಇರಲಾರವು ಎಂದು 'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ' ಎಂಬ ಪ್ರಮಾಣದಿಂದ ಈ ವಿಷಯ ಸಿದ್ಧವಾಗಿದೆ



## ೩೪೩ ಅನುಕೂಲಃ

೧ (ಸಜ್ಜನರಿಗೆ) ಹಿತಕಾರಿಯಾಗಿರುವವನು[1]

ಶ್ರೀ ಕೃಷ್ಣನು ತಾನು ಜಗತ್ತಿಗೆ ಯಾವುದೇ ಕಾರಣವಿಲ್ಲದೆಯೇ ಉಪಕರಿಸುತ್ತಿರುವ ಪ್ರಯುಕ್ತ 'ಸುಹೃತ್' ಎನಿಸಿರುವೆನೆಂದು ಸಂದೇಶಿಸಿರುವನು[2] ಅಗ್ನಿನಾಮಕ ಭಗವಂತನು ಎಲ್ಲರಿಗೂ ಅನಾದಿಯಾಗಿ ಹಿತಕಾರಿಯಾಗಿರುವನೆಂದು ಅಗ್ನಿಸೂಕ್ತದಲ್ಲಿ ಬೋಧಿಸಲಾಗಿದೆ[3] ಅಜಾತಶತ್ರುವು

---

೧ 1 ಸುಜನ ಹಿತಕಾರಿತ್ವಾದನುಕೂಲಃ । -ವಿ. ರಾ.

* ಅನುಕೂಲೋ ಭಕ್ತಹಿತಕರಃ । -ಸ ಸಂ.

* ಅನುಕೂಲಂ ಸತಾಮ್ । -ರಾ ಸೂ

2 ಪಿತಾಽಹಮಸ್ಯ ಜಗತಃ ಸುಹೃತ್ ।
-ಗೀ. 9-18

* ಸುಹೃದನಿಮಿತ್ತೋಪಕಾರೀ । -ಗೀ. ವಿ.

3 'ಅಗ್ನಿಮೀಳೇ ಪುರೋಹಿತಂ ' -ಋ. ವೇ. 1-1

ದೃಪ್ತಬಾಲಕಿಯನ್ನು ಕುರಿತು ತಾನು ಬ್ರಹ್ಮನನ್ನು ಅನುಕೂಲನಾಗಿರುವವನೆಂಬುದಾಗಿಯೇ ಉಪಾಸಿಸುವುದಾಗಿ ತಿಳಿಸಿರುವನು. ಅಲ್ಲದೆ, ಹೀಗೆ ಭಗವಂತನು ತನಗೆ ಅನುಕೂಲನಾಗಿರುವನೆಂದು ಉಪಾಸಿಸುವವನ ಪಾಲಿಗೆ ಎಲ್ಲವೂ ಅನುಕೂಲವಾಗುವುದು. ಯಾವುದೂ ಪ್ರತಿಕೂಲವಾಗಲಾರದು ಅವನಿಗೆ ಅನುಕೂಲನಾದ ಪುತ್ರನೂ ಹುಟ್ಟುವನು —ಎಂಬುದಾಗಿ ಫಲವನ್ನು ತಿಳಿಸುವುದರ ಮೂಲಕ ಆ ರೀತಿಯ ಉಪಾಸನೆಯಲ್ಲಿ ತಾತ್ಪರ್ಯವನ್ನು ತೋರಿಸಲಾಗಿದೆ[1] ಭಗವಂತನು ಸಾಮಾನ್ಯವಾಗಿ ಎಲ್ಲರಿಗೂ ಅನುಕೂಲನಾಗಿರುವನೆಂದು ಪ್ರತಿಪಾದಿತನಾಗಿರುವನಾದರೂ, ವಿಶೇಷವಾಗಿ ಸಜ್ಜನರಿಗಷ್ಟೇ ಅನುಕೂಲನಾಗಿರುವವನು

೨ (ಜೀವಾತ್ಮರ ಸ್ವರೂಪ ಯೋಗ್ಯತೆಯನ್ನು) ಅನುಸರಿಸಿ, ಜೀವಾತ್ಮರ ಸ್ವರೂಪವನ್ನು, ತನ್ನ ಸ್ವರೂಪವನ್ನು (ಸ್ವಗುಣಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾ ಎಂಬ ಮಾಯೆಗಳಿಂದ) ಆವರಿಸುವವನು[2]

---

ತಂ ಸ್ವಾತ್ಮನ್ಯಶೇಷಸ್ಯ ಪೂರ್ವಮೇವ ಹಿತಂ ಪ್ರಭುಮ್ ।
-ಋ. ಭಾ

* ಪುರೋಹಿತಂ ಪುರಃ ಪೂರ್ವಮೇವಾನಾದಿತ ಏವ ಹಿತವಮ್। ಪ್ರತಿಸಂಬಂಧ್ಯಪೇಕ್ಷಾಯಾಮಶೇಷಸ್ಯೇತಿ ಶೇಷೋಕ್ತಿಃ । -ಋಂ ಭಾ ಟೀ

* ಪುರ ಇತಿ ರೇಫೋತ್ತರಸ್ಯಾಪ್ಯುದಾತ್ತಸ್ಯೋಚ್ಚತ್ವೈಸಾರ್ಥಃ । ತೇನ ನಿರವಧಿಕಂ ಪೂರ್ವತ್ವಮಾಹ। ಅನಾದಿತ ಇತಿ ಯಾವತ್ । -ಬ ಗೋ (ಋಂ ಭಾ. ಟಿ)

1 .ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾಃ ಪ್ರತಿರೂಪ ಇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಪ್ರತಿರೂಪಂ ಹೈವೈನಮುಪಗಚ್ಛತಿ ನಾಪ್ರತಿರೂಪಮಥೋ ಪ್ರತಿರೂಪೋಽಸ್ಮಾಜ್ಜಾಯತೇ ।

* ಪ್ರತಿರೂಪೋಽನುಕೂಲಃ । ಏನಂ ಉಪಾಸಕಂ ಸರ್ವಂ ಪ್ರತಿರೂಪಮೇವ ಉಪಗಚ್ಛತಿ। ಅವಧಾರಣವ್ಯಾವರ್ತ್ಯಮಾಹ-ನಾಪ್ರತಿರೂಪಮಿತಿ । ಅಥೋ ಅನ್ಯಚ್ಚ ಫಲಂ ಅಸ್ಮಾತ್ ಉಪಾಸಕಾತ್ ಪ್ರತಿರೂಪಃ ಅನುಕೂಲಃ ಪುತ್ರಃ ಜಾಯತ ಇತಿ ।
-ಭಾವಬೋಧಃ ।

೨ 2 ಜೀವಾತ್ಮನಾಂ ಸ್ವರೂಪಯೋಗ್ಯತಾಮನುಸೃತ್ಯ ಕೂಲತಿ ಜೀವಾತ್ಮನಾಂ ಸ್ವರೂಪಂ ಸ್ವಸ್ವರೂಪಂ ಚ ಮಾಯಾಭ್ಯಾಂ ಆವೃಣೋತೀತಿ ಅನುಕೂಲಃ। 'ಕೂಲ ಆವರಣೇ' ಇಗುಪಧಲಕ್ಷಣಃ ಕಃ ।

೩ (ಜೀವಾತ್ಮರ) ಸಮೀಪದಲ್ಲೇ (ಇದ್ದು) ತನ್ನನ್ನು ಆವರಿಸಿಕೊಳ್ಳುವವನು.[1]

೪ ಪೂರ್ಣನೆಂಬುದಾಗಿ ಸ್ತುತಿಸಲ್ಪಡುವವನು. (ತನ್ನನ್ನು) ಮಾಯೆಯಿಂದ ಆವರಿಸಿಕೊಳ್ಳುವವನು[2]

ಭಗವಂತನು ವೈದಿಕ ವಾಙ್ಮಯದಲ್ಲೆಲ್ಲ ಸ್ತುತ್ಯನಾಗಿರುವನು ಹೀಗಿದ್ದರೂ ಅಯೋಗ್ಯರು ಅವನನ್ನು ತಿಳಿಯಲಾರರು. ಗೀತಾಚಾರ್ಯನು ತನ್ನ ಸಾಮರ್ಥ್ಯ ಹಾಗೂ ಪ್ರಕೃತಿಯಿಂದ ಸಮಾವೃತನಾದ ತಾನು ಎಲ್ಲರಿಗೂ ಗೋಚರಿಸಲಾರೆನೆಂದು ಸಂದೇಶಿಸಿರುವನು[3]

೫ (ಎಲ್ಲರಿಗೂ) ಜೀವನ ಪ್ರದನು (ಬದುಕಲು ಅನುಕೂಲವಾಗುವಂತೆ ತನ್ನ ಅನುಗ್ರಹದ ಕವಚದಿಂದ) ಮುಚ್ಚುವವನು.[4]

೬ (ಜೀವಾತ್ಮರ ಸಾಮರ್ಥ್ಯಕ್ಕೆ) ಅನುಗುಣವಾಗಿ ಸ್ತುತಿಸಲ್ಪಡುವವನು. ಸರ್ವೋಚ್ಚ

---

೩ 1 ಅನು ಜೀವಾತ್ಮನಾಂ ಸಮೀಪೇ ಏವ ಸ್ಥಿತ್ವಾಽಪಿ ಕೂಲತಿ ತಾನ್ ಪ್ರತಿ ಸ್ವಾತ್ಮಾನಂ ಆವೃಣೋತೀತಿ ಅನುಕೂಲಃ । 'ಅನು ಸಮೀಪೇ ಚ'–ವಿಶ್ವಃ ।

೪ 2 ಪೂರ್ಣತ್ವಾತ್ 'ಅಃ' ಇತಿ ನಿಗದ್ಯತೇ ವೇದೈಃ ಸ್ತೂಯತ ಇತಿ ಅನುಃ । 'ಣು ಸ್ತುತೌ'। ಕೂಲತಿ ಯೋಗಸಹಿತಯಾ ಮಾಯಯಾ ಸ್ವಾತ್ಮಾನಂ ಅಯೋಗ್ಯಾನ್ ಪ್ರತಿ ಆವೃಣೋತೀತಿ ಕೂಲಃ । ಅನುಶ್ಚಾಸೌ ಕೂಲಶ್ಚ ಅನುಕೂಲಃ ।

3 ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।

–ಗೀ. 7-25

ಯೋಗೇನ ಸಾಮರ್ಥ್ಯೋಪಾಯೇನ ಮಾಯಯಾ ಚ ।

–ಗೀ. ಭಾ.

೫ 4 ಅನಿತಿ ಪ್ರಾಣಿತಿ ಸಮಸ್ತ ಜೀವಜಾತಂ ಅನೇನೇತಿ ಅನುಃ । 'ಅನ ಪ್ರಾಣನೇ' । ಕೂಲತಿ ಸ್ವಾನುಗ್ರಹಕವಚೇನ ಆವೃಣೋತೀತಿ ಕೂಲಃ ಅನುಶ್ಚಾಸೌ ಕೂಲಶ್ಚ ಅನುಕೂಲಃ ।

ನಾಗಿರುವವನು ಎಲ್ಲದರ ಒಡೆಯನಾಗಿರುವವನು[1]

ಭಗವಂತನು ಸರ್ವೋತ್ಕೃಷ್ಟನಾಗಿದ್ದು, ಸರ್ವಸ್ವಾಮಿ ಆಗಿರುವನು ಅಂತಹವನನ್ನು ಸಮಗ್ರವಾಗಿ ಸ್ತುತಿಸಲು ಸಾಧ್ಯವೇ ಇಲ್ಲ, ಅವರವರ ಸಾಮರ್ಥ್ಯಕ್ಕೆ ಅನುಗುಣವಾಗಿಯಷ್ಟೇ ಸ್ತುತಿಸಬಹುದು. ಆಕಾಶ ಎಷ್ಟೇ ವಿಶಾಲವಾಗಿರುವುದಾದರೂ ಅದರಲ್ಲಿ ಪಕ್ಷಿಗಳು ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿಯಷ್ಟೇ ಎತ್ತರ ಏರಬಲ್ಲವು ಹಾಗೆಯೇ ಜ್ಞಾನಿಗಳು ಅನಂತನಾದ ಭಗವಂತನನ್ನು ತಮಗೆ ಸಾಮರ್ಥ್ಯವಿರುವಷ್ಟೇ ತಿಳಿಯುವುದು. ಅಂತೆಯೇ ಸ್ತುತಿಸುವುದು.[2]

೭ ಗಂಗಾದಿ ನದಿಗಳ ದಡವನ್ನು ಅನುಸರಿಸಿ ಇರುವವನು[3]

ಜಲಾಶಯದಿಂದ ನಾಲ್ಕು ಹಸ್ತಗಳಷ್ಟು ದೂರದವರೆಗೆ ನಾರಾಯಣ ಕ್ಷೇತ್ರವೆನಿಸಿದ್ದು, ಅಲ್ಲಿ ಶ್ರೀ ಹರಿಯು ವಿಶೇಷವಾಗಿ ಸನ್ನಿಹಿತನಾಗಿರುವವನು[4]

## ಜಿಜ್ಞಾಸೆ

[ಸುಖವು ಜ್ಞಾನರೂಪವಲ್ಲ]

ಪ್ರ - ರಾಮಾನುಜಾಚಾರ್ಯರು ಸುಖವೆಂಬ ಗುಣವನ್ನು 'ಇದಂ ಮಮ ಅನುಕೂಲಂ' ಎಂಬ ಜ್ಞಾನರೂಪವೆಂದು, ಈ ಜ್ಞಾನಕ್ಕಿಂತ ಅತಿರಿಕ್ತವಾದ ಸುಖವೆಂಬ ಗುಣವು ಇಲ್ಲವೆಂದು ಹೇಳುತ್ತಾರೆ ಅದು ಯುಕ್ತವೋ?

---

೬ 1 ಅನು ಜೀವಾತ್ಮನಾಂ ಸಾಮರ್ಥ್ಯಮನುಸೃತ್ಯ ಕೂಯತೇ ಸ್ತೂಯತ ಇತಿ ಅನುಕ್ಕುಃ- ಕುಙ್ ಶಬ್ದೇ । ಸರ್ವೇಭ್ಯಃ ಸಕಾಶಾತ್ ಉಚ್ಚತ್ವಾತ್ ಉಃ । ಲಾತಿ ಸರ್ವಮಾತ್ಮೀಯತಯಾ ಆದತ್ತ ಇತಿ ಲಃ । ಲಾ ಆದಾನೇ । ಅನುಕುಶ್ಚಾಸೌ ಉಶ್ಚ ಅನುಕೂಃ । ಅನುಕೂಶ್ಚಾಸೌ ಲಶ್ಚ ಅನುಕೂಲಃ ।

2 'ನಭಃ ಪತಂತ್ಯಾತ್ಮಸಮಂ ಪತತ್ತ್ರಿಣಸ್ತಥಾ ಸಮಂ ವಿಷ್ಣುಗತಿಂ ವಿಪಶ್ಚಿತಃ'

–ಭಾಗ. 1–18–23

೭ 3 ಗಂಗಾದಿಕೂಲಮನುಸೃತ್ಯ ವಿದ್ಯಮಾನಃ ಅನುಕೂಲಃ ।

–ಸ. ಸಂ.

4 ಜಲಾಶಯಂ ಸಮಾರಭ್ಯ ಯಾವದ್ಧಸ್ತಚತುಷ್ಟಯಮ್ । ತಾವನ್ನಾರಾಯಣಕ್ಷೇತ್ರಂ ತತ್ರ ಸನ್ನಿಹಿತೋ ಹರಿಃ । –ಸ್ಮೃತಿಃ (ಸ. ಸಂ. ಉದ್ಧೃತಾ)

೮ - ಸುಖರೂಪನಾದ ಪರಮಾತ್ಮನನ್ನು ಅನುಕೂಲಜ್ಞಾನರೂಪನೆಂದು ಹೇಳಬೇಕಾಗಿತ್ತು. ಪರಮಾತ್ಮನನ್ನು ಅನುಕೂಲ ಜ್ಞಾನರೂಪನು ಎಂದು ಹೇಳದೆ ಅನುಕೂಲನು ಎಂದು ಹೇಳಿದ್ದರಿಂದ ಸುಖವನ್ನು ರಾಮಾನುಜಾಚಾರ್ಯರು 'ಇದಂ ಮಮ ಅನುಕೂಲಂ' ಎಂಬ ಜ್ಞಾನರೂಪವೆಂದು ಹೇಳಿದ್ದು ಯುಕ್ತವಲ್ಲ



## ೩೪೪ ಶತಾವರ್ತಃ

೧ ನೂರಾರು ಅವತಾರಗಳುಳ್ಳವನು.[1]

೨ ಸುಖಾತ್ಮಕಗಳಾದ, ಹಾಗೂ ವ್ಯಾಪ್ತಗಳಾದ ಅವತಾರಗಳುಳ್ಳವನು[2]

ಎತ್ತರದ ಸರೋವರದಿಂದ ಸಾವಿರಾರು ತೊರೆಗಳು ಹರಿಯುವಂತೆ ಗುಣಸಮುದಾಯಕ್ಕೆ ನಿಧಿಯಾದ ಶ್ರೀಹರಿಗೆ ಅಸಂಖ್ಯಾತ ಅವತಾರಗಳಿವೆ ಎಂಬುದಾಗಿ ಉಗ್ರಶ್ರವಸ್ಸು ಹೇಳಿರುವನು[3] ಈ ಅವತಾರಗಳೆಲ್ಲ ಮೂಲರೂಪಿಯಾದ ಪದ್ಮನಾಭನೇ ಆಗಿದ್ದು,[4] ಅವನಂತೆಯೇ ಸುಖಾತ್ಮಕಗಳು ಹಾಗೂ ವ್ಯಾಪ್ತಗಳು.

---

೧ 1 ಶತಶಬ್ದೋಽನಂತವಾಚೀ । ('ಶಬ್ದೋ ಬಹುತ್ವವಚನಃ 'ಶತವಿಂತಿ'. (ಮ. ಭಾರ. ತಾ. ನಿ. 1-16) ಇತಿ ನಿರೂಪಿತದಿಶಾ) ಧರ್ಮತ್ರಾಣಾಯ ಶತಮಾವರ್ತನಮವತಾರಾ ಅಸ್ಯೇತಿ ಶತಾವರ್ತಃ । -ವಿ. ರಾ.

೨ 2 ಸುಖಾತ್ಮಕತ್ವಾತ್ ಶಾಃ ವ್ಯಾಪ್ತತ್ವಾತ್ ತಾಃ ಶಾಶ್ಚ ತೇ ತಾಶ್ಚ ಶತಾಃ। ಶತಾಃ ಆವರ್ತಾಃ ಅವತಾರಾಃ ಯಸ್ಯ ಸಃ ಶತಾವರ್ತಃ ।

3 ಅವತಾರಾ ಹ್ಯಸಂಖ್ಯೇಯಾ ಹರೇಃ ಸತ್ತ್ವನಿಧೇರ್ದ್ವಿಜಾಃ । ಯಥಾ ವಿದಾಸಿನಃ ಕುಲ್ಯಾಃ ಸರಸಃ ಸ್ಯುಃ ಸಹಸ್ರಶಃ ॥ -ಭಾಗ. 1-3-26

4 ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।
-ಭಾಗ. 1-3-28

ಏತೇ ಪ್ರೋಕ್ತಾವತಾರಾಃ । ಮೂಲರೂಪೀ ಸ್ವಯಮೇವ ।
-ಭಾಗ. ತಾ. ನಿ.

ನೂರು ದೇವತೆಗಳನ್ನು ಸೋಮಪಾಧಿಕಾರಿಗಳನ್ನಾಗಿ ಪ್ರವರ್ತಿಸುವವನು.[1]

ನವಕೋಟಿ ದೇವತೆಗಳಲ್ಲಿ ಪರಾವರಬ್ರಹ್ಮರನ್ನು ಬಿಟ್ಟರೆ ಪ್ರಧಾನ ವಾಯು, ಅಷ್ಟವಸುಗಳು, ಏಕಾದಶರುದ್ರರು, ನಲ್ವತ್ತೊಂಭತ್ತು ಮರುತ್‌ಗಳು, ದ್ವಾದಶಾದಿತ್ಯರು, ಹತ್ತು ವಿಶ್ವೇದೇವತೆಗಳು, ಬೃಹಸ್ಪತಿ, ಮೂವರು ಪಿತೃಪತಿಗಳು, ಇಬ್ಬರು ಅಶ್ವಿನೀದೇವತೆಗಳು, ಋಭು, ದ್ಯಾ ಹಾಗೂ ಪೃಥಿವೀ—ಹೀಗೆ ನೂರು ಮಂದಿ ಸೋಮಪಾನಾಧಿಕಾರಿಗಳು[2] ಸೋಮಪಾನಾಧಿಕಾರಿಗಳಾಗುವಂತೆ ಅವರನ್ನು ನಡೆಸುವವನು ಭಗವಂತನೇ

ಳ (ಅಮೃತಪಾನಕ್ಕೆ ಯೋಗ್ಯರಾದ ದೇವತೆಗಳ) ನೂರರ ಸಮುದಾಯವನ್ನು ತತ್ತ್ವದೇವತೆಗಳಾಗಿ ಪ್ರವರ್ತಿಸುವವನು[3]

ಚತುರ್ಮುಖ, ಪ್ರಧಾನವಾಯು, ಗರುಡ, ಶೇಷ, ರುದ್ರ, ಇಂದ್ರ, ಕಾಮ ಅಹಂಪ್ರಾಣ, ಅನಿರುದ್ಧ, ಸ್ವಾಯಂಭುವಮನು, ಬೃಹಸ್ಪತಿ, ದಕ್ಷ, ಪ್ರವಹ, ಯಮ, ಸೂರ್ಯ, ವರುಣ, ಅಗ್ನಿ, ಭೃಗು, ಮಿತ್ರ, ನಿರ್ಋತಿ, ಗಣಪತಿ, ಕುಬೇರ, ಅಶ್ವಿದ್ವಯ, ನಲ್ವತ್ತೇಳು ಮಂದಿ ಮರುತ್ತುಗಳು, ಹತ್ತು ಮಂದಿ ರುದ್ರರು, ಏಳುಮಂದಿ ವಸುಗಳು ಹಾಗೂ ಆರುಮಂದಿ ಆದಿತ್ಯರು—ಹೀಗೆ ಒಟ್ಟು

---

ಶ 1 ಶತಂ ಶತಸಂಖ್ಯಾಕಾನ್ ದೇವಾನ್ ಸೋಮಾಧಿಕಾರಿತ್ವೇನ ಆವರ್ತಯತಿ ಪ್ರವರ್ತಯತೀತಿ ಶತಾವರ್ತಃ ।

2 'ನವಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು ।' ಸೋಮಾಧಿಕಾರೋ ವೇದೋಕ್ತೋ ಬ್ರಹ್ಮಣೀ ದ್ವೇ ಶತಾಧಿಕೇ..।'

—ಬ್ರ. ಸೂ ಭಾ. 3-4-11

ಯಥಾ ನವಕೋಟೀನಾಂ ದೇವಾನಾಂ ಮಧ್ಯೇ ಶತಮೇವ ಸೋಮಾಧಿಕಾರಿಣಃ ಪ್ರಧಾನವಾಯುವಸುರುದ್ರಮರುದಾದಿತ್ಯಾದಯೋ ವಿಶ್ವೇದೇವಾಃ ಬೃಹಸ್ಪತಿಃ ಪಿತೃಪತಯಃ ಅಶ್ವಿನೌ ಋಭವೋ ದ್ಯಾವಾಪೃಥಿವ್ಯಂತಾಃ । ದ್ವೇ ಬ್ರಹ್ಮಣೀ ಪರಾವರೇ ಪರಂ ವಿಷ್ಣ್ವಾಖ್ಯಮವರಂ ಚತುರ್ಮುಖಮ್ ।

—ತತ್ತ್ವದೀಪಿಕಾ

ಳ 3 ಶತಂ ಅಮೃತಪಾನಯೋಗ್ಯದೇವಾನಾಂ ಶತಗಣಂ ಆ ಸಮಂತಾತ್ ತತ್ತ್ವದೇವತಾರೂಪೇಣ ಪ್ರವರ್ತಯತೀತಿ ಶತಾವರ್ತಃ । —ವಾ. ರಾ.

ತೊಂಭತ್ತನಾಲ್ಕು ದೇವತೆಗಳನ್ನು ತತ್ತ್ವಾಭಿಮಾನಿಗಳನ್ನಾಗಿ ಚಕ್ರವನ್ನೆಂಬಂತೆ ವಿಶೇಷವಾಗಿ ಪ್ರೇರಿಸುತ್ತಿರುವನೆಂಬುದಾಗಿ ಋಗ್ವೇದ ಸಂದೇಶಿಸಿದೆ[1]

೫ ನೂರಾರು ಸಂಸಾರಯೋಗ್ಯರನ್ನು ಸಂಸಾರದಲ್ಲಿ ಆಡ್ಡಾಡಿಸುತ್ತಿರುವವನು.[2]

೬ (ಜೀವಾತ್ಮನ ದೇಹದಲ್ಲಿರುವ) ನೂರು ನಾಡಿಗಳಲ್ಲಿ ಚೆನ್ನಾಗಿ ಇರುವವನು.[3]

೭ ನೂರಾರು ಜೀವಾತ್ಮರಲ್ಲಿ ಚೆನ್ನಾಗಿ ಇರುವವನು.[4]

೮ ನೂರಾರು ನೀರಿನ ಸುಳಿಯೇ ಮುಂತಾದವುಗಳಿಗೆ ಕಾರಣನಾಗಿರುವವನು.[5]

೯ ಸುಖಸ್ವರೂಪಿ, ವ್ಯಾಪ್ತ ಹಾಗೂ ಜಗತ್ತನ್ನು ನಡೆಸುವವನು[6]

---

1 'ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಂರವೀವಿಪತ್'
-ಬ್ರ. ಸೂ. ಭಾ. 1-1-2

* ಶತಸಂಖ್ಯಾಸಮೀಪವರ್ತಿಸಂಖ್ಯಾಕತ್ವಾತ್ ಶತಸಂಖ್ಯಾಕಾ ಇತ್ಯೇವ ನಿರ್ದಿಷ್ಟಮ್ |

೫ 2 ಶತಂ ಅನಂತಾಃ ಸಂಸಾರಯೋಗ್ಯಾಃ, ತಾನ್ ಸಂಸಾರೇ ಆವರ್ತಯತಿ ಭ್ರಾಮಯತೀತಿ ಶತಾವರ್ತಃ |

೬ 3 ಶತೇ ಶತಸಂಖ್ಯಾಕಾಸು ನಾಡೀಷು ಆ ಸಮ್ಯಕ್ ವರ್ತತ ಇತಿ ಶತಾವರ್ತಃ |
-ಶಾಂ. ಭಾ.

೭ 4 ಶತೇ ಅನಂತೇಷು ಜೀವೇಷು ಆ ಸಮ್ಯಕ್ ವರ್ತತ ಇತಿ ಶತಾವರ್ತಃ |

೮ 5 ಶತಂ ಅನಂತಾಃ ಆವರ್ತಾಃ ಆವರ್ತೋಪಲಕ್ಷಿತಾಃ ಜಲಸ್ಯ ವ್ಯಾಪಾರಾಃ ಯಸ್ಮಾತ್ ಸಃ ಶತಾವರ್ತಃ |

೯ 6 ಸುಖರೂಪತ್ವಾತ್ ಶಃ ವ್ಯಾಪ್ತತ್ವಾತ್ ತಃ । ಆವರ್ತಯತಿ ಜಗತ್ ಪ್ರೇರಯತೀತಿ ಆವರ್ತಃ ।

## ಜಿಜ್ಞಾಸೆ

[ಪ್ರಾದುರ್ಭಾವವೇ ಅವತಾರ]

ಪ್ರ – ಪರಮಾತ್ಮನು ಅನೇಕಾವತಾರಗಳುಳ್ಳವನು ಎಂದು ಹೇಳುವದು ಅವನ ಗುಣಗಾನರೂಪವಾಗುವದು ಹೇಗೆ? ಅವತಾರವೆಂದರೆ ಉಚ್ಚ ಸ್ಥಾನದಿಂದ ಕೆಳಗಿನ ಸ್ಥಾನಕ್ಕೆ ಬರುವದು ಅದು ಗುಣವಾಗಲಾರದು ಅಲ್ಲವೇ?

ಉ:- ಬಾವಿಯಲ್ಲಿ ಬಿದ್ದವನನ್ನು ಮೇಲೆ ತರುವದಕ್ಕಾಗಿ ಸಮರ್ಥರಾದವರು ಬಾವಿಗೆ ಇಳಿಯುತ್ತಾರೆ. ಬಾವಿಗೆ ಬಿದ್ದವರನ್ನು ಮೇಲೆ ತರುತ್ತಾರೆ ಅದರಂತೆ ಸಂಸಾರ ಸಮುದ್ರದಲ್ಲಿ ಬಿದ್ದವರನ್ನು ಉದ್ಧಾರ ಮಾಡುವದಕ್ಕಾಗಿ ವೈಕುಂಠವಾಸಿ ಪರಮಾತ್ಮನು ಭೂಮಿಗೆ ಬರುತ್ತಾನೆ ವಸ್ತುತಃ ಅವತಾರವೆಂದರೆ ಸರ್ವತ್ರ ಇದ್ದ ಪರಮಾತ್ಮನು ಅಲ್ಲಲ್ಲಿ ಪ್ರಾದುರ್ಭೂತನಾಗುವದೇ. ಕೆಳಗೆ ಇಳಿಯುವದು ಎಂಬುದು ಆಪಾತಾರ್ಥ



### ೩೪೫ ಪದ್ಮೀ

೧ ಚತುರ್ಮುಖನನ್ನು ಪುತ್ರನನ್ನಾಗಿ ಪಡೆದಿರುವವನು.[1]

ಭಗವಂತನು ಮಹತ್ತತ್ತ್ವವೇ ಆಕೃತಿಯಂತೆ ಉಳ್ಳ ಚತುರ್ಮುಖನನ್ನು ಎಲ್ಲರಿಗಿಂತಲೂ ಮೊದಲು ತನ್ನ ನಾಭಿಕಮಲದಿಂದ ಸೃಷ್ಟಿಸಿರುವನೆಂಬುದಾಗಿ ಶ್ರೀಮದಾಚಾರ್ಯರು ಸ್ತುತಿಸಿರುವರು[2]

೨ ಚತುರ್ಮುಖನನ್ನು ಸೃಷ್ಟಿಗೆ ದ್ವಾರನನ್ನಾಗಿ ಪಡೆದಿರುವವನು.[3]

---

೧ 1 ಪದ್ಮೋ ಬ್ರಹ್ಮಾ ಪುತ್ರತ್ವೇನಾಸ್ಯಾಸ್ತೀತಿ ಪದ್ಮೀ ।
–ಸ. ಸಂ.

'ಪದ್ಮೋ ಬ್ರಹ್ಮಾ ಸಮುದ್ದಿಷ್ಟಃ ಪದ್ಮಾ ಶ್ರೀರಪಿ ಚೋಚ್ಯತೇ' -ಬ್ರಾಹ್ಮೇ (ಭಾಗ. ತಾ. ನಿ. 3-1-26) ಚತುರ್ಮುಖಸ್ಯಾಪಿ ಪದ್ಮನಾಮತ್ವಂ ನಿರೂಪಿತಮ್ ।

2 ಅಗ್ರಜಂ ಯಃ ಸಸರ್ಜಾಜಮಗ್ರ್ಯಾಕೃತಿಂ....ಪ್ರೀಣಯಾಮೋ ವಾಸುದೇವಮ್'
–ದ್ವಾ ಸ್ತೋ.

೨ 3 ಪದ್ಮೋ ಬ್ರಹ್ಮಾ ಸೋಽಸ್ಯ ಸರ್ಗದ್ವಾರತ್ವೇನಾಸ್ತೀತಿ ಪದ್ಮೀ ।
–ವಿ. ರಾ.

ಜಗತ್ತಿನ ಸೃಷ್ಟ್ಯಾದಿಗಳನ್ನೆಲ್ಲ ಸ್ವತಂತ್ರವಾಗಿ ಭಗವಂತನೇ ನಿರ್ವಹಿಸುತ್ತಿದ್ದು, ಸೃಷ್ಟಿಯನ್ನು ಚತುರ್ಮುಖನ ಮೂಲಕ ನಡೆಸುವನು[1]

೩ ಲಕ್ಷ್ಮೀದೇವಿಯನ್ನು ಪತ್ನಿಯಾಗಿ ಹೊಂದಿರುವವನು.[2]

೪ ಕಮಲವನ್ನು ಹಸ್ತದಲ್ಲಿ ಧರಿಸಿಕೊಂಡಿರುವವನು[3]

ಭಗವಂತನು ತನ್ನ ನಾಲ್ಕು ಕೈಗಳಲ್ಲಿ ಧರಿಸಿಕೊಂಡಿರುವವುಗಳಲ್ಲಿ ಪದ್ಮವೂ ಒಂದಾಗಿದೆ[4] ಕೆಂಪು ಬಣ್ಣದ ರಜೋಗುಣಕ್ಕೆ ನಿಯಾಮಕಳಾದ ಭೂ ಎನಿಸುವ ಲಕ್ಷ್ಮೀದೇವಿಯೇ ಆ ಕೆಂಪು ಪದ್ಮ ಆಗಿರುವಳು[5] ಅಂತಹ ಪದ್ಮವನ್ನು ಭಗವಂತನು ನಿತ್ಯವೂ ಧರಿಸಿಕೊಂಡಿರುವನು

೫ ಹೃದಯಕಮಲವನ್ನು ತನ್ನ ವಾಸಸ್ಥಾನವಾಗಿ ಪಡೆದಿರುವವನು.[6]

ಜೀವಾತ್ಮರ ದೇಹವು 'ಬ್ರಹ್ಮಪುರ' ಎನಿಸಿದ್ದು, ಇದರ ಪುಂಡರೀಕ ಎನಿಸುವ ಹೃದಯಾಕಾಶದಲ್ಲಿ ಭಗವಂತನು ನೆಲಸಿರುವನೆಂದು ಉಪನಿಷತ್ತು ಸಂದೇಶಿಸಿದೆ.[7]

---

1 'ಸ ಬ್ರಹ್ಮಣಾ ವಿಸೃಜತಿ ..ಸೋಽನುತ್ಪತ್ತಿರಲಯ ಏಕ ಏವ ಹರಿಃ ಪರಃ ಪರಾನಂದಃ'
-ಮಹೋಪನಿಷತ್ (ಬ್ರ. ಸೂ. ಭಾ. 2-3-13)

೩ 2 '. ಪದ್ಮಾ ಶ್ರೀರಪಿ ಚೋಚ್ಯತೇ'-ಇತಿ ಬ್ರಾಹ್ಮೇ (ಭಾಗ.ತಾ. ನಿ 3-1-26)ನಿರೂಪಿತದಿಶಾ ಪದ್ಮಾ ಶ್ರೀಃ ಪತ್ನೀತ್ವೇನಾಸ್ಯಾಸ್ತೀತಿ ಪದ್ಮೀ ।

೪ 3 ಪದ್ಮಂ ಹಸ್ತೇಽಸ್ತೀತಿ ಪದ್ಮೀ ।

4 ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ । -ದ್ವಾ. ಸ್ತೋ.

5 '. ಅಧೋ ರಜಃಸ್ಥಾ ಭೂರ್ನಾಮಿಕಾ ಪದ್ಮಮಭೂದ್ಧರೇರ್ಹಿ '
-ಮ. ಭಾರ. ತಾ. ನಿ. 3-76

* ಪದ್ಮಸ್ಯ ತು ರಕ್ತವರ್ಣತ್ವೇನ ರಕ್ತವರ್ಣರಜೋಭಿಮಾನಿಭೂರೂಪತ್ವಮಿತಿ ಜ್ಞೇಯಮ್
-ಭಾ. ಪ್ರ.

೫ 6 ಪದ್ಮಂ ಹೃದಯಪದ್ಮಂ ವಾಸಸ್ಥಾನತ್ವೇನಾಸ್ಯಾಸ್ತೀತಿ ಪದ್ಮೀ ।

7 ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಮ್ ..। -ಛಾಂ. ಉ. 8-1-1

## ಜಿಜ್ಞಾಸೆ

### [ಪದ್ಮ ಧಾರಣೆಯ ಉದ್ದೇಶ]

ಪ್ರ:— ಪರಮಾತ್ಮನು ತನ್ನ ಕೈಯಲ್ಲಿ ಪದ್ಮವನ್ನು ಧರಿಸುತ್ತಾನೆ, ಅದು ಏಕೆ?

ಉ — ಕಮಲವು ಪುಷ್ಪಗಳಲ್ಲಿ ಶ್ರೇಷ್ಠವಾದದ್ದು ಕಮಲದಲ್ಲಿ ನಿತ್ಯವೂ ಲಕ್ಷ್ಮಿಯು ಸನ್ನಿಹಿತಳಾಗಿದ್ದಾಳೆ ಕಮಲ ಪುಷ್ಪವನ್ನು ನನಗೆ ಅರ್ಪಿಸಿ ನನ್ನ ಪೂಜೆಯನ್ನು ಮಾಡಬೇಕು ಲಕ್ಷ್ಮಿಯನ್ನು ನನಗೆ ಸಮರ್ಪಿಸಿದಂತೆ ಆಗುತ್ತದೆ ಸಮುದ್ರದಲ್ಲಿ ಪ್ರಾದುರ್ಭೂತಳಾದ ಲಕ್ಷ್ಮಿಯನ್ನು ವರುಣನು ಸಮರ್ಪಿಸಿದನು ಆ ಸಮಾರಂಭವನ್ನು ನೋಡಲಿಕ್ಕೆ ಎಲ್ಲ ದೇವತೆಗಳು ಬಂದಿದ್ದರು, ಜನಕ ಮಹಾರಾಜನು ಲಕ್ಷ್ಮೀಸ್ವರೂಪಳಾದ ಸೀತೆಯನ್ನು ಶ್ರೀರಾಮಚಂದ್ರ ಸ್ವರೂಪನಾದ ನನಗೆ ಅರ್ಪಿಸಿದನು ಆಗಲೂ ಸಮಸ್ತ ದೇವತೆಗಳು ಆಕಾಶಮಾರ್ಗದಲ್ಲಿ ಬಂದು ಆ ಸಮಾರಂಭವನ್ನು ನೋಡಿದರು ಅದರಂತೆ ಭಕ್ತರು ನಿತ್ಯ ನನ್ನ ಪೂಜೆ ಮಾಡುವಾಗ ಲಕ್ಷ್ಮೀನಿವಾಸಸ್ಥಾನವಾದ ಪದ್ಮವನ್ನು ಅರ್ಪಿಸಿ ಪೂಜೆ ಮಾಡಿದರೆ ಈ ಸಮಾರಂಭಕ್ಕೆ ದೇವತೆಗಳು ಬರುತ್ತಾರೆ. ದೇವತೆಗಳು ಮತ್ತು ನಾನು ಸಂತುಷ್ಟರಾಗುತ್ತೇವೆ ಎಂದು ತಿಳಿಸುವದಕ್ಕಾಗಿ ಪದ್ಮವನ್ನು ಪರಮಾತ್ಮನು ಧರಿಸಿದ್ದಾನೆ.



## ೩೪೩ ಪದ್ಮನಿಭೇಕ್ಷಣಃ

೧ ಪದ್ಮದಂತೆ ಕಣ್ಣುಗಳುಳ್ಳವನು[1]

೨ ಪದ್ಮದಂತೆ ಅರಳಿದ ಜ್ಞಾನ ಉಳ್ಳವನು[2]

ಭಗವಂತನ ಜ್ಞಾನವು ನಿರತಿಶಯ ಸ್ಪಷ್ಟತೆಯನ್ನೊಳಗೊಂಡಿದ್ದು[3] ಪ್ರತಿಯೊಂದು ಪದಾರ್ಥ

---

೧ 1 ಪದ್ಮನಿಭೇ ಈಕ್ಷಣೇ (ನೇತ್ರೇ) ಯಸ್ಯ ಸಃ ಪದ್ಮನಿಭೇಕ್ಷಣಃ ।

—ಸ. ಸಂ.

ಭಗವತಃ ನೇತ್ರಯೋಃ ಪದ್ಮಸಾದೃಶ್ಯಮಧಿಕೃತ್ಯ ಪುಷ್ಕರಾಕ್ಷಃ (೪೦) ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಮ್ ।

೨ 2 ಪದ್ಮನಿಭಂ ವಿಕಸಿತಮೀಕ್ಷಣಂ ಜ್ಞಾನಮಸ್ಯೇತಿ ಪದ್ಮನಿಭೇಕ್ಷಣಃ ।

—ವಿ. ರಾ.

3 ಸ್ಪಷ್ಟತ್ವೇ ಭೇದಃ —ಪ್ರ. ಲ.

ವನ್ನೂ ಸೂಕ್ಷ್ಮವಾಗಿ ವಿಷಯೀಕರಿಸುವುದು.

೩ ಕಮಲಗಳನ್ನು ಪ್ರೇರಿಸುವ ಸೂರ್ಯನಂತೆ ಕಾಂತಿಯುಕ್ತವಾದ ನೇತ್ರ ಉಳ್ಳವನು.[1]

ಭಗವಂತನ ವಿಶ್ವರೂಪವು ಪ್ರಜ್ವಲಿಸುವಂತಹ ಹಾಗೂ ವಿಶಾಲಗಳಾದ ನೇತ್ರಗಳನ್ನೊಳಗೊಂಡಿರುವಂತಹದ್ದೆಂದು ಅರ್ಜುನನು ಅಭಿಪ್ರಾಯಪಟ್ಟಿರುವನು[2]

೪ ಪದ್ಮಗಳಿಗೆ ಗೆಳೆಯನಾಗಿರುವ ಸೂರ್ಯನು ಹಾಗೂ ಚೆನ್ನಾಗಿ ಕಾಂತಿವುಳ್ಳ ಚಂದ್ರನು ಯಾರ ಕಣ್ಣುಗಳನ್ನು ಆಶ್ರಯಿಸಿಕೊಂಡಿರುವನೋ ಅಂತಹವನು.[3]

ಭಗವಂತನ ಕಣ್ಣುಗಳನ್ನು ಸೂರ್ಯನೂ, ಚಂದ್ರನೂ ಆಶ್ರಯಿಸಿಕೊಂಡಿರುವರೆಂಬ ಅಭಿಪ್ರಾಯದಲ್ಲೇ, ವಿಶ್ವರೂಪಿ ಭಗವಂತನನ್ನು 'ಶಶಿಸೂರ್ಯನೇತ್ರ'ನೆಂದು ಸ್ತುತಿಸಲಾಗಿದೆ[4]

---

ತತ್ರೇಶಜ್ಞಾನಂ ನಿರತಿಶಯಸ್ಪಷ್ಟಮ್ । ನ ತಥಾ ಲಕ್ಷ್ಮೀಜ್ಞಾನಮಿತ್ಯೇವ ವಿಶೇಷಃ ।

-ಪ್ರ. ಲ. ಟೀಕಾ

ನಿರತಿಶಯೇತಿ–ಯಜ್ಜ್ಞಾನಸ್ಪಷ್ಟತಾಪೇಕ್ಷಯಾ ಅನ್ಯತ್ ಅತಿಶಯೇನ ಸ್ಪಷ್ಟಂ ನಾಸ್ತಿ ಇತ್ಯರ್ಥಃ । -ಶ್ರೀ. ಟಿ.

೩ 1 ಪದ್ಮಾನಿ ನಯತಿ ಪ್ರೇರಯತೀತಿ ಪದ್ಮನೀಃ ಸೂರ್ಯಃ । ಪದ್ಮಶಬ್ದೋಪಪದಾನ್ನಯತೇಃ ಕರ್ತರಿ ಡಿಪ್ರತ್ಯಯೇ ಪದ್ಮನಿ ಇತಿ ಸಿದ್ಧ್ಯತಿ । ಪದ್ಮನೇಃ ಭಾ ಇವ ಭಾ ಯಸ್ಯ ತತ್ ಪದ್ಮನಿಭಮ್ । ಪದ್ಮನಿಭಂ ಈಕ್ಷಣಂ ಯಸ್ಯ ಸಃ ಪದ್ಮನಿಭೇಕ್ಷಣಃ ।

2 ನಭಃಸ್ಪೃಶಂ.. ದೀಪ್ತವಿಶಾಲನೇತ್ರಮ್ ।

–ಗೀ. 11-24

೪ 3 ಪದ್ಮಾನಿ ಸುಹೃತ್ತ್ವೇನಾಸ್ಯ ಸಂತೀತಿ ಪದ್ಮಃ ಸೂರ್ಯಃ ಅರ್ಶಆದ್ಯಚ್ । ನಿತರಾಂ ಭಾ ಯಸ್ಯ ಸಃ ನಿಭಶ್ಚಂದ್ರಸ್ತಾವೀಕ್ಷಣೇ ಯಸ್ಯೇತಿ ।

-ಸ. ಸಂ.

4 ...ಅನಂತಬಾಹುಂ ಶಶಿಸೂರ್ಯನೇತ್ರಮ್ ।

–ಗೀ. 11-19

'ಶಶಿಸೂರ್ಯನೇತ್ರಂ' ಇತ್ಯಪಿ 'ಅಹಂ ಕ್ರತುಃ' ಇತ್ಯಾದಿವತ್ ।

–ಗೀ. ಭಾ.

೫ ಚತುರ್ಮುಖನನ್ನು ಪ್ರೇರಿಸುವವನು ಮತ್ತು ಪ್ರಕಾಶಮಾನವಾದ ನೇತ್ರ ಉಳ್ಳವನು.[1]

೬ ಚತುರ್ಮುಖನಿಗೆ ಸದೃಶನಾದ ವಾಯುದೇವನಿಗೆ ಜ್ಞಾನವನ್ನು ಅನುಗ್ರಹಿಸುವವನು.[2]

೭ ಚತುರ್ಮುಖನಿಗೆ ಸದೃಶನಾದ ವಾಯುದೇವನ ಮೇಲೆ ಕೃಪಾದೃಷ್ಟಿ ಉಳ್ಳವನು.[3]

## ಜಿಜ್ಞಾಸೆ

[ಪದ್ಮದೃಷ್ಟಾಂತದ ಔಚಿತ್ಯ]

ಪ್ರ – ಲೋಕದಲ್ಲಿ ಪಾದ ಹಸ್ತ ಮುಖ ನೇತ್ರಗಳನ್ನು ಕಮಲ ದೃಷ್ಟಾಂತದಿಂದ ಪಾದಪದ್ಮ, ಹಸ್ತಕಮಲ, ಮುಖಕಮಲ, ಕಮಲ ನಯನ ಎಂದು ವರ್ಣನೆ ಮಾಡುತ್ತಾರೆ, ಕಿವಿ ಮೊದಲಾದವುಗಳನ್ನು ಆ ದೃಷ್ಟಾಂತದಿಂದ ವರ್ಣನೆ ಮಾಡುತ್ತಾ ಇಲ್ಲ ಇದಕ್ಕೇನು ಕಾರಣ?

ಉ – ಮುಖವನ್ನು ಚಂದ್ರದೃಷ್ಟಾಂತದಿಂದ ವರ್ಣಿಸುತ್ತಾರೆ ಸೂರ್ಯದೃಷ್ಟಾಂತದಿಂದ ವರ್ಣಿಸುವುದಿಲ್ಲ ಅದಕ್ಕೇನು ಕಾರಣ? ಸೂರ್ಯ ಪ್ರಖರ ಕಿರಣವುಳ್ಳವನು ಮುಖವು ಹಾಗೆ ಇಲ್ಲ ಎಂದು ಹೇಳುವುದಾದರೆ ಚಂದ್ರನು ಕಲಂಕವುಳ್ಳವನು ಮುಖವು ಕಲಂಕ ರಹಿತವಾದದ್ದು. ಆದ್ದರಿಂದ ಚಂದ್ರನ ದೃಷ್ಟಾಂತವನ್ನು ಕೊಡಬಾರದಲ್ಲ? ಕವಿಗಳು ಶೃಂಗಾರರಸದ ವರ್ಣನ ಪ್ರಿಯರು ಚಂದ್ರನು ಕಾಮಜನಕನು. ಅದರಂತೆ ಪುರುಷರಿಗೆ ಸ್ತ್ರೀಮುಖದರ್ಶನದಿಂದ ಕಾಮೋದ್ರೇಕವಾಗುತ್ತದೆ ಈ ಕಾರಣದಿಂದ ಮುಖವನ್ನು ಚಂದ್ರದೃಷ್ಟಾಂತದಿಂದ ವರ್ಣಿಸುತ್ತಾರೆ ಸೂರ್ಯದೃಷ್ಟಾಂತದಿಂದ ವರ್ಣಿಸುವದಿಲ್ಲ ಎಂದು ಹೇಳುವದಾದರೆ ವಸಂತಋತು ಕಾಮಜನಕ ಕಾರಣ ಏನೆಂದರೆ ಆಗ ಕಮಲಾದಿ ಪುಷ್ಪಗಳು ಚೆನ್ನಾಗಿ ಕಾಣುತ್ತವೆ. ಇದರಿಂದ

---

೫ 1 ಪದ್ಮಂ ಚತುರ್ಮುಖಂ ನಯತಿ ಪ್ರೇರಯತೀತಿ ಪದ್ಮನಿಃ । 'ಪದ್ಮೋ ಬ್ರಹ್ಮಾ ಸಮುದಿಷ್ಟಃ' ಬ್ರಾಹ್ಮೇ (ಭಾಗ ತಾ. ನಿ. 3-1-26) ಪದ್ಮಶಬ್ದಸ್ಯ ಚತುರ್ಮುಖಾರ್ಥಕತ್ವಂ ನಿರೂಪಿತಮ್ । ಭಾತಿ ದೀಪ್ತಂ ವರ್ತತ ಇತಿ ಭಂ, ಭಂ ಈಕ್ಷಣಂ ನೇತ್ರಂ ಯಸ್ಯ ಸಃ ಭೇಕ್ಷಣಃ. ಪದ್ಮನಿಶ್ಚಾಸೌ ಭೇಕ್ಷಣಶ್ಚ ಪದ್ಮನಿಭೇಕ್ಷಣಃ ।

೬ 2 ಪದ್ಮಃ ಚತುರ್ಮುಖಃ ತನ್ನಿಭಃ ತತ್ಸದೃಶಃ ವಾಯುಃ। ತಸ್ಯ ಈಕ್ಷಣಂ ಜ್ಞಾನಂ ಯಸ್ಮಾತ್ ಸಃ ಪದ್ಮನಿಭೇಕ್ಷಣಃ ।

೭ 3 ಪದ್ಮನಿಭಃ ವಾಯುಃ । ತಸ್ಮಿನ್ ಈಕ್ಷಣಂ ಕೃಪಾದೃಷ್ಟಿರ್ಯಸ್ಯ ಸಃ ಪದ್ಮನಿಭೇಕ್ಷಣಃ ।

ಕಾಮದ ಉತ್ಪತ್ತಿಯಾಗುತ್ತದೆ ಆದ್ದರಿಂದ ಮನ್ಮಥನಿಗೆ ಪುಷ್ಪವು ಬಾಣವೆಂದು ಶಾಸ್ತ್ರವು ಹೇಳುತ್ತದೆ. ಅದರಂತೆ ಸ್ತ್ರೀದೇಹದಲ್ಲಿ ಮುಖ, ನೇತ್ರ, ಹಸ್ತ, ಪಾದಗಳು ವಿಶೇಷವಾಗಿ ಪುರುಷರಿಗೆ ಕಾಮಜನಕಗಳು. ಈ ಕಾರಣದಿಂದ ಅವುಗಳನ್ನು ಪುಷ್ಪಗಳಲ್ಲಿ ಶ್ರೇಷ್ಠವಾದ ಕಮಲದೃಷ್ಟಾಂತದಿಂದ ವರ್ಣಿಸುವದು ಕೂಡುತ್ತದೆ.



ಪದ್ಮನಾಭೋಽರವಿಂದಾಕ್ಷಃ ಪದ್ಮಗರ್ಭಃ ಶರೀರಭೃತ್ ।
ಮಹರ್ಧಿರೃದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ ॥ ೩೮ ॥

೩೪೭ ಪದ್ಮನಾಭಃ

೧ ವೇದಪ್ರತಿಪಾದ್ಯರಾದವರಲ್ಲೆಲ್ಲ ಶ್ರೇಷ್ಠನಾಗಿರುವವನು.[1]

ವೇದಾಭಿಮಾನಿ ದೇವತೆಗಳಲ್ಲಿ ಆಯಾಯ ದೇವತೆಗಿಂತ ವೇದಾರ್ಥರೆನಿಸುವ ಅವರವರ ಪತಿಯಂದಿರು ಶ್ರೇಷ್ಠರು ಶಚೀದೇವಿಗಿಂತ ಇಂದ್ರನೂ, ಅವನಿಗಿಂತ ಉಮಾದೇವಿಯೂ, ಅವಳಿಗಿಂತ ರುದ್ರನೂ, ರುದ್ರನಿಗಿಂತ ಭಾರತೀದೇವಿಯೂ, ಅವಳಿಗಿಂತ ಪ್ರಾಣದೇವನೂ, ಆವನಿಗಿಂತ ಲಕ್ಷ್ಮೀದೇವಿಯೂ, ಆಕೆಗಿಂತಲೂ ಶ್ರೀಹರಿಯೇ ಶ್ರೇಷ್ಠ—ಎಂಬುದಾಗಿ 'ವೈಶೇಷ್ಯ'ವು ತಾರತಮ್ಯಪೂರ್ವಕವಾಗಿ ಶ್ರೀಹರಿಗೆ ವೇದಪ್ರತಿಪಾದ್ಯರಲ್ಲಿ ಪ್ರಾಧಾನ್ಯವನ್ನು ತಿಳಿಸಿದೆ[2]

೨ (ಮುಮುಕ್ಷುಗಳಿಂದ) ಹೊಂದಲ್ಪಡುವವನು ಮತ್ತು ಅವರ ಸಂಸಾರ ಬಂಧನವನ್ನು ಹೋಗಲಾಡಿಸುವವನು.[3]

---

೧ 1 ಪದ್ಯಂತ ಇತಿ ಪದ್ಮಾನಿ ವೇದಪ್ರತಿಪಾದ್ಯಾನಿ । ತೇಷು (ನಾಭಿರಿವ) ಶ್ರೇಷ್ಠ ಇತಿ ।
-ವಿ. ರಾ.

2 ಏವಂ ವೇದಾಭಿಧಾನಾಭ್ಯೋ ದೇವೀಭ್ಯಃ ಸರ್ವ ಏವ ತು । ತದರ್ಥಭೂತಾಃ ಪತಯಸ್ತಸ್ಯಾ ಸ್ತಸ್ಯಾಸ್ತಥೋತ್ತಮಾಃ । ಶಚ್ಯಾ ಇಂದ್ರಸ್ತತಶ್ಚೋಮಾ ತಸ್ಯಾ ರುದ್ರಸ್ತತಸ್ತಥಾ । ಭಾರತೀ ಪ್ರಾಣ ಏವಾಸ್ಯಾಸ್ತತಃ ಶ್ರೀಸ್ತದ್ವರೋ ಹರಿಃ
-ವೈಶೇಷ್ಯ (ಭಾಗ. ತಾ. ನಿ. 11-16-12)

೨ 3 ಪದ್ಯತೇ ಪ್ರಾಪ್ಯತೇ ಮುಮುಕ್ಷುಭಿರಿತಿ ಪದ್ಮಃ । ನಾಭಯತಿ ಮುಮುಕ್ಷೂಣಾಂ ಸಂಸಾರಂ ಹಿನಸ್ತೀತಿ ನಾಭಃ । 'ಣಭ ಹಿಂಸಾಯಾಮ್' ಸ್ವಾರ್ಥೇ ಣಿಚ್ । ಪದ್ಮಶ್ಚಾಸೌ ನಾಭಶ್ಚ ಪದ್ಮನಾಭಃ ।

೩ (ಕಲ್ಪಾಂತದಲ್ಲಿ) ಚತುರ್ಮುಖನನ್ನೂ ಸಂಹರಿಸುವವನು[1]

೪ ಸರ್ವವ್ಯಾಪ್ತ, ಜ್ಞಾನಸ್ವರೂಪಿ ಹಾಗೂ ಯಮಾದಿಗಳ ಮೂಲಕ ಸಂಹಾರ ನಡೆಸುವವನು[2].

[ಅರ್ಥವಿಶೇಷಗಳನ್ನು ೪೮ನೆಯ ಮತ್ತು ೨೦೦ನೆಯ ಪದ್ಮನಾಭ ನಾಮಗಳ ವ್ಯಾಖ್ಯಾನದಲ್ಲಿ **ನೋಡಬಹುದು.**]

## ಜಿಜ್ಞಾಸೆ

[ಲಕ್ಷ್ಮಿಗಿಂತ ಶ್ರೇಷ್ಠತಮ]

ಪ್ರ - ದೇವತಾಸ್ತ್ರೀಯರು ದೇವತೆಗಳು ಇಬ್ಬರೂ ವೇದದಿಂದ ಸ್ತುತ್ಯರ ಆದ್ದರಿಂದ ಇವರಲ್ಲಿ ಒಬ್ಬರು ಅಂದರೆ ಪತಿಗಳಾದ ದೇವತೆಗಳು ಅವರ ಸ್ತ್ರೀಯರಿಂದ ಶ್ರೇಷ್ಠರು ಹೇಗಾದರು?

ಉ - ವೇದಗಳು ದೇವತಾಸ್ತ್ರೀಯರನ್ನು ವರ್ಣಿಸುವಾಗ ಸ್ತ್ರೀಯರನ್ನು ಎಂತಹ ಗುಣಗಳಿಂದ ವರ್ಣಿಸುವವೋ ಆ ಗುಣಗಳಿಕ್ಕಿಂತ ಶ್ರೇಷ್ಠಗಳಾದ ಗುಣಗಳಿಂದ ಅವರ ಪತಿಗಳನ್ನು ವರ್ಣಿಸುತ್ತವೆ. ಆದ್ದರಿಂದ ದೇವತಾ ಸ್ತ್ರೀಯರಿಗಿಂತ ಅವರ ಪತಿಗಳು ಶ್ರೇಷ್ಠರಾಗುತ್ತಾರೆ

ಪ್ರ - ಹಾಗಾದರೆ ಲಕ್ಷ್ಮೀದೇವಿಯನ್ನು ವೇದಗಳು ಗುಣವುಳ್ಳವಳು ಎಂದು ವರ್ಣಿಸಿ ಅವಳ ಪತಿಯಾದ ಪರಮಾತ್ಮನನ್ನು ನಿರ್ಗುಣ ಎಂದು ವರ್ಣಿಸಿದ್ದರಿಂದ ಪರಮಾತ್ಮನು ತನ್ನ ಹೆಂಡತಿ ಯಾದ ಲಕ್ಷ್ಮೀದೇವಿಗಿಂತ ಕಡಿಮೆ ಆಗುವದಿಲ್ಲವೆ?

ಉ - ಅದ್ವೈತಪ್ರಕಾರ ಹಾಗೆಯೇ ಸರಿ ಆದರೆ ದ್ವೈತ ಸಿದ್ಧಾಂತವು ಪರಮಾತ್ಮನು ನಿರ್ಗುಣನೆಂದರೆ ಪ್ರಾಕೃತ ಹೇಯ ಗುಣರಹಿತನು ಎಂದು ಅರ್ಥವನ್ನು ಹೇಳಿ ಪರಮಾತ್ಮನು ಅನಂತಾವದ್ಯ-ಕಲ್ಯಾಣ ಗುಣಪೂರ್ಣನು ಎಂದು ಲಕ್ಷ್ಮಿಯು ಬ್ರಹ್ಮದೇವರಿಗಿಂತ ಕೋಟಿಗುಣಮಾತ್ರದಿಂದ ಅಧಿಕಳು ಎಂದು ನಿರ್ಣಯಿಸಿದ್ದರಿಂದ ದ್ವೈತ ಸಿದ್ಧಾಂತ ಪ್ರಕಾರ ಲಕ್ಷ್ಮೀಪತಿಯು ಲಕ್ಷ್ಮಿಗಿಂತ ಶ್ರೇಷ್ಠತಮನು ಆಗಿದ್ದಾನೆ ಕಡಿಮೆ ಆಗುವದಿಲ್ಲ



---

೩ 1 ಪದ್ಮಂ ಚತುರ್ಮುಖಂ ನಾಭಯತಿ ಕಲ್ಪಾಂತೇ ಸಂಹರತೀತಿ ಪದ್ಮನಾಭಃ । 'ಪದ್ಮೋ ಬ್ರಹ್ಮಾ ಸಮುದ್ದಿಷ್ಟಃ..' ಬ್ರಾಹ್ಮೇ (ಭಾಗ. ತಾ. ನಿ. 3-1-26) ನಿರೂಪಿತದಿಶಾ ಬ್ರಹ್ಮಾಽಪಿ ಪದ್ಮಶಬ್ದವಾಚ್ಯಃ ।

೪ 2 ಪದನೀಯತ್ವಾತ್ ಪದಮ್ । ಜ್ಞಾನರೂಪತ್ವಾತ್ ಮಃ । ನಾಭಯತಿ ಯಮಾದಿಭಿಃ ಹಿಂಸಯತೀತಿ ನಾಭಃ ।

## ೩೪೪ ಅರವಿಂದಾಕ್ಷಃ

೧ ಕಮಲದಂತೆ ಕಣ್ಣು ಉಳ್ಳವನು[1]

ಭಗವಂತನ ಕಣ್ಣು ಕಮಲದ ದಳದಂತೆ ದೀರ್ಘವಾದುದು, ಕಮಲದ ಮಧ್ಯಭಾಗದಂತೆ ಆಕರ್ಷಕವಾದುದು[2] ಅಂಚುಗಳಲ್ಲಿ ಕೆಂದಾವರೆಯಂತೆ ಕೆಂಪಗಾಗಿರುವುದು. ಛಾಂದೋಗ್ಯೋಪನಿಷತ್ತಿನಲ್ಲಿ—ಸೂರ್ಯಮಂಡಲದಲ್ಲಿರುವ ಭಗವಂತನ ಕಣ್ಣುಗಳನ್ನು ಈ ಅಭಿಪ್ರಾಯದಲ್ಲೇ ಕೆಂದಾವರೆಗೆ ಹೋಲಿಸಲಾಗಿದೆ[3] ಕಮಲದಂತೆ ಪೂರ್ಣವಾಗಿ ಅರಳಿರುವುದರಿಂದಲೂ ಭಗವಂತನ ಕಣ್ಣುಗಳು ಕಮಲದ ಸಾಮ್ಯವನ್ನು ಹೊಂದಿರುವವು ಈ ಎಲ್ಲ ಅಭಿಪ್ರಾಯಗಳನ್ನಿಟ್ಟುಕೊಂಡೇ ಅಲ್ಲಲ್ಲಿ ಭಗವಂತನ ಕಣ್ಣುಗಳಿಗೆ ಅರವಿಂದದ ಹೋಲಿಕೆಯನ್ನು ನೀಡಲಾಗುವುದು[4]

೨ ಹೃದಯಾರವಿಂದದಲ್ಲಿ ವ್ಯಾಪಿಸಿಕೊಂಡಿರುವವನು.[5]

೩ ವಿಲಕ್ಷಣವಾದ ಅಥವಾ ಪೂರ್ಣವಾದ ಆನಂದವನ್ನು ಹೊಂದಿರುವ ಕಣ್ಣುಗಳು ಅಥವಾ ಇಂದ್ರಿಯಗಳು ಉಳ್ಳವನು.[6]

---

೧ 1 ಅರವಿಂದಸವರ್ಣಾಕ್ಷತ್ವಾದರವಿಂದಾಕ್ಷಃ । -ವಿ. ರಾ.

2 ಇಂದೀವರೋದರದಳನಯನಾ . । -ದ್ವಾ. ಸ್ತೋ.

3 ' ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ।' -ಛಾಂ ಉ. 1-3-7

ಕಪ್ಯಾಸರಕ್ತಪದ್ಮಾಕ್ಷಃ ಸೂರ್ಯಗಶ್ಚಾಕ್ಷಿಗಶ್ಚ ಸಃ ।
-ಛಾಂ. ಉ. ಭಾ.

4 'ಕೃಷ್ಣ ಕೃಷ್ಣಾರವಿಂದಾಕ್ಷ ತಾತ ಏಹಿ ಸ್ತನಂ ಪಿಬ ।
-ಭಾಗ. 10-11-15

೨ 5 ಅರವಿಂದೇ ಹೃದಯಾರವಿಂದೇ ಅಕ್ಷ್ಣೋತಿ ವ್ಯಾಪ್ನೋತೀತಿ ಅರವಿಂದಾಕ್ಷಃ । 'ಅಕ್ಷೂ ವ್ಯಾಪ್ತೌ' ।

೩ 6 ಲೌಕಿಕಾನಂದವಿಲಕ್ಷಣತ್ವಾತ್ ಪೂರ್ಣತ್ವಾದ್ವಾ ಅವತ್ । ತಾದೃಶಂ ರಂ ಸುಖಂ ವಿಂದಂತಿ ಲಭಂತ ಇತಿ ಅರವಿಂದಾನಿ । ತಾನಿ ಅಕ್ಷೀಣಿ ಅಕ್ಷಾಣಿ ಇಂದ್ರಿಯಾಣಿ ವಾ ಯಸ್ಯ ಸಃ ಅರವಿಂದಾಕ್ಷಃ ।

೪ ಜ್ಞಾನಾತ್ಮಕಗಳಾದ ಕಣ್ಣುಗಳುಳ್ಳವನು[1]

೫ ವಿಲಕ್ಷಣವಾದ ಅಥವಾ ಪೂರ್ಣವಾದ ಆನಂದವನ್ನು ಹೊಂದಿರುವವನು ಮತ್ತು ಎಲ್ಲ ದೇಶ ಕಾಲಗಳಲ್ಲಿ ವ್ಯಾಪಿಸಿರುವವನು.[2]

೬ ದೋಷಯುಕ್ತರಾದ ತಾಮಸರನ್ನು ಚೆನ್ನಾಗಿ ನಾಶಪಡಿಸುವವನು.[3]

ತಾಮಸರಿಗೆ ಅಂಧಂತಮಸ್ಸನ್ನು ನೀಡುವುದರ ಮೂಲಕ ಭಗವಂತನು ಅವರನ್ನು ವಿಶೇಷವಾಗಿ ನಾಶಪಡಿಸುವನು.

೭ ಪರಮಾತ್ಮನನ್ನು ಚೆನ್ನಾಗಿ ಹೊಂದಿಸುವ ವೇದಗಳಲ್ಲಿ ಅಥವಾ ತತ್ತ್ವಾಭಿಮಾನಿ ದೇವತೆಗಳಲ್ಲಿ ವ್ಯಾಪಿಸಿರುವವನು[4]

೮ ದುಃಖವನ್ನು ಹೊಂದುವ ಜೀವಾತ್ಮರಲ್ಲಿ ಕ್ರೀಡಿಸುತ್ತಿರುವವನು.[5]

---

೪ 1 ರವಿಂದಮಂಧಕಾರಸ್ತನ್ನ ಭವತೀತ್ಯರವಿಂದಃ ಪ್ರಕಾಶೋ, ಜ್ಞಾನಮಿತಿ ಯಾವತ್ । ತದಾತ್ಮಕಾನ್ಯಕ್ಷೀಣಿ ಯಸ್ಯೇತಿ ವಾ । 'ಅಂಧಕಾರೋ ರವಿಂದಾಂಧತಿಮಿರಂ ತಮ ಉಚ್ಯತೇ' ಇತ್ಯುತ್ಪಲಮಾಲೋಕ್ತೇಃ । —ಸ. ಸಂ.

೫ 2 ವಿಲಕ್ಷಣತ್ವಾತ್ ಪೂರ್ಣತ್ವಾದ್ವಾ ಅಂ, ತಾದೃಶಂ ರಂ ಸುಖಂ ವಿಂದತೀತಿ ಅರವಿಂದಃ । ಅಕ್ಷ್ಣೋತೀತಿ ಸರ್ವದೇಶಕಾಲೇಷು ವ್ಯಾಪ್ನೋತೀತಿ ಅಕ್ಷಃ ।

೬ 3 ಅರಂ ದೋಷಂ ವಿಂದಂತಿ ಪ್ರಾಪ್ನುವಂತೀತಿ ಅರವಿಂದಾಃ ತಾಮಸಾಃ । ತಾನ್ ಕ್ಷಪಯತಿ ನಾಶಯತೀತಿ ಅರವಿಂದಾಕ್ಷಃ ।

೭ 4 ಅರಂ ಸಮ್ಯಕ್ ವಿಂ ಪರಮಾತ್ಮಾನಂ ದದತೀತ್ಯರವಿಂದಾಃ ವೇದಾಃ, ತತ್ತ್ವಾಭಿಮಾನಿ-ನಿನೋ ದೇವಾಃ ವಾ । ತೇಷು ಅಕ್ಷತಿ ವ್ಯಾಪ್ನೋತೀತಿ ಅರವಿಂದಾಕ್ಷಃ ।

೮ 5 ಅರಂ ಅರಮಣಂ ದುಃಖಂ ವಿಂದಂತಿ ಪ್ರಾಪ್ನುವಂತೀತಿ ಅರವಿಂದಾಃ ಜೀವಾಸ್ತೇಷು ಅಕ್ಷತೇ ಕ್ರೀಡತ ಇತಿ ಅರವಿಂದಾಕ್ಷಃ ।

## ಜಿಜ್ಞಾಸೆ

### [ಪ್ರಾಕೃತವಲ್ಲ]

ಪ್ರ - ಪರಮಾತ್ಮನ ಇಡೀ ದೇಹವು ಜ್ಞಾನಾತ್ಮಕವಾಗಿರುವಾಗ ಅರವಿಂದಾಕ್ಷ ನಾಮವು ಪರಮಾತ್ಮನ ಕಣ್ಣನ್ನು ಮಾತ್ರ ಜ್ಞಾನಾತ್ಮಕವೆಂದು ವರ್ಣಿಸಿದ್ದು ಹೇಗೆ ಯುಕ್ತ?

ಉ - ಪರಮಾತ್ಮನಿಗೆ ಎಲ್ಲ ವಸ್ತುಗಳ ಅಂದರೆ ಅತೀಂದ್ರಿಯ ವಸ್ತುಗಳದ್ದೂ ಕೂಡ ಚಾಕ್ಷುಷ ಸಾಕ್ಷಾತ್ಕಾರವು ಇದೆ ಎಂದು ತಿಳಿಸುವ ಅಭಿಪ್ರಾಯದಿಂದ ಅವನ ಕಣ್ಣನ್ನು ಜ್ಞಾನಾತ್ಮಕವೆಂದು ವರ್ಣಿಸಿದ್ದು. ನಾವು ಅತೀಂದ್ರಿಯಗಳನ್ನು ಕಿವಿಯಿಂದ ಕೇಳಿ ತಿಳಿಯುತ್ತೇವೆ, ಅವುಗಳನ್ನು ಕಣ್ಣುಗಳಿಂದ ನೋಡಲಾರೆವು ಹೀಗೆ ಇರಲು ಅವನು ಮಾತ್ರ ಕಣ್ಣಿನಿಂದ ಹೇಗೆ ಅವುಗಳನ್ನು ನೋಡುತ್ತಾನೆಂದು ಶಂಕೆಯು ಬಂದರೆ ಅವನ ಕಣ್ಣು ನಮ್ಮ ಕಣ್ಣಿನಂತೆ ಪ್ರಾಕೃತವಲ್ಲ ಜ್ಞಾನಾತ್ಮಕವಾದದ್ದು ಆದ್ದರಿಂದ ಅವನು ಕಣ್ಣಿನಿಂದ ಅತೀಂದ್ರಿಯಗಳನ್ನೂ ಕೂಡ ನೋಡಬಲ್ಲನು ಎಂದು ಅಭಿಪ್ರಾಯವು ಆ ನಾಮಕ್ಕೆ ಇದೆ



## ೩೪೯ ಪದ್ಮಗರ್ಭಃ

೧ ಜಗತ್ಕಾರಣವಾದ ಪದ್ಮವು (ಪ್ರಲಯಕಾಲದಲ್ಲಿ ಸೂಕ್ಷ್ಮವಾಗಿ) ಯಾರ ಗರ್ಭದಲ್ಲಿರುವುದೋ ಅಂತಹವನು.[1]

೨ ಜಗದಾತ್ಮಕವಾದ ಪದ್ಮವು ಯಾರಿಂದ ಹೊರಹೊಮ್ಮಿದೆಯೋ ಅಂತಹವನು[2]

ಭಗವಂತನು ತನ್ನಲ್ಲಿರುವ ಜೀವಾತ್ಮರನ್ನು ಸೃಷ್ಟಿಸುವೆನೆಂದು ನಿರ್ಧರಿಸಿದಾಗ, ಅವನ ಉದರದಲ್ಲಿದ್ದ ಅತಿಸೂಕ್ಷ್ಮವಾದ ಉದಕರೂಪದಲ್ಲಿರುವ ಪ್ರಕೃತಿಯು ರಜೋಗುಣದಿಂದ ಪ್ರೇರಿತವಾಗಿ ವಾಯುವಿನಿಂದ ಒಣಗಿ ಅವನ ನಾಭಿದೇಶದಿಂದ ಪದ್ಮವಾಗಿ ಹೊರಹೊಮ್ಮುವುದು—ಎಂಬುದಾಗಿ

---

೧ 1 ಜಗತ್ಕಾರಣಂ ಪದ್ಮಂ ಪ್ರಳಯೇ ಸೂಕ್ಷ್ಮತಯಾ ಗರ್ಭೇ ಯಸ್ಯ ಸಃ ಪದ್ಮಗರ್ಭಃ ।

-ವಿ. ರಾ.

೨ 2 ಜಗದಾತ್ಮಕಂ ಪದ್ಮಂ ಗೀರ್ಯತೇ ಉದ್ಗೀರ್ಯತೇ ಅನೇನೇತಿ ಪದ್ಮಗರ್ಭಃ । 'ಗೄ ನಿಗರಣೇ' ।

ಮೈತ್ರೇಯರು ಸಂದೇಶಿಸಿರುವರು.[1]

೩. ಚತುರ್ಮುಖನಿಗೆ ಪುತ್ರನಾಗಿ ಉಳ್ಳವನು.[2]

ಎಲ್ಲರೂ ಭಗವಂತನ ಮಕ್ಕಳೇ ಆದರೂ ಚತುರ್ಮುಖನು ವಿಶೇಷವಾಗಿ ಭಗವಂತನ ಪುತ್ರನೆಂದು ಶಾಸ್ತ್ರದಲ್ಲಿ ಅಲ್ಲಲ್ಲಿ ಉಲ್ಲೇಖಿಸಲಾಗಿದೆ[3]

೪ ಚತುರ್ಮುಖನಿಂದ ವಿಶೇಷವಾಗಿ ಸ್ತುತಿಸಲ್ಪಡುವವನು.[4]

---

1 ತಸ್ಯಾತ್ಮಸೂಕ್ಷ್ಮಾಭಿನಿವಿಷ್ಟದೃಷ್ಟೇರಂತರ್ಗತೋಽರ್ಥೋ ರಜಸಾ ತನೀಯಾನ್ ।
ಗುಣೇನ ಕಾಲಾನುಗತೇನ ವಿದ್ಧಃ ಶುಷ್ಯಂಸ್ತದಾಽಭಿದ್ಯತ ನಾಭಿದೇಶಾತ್

-ಭಾಗ. 3-9 13

* 'ಉದಕಂ ವಾಯುನಾ ಶುಷ್ಕಂ ಭಿನ್ನಂ ಪದ್ಮಮಭೂದ್ವರೇಃ'

-ಪಾದ್ಮ (ಭಾಗ. ತಾ. ನಿ )

* ಆತ್ಮಸೂಕ್ಷ್ಮಾಭಿನಿವಿಷ್ಟದೃಷ್ಟೇಃ ಆತ್ಮನಿ ಸ್ಥಿತೇಷು ಜೀವೇಷು ಸೃಜ್ಯಾವ್ಯೇತಾನಿತ್ಯಭಿನಿವಿಷ್ಟದೃಷ್ಟೇಃ ನಿರ್ಣೀತಮನಸಃ ತಸ್ಯ ಭಗವತೋಽಂತರ್ಗತಃ ಉದರೇ ಸ್ಥಿತಃ ತನೀಯಾನತಿಸೂಕ್ಷ್ಮಃ ಯೋಽರ್ಥಃ ಉದಕರೂಪಪ್ರಕೃತ್ಯಾಖ್ಯೋ ಯಃ ಪದಾರ್ಥ ಸ ತದಾ ಕಾಲಾನುಗತೇನ ಸೃಷ್ಟಿಕಾಲಪ್ರೇರಿತೇನ ರಜಸಾ ಗುಣೇನಾನುವಿದ್ಧಃ ಪ್ರೇರಿತೋ ವಾಯುನಾ ಶುಷ್ಯನ್ ಶುಷ್ಕಃ, ನಾಭಿದೇಶಾತ್ ಪದ್ಮತ್ರಯಾಽಭಿದ್ಯತ ಉದಪದ್ಯತ್ । ಉದಕಪ್ರಚುರೋ ಲೋಕಾತ್ಮಕಪದ್ಮೋಪಾದಾನರೂಪಃ ಪ್ರಕೃತ್ಯಾಖ್ಯಃ ಪದಾರ್ಥಃ ಪದ್ಮಮಭೂದಿತಿ ಭಾವಃ' -ಪ್ರಾಚೀನ ಟೀಕಾ

೩ 2 ಪದ್ಮಃ ಚತುರ್ಮುಖಃ ಗರ್ಭಃ ಪುತ್ರಃ ಯಸ್ಯ ಸಃ ಪದ್ಮಗರ್ಭಃ । 'ಪದ್ಮೋ ಬ್ರಹ್ಮಾ ಸಮುದ್ದಿಷ್ಟಃ, .. ' ಬ್ರಾಹ್ಮ (ಭಾಗ. ತಾ. ನಿ. 3-1-26) । 'ಗರ್ಭೋ ಭ್ರೂಣೇಽರ್ಭಕೇ.. ' ವಿಶ್ವಮೇದಿನ್ಯಾ ।

3 'ಬ್ರಹ್ಮಣಃ ಪಿತರಂ ವಂದೇ.. ' -ದ್ವಾ. ಸ್ತೋ.

೪ 4 ಪದ್ಮೇನ ಚತುರ್ಮುಖೇನ ಗೀರ್ಯತೇ ಶಬ್ದ್ಯತೇ ವಿಶೇಷತಃ ಸ್ತೂಯತ ಇತಿ ಯಾವತ್ ಪದ್ಮಗರ್ಭಃ । 'ಗೃ ಶಬ್ದೇ' ।

ಚತುರ್ಮುಖನು ಯಾವಾಗಲೂ ಭಗವಂತನನ್ನು ಸ್ತುತಿಸುತ್ತಲೇ ಇರುವನು. ಆದ್ದರಿಂದಲೇ ಅವನು ತನ್ನ ಮಾತು ಎಂದೂ ವ್ಯರ್ಥವೆನಿಸುವುದೆಂದಿಲ್ಲ—ಎಂದು ಹೇಳಿಕೊಂಡಿರುವನು.[1]

## ಜಿಜ್ಞಾಸೆ

[ಸಜ್ಜನರಿಗೆ ಹಿತಕರವೇ ಸತ್ಯ]

ಪ್ರ - ಚತುರ್ಮುಖ ಬ್ರಹ್ಮದೇವರು ಸದಾ ಭಗವಂತನ ಧ್ಯಾನ, ಭಗವಂತನ ಸ್ತೋತ್ರಗಳನ್ನು ಮಾಡುತ್ತಾ ಇರುವದರಿಂದ ಅವರ ಬಾಯಿಂದ ಸುಳ್ಳುಮಾತು ಬರುವದಿಲ್ಲ 'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ' ಎಂಬ ಶಾಸ್ತ್ರವು ಹೇಳುವದು ಯುಕ್ತವಾದರೆ ಅವರು ದೈತ್ಯರಿಗೆ ಅವಧ್ಯತ್ವವರವನ್ನು ಕೊಡುವದು ಸುಳ್ಳು ಹೇಗಾಯಿತು? ಅವರಿಂದ ಅವಧ್ಯತ್ವವರ್ಯ ಪಡೆದ ದೈತ್ಯರು ವಧ್ಯರೇ ಆದರಲ್ಲ?

ಉ - 'ಯತ್ ಸತಾಂ ಹಿತಮತ್ಯಂತಂ ತತ್ ಸತ್ಯಮಿತಿ ಕೀರ್ತಿತಂ' ಯಾವುದು ಸಜ್ಜನರಿಗೆ ಹಿತಕರವೋ ಅದು ಸತ್ಯವೆಂದು ಶಾಸ್ತ್ರದ ಅಭಿಪ್ರಾಯ. ಬ್ರಹ್ಮದೇವರು ವಧ್ಯರನ್ನು ಅವಧ್ಯರಾಗುತ್ತೀರಿ ಎಂದು ಹೇಳುವದು ಸಾಮಾನ್ಯ ಜನರ ದೃಷ್ಟಿಯಿಂದ ಅಸತ್ಯವಾದರೂ ಸಜ್ಜನರಾದ ದೇವತೆಗಳಿಗೆ ಹಾಗೆ ಹೇಳುವುದು ಸಮ್ಮತವಾದ್ದರಿಂದ ಆ ವಚನವು ಸತ್ಯವೆಂದೇ ದೊಡ್ಡವರಿಂದ ಹೇಳಲ್ಪಡುತ್ತದೆ.



## ೩೫೦ ಶರೀರಭೃತ್

೧ ಪ್ರಕೃತಿಯೇ ಮುಂತಾದ ಇಪ್ಪತ್ನಾಲ್ಕು ತತ್ತ್ವಗಳನ್ನು ಧರಿಸಿಕೊಂಡಿರುವವನು.[2]

ಪಂಚಮಹಾಭೂತಗಳು, ಅಹಂಕಾರ ತತ್ತ್ವ, ಬುದ್ಧಿತತ್ತ್ವ, ಅವ್ಯಕ್ತತತ್ತ್ವ, ಹನ್ನೊಂದು ಇಂದ್ರಿಯಗಳು, ಹಾಗೂ ಶಬ್ದಾದಿ ಐದು ತನ್ಮಾತ್ರೆಗಳು—ಹೀಗೆ ಒಟ್ಟು ಇಪ್ಪತ್ನಾಲ್ಕು ತತ್ತ್ವಗಳು ಕ್ಷೇತ್ರ ಎನಿಸಿವೆ—ಎಂದ[3] ಶ್ರೀಕೃಷ್ಣನು, ಕ್ಷೇತ್ರ ಎನಿಸುವ ಈ ತತ್ತ್ವಗಳನ್ನೇ ಶರೀರ

---

1 ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ -ಭಾಗ. 2-6-33

೧ 2 ಶರೀರಂ ಪ್ರಕೃತ್ಯಾದಿ, ತದ್ ಬಿಭರ್ತೀತಿ ಶರೀರಭೃತ್ ।
-ವಿ. ರಾ.

3 ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ । ಇಂದ್ರಿಯಾಣಿ ದಶೈಕಂ ಚ । ಪಂಚ ಚೇಂದ್ರಿಯಗೋಚರಾಃ । ...ಏತತ್ ಕ್ಷೇತ್ರಂ ಸಮಾಸೇನ ..ಉದಾಹೃತಮ್ ।
-ಗೀ. 13-6,7

ಎಂದು ಕರೆದಿರುವನು.[1] ಈ ತತ್ತ್ವಗಳು ಪರಿಣಾಮಗೊಂಡು ರಚಿತವಾದ ಶರೀರಾದಿಗಳ ವಿಯೋಗದಿಂದ ಜೀವಾತ್ಮರಿಗೆ ಹಿಂಸಾಕಾರಣಗಳಾಗಿರುವುದರಿಂದಲೂ, ಭಗವಂತನಿಂದ ಪ್ರೇರಿಸಲ್ಪಡುವವುಗಳಾದುದರಿಂದಲೂ 'ಶರೀರ' ಎನಿಸಿವೆ ಎಂಬುದಾಗಿ 'ನಾರಾಯಣ ಶ್ರುತಿ' ಯು ಸ್ಪಷ್ಟೀಕರಿಸಿದೆ.[2] ಪೃಥಿವಿಯಿಂದ ಪ್ರಾರಂಭಿಸಿ ಪ್ರಕೃತಿಯ ವರೆಗಿನ ಸಕಲತತ್ತ್ವಗಳನ್ನೂ ಶ್ರೀ ವಿಷ್ಣುವೊಬ್ಬನೇ ಧರಿಸಿರುವನು ಅವನನ್ನು ಬಿಟ್ಟರೆ ಬೇರೆ ಯಾರೂ ಅವುಗಳ ಧಾರಣೆಯನ್ನು ಮಾಡಲಾರರು— ಎಂದು ಸ್ಕಾಂದ ಸಂದೇಶಿಸಿದೆ[3]

೨ ಪೃಥಿವಿಯನ್ನು ಧರಿಸಿಕೊಂಡಿರುವವನು.[4]

೩ ಜಗತ್ತನ್ನು ಧರಿಸಿಕೊಂಡಿರುವವನು.[5]

---

1 ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।

-ಗೀ. 13-2

2 ಹಿಂಸಾಹೇತುಶ್ಚ ಜೀವಸ್ಯ ಹರೇಣ ಪ್ರೇರ್ಯತೇ ಚ ಯತ್ । ಅವ್ಯಕ್ತಾದಿ ಶರೀರಂ ತತ್. ' -ನಾರಾಯಣಶ್ರುತಿಃ (ಗೀ ತಾ.)

* ಶರೀರಶಬ್ದಸ್ಯಾವ್ಯಕ್ತಾದಿಪರತ್ವಂ ಚ ಸ್ವಪರಿಣಾಮದೇಹಾದಿವಿಯೋಗದ್ವಾರಾ ಜೀವಸ್ಯ ಹಿಂಸಾದಿಹೇತುತ್ವಾತ್ ಶರ್।'ಶೄ ಹಿಂಸಾಯಾಮಿತಿ'ಧಾತೋಃ। ಭಗವತಾ ಪ್ರೇರ್ಯತ್ವಾದೀರಂ ಚ । 'ಈರ ಪ್ರೇರಣೇ' ಇತಿ ಧಾತೋಃ । ಶರ್ ಚ ತದೀರಂ ಚೇತಿ ಶರೀರಮಿತಿ ವ್ಯುತ್ಪತ್ತೇರಿತಿ ಜ್ಞೇಯಮ್ । -ಗೀ. ವಿ.

3 ಪೃಥಿವ್ಯಾದಿ ಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚ ಯತ್। ವಿಷ್ಣುರೇಕೋ ಬಿಭರ್ತೀದಂ ನಾನ್ಯಸ್ತಸ್ಮಾತ್ ಕ್ಷಮೋ ಧೃತಾ -ಸ್ಕಾಂದೆ (ಬ್ರ. ಸೂ ಭಾ. 1-3-15)

೨ 4 'ಶರೀರಮಾಕೃತಿರ್ದೇಹಃ ಕುಃ ಪೃಥ್ವೀ ಚ ಮಹೀ ತಥಾ ಇತ್ಯಭಿಧಾನೋ (ಭಾಗ. ತಾ. ನಿ. 3-4-28)ಕ್ತದಿಶಾ ಶರೀರಂ ಪೃಥ್ವೀಂ ಬಿಭರ್ತೀತಿ ಶರೀರಭೃತ್ ।

೩ 5 ಶೀರ್ಯತೇ ನಿತ್ಯಮೇವೇತಿ ಸ್ಮೃತೇಃ ಶರೀರಂ ಜಗತ್, ತದ್ ಬಿಭರ್ತೀತಿ ಶರೀರಭೃತ್ ।

-ಸ. ಸಂ.

೪ ಶರೀರಗಳನ್ನು ಧರಿಸಿಕೊಂಡಿರುವವನು[1]

ಭಗವಂತನು ತನ್ನ ಸ್ವರೂಪಾತ್ಮಕಗಳಾದ ದೇಹಗಳನ್ನು ಧರಿಸಿಕೊಂಡಿರುವನು ತನ್ನ ಶರೀರಗಳನ್ನಷ್ಟೇ ಅಲ್ಲದೆ, ಜೀವಾತ್ಮರ ಶರೀರಗಳನ್ನೂ ಅವನೇ ಧರಿಸಿಕೊಂಡಿರುವನು ಚಲಿಸುವ ಹಾಗೂ ಚಲಿಸದ ಶರೀರಗಳನ್ನು ಪ್ರವೇಶಿಸುವ ಭಗವಂತನು ಅಲ್ಲಿ ಇಂದ್ರಿಯಗಳನ್ನು ಸ್ಥಾಪಿಸುವುದರ ಮೂಲಕ ಅವನೇ ಮುಖ್ಯವಾಗಿ 'ಜೀವ' ಎಂದೆನಿಸಿ ಜೀವಾತ್ಮರು ಸಂಸಾರದಲ್ಲಿ ಅಡ್ಡಾಡಲು ಪ್ರೇರಕನಾಗಿರುವನೆಂದು ಪ್ರಮಾಣವು ಬೋಧಿಸಿದೆ[2] ಯಜ್ಞನಾಮಕ ದೇವನು ಪಾದದೇವನು ಭಗವಂತನು ಅವನನ್ನು ಪ್ರವೇಶಿಸಿ ಜೀವಾತ್ಮರ ಪಾದದ ಅಂಗುಷ್ಠವನ್ನು ಅಧಿಷ್ಠಾನವನ್ನಾಗಿಸಿಕೊಂಡು ಸಮಗ್ರ ದೇಹವನ್ನು ಧರಿಸುತ್ತಿರುವನೆಂಬುದಾಗಿ 'ವಹ್ನಿ ಪುರಾಣ'ವು[3] ಸಂದೇಶಿಸಿದೆ.

೫ ತನ್ನ ಶರೀರದಂತಿರುವ ಜೀವಾತ್ಮರನ್ನು ಧರಿಸಿರುವವನು[4]

ಸರ್ವಭೂತಗಳೂ ಶರೀರದಂತೆ ಭಗವಂತನಿಗೆ ಅತ್ಯಂತಾಧೀನಗಳಾಗಿರುವ ಪ್ರಯುಕ್ತ ಅವನ್ನು 'ಶರೀರ' ಎಂದೇ ಉಪನಿಷತ್ತಲ್ಲಿ ಉಲ್ಲೇಖಿಸಲಾಗಿದೆ[5] ಇಂತಹ ಭೂತಗಳನ್ನು ಭಗವಂತನೇ ಧರಿಸಿಕೊಂಡಿರುವನು

---

೪ 1 ಶರೀರಾಣಿ ಸ್ವಾತ್ಮನಃ ಸ್ವರೂಪಾತ್ಮಕಾನಿ ಜೀವಾತ್ಮನಾಂ ಭೌತಿಕಾನಿ ಚ ಬಿಭರ್ತೀತಿ ಶರೀರಭೃತ್ ।

2 'ವಿಷ್ಣುರ್ಜೀವ ಇತಿ ಪ್ರೋಕ್ತಃ ಸತತಂ ಪ್ರಾಣಧಾರಣಾತ್ । ಸ ಪ್ರವಿಶ್ಯ ಶರೀರಂ ಚ ಸ್ಥಾವರಂ ಜಂಗಮಂ ತಥಾ । ಸಂಸಾರಿಣಂ ಭ್ರಾಮಯತಿ .'

-ವಿ ತ ವಿ

3 ಅನಾದ್ಯನಂತೋಽಪಿ ಹರಿರ್ವೈಕಾರಿಕಗಣೇಷ್ವಜಃ । ಅವತೀರ್ಣಃ ಪದಾಂಗುಷ್ಠಮಧ್ಯಾಸ್ತೇ ವಿಶ್ವಭುಗ್ ವಿಭುಃ । ಪಾದದೇವಸ್ತು ಯಜ್ಞೋಽನ್ಯಸ್ತಂ ಪ್ರವಿಶ್ಯ ಹರಿಃ ಸ್ವಯಮ್ । ಸರ್ವಂ ವಿಧಾರಯನ್ ದೇಹಂ ವರ್ತತೇ ಸರ್ವಶಕ್ತಿಧೃಕ್

—ವಹ್ನಿ ಪುರಾಣ (ಭಾಗ. ತಾ. ನಿ 2-5-29)

೫ 4 ಶರೀರಂ ಸ್ವಶರೀರವತ್ ವರ್ತಮಾನಾನ್ ಜೀವಾನ್ ಬಿಭರ್ತೀತಿ ಶರೀರಭೃತ್ ।

5 'ಯಸ್ಯ ಸರ್ವಾಣಿ ಭೂತಾನಿ ಶರೀರಂ .. -ಬೃ. ಉ. 5-7-15

'.. ದೇಹವದ್ ಯದ್ವಶತ್ವತಃ । ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋರ್ಮಹಾತ್ಮನಃ' —ಬ್ರಹ್ಮತರ್ಕ (ಬೃ. ಉ. ಭಾ.)

೬ ಅಮೋಘ ಬಾಣಗಳುಳ್ಳವನು, ಪ್ರೇರಕನು ಹಾಗೂ ಧಾರಕನು[1]

೭ ಬಾಣದ ಆಕಾರವುಳ್ಳ ಮುಖ್ಯಪ್ರಾಣನನ್ನೂ ಧರಿಸಿರುವವನು.[2]

ಪ್ರಾಣಾಪಾನಾದಿ ಐದು ರೂಪಗಳುಳ್ಳ ಮುಖ್ಯಪ್ರಾಣನು ಭಗವಂತನ ಬಾಣವಾಗಿರುವನೆಂದು ಶ್ರೀಮದಾಚಾರ್ಯರು ತಿಳಿಸಿರುವರು[3] ಅಂತಹ ಮುಖ್ಯಪ್ರಾಣನನ್ನೂ ಭಗವಂತನೇ ಧರಿಸಿರುವನು

೮ (ಪ್ರಲಯ ಕಾಲದಲ್ಲಿ) ತನ್ನ ಶರೀರದೊಳಗೆ ಜಗತ್ತನ್ನು ಧರಿಸಿಕೊಂಡಿರುವವನು[4]

## ಜಿಜ್ಞಾಸೆ

[ಶಾಸ್ತ್ರ ಗುಣಗಳನ್ನೇ ಹೇಳುವದು]

ಪ್ರ:- ಪರಮಾತ್ಮನಿಗೆ ಆಕಾರವು ಇಲ್ಲ ಎಂದು ಶಾಸ್ತ್ರಗಳಲ್ಲಿ ಹೇಳುವದು ಕಾಣುತ್ತದೆ. ಆದರೆ ಮಧ್ವ ಸಿದ್ಧಾಂತದಲ್ಲಿ ಭಗವಂತನಿಗೆ ನಿರಾಕಾರತ್ವವನ್ನು ಒಪ್ಪಲಿಲ್ಲ ಆದ್ದರಿಂದ ಸಿದ್ಧಾಂತವು ಶಾಸ್ತ್ರ ವಿರುದ್ಧವಾಗುವದಿಲ್ಲವೋ?

ಉ – ಶಾಸ್ತ್ರವು ಪರಮಾತ್ಮನ ಗುಣಗಳನ್ನೇ ಹೇಳುತ್ತದೆ ಗುಣಭಿನ್ನ ಧರ್ಮಗಳನ್ನು ಅಥವಾ ದೋಷಗಳನ್ನು ಹೇಳುವದಿಲ್ಲ. ಶಾಸ್ತ್ರಕ್ಕೆ ಭಗವಂತನಲ್ಲಿ ಜೀವರಿಗೆ ಭಕ್ತಿಯನ್ನುಂಟು ಮಾಡುವದೇ ಉದ್ದೇಶ ಆ ಉದ್ದೇಶಸಿದ್ಧಿಗಾಗಿ ಭಗವಂತನ ಗುಣಗಳನ್ನು ಮಾತ್ರ ಶಾಸ್ತ್ರ ಹೇಳುತ್ತದೆ. ಆದ್ದರಿಂದ ನಿರಾಕಾರತ್ವವು ಗುಣವು ಅಲ್ಲ ಅದು ದೋಷವೇ. ಸೌಂದರ್ಯರೂಪಗುಣಕ್ಕೆ ವಿರೋಧಿಯಾಗಿದೆ ಇಂತಹ ನಿರಾಕಾರತ್ವವನ್ನು ಶಾಸ್ತ್ರವು ಸರ್ವಥಾ ಹೇಳುವದಿಲ್ಲ ಪ್ರಾಕೃತವಾದ ಆಕಾರರಾಹಿತ್ಯ ಪೂರ್ವಕ ಜ್ಞಾನಾನಂದಾದ್ಯಾತ್ಮಕ ದಿವ್ಯಮಂಗಳಕರ ಪರಮ ಸುಂದರ ಆಕಾರವನ್ನೇ ಆ ಶಬ್ದವು ಹೇಳುತ್ತದೆ.



---

೬ 1 ಶರೀ ಅಮೋಘಶರವಾನ್ ಈರಃ ಪ್ರೇರಕಃ ಭೃತ್ ಧಾರಕಶ್ಚೇತಿ ಶರೀರಭೃತ್ ।
–ವಾ. ರಾ.

೭ 2 ..ಶರೀ ಶರಾಕಾರವಾನ್ ಈರಃ ಮುಖ್ಯಪ್ರಾಣಃ ತಂ ಬಿಭರ್ತೀತಿ ಶರೀರಭೃತ್ ।
–ವಾ. ರಾ.

3 ಪಂಚಾತ್ಮಕೋ ಮಾರುತ ಏವ ಬಾಣಃ ।
–ಮ. ಭಾರ. ತಾ. ನಿ. 3-77

೮ 4 ಪ್ರಲಯಕಾಲೇ ಸ್ವಶರೀರಾಂತಃ ಜಗತ್ ಬಿಭರ್ತೀತಿ ಶರೀರಭೃತ್ ।
–ವಾ. ರಾ.

## ೬೫೧ ಮಹರ್ಧಿಃ

೧ ಮಹತ್ತ್ವಪೂರ್ಣವಾದ ಸಮೃದ್ಧಿಯನ್ನು ಹೊಂದಿರುವವನು.[1]

'ಪರಮಂ ಮಹದ್ ಬ್ರಹ್ಮ' ಎನಿಸಿರುವ ಭಗವಂತನ ಗುಣಪೂರ್ಣತ್ವರೂಪವಾದ ಸಮೃದ್ಧಿ ಸರ್ವಾಧಿಕವಾದದ್ದು[2] 'ಸಮೃದ್ಧ' ಎನಿಸಿರುವ ಅವನ ಸಮೃದ್ಧಿಯು ಸ್ವಾಭಾವಿಕವಾದದ್ದು[3]. 'ವರ್ಧಮಾನ' ಎನಿಸಿರುವ[4] ಅವನ ಸಮೃದ್ಧಿಯು ಶಾಶ್ವತವಾದದ್ದೂ ಕೂಡಾ. ಹೀಗೆ ಸರ್ವಾಧಿಕತ್ವ, ಸ್ವಾಭಾವಿಕತ್ವ, ಶಾಶ್ವತತ್ವ ಮುಂತಾದ ಗುಣಪ್ರಯುಕ್ತ ಮಹತ್ತ್ವವನ್ನೊಳಗೊಂಡಿರುವ ಸಮೃದ್ಧಿಯನ್ನು ಹೊಂದಿರುವವನು ಭಗವಂತನು.

೨ (ಸಜ್ಜನರಿಗೆ) ಮಹತ್ತಾದ ಸಮೃದ್ಧಿಯನ್ನು ಅನುಗ್ರಹಿಸುವವನು.[5]

---

೧ 1 ಮಹತೀ ಋದ್ಧಿಃ ಸಮೃದ್ಧಿಃ ಯಸ್ಯ ಸಃ ಮಹರ್ಧಿಃ । 'ಋದ್ಧಿಃ ಸ್ಯಾದೌಷಧಿಭೇದೇ ಸಮೃದ್ಧಾವಪಿ ಯೋಷಿತಿ' -ಮೇದಿನೀ ।

2 'ಬ್ರಹ್ಮಾಣೋ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ । ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ । ತಸ್ಮಾನ್ನ ಮುಕ್ತಾ ನಚ ಸಾ ನ ಕ್ವಚಿದ್ ವಿಷ್ಣುವೈಭವಮ್ । ಆಪ್ನುವಂತಿ ಸ ಏವೈಕಃ ಸ್ವತಂತ್ರಃ ಪೂರ್ಣಸದ್ಗುಣಃ'

-ಪರಮಶ್ರುತಿ (ವಿ. ತ. ವಿ.)

* ಪರಮಂ ಮಹದ್ಬ್ರಹ್ಮೇತಿ ವರ್ತತೇ ।

-ವಿ ತ. ವಿ ಟೀಕಾ.

3 ಶಾಂತಿ ಸಮೃದ್ಧಮಮೃತಮ್ । -ತೈ. ಉ. 1-14

.. ಸ್ವತಃ ಪೂರ್ತೇಃ ಸಮೃದ್ಧಂ ತತ್ಪ್ರಕೀರ್ತಿತಮ್ ।

-ಬ್ರಹ್ಮಸಾರ (ತೈ. ಉ. ಭಾ.)

4 ವರ್ಧಮಾನಂ ಸ್ವೇ ದಮೇ । -ಋ. 1-8

...ಸದಾ ವೃಧಮ್ । -ಋ. ಭಾ.

೨ 5 ಸಜ್ಜನಾನಾಂ ಮಹತೀ ಋದ್ಧಿಃ ಯಸ್ಮಾತ್ ಸಃ ಮಹರ್ಧಿಃ ।

ಸಮುದ್ರದ ಸಂವೃದ್ಧಿಗೆ ಪೂರ್ಣಚಂದ್ರನು ಕಾರಣನಾಗಿರುವಂತೆ ಭಗವಂತನು ಸಜ್ಜನರ ಸಂವೃದ್ಧಿಗೆ ಕಾರಣನಾಗಿರುವನೆಂಬುದಾಗಿ ಶ್ರೀಮದಾಚಾರ್ಯರು ಸ್ತುತಿಸಿರುವರು.[1]

೩ ಯಜ್ಞಾದ್ಯುತ್ಸವಗಳಿಂದ ಸಂವೃದ್ಧಿ ಉಳ್ಳವನು.[2]

೪ (ಬಲಿಯ) ಯಜ್ಞದಲ್ಲಿ (ತ್ರಿವಿಕ್ರಮರೂಪದಿಂದ) ಅಭಿವೃದ್ಧಿ ಉಳ್ಳವನು.[3]

೫ ಉತ್ಸವಗಳಿಗೆ ಸಂವೃದ್ಧಿ ಬರುವಂತೆ ಅನುಗ್ರಹಿಸುವವನು.[4]

ಭಗವಂತನ ವಿಶೇಷಸನ್ನಿಧಾನದಿಂದಾಗಿ ಉತ್ಸವಗಳು ಸಂವೃದ್ಧಗಳೆನಿಸುವವು.

೬ ಪೂಜ್ಯರಾದ (ತತ್ತ್ವಾಭಿಮಾನಿ ದೇವತಗಳೇ ಮುಂತಾದವರಿಗೆ) ಸಂವೃದ್ಧಿಯನ್ನು ಅನುಗ್ರಹಿಸುವವನು[5]

ಚತುರ್ಮುಖನೇ[6] ಮುಂತಾದ ಅಮರರಿಗೆಲ್ಲ[7] ಐಶ್ವರ್ಯಾದಿಸಂವೃದ್ಧಿಯನ್ನು ಅನುಗ್ರಹಿಸಿರುವವನು ಭಗವಂತನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು.

---

1 'ಸುಜನೋದಧಿಸಂವೃದ್ಧಿಪೂರ್ಣಚಂದ್ರಃ ಪ್ರಿಯತಾಮಿಂದಿರಾಪತಿಃ'
—ದ್ವಾ. ಸ್ತೋ.

೩ 2 ಮಹೈರ್ಯಜ್ಞಾದ್ಯುತ್ಸವೈರ್ಋದ್ಧಿರ್ಯಸ್ಯ ಸಃ ಮಹರ್ಧಿಃ ।
— ಸ ಸಂ.

೪ 3 ಮಹೇ ಬಲಿಕೃತಯಜ್ಞೋತ್ಸವೇ ತ್ರಿವಿಕ್ರಮರೂಪೇಣಾಭಿವೃದ್ಧಿರ್ಯಸ್ಯೇತಿ ವಾ ಮಹರ್ಧಿಃ । —ಸ. ಸಂ.

೫ 4 ಮಹಾನಾಂ ಉತ್ಸವಾನಾಂ ಋದ್ಧಿಃ ಸಂವೃದ್ಧಿಃ ಯಸ್ಮಾತ್ಸಃ ಮಹರ್ದ್ಧಿಃ ।

೬ 5 ಮಹ್ಯಂತೇ ಪೂಜ್ಯಂತೇ ಇತಿ ಮಹಾಃ ತತ್ತ್ವಾಭಿಮಾನಿಪ್ರಭೃತಯಃ ತೇಷಾಂ ಋದ್ಧಿಃ ಸಂವೃದ್ಧಿಃ ಯಸ್ಮಾತ್ ಸಃ ಮಹರ್ಧಿಃ ।

6 'ಅತಿಮತ ತಪೋಗಿರಿಸಮಿತಿವಿಭೇದನ ಪಿತಾಮಹಭೂತಿದ '
—ದ್ವಾ. ಸ್ತೋ.

7 ದಾತೃ ಸರ್ವಾಮರೈಶ್ವರ್ಯವಿಮುಕ್ತ್ಯಾದೇರಹೋ ವರಮ್ ಆನಂದಸ್ಯ ಪದಂ ವದೇ...
—ದ್ವಾ. ಸ್ತೋ.

## ಜಿಜ್ಞಾಸೆ

[ಮಹತ್ತ್ವಂ ಚ ಗುಣೇನೈವ]

ಪ್ರ - ಪರಮಾತ್ಮನಿಗೆ ಬ್ರಹ್ಮ ಎಂಬ ಹೆಸರು ಬರಲಿಕ್ಕೆ ಕಾರಣ ಯಾವುದು? ಬ್ರಹ್ಮನಿರ್ಗುಣತ್ವವಾದಿಗಳು ಗುಣಪೂರ್ಣತ್ವದಿಂದ ಬ್ರಹ್ಮ ಎಂಬ ಹೆಸರು ಬಂದಿದೆ, ಎಂದು ಹೇಳದೆ ಸರ್ವದೇಶವ್ಯಾಪ್ತಿ ಸರ್ವಕಾಲವ್ಯಾಪ್ತಿಗಳಿಂದ ಬ್ರಹ್ಮ ಎಂದು ಹೆಸರು ಬಂದಿದೆ ಎಂದು ಹೇಳುತ್ತಾರೆ ಹಾಗೆ ಹೇಳುವದು ಯುಕ್ತವೋ?

ಉ - ಪರಮಾತ್ಮನಿಗೆ ಬ್ರಹ್ಮ ಎಂಬ ಹೆಸರು ಮಹತ್ತ್ವನಿಮಿತ್ತದಿಂದ ಬಂದಿದೆ ಮಹತ್ತ್ವವು ಗುಣವತ್ತ್ವನಿಮಿತ್ತದಿಂದಲೇ ಹೊರತು ಕೇವಲ ದೇಶವ್ಯಾಪ್ತಿ ಕಾಲವ್ಯಾಪ್ತಿಗಳಿಂದ ಅಲ್ಲ. ಶ್ರೀವಾದಿರಾಜಗುರು ಸಾರ್ವಭೌಮರು 'ಮಹತ್ವಂ ಚ ಗುಣೇನೈವ ನಾಕಾರೇಣ ಧನೇನ ವಾ' ಒಬ್ಬ ವ್ಯಕ್ತಿಯನ್ನು ಮಹಾತ್ಮಾ ಎಂದು ಕರೆಯುವದು ಬಹಳ ಗುಣಗಳು ಇರುವದರಿಂದಲೇ. ತಟ್ಟಿರಾಮನಂತೆ ಎತ್ತರವಾದ ದೇಹ ಅಥವಾ ಧನದಿಂದ ಅಲ್ಲ ಎಂದು ಹೇಳಿದ್ದಾರೆ ಮತ್ತು ಆಕಾಶ ಅತ್ಯಂತಾಭಾವಗಳಿಗೆ ಸರ್ವದೇಶಕಾಲವ್ಯಾಪ್ತಿ ಇದೆ. ಆದರೂ ಆ ವಸ್ತುಗಳನ್ನು ಮಹಾನ್ ವ್ಯಕ್ತಿ ಎಂದು ಯಾರೂ ಕರೆಯುವದಿಲ್ಲ ಬ್ರಹ್ಮ ಎಂಬ ಶಬ್ದವು ಪರಮಾತ್ಮನಿಗೆ ಮಹತ್ತ್ವವನ್ನು ಹೇಳುತ್ತದೆಯಾದ್ದರಿಂದ ಆ ಮಹತ್ವವು ಅವನಿಗೆ ಗುಣಪೂರ್ಣತ್ವದಿಂದಲೇ ಕೂಡಬೇಕಾದುದರಿಂದ ಬ್ರಹ್ಮನಿರ್ಗುಣತ್ವವಾದಿಗಳು ಅಬ್ರಹ್ಮವಾದಿಗಳೇ ಹೊರತು ಬ್ರಹ್ಮವಾದಿಗಳು ಅಲ್ಲ



೩೫೨ ಋಯಧ್ದಃ

೧ ವೇದಗಳನ್ನು ಧರಿಸಿಕೊಂಡಿರುವವನು.[1]

೨ ಯಥಾರ್ಥಜ್ಞಾನಕ್ಕೆ ಧಾರಕನಾಗಿರುವವನು.[2]

---

೧ 1 ಋತಾನ್ ಯಥಾರ್ಥರೂಪಾನ್ ವೇದಾನ್ ಧತ್ತ ಇತಿ ಋತಧಃ । ಋತಧಃ ಏವ ಋಯದ್ಧಃ । ಋತಶಬ್ದಸ್ಯ ವೇದಾರ್ಥಕತ್ವಂ ಚ 'ಹಂಸಃ . ಋತಸತ್ '(ಕಾ.ಉ. 2-2-2) ಇತ್ಯತ್ರ ಪ್ರಸಿದ್ಧಮ್ । ತತ್ರ ಋತಶಬ್ದಃ ವೇದಾರ್ಥಕತಯಾ ಪ್ರಯುಕ್ತ ಇತಿ 'ಮಹಾಕೌರ್ಮೇ' ಸ್ಪಷ್ಟೀಕೃತಮ್ -' ಋತರೂಪೇ ತಥಾ ವೇದೇ. .' ।

೨ 2 ಋತಂ ಯಥಾರ್ಥವಿಜ್ಞಾನಂ ಧತ್ತ ಇತಿ ಋತಧಃ । ಋತಧ ಏವ ಋಯದ್ಧಃ। 'ಋತಂ ಯಥಾರ್ಥವಿಜ್ಞಾನಂ....' -ಶಬ್ದನಿರ್ಣಯ (ತೈ. ಉ. 1-17)

೩ ಯಥಾರ್ಥಜ್ಞಾನಿಗಳ ಧಾರಕನಾಗಿರುವವನು.[1]

೪ ಮುಕ್ತಾತ್ಮರ ಧಾರಕನಾಗಿರುವವನು.[2]

೫ ವೇದದಿಂದ ಮುಖ್ಯಪ್ರತಿಪಾದ್ಯನಾಗಿರುವ ಪ್ರಯುಕ್ತ 'ಋತ' ಎನಿಸಿರುವ ತನ್ನನ್ನು ತಾನೇ ಧರಿಸಿಕೊಂಡಿರುವವನು[3]

ಸರ್ವಾಧಾರಕನಾದ ಭಗವಂತನು ವೇದಗಳನ್ನೂ, ಅವುಗಳಿಂದ ಉಂಟಾಗುವ ಯಥಾರ್ಥಜ್ಞಾನವನ್ನೂ, ಆ ಜ್ಞಾನವನ್ನು ಪಡೆದಿರುವ ಯಥಾರ್ಥಜ್ಞಾನಿಗಳನ್ನೂ, ಯಥಾರ್ಥಜ್ಞಾನದ ಮೂಲಕ ಮುಕ್ತರಾಗಿರುವವರನ್ನೂ, ಧರಿಸಿಕೊಂಡಿರುವನು. ಹೀಗೆ ಉಳಿದೆಲ್ಲರ ಧಾರಕನಲ್ಲದೆ, ತನ್ನ ಧಾರಕನೂ ತಾನೇ ಆಗಿರುವನು

೬ ಜ್ಞಾನಸ್ವರೂಪಿ ಮತ್ತು ಸರ್ವಾಧಾರಕ[4]

---

೩ 1 ಋಚ್ಛಂತಿ ಜಗತ್, ತತ್ಸಂಬಂಧಿತಯಾ ಭಗವಂತಂ ಚ ಅವಗಚ್ಛಂತೀತಿ ಋತಾಃ ಯಥಾರ್ಥಜ್ಞಾನಿನಃ, ತಾನ್ ಧತ್ತ ಇತಿ ಋದ್ಧಃ।

೪ 2 ಋತಾನ್ ಮುಕ್ತಾತ್ಮನಃ ಧತ್ತ ಇತಿ ಋತಧಃ ಋತಧ ಏವ ಋದ್ಧಃ। 'ಋತಜಾ ಅದ್ರಿಜಾ ಋತಂ ಬೃಹತ್ (ಕಾ ಉ 2-2-2) ಇತ್ಯತ್ರ ಋತಶಬ್ದಃ ಭಗವತ್ಪ್ರಾಪ್ತಿನಿಮಿತ್ತೇನ ಮುಕ್ತಾರ್ಥೇ ಪ್ರಯುಕ್ತ ಇತಿ 'ಮಹಾಕೌರ್ಮೇ' ಸ್ಪಷ್ಟೀಕೃತಮ್—'ತಥ್ಯೈವರ್ತೇಷು ಮುಕ್ತೇಷು ಗತಾಸ್ತೇ ವಿಷ್ಣುನಿತ್ಯತಾಃ' ।

3 ವೇದೈರ್ಮುಖ್ಯತಯಾ ಪ್ರೋಕ್ತತ್ವಾತ್ ಋತಃ ಭಗವಾನ್। ತಂ ಧತ್ತ ಇತಿ ಋತಧಃ ಋತಧ ಏವ ಋದ್ಧಃ। 'ಋತಂ ಬೃಹತ್' (ಕಾ ಉ. 2-2-2) ಇತ್ಯತ್ರ ಋತಶಬ್ದಃ ವೇದೈರ್ಮುಖ್ಯತಯಾ ಪ್ರೋಕ್ತತ್ವನಿಮಿತ್ತೇನ ಭಗವದ್ವಾಚಕತಯಾ ಪ್ರಯುಕ್ತ ಇತಿ 'ಮಹಾಕೌರ್ಮೇ' ಸ್ಫುಟೀಕೃತಮ್—'ವೇದೈರ್ಮುಖ್ಯತಯಾ ಪ್ರೋಕ್ತಋತಮಿತ್ಯೇವ ಚೋಚ್ಯತೇ ।'

೬ 4 ಯಥಾರ್ಥಜ್ಞಾನರೂಪತ್ವಾತ್ ಋತಃ। ಋತಶ್ಚಾಸೌ ಧಾರಕಶ್ಚ ಋದ್ಧಃ।

೭ ಸರ್ವದಾ ಸಂಚರಿಸುತ್ತಿರುವ ವಾಯುವನ್ನು ಧರಿಸಿಕೊಂಡಿರುವವನು[1]

[ಅರ್ಥವಿಶೇಷಗಳನ್ನು ೨೭೮ನೆಯ 'ಋದ್ಧಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

ಜಿಜ್ಞಾಸೆ

[ಯಥಾವಸ್ಥಿತವಿಷಯಃ]

ಪ್ರ – ಪ್ರಮಾಣವೆಂದರೆ ತಿಳಿಯಲ್ಪಡದೆ ಇದ್ದ ವಿಷಯವನ್ನು ತಿಳಿಸಿಕೊಡುವ ವಾಕ್ಯ, ಅಂತಹ ಯುಕ್ತಿ ಮತ್ತು ಇಂದ್ರಿಯಗಳು ಎಂದು ಕೆಲವು ವಾದಿಗಳು ಹೇಳುತ್ತಾರೆ ಕೆಲವರು ತಿಳಿಯಲ್ಪಟ್ಟ ವಿಷಯವು ಯಥಾವಸ್ಥಿತವಾದರೆ ಅದನ್ನು ತಿಳಿಸುವ ವಾಕ್ಯಾದಿಗಳೂ ಕೂಡ ಪ್ರಮಾಣವೇ ಎಂದು ಹೇಳುತ್ತಾರೆ ತಿಳಿಯಲ್ಪಟ್ಟ ವಿಷಯವನ್ನು ತಿಳಿಸುವದು ದೋಷವಾದ್ದರಿಂದ ತಿಳಿಯಲ್ಪಟ್ಟಿದ್ದನ್ನು ತಿಳಿಸುವ ವಾಕ್ಯಾದಿಗಳು ನಿರ್ದೋಷವಾಗುವುದಿಲ್ಲ ನಿರ್ದೋಷವಾಗದೆ ಇದ್ದರೆ ಅದು ಪ್ರಮಾಣವಾಗಲಾರದು ಅಲ್ಲವೆ?

ಉ – ತಿಳಿಯದೆ ಇದ್ದ ವಿಷಯವನ್ನು ತಿಳಿಸುವ ವಾಕ್ಯ ಮೊದಲಾದವುಗಳು ಕೂಡ ವ್ಯರ್ಥವಾಗುವವು ವಿರಕ್ತನಿಗೆ ವಾಣಿಜ್ಯವು ತಿಳಿದಿರುವದಿಲ್ಲ. ಅದನ್ನು ಅವನಿಗೆ ತಿಳಿಸಿದರೆ ಅವನನ್ನು ಕುರಿತು ಅದು ಸಫಲವಲ್ಲ ಆದುದರಿಂದ ಪ್ರಮಾಣಲಕ್ಷಣದಲ್ಲಿ ತಿಳಿಯಲ್ಪಡದೆ ಇದ್ದ ವಿಷಯವನ್ನು ತಿಳಿಸಿಕೊಡತಕ್ಕ ಎಂಬ ವಿಶೇಷಣವನ್ನು ಹಾಕುವದು ಪ್ರಮಾಣದ ನಿರ್ದೋಷತ್ವಕ್ಕೆ ಪ್ರಯೋಜಕವಾಗುವದಿಲ್ಲ ಆದುದರಿಂದ ಪ್ರಮಾಣಲಕ್ಷಣದಲ್ಲಿ ಯಥಾವಸ್ಥಿತ ವಿಷಯಕ ಎಂದು ಇಷ್ಟೇ ಇರಬೇಕು ಆದ್ದರಿಂದಲೇ ಋತ ಎಂಬ ಶಬ್ದದಿಂದ ಪ್ರಮಾಣವಾದ ವೇದವು ಹೇಳಲ್ಪಡುತ್ತದೆ. ಋತವೆಂದರೆ ಯಥಾವಸ್ಥಿತವಿಷಯಕ ಎಂದು ಅರ್ಥ



## ೩೫೩ ವೃದ್ಧಾತ್ಮಾ

೧ ಗುಣಸಂವೃದ್ಧವಾದ ಸ್ವರೂಪ ಉಳ್ಳವನು[2]

ಇಂದ್ರನಾಮಕ ಭಗವಂತನು ಸರ್ವದಾ ಪರಿಪೂರ್ಣನಾಗಿರುವನು ಎಂಬ ಅಭಿಪ್ರಾಯದಲ್ಲಿ 'ಸದ್ಯೋವೃದ್ಧ' ಎಂಬ ವಿಶೇಷಣವನ್ನು ಋಗ್ವೇದದಲ್ಲಿ ನೀಡಲಾಗಿದೆ[3] ಹಾಗೆಯೇ ಮಿತ್ರಾವರುಣನಾಮಕ

---

೭ 1 ಋಚ್ಛತಿ ಸರ್ವದಾ ಗಚ್ಛತೀತಿ ಋತ್ ವಾಯುಃ । ತಂ ಧತ್ತ ಇತಿ ಋದ್ಧಃ ।

೧ 2 ವೃದ್ಧಃ ಸಂವೃದ್ಧಃ ಆತ್ಮಾ ಸ್ವರೂಪಂ ಯಸ್ಯ ಸಃ ವೃದ್ಧಾತ್ಮಾ ।

3 'ತ್ವಂ ಸುತಸ್ಯ ಪೀತಯೇ ಸದ್ಯೋವೃದ್ಧೋ .' –ಋ. ವೇ 5–6

ಭಗವದ್ರೂಪಗಳನ್ನು 'ಋತವೃದ' ಎಂದು ವಿಶೇಷಿಸಿರುವುದರ ಮೂಲಕ ಭಗವಂತನು ಮುಖ್ಯವಾಗಿಯೇ ಪರಿಪೂರ್ಣನಾಗಿರುವನೆಂದು ಸಂದೇಶಿಸಲಾಗಿದೆ[1] ಹೀಗೆ ತಾನು ಮುಖ್ಯವಾಗಿ ಯಾವಾಗಲೂ ಪೂರ್ಣನಾಗಿರುವುದರಿಂದ ಗೀತಾಚಾರ್ಯನು ತನ್ನನ್ನು 'ಪ್ರವೃದ್ಧ' ಎಂದು ವಿಶೇಷಿಸಿಕೊಂಡಿರುವನು[2] ಶ್ರೀಕೃಷ್ಣ ಪರಮಾತ್ಮನು ತನ್ನ ಗುಣಗಳಿಂದ ಸಕಲ ವೃದ್ಧರನ್ನೂ ಮೀರಿ ಪೂಜ್ಯತಮನೆನಿಸಿರುವನೆಂದು ಭೀಷ್ಮರು, ಅವನಿಗೆ ಅಗ್ರಪೂಜೆ ಸಲ್ಲಿಸುವ ಸಂದರ್ಭದಲ್ಲಿ ಅಭಿಪ್ರಾಯಪಟ್ಟಿರುವರು[3] ಲೋಕದಲ್ಲಿ 'ವೃದ್ಧತಮ'ನೆನಿಸಿರುವ ಶ್ರೀಕೃಷ್ಣನಿಗೆ ಪೂಜೆಸಲ್ಲಿಸುವುದನ್ನು ವಿರೋಧಿಸುವವನಿಗೆ ಸಾಮೋಪಾಯದ ಮಾತುಗಳು ಸಲ್ಲವು—ಎಂದೂ ಅವರು ಘೋಷಿಸಿರುವರು[4]

೨ ಗುಣಸಮೃದ್ಧವಾದ ಶರೀರ, ಅಥವಾ ಶರೀರದ ಮಧ್ಯಭಾಗ ಅಥವಾ ಮನಸ್ಸು ಅಥವಾ ಬುದ್ಧಿ ಉಳ್ಳವನು[5].

---

ಸದಾ ಪೂರ್ಣಃ । -ವಿಮ ಭಾ.

ಸದ್ಯಃ ವೃದ್ಧಃ ಸಮಾನೇಽಹನಿ 'ಸದ್ಯಃ' ಇತಿ ನಿಪಾತನಾತ್ ಯಸ್ಮಿನ್ನಹನಿ ಸ್ವಯಂ ವರ್ತತೇ ತಸ್ಮಿನ್ನಹನೀತ್ಯರ್ಥಃ, ಸದಾ ಚ ವರ್ತತೇ, ಅತಃ ಸದ್ಯೋವೃದ್ಧಃ ಸದಾ ವೃದ್ಧೋ ನಿತ್ಯಪೂರ್ಣ ಇತ್ಯರ್ಥಃ । -ಮಂ ಮಂ

1 'ಋತೇನ ಮಿತ್ರಾವರುಣಾವೃತಾವೃಧಾ '
-ಋ. ವೇ. 2-8

ನಿತ್ಯವೃದ್ಧಃ ಸ ಭಗವಾನ್ನೃತೇನಾನುಪಚಾರತಃ ।
-ಋ. ವೇ. ಭಾ

2 'ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ '
-ಗೀ. 11-32

ಪ್ರವೃದ್ಧಃ ಪರಿಪೂರ್ಣಃ । -ಗೀ. ಭಾ.

3 ಗುಣೈರ್ವೃದ್ಧಾನತಿಕ್ರಮ್ಯ ಹರಿರರ್ಚ್ಯತಮೋ ಮತಃ ।
-ಮ. ಭಾರ. ಸಭಾ. 38-17

4 ನಾಸ್ಮಿನ್ ದೇಯೋ ಹ್ಯನುನಯೋ ನಾಯಮರ್ಹತಿ ಸಾಂತ್ವನಮ್ ।
ಲೋಕವೃದ್ಧತಮೇ ಕೃಷ್ಣೇ ಯೋಽರ್ಹಣಾಂ ನಾಭಿಮನ್ಯತೇ ॥
-ಮ. ಭಾರ. ಸಭಾ. 38-6

೨ 5 ವೃದ್ಧಃ ಸಮೃದ್ಧಃ ಆತ್ಮಾ ಶರೀರಂ, ಸಂದೇಹಃ, ಮನಃ, ಬುದ್ಧಿರ್ವಾ ಯಸ್ಯ ಸಃ ವೃದ್ಧಾತ್ಮಾ । 'ಆತ್ಮಶಬ್ದಸ್ಯ ಮುಖ್ಯಾರ್ಥೋ ವಿಷ್ಣುರೇಕಃ ಸನಾತನಃ । ಸಂದೇಹದೇಹ-

ಭಗವಂತನ ಶರೀರ, ಮಧ್ಯದೇಹ, ಮನಸ್ಸು, ಹಾಗೂ ಬುದ್ಧಿ ಅವನ ಸ್ವರೂಪಾತ್ಮಕಗಳೇ ಆಗಿದ್ದು, ಅವನಂತೆಯೇ ಗುಣಪೂರ್ಣಗಳಾಗಿವೆ

೩ ಚತುರ್ಮುಖ ಅಥವಾ ವಾಯುದೇವನು ಪ್ರವೃದ್ಧನಾಗುವಂತೆ ಅನುಗ್ರಹಿಸುವವನು.[1]

ಭಗವಂತನು ತನ್ನ ಬಗ್ಗೆ ಜಿಜ್ಞಾಸೆ ನಡೆಸುವ, ತನ್ನ ಹಾಗೂ ಲಕ್ಷ್ಮೀದೇವಿಯ ಬಗ್ಗೆ ಪೂರ್ಣ ಜ್ಞಾನವುಳ್ಳ ಚತುರ್ಮುಖನಿಗೆ ಮೋಕ್ಷವನ್ನು ಅನುಗ್ರಹಿಸುವುದರ ಮೂಲಕ ಅವನನ್ನು ಪ್ರವೃದ್ಧನನ್ನಾಗಿಸುವವನು[2] ಅಗ್ನಿನಾಮಕ ಭಗವಂತನು ವಾಯುದೇವನನ್ನೂ ಪ್ರವರ್ಧಿಸುವವನೆಂಬುದಾಗಿ 'ಸಹೋವೃಧ' ಎಂಬ ವಿಶೇಷಣದಿಂದ ಸಂದೇಶಿಸಲಾಗಿದೆ[3]

---

ಮನಸೋ ಬುದ್ಧಿಜೀವಾಃ ಸ್ವಯಂ ತಥಾ। ಬ್ರಹ್ಮಾದ್ಯಮುಖ್ಯಾಃ ಕ್ರಮಶ ಉತ್ಕರ್ಷೋರ್ಹ್ಯಾತ್ಮತಾ ಭವೇತ್'-ಇತಿ ಪ್ರಕಾಶಸಂಹಿತಾಯಾಂ (ಭಾಗ ತಾ ನಿ. 3-10-23) ಆತ್ಮಶಬ್ದಸ್ಯ ಶರೀರಮಧ್ಯದೇಹಾದ್ಯರ್ಥಕತ್ವಂ ನಿರೂಪಿತಮ್ ।

೩ 1 ವೃದ್ಧಃ ಗುಣಪ್ರವೃದ್ಧಃ ಆತ್ಮಾ ಚತುರ್ಮುಖಃ ವಾಯುರ್ವಾ ಯಸ್ಮಾತ್ ಸಃ ವೃದ್ಧಾತ್ಮಾ । 'ಆತ್ಮೇತಿ ಪರಮಾತ್ಮಾ ಚ ವಿರಿಂಚಶ್ಚಾಪಿ ಕಥ್ಯತೇ । ವಾಯುಃ ಮನಶ್ಚ ದೇಹಶ್ಚ ಸ್ವಯಮಿತ್ಯಪಿ ಕುತ್ರಚಿತ್'-ಇತಿ ಪ್ರತ್ಯಯೋ (ಭಾಗ ತಾ. ನಿ. 11-22-23) ಆತ್ಮಶಬ್ದಸ್ಯ ವಿರಿಂಚಾರ್ಥಕತ್ವಂ ವಾಯ್ವರ್ಥಕತ್ವಂ ಚ ಪ್ರತಿಪಾದ್ಯತೇ ।

2 ಸಪಕ್ಷನ್ಮಹಿಷಂ ಮೃಗಂ ಪಿತ್ರೇ ಮಾತ್ರೇ ವಿಭುಕ್ರತುಮ್ ।
-ಋ ವೇ. 8-69-15

ಸಪಕ್ಷತ್ ಪರಿಪಕ್ವಜ್ಞಾನಾದಿಗುಣಕಮಕರೋತ್ । ಮಹಿಷಂ ಮಹಾಂತಂ ಬ್ರಹ್ಮಾಣಮ್ । ಮೃಗಂ ಮೃಗಯಂತಂ ಸ್ವಾತ್ಮಾನಮ್ । ಪಿತ್ರೇ ಸ್ವಸ್ಮೈ ಮಾತ್ರೇ ಲಕ್ಷ್ಮ್ಯೈ ವಿಭುಕ್ರತುಂ ಪೂರ್ಣಜ್ಞಾನಮ್ । ಪಿತೃಮಾತೃವಿಷಯೇ ಪೂರ್ಣಜ್ಞಾನಮ್ । ಪುನಃ ಪೂರಯಾಮಾಸೇತ್ಯರ್ಥಃ । -ಕ. ನಿ

'ಜ್ಞಾನಪೂರ್ಣಂ ವಿಧಾತಾರಂ ಮೋಕ್ಷದಾನೇನ ಕೇಶವಃ । ಸ್ವಪುತ್ರಂ ಪೂರಯಾಮಾಸ ಮಹಿಷಂ ಮಹತಾಂ ಮಹಾನ್' -ಪ್ರವೃತ್ತ (ಕ. ನಿ.)

3 'ಜನಾಸೋ ಅಗ್ನಿಂ ದಧಿರೇ ಸಹೋವೃಧಂ.. '
-ಋ. ವೇ. 36-2

....ವಿಷ್ಣುರ್ವಾಯೋರಪಿ ವಿವೃದ್ಧಿಕೃತ್ । -ಋ. ವೇ. ಭಾ.

೪ ಜೀವಾತ್ಮರು ಗುಣಪ್ರವೃದ್ಧರಾಗುವಂತೆ ಅನುಗ್ರಹಿಸುವವನು.[1]

ಪರಮ ಬ್ರಹ್ಮನನ್ನು ತಿಳಿದವನು ಅವನ ಅನುಗ್ರಹದಿಂದ ತನ್ನ ಸ್ವಭಾವಕ್ಕೆ ಯೋಗ್ಯವಾದ ಸಂವೃದ್ಧಿಯನ್ನು ಪಡೆಯುವನೆಂದು ಶ್ರುತಿಯು ಸಂದೇಶಿಸಿದೆ.[2]

೫ ಗುಣಪ್ರವೃದ್ಧರಾದವರನ್ನು (ತನ್ನವರನ್ನಾಗಿ) ಸ್ವೀಕರಿಸುವವನು.[3]

೬ ಗುಣಪ್ರವೃದ್ಧರಾದವರಲ್ಲಿ ತನ್ನ ಮನಸ್ಸು ಉಳ್ಳವನು.[4]

೭ ಗುಣಗಳಿಂದ ಪ್ರವೃದ್ಧರಾದವರ ಮನಸ್ಸು ಯಾರಲ್ಲಿ ನೆಲೆಸಿರುವುದೋ ಅಂತಹವನು.[5]

ಭಗವಂತನು ತಾನು ಭಕ್ತಜನಪ್ರಿಯನಾಗಿದ್ದು, ಸಾಧುಗಳಾದ ಭಕ್ತರಿಂದ ಅಪಹೃತಹೃದಯವುಳ್ಳವನಾಗಿರುವೆನೆಂದೂ, ಸಾಧುಗಳಾದರೂ ತಮ್ಮ ಹೃದಯವನ್ನು ತನ್ನಲ್ಲಿ ನೆಟ್ಟವರಾಗಿರುವರೆಂದೂ ದೂರ್ವಾಸರಲ್ಲಿ ಅಂಬರೀಷ ರಾಜನನ್ನು ಸಂರಕ್ಷಿಸಿದ ಸಂದರ್ಭದಲ್ಲಿ ಸಂದೇಶಿಸಿರುವನು[6]

೮ (ತಮ್ಮ ತಮ್ಮ ಯೋಗ್ಯತಾನುಸಾರವಾಗಿ) ಪ್ರವೃದ್ಧರಾಗಿರುವ ಮುಕ್ತಾತ್ಮರಿಗೆ

---

೪ 1 ವೃದ್ಧಾಃ ಆತ್ಮಾನಃ ಜೀವಾಃ ಯಸ್ಮಾತ್ ಸಃ ವೃದ್ಧಾತ್ಮಾ ।

2 'ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ' —ವಿ. ಶ. ವಿ ಉದ್ಧೃತಾ

'ಬ್ರಹ್ಮ ವೇದ ಬ್ರಹ್ಮೈವ ಭವತಿ' ಇತ್ಯಾದಿ ಚ 'ಸಂಪೂಜ್ಯ ಬ್ರಾಹ್ಮಣಂ ಭಕ್ತ್ಯಾ ಶೂದ್ರೋಽಪಿ ಬ್ರಾಹ್ಮಣೋ ಭವೇತ್' ಇತಿವತ್ ಬೃಂಹಿತೋ ಭವತೀತ್ಯರ್ಥಃ ।

೫ 3 ವೃದ್ಧಾನ್ ಗುಣತಃ ಪ್ರವೃದ್ಧಾನ್ ಸ್ವಾತ್ಮೀಯತಯಾ ಆದತ್ತ ಇತಿ ವೃದ್ಧಾತ್ಮಾ ।

೬ 4 ವೃದ್ಧೇಷು ಗುಣತಃ ಪ್ರವೃದ್ಧೇಷು ಆತ್ಮಾ ಮನಃ ಯಸ್ಯ ಸಃ ವೃದ್ಧಾತ್ಮಾ ।

೭ 5 ಗುಣತಃ ವೃದ್ಧಾನಾಂ ಆತ್ಮಾ ಮನಃ ಯಸ್ಮಿನ್ ಸಃ ವೃದ್ಧಾತ್ಮಾ ।

6 ಅಹಂ....ಸಾಧುಭಿರ್ಗ್ರಸ್ತಹೃದಯೋ ಭಕ್ತೈರ್ಭಕ್ತಜನಪ್ರಿಯಃ ।
...ಮಯಿ ನಿರ್ಬದ್ಧಹೃದಯಾಃ ಸಾಧವಃ ಸಮದರ್ಶನಾಃ ।

—ಭಾಗ. 9-4-63,66

ಒಡೆಯನಾಗಿರುವವನು[1]

ಪುರುಷನಾಮಕ ಭಗವಂತನು ಮುಕ್ತವರ್ಗಕ್ಕೆ ಒಡೆಯನಾಗಿರುವನೆಂದು ಪುರುಷಸೂಕ್ತವು ಸಾರಿದೆ.[2]

೯ ಮುಕ್ತಾತ್ಮರಿಗೆ ಚಿದಾನಂದಾತ್ಮಕವಾದ ದೇಹವನ್ನು ಅನುಗ್ರಹಿಸುವವನು.[3]

ಸ್ವರ್ಣಕಾರನು ಬೆಂಕಿಯಲ್ಲಿಟ್ಟು ಸ್ವರ್ಣದ ಮಲವನ್ನು ಹೋಗಲಾಡಿಸಿ ಶುದ್ಧವಾದ ಆ ಸ್ವರ್ಣದಿಂದ ತನ್ನ ಇಚ್ಛೆಗೆ ಬಂದ ಆಭರಣವನ್ನು ರಚಿಸುವನು ಅಂತೆಯೇ ಭಗವಂತನು ಜೀವಾತ್ಮನ ಅವಿದ್ಯಾಕಾಮಕರ್ಮಾದಿಮಲವನ್ನು ಹೋಗಲಾಡಿಸಿ ಅವನಿಗೆ ಮುಕ್ತಿಯಲ್ಲಿ ಇರಲು ಯೋಗ್ಯವಾದ ರೂಪವನ್ನು ಅನುಗ್ರಹಿಸುವನು[4]

೧೦ ಗುಣತಃ ಪ್ರವೃದ್ಧರಾಗಿರುವವರಲ್ಲಿ (ವಿಶೇಷವಾಗಿ) ವ್ಯಾಪಿಸಿರುವವನು[5]

---

1 ವೃದ್ಧಾಃ ಸ್ವಸ್ವಯೋಗ್ಯತಾನುಸಾರೇಣ ಪ್ರವೃದ್ಧಾಃ ಮುಕ್ತಾತ್ಮಾನಃ । ತೇಷಾಂ ಆತ್ಮಾ ಸ್ವಾಮೀ ವೃದ್ಧಾತ್ಮಾ ।

2 '. ಉತಾಮೃತತ್ವಸ್ಯೇಶಾನಃ ..' -ಪು. ಸೂ.

'. ..ಪತಿಂ ಯದೇಷಾಮಪಿ ವಿಷ್ಣುಮಾಹ ಹ್ಯುತಾಮೃತತ್ವಸ್ಯ ಪತಿತ್ವವಾಗ್ಘರೇಃ' । -ಅ. ವ್ಯಾ. 4-4-3

೯ 3 ವೃದ್ಧಾನಾಂ ಯೋಗ್ಯತಾನುಸಾರೇಣ ಪ್ರವೃದ್ಧಾನಾಂ ಮುಕ್ತಾತ್ಮನಾಂ ಆತ್ಮಾ ಶರೀರಂ ಯಸ್ಮಾತ್ ಸಃ ವೃದ್ಧಾತ್ಮಾ ।

4 ಸ್ವರ್ಣಕಾರೋ ಯಥಾ ಸ್ವರ್ಣಮಲಮಗ್ನೌ ನಿಹತ್ಯ ಚ । ಶುದ್ಧೇನ ತೇನ ಚಾತ್ಮೇಷ್ಟಂ ಕುರುತೇ ರೂಪಮಂಜಸಾ । ಏವಂ ಸ ಭಗವಾನ್ ವಿಷ್ಣುರ್ಜೀವಸ್ವರ್ಣಸ್ಯ ಯನ್ಮಲಮ್ ಅವಿದ್ಯಾಕಾಮಕರ್ಮಾದ್ಯಮಾತ್ಮಾಗ್ನೌ ನಾಶ್ಯ ಸರ್ವಕೃತ್ । ಸ್ವೇಚ್ಛಯಾ ಕುರುತೇ ರೂಪಂ ಯದ್ ಯೋಗ್ಯಂ ತಸ್ಯ ಮುಕ್ತಿಗಮ್

-ಬೃ. ಉ. ಭಾ 6-4-4

೧೦ 5 ವೃದ್ಧೇಷು ಗುಣತಃ ಪ್ರವೃದ್ಧೇಷು ಆ ತನೋತೀತಿ ವೃದ್ಧಾತ್ಮಾ ।

೧೧ ಪ್ರವೃದ್ಧರಾದವರು ಯಾರ ಪ್ರತೀಕರಾಗಿರುವರೋ ಅಂತಹವನು[1]

೧೨ ಗುಣಪ್ರವೃದ್ಧರಾದ ಬ್ರಹ್ಮಾದಿಗಳಿಗೂ ಅಂತರ್ಯಾಮಿ ಆಗಿರುವವನು[2]

ಬೃಹದಾರಣ್ಯಕೋಪನಿಷತ್ತಿನಲ್ಲಿ ಸರ್ವಜೀವಾಭಿಮಾನಿಯಾದ ಚತುರ್ಮುಖನನ್ನು 'ವಿಜ್ಞಾನ'ಎಂಬ ಹೆಸರಿನಿಂದ ಉಲ್ಲೇಖಿಸಿ ಅವನಿಗೂ ಭಗವಂತನು ಅಂತರ್ಯಾಮಿಯಾಗಿರುವನೆಂದು ಸಂದೇಶಿಸಲಾಗಿದೆ[3]

೧೩ ಪರಿಪೂರ್ಣನಾಗಿರುವವನು ಹಾಗೂ ಜೀವಾತ್ಮರ ಇಂದ್ರಿಯಗಳ ಮೂಲಕ ವಿಷಯ ಪದಾರ್ಥಗಳನ್ನು ಭೋಗಿಸುವವನು[4]

ಭಗವಂತನು ಪೂರ್ಣಾನಂದನಾಗಿರುವನಾದರೂ ಕ್ರೀಡೆಯಿಂದ ಜೀವಾತ್ಮರ ಇಂದ್ರಿಯಗಳಲ್ಲಿ ಇದ್ದುಕೊಂಡು ಶುಭಭೋಗಗಳನ್ನು ಭೋಗಿಸುವನೆಂಬುದಾಗಿ ನಾರಾಯಣ ಶ್ರುತಿಯು ಸಂದೇಶಿಸಿದೆ[5]

---

೧೧ 1 ವೃದ್ಧಾಃ ಗುಣಶಃ ಪ್ರವೃದ್ಧಾಃ ಜ್ಞಾನಿನಃ ಆತ್ಮಾ ಶರೀರಂ ಪ್ರತಿಮಾ ಇತಿ ಯಾವತ್, ಯಸ್ಯ ಸಃ ವೃದ್ಧಾತ್ಮಾ ।

೧೨ 2 ವೃದ್ಧಾನಾಂ ಗುಣವೃದ್ಧಾನಾಂ ಬ್ರಹ್ಮಾದೀನಾಮಾತ್ಮಾಽಂತರ್ಯಾಮೀತಿ ।

–ಸ. ಸಂ

3 ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಂ ಶರೀರಂ ಯೋ ವಿಜ್ಞಾನಾದಂತರೋ ಯಮಯತ್ಯೇಷ ತ ಆತ್ಮಾಽಂತರ್ಯಾಮ್ಯಮೃತಃ –ಬೃ. ಉ. 5–7–22

'ಆತ್ಮಾ ವಿಜ್ಞಾನಮಿತಿ ತು ಸರ್ವಜೀವಾಭಿಮಾನವಾನ್ । ಬ್ರಹ್ಮೈವೋಕ್ತಃ '

-ಮಹಾಮೀಮಾಂಸಾ (ಬೃ. ಉ. ಭಾ )

೧೩ 4 ಪರಿಪೂರ್ಣತ್ವಾತ್ ವೃದ್ಧಃ । ಜೀವಾತ್ಮನಾಂ ಇಂದ್ರಿಯದ್ವಾರಾ ವಿಷಯಾನ್ ಅತ್ತೀತಿ ಆತ್ಮಾ । ವೃದ್ಧಶ್ಚಾಸೌ ಆತ್ಮಾ ಚ ವೃದ್ಧಾತ್ಮಾ ।

5 ಭುಂಕ್ತೇ ಹರಿಃ ಶುಭಾನ್ ಭೋಗಾನಿಂದ್ರಿಯೇಷು ವ್ಯವಸ್ಥಿತಃ ।
ಪೂರ್ಣಾನಂದೋಽಪಿ ಭಗವಾನ್ ಕ್ರೀಡಯಾ ಭುಂಕ್ತ ಏವ ತು ॥

-ನಾರಾಯಣ ಶ್ರುತಿಃ (ಗೀ. ತಾ. 15-9)

೧೪ ಅನಾದಿ ಹಾಗೂ ನಿತ್ಯನಾಗಿರುವವನು, ಮತ್ತು ದೇಶತಃ ವ್ಯಾಪ್ತನಾಗಿರುವವನು.[1]

ಗೀತಾಚಾರ್ಯನು ತಾನು ಅನಾದಿನಿತ್ಯನಾಗಿರುವುದರಿಂದ ಪ್ರವೃದ್ಧನಾಗಿರುವೆನೆಂದು ಸಂದೇಶಿಸಿರುವನು[2] ಭಗವಂತನು ಆತ್ಮ ಎಂದೆನಿಸಲು ಅವನು ಎಲ್ಲೆಡೆ ವ್ಯಾಪಿಸಿರುವುದೂ ಒಂದು ಕಾರಣವೆನಿಸಿದೆ ಎಂದು ಮಹಾಭಾರತ ತಿಳಿಸಿದೆ[3]

೧೫ ಪರಿಪೂರ್ಣನಾಗಿರುವವನು ಮತ್ತು (ಎಲ್ಲದ್ದಕ್ಕೂ) ಒಡೆಯನಾಗಿರುವವನು.[4]

ಭಗವಂತನು ಪರಿಪೂರ್ಣನಾಗಿದ್ದು, ಎಲ್ಲದ್ದಕ್ಕೂ ಒಡೆಯನಾಗಿರುವುದರಿಂದಲೇ 'ಮಹಾತ್ಮಾ' ಎಂದೆನಿಸಿರುವನು.[5]

## ಜಿಜ್ಞಾಸೆ

[ಗುಣಪೂರ್ಣ ಸ್ವರೂಪನು]

ಪ್ರ - ವೃದ್ಧಾತ್ಮಾ—ಪೂರ್ಣಸ್ವರೂಪನು ಎಂದು ಅರ್ಥ ಗುಣಪೂರ್ಣ ಎಂಬ ಅರ್ಥವು ವೃದ್ಧಾತ್ಮಾ ಎಂಬುದ್ದಕ್ಕೆ ಹೇಗೆ?

---

೧೪ 1 ಅನಾದಿನಿತ್ಯತ್ವಾತ್ ವೃದ್ಧಃ । ಆ ತನೋತಿ ದೇಶತಃ ವಿಸ್ತೃತೋ ಭವತೀತಿ ಆತ್ಮಾ । ವೃದ್ಧಶ್ಚಾಸೌ ಆತ್ಮಾ ಚ ವೃದ್ಧಾತ್ಮಾ ।

2 'ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ..... ' -ಗೀ. 11-32

ಪ್ರವೃದ್ಧಃ...ಅನಾದಿರ್ವಾ । -ಗೀ ಭಾ.

'ಅನಾದಿಃ' ಇತಿ ನಿತ್ಯಸ್ಯಾಪ್ಯುಪಲಕ್ಷಣಮ್ । -ಪ್ರ. ದೀ.

3 'ಯಚ್ಚಾಪ್ನೋತಿ...ತಸ್ಮಾದಾತ್ಮೇತಿ ಭಣ್ಯತೇ'
-ಭಾರತ (ಗೀ ಭಾ. 11-37)

೧೫ 4 ವೃದ್ಧಃ ಪೂರ್ಣಃ । ಆತ್ಮಾ '...ಯದಾದತ್ತೇ. .ತಸ್ಮಾದಾತ್ಮೇತಿ ಭಣ್ಯತೇ ಇತಿ' ಸ್ವಾಮೀ ಇತ್ಯರ್ಥಃ । ವೃದ್ಧಶ್ಚಾಸೌ ಆತ್ಮಾ ಚ ವೃದ್ಧಾತ್ಮಾ ।

5 ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್ ..
-ಗೀ. 11-37

ಪೂರ್ಣಶ್ಚಾಸಾವಾತ್ಮಾ ಚ ಇತಿ ಮಹಾತ್ಮಾ ।
-ಗೀ. ಭಾ.

ಉ - ಮಹಾತ್ಮರು ಎಂದು ಕೆಲವರನ್ನು ಅನೇಕರು ಹೇಳುತ್ತಾರೆ ಅದರ ಅರ್ಥವೇನು? ದೊಡ್ಡವರು ಎಂದು ಇಷ್ಟೇ ಅರ್ಥವೋ? ತಪೋವೃದ್ಧರು ಎಂದು ಅರ್ಥವೋ? ಯೋಗದಿಂದ ದೊಡ್ಡವರು ಎಂದು ಅರ್ಥ ತಪೋವೃದ್ಧರು ಎಂದು ಯೋಗ ರೂಢಿಯಿಂದ ಅರ್ಥ. ಹೀಗಾದರೆ ವೃದ್ಧಾತ್ಮಾ ಎಂಬುದಕ್ಕೆ ಯೋಗದಿಂದ ಪೂರ್ಣ ಸ್ವರೂಪನು ಎಂದು ಅರ್ಥ, ಯೋಗರೂಢಿಯಿಂದ ಗುಣ ಪೂರ್ಣ ಸ್ವರೂಪನು ಎಂದು ಅರ್ಥ ಆಗಬಹುದಲ್ಲ

ಪ್ರ - ವೃದ್ಧಾತ್ಮಾ ಎಂಬುದಕ್ಕೆ ಬೆನ್ನು ಬಗ್ಗಿಯದೆ, ತಲೆ ಗಡ್ಡ ಹಣ್ಣಾಗಿದೆ ಈ ಅರ್ಥವೂ ಇದೆ. ಈ ಅರ್ಥವನ್ನು ಹೇಳಬಹುದೇ?

ಉ - ಪರಮಾತ್ಮನಲ್ಲಿ ಈ ಅರ್ಥವು ಪ್ರಮಾಣ ಬಾಧಿತವಾದ್ದರಿಂದ ಈ ಅರ್ಥವನ್ನು ಹೇಳಬಾರದು.

ಪ್ರ - ನಿರ್ಗುಣ ಶ್ರುತಿಯಿಂದ ಗುಣಪೂರ್ಣ ಸ್ವರೂಪನು ಎಂಬ ಅರ್ಥವೂ ಬಾಧಿತವಾಗಿದೆಯಲ್ಲ?

ಉ - ನಿರ್ಗುಣ ಶ್ರುತಿಗೆ 'ಪ್ರಾಕೃತೈರ್ಹೇಯಸಂಯುಕ್ತೈಃ ಗುಣೈರ್ಹೀನತ್ವಮುಚ್ಯತೇ' ಎಂದು ಪ್ರಾಕೃತಗುಣ ರಹಿತನು ಎಂದು ಅರ್ಥವನ್ನು ಪಾದ್ಮ ಪುರಾಣದಲ್ಲಿ ಹೇಳಿದ್ದರಿಂದ ಆ ಶ್ರುತಿಯು ವಿರೋಧವು ಬರುವದಿಲ್ಲ



೩೫೪ ಮಹಾಕ್ಷಃ

೧ ಮಹತ್ತ್ವಪೂರ್ಣಗಳಾದ ಚಕ್ಷುಸ್ಸುಗಳುಳ್ಳವನು[1]

೨ ಮಹತ್ತ್ವಪೂರ್ಣಗಳಾದ ಇಂದ್ರಿಯಗಳುಳ್ಳವನು[2]

ಭಗವಂತನಿಗೆ ಪ್ರಾಕೃತೇಂದ್ರಿಯಗಳು ಇಲ್ಲ. ತನ್ನ ಸ್ವರೂಪಕ್ಕಿಂತ ಭಿನ್ನಗಳಾದ ಇಂದ್ರಿಯಗಳಿಲ್ಲ. ಆದರೆ ಅವನು ಸರ್ವೇಂದ್ರಿಯಗಳನ್ನೂ ಶಬ್ದಾದಿ ವಿಷಯಗಳನ್ನೂ ತಿಳಿಯಬಲ್ಲನು[3] ಎಂಬು

---

೧ 1 ಮಹಾಂತಿ ಅಕ್ಷೀಣಿ ಯಸ್ಯ ಸಃ ಮಹಾಕ್ಷಃ ।

೨ 2 ಮಹಾಂತಿ ಅಕ್ಷಾಣಿ ಇಂದ್ರಿಯಾಣಿ ಯಸ್ಯ ಸಃ ಮಹಾಕ್ಷಃ ।

3 ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।
—ಗೀ. 13-15

ಸರ್ವೇಂದ್ರಿಯಾಣಿ ಗುಣಶ್ಚಾಽಭಾಸಯತೀತಿ ಸರ್ವೇಂದ್ರಿಯಗುಣಾಭಾಸಮ್। ಇಂದ್ರಿಯವರ್ಜಿತತ್ವಾದ್ಯರ್ಥ ಉಕ್ತಃ ಪುರಸ್ತಾತ್ । —ಗೀ ಭಾ.

ದಾಗಿ ಗೀತಾಚಾರ್ಯನು ಸಂದೇಶಿಸುವುದರ ಮೂಲಕ ತಾನು ಅಪ್ರಾಕೃತಗಳಾದ ಇಂದ್ರಿಯಗಳನ್ನು ಹೊಂದಿರುವೆನೆಂಬುದನ್ನು ಸೂಚಿಸಿರುವನು. ಹಾಗೆಯೇ ತನ್ನ ಎಲ್ಲ ಇಂದ್ರಿಯಗಳು ಸ್ವಭಿನ್ನ ಸಕಲೇಂದ್ರಿಯಗಳ ಸಾಮರ್ಥ್ಯವನ್ನೂ ಪಡೆದಿವೆ—ಎಂಬುದಾಗಿಯೂ ಗೀತಾಚಾರ್ಯನು ಸಂದೇಶಿಸಿ ರುವನು[1] ಭಗವಂತನ ಇಂದ್ರಿಯವು ಅವನ ಸ್ವರೂಪಾತ್ಮಕವಾಗಿದ್ದು, ಅವನಂತೆಯೇ ನಿತ್ಯಜ್ಞಾನ ಸ್ವರೂಪಿ ಆಗಿದೆ—ಎಂದು ಬ್ರಹ್ಮತರ್ಕವು ಸೂಚಿಸಿದೆ[2] ಅಕ್ಷ ಎಂದರೆ ನಾಶವಿಲ್ಲದದ್ದು ಎಂಬ ಅರ್ಥ. ಉಳಿದೆಲ್ಲರ ಸ್ವರೂಪಾತ್ಮಕ ಇಂದ್ರಿಯಗಳು ನಿತ್ಯಗಳೇ ಆಗಿರುವವಾದರೂ ಅವುಗಳಿಗೆ ಸೃಷ್ಟಿಕಾಲ ದಲ್ಲಿ ಭೌತಿಕಾಹಂಕಾರಿಕ ಅವಯವಗಳ ಉಪಚಯರೂಪವಾದ ಉತ್ಪತ್ತಿಯೂ, ಪ್ರಲಯಕಾಲದಲ್ಲಿ ಅಂತಹ ಅವಯವಗಳ ಅಪಚಯರೂಪವಾದ ನಾಶವೂ ಇರುವ ಪ್ರಯುಕ್ತ ಮುಖ್ಯವಾದ ನಿತ್ಯ ತ್ವವು ಇಲ್ಲ ಭಗವಂತನ ಇಂದ್ರಿಯಗಳಾದರೆ ಯಾವುದೇ ರೀತಿಯ ಉತ್ಪತ್ತಿ, ನಾಶಗಳಿಲ್ಲದ ಪ್ರಯುಕ್ತ ಮುಖ್ಯವಾಗಿಯೇ ನಿತ್ಯಗಳೆನಿಸಿವೆ ಆದುದರಿಂದ ನಾಶರಾಹಿತ್ಯವನ್ನು ಪ್ರವೃತ್ತಿ ನಿಮಿತ್ತವನ್ನಾಗಿಸಿ ಕೊಂಡು ಹೊರಟಿರುವ 'ಅಕ್ಷ' ಶಬ್ದದ ಮುಖ್ಯ ಅರ್ಥವು ಭಗವಂತನ ಇಂದ್ರಿಯವೇ ಆಗಿದೆ

---

ಪುರಸ್ತಾತ್ ದ್ವಿತೀಯೇ । —ಪ್ರ. ದೀ.

'.. ಬ್ರಹ್ಮನಿರ್ವಾಣಮೃಚ್ಛತಿ' (ಗೀ. 2-72) ಇತ್ಯತ್ರ ನಿರ್ವಾಣಶಬ್ದಪ್ರತಿಪಾದನಂ 'ಅನಿಂದ್ರಿಯಾಃ' ಇತ್ಯಾದಿವತ್ । ಕಥಮನ್ಯಥಾ ಸರ್ವಪುರಾಣಾದಿಪ್ರಸಿದ್ಧಾಕೃತಿರ್ಭಗವತ ಉಪಪದ್ಯತೇ' ಇತಿ ಯಥಾ ವ್ಯಾಖ್ಯಾತಂ ತಥೇತ್ಯಭಿಪ್ರಾಯಃ ।

* ಸರ್ವೇಂದ್ರಿಯಾಣಾಂ ವಿಷಯಾನ್ ವೇತ್ತಿ ಸೋಽಪ್ರಾಕೃತೇಂದ್ರಿಯಃ। ಯತೋಽತತೋಽನಿಂದ್ರಿಯಃ ಪ್ರೋಕ್ತೋ ಯನ್ನ ಭಿನ್ನೇಂದ್ರಿಯೋಽಥವಾ।
—ಗೀ ತಾ. 13-14

1 ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥
—ಗೀ. 13-14

ಸರ್ವತಃ ಪಾಣಿಪಾದಾದಿರ್ಯತಃ ಪಾಣ್ಯಾದಿಶಕ್ತಿಮಾನ್ । ಕೇಶಾದಿಷ್ವಪಿ ಸರ್ವತ್ರ ಕೃಷ್ಣಕೇಶೋ ಹಿ ಯಾದವಃ । —ಗೀ. ತಾ.

2 'ಅಕ್ಷಾಣಿ ಚ ಸ್ವರೂಪಾಣಿ ನಿತ್ಯಜ್ಞಾನಾತ್ಮಕಾನಿ ಚ । ವಿಷ್ಣೋಃ...'
—ಬ್ರಹ್ಮತರ್ಕ (ವಿ. ತ. ವಿ.)

ಉಳಿದವರ ಇಂದ್ರಿಯಗಳು ಔಪಚಾರಿಕವಾಗಿಯಷ್ಟೇ 'ಅಕ್ಷ' ಎನಿಸಿವೆ ಎಂದು 'ಬೃಹತ್ತರ್ಕ' ಸಂದೇಶಿಸಿದೆ.[1] ಯಾವುದೇ ರೀತಿಯ ವ್ಯವಧಾನವಿಲ್ಲದ ಭಗವಂತನಿಗೆ ಸನ್ನಿಧಾನ ಪ್ರಯುಕ್ತವಾಗಿ, ದೂರ ಪ್ರಯುಕ್ತವಾಗಿ, ಕಾಲವ್ಯವಧಾನಪ್ರಯುಕ್ತವಾಗಿ, ಸ್ವಭಾವವ್ಯವಧಾನಪ್ರಯುಕ್ತವಾಗಿ, ಅಥವಾ ವಸ್ತುವ್ಯವಧಾನಪ್ರಯುಕ್ತವಾಗಿ ದರ್ಶನಾಶಕ್ತಿ ಇಲ್ಲ[2]—ಎನ್ನುವುದರ ಮೂಲಕ ಅವನ ಚಕ್ಷುರಿಂದ್ರಿಯದ ವೈಶಿಷ್ಟ್ಯವನ್ನು ಸೂಚಿಸಿಕೊಡಲಾಗಿದೆ.

ಹೀಗೆ ಅಪ್ರಾಕೃತತ್ವ, ಸ್ವರೂಪಾತ್ಮಕತ್ವ, ಸರ್ವಪದಾರ್ಥಗ್ರಾಹಕತ್ವ, ಮುಖ್ಯನಿತ್ಯತ್ವ—ಮುಂತಾದ ಧರ್ಮಪ್ರಯುಕ್ತವಾದ ಮಹತ್ತ್ವವು ಭಗವಂತನ ಇಂದ್ರಿಯಗಳಲ್ಲಿದೆ ಯಾವುದೇ ವಿಧದ ವ್ಯವಧಾನರಾಹಿತ್ಯ ಮುಂತಾದ ಮಹತ್ತ್ವವು ಅವನ ಚಕ್ಷುರಿಂದ್ರಿಯದಲ್ಲಿದೆ

೩ ಮಹತ್ತ್ವಪೂರ್ಣನಾದ ಆತ್ಮನು[3]

ವಿಶ್ವರೂಪಿ ಭಗವಂತನನ್ನು ಅರ್ಜುನನು 'ಮಹಾತ್ಮನ್' ಎಂದೇ ಸಂಬೋಧಿಸಿರುವನು[4]

---

1 ಅಕ್ಷಯಂ ಪುರುಷಸ್ಯಾಕ್ಷಂ ಸ್ವರೂಪೇ ಮುಖ್ಯಮೇವ ತು । ಉಪಚಾರಸ್ತದನ್ಯತ್ರ ಸೃಷ್ಟಾವುಪಚಯೋ ಯತಃ । —ಬೃಹತ್ತರ್ಕ (ವಿ. ತ. ವಿ)

ಏತತ್ತು ನಿರ್ವಚನಂ ಪುರುಷಸ್ಯೇಶ್ವರಾದೇಃ ಸ್ವರೂಪೇಽಕ್ಷೇ ಮುಖ್ಯಮನ್ವರ್ಥಮೇವ । ತದನ್ಯತ್ರ ವಿಭಿನ್ನೇಽಕ್ಷೇಽಕ್ಷಶಬ್ದಸ್ಯೋಪಚಾರಃ । ಕುತೋ? ಯತಃ ಸ್ವರೂಪೇಣ ನಿತ್ಯಸ್ಯಾಪಿ ತಸ್ಯ ಸೃಷ್ಟಿಕಾಲೇ ಭೌತಿಕಾಹಂಕಾರಿಕಾವಯವೋಪಚಯರೂಪೋತ್ಪತ್ತಿರಸ್ತಿ, ಪ್ರಲಯೇ ಚ ತದಪಚಯಲಕ್ಷಣಃ ಕ್ಷಯಶ್ಚಾತೋ ಮುಖ್ಯಾಸಂಭವಾದೇಕದೇಶಾಕ್ಷಯತ್ವನಿಮಿತ್ತಾ ಗೌಣೀ ವೃತ್ತಿರಿತಿ । —ವಿ ತ. ವಿ ಟೀಕಾ.

2 ಸನ್ನಿಧಾನೇಽಥವಾ ದೂರೇ ಕಾಲವ್ಯವಹಿತೇಽಪಿ ವಾ । ಸ್ವಭಾವಾದ್ವಾ ವ್ಯವಹಿತೇ ವಸ್ತುವ್ಯವಹಿತೇಽಪಿ ವಾ । ನಾಶಕ್ತಿರ್ವಿದ್ಯತೇ ವಿಷ್ಣೋರ್ನಿತ್ಯಾವ್ಯವಹಿತತ್ವತಃ

—ಮ. ಭಾರ. ತಾ. ನಿ. 22-32

೩ 3 ಮಹಾನ್ ಚಾಸೌ ಅಕ್ಷಃ ಆತ್ಮಾ ಚ ಮಹಾಕ್ಷಃ। 'ಅಕ್ಷೋ ಜ್ಞಾನೇ ಚಾತ್ಮನಿ ರಾವಣೌ...'

—ಹೇಮಚಂದ್ರಃ ।

4 'ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್....'

—ಗೀ. 11-37

೪ ಮಹತ್ತ್ವಪೂರ್ಣವಾದ ಜ್ಞಾನ ಉಳ್ಳವನು, ಅಥವಾ ಜ್ಞಾನಸ್ವರೂಪಿ.[1]

ಭಗವಂತನ ಜ್ಞಾನವು ಅನಾದಿನಿತ್ಯ, ಸ್ವತಂತ್ರ, ಭಗವಂತನಿಗೆ ಹಾಗೂ ಇತರರಿಗೆ ಸಂಬಂಧಿಸಿರುವ ಸಕಲ ಧರ್ಮಗಳನ್ನೂ ಗೋಚರಿಸುವಂತಹದ್ದು ನಿರತಿಶಯಸ್ಪಷ್ಟವಾದದ್ದು.[2] ಹೀಗೆ ಅನೇಕ ಧರ್ಮ ಪ್ರಯುಕ್ತವಾಗಿ ಭಗವಂತನ ಜ್ಞಾನವು ಮಹತ್ತ್ವಪೂರ್ಣವೆನಿಸಿದೆ. ಇಂತಹ ಜ್ಞಾನವು ಅವನಲ್ಲಿ ಇರುವಂತೆ, ಆ ಜ್ಞಾನಸ್ವರೂಪಿಯೂ ಅವನಾಗಿರುವನು[3]

೫ ಮಹತ್ತ್ವಪೂರ್ಣವಾದ ವ್ಯವಹಾರ ಉಳ್ಳವನು.[4]

ಭಗವಂತನು ನಡೆಸುವ ಸೃಷ್ಟ್ಯಾದಿ ವ್ಯವಹಾರವು ವ್ಯಾಪ್ತಿಯ ದೃಷ್ಟಿಯಿಂದಲೂ, ಪ್ರಭಾವದ ದೃಷ್ಟಿಯಿಂದಲೂ ಅತ್ಯಂತ ಮಹತ್ತ್ವಪೂರ್ಣವಾದುದು.

೬ ಮಹತ್ತ್ವಪೂರ್ಣವಾದ ಸುದರ್ಶನಚಕ್ರ ಉಳ್ಳವನು[5]

---

೪ 1 ಮಹಾನ್ ಅಕ್ಷಃ ಜ್ಞಾನಂ ಯಸ್ಯ ಸಃ, ಅಥವಾ ಮಹಾಂಶ್ಚಾಸಾವಕ್ಷಶ್ಚ ಮಹಾಕ್ಷಃ ।
'ಅಕ್ಷೋ... .ಜ್ಞಾನೇ ಚಾತ್ಮನಿ.....' -ಹೇಮಚಂದ್ರಃ ।

2 ಪೂರ್ವದ್ವಯಮನಾದಿ ನಿತ್ಯಮ್, ಪಾರತಂತ್ರ್ಯಸ್ವಾತಂತ್ರ್ಯಾಭ್ಯಾಂ ತದ್ವಿಶೇಷಃ ಪೂರ್ವಂ ಸ್ವಪರಗತಾಖಿಲವಿಶೇಷವಿಷಯಮ್ । ಸ್ಪಷ್ಟತ್ವೇ ಚ ಭೇದಃ ।
-ಪ್ರ. ಲ

(ಪೂರ್ವದ್ವಯಂ) ಈಶಲಕ್ಷ್ಮೀಜ್ಞಾನಮ್ .. ಅನಾದಿನಿತ್ಯತ್ವಸಾಮ್ಯೇऽಪಿ ಸ್ವಸತ್ತಾದೌ ಸ್ವತಂತ್ರಮೀಶಜ್ಞಾನಂ ತದಧೀನಂ ಲಕ್ಷ್ಮೀಜ್ಞಾನಂ...ತತ್ರೇಶಜ್ಞಾನಂ ನಿರತಿಶಯಸ್ಪಷ್ಟಮ್ । -ಪ್ರ. ಲ. ಟೀ.

3 ಯದಾತ್ಮಕೋ ಭಗವಾಂಸ್ತದಾತ್ಮಿಕಾ ವ್ಯಕ್ತಿಃ ಕಿಮಾತ್ಮಕೋ ಭಗವಾನ್ । ಜ್ಞಾನಾತ್ಮಕ ...ಇತಿ' -ಬ್ರ ಸೂ ಭಾ. 2-2-41

೫ 4 ಮಹಾನ್ ಅಕ್ಷಃ ವ್ಯವಹಾರಃ ಯಸ್ಯ ಸಃ ಮಹಾಕ್ಷಃ । 'ಅಕ್ಷೋ ಜ್ಞಾನಾತ್ಮಶಕಟ ವ್ಯವಹಾರೇಷು ಪಾಶಕೇ....' -ಮೇದಿನೀ ।

೬ 5 ಮಹಾನ್ ಅಕ್ಷಃ ಚಕ್ರಂ ಯಸ್ಯ ಸಃ ಮಹಾಕ್ಷಃ ।

ಕಾಮನು ಭಗವಂತನ ಚಕ್ರನು. ಬ್ರಹ್ಮಪ್ರಲಯದಲ್ಲಿ ತಮೋಭಿಮಾನಿನಿಯಾದ ದುರ್ಗಾ ದೇವಿಯೂ ಅವನ ಚಕ್ರ ಆಗಿರುವಳು.[1] ಸುದರ್ಶನ ಚಕ್ರದ ಮಹತ್ತ್ವವು ಭಾಗವತದಲ್ಲಿ ಅಂಬರೀಷ ರಾಜನನ್ನು ದೂರ್ವಾಸರ ಕೃತ್ಯದಿಂದ ಸಂರಕ್ಷಿಸಿದ ಸಂದರ್ಭದಲ್ಲಿ ಸ್ಪಷ್ಟವಾಗಿದೆ.[2]

೭ ಮಹತ್ತ್ವಪೂರ್ಣನಾಗಿರುವವನು ಮತ್ತು[3] ನಿತ್ಯನಾಗಿರುವವನು ಅಥವಾ ವ್ಯಾಪಿಸಿರುವವನು.

ಜಿಜ್ಞಾಸೆ

[ಎರಡು ಪ್ರಕಾರ ಚಕ್ರ]

ಪ್ರ.- 'ಮಹಾಕ್ಷಃ' ಎಂಬ ನಾಮವು ಪರಮಾತ್ಮನು ಶ್ರೇಷ್ಠ ಚಕ್ರವುಳ್ಳವನು ಎಂದು ಅರ್ಥವನ್ನು ಹೇಳುತ್ತದೆ. ಆ ಚಕ್ರವು ಪರಮಾತ್ಮನ ಸ್ವರೂಪವೋ ಅತಿರಿಕ್ತವೋ? ಪರಮಾತ್ಮನ ಚಕ್ರಕ್ಕೆ ಕಾಮದೇವನು ಅಭಿಮಾನಿಯಾದ್ದರಿಂದ ಚಕ್ರವು ಅತಿರಿಕ್ತವು ಪರಮಾತ್ಮನ ಸ್ವರೂಪಕ್ಕೆ ಅಭಿಮಾನಿಗಳು ಇಲ್ಲ. ಹೀಗೆ ಸಿದ್ಧಾಂತವಲ್ಲವೇ?

ಉ.- ಗರುಡ ಪುರಾಣ ಬ್ರಹ್ಮಕಾಂಡದಲ್ಲಿ ಪರಮಾತ್ಮನ ಸ್ವರೂಪಭೂತವಾದ ಚಕ್ರ ಹಾಗೆಯೇ ಅತಿರಿಕ್ತವಾದ ಚಕ್ರ ಹೀಗೆ ಎರಡು ಪ್ರಕಾರವುಳ್ಳದ್ದು ಪರಮಾತ್ಮನ ಚಕ್ರ ಎಂದು ಹೇಳಿರುತ್ತದೆ. ಅತಿರಿಕ್ತವಾದ ಚಕ್ರಕ್ಕೆ ಕಾಮದೇವನು ಅಭಿಮಾನಿಯಾಗಿದ್ದಾನೆ



---

1 ' . ಸ ಚಕ್ರತಾಂ ಚ । ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಃಸ್ಥಿತಾ ಶ್ರೀರಿತಿ ಯಾಂ ವದಂತಿ ... ' -ಮ. ಭಾರ ತಾ. ನಿ. 3-75

2 ಶ್ರೀಮದ್ಭಾಗವತನವಮಸ್ಕಂಧಸ್ಯ ಚತುರ್ಥಪಂಚಮಾಧ್ಯಾಯಯೋಃ ಇಯಮಾಖ್ಯಾಯಿಕಾ ನಿರೂಪಿತಾ ।

೭ 3 ಅಕ್ಷಯತ್ವಾತ್ ಅಕ್ಷತಿ ವ್ಯಾಪ್ನೋತೀತಿ ವಾ ಅಕ್ಷಃ । ಮಹಾಂಶ್ಚಾಸೌ ಅಕ್ಷಶ್ಚ ಮಹಾಕ್ಷಃ । 'ಅಕ್ಷಯಂ ಪುರುಷಸ್ಯಾಕ್ಷಂ. ..' ಇತಿ ಬ್ರಹ್ಮತರ್ಕೇ (ವಿ. ತ. ನಿ.) ಭಗವತಃ ಸ್ವರೂಪೇಂದ್ರಿಯಸ್ಯ ಅಕ್ಷಯತ್ವಾದೇವ ಮುಖ್ಯತಃ ಅಕ್ಷತ್ವಂ ಸಮರ್ಥಿತಮ್ । ತದ್ವತ್ ಭಗವಾನಪಿ ಅಕ್ಷಯತ್ವಾತ್ ಅಕ್ಷಶಬ್ದ ವಾಚ್ಯೋ ಭವತಿ ।

## ೬೫೫ ಗರುಡಧ್ವಜಃ

೧ ಗರುಡನ ಮೂಲಕ ಸಂಚರಿಸುವವನು.[1]

'ಗರುಡವಾಹನ'ನಾಗಿರುವ ಭಗವಂತನು ಗರುಡನ ಮೂಲಕ ಸಂಚರಿಸುವನು

೨ ಗರುಡನೇ ಚಿಹ್ನೆಯಾಗಿ ಉಳ್ಳವನು[2]

ಭಗವಂತನು 'ಗರುಡವಾಹನ'ನಾಗಿರುವ ಪ್ರಯುಕ್ತ, ಅವನ ವಾಹನವಾದ ಗರುಡನು ಅವನ ಚಿಹ್ನೆಯಂತೆ ಇರುವನು

೩ ಗರುಡನ ಚಿಹ್ನೆ ಉಳ್ಳ ಧ್ವಜ ಉಳ್ಳವನು[3]

೪ ಗರುಡನು ಅಭಿಮಾನಿಯಾಗಿ ಉಳ್ಳ ವೇದಗಳು ಜ್ಞಾಪಕಗಳಾಗಿ ಉಳ್ಳವನು ಅಥವಾ ವಿಜಯಪತಾಕೆಯಂತೆ ಉಳ್ಳವನು[4]

ಚತುರ್ಮುಖನ ಬಳಿಕ ಗರುಡನು ಸಮಸ್ತವೇದಗಳಿಗೂ ಮುನಿ ಎನಿಸಿರುವನು.[5] 'ವೇದ ಪುರುಷ' ಎಂದೇ ಎನಿಸಿರುವ ಅವನು ಸರ್ವವೇದಗಳಿಗೆ ಅಭಿಮಾನಿಯೂ ಆಗಿರುವನು.[6] ಆದ್ದರಿಂದಲೇ

---

೧ 1 ಗರುಡೇನ ಧ್ವಜತಿ ಗಚ್ಛತೀತಿ ಗರುಡಧ್ವಜಃ । 'ಧ್ವಜ ಗತೌ'

೨ 2 ಗರುಡಃ ಧ್ವಜಃ ಚಿಹ್ನಂ ಯಸ್ಯ ಸಃ ಗರುಡಧ್ವಜಃ ।

೩ 3 ಗರುಡಾಂಕೋ ಧ್ವಜೋಽಸ್ಯೇತಿ ಗರುಡಧ್ವಜಃ ।

—ವಿ ರಾ.

೪ 4 ಗರುಡಃ ತದಭಿಮನ್ಯಮಾನಃ ವೇದಸಮೂಹಃ ಧ್ವಜಃ ಚಿಹ್ನಂ, ಜ್ಞಾಪಕಮಿತಿ ಯಾವತ್ ಯಸ್ಯ ಸಃ, ಅಥವಾ ಧ್ವಜಃ ವೈಜಯಂತೀ ಇವ ಯಸ್ಯ ಸಃ ಗರುಡಧ್ವಜಃ

5 'ಸುಪರ್ಣೋಽಖಿಲವೇದಾನಾಂ .. ದ್ವಿತೀಯಪ್ರತಿಪತ್ತ್ಯತ್ವಾನ್ಮುನಿಶ್ಚ ಸಂಪ್ರಕೀರ್ತಿತಾ'
—ಯ. ಭಾ. 1–30

6 ಸರ್ವವೇದಾಭಿಮಾನ್ಯೇವ ಗರುಡೋ ವೇದಪೂರುಷಃ ।
—ಐ. ಉ. ಭಾ. 2-8-3–2

ಅವನನ್ನು 'ಛಂದೋಮಯ' ಎಂದೇ ಉಲ್ಲೇಖಿಸಿದ್ದಿದೆ[1] ಹೀಗೆ ಗರುಡನು ಅಭಿಮಾನಿಯಾಗಿ ಉಳ್ಳ ವೇದದಿಂದಲೇ ಜ್ಞೇಯನಾಗಿರುವವನು ಭಗವಂತನು. ಅಲ್ಲದೆ, ವೇದಗಳು ಅವನ ಗುಣಗಾನದಲ್ಲಿ ತೊಡಗಿದ್ದು ಅವನ ವಿಜಯ ಪತಾಕೆಯಂತೆ ಇವೆ

೫ ಗರುಡನಲ್ಲಿ ವಿಭೂತಿರೂಪದಿಂದ ಇರುವವನು[2]

'ವೇದಪುರುಷ' ಎನಿಸುವ ಗರುಡನಿಗೆ ಸಂಕರ್ಷಣರೂಪಿ ಭಗವಂತನು ನಿಯಾಮಕನಾಗಿರುವನು[3] ಗೀತಾಚಾರ್ಯನು 'ವೈನತೇಯ' ಎಂದೆನಿಸಿರುವ ವಿಭೂತಿರೂಪದಿಂದ ಗರುಡನಲ್ಲಿದ್ದು, ಅವನು ಪಕ್ಷಿಗಳಲ್ಲೆಲ್ಲ ಶ್ರೇಷ್ಠ ಎನಿಸುವಂತೆ ತಾನು ಅನುಗ್ರಹಿಸುತ್ತಿರುವುದಾಗಿ ಸಂದೇಶಿಸಿರುವನು[4]

೬ ಗರುಡನ ಚಿಹ್ನೆಗಳನ್ನು ಸೃಷ್ಟಿಸಿರುವವನು.[5]

---

1 ಛಂದೋಮಯೇನ ಗರುಡೇನ ಸಮುಹ್ಯಮಾನಶ್ಚಕ್ರಾಯುಧೋಽಭ್ಯಗಮದಾಶು ಯತೋ ಗಜೇಂದ್ರಃ -ಭಾಗ. 8-3-31

೫ 2 ಗರುಡಂ ವಿಭೂತಿರೂಪೇಣ ಧ್ವಜತಿ ಗಚ್ಛತಿ, ಪ್ರವಿಶತೀತಿ ಯಾವತ್ ಗರುಡಧ್ವಜಃ ।

3 ...ವೇದಪುರುಷ ಇತಿ ಯಮವೋಚಾಮ ಯೇನ ವೇದಾನ್ ವೇದ ॥ ಋಗ್ವೇದಂ ಯಜುರ್ವೇದಂ ಸಾಮವೇದಂ ತಸ್ಯೈತಸ್ಯ ಬ್ರಹ್ಮಾ ರಸಃ.

-ಐ ಉ. 2-8-3-3

...ಬ್ರಹ್ಮಾಖ್ಯೋ ಜ್ಞಾನಬೃಂಹಣಾತ್ । ಸಂಕರ್ಷಣಾಖ್ಯಸ್ತು ಹರಿಃ ಸಾರಃ ಸ ಗರುಡಸ್ಯ ಚ । -ಐ. ಉ. ಭಾ.

4 ವೈನತೇಯಶ್ಚ ಪಕ್ಷಿಣಾಮ್ । ಗೀ. 10-30

...ವೈನತೇಯೋ ನತಾಸ್ಪದಃ । -ವಿಭೂತಿತತ್ತ್ವ (ಗೀ. ತಾ.)

೬ 5 ಗರುಡಸ್ಯ ಧ್ವಜಾಃ ಚಿಹ್ನಾನಿ ಯಸ್ಮಾತ್ ಸಃ ಗರುಡಧ್ವಜಃ ।

ಶ್ವೇತಾಶ್ವತರೋಪನಿಷತ್ತಿನಲ್ಲಿ, ನೀಲಬಣ್ಣದ, ಹಸಿರು ಬಣ್ಣದ, ಕೆಂಪುಗಣ್ಣಿನ ಹೀಗೆ ಕೆಲವು ಪದಾರ್ಥಗಳನ್ನು ಉಲ್ಲೇಖಿಸಿ ಜಗತ್ತಿನಲ್ಲಿರುವ ಚಿತ್ರ ವಿಚಿತ್ರಗಳಾದ ಪ್ರಾಣಿ, ಪಕ್ಷಿ, ಪದಾರ್ಥಗಳನ್ನೆಲ್ಲ ಭಗವಂತನೇ ಸೃಷ್ಟಿಸಿರುವನೆಂಬುದಾಗಿ ಅಭಿಪ್ರಾಯಪಡಲಾಗಿದೆ[1] ಆದ್ದರಿಂದ ಗರುಡನ ಬಿಳಿ ಬಣ್ಣ, ಕಂದು ರೆಕ್ಕೆ ಮುಂತಾದ ಚಿಹ್ನೆಗಳನ್ನೂ ಭಗವಂತನೇ ಸೃಷ್ಟಿಸಿರುವುದೆಂದು ಸಿದ್ಧ.

## ಜಿಜ್ಞಾಸೆ

[ಬಿಂಬರೂಪಿ ಗರುಡ]

ಪ್ರ - ಪರಮಾತ್ಮನ ಸ್ವರೂಪಭೂತ ಚಕ್ರವು ಇದೆ ಎಂದು ಗರುಡ ಪುರಾಣ ಬ್ರಹ್ಮಕಾಂಡದಲ್ಲಿ ಹೇಳಿದಂತೆ ಗರುಡನೂ ಪರಮಾತ್ಮಸ್ವರೂಪಭೂತನು ಒಬ್ಬ ಅತಿರಿಕ್ತ ಗರುಡ ಇನ್ನೊಬ್ಬ—ಹೀಗೆ ಎರಡೂ ಗರುಡರು ಇದ್ದಾರೆಂದು ಹೇಳಬೇಕೆ?

ಉ - ಪ್ರಸಿದ್ಧಗರುಡನಿಗೆ ಬಿಂಬಭೂತನಾದ ಗರುಡನು ಪರಮಾತ್ಮ ಸ್ವರೂಪನು. ಬ್ರಹ್ಮದೇವರ ಒಳಗೆ ಬ್ರಹ್ಮನಂತೆ ಆಕಾರವುಳ್ಳವನಾಗಿ ಬ್ರಹ್ಮನಾಮವುಳ್ಳವನಾಗಿ, ರುದ್ರದೇವರ ಒಳಗೆ ರುದ್ರನಂತೆ ಆಕಾರವುಳ್ಳವನಾಗಿ ರುದ್ರನಾಮವುಳ್ಳವನಾಗಿ ಪರಮಾತ್ಮನು ಇದ್ದಾನೆಂದು 'ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ' ಎಂಬ ವಚನವು ಹೇಳುತ್ತದೆ. ಅದು ಉಪಲಕ್ಷಣವಾದ್ದರಿಂದ ಗರುಡನ ಒಳಗೆ ಗರುಡಾಕಾರವುಳ್ಳವನಾಗಿ ಗರುಡನಾಮ ಉಳ್ಳವನಾಗಿ ಪರಮಾತ್ಮನು ಇದ್ದಾನೆಂದು ಆ ವಚನದಿಂದ ಸಿದ್ಧವಾಗುತ್ತದೆ



ಅತುಲಃ ಶರಭೋ ಭೀಮಃ ಸಮಯಜ್ಞೋ ಹವಿರ್ಹರಿಃ ।
ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ ॥ ೩೯ ॥

೩೫೭ ಅತುಲಃ

೧ ಅಸದೃಶನಾಗಿರುವವನು.[2]

ಭಗವಂತನು ನಿರ್ದುಷ್ಟ, ಗುಣಪೂರ್ಣವಾದ ದೇಹವುಳ್ಳವನು, ಸ್ವತಂತ್ರನು, ಜಡ ದೇಹ

---

1 ನೀಲಃ ಪತಂಗೋ ಹರಿತೋ ಲೋಹಿತಾಕ್ಷಃ. ಯತೋ ಜಾತಾನಿ ಭುವನಾನಿ ವಿಶ್ವಾ ।
—ಶ್ವೇ. ಉ. 4-4

೧ 2 ನ ವಿದ್ಯತೇ ತುಲಾ ಸಾದೃಶ್ಯಂ ಯಸ್ಯ ಸಃ ಅತುಲಃ । 'ತುಲಾ ಸಾದೃಶ್ಯಮಾನಯೋಃ...।
—ವಿಶ್ವಃ ।

ಗುಣಗಳಿಂದ ದೂರನಾದವನು. ಆನಂದಾತ್ಮಕಗಳಾದ ಕೈ, ಕಾಲು, ಮುಖ, ಉದರಾದಿಗಳುಳ್ಳವನು ಎಲ್ಲೆಡೆ ಸ್ವಗತಭೇದವಿಲ್ಲದವನು. ಸನಾತನನಾದ ಇವನು ದೇಶತಃ, ಕಾಲತಃ ಹಾಗೂ ಗುಣತಃ ಆದಿ, ಅಂತ, ವೃದ್ಧಿ ಕ್ಷಯಗಳಿಂದ ರಹಿತನು—ಎಂಬುದಾಗಿ ಭಗವಂತನ ಕೆಲವು ವಿಶಿಷ್ಟ ಗುಣಗಳನ್ನು ಉಲ್ಲೇಖಿಸಿದ ಶ್ರೀಮದಾಚಾರ್ಯರು, ಹೀಗೆ ವಿಶಿಷ್ಟ ಗುಣೋಪೇತನಾದ ಭಗವಂತನಿಗೆ ಸದೃಶನಾದವನು ಹಿಂದೆಂದೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಂದೂ ಹುಟ್ಟಲಾರ—ಎಂಬುದಾಗಿ ಭಗವಂತನ ಅಸದೃಶತ್ವವನ್ನು ಸಮರ್ಥಿಸಿರುವರು[1] 'ನಖಸ್ತುತಿ'ಯಲ್ಲಿ ಶ್ರೀಲಕ್ಷ್ಮೀನೃಸಿಂಹನನ್ನು ಸಂಬೋಧಿಸಿ, 'ಎಲ್ಲಡೆ ಶಾಸ್ತ್ರದಲ್ಲಿ ಹುಡುಕಾಡಿದರೂ ನಿನಗೆ ಸದೃಶನಾದವನನ್ನು ಕಾಣಲಾರೆ'—ಎಂದು ಶ್ರೀಮದಾಚಾರ್ಯರು ಸ್ತುತಿಸಿರುವರು[2] ಮಹಾಶಾಲೀನ ಶ್ರುತಿಯಲ್ಲಿ ಭಗವಂತನನ್ನು 'ತುಲ್ಯಶೂನ್ಯ' ಎಂದೇ ಸಂಬೋಧಿಸಲಾಗಿದೆ[3] ಭಾಗವತದ ಶ್ರುತಿಗೀತೆಯಲ್ಲಿ 'ಶೂನ್ಯತುಲ'—ಎಂದು ಭಗವಂತನನ್ನು ಸಂಬೋಧಿಸಲಾಗಿದೆ[4]. ಭಗವಂತನಿಗೆ ಸದೃಶನಾದವನಿಲ್ಲ ಎಂದು ಶ್ವೇತಾಶ್ವತರೋಪನಿಷತ್ತು ಸಂದೇಶಿಸಿದೆ[5] ಸದೃಶನಾದ ಮತ್ತೊಬ್ಬನಿಲ್ಲದಿರುವುದರಿಂದಲೇ ಭಗವಂತನು 'ಕೇವಲ' ಎನಿಸಿರುವನೆಂದು 'ತಂತ್ರಸಾರ' ತಿಳಿಸಿದೆ[6] ಅಸದೃಶತ್ವರೂಪವಾದ ಕೈವಲ್ಯವು ಅವನ ಧರ್ಮ

---

1 'ನಿರ್ದೋಷಪೂರ್ಣಗುಣವಿಗ್ರಹ ಆತ್ಮತಂತ್ರೋ ನಿಶ್ಚೇತನಾತ್ಮಕಶರೀರಗುಣೈಶ್ಚ ಹೀನಃ ಆನಂದಮಾತ್ರಕರಪಾದಮುಖೋದರಾದಿಃ ಸರ್ವತ್ರ ಚ ಸ್ವಗತಭೇದವಿವರ್ಜಿತಾತ್ಮಾ । ಕಾಲಾಚ್ಚ ದೇಶಗುಣತೋಽಸ್ಯ ನ ಚಾದಿರಂತೋ ವೃದ್ಧಿಕ್ಷಯೌ ನ ತು ಪರಸ್ಯ ಸದಾತನಸ್ಯ ।ನೈತಾದೃಶಃ ಕ್ವ ಚ ಬಭೂವ ನ ಚೈವ ಭಾವ್ಯೋ ನಾಸ್ತ್ಯುತ್ತರಃ . '

–ಮ ಭಾರ. ತಾ ನಿ 1-1-12

2 'ಲಕ್ಷ್ಮೀಕಾಂತ ಸಮಂತತೋ ವಿಕಲಯನ್ನೈವೇಶಿತುಸ್ತೇ ಸಮಂ ಪಶ್ಯಾಮಿ . '

–ನ. ಸ್ತು.

3 . ತುಲ್ಯಶೂನ್ಯಾಸ್ಯ ಸಂಧಿನ್ ।

–ಮಹಾಶಾಲೀನ ಶ್ರುತಿ (ಭಾಗ. ತಾ. ನಿ. 10-94-30

4 '.. .ಯಸ್ಯ ಚ ಶೂನ್ಯತುಲ ಸಂದಧತಃ'

–ಭಾಗ. 10-94-30

5 ನ ತಸ್ಯ ಪ್ರತಿಮಾ ಅಸ್ತಿ.... –ಶ್ವೇತಾಶ್ವತರೋಪನಿಷತ್ (4-19)

6 ಅನನ್ಯಸದೃಶತ್ವಾಚ್ಚ ಕೇವಲೋಽಸೌ ಹರಿಃ ಸ್ಮೃತಃ ।

–ತಂತ್ರಸಾರ (ಭಾಗ. ತಾ. ನಿ. 4-19-8)

ವೆಂಬುದು ಪ್ರಸಿದ್ಧವಾದುದೆಂದು ಭಾಗವತ ತಿಳಿಸಿದೆ[1] ಭಗವಂತನಿಗೆ ಸದೃಶನಾದ ಮತ್ತೊಬ್ಬನಿಲ್ಲದಿರುವುದರಿಂದಲೇ ಶಾಸ್ತ್ರದಲ್ಲಿ ಅವನನ್ನು 'ಅದ್ವಿತೀಯ'[2] 'ಅದ್ವಯ'[3] 'ಅನನ್ಯ'[4] 'ಏಕ'[5] ಎಂದೆಲ್ಲ ಕರೆಯಲಾಗಿದೆ

ಭಗವಂತನಂತೆಯೇ ಅವನ ಆನಂದಾದಿಗುಣಗಳೂ ಲೋಕವಿಲಕ್ಷಣವಾದವುಗಳು.[6] ಆದುದರಿಂದ ಅವನ ಯಾವುದೇ ಗುಣಕ್ಕೂ ಸಾದೃಶ್ಯವನ್ನು ನೀಡುವಂತಿಲ್ಲ. ಹೀಗೆ ಅವನು ಯಾವುದೇ ಅಂಶ

---

1 'ಕೈವಲ್ಯಂ ತಸ್ಯ ವೈ ಧರ್ಮಃ ..' -ಭಾಗ. 4-19-8

ಅಯಮೇವ ಕೇವಲಮೇತಾದೃಶೋ ನಾನ್ಯಃ ಇತ್ಯನನ್ಯಸದೃಶತ್ವಂ ಸರ್ವವಿಲಕ್ಷಣತ್ವಂ ಚ ಹಿ ಕೈವಲ್ಯಂ ನಾಮ ತಸ್ಯ ಧರ್ಮಃ । -ಬ. ಗೋ. (ಭಾಗ ತಾ. ನಿ. ಟಿ )

2 .. . ಏಕಮೇವಾದ್ವಿತೀಯಂ ತದ್ಧ... -ಛಾಂ. ಉ. 6-2-1

ಸಮೋ ದ್ವಿತೀಯಶಬ್ದಃ ಸ್ಯಾದದ್ವಿತೀಯೋಽಸಮಂತ್ವಶಃ ।
-ಸಾಮಸಂಹಿತಾ(ಛಾಂ ಉ. ಭಾ )

3 ವದಂತಿ ತತ್ ತತ್ತ್ವವಿದಸ್ತತ್ತ್ವಂ ಯಜ್ಜ್ಞಾನಮದ್ವಯಮ್ ।
-ಭಾಗ. 1-2-11

ಸೋಽದ್ವಯಃ ಪುರುಷಸ್ತಸ್ಮಾನ್ನ ಸಮೋ ನಾಧಿಕೋ ಹ್ಯತಃ ।
-ಮಹಾಮೀಮಾಂಸಾ (ಭಾಗ. ತಾ. ನಿ.)

4 . .ತದ್ ಬ್ರಹ್ಮ ತದ್ಧೇತುರನನ್ಯದೇಕಮ್ -ಭಾ. 6-4-30

'ಅನನ್ಯಃ ಸದೃಶಾಭಾವಾತ್ .' -ಭಾಗ. ತಾ. ನಿ.

5 ಕತಮ ಏಕೋ ದೇವ ಇತಿ ಪ್ರಾಣ ಇತಿ . -ಬೃ. ಉ. 5-9-9

ಏಕ ಇತ್ಯುಚ್ಯತೇ ನಿತ್ಯಂ ಯಸ್ಮಾನ್ನಾನ್ಯಸ್ತಥಾವಿಧಃ ।
-ಮಹಾಮೀಮಾಂಸಾ (ಬೃ. ಉ. ಭಾ.)

6 'ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ' ನ ಚಾನಂದಾದಿತ್ವಾಲ್ಲೋಕಾನಂದಾದಿವತ್ । ಅತೋಽಲೌಕಿಕತ್ವಾತ್ ಪರಮೇವ ಬ್ರಹ್ಮಾನಂದಾದಿಕಮ್ ।
-ಬ್ರ. ಸೂ. ಭಾ.

ದಲ್ಲೂ ಲೌಕಿಕವಸ್ತುವಿನ ಉಪಮೆಗೆ ಗೋಚರಿಸುವವನಲ್ಲ—ಎಂದು ಬೋಧಿಸುವುದಕ್ಕಾಗಿಯೇ ಋಗ್ವೇದವು ಅವನು 'ನಿರುಪಮನು'—ಎಂದು ಅಲ್ಪಾಕ್ಷರಗಳಿಂದ ತಿಳಿಸಲು ಬರುವಾಗ, ಅವನು ಉಪಮಾ ವಿಷಯದಲ್ಲಿ ದೂರನಾಗಿರುವವನೆ-ಬುದಾಗಿ ಬಹಳ ಅಕ್ಷರಗಳನ್ನು ಬಳಸಿ ಸಂದೇಶಿಸಿದೆ[1] — ಎಂದು ಶ್ರೀಮದಾಚಾರ್ಯರು ನಿರ್ಣಯಿಸಿರುವರು[2]

ಹೀಗಿದ್ದರೂ ಶಾಸ್ತ್ರದಲ್ಲಿ ಭಗವಂತನಿಗೆ, ಅವನ ಗುಣಗಳಿಗೆ ಲೌಕಿಕವ್ಯಕ್ತಿಗಳ, ಪದಾರ್ಥಗಳ ಸಾದೃಶ್ಯವನ್ನು ಹೇಳುವುದಿದೆ; ಹಾಗೆಯೇ ಲೌಕಿಕವ್ಯಕ್ತಿ ವಸ್ತುಗಳಿಗೆ ಭಗವಂತನ, ಅವನ ಗುಣಗಳ ಸಾದೃಶ್ಯವನ್ನು ಹೇಳುವುದಿದೆ ಇದು ಬರೇ ಸಾಮಾನ್ಯ ಪರಿಚಯ ನೀಡುವುದಕ್ಕಾಗಿಯಷ್ಟೇ[3] ಶ್ರೀವಿಷ್ಣುವಿಗೆ ಊರ್ಣನಾಭಿ ಮುಂತಾದವುಗಳ ದೃಷ್ಟಾಂತ ಊನದೃಷ್ಟಾಂತವೆನಿಸಿದರೆ, ಜೀವಾತ್ಮರಿಗೆ ಶ್ರೀವಿಷ್ಣುವಿನ ದೃಷ್ಟಾಂತವು ಅಧಿಕ ದೃಷ್ಟಾಂತವೆನಿಸುವುದು ಶ್ರೀವಿಷ್ಣುವಿಗೆ ಅವನ ದೃಷ್ಟಾಂತವನ್ನೇ ನೀಡಿದಲ್ಲಿ ಆ ದೃಷ್ಟಾಂತವಷ್ಟೇ ಸಾಮ್ಯದೃಷ್ಟಾಂತವೆನಿಸುವುದು[4] ಭಗವಂತನ ವಿಷಯದಲ್ಲಿ ಊನ ದೃಷ್ಟಾಂತ ಅಥವಾ ಅಧಿಕ ದೃಷ್ಟಾಂತಗಳು ಇರಬಹುದಾದರೂ, ಇತರ ವ್ಯಕ್ತಿಗಳ ಅಥವಾ ವಸ್ತುಗಳ ಸಾಮ್ಯದೃಷ್ಟಾಂತವು ಇಲ್ಲ ಎಂಬುದು 'ಅತುಲ'ನಾಮದ ಆಂತರ್ಯ

ಮುಕ್ತಾತ್ಮರು ಭಗವಂತನಿಗೆ ಸದೃಶರಾಗಿರುವವರೆಂದು ಶಾಸ್ತ್ರದಲ್ಲಿ ಅಲ್ಲಲ್ಲಿ ನಿರೂಪಿಸ

---

ಅಲೌಕಿಕತ್ವಾತ್ ಪರಮಿಂತಿ ಪ್ರಕಾರಿಪ್ರಕಾರದರ್ಶನೇನ ವ್ಯಾಖ್ಯಾನಮೇವ ।

-ತ ಪ್ರಕಾಶಿಕಾ.

1 ಉಪಮಾ ಯೋ ಅಮುಚ್ಯತ । -ಋ ವೇ 8-69 13 (ಶ. ನಿ.)

ಉಪಮಾ ಉಪಮಾಯಾಮ್ ಉಪಮಾವಿಷಯೇ, ಅಮುಚ್ಯತ ತ್ಯಕ್ತೋಽಭವತ್ । ನಿರುಪಮ ಇತ್ಯರ್ಥಃ । -ಶ. ನಿ.

2 ಅಲ್ಪಾಕ್ಷರೇಣ ಶಕ್ಯೇಽಪಿ ವಕ್ತುಂ ಬಹ್ವಕ್ಷರಂ ಯದಿ । ಉಕ್ತಸ್ಯಾತಿಶಯೋಽತ್ರ ನಿಶೇಧೇಽಶೇಷತೋ ಭವೇತ್ । -ಶಬ್ದನಿರ್ಣಯ (ಶ. ನಿ.)

3 . ತದಪಿ 'ಪಾಕಶಾಸನವಿಕ್ರಮಃ' ಇತ್ಯಾದಿವತ್ ಪ್ರತ್ಯಾಯನಾರ್ಥಮೇವ ।

-ಗೀ ಭಾ. (11-12)

4 ಊರ್ಣನಾಭ್ಯಾದಿಕೋ ವಿಷ್ಣೋರ್ವಿಷ್ಣುರ್ವಿಷ್ಣೋಸ್ತಥೈವ ಚ । ವಿಷ್ಣುರ್ಜೀವಸ್ಯ ದೃಷ್ಟಾಂತಾ ಊನಸಾಮ್ಯಾಧಿಕಾಃ ಕ್ರಮಾತ್

-ಬ್ರಾಹ್ಮೇ (ಭಾಗ. ತಾ. ನಿ. 1-11-19)

ಟಾಗುವುದು.[1] ಇಲ್ಲಿ ಮುಕ್ತಾತ್ಮರಿಗೆ ನಿರ್ದುಃಖತ್ವ ಧರ್ಮದಿಂದ ಸಾಮ್ಯವೇ ಹೊರತು ಆನಂದಾದಿ ಧರ್ಮಗಳ ವಿಷಯದಲ್ಲಿ ಅಲ್ಲ—ಎಂದು 'ಪ್ರವೃತ್ತ' ನಿರ್ಣಯಿಸಿದೆ.[2] ಮುಕ್ತಾತ್ಮರಲ್ಲಿರುವ ನಿರ್ದುಃಖತ್ವವೂ ಭಗವದದೀನವಾದರೆ, ಭಗವಂತನಲ್ಲಿರುವ ನಿರ್ದುಃಖತ್ವವು ಸ್ವತಂತ್ರವಾಗಿದ್ದು ವಿಲಕ್ಷಣವೆನಿಸಿದೆ. ಅಂತೆಯೇ 'ಸಮನಾ' ಎಂದೇ ಎನಿಸಿರುವ ಲಕ್ಷ್ಮೀದೇವಿ ದೇಶತಃ ಹಾಗೂ ಕಾಲತಃ ವ್ಯಾಪ್ತಿಗಳ ವಿಷಯದಲ್ಲಿ ಸಾಮಾನ್ಯವಾಗಿ ಭಗವಂತನಿಗೆ ಸದೃಶಳೆನಿಸಿರುವಳಾದರೂ,[3] ಆಕೆಯ ವ್ಯಾಪ್ತಿಗಳು ಭಗವದಧೀನಗಳಾಗಿದ್ದು, ಸ್ವತಂತ್ರಗಳಾದ ಭಗವಂತನ ವ್ಯಾಪ್ತಿಗಳು ಅವುಗಳಿಗಿಂತ ವಿಲಕ್ಷಣಗಳೇ ಆಗಿವೆ. ಹೀಗೆ ಯಾವುದೇ ವಿಷಯದಲ್ಲಿ ಸರ್ವಾತ್ಮನಾ ಭಗವಂತನಿಗೆ ಸದೃಶವಾದುದು ಯಾವುದೂ ಇಲ್ಲ

೨ ವಿಲಕ್ಷಣನಾಗಿರುವ ಪ್ರಯುಕ್ತ ಅ ಎನಿಸುವ ತನ್ನ ಸಾದೃಶ್ಯ ಉಳ್ಳವನು[4]

ಸರ್ವವಿಲಕ್ಷಣನಾದ ಭಗವಂತನಿಗೆ ಸದೃಶರಾದ ಮತ್ತೊಬ್ಬರಿಲ್ಲ ಅವನ ರೂಪಗಳಷ್ಟೇ ಅವನಿಗೆ ಸದೃಶವಾದವು—ಎಂಬ ಅಭಿಪ್ರಾಯದಲ್ಲಿ ಅವನನ್ನು 'ಆತ್ಮಸಮ್ಮಿತ'—ಎಂದು ಉಪನಿಷತ್ತು ಕರೆದಿದೆ.[5]

---

1 ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
-ಗೀ. 14-2

* . ತ್ರಿಭಿರ್ನಿರ್ಗತಸ್ಸಾಮ್ಯತಾಮಿಯಾತ್ । -ಭಾಗ. 11-27-51

* ನಿರಂಜನಃ ಪರಮಂ ಸಾಮ್ಯಮುಪೈತಿ ।
-ಆ ಉ. 3-3-3

2 'ನಿರ್ದುಃಖತ್ವಂ ಹರೇಃ ಸಾಮ್ಯಂ ನ ತಾದೃಶಸುಖಾತ್ಮತಾ । ಸರ್ವೋತ್ತಮಃ ಸದಾನಂದಃ ಕಥಂ ಕಸ್ಯ ಕದೇಷ್ಯತೇ' -ಪ್ರವೃತ್ತ (ಭಾಗ. ತಾ ನಿ. 11-27-51)

3 ದೇಶತಃ ಕಾಲತಶ್ಚ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮನಾ ।
-ಬ್ರ ಸೂ. ಭಾ. (4-2-7)

೨ 4 ಸರ್ವವಿಲಕ್ಷಣತ್ವಾತ್ ಅಃ ಭಗವಾನ್ । ತಸ್ಯ ತುಲಾ ಸಾದೃಶ್ಯಂ ಯಸ್ಯ ಸಃ ಅತುಲಃ ।

5 '...ಯ ಏತದೇವಂ ವಿದ್ವಾನಾತ್ಮಸಂಮಿತಂ ...ಸಾಮೋಪಾಸ್ತೇ. '
-ಛಾಂ. ಉ. 2-2-1

'ಯಸ್ಮಾನ್ಯಃ ಸದೃಶೋ ನಾಸ್ತಿ ಸ್ವರೂಪಾಣಿ ಸಮಾನಿ ಚ । ಸ ಆತ್ಮಸಂಮಿತೋ ವಿಷ್ಣುಃ..'
-ಸಾಮಸಂಹಿತಾ (ಛಾಂ. ಉ. ಭಾ.)

ರುಗ್ಮಿಣೀದೇವಿಯು ಪರಿಪೂರ್ಣನಾದ ನಿನಗೆ ನೀನೇ ಸದೃಶನು; ನಿನಗೆ ಸದೃಶನಾದವನು ಮತ್ತೊಬ್ಬ ನಿಲ್ಲ—ಎಂದು ಶ್ರೀಕೃಷ್ಣನಲ್ಲಿ ನಿವೇದಿಸಿಕೊಂಡಿರುವಳು[1] ಭಗವಂತನು ಅಸದೃಶನಾಗಿರುವವನೆಂಬುದು ಋಷಿಗಳಿಗೆ ತಿಳಿಯದಿಲ್ಲ. ಆದರೂ ಋಷಿಗಳು ನಾಭಿರಾಜನಿಗಾಗಿ ಯಜ್ಞ ಮಾಡಿದಾಗ ಪ್ರತ್ಯಕ್ಷನಾದ ಭಗವಂತನಲ್ಲಿ 'ನಿನಗೆ ಸದೃಶನಾದ ಪುತ್ರನನ್ನು ನಾಬಿರಾಜನಿಗೆ ಅನುಗ್ರಹಿಸು'—ಎಂದು ನಿವೇದಿಸಿ ಕೊಂಡಿರುವರು[2] ಹಾಗೆಯೇ ಅತ್ರಿಯು ತನಗೆ ಭಗವಂತನು ತನಗೆ ಸದೃಶವಾದ ಪುತ್ರನನ್ನು ಅನುಗ್ರಹಿಸಲೆಂದು ಸಂಕಲ್ಪಿಸಿ ತಪಸ್ಸಲ್ಲಿ ತೊಡಗಿದ್ದನು[3]. ಭಗವಂತನು ಅಸದೃಶನೆಂದು ತೋರಿಸಿ ಕೊಡುವುದಕ್ಕಾಗಿಯೇ ಋಷಿಗಳು ಹಾಗೆ ಪ್ರಾರ್ಥಿಸಿಕೊಂಡಿರುವರೆಂದು ಬ್ರಹ್ಮಾಂಡನಿರ್ಣಯಿಸಿದೆ[4]. ಭಗವಂತನಿಗೆ ಸದೃಶವಾದ ಮಗುವನ್ನು ಕೇಳಿದ್ದರೂ, ಭಗವಂತನು ತಾನೇ ನಾಭಿಯ ಪುತ್ರ ಋಷಭನಾಗಿ, ಅತ್ರಿಯ ಪುತ್ರ ದತ್ತನಾಗಿ ಅವತರಿಸಿರುವುದರಿಂದ ಇವನಿಗ ಸದೃಶರಾದವರು ಮತ್ತೊಬ್ಬರಿಲ್ಲದ ಪ್ರಯುಕ್ತ ತಾನೊಬ್ಬನೇ ತನಗೆ ಸದೃಶನಾಗಿರುವವನೆಂದು ಭಾವಿಸಿ ತನ್ನನ್ನೇ ಪುತ್ರನನ್ನಾಗಿ ಅನುಗ್ರಹಿಸಿರುವನೆಂದು ಸ್ಪಷ್ಟವಾಗುವುದು—ತಾನೇ[5]? ಅಲ್ಲದೆ, ನಾಭಿರಾಜನ ಋತ್ವಿಕ್

---

1 ಯದ್ ವೈ ಭವಾನ್ ನ ಭವತಃ ಸದೃಶೋ ವಿಭೂಮ್ನಃ
-ಭಾಗ. 10 82-38

ಭವಾನೇವ ಭವತಃ ಸದೃಶಃ । -ಭಾಗ. ತಾ. ನಿ.

2 ಕಿಂಚಾಯಂ ರಾಜರ್ಷಿರಪತ್ಯಕಾಮಃ ಪ್ರಜಾಂ ಭವಾದೃಶೀಮಾಶಾಸಾನಃ . ಭಗವಂತಮುಪಧಾವತಿ -ಭಾಗ 5-3-8

3 'ಶರಣಂ ತಂ ಪ್ರಪದ್ಯೇಽಹಂ...ಪ್ರಜಾಮಾತ್ಮಸಮಾಮಹ್ಯಂ ಪ್ರಯಚ್ಛತ್ವಿತಿ ಚಿಂತಯನ್'
-ಭಾಗ. 4 1 20

4 'ನಾಸ್ತಿ ವಿಷ್ಣೋಃ ಸಮ ಇತಿ ಜಾನಂತೋಽಪ್ಯೃಷಯಃ ಸದಾ । ತಜ್ಜ್ಞಾಪನಾಯ ಲೋಕಾನಾಮನ್ಯೇ ಚ ಪ್ರಾರ್ಥಯನ್ ಸಮಮ್'-ಬ್ರಹ್ಮಾಂಡ(ಭಾಗ ತಾ ನಿ. 5-3-8) ವಿಷ್ಣುರಸಮಾನ ಇತಿ ಜಾನಂತೋಽಪ್ಯೃಷಯಃ ನಾಭ್ಯರ್ಥೇ ವಿಷ್ಣುಸದೃಶಂ ಪುತ್ರಂ ಪ್ರಾರ್ಥಯಂತ । ಏವಮನ್ಯೇಽಪಿ ಅತ್ರಿಕಶ್ಯಪಪ್ರಭೃತಯಃ ದತ್ತವಾಮನಾದೀನ್ ವಿಷ್ಣುಸದೃಶಾನೇವ ಪುತ್ರಾನ್ ಪ್ರಾರ್ಥಯಂತ । ಕಿಂ ಕಾರಣಮ್? ತಜ್ಜ್ಞಾಪನಾಯ ಲೋಕಾನಾಮ್ । ವಿಷ್ಣೋಃ ಸಮೋಽನ್ಯೋ ನಾಸ್ತೀತಿ ಲೋಕನಾಮಪಿ ಜ್ಞಾಪಯಿತುಮ್ ।-ಬ ಗೋ. (ಭಾಗ. ತಾ. ನಿ. ಟಿ)

5 ಕಥಮೇವಂ ಪ್ರಾರ್ಥನಯಾ ಲೋಕಾ ಜ್ಞಾಪ್ಯೇರನ್? ಯತೋ ಭಗವತ್ಸದೃಶಪುತ್ರಪ್ರಾರ್ಥನೇಽಪಿ ಭಗವಾನೇವ ಸ್ವಯಂ ಪುತ್ರತ್ವೇನಾಜಾಯತ ತೇನ ಜ್ಞಾಯತೇ ನಾನ್ಯಸ್ತತ್ಸದೃಶ ಇತಿ । -ಬ. ಗೋ. (ಭಾಗ. ತಾ. ಟಿ.)

ಗಳಲ್ಲಿಯೂ ಭಗವಂತನು ಹೀಗೆ ಹೇಳಿರುವನು—'ನೀವು ಸತ್ಯವನ್ನಾಡುವ ಋಷಿಗಳು ಅಂತಹ ನೀವು ನಾಭಿರಾಜನಿಗಾಗಿ ನನಗೆ ಸದೃಶವಾದ ಮಗುವನ್ನು ನೀಡಬೇಕೆಂಬ ವರವನ್ನು ನನ್ನಲ್ಲಿ ಕೇಳಿ ಕೊಂಡಿರುವಿರಿ ಸರ್ವೋತ್ತಮನಾದ ನನಗೆ ನಾನೇ ಸದೃಶನು'—ಭಗವಂತನ ಈ ಮಾತಿನಿಂದಲೂ ಜನರು ತಿಳಿಯುವರು ಭಗವಂತನಿಗೆ ಅವನೇ ಸದೃಶ ಎಂಬುದನ್ನು[1]

ಈ ರೀತಿಯಾಗಿ ಋಷಿಗಳು ಭಗವಂತನಿಗೆ ಸದೃಶವಾದ ಮಗುವನ್ನು ಪ್ರಾರ್ಥಿಸಿಕೊಳ್ಳುವುದರ ಮೂಲಕ ಭಗವಂತನಿಗೆ ಅವನೇ ಸದೃಶನು ಹೊರತು ಮತ್ತೊಬ್ಬ ಸದೃಶ ಇಲ್ಲ—ಎನ್ನುವುದನ್ನು ತೋರಿಸಿಕೊಟ್ಟಿರುವರು ಅತ್ಯದ್ಭುತನಾದ ಭಗವಂತನಿಗೆ ಸದೃಶನಾದ ಮತ್ತೊಬ್ಬನಿಲ್ಲದಿರುವುದರಿಂದ, ಅವನನ್ನೇ ಅವನಿಗೆ ಸದೃಶನನ್ನಾಗಿ ತಿಳಿಯುವರು, ಹೇಳುವರು ಹಾಗೂ ಕೇಳುವರು—ಎಂದು ಗೀತಾಚಾರ್ಯನು ಸಂದೇಶಿಸಿರುವನು[2]

೨ (ಪ್ರಾಕೃತವಾದ) ಪರಿಮಾಣ ಇಲ್ಲದವನು[3]

ಪ್ರಾಕೃತ ಪರಿಮಾಣವಿಲ್ಲದ ಪ್ರಯುಕ್ತ ಭಗವಂತನನ್ನು 'ಅಪ್ರಮೇಯ' ಎಂದು ಉಪನಿಷತ್ತಿನಲ್ಲಿ ಉಲ್ಲೇಖಿಸಲಾಗಿದೆ[4]

---

1 ಆಹ ಚ ಭಗವಾನೇವ ಸ್ವಯಂ ಋಷೀನ್ ಪ್ರತಿ—ಭವದ್ಭಿರವಿತಥಗೀರ್ಭಿರ್ವರಮಸುಲಭ-ಮಭಿಯಾಚಿತೋ ಯದಮುಷ್ಯಾತ್ಮಜೋ ಮಯಾ ಸದೃಶೋ ಭೂಯಾದಿತಿ ಮಮಾಹಮೇವಾಭಿರೂಪಃ ಕೈವಲ್ಯಾತ್' ಇತಿ । ತೇನ ಭಗವದುತ್ತರವಚನೇನಾಪಿ ಲೋಕಾ ಜ್ಞಾಸ್ಯಂತಿ ಭಗವತ್ಸದೃಶೋ ಭಗವಾನೇವ ಕೇವಲಮಿತಿ'

—ಬ. ಗೋ (ಭಾಗ ತಾ. ಟಿ.)

2 ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ ವದತಿ ತಥೈವ ಚಾನ್ಯಃ। ಆಶ್ಚರ್ಯವಚ್ಚೈನಮನ್ಯಃ ಶೃಣೋತಿ —ಗೀ. 2–29

'ಆಶ್ಚರ್ಯೋ ಭಗವಾನ್ ವಿಷ್ಣುರ್ಯಸ್ಮಾನ್ನೈತಾದೃಶಂ ಕ್ವಚಿತ್ । ತಸ್ಮಾತ್ ತದ್ಗೋಚರಂ ಜ್ಞಾನಂ ತದ್ಗೋಚರವದೇವ ತು' —ಬ್ರಹ್ಮತರ್ಕ (ಗೀ. ತಾ)

೩ 3 ನ ವಿದ್ಯತೇ ತುಲಾ ಮಾನಂ ಪರಿಮಾಣಂ ಯಸ್ಯ ಸಃ ಅತುಲಃ । 'ತುಲಾ ಸಾದೃಶ್ಯಮಾನಯೋಃ' —ವಿಶ್ವಃ ।

4 ಏಕಧೈವಾನುದ್ರಷ್ಟವ್ಯಮೇತದಪ್ರಮೇಯಂ ಧ್ರುವಮ್ ।

—ಬೃ. ಉ. 6-4-20

೪ ಸಾದೃಶ್ಯವುಳ್ಳ ಅಥವಾ ಪ್ರಾಕೃತ ಪರಿಮಾಣವುಳ್ಳ ಸಕಲ ಚೇತನಾಚೇತನಗಳಿಂದ ವಿಲಕ್ಷಣನಾಗಿರುವವನು.[1]

೫ ಯಾವಾಗಲೂ ವ್ಯಥೆ ಪಡುವವನಲ್ಲ ಮತ್ತು ಎಲ್ಲದನ್ನೂ ತನ್ನದ್ದನ್ನಾಗಿ ಸ್ವೀಕರಿಸಿರುವವನು.[2]

ಭಗವಂತನು ಎಲ್ಲದರ ಸ್ವಾಮಿ ಆಗಿರುವುದರಿಂದಲೇ ಅವನಿಗೆ ಯಾವುದೇ ರೀತಿಯ ವ್ಯಥೆ ಇಲ್ಲ.

೬ ಯಾವುದೇ ವ್ಯಥೆಗೊಳಗಾಗದ ಜ್ಞಾನಿಗಳನ್ನು ತನ್ನ ಭಕ್ತರನ್ನಾಗಿ ಸ್ವೀಕರಿಸುವವನು.[3]

## ಜಿಜ್ಞಾಸೆ

['ಪರಮಂ ಸಾಮ್ಯಮುಪೈತಿ']

ಪ್ರ.- 'ಪರಮಂ ಸಾಮ್ಯಮುಪೈತಿ' ಎಂಬ ಶ್ರುತಿಯು ಮುಕ್ತರಿಗೂ ಪರಮಾತ್ಮನಿಗೂ ಪರಮ ಸಾಮ್ಯವನ್ನು ಹೇಳುತ್ತದೆ ಪರಮಾತ್ಮನು ಸದೃಶದ್ವಿತೀಯರಹಿತನಾದುದರಿಂದ ಅದ್ವಿತೀಯನೆಂದೂ 'ಏಕಮೇವಾದ್ವಿತೀಯಂ' ಶ್ರುತಿಯು ಹೇಳುತ್ತದೆ ಈ ಪರಸ್ಪರ ವಿರೋಧದ ಪರಿಹಾರವು ಹೇಗೆ?

ಉ.- 'ಪರಮಂ ಸಾಮ್ಯಮುಪೈತಿ' ಶ್ರುತಿಯು ಹೇಳುವ ಪರಮಸಾಮ್ಯವೆಂದರೆ ಸಂಪೂರ್ಣಸಾಮ್ಯವು ಅಲ್ಲ ಪರಮ ಎಂದರೆ ಉತ್ತಮ ಎಂದು ಅರ್ಥ. ಜೀವನು ಸಂಸಾರದಲ್ಲಿ ಇದ್ದಾಗಲೂ ಜ್ಞಾನರೂಪತ್ವದಿಂದಲೂ ನಿತ್ಯತ್ವದಿಂದಲೂ ಪರಮಾತ್ಮನ ಸಾಮ್ಯವುಳ್ಳವನು ಆಗಿದ್ದನು. ಮುಕ್ತಿಯಲ್ಲಿ ಸಂಸಾರದಲ್ಲಿದ್ದ ಸಾಮ್ಯಕ್ಕಿಂತ ಅಧಿಕವಾದ ಸಾಮ್ಯವು ಪ್ರಾಪ್ತವಾಯಿತು ಅದು ದುಃಖ

---

ಪರಿಮಾಣವಿಹೀನತ್ವಾದಪ್ರಮೇಯ ಇತೀರಿತಃ ।

-ಬೃ. ಉ. ಭಾ

೪ 1 ತುಲಾ ಸಾದೃಶ್ಯಂ ಮಾನಂ ವಾ ಅಸ್ಯಾಸ್ತೀತಿ ತುಲಃ ಸಮಸ್ತಚರಾಚರಪ್ರಪಂಚಃ । ಸಃ ನ ಭವತೀತಿ ಸರ್ವವಿಲಕ್ಷಣತ್ವಾತ್ ಅತುಲಃ ।

೫ 2 ನ ತುದತಿ ವ್ಯಥತ ಇತಿ ಅತುಃ । 'ತುದ ವ್ಯಥನೇ' । ಲಾತಿ ಸರ್ವಮಾತ್ಮೀಯತಯಾ ಆದತ್ತ ಇತಿ ಲಃ । ಅತುಶ್ಚಾಸೌ ಲಶ್ಚ ಅತುಲಃ ।

೬ 3 ನ ತುದಂತಿ ವ್ಯಥಂತ ಇತಿ ಅತವಃ ಜ್ಞಾನಿನಃ । ತಾನ್ ಸ್ವಭಕ್ತತಯಾ ಲಾತಿ ಆದತ್ತ ಇತಿ ಅತುಲಃ ।

ರಹಿತತ್ವ, ತೃಪ್ತಿಮತ್ವ, ಸತ್ಯಕಾಮತ್ವ, ಜನ್ಮಮರಣಾದ್ಯಭಾವ ಮೊದಲಾದವುಗಳಿಂದ ಸಾಮ್ಯ. ಈ ಸಾಮ್ಯವು ಸಂಸಾರದಲ್ಲಿದ್ದ ಸಾಮ್ಯಕ್ಕಿಂತ ಉತ್ತಮವಾದದ್ದು ಅದ್ವಿತೀಯ ಪದವು ಪರಮಾತ್ಮನಿಗೆ ಸಂಪೂರ್ಣ ಸಾದೃಶ್ಯವುಳ್ಳವನು ಯಾರೂ ಇಲ್ಲವೆಂದು ಹೇಳುತ್ತದೆ.

ಪ್ರ – ರಾಮಾನುಜಾಚಾರ್ಯರು 'ಪರಮಂ ಸಾಮ್ಯಮುಪೈತಿ' ಶ್ರುತಿಗೆ ಆನಂದದ ವಿಷಯದಲ್ಲಿ ಪರಮಾತ್ಮನಿಗೆ ಮುಕ್ತರಿಂದ ಸಂಪೂರ್ಣ ಸಾಮ್ಯವನ್ನು ಅರ್ಥವನ್ನಾಗಿ ಹೇಳುತ್ತಾರೆ. ಆ ಅರ್ಥವನ್ನು ಒಪ್ಪಬಹುದೋ?

ಉ.– ಯಾವುದೇ ಶ್ರುತಿಯಲ್ಲಿ ಪರಮಾತ್ಮನಿಗೂ ಮುಕ್ತರಿಗೂ ಆನಂದದ ವಿಷಯದಲ್ಲಿ ಸಂಪೂರ್ಣ ಸಾಮ್ಯವು ಇದೆ ಎಂದು ಹೇಳಲಿಲ್ಲ ವಾದ್ದರಿಂದ ರಾಮಾನುಜರು ಆ ಶ್ರುತಿಗೆ ಅಪ್ರಾಮಾಣಿಕವಾದ ಅರ್ಥವನ್ನು ಹೇಳುತ್ತಾರೆ ಆ ಅರ್ಥವನ್ನು ಸ್ವೀಕರಿಸಬಾರದು



## ೩೫೭ ಶರಭಃ

೧ (ಸಂಹಾರಕಾಲದಲ್ಲಿ ಎಲ್ಲರನ್ನೂ) ಸಂಹರಿಸುವವನು.[1]

೨ (ಪಾಲನೆಯ ಕಾಲದಲ್ಲಿ ಸಜ್ಜನರಿಗೆ ತೊಂದರೆ ಕೊಡುವ ದುಷ್ಟರನ್ನು) ದಂಡಿಸುವವನು.[2]

೩ ಸಂಹರಿಸುವವನು ಮತ್ತು ಪ್ರಕಾಶಿಸುತ್ತಿರುವವನು.[3]

ಭಗವಂತನು ಪ್ರಲಯಕಾಲದಲ್ಲಿ ಎಲ್ಲರನ್ನೂ ಉಳಿದ ಕಾಲದಲ್ಲಿ ದುಷ್ಟರನ್ನೂ ಸಂಹರಿಸುತ್ತಿದ್ದರೂ ಆ ಪ್ರಯುಕ್ತ ಪಾಪದ ಲೇಪವಿಲ್ಲದೆ ಪ್ರಕಾಶಿಸುತ್ತಿರುವನು

---

೧ 1 ಶೃಣಾತಿ ಹಿನಸ್ತಿ ಪ್ರಲಯಕಾಲೇ ಸರ್ವಂ ಸಂಹರತೀತಿ ಯೋವತ್, ಶರಭಃ । 'ಶೃ ಹಿಂಸಾಯಾಮ್' ।

೨ 2 ಶೃಣಾತಿ ಸ್ಥಿತಿಕಾಲೇ ಸಜ್ಜನಾನಾ ಪೀಡಯತಃ ದುಷ್ಟಾನ್ ದಂಡಯತೀತಿ ಶರಭಃ ।

* ಸ್ವಮರ್ಯಾದಾತಿವರ್ತಿನಃ ಶೃಣಾತೀತಿ ಶರಭಃ । –ಪ. ಭ.

೩ 3 ಶೃಣಾತೀತಿ ಶರಃ । ಭಾತೀತಿ ಭಃ ।

* ಭಗವತಃ ಸಂಹಾರಕತ್ವಮಧಿಕೃತ್ಯ 'ಶರ್ವಃ' (೨೬) ಇತ್ಯಾದಿನಾಮವ್ಯಾಖ್ಯಾನೇಷು ದ್ರಷ್ಟವ್ಯಮ್ ।

೪ ಜೀವಾತ್ಮರ ಹಿಂಸೆಗೆ ಕಾರಣಗಳಾಗಿರುವ ಅವ್ಯಕ್ತಾದಿಗಳಲ್ಲಿ ಪ್ರಕಾಶಿಸುವವನು. ಅಥವಾ ಅವುಗಳು ಪ್ರಕಾಶಿಸುವಂತೆ ಮಾಡುವವನು.[1]

ಅವ್ಯಕ್ತಾದಿ ತತ್ತ್ವಗಳನ್ನು ಸೃಷ್ಟಿಸಿದ ಭಗವಂತನು, ಅವುಗಳ ಸುಪ್ತಶಕ್ತಿಯನ್ನು ಉದ್ಬೋಧಿಸುತ್ತ ಅವುಗಳನ್ನು ಪ್ರವೇಶಿಸಿರುವನು[2] ಸಮಗ್ರಲೋಕವನ್ನೂ ಸೂರ್ಯನು ಪ್ರಕಾಶಿಸುವಂತೆ, 'ಕ್ಷೇತ್ರ' ಎನಿಸುವ ಅವ್ಯಕ್ತಾದಿ ತತ್ತ್ವಗಳನ್ನು 'ಕ್ಷೇತ್ರಿ' ಎನಿಸುವ ಭಗವಂತನು ಪ್ರಕಾಶಪಡಿಸುವನೆಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[3]

೫ (ಜೀವಾತ್ಮರ) ದೇಹಗಳಲ್ಲಿ ಶೋಭಿಸುತ್ತಿರುವವನು.[4]

೬ (ಜೀವಾತ್ಮರ) ದೇಹಗಳಲ್ಲಿ ವಿಲಕ್ಷಣನಾಗಿ ಇರುವವನು[5]

೭ (ಜೀವಾತ್ಮರ) ದೇಹಗಳಲ್ಲಿ ಸ್ವತಂತ್ರನಾಗಿ ಇರುವವನು[6]

---

೪ 1 ಶೀರ್ಯತೇ ಹಿಂಸ್ಯತೇ ಜೀವಾತ್ಮಾ ಅನೇನೇತಿ ಶರಂ ಅವ್ಯಕ್ತಾದಿ । ತತ್ರ ಭಾತಿ ತತ್ ಭಾವಯತಿ ಪ್ರಕಾಶಯತಿ ಇತಿ ವಾ ಶರಭಃ ।

2 'ಪ್ರಸುಪ್ತಲೋಕತಂತ್ರಾಣಾಂ ನಿಶಾಮ್ಯ ಗತಿಮೀಶ್ವರಃ । ತ್ರಯೋವಿಂಶತಿತತ್ತ್ವಾನಾಂ ಗಣಂ ಯುಗಪದಾವಿಶತ್ ॥ ಸೋಽನುಪ್ರವಿಷ್ಟೋ ಭಗವಾಂಶ್ಚೇಷ್ಟಾರೂಪೇಣ ತಂ ಗಣಮ್ । ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್'
–ಭಾಗ 3-6-1..3

3 ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ । ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ । –ಗೀ. 13–34

೫ 4 ಶೀರ್ಯಂತ ಇತಿ ಶರಾಃ ಜೀವಾತ್ಮನಾಂ ಶರೀರಾಣಿ । ತೇಷು ಭಾತೀತಿ ಶರಭಃ ।
–ಶಾಂ. ಭಾ ಆಧಾರೇಣ

೬ 5 ಶರೇಷು ಜೀವಾತ್ಮನಾಂ ಶರೀರೇಷು ಭಾತಿ ವಿಲಕ್ಷಣೋ ಭವತೀತಿ ಶರಭಃ । 'ಭ ವೈಲಕ್ಷಣ್ಯೇ'

೭ 6 ಶರೇಷು ಜೀವಾತ್ಮನಾಂ ಶರೀರೇಷು ಭಾತಿ ಸ್ವತಂತ್ರೋ ಭವತೀತಿ ಶರಭಃ । 'ಭ ಸ್ವಾತಂತ್ರ್ಯೇ'

ಜೀವಾತ್ಮರ ಶರೀರಗಳಲ್ಲಿ ಜೀವಾತ್ಮರಂತೆಯೇ ಪರಮಾತ್ಮನೂ ಇರುವನು ಅವನು ಸ್ವೇಚ್ಛಾನುಸಾರವಾಗಿಯೇ ಅಲ್ಲಿ ಇರುವವನು ಜೀವಾತ್ಮರು ಕರ್ಮಫಲವನ್ನು ಭೋಗಿಸುವವರಾಗಿ ಅಲ್ಲಿ ಇದ್ದರೆ, ಪರಮಾತ್ಮನು ಅವರಿಗಿಂತ ವಿಲಕ್ಷಣನಾಗಿ ಕರ್ಮಫಲಭೋಗದ ಆವಶ್ಯಕತೆ ಇಲ್ಲದವನಾಗಿ ತನ್ನ ಸಹಜವಾದ ಸಾಮರ್ಥ್ಯದಿಂದಲೇ ಪೂರ್ಣನಾಗಿ ಪ್ರಕಾಶಮಾನನಾಗಿ ಅಲ್ಲಿ ಇರುವನು.[1]

೮ ಮನಸ್ಸಿನಲ್ಲಿ ಪ್ರಕಾಶಿಸುವವನು[2]

ಶುದ್ಧವಾದ ಅಂತಃಕರಣವು ವಸುದೇವ ಎನಿಸಿದ್ದು, ಅಲ್ಲಿ ಭಗವಂತನು ಆವರಣರಹಿತನಾಗಿ ತೋರುವನು ಆದುದರಿಂದಲೇ ಅವನು ವಾಸುದೇವ ಎಂದೇ ಪ್ರಸಿದ್ಧನಾಗಿರುವನು.[3]

---

1 ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥

-ಆ. ಉ. 3-1

ಸುಪರ್ಣಾವೇತೌ ಸಯುಜೌ ಸಖಾಯೌ ಯದೃಚ್ಛಯಾ ಕೃತನೀಳೌ ಚ ವೃಕ್ಷೇ । ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ ಭೂಯಾನ್

-ಭಾಗ. 11-11-6

ವೃಕ್ಷೇ ವೃಶ್ಚ್ಯತೇ ಛಿದ್ಯತ ಇತಿ ವೃಕ್ಷಃ ಅನಿತ್ಯೋ ದೇಹಃ, ತತ್ರ ಕೃತನೀಡೌ ಕೃತಾಶ್ರಯೌ ಸ್ಥಿತಾವಿತ್ಯರ್ಥಃ । ತಯೋಃ ಏಕಃ ಪೂರ್ಣಬಲಸುಖಜ್ಞಾನಾದಿರಹಿತಃ ಪಿಪ್ಪಲಾನ್ನಂ ಪಿಪ್ಪಲಂ ಕರ್ಮಫಲರೂಪಮನ್ನಂ ಭೋಗ್ಯಂ ಸ್ವಾದ್ವಿತಿ ಬುದ್ಧ್ಯಾ ಖಾದತಿ ಅನುಭವತಿ । ಅನ್ಯಃ ಅಪೂರ್ಣಚೇತನಾದ್ ವಿಲಕ್ಷಣಃ ಜ್ಞಾನಸುಖಬಲಾದಿಭಿಃ ಪೂರ್ಣಃ ನಿರನ್ನೋಽಪಿ ಅನ್ನನಿಬಂಧಫಲರಹಿತೋಽಪಿ ನಿತ್ಯಮಶನಾಯಾಪಿಪಾಸಾರಹಿತತ್ವಾದಿತಿ ಭಾವಃ । ನಿಜಬಲೇನ ಭೂಯಾನ್ ಪೂರ್ಣಃ ಲೀಲಯಾ ವಿಷಯಭೋಕ್ತಾ ಚೇತಿ ಭಾವಃ ।

-ಪ್ರಾಚೀನ ಟೀಕಾ

೮ 2 'ಶರೋ ಹ್ಯಾತ್ಮಾ' ಇತಿ ಶ್ರುತೇಃ ಮನಃ ಶರಂ ತತ್ರ ಭಾತೀತಿ ಶರಭಃ । -ವಿ. ರಾ.

3 ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ ಯದೀಯತೇ ತತ್ರ ಪುಮಾನಪಾವೃತಃ । ಸತ್ತ್ವಂ ಚ ತಸ್ಮಿನ್ ಭಗವಾನ್ ವಾಸುದೇವಃ..... '

-ಭಾಗ. 4-3-23

೯ (ತ್ರಿಪುರಾಸುರರ ಸಂಹಾರಕ್ಕಾಗಿ ಬಳಸಿದ ರುದ್ರನ) ಬಾಣದಲ್ಲಿ ಪ್ರಕಾಶಿಸುತ್ತಿದ್ದವನು.[1]

ತ್ರಿಪುರಾಸುರರ ಸಂಹಾರಕ್ಕೆಂದು ರುದ್ರನು ಪ್ರಯೋಗಿಸಿದ ಬಾಣದಲ್ಲಿ ಶ್ರೀವಿಷ್ಣುವಿನ ಸನ್ನಿಧಾನವಿತ್ತೆಂದು ದುರ್ಯೋಧನನು ಶಲ್ಯರಾಜನಿಗೆ ತಿಳಿಸಿರುವನು[2]

೧೦ ಪ್ರಲಯೋದಕದಲ್ಲಿ ಪ್ರಕಾಶಿಸುವವನು.[3]

೧೧ ಶತ್ರುಗಳ ಬಾಣಗಳನ್ನು ಭಗ್ನಪಡಿಸುವವನು.[4]

೧೨ ಸುಖಸ್ವರೂಪಿಯಾಗಿದ್ದು, ಸೃಷ್ಟ್ಯಾದಿಗಳಲ್ಲಿ ಉಪಕ್ರಮಿಸುವವನು[5]

## ಜಿಜ್ಞಾಸೆ

[ಕೃತ್ರಿಮ ನರಸಿಂಹನ ವಧೆ]

ಪ್ರ:- ಶರಭೋಪನಿಷತ್ತಿನಲ್ಲಿ 'ಶರಾ ಜೀವಾಸ್ತದಂಗೇಷು ಭಾತಿ ನಿತ್ಯಂ ಹರಿಸ್ವಯಂ' ಎಂದು ಶರಭ ಶಬ್ದಕ್ಕೆ ಜೀವಾಂಗಗಳಲ್ಲಿ ನಿಯಾಮಕನಾಗಿ ಪರಮಾತ್ಮನು ಶೋಭಿಸುತ್ತಾ ಇದ್ದಾನೆ ಎಂದು ಅರ್ಥವನ್ನು ಹೇಳಿರುತ್ತದೆ ಈ ಶರಭನು ನರಸಿಂಹನನ್ನು ಕೊಂದನು ಎಂದೂ ಆ ಶ್ರುತಿಯಲ್ಲಿ ಹೇಳಿರುತ್ತದೆ ನರಸಿಂಹನು ಶ್ರೀಹರಿಯೇ ಆಗಿದ್ದಾನೆ. ಶ್ರೀಹರಿಯು ಶ್ರೀಹರಿಯನ್ನು ಕೊಂದನು ಎಂದು ಆ ಉಪನಿಷತ್ತಿನಲ್ಲಿ ಹೇಳಿದಂತೆ ಆಯಿತಲ್ಲ?

---

೯ 1 ಶರೇ ತ್ರಿಪುರಾಸುರಸಂಹಾರಾರ್ಥಂ ರುದ್ರೇಣ ಪ್ರಯುಕ್ತೇ ಬಾಣೇ ಭಾತೀತಿ ಶರಭಃ ।

* ತ್ರಿಪುರಘ್ನಶರಾಗ್ರೇ ಭಾತೀತಿ ಶರಭಃ । -ವಾ. ರಾ

2 'ಇಷುಶ್ಚಾಪ್ಯಭವದ್ವಿಷ್ಣುಃ . ' -ಮ. ಭಾರ. ಕರ್ಣ. 34 49

೧೦ 3 ಶರೇ ಪ್ರಲಯೋದಕೇ ಭಾತೀತಿ ಶರಭಃ । -ಸ. ಸಂ.

೧೧ 4 ಪರಶರಾನ್ ಭಂಜಯತೀತಿ ಶರಭಃ । -ವಾ. ರಾ.

೧೨ 5 ಶಂ ಸುಖರೂಪಃ ಸನ್ ರಭತೇ ಸೃಷ್ಟ್ಯಾದಾ ಉಪಕ್ರಮತ ಇತಿ ಶರಭಃ । 'ರಭ ರಾಭಸ್ಯೇ'

ಉ - ಪೌಂಡ್ರಕವಾಸುದೇವನು ಹೇಗೆ ತನ್ನನ್ನು ಸಾಕ್ಷಾತ್ ಜಗತ್ಪತಿಯಾದ ವಾಸುದೇವ ಎಂದು ಹೇಳುತ್ತಾ ಇದ್ದನೋ ಹಾಗೆಯೇ ಒಬ್ಬ ದೈತ್ಯನು ತನ್ನನ್ನು ಶ್ರೀಹರಿ ಸ್ವರೂಪನಾದ ನರಸಿಂಹ ಎಂದು ಹೇಳಿಕೊಂಡು ಇದ್ದನು ಅಂತಹ ಕೃತ್ರಿಮ ನರಸಿಂಹನನ್ನು ಶರಭ ಮೃಗರೂಪದ ಶ್ರೀಹರಿಯು ಸಂಹರಿಸಿದನು ಎಂದು ಆ ಉಪನಿಷತ್ತಿನ ಅಭಿಪ್ರಾಯ



೩೫೮ ಭೀಮಃ

೧ (ಅಮುಕ್ತರಿಗೆ, ವಿಶೇಷವಾಗಿ ಅಜ್ಞಾನಿಗಳಿಗೆ) ಭಯವನ್ನು ಉಂಟುಮಾಡುವವನು.[1]

೨ (ಭಕ್ತರಿಗೆ, ವಿಶೇಷವಾಗಿ ಮುಕ್ತಾತ್ಮರಿಗೆ) ಅಭಯವನ್ನು ಉಂಟು ಮಾಡುವವನು[2]

ಭಗವಂತನು ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಭಯವನ್ನುಂಟು ಮಾಡುವವನು ಜ್ಞಾನಿಗಳು ಮುಕ್ತಾತ್ಮರಾಗುವವರೆಗೆ ಅಲ್ಪ ಭಯವನ್ನು ಉಂಟು ಮಾಡಿಯೇ ತೀರುವನು ಆದುದರಿಂದಲೇ ಜ್ಞಾನಿಗಳಾದ ವಾಯ್ವಾದಿಗಳೂ ಅವನ ನಿಯತಿಗೆ ಭಯಪಟ್ಟು ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸುವರು[3] ನಿಯತವಾಗಿ ವಾಯು ಸಂಚರಿಸುತ್ತಿರುವುದು, ಸೂರ್ಯನು ಉದಯಿಸುತ್ತಿರುವುದು, ಅಗ್ನಿ, ಇಂದ್ರ, ಯಮಾದಿಗಳು ತಮ್ಮ ತಮ್ಮ ಕರ್ತವ್ಯವನ್ನು ನೆರವೇರಿಸುತ್ತಿರುವುದು

---

೧ 1 ಬಿಭೇತ್ಯಸ್ಮಾತ್ ಅಮುಕ್ತಜಾತಂ ವಿಶೇಷತಃ ಅಜ್ಞಾನಿಜಾತಮಿತಿ ಭೀಮಃ ।

೨ 2 ಮಾ ಭೀಃ (ನ ವಿದ್ಯತೇ ಭಯಂ) ಅಭಯಂ ಭಕ್ತಾನಾಂ (ವಿಶೇಷತಃ ಮುಕ್ತಾನಾಂ) ಯಸ್ಮಾತ್ ಸಃ ಭೀಮಃ । ವರ್ಣವ್ಯತ್ಯಯೇನ ನಿರ್ವಚನಮ್ ।

-ಬ. ಗೋ ಆಧಾರೇಣ

ಭಿಯಂ ಭಕ್ತಭಯಂ ಮಿನಾತಿ ಹಿನಸ್ತೀತಿ ಭೀಮಃ ।

-ಸ ಸಂ.

3 ತತ್ ತ್ವೇವ ಭಯಂ ವಿದುಷೋಽಮನ್ವಾನಸ್ಯ । -ತೈ ಉ. 2-12

ತದೇವ ಬ್ರಹ್ಮ ಭಯಕೃದ್ ವಿದುಷೋಽವಿದುಷಸ್ತಥಾ । ವಿದುಷೋಽಲ್ಪಭಯಂ ಕುರ್ಯಾದ್ ಯಾವನ್ಮುಕ್ತಿಂ ವ್ರಜತ್ಯಸೌ । .. ತಸ್ಮಾದ್ ವಾಯ್ವಾದಯೋ ದೇವಾ ವಿದ್ವಾಂಸೋಽಪಿ ವಿಶೇಷತಃ । ಭೀತಾಃ ಸ್ವಕರ್ಮ ಕುರ್ವಂತಿ ವಿಷ್ಣೋಃ ಪ್ರೀತ್ಯರ್ಥಮಂಜಸಾ । -ಯಜುಃಸಂಹಿತಾ. (ತೈ ಉ. ಭಾ 2-13)

ಶಿವನ ನಿಯತಿಗೆ ಭಯಪಟ್ಟು ಎಂಬುದಾಗಿ ಉಪನಿಷತ್ತು ಸಾರಿದೆ[1] ಭಗವಂತನಿಗೆ ಎಲ್ಲರೂ ಭಯಪಡುವರೆಂದು ಈಶಾವಾಸ್ಯೋಪನಿಷತ್ತು ಸಾರಿದರೆ,[2] ಕಾಠಕೋಪನಿಷತ್ತು, ತಮ್ಮ ಕರ್ತವ್ಯವನ್ನು ಪಾಲಿಸದವರ ಪಾಲಿಗೆ ಭಗವಂತನು ವಜ್ರಾಯುಧದಂತೆ ಭಯಂಕರನಾದವನೆಂದು ಸಂದೇಶಿಸಿದೆ.[3]

ಭಗವಂತನು, ಜ್ಞಾನಿಗಳು ಮುಕ್ತರಾಗುವವರೆಗೆ ಸ್ವಲ್ಪ ಪ್ರಮಾಣದಲ್ಲಷ್ಟೇ ಭಯವನ್ನುಂಟು ಮಾಡುವನು. ಅಜ್ಞಾನಿಗಳಿಗೆ ಸಂಸಾರಭಯವನ್ನುಂಟು ಮಾಡುವನು ವಿಪರೀತ ಜ್ಞಾನಿಗಳಿಗೆ ಅಂಧಂತಮಸ್ಸೆಂಬ ಮಹಾಭಯವನ್ನುಂಟು ಮಾಡುವನು[4] ಆದುದರಿಂದಲೇ ಶ್ರೀಮದಾಚಾರ್ಯರು ಸಜ್ಜನರ ಪಾಲಿಗೆ ರಾಮ ಎನಿಸಿರುವ ಭಗವಂತನು ಅತಿ ಪಾಪಿಗಳ ಪಾಲಿಗೆ ನಿರವಧಿಕ ಪರಾಕ್ರಮಿಯಾಗಿದ್ದು

---

1 ತದಪ್ಯೇಷ ಶ್ಲೋಕೋ ಭವತಿ । ಭೀಷಾಽಸ್ಮಾದ್ ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ ।
-ತೈ ಉ 2-13

ವಿದುಷೋಽಪಿ ಭಯಕೃದಿತ್ಯುಕ್ತೇಽರ್ಥೇ ಶ್ಲೋಕಂ ಪ್ರಮಾಣಯತಿ—ತದಪೀತಿ । ತತ್ರೋಕ್ತಾರ್ಥೇ ಏಷ ಶ್ಲೋಕೋಽಪಿ ಭವತೀತ್ಯರ್ಥಃ । -ಉ ಖಂ.

* ಭಯಾದಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।
ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥
-ಕಾ. ಉ. 2-4-4

2 ತದೇಜತಿ. -ಈ. ಉ 1-5

ತತೋ ಬಿಭೇತಿ ಸರ್ವೋಽಪಿ .. -ತತ್ತ್ವಸಂಹಿತಾ ।

3 ಮಹದ್ಭಯಂ ವಜ್ರಮುದ್ಯತಂ.. -ಕಾ. ಉ. 24-3

ವಜ್ರವದ್ ಭಯದಂ ಚೈವ ಸ್ವಧರ್ಮಸ್ಯಾತಿಲಂಘನೇ ।
-ಕಾ. ಉ. ಭಾ.

4 ಅಮನ್ವಾನಸ್ಯ ನುರ್ವಿಷ್ಣುಃ ಕುರ್ಯಾನ್ನಿತ್ಯಂ ಮಹದ್ ಭಯಮ್। ತಮಃಅಖ್ಯಮನುತ್ಥಾನಂ.... -ಯಜುಃಸಂಹಿತಾ (ತೈ. ಉ. ಭಾ. 2-12)

* ಏತಾವಾನ್ ವಿಶೇಷಃ—ವಿದುಷೋ ಯಾವನ್ಮುಕ್ತಿ ಕಿಂಚಿದ್ಭಯಕೃತ್ ಪಶ್ಚಾದಭಯಕೃತ್ । ಅಜ್ಞಸ್ಯ ಸಂಸಾರಭಯಕೃತ್ । ವಿಪರೀತಜ್ಞಸ್ಯ ತು ಮಹಾಭಯಕೃದಿತಿ ।
-ಉ. ಖಂ.

'ಭೀಮ' ಎನಿಸಿರುವನೆಂದು ಸ್ತುತಿಸಿರುವರು[1] ಜ್ಞಾನಿಯು ನಿರ್ಭಯನಾದ ಭಗವಂತನನ್ನು ಹೊಂದಿದನೆಂದರೆ, ಆಗ ಅವನಿಗೆ ಭಗವಂತನು ಅಭಯನಾಗುವನು[2] ಭಕ್ತರಿಗೆ ಅಭಯವನ್ನುಂಟುಮಾಡುವುದೇ 'ಭೀಮ'ನಾಮದ ಪ್ರವೃತ್ತಿನಿಮಿತ್ತವಾಗಿದ್ದು, ಇದನ್ನು ಪ್ರಮುಖವಾಗಿ ಹೊಂದಿರುವ ಭೀಮಸೇನಾಂತರ್ಗತನಾದ ಭಗವಂತನೇ ಮುಖ್ಯವಾಗಿ ಭೀಮ ಎನಿಸಿದ್ದು, ವ್ಯವಹಾರ ನಿರ್ವಹಣೆಗಾಗಿ ಅಥವಾ ದುಷ್ಟರ ಮೋಹಕ್ಕಾಗಿಯಷ್ಟೇ ಯುಧಿಷ್ಠಿರನ ತಮ್ಮನು ಗೌಣವಾಗಿ ಭೀಮ ಎಂದೆನಿಸಿರುವನೆಂಬುದಾಗಿ ಸ್ಕಾಂದವು ಸಂದೇಶಿಸಿದೆ[3]

೩ (ಯಾರ ಬಗ್ಗೆಯೂ) ಭಯ ಪಡದಿರುವವನು[4]

ಭಗವಂತನಿಗೆ ಎಲ್ಲರೂ ಭಯಪಡುವರು ಆದರೆ ಅವನು ಮಾತ್ರ ಯಾರಿಗೂ ಭಯಪಡುವುದಿಲ್ಲ—ಎಂದು ಈಶಾವಾಸ್ಯೋಪನಿಷತ್ತು ಸಂದೇಶಿಸಿದೆ.[5]

---

1 ರಾಮೋಽಖಿಲಾನಂದತನುಃ ಸ ಏವ ಭೀಮೋಽತಿಪಾಪೇಷು ದುರಂತವೀರ್ಯಃ ।

* ಶ್ರೀಹೃಷೀಕೇಶತೀರ್ಥೈರ್ಲಿಖಿತೇ ಮೂಲಕೋಶೇ ಶ್ರೀಮದಾಚಾರ್ಯಕೃತಾನಾಂ ಸ್ತೋತ್ರಾಣಾಂ ಮಧ್ಯೇ ಪಠಿತತ್ವೇನ ನಿಮರ್ಶಕ್ಯೇ ಆಚಾರ್ಯಕೃತ ಇತೀತಿ ನಿಶ್ಚಿತಸ್ಯ ಶ್ಲೋಕಸ್ಯ ಪೂರ್ವಾರ್ಧಮಿದಮ್ ।

2 'ಅಥಾಭಯಂ ಭವೇದ್ ಬ್ರಹ್ಮ ತಸ್ಯ ಮುಕ್ತಸ್ಯ ಸರ್ವದಾ'

—ಯಜುಃ ಸಂಹಿತಾ (ತೈ ಉ. ಭಾ. 2–12)

3 ರಾಮಭೀಮಾರ್ಜುನಾದೀನಿ ವಿಷ್ಣೋರ್ನಾಮಾನಿ ಸರ್ವಶಃ । ರಮಣಾಭಯಮಾರ್ಜಾದ್ಯಾಃ ಶಬ್ದವೃತ್ತೇರ್ಹಿ ಹೇತವಃ । ಹರಿರ್ಹಿ ತತ್ರತತ್ರಸ್ಥೋ ರಮಣಾದೀನ್ ಕರೋತ್ಯಜಃ । ಅತಸ್ತಸ್ಯೈವ ನಾಮಾನಿ ವ್ಯಾಜಾದನ್ಯಗತಾನಿ ತು । ವ್ಯವಹಾರಪ್ರವೃತ್ತ್ಯರ್ಥಂ ದುಷ್ಟಾನಾಂ ಮೋಹನಾಯ ಚ —ಸ್ಕಾಂದ (ಭಾಗ. ತಾ. ನಿ. 2–7–35)

೩ 4 ಮಾ (ನ ವಿದ್ಯತೇ) ಭೀಃ ಭಯಂ ಯಸ್ಯ ಸಃ ಭೀಮಃ ।

5 ತದೇಜತಿ ತನ್ನೈಜತಿ —ಈ. ಉ ಭಾ.

ತತೋ ಬಿಭೇತಿ ಸರ್ವೋಽಪಿ ನ ಬಿಭೇತಿ ಹರಿಃ ಸ್ವಯಮ್ ।

—ತತ್ತ್ವಸಂಹಿತಾ(ಈ. ಉ. ಭಾ.)

೪ ಸಕಲ ವಿದ್ಯೆಗಳೂ ಪೂರ್ಣಗಳಾಗಿ ಯಾರಲ್ಲಿ ಇವೆಯೋ ಅಂತಹವನು.[1]

ಭೀಮಸೇನನು ಪೂರ್ಣಗಳಾದ ಸಕಲವಿದ್ಯೆಗಳನ್ನೂ ಹೊಂದಿರುವ ಪ್ರಯುಕ್ತ ಭೀಮ ಎನಿಸಿರುವನು[2] ಭಗವಂತನು ಅವನಿಗಿಂತಲೂ ಅಧಿಕವಾಗಿ ವಿದ್ಯೆಗಳನ್ನು ಪಡೆದಿರುವ ಪ್ರಯುಕ್ತ ಅವನಿಗಿಂತಲೂ ಮುಖ್ಯವಾಗಿ ಭೀಮ ಎಂದೆನಿಸಿರುವನು.

[ಅರ್ಥವಿಶೇಷಗಳನ್ನು ೯೪೮ನೆಯ 'ಭೀಮಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

ಜಿಜ್ಞಾಸೆ

[ಭಕ್ತ ಎಂಬುದಕ್ಕೆ ಸೂಚಕವಾಗಿ]

ಪ್ರ - ವಾಯುದೇವರಿಗೆ ಹನೂಮಾನ್ ಭೀಮ ಪೂರ್ಣಪ್ರಜ್ಞ ಎಂದು ಮೂರು ಅವತಾರಗಳು ಈ ಅವತಾರಗಳ ಹೆಸರುಗಳ ಅರ್ಥವು ಒಂದೇ 'ಹನುಶಬ್ದೋ ಜ್ಞಾನವಾಚೀ' 'ಭೃತಾಃ ಮಾಃ ಸಕಲಾ ಹಿ ಯಸ್ಮಿನ್,' ಎಂಬ ವಚನ ಪ್ರಕಾರ ಹನೂಮಾನ್ ಎಂದರೆ ಪೂರ್ಣಪ್ರಜ್ಞ ಎಂದು ಅರ್ಥ ಭೀಮ ಎಂಬಲ್ಲಿರುವ 'ಮಾ' ಶಬ್ದಕ್ಕೆ ವಿದ್ಯೆಗಳು ಎಂದು ಅರ್ಥ ಭೃತಾಃ ಎಂದರೆ ಪೂರ್ಣಗಳು ಎಂದು ಅರ್ಥ ಈ ರೀತಿ ಭೀಮ ಶಬ್ದದ ಅರ್ಥವೂ ಪೂರ್ಣಪ್ರಜ್ಞ ಎಂದೇ ಆಗಿರುತ್ತದೆ ಪೂರ್ಣಪ್ರಜ್ಞ ಎಂಬ ಹೆಸರು ಪರಮಾತ್ಮನಿಗೆ ಯುಕ್ತ ಪರಮಾತ್ಮನಿಗೆ ಸಂಬಂಧಿಸಿದ ನಾಮವನ್ನು ಶುದ್ಧಭಾಗವತ ಧರ್ಮನಿರತರಾದ ವಾಯುದೇವರು ಹೇಗೆ ಧರಿಸಿದರು? ರಾವಣ ಶಿಶುಪಾಲರುಗಳನ್ನು ಪರಮಾತ್ಮನು ತಾನು ಕೊಲ್ಲಬೇಕು ಎಂದು ಸಂಕಲ್ಪಿಸಿದ್ದರಿಂದ ಹನುಮಂತನು ಮತ್ತು ಭೀಮನು ಕೊಲ್ಲಲಿಲ್ಲ ಶ್ರೀಕೃಷ್ಣನ ರಥದಲ್ಲಿ ಅರ್ಜುನನು ಕೂತುಕೊಂಡಂತೆ ಭೀಮಸೇನನು ಕೂತುಕೊಳ್ಳಲಿಲ್ಲ ಅಷ್ಟ ಮಹಿಷಿಯರಲ್ಲಿ ಒಬ್ಬಳಾದ ಲಕ್ಷಣಾವನ್ನು ಶ್ರೀಕೃಷ್ಣನು ಲಗ್ನಮಾಡಿಕೊಳ್ಳುತ್ತೇನೆಂದು ಸಂಕಲ್ಪಿಸಿದ್ದರಿಂದ ಆ ಲಕ್ಷಣೆಯ ವಿವಾಹಕ್ಕೆಭೀಮನು ಪ್ರಯತ್ನವನ್ನು ಮಾಡಲಿಲ್ಲ.ಇವೆಲ್ಲ ವಾಯುದೇವರು ಶುದ್ಧಭಾಗವತ ಧರ್ಮನಿರತರು ಎಂಬುದಕ್ಕೆ ನಿದರ್ಶನಗಳು. ಆದ್ದರಿಂದ ಪರಮಾತ್ಮನ ನಾಮವನ್ನೂ ವಾಯುದೇವರು ಧರಿಸಬಾರದಿತ್ತು ಅಲ್ಲವೆ?

---

೪ 1 ಭೃತಾಃ ಪೂರ್ಣಾಃ ಮಾಃ ಯಸ್ಮಿನ್ ಸಃ ಭೀಮಃ ।

2 ಭೃತಮೋ ಭೀಮಃ ಇತ್ಯುಕ್ತೋ ಮಾಚೋ ಮಾ ಮಹಾಶರಃ ಸ್ಮೃತಾಃ । ಋಗಾದ್ಯಾ ಇತಿಹಾಸಂ ಚ ಪುರಾಣಂ ಪಂಚರಾತ್ರಕಮ್ । ಪ್ರೋಕ್ತಾ ಸಪ್ತಶಿವಾಸ್ತತ್ರ ತಯೋ ಭೀಮಸ್ತತಃ ಸ್ಮೃತಃ' -ಐ. ಉ ಭಾ

* ಸ ವಾಯುರೇವಾಭವದತ್ರ ಭೀಮನಾಮಾ ಭೃತಾ ಮಾಃ ಸಕಲಾ ಹಿ ಯಸ್ಮಿನ್ ।
ಮ. ಭಾರ. ತಾ ನಿ. 12-54

ಸಕಲಾಃ ಮಾಃ ವಿದ್ಯಾಃ ಯಸ್ಮಿನ್ ಭೃತಾಃ ಪೂರ್ಣಾಃ ತೇನ ಕಾರಣೇನ ಭೃತಾಃ ಮಾಃ ಯಸ್ಮಿನ್ನಿತಿ ವ್ಯುತ್ಪತ್ತ್ಯಾ ಭೀಮ ಇತ್ಯರ್ಥಃ । -ಭಾ. ಪ್ರ.

ಉ – ಹುಟ್ಟಿದ ಮಗುವಿಗೆ ದೇವರ ಹೆಸರನ್ನು ನಾಮಕರಣ ಸಂಸ್ಕಾರದ ದಿನ ಇಡಬೇಕು ಎಂದು ಶಾಸ್ತ್ರವು ಹೇಳುತ್ತದೆಯಾದ್ದರಿಂದ ಪರಮಾತ್ಮನ ನಾಮವನ್ನು ಇಟ್ಟುಕೊಳ್ಳುವದು, ಪರಮಾತ್ಮನ ಚಕ್ರಶಂಖರೂಪ ಆಯುಧಗಳನ್ನು ಧರಿಸುವದು, ತಾವು ಪರಮಾತ್ಮನ ಭಕ್ತ ಎಂಬುದಕ್ಕೆ ಸೂಚಕ ವಾದ್ದರಿಂದ ಪರಮಾತ್ಮನ ಪರಮ ಭಕ್ತರಾದ ವಾಯುದೇವರು ಪರಮಾತ್ಮನ ನಾಮವನ್ನು ಧರಿಸಿದರು. ಹಾಗೆಯೇ ಚಕ್ರಾದಿಗಳನ್ನು ಧರಿಸಿದರು.



## ೩೫೯ ಸಮಯಜ್ಞಃ

೧ (ವೈದಿಕ) ಸಿದ್ಧಾಂತವನ್ನು ಬಲ್ಲವನು.[1]

೨ (ವೇದವ್ಯಾಸಾದಿ ರೂಪಗಳಿಂದ) ಸಿದ್ಧಾಂತವನ್ನು ತಿಳಿಸಿಕೊಡುವವನು.[2]

ವೇದದ ವಿಧಿಭಾಗದಲ್ಲಿ ಭಗವಂತನ ಆರಾಧನೆಯನ್ನು ವಿಧಿಸುವುದು, 'ಅಭಿಧಾನ'ಭಾಗದಲ್ಲಿ ಅವನ ಗುಣಗಳನ್ನೇ ಹೇಳುವುದು, ವಿಕಲ್ಪ'ಭಾಗದಲ್ಲಿ ಅವನ ಅನಂತರೂಪಗಳನ್ನು ತಿಳಿಸುವುದು; 'ನಿಷೇಧ'ಭಾಗದಲ್ಲಿ ಅವನಿಗೆ ಅಪ್ರಿಯವಾದುದನ್ನೇ ನಿಷೇಧಿಸುವುದು - ಹೀಗೆ ಸಮಗ್ರವೇದವು ಭಗವತ್ಪರವಾಗಿದ್ದು, ಇಂತಹ ವೇದದ ಅಂತರ್ಯವನ್ನು ಪೂರ್ಣವಾಗಿ ಬಲ್ಲವನು ತಾನೊಬ್ಬನೇ ಎಂಬುದಾಗಿ ಶ್ರೀಕೃಷ್ಣನು ಉದ್ಧವನಲ್ಲಿ ತಿಳಿಸಿರುವನು.[3] ವೇದವನ್ನು ಸಮಗ್ರವಾಗಿ ಬಲ್ಲವನು

---

೧ 1 ಸಮಯಂ ವೈದಿಕಂ ಸಿದ್ಧಾಂತಂ ಜಾನಾತೀತಿ ಸಮಯಜ್ಞಃ ।

೨ 2 ಸಮಯಂ ವೈದಿಕಂ ಸಿದ್ಧಾಂತಂ ಜ್ಞಾಪಯತೀತಿ ಸಮಯಜ್ಞಃ ।
'ಸಮಯಾಃ ಶಪಥಾಚಾರಕಾಲಸಿದ್ಧಾಂತಸಂವಿದಃ' –ಅ. ಕೋ

3 ಕಿಂ ವಿಧತ್ತೇ ಕಿಮಾಚಷ್ಟೇ ಕಿಮನೂದ್ಯ ವಿಕಲ್ಪಯೇತ್ ।
ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ ವೇದ ಕಶ್ಚನ ।
ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯ ಇತ್ಯಹಮ್ ॥
–ಭಾಗ. 11-21-52

ಮದನ್ಯಃ ಕಶ್ಚನ ಕೋಽಪಿ ನ ವೇದ ॥

* 'ವಿಧಿಭಾಗೇ ಹರೇಃ ಪೂಜೈವಾಭಿಧಾನೇ ಚ ತದ್ಗುಣಾಃ । ವಿಕಲ್ಪೇ ತದ್ಬಹುತ್ವಂ ಚಾಪ್ಯ- ಪೋಹೇ ಚ ತದಪ್ರಿಯಮ್ । ಉಚ್ಯತೇ ಸರ್ವವೇದೇಷು ತಚ್ಚ ವೇದ ಸ ಏವ ಹಿ'
–ಆಗಮತಾತ್ಪರ್ಯ (ಭಾಗ. ತಾ. ನಿ.)

ತಾನೊಬ್ಬನೇ ಆಗಿದ್ದು, ತನ್ನ ವೇದವ್ಯಾಸರೂಪದಿಂದ ಅಂತಹ ವೇದದ ಅರ್ಥನಿರ್ಣಾಯಕವಾದ ಮೀಮಾಂಸಾಶಾಸ್ತ್ರವನ್ನು ತಾನೇ ರಚಿಸಿರುವೆನೆಂಬುದಾಗಿ ಗೀತಾಚಾರ್ಯನೂ ಸಂದೇಶಿಸಿರುವನು.[1]

೩ (ಎಲ್ಲರ) ಆಚಾರಗಳನ್ನು ಬಲ್ಲವನು.[2]

೪ (ಮನು ಮೊದಲಾದವರ ಮೂಲಕ) ಆಚಾರಗಳನ್ನು ತಿಳಿಸಿಕೊಡುವವನು.[3]

ಎಲ್ಲರಿಗೆ ಸಂಬಂಧಿಸಿರುವ ಆಚಾರಗಳನ್ನೂ ಬಲ್ಲವನು ಭಗವಂತನು ಸ್ವಾಯಂಭುವಮನು ಮುಂತಾದ ಧರ್ಮಶಾಸ್ತ್ರಕಾರರಲ್ಲಿ ಆವಿಷ್ಟನಾಗಿ ಅವರ ಮೂಲಕ ಆಚಾರಗಳನ್ನು ಬೋಧಿಸಿರುವವನೂ ಅವನೇ. ಜ್ಞಾನಸ್ವರೂಪಿಯಾಗಿರುವುದರಿಂದ 'ಮನು' ಎನಿಸಿ ಸ್ವಾಯಂಭುವ ಮನುವಿನಲ್ಲಿ ಇದ್ದುಕೊಂಡು ಅವನ ಮನಸ್ಸನ್ನು ಪ್ರೇರಿಸಿ ಆಚಾರಗಳನ್ನು ಅವನೇ ಹೇಳಿರುವನು—ಎಂಬುದಾಗಿ ಭವಿಷತ್ಪರ್ವವು ತಿಳಿಸಿದೆ.[4]

೫ (ಸೃಷ್ಟಿಯೇ ಮೊದಲಾದ ಕಾರ್ಯಗಳ) ಕಾಲವನ್ನು ಬಲ್ಲವನು.[5]

೬ (ಭಕ್ತರ ಅಭೀಷ್ಟವನ್ನು ನೀಡುವ) ಕಾಲವನ್ನು ಬಲ್ಲವನು.[6]

---

1 ವೇದಾಂತಕೃತ್ ವೇದವಿದೇವ ಚಾಹಮ್ । —ಗೀ. 15-15

ವೇದನಿರ್ಣಯಾತ್ಮಿಕಾ ಮೀಮಾಂಸಾ ವೇದಾಂತಃ । ತಥಾ ಹಿ ಸಾಮವೇದೇ ಪ್ರಾಚೀನ-ಶಾಲಶ್ರುತಿಃ – 'ಸ ವೇದಾಂತಕೃತ್ ಸ ಕಾಲಕ ಇತಿ । ಸ ಹ್ಯೇವ ಯುಕ್ತಿಸೂತ್ರಕೃತ್ ಸ ಕಾಲಕ ಇತಿ ಇತಿ । —ಗೀ. ಭಾ.

೩ 2 ಸಮಯಾನ್ ಆಚಾರಾನ್ ಜಾನಾತೀತಿ ಸಮಯಜ್ಞಃ ।

೪ 3 ಸಮಯಾನ್ ಆಚಾರಾನ್ ಜ್ಞಾಪಯತಿ ಮನ್ವಾದಿದ್ವಾರಾ ಬೋಧಯತೀತಿ ಸಮಯಜ್ಞಃ ।

4 ಮನುರೇಷೋಽವಬೋಧತ್ವಾನ್ಮನ್ವಂತಸ್ಥೋ ಜನಾರ್ದನಃ । ಸ ಹ್ಯಾಚಾರಾನುವಾಚೇಶಃ ಪ್ರೇರಯನ್ ಮನುಮಾನಸಮ್ ॥ —ಭವಿಷ್ಯತ್ಪರ್ವ (ಬೃ. ಉ. ಭಾ. 3-5-4)

೫ 5 ಸೃಷ್ಟ್ಯಾದಿಸಮಯಂ ಜಾನಾತೀತಿ ಸಮಯಜ್ಞಃ । —ವಿ. ರಾ.

೬ 6 ಸಮಯಂ ಭಕ್ತಾಭೀಷ್ಟದಾನಕಾಲಂ ಜಾನಾತೀತಿ ಸಮಯಜ್ಞಃ । —ಸ. ಸಂ.

೭ (ಆಯಾಯ ಕಾರ್ಯಗಳನ್ನು ನಿರ್ವಹಿಸಲು ಸೂರ್ಯಚಂದ್ರಾದಿಗಳ ಮೂಲಕ) ಕಾಲವನ್ನು ತಿಳಿಸಿಕೊಡುವವನು.[1]

೮ ಶಾಸ್ತ್ರಗಳನ್ನು ಬಲ್ಲವನು.[2]

೯ ಶಾಸ್ತ್ರಗಳನ್ನು ತಿಳಿಸಿಕೊಡುವವನು[3]

ಶ್ರೀ ವೇದವ್ಯಾಸರು ಎಲ್ಲರ ಹೃದಯದಲ್ಲಿದ್ದು ಯಾವಾಗಲೂ ವಿದ್ಯೆಗಳನ್ನು ಪ್ರೇರಿಸುತ್ತಿರುವರು. ಸೃಷ್ಟಿಯ ಆದಿಯಲ್ಲಿ ಚತುರ್ಮುಖನಿಗೆ ವಿಶೇಷವಾಗಿ ಪ್ರೇರಿಸಿದ್ದರು—ಎಂಬುದಾಗಿ ಸಾತ್ತ್ವತ ಸಂಹಿತೆ ತಿಳಿಸಿದೆ.[4]

೧೦ (ಅಗ್ನ್ಯಾದಿಗಳ) ಅಧಿಕಾರ ನಿಯಮವನ್ನು ಬಲ್ಲವನು.[5]

೧೧ (ಭಕ್ತರಿಗೆ ತಾನು ಮಾಡಿರುವ) ಅಭಯದಾನ ವ್ರತವನ್ನು ಬಲ್ಲವನು.[6]

೧೨ ಸಮತ್ವ ಉಪಾಯವುಳ್ಳ ಪೂಜೆಯು ಯಾರಿಗಾಗಿ ಇರುವುದೋ ಅಂತಹವನು.[7]

---

೭ 1 ಸಮಯಂ ತತ್ತತ್ಕಾರ್ಯನಿರ್ವಹಣಾಯ ಸಮುಚಿತಂ ಕಾಲಂ ಜ್ಞಾಪಯತಿ ಸೂರ್ಯಚಂದ್ರಾದಿದ್ವಾರಾ ಬೋಧಯತೀತಿ ಸಮಯಜ್ಞಃ ।

೮ 2 ಸಮಯಾನ್ ಶಾಸ್ತ್ರಾಣಿ ಜಾನಾತೀತಿ ಸಮಯಜ್ಞಃ ।
—ಸ. ಸಂ.

೯ 3 ಸಮಯಾನ್ ಶಾಸ್ತ್ರಾಣಿ ಜ್ಞಾಪಯತೀತಿ ಸಮಯಜ್ಞಃ ।

4 ...ಹೃದಿಸ್ಥೋ ಬಾದರಾಯಣಃ । ಓಂಕಾರಪೂರ್ವಕಾ ವಿದ್ಯಾಃ ಪ್ರೇರಯತ್ಯಖಿಲೇಷ್ವಪಿ । ಸದೈವ ಬ್ರಹ್ಮಣೇ ಪೂರ್ವಮ್’
—ಸಾತ್ತ್ವತಸಂಹಿತಾ (ಏಂ. ಭಾ. 1-27)

೧೦ 5 ಅಗ್ನ್ಯಾದೀನಾಮೂರ್ಧ್ವಜ್ವಲನಾದಿಸಮಯಮ್—ಅಧಿಕಾರನಿಯಮಂ ಜಾನಾತೀತಿ ಸಮಯಜ್ಞಃ । —ಪ. ಭ.

೧೧ 6 ಭಕ್ತೇಭ್ಯಃ ತದಭಯದಾನವ್ರತಂ ಜಾನಾತೀತಿ ಸಮಯಜ್ಞಃ ।
—ಪ. ಭ.

೧೨ 7 ಸಮಃ ಸಮತ್ವಾಖ್ಯೋಪಾಯವಾನ್ । ‘ಸಮತ್ವಂ ಯೋಗ ಉಚ್ಯತೇ’ ಇತಿ ವಚನಾತ್ । ತಾದೃಶೋ ಯಜೋ ಯತ್ಪೂಜಾರ್ಥಃ ಸ ಸಮಯಜ್ಞ ಇತಿ । —ವಿ ರಾ.

ಕರ್ಮಫಲದ ಆಸಕ್ತಿಯನ್ನು ಬಿಟ್ಟು, ಫಲ ಸಿದ್ಧಿಸಲಿ, ಬಿಡಲಿ–ಅದರ ಬಗ್ಗೆ ವಿಕಾರಕ್ಕೊಳಗಾಗದೆ ಒಂದೇ ರೀತಿಯಲ್ಲಿರುವಿಕೆಯೇ 'ಯೋಗ' ಎನಿಸಿದೆ ಎಂದು ಗೀತಾಚಾರ್ಯನು ಸಂದೇಶಿಸಿರುವನು.[1] ಭಕ್ತ ಪ್ರಹ್ಲಾದನು ಇಂತಹ ಸಮತ್ವವೇ ಅಚ್ಯುತನ ಆರಾಧನೆ ಎನಿಸಿದೆ ಎಂದು ದೈತ್ಯ ಬಾಲಕರಿಗೆ ಉಪದೇಶಿಸಿ, ಪ್ರತಿಯೊಂದು ವಿಷಯದಲ್ಲೂ ಇಂತಹ 'ಸಮತ್ವ'ವನ್ನು ಅಳವಡಿಸಿಕೊಳ್ಳಲು ಸಂದೇಶಿಸಿರುವನು.[2]

೧೩. ಯಜ್ಞ ಎನಿಸುವ ಲಕ್ಷ್ಮೀದೇವಿಯು ದೇಶತಃ ಹಾಗೂ ಕಾಲತಃ ವ್ಯಾಪ್ತಿಯಲ್ಲಿ ಮತ್ತು ಬಂಧಾಭಾವ ವಿಷಯದಲ್ಲಿ ತನಗೆ ಸಮಾನಳಾಗಿರುವಂತೆ ಅನುಗ್ರಹಿಸಿರುವವನು.[3]

ಲಕ್ಷ್ಮೀದೇವಿಯು ಸರ್ವಜ್ಞನಾದ ನಾರಾಯಣನಿಂದ ಕೂಡಿರುವವಳಾದುದರಿಂದಲೂ, ಅವನಿಂದ ಅವಿಷ್ಟಳಾಗಿರುವುದರಿಂದಲೂ, ಯಜ್ಞಕ್ರಿಯೆಗೆ ಅಭಿಮಾನಿನಿಯಾಗಿರುವುದರಿಂದಲೂ ಯಜ್ಞ ಎನಿಸಿರುವಳು.[4] ಇಂತಹ ಲಕ್ಷ್ಮೀದೇವಿಯು ಭಗವಂತನ ಅನುಗ್ರಹದಿಂದ ಅವನಂತೆಯೇ ಎಲ್ಲೆಡೆ ಇರುವವಳೂ; ಎಲ್ಲ ಕಾಲದಲ್ಲಿ ಇರುವವಳೂ ಆಗಿರುವಳು ಹಾಗೆಯೇ ಸಂಸಾರಬಂಧನಕ್ಕೊಳಗಾಗುವುದಿಲ್ಲ.[5]

---

1 ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ । ಸಂಗತ್ಯಾಗಸ್ಯಾಪ್ಯುಪಲಕ್ಷಣಮ್ । ತ್ಯಾಗೋಪೇತಂ ಸಮತ್ವಂ ಯೋಗ ಇತ್ಯರ್ಥಃ । —ಗೀ. ವಿ.

2 'ಸರ್ವತ್ರ ದೈತ್ಯಾಸ್ಸಮತಾಮುಪೇತ ಸಮತ್ವಮಾರಾಧನಮಚ್ಯುತಸ್ಯ' —ವಿ. ಪು. 1–17–90

೧೩. 3 ಸಮಃ ದೇಶತಃ ಕಾಲತಶ್ಚ ವ್ಯಾಪ್ತೌ ಅಬದ್ಧತ್ವೇ ಚ ಸಮಾನಃ ಯಜ್ಞಃ ಯಜ್ಞಕ್ರಿಯಾಭಿಮಾನಿನೀ ಲಕ್ಷ್ಮೀಃ ಯಸ್ಮಾತ್ ಸಃ ಸಮಯಜ್ಞಃ ।

4 .. ಯುಕ್ತಾ ಯದಾऽಹಂ ಜ್ಞೇನ ನಾರಾಯಣೇನ । ಯಜ್ಞಕ್ರಿಯಾಮಾನಿನೀ ಯಜ್ಞನಾಮ್ನೀ ತದೋತ್ತಮಾ ತತ್ಪ್ರವೇಶಾತ್ತದಾಖ್ಯಾ ॥ —ಮ. ಭಾರ. ತಾ. 20–70

ಜ್ಞೇನ ಯುತಾ ಯಜ್ಞಕ್ರಿಯಾಭಿಮಾನಿನೀ ತತ್ಪ್ರವಿಷ್ಟೇತಿ ಚ ಯಜ್ಞಪದವಾಚ್ಯತ್ವೇ ನಿಮಿತ್ತತ್ರಯಮುದಿತಮಿತಿ ಜ್ಞೇಯಮ್ ॥ —ಭಾ. ಪ್ರ.

5 'ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ । ಉಭಯೋರಪ್ಯಬದ್ಧತ್ವಂ . ಸಾ ಚೋಪಾಸ್ತೇ ಸದಾ ಹರಿಮ್। ಪ್ರಕೃತೇಃ ಪ್ರಾಕೃತಸ್ಯಾಪಿ ಯೇ ಗುಣಾಸ್ತೇ ತು ವಿಷ್ಣುನಾ। ನಿಯತಾಃ.. .' —ಭವಿಷ್ಯತ್ಪರ್ವ (ಬ್ರ. ಸೂ. ಭಾ. 4–2–10)

೧೪ ತನ್ನ ಸಕಲರೂಪಗಳಲ್ಲೂ ಸಮಾನನಾಗಿರುವವನೆಂಬುದಾಗಿ ಅಥವಾ ಭಕ್ತಿಗನುಗುಣವಾಗಿ ಫಲನೀಡುವವನೆಂಬುದಾಗಿ ಅಥವಾ ಲಕ್ಷ್ಮೀದೇವಿಯಿಂದ ಸಹಿತನಾಗಿಯೇ ಇರುವವನೆಂಬುದಾಗಿ ಪೂಜಿಸಲ್ಪಡುವವನು[1]

೧೫ ಲಕ್ಷ್ಮೀದೇವಿಯಿಂದ ಸಹಿತನಾಗಿರುವವನು ಮತ್ತು ಏನೆಲ್ಲ ಇದೆಯೋ ಅವೆಲ್ಲವನ್ನು ತಿಳಿದಿರುವವನು.[2]

೧೬ ಭಕ್ತರ ಶುಭದಾಯಕ ವಿಧಿಯನ್ನು ಚೆನ್ನಾಗಿ ಬಲ್ಲವನು.[3]

೧೭ ಶರಣಾಗತರನ್ನು ರಕ್ಷಿಸುವ ತನ್ನ ಶಪಥವನ್ನು (ಅಲ್ಲಲ್ಲಿ) ತಿಳಿಸಿರುವವನು.[4]

ಭಗವಂತನು ರಾಮಾವತಾರದಲ್ಲಿ ವಿಭೀಷಣನಿಗೆ ಅಭಯ ನೀಡಿದ ಸಂದರ್ಭದಲ್ಲಿ ತನ್ನನ್ನು ಮೊರೆಹೊಕ್ಕವರಿಗೆ ಅಭಯಪ್ರದಾನ ಮಾಡುವುದು ತನ್ನ ವ್ರತ ಎಂದು ಘೋಷಿಸಿದ್ದರೆ,[5] ಕೃಷ್ಣಾವತಾರದಲ್ಲಿ ಅರ್ಜುನನಿಗೆ ಗೀತೋಪದೇಶವನ್ನು ನೀಡುವಾಗ ತನ್ನನ್ನು ಸರ್ವೋತ್ತಮನೆಂದು ಉಪಾಸನೆ ಮಾಡುವವರ ಯೋಗಕ್ಷೇಮವನ್ನು ತಾನು ನೋಡಿಕೊಳ್ಳುವುದಾಗಿ ಸಾರಿರುವನು.[6]

---

೧೪ 1 ಸಕಲರೂಪೇಷು ಸಮಾನತ್ವಾತ್, ಭಕ್ತ್ಯನುಸಾರೇಣ ಫಲದಾನೇ ಸಮಾನತ್ವಾತ್, ಮಾ ಇತ್ಯುಕ್ತಯಾ ಲಕ್ಷ್ಮ್ಯಾ ಸಹೈವ ವಿದ್ಯಮಾನತ್ವಾದ್ವಾ ಸಮ ಇತಿ ಇಜ್ಯತ ಇತಿ ಸಮಯಜ್ಞಃ ।

೧೫ 2 ಮಯಾ ರಮಯಾ ಸಹಿತಃ ಸಮೋ ಯದಸ್ತಿ ತಜ್ಜಾನಾತೀತಿ ಯಜ್ಞ । ಸಮಶ್ಚಾಸೌ ಯಜ್ಞಶ್ಚೇತಿ ಸಮಯಜ್ಞಃ । -ಸ. ಸಂ.

೧೬ 3 ಶಂ ಸಮ್ಯಗ್ ಅಯಂ ಭಕ್ತಶುಭಾವಹವಿಧಿಂ ಜಾನಾತೀತಿ ಸಮಯಜ್ಞಃ । -ಸ. ಸಂ.

೧೭ 4 ಸಮಯಂ ಶರಣಾಗತರಕ್ಷಣಾಖ್ಯಂ ಸ್ವೀಯಂ ಶಪಥಂ ತತ್ರ ತತ್ರ ಜ್ಞಾಪಯತೀತಿ ಸಮಯಜ್ಞಃ ।

5 ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ ವ್ರತಂ ಮಮ ॥
-ವಾ. ರಾ. ಯುದ್ಧ. 18-33

6 ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥
-ಗೀ. 9-22

## ಜಿಜ್ಞಾಸೆ

[ಗೀತೆಯಲ್ಲಿ ವೇದಾಪೌರುಷೇಯತ್ವ]

ಪ್ರ – ಗೀತೆಯಲ್ಲಿ ಮುಖ್ಯ ಪ್ರಮೇಯಗಳು ಎಲ್ಲವೂ ಇವೆ ಎಂದು ಎಲ್ಲರೂ ಹೇಳುತ್ತಾರೆ. ಆದರೆ ಗೀತೆಯಲ್ಲಿ ವೇದದ ಅಪೌರುಷೇಯತ್ವವನ್ನು ಎಲ್ಲಿಯೂ ಹೇಳಿದ್ದು ಕಾಣುವುದಿಲ್ಲವಲ್ಲ?

ಉ.- 'ವೇದಾಂತಕೃತ್ ವೇದವಿದೇವ ಚಾಹಂ' ಎಂಬ ಗೀತೆಯಲ್ಲಿ ವೇದಾಂತಕೃತ್ ವೇದಾರ್ಥ ನಿರ್ಣಯಕ್ಕೆ ಕಾರಣವಾದ ಬ್ರಹ್ಮಸೂತ್ರವನ್ನು ನಾನೇ ವೇದವ್ಯಾಸ ರೂಪದಿಂದ ಮಾಡಿದ್ದೇನೆ. ಆದರೆ ವೇದವನ್ನು ನಾನು ಮಾಡಲಿಲ್ಲ, ವೇದಗಳನ್ನು ಕೇವಲ ತಿಳಿದಿದ್ದೇನೆ ಎಂದು ಹೇಳಿದ್ದು ಇದೆ.

ಇದರಿಂದ 'ಛಂದಾಂಸಿ ಜಜ್ಞಿರೇ ತಸ್ಮಾತ್' ಈ ಪುರುಷ ಸೂಕ್ತದಲ್ಲಿ ಛಂದಸ್ಸುಗಳು ಅಂದರೆ ವೇದಗಳು ಪರಮಾತ್ಮನ ದೆಸೆಯಿಂದ ಹುಟ್ಟಿದವು ಎಂದು ಹೇಳಿದ್ದರಿಂದ ವೇದಗಳು ಪೌರುಷೇಯವೆಂದು ಹೇಳಿರುತ್ತದೆಯಲ್ಲ ಎಂಬ ಶಂಕೆಗೆ ಛಂದಸ್ಸುಗಳು ನನ್ನಿಂದ ಅಭಿವ್ಯಕ್ತ ಗಳಾದವು ಹೊರತು ಹುಟ್ಟಿಲ್ಲ 'ಜಜ್ಞಿರೇ' ಪದಕ್ಕೆ ಅಭಿವ್ಯಕ್ತಗಳಾದವು ಎಂದೇ ಅರ್ಥ ಎಂದು ಹೇಳಿ ಗೀತೆಯಲ್ಲಿ ವೇದಾಪೌರುಷೇಯತ್ವವನ್ನು ಹೇಳಿದಂತೆ ಆಯಿತು.



### ೩೬೦ ಹವಿರ್ಹರಿಃ

೧ ಯಜ್ಞಗಳಲ್ಲಿ ನೀಡುವ ಹವಿಸ್ಸನ್ನು ಕೊಂಡೊಯ್ಯುವವನು.[1]

೨ ಸಂಹಾರಕಾಲದಲ್ಲಿ ಸಮಸ್ತ ಜಗತ್ತೂ ಯಾರ ಮುಖದಲ್ಲಿ ಹೋಮಿಸಲ್ಪಡುವುದೋ ಅಂತಹವನು ಮತ್ತು ಯಜ್ಞಗಳಲ್ಲಿ ನೀಡುವ ಹವಿಸ್ಸನ್ನು ಕೊಂಡೊಯ್ಯುವವನು.[2]

ಸಂಹಾರಕಾಲದಲ್ಲಿ ಸಮಸ್ತಜಗತ್ತೂ ನೃಸಿಂಹನ ಮುಖದಲ್ಲಿ ಹೋಮಿಸಲ್ಪಡುವುದೆಂಬ ದೃಷ್ಟಿಯಿಂದ ನೃಸಿಂಹನನ್ನು ಋಗ್ವೇದವು 'ಹವಿಃ' ಎಂದೇ ಉಲ್ಲೇಖಿಸಿದೆ.[3] ಯಜ್ಞಗಳಲ್ಲಿ ದೇವತೆಗಳನ್ನು ಉದ್ದೇಶಿಸಿ ನೀಡಲಾಗುವ ಹವಿಸ್ಸನ್ನೂ ಆಯಾಯ ದೇವತೆಗಳಿಗೆ ತಲುಪಿಸುವ ಪ್ರಯುಕ್ತ 'ಹವ್ಯವಾಟ್' ಎಂದೇ

---

೧ 1 ಯಜ್ಞೇಷು ಹವೀಂಷಿ ಹರತಿ ನಯತೀತಿ ಹವಿರ್ಹರಿಃ ।

೨ 2 ಹೂಯತೇ ಜಗದಸ್ಯ ಮುಖೇ ಇತಿ ಹವಿಃ। ಯಜ್ಞೇಷು ದತ್ತಂ ಹವಿಃ ಹರತೀತಿ ಹರಿಃ। ಹವಿಶ್ಚಾಸೌ ಹರಿಶ್ಚ ಹವಿರ್ಹರಿಃ ।

3 'ಪೃಥಕ್ಚ ಯಸ್ಯ ಸಪ್ರಥಶ್ಚ ನಾಮಾನುಷ್ಟುಭಸ್ಯ ಹವಿಷೋ ಹವಿರ್ಯತ್'
–ಋ. ವೇ. 10 181 1

ಎನಿಸಿರುವ[1] ಅಗ್ನಿನಾಮಕ ಭಗವಂತನನ್ನು ಸಂಬೋಧಿಸಿ, ಎಲ್ಲೆಡೆ ಎಲ್ಲ ಕಾಲಗಳಲ್ಲಿ ಯಾವಾಗ ಸಕಲ ದೇವತೆಗಳನ್ನು ಹೋಮಿಸುವೆವೋ ಆಗ ನಿನ್ನಲ್ಲೇ ಹವಿಸ್ಸನ್ನು ಹೋಮಿಸಲಾಗುವುದೆಂದು ಯಜಮಾನರು ಪ್ರಾರ್ಥಿಸಿರುವುದನ್ನು ಋಗ್ವೇದದಲ್ಲಿ ಉಲ್ಲೇಖಿಸಲಾಗಿದೆ.[2] ಮತ್ತೊಂದೆಡೆ, ಮಹೈಶ್ವರ್ಯ ಉಳ್ಳ ನಿನ್ನಲ್ಲೇ ಚೆನ್ನಾಗಿ ಹವಿಸ್ಸನ್ನು ಹೋಮಿಸುವೆವು ನೀನು ಆ ಹವಿಸ್ಸನ್ನು ಒಮ್ಮೆಲೇ ಅನೇಕ ದೇವತೆಗಳಿಗೆ ಹೊಂದಿಸಿ, ಅವರನ್ನು ಯಜಿಸು—ಎಂದು ಅಗ್ನಿನಾಮಕ ಭಗವಂತನಲ್ಲಿ ನಿವೇದಿಸಿಕೊಳ್ಳಲಾಗಿದೆ[3] ಶ್ರೀಕೃಷ್ಣನು ಅರ್ಜುನನಿಗೆ ತಾನು ಹರಿ ಎನಿಸಲು ಸರ್ವಯಜ್ಞಗಳಲ್ಲಿ ನೀಡುವ

---

'ಅನುಷ್ಟುಬ್‌ದೇವತಾ ಯಸ್ತು ನೃಸಿಂಹೋ ಜಗತೋಽಸ್ಯ ಚ ಸ್ವಮುಖೇ ಹವನಾದೇವ ಹವಿರಿತ್ಯಭಿಧೀಯತೇ' -ಋಗ್ವೇದ ಸಂಹಿತಾ (ಐ. ಉ. ಭಾ. 2-7-6)

1 'ಅಗ್ನಿಮಗ್ನಿಂ ಹವೀಮಭಿಸ್ಸದಾ ಹವಂತ ವಿಶ್ಪತಿಮ್ । ಹವ್ಯವಾಹಂ ಪುರುಪ್ರಿಯಮ್' -ಋ. ವೇ. 12-2

ಹವ್ಯಂ ವಹತೀತಿ ಹವ್ಯವಾಟ್ ತಂ ಹವ್ಯವಾಹಮ್ । .ಮಂ. ಮಂ.

2 ಯಚ್ಚಿದ್ಧಿ ಶಶ್ವತಾ ತನಾ ದೇವಂ ದೇವಂ ಯಜಾಮಹೇ । ತ್ವೇ ಇದ್ಧೂಯತೇ ಹವಿಃ । -ಋ. ವೇ. 26-6

ಶಶ್ವತ್ ವಿಸ್ತರತಃ ಸರ್ವಾನ್ ಯದಾ ದೇವಾನ್ ಯಜಾಮಹೇ। ತದಾ ತ್ವಯ್ಯೇವ ಹಿ ಹವಿಹೂ್ರಯತೇ । -ಋ. ಭಾ. (26-6)

3 ತ್ವೇ ಇದಗ್ನೇ ಸುಭಗೇ ಯವಿಷ್ಠ್ಯ ವಿಶ್ವಮಾಹೂಯತೇ ಹವಿಃ । ಸ ತ್ವಂ ನೋ ಅದ್ಯ ಸುಮನಾ ಉತಾಪರಂ ಯಕ್ಷಿ ದೇವಾನ್ ಸುವೀರ್ಯಾ ॥ —ಋ. ವೇ. 36-6

ಅಗ್ನೇ ವಿಶ್ವಂ ಹವಿಃ ಸುಭಗೇ ಮಹೈಶ್ವರ್ಯೇ ತ್ವೇ ಇತ್ ತ್ವಯ್ಯೇವ ಆ ಸಮ್ಯಕ್ ಹೂಯತೇ, ಅಸ್ಮಾಭಿಃ ಇತಿ ಶೇಷಃ । ಸಃ ಏವಮಸ್ಮಾಭಿರ್ದತ್ತಹವಿಃ ಸುಮನಾಃ ತ್ವಂ ಅದ್ಯ ನಃ ಅಸ್ಮದರ್ಥೇ ಸುವೀರ್ಯಾತ್ ಕರಣಾತ್ ದೇವಾನ್ ಯಕ್ಷಿ ಯಜಸಿ ಅಪರಂ ಉತ ಆಗಾಮಿನ್ಯಪಿ ಕಾಲೇ, ಯಜ ಇತಿ ಶೇಷಃ । ಸುವೀರ್ಯಕಾರ್ಯಂ ಹ್ಯೇತತ್-ಯದೇಕಸ್ಯೈವಾನೇಕಾನ್ ದೇವಾನ್ ಪ್ರತಿ ಯುಗಪದನೇಕದತ್ತಹವಿಃಪ್ರಾಪಣಮ್ । -ಮಂ. ಮಂ.

ಹವಿರ್ಭಾಗವನ್ನು ಸ್ವೀಕರಿಸುವುದೂ ಒಂದು ಕಾರಣವೆಂದು ತಿಳಿಸಿರುವನು.[1]

೩ ಹವಿಸ್ಸಿಗೆ ಅತ್ಯಂತ ಸ್ವಾಮಿ ಆಗಿರುವವನು ಮತ್ತು ಅಪ್ರಾಕೃತವಾದ ಹಸಿರು ಬಣ್ಣ ಉಳ್ಳವನು.[2]

ಯಜ್ಞದಲ್ಲಿಯ ಹವಿಸ್ಸು ಭಗವಂತನಿಗೆ ಅತ್ಯಂತಾಧೀನವಾಗಿರುವುದರಿಂದ 'ಬ್ರಹ್ಮ ಹವಿಃ' ಎಂದೇ ಗೀತೆಯಲ್ಲಿ ಉಲ್ಲೇಖಿಸಲಾಗಿದೆ.[3] ಅಪ್ರಾಕೃತವಾದ ಹಸಿರುಬಣ್ಣ ಉಳ್ಳವನಾದುದರಿಂದಲೂ ತಾನು 'ಹರಿ' ಎನಿಸಿರುವೆನೆಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿರುವನು.[4]

೪ ಮುಖ್ಯವಾಗಿ ಹೋಮಿಸಲ್ಪಡುವವನು (ಹೋಮವನ್ನು ಮುಖ್ಯವಾಗಿ ಸ್ವೀಕರಿಸುವವನು) ಮತ್ತು ಪಾಪಗಳನ್ನು ಅಥವಾ ಸಂಸಾರವನ್ನು ಪರಿಹರಿಸುವವನು.[5]

---

1 'ಇಡೋಪಹೂತಂ ಗೇಹೇಷು ಹರೇ ಭಾಗಂ ಕ್ರತುಷ್ವಹಮ್ । .. ತಸ್ಮಾದ್ಧರಿರಿತಿ ಸ್ಮೃತಃ' -ಮ. ಭಾರ. ಶಾಂತಿ. 342-68

ಗೇಹೇಷ್ವಿಷ್ಟಿಗೃಹೇಷು । ಹರತೇರಿಕಾರಪ್ರತ್ಯಯಃ । -ಪ್ರ ದೀ.

೩ 2 'ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ' ಇತಿ ನ್ಯಾಯಾನುಸಾರೇಣ ಹವಿಷಃ ಸತ್ತಾ ಭಗವದಧೀನೇತಿ ಭಗವಾನಪಿ ಹವಿರಿತಿ ವ್ಯವಹ್ರಿಯತೇ । 'ವರ್ಣೋ ಮೇ ಹರಿತಃ ಶ್ರೇಷ್ಠಸ್ತಸ್ಮಾದ್ಧರಿರಿತಿ ಸ್ಮೃತಃ' ಇತಿ ಮೋಕ್ಷಧರ್ಮವಚನಾತ್ ಅಪ್ರಾಕೃತಹರಿತ-ವರ್ಣವತ್ತ್ವಾತ್ ಹರಿಃ । ಹವಿಶ್ಚಾಸೌ ಹರಿಶ್ಚ ।

3 'ಬ್ರಹ್ಮಾರ್ಪಣಂ ಬ್ರಹ್ಮ ಹವಿಃ .' -ಗೀ. 4-24

ಸರ್ವಮೇತದ್ ಬ್ರಹ್ಮೇತ್ಯುಚ್ಯತೇ । ತದಧೀನಸತ್ತಾಪ್ರತೀತಿತ್ವಾತ್ । ನತು ತತ್ಸ್ವರೂಪತ್ವಾತ್ । ಉಕ್ತಂ ಹಿ—ತ್ವದಧೀನಂ ಯತಃ ಸರ್ವಮತಃ ಸರ್ವೋ ಭವಾನಿತಿ । ವದಂತಿ ಮುನಯಸ್ಸರ್ವೇ ನ ತು ಸರ್ವಸ್ವರೂಪತಃ' ಇತಿ ಪಾದ್ಮೇ ।

* 'ತ್ವಂ ಕ್ರತುಸ್ತ್ವಂ ಹವಿಃ.. .' -ಭಾಗ. 4-7-42

4 ವರ್ಣೋ ಮೇ ಹರಿತಃ ಶ್ರೇಷ್ಠಸ್ತಸ್ಮಾದ್ಧರಿರಿತಿ ಸ್ಮೃತಃ । -ಮ. ಭಾರ. ಶಾಂತಿ. 342-68

೪ 5 ಹೂಯತೇ ಯಸ್ಮೈ ತತ್ ಹವಿಃ । ಹರತಿ ಪರಿಹರತಿ ಪಾಪಾನಿ ಸಂಸಾರಮಿತಿ ವಾ ಹರಿಃ । ಹವಿಶ್ಚಾಸೌ ಹರಿಶ್ಚ ಹವಿರ್ಹರಿಃ ।

ಭಗವಂತನಿಗಾಗಿ ಮುಖ್ಯವಾಗಿ ಹೋಮಿಸಲ್ಪಡುವ ಪ್ರಯುಕ್ತ ಅವನನ್ನು ಋಗ್ವೇದವು 'ಆಹುತಿ' ಎಂದೇ ಉಲ್ಲೇಖಿಸಿದೆ.[1] ತೀರ್ಥಯಾತ್ರೆ ಮುಂತಾದ ಪುಣ್ಯಕಾರ್ಯಗಳಿಗಿಂತಲೂ ಮಿಗಿಲಾಗಿ ಭಗವಂತನ ನಾಮಸಂಕೀರ್ತನೆ ಪಾಪ ಪರಿಹಾರಕವಾಗಿರುವುದರಿಂದ 'ಹರಿ' ಎಂದು ಎರಡು ಅಕ್ಷರಗಳ ನಾಮ ಸಂಕೀರ್ತನೆ ನಡೆಸಿದವನಿಗೆ ಕುರುಕ್ಷೇತ್ರಾದಿ ತೀರ್ಥ ಯಾತ್ರೆಯ ಆವಶ್ಯಕತೆ ಇಲ್ಲ—ಎಂದು ಕೌಶಿಕರು ಸಂದೇಶಿಸಿರುವರು[2] ಹಾಗೆಯೇ 'ಹರಿ'ಯು ಸಂಸಾರಸಾಗರವನ್ನು ದಾಟಲು ದೋಣಿಯಂತೆ ಇರುವ ವೆನೆನ್ನುವುದರ[3] ಮೂಲಕ ಅವನು ಸಂಸಾರಪರಿಹಾರಕನೂ ಆಗಿರುವನೆಂಬುದನ್ನು ಸೂಚಿಸಲಾಗಿದೆ

ಜಿಜ್ಞಾಸೆ

[ಹರಿನಾಮೋಚ್ಚಾರಣೆಯೇ ಉತ್ತಮ]

ಪ್ರ - ಹರಿ ಎಂಬ ನಾಮವನ್ನು ಉಚ್ಚಾರಣ ಮಾಡಿದವನು ಕಾಶೀ ಮೊದಲಾದ ತೀರ್ಥಯಾತ್ರೆಗಳನ್ನು ಮಾಡಬೇಕಾಗಿಲ್ಲ ಎಂದು ಶಾಸ್ತ್ರವಚನವು ಇದೆ ಆದರೆ ಹರಿನಾಮೋಚ್ಚಾರಣೆಯಿಂದ ಬಾಯಿ ಯಿಂದ ಮಾಡಿದ ಪುರುಷರ ಅಪಮಾನಾದಿಗಳಿಂದ ಉಂಟಾಗುವ ಪಾಪ ಪರಿಹಾರವಾದೀತೇ ಹೊರತು ಕಾಲಿನಿಂದ ದೊಡ್ಡವರನ್ನು ಒದಿಯೋದರಿಂದ ಉಂಟಾದ ಪಾಪದ ಪರಿಹಾರವಾಗ ಲಿಕ್ಕಿಲ್ಲವಲ್ಲ? ಆದುದರಿಂದ ಕಾಲಿನಿಂದ ಮಾಡಿದ ಪಾಪ ಪರಿಹಾರಕ್ಕಾಗಿ ಕಾಶೀ ಮೊದಲಾದ ಕ್ಷೇತ್ರ ಯಾತ್ರೆಯನ್ನು ಹರಿ ಎಂದು ನಾಮೋಚ್ಚಾರಣವನ್ನು ಮಾಡಿದವನು ಕೂಡ ಮಾಡ ಬೇಕಲ್ಲ?

ಉ - ಹರಿ ನಾಮೋಚ್ಚಾರಣವನ್ನು ಮಾಡಿದವನಿಗೆ ಅದರಿಂದ ಬಾಯಿಯಿಂದ ಮಾಡಿದ ಪಾಪವೆಲ್ಲ ಪರಿಹಾರವಾದರೆ ಬಾಯಿಂದ ಆಗುವ ಸ್ವಾಧ್ಯಾಯ ಪ್ರವಚನಗಳನ್ನು ನಿರಂತರ ಮಾಡುತ್ತಾನೆ. ಅದರಿಂದ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ ಬ್ರಹ್ಮಸಾಕ್ಷಾತ್ಕಾರವಾದವನು ತನ್ನ ಎಲ್ಲಾ ಪಾಪ ಗಳನ್ನು ಪರಿಹರಿಸಿ ಕೊಳ್ಳುತ್ತಾನೆ ಅವನಿಗೆ ಕಾಶೀ ಮೊದಲಾದ ತೀರ್ಥಯಾತ್ರೆಯ ಅವಶ್ಯ ಕತೆಯು ಇಲ್ಲ ಕಾಶೀ ಮೊದಲಾದ ಯಾತ್ರೆಯನ್ನು ಮಾಡಿದವನು ಹರಿ ನಾಮೋಚ್ಚಾರಣೆ ಯನ್ನು ಮಾಡದೆ ಇದ್ದರೆ ಕಾಲಿನಿಂದ ಮಾಡಿದ ಪಾಪಗಳನ್ನು ಮಾತ್ರ ಪರಿಹರಿಸಿ ಕೊಳ್ಳುತ್ತಾನೆ.

---

1 ಯಂ ಆಹುತಿಂ ಪರಿವೇದ -ಋ. ಸಂ. 31-5

ಆಹೂಯತ ಇತ್ಯಾಹುತಿಃ -ಋ ಭಾ ಓ

2 ಕುರುಕ್ಷೇತ್ರೇಣ ಕಿಂ ತಸ್ಯ ಕಿಂ ಕಾಶ್ಯಾ ಪುಷ್ಕರೇಣ ವಾ । ಜಿಹ್ವಾಗ್ರೇ ವರ್ತತೇ ಯಸ್ಯ ಹರಿರಿತ್ಯಕ್ಷರದ್ವಯಮ್ ॥ -ಕೃ. ಮಂ. 70

3 ಹರಿಂ ವದಸ್ವ ಕಲ್ಯಾಣಿ ಸಂಸಾರೋದಧಿನೌರ್ಹರಿಃ ।

-ಕೃ. ಮಾ. 68

ಬಾಯಿಯಿಂದ ಮಾಡಿದ ಪಾಪಗಳ ಪರಿಹಾರವನ್ನು ಹರಿನಾಮೋಚ್ಚಾರಣವನ್ನು ಮಾಡದ ಪ್ರಯುಕ್ತ ಮಾಡಿಕೊಳ್ಳುವದಿಲ್ಲ. ಇದರಿಂದ ಬಾಯಿಂದ ಆಗುವ ಸಾಧ್ಯಾಯ ಪ್ರವಚನಗಳಿಂದ ರಹಿತನಾಗಿ ಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದುವದಿಲ್ಲ ಅವನ ಸಮಸ್ತ ಪಾಪಗಳ ಪರಿಹಾರ ವಾಗುವದಿಲ್ಲ. ಆದ್ದರಿಂದ ಕಾಶೀಯಾತ್ರಾದಿಗಳನ್ನು ಮಾಡುವುದಕ್ಕಿಂತ ಹರಿನಾಮೋಚ್ಚಾರಣ ವನ್ನು ಸದಾ ಮಾಡುವದೇ ಉತ್ತಮ



## ೩೬೧ ಸರ್ವಲಕ್ಷಣಲಕ್ಷಣ್ಯಃ

೧ ಸಕಲ ಶುಭಲಕ್ಷಣಗಳಿಂದ ಗುರುತಿಸಲು ಅಥವಾ ತಿಳಿಯಲು ಸಾಧ್ಯನಾಗಿರುವವನು[1]

೨ ಸಕಲ ಶುಭಲಕ್ಷಣಗಳುಳ್ಳವನು ಮತ್ತು ತಿಳಿಯಬೇಕಾದವನು[2]

೩ ಪರಿಪೂರ್ಣನಾದವನು ಹಾಗೂ ಸಕಲಲಕ್ಷಣಗಳಿಂದಲೂ ತಿಳಿಯಬೇಕಾದವನು.[3]

ಭಗವಂತನು ಹೇಗೆ ಜ್ಞಾನಾನಂದಾತ್ಮಕ ಸರ್ವ ಗಂಧ ಸ್ವರೂಪಿ, ಸರ್ವರಸ ಸ್ವರೂಪಿ[4]

---

೧ 1 ಸರ್ವಾಣಿ ಚ ತಾನಿ ಲಕ್ಷಣಾನಿ ಶುಭಚಿಹ್ನಾನಿ ಸರ್ವಲಕ್ಷಣಾನಿ । ತೈಃ ಲಕ್ಷಣಂ ಅಂಕನಂ ದರ್ಶನಂ ವಾ ಸರ್ವಲಕ್ಷಣಲಕ್ಷಣಂ । 'ಲಕ್ಷ ದರ್ಶನಾಂಕನಯೋಃ' ತತ್ರ । ಸಾಧುಃ ಸರ್ವಲಕ್ಷಣಲಕ್ಷಣ್ಯಃ ।

೨ 2 ಸರ್ವಾಣಿ ಲಕ್ಷಣಾನ್ಯಸ್ಯೇತಿ ಸರ್ವಲಕ್ಷಣಃ । ಸ ಚಾಸೌ ಲಕ್ಷಣ್ಯಶ್ಚ ಸರ್ವಲಕ್ಷಣಲಕ್ಷಣ್ಯಃ ।

೩ 3 ಪೂರ್ಣತ್ವಾತ್ ಸರ್ವಃ । ಲಕ್ಷಣೈಃ ಸಕಲಶುಭಲಕ್ಷಣೈಃ ಲಕ್ಷಣ್ಯಃ ಜ್ಞೇಯಃ ಲಕ್ಷಣ ಲಕ್ಷಣ್ಯಃ ಸರ್ವಶ್ಚಾಸೌ ಲಕ್ಷಣಲಕ್ಷಣಶ್ಚ ಸರ್ವಲಕ್ಷಣ್ಯಲಕ್ಷಣ್ಯಃ ।

4 ' ..ಆತ್ಮಾ ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ.. '

–ಛಾಂ. ಉ. ಭಾ.

'ಸರ್ವಗಂಧಾದಿರೂಪಶ್ಚ.. ' -ಸದ್ಗುಣ (ಛಾಂ. ಉ. ಭಾ)

ಏಕತ್ರ ಸರ್ವಗಂಧಾದಿನಾ ಚಿದಾನಂದಾತ್ಮಕಸರ್ವಗಂಧಾದಿರೂಪತ್ವಮುಚ್ಯತೇ ।

–ಛಾಂ. ಉ. ಭಾ.

* ಗಂಧರಸಶಬ್ದೌ ಗುಣಾಂತರಸ್ಯಾಪ್ಯುಪಲಕ್ಷಕೌ । -ಪ್ರ.ದೀ.(ಗೀ. ಭಾ. ಟಿ. 7-6)

ಅಂತೆಯೇ ಸರ್ವಶುಭ ಧರ್ಮಸ್ವರೂಪಿಯೂ ಕೂಡಾ[1] ಶಾಸ್ತ್ರವು ಹೀಗೆಯೇ ಅವನನ್ನು ಪರಿಚಯಿಸಿ ಕೊಡುವುದರ ಮೂಲಕ ಅವನನ್ನು ಹೀಗೆಯೇ ಗುರುತಿಸಬೇಕು. ಹೀಗೆಯೇ ತಿಳಿಯಬೇಕು—ಎಂದು ಸೂಚಿಸಿದೆ[2] ಭಗವಂತನು ಸಕಲಗುಣಪರಿಪೂರ್ಣನಾಗಿರುವುದರಿಂದಲೇ ಸಕಲಶುಭಲಕ್ಷಣಗಳೂ ಅವನಲ್ಲಿ ಇವೆ.

ಳ ಎಲ್ಲ ಪದಾರ್ಥಗಳ ಅಸಾಧಾರಣಧರ್ಮಗಳಿಗೆ ಕಾರಣನೆಂದು ತಿಳಿದುಕೊಳ್ಳಬೇಕಾದವನು.[3]

ಜಲಾದಿಗಳಲ್ಲಿ ರಸಾದಿಗಳು ಸ್ವಾಭಾವಿಕ ಧರ್ಮಗಳೆನಿಸಲು, ಹಾಗೂ ಇತರ ಸಂಖ್ಯಾದಿಧರ್ಮಗಳಿಗಿಂತ ಶ್ರೇಷ್ಠ ಧರ್ಮಗಳೆನಿಸಲು ಭಗವಂತನು ವಿಶೇಷವಾಗಿ ಕಾರಣನಾಗಿರುವನು.[4] ಆದುದರಿಂದಲೇ

---

1 'ಸರ್ವಧರ್ಮಾ ಸರ್ವನಾಮಾ ಸರ್ವಕರ್ಮಾ '
-ಅನು. ವ್ಯಾ. 1-3-6

ಅತ್ರ 'ಸರ್ವಧರ್ಮಾ' ಇತಿ ಸಾಮಾನ್ಯತಃ ಪ್ರತಿಪಾದ್ಯತೇ ಚೇದಪಿ ಸರ್ವಶುಭಧರ್ಮಾ ಇತ್ಯೇವಾರ್ಥಃ ।

* 'ಸರ್ವಕರ್ಮಾ ಸರ್ವಲಿಂಗಃ . ' ಇತಿ ಸತ್ಯಸಂಧೀಯೋ ಉಲ್ಲಿಖಿತಾ ಶ್ರುತಿಃ ।

2 'ಇತಿ ನಿಶ್ಚಯಕೃದ್ ಯಾತಿ ತಮೇವ ಪುರುಷೋತ್ತಮಮ್' (ಛಾಂ. ಉ. ಭಾ. 3-2-9) ಇತಿ ಭಗವತಃ ಚಿದಾನಂದಾತ್ಮಕಸರ್ವಗಂಧಾದಿರೂಪತ್ವೇನ ಜ್ಞಾನೇ ಸತಿ ಮೋಕ್ಷಫಲಸ್ಯ ಪ್ರತಿಜ್ಞಾನಾತ್ ತಥಾ ತಸ್ಯ ಬೋಧನೇ ಶಾಸ್ತ್ರಸ್ಯ ತಾತ್ಪರ್ಯಮಸ್ತೀತಿ ನಿಶ್ಚೇತುಂ ಶಕ್ಯತೇ ।

ಳ 3 ಸರ್ವೇಷಾಂ ಪದಾರ್ಥಾನಾಂ ಲಕ್ಷಣಾನಿ ಸರ್ವ ಲಕ್ಷಣಾನಿ । ತೈಃ ಲಕ್ಷಣ್ಯಃ ತತ್ತಲ್ಲಕ್ಷಣ ಕಾರಣತ್ವೇನ ಜ್ಞೇಯಃ ।

4 ರಸಾದೀನಾಂ ರಸಾದಿತ್ವೇ ಸ್ವಭಾವತ್ವೇ ತಥೈವ ಚ ।
ಸಾರತ್ವೇ ಸರ್ವಧರ್ಮೇಷು ವಿಶೇಷೇಣಾಪಿ ಕಾರಣಮ್ ।
—ಗೀತಾತಲ್ಪ (ಗೀ. ಭಾ. 7-11)

ಸ್ವಭಾವತ್ವೇಽಬಾದೀನಾಮಿತಿ ಶೇಷಃ । ಸಾರತ್ವೇಽಬಾದಿಧರ್ಮೇಷ್ವಿತಿ ಶೇಷಃ । ರಸಾದಿತ್ವೇ ಚೇತಿ ಚಾರ್ಥಃ । —ಪ್ರ. ದ್ರೀ.

ಗೀತಾಚಾರ್ಯನು ಕೆಲವು ಪದಾರ್ಥಗಳಲ್ಲಿ ಇರುವ ತನ್ನ ವಿಭೂತಿ ರೂಪಗಳನ್ನು ಉಲ್ಲೇಖಿಸಿ, ಕೊನೆಯಲ್ಲಿ ಯಾವ ಯಾವ ವಸ್ತು ತನ್ನ ಜಾತೀಯ ಪದಾರ್ಥಗಳಿಗಿಂತೆಲ್ಲ ಶ್ರೇಷ್ಠವೆನಿಸಿದೆಯೋ, ಸಂಪದ್ಯುಕ್ತವಾಗಿದೆಯೋ, ಅಭಿವೃದ್ಧವಾಗಿದೆಯೋ—ಅದು ತನ್ನ ಪ್ರಕಾಶರೂಪವಾದ ಅಂಶದಿಂದಾಗಿ ಉಂಟಾದುದೆಂದು ತಿಳಿಯಬೇಕೆಂದು ಸಂದೇಶಿಸಿರುವನು.[1] ಹೀಗೆ ಪ್ರಕೃತ್ಯಾದಿ ಪ್ರತಿಯೊಂದರ ಧರ್ಮಗಳೂ ಭಗವದ್ಗುಣಗಳ ಪ್ರತಿಬಿಂಬಗಳೇ ಆಗಿರುವುದರಿಂದಲೇ ಅವನು 'ಸರ್ವಮಯ' ಎಂದೇ ಎನಿಸಿರುವನೆಂದು ಮಹಾಮೀಮಾಂಸೆ ಸಂದೇಶಿಸಿದೆ.[3]

ಈ ರೀತಿಯಾಗಿ ಎಲ್ಲ ವಸ್ತುಗಳ ಅಸಾಧಾರಣ ಧರ್ಮಗಳಿಗೂ ಭಗವಂತನೇ ನಿಯಾಮಕನಾಗಿರುವ ಪ್ರಯುಕ್ತ, ಅವೆಲ್ಲವುಗಳಿಗೆ ಕಾರಣನನ್ನಾಗಿ ಅವನನ್ನು ತಿಳಿದುಕೊಳ್ಳಬೇಕು

೫ ಸಕಲ ದೈಹಿಕ ಲಕ್ಷಣಗಳಿಂದಲೂ ಗುರುತಿಸಿಕೊಳ್ಳಬೇಕಾದವನು ಅಥವಾ ತಿಳಿದುಕೊಳ್ಳಬೇಕಾದವನು[3]

ಸಕಲ ದೈಹಿಕ ಶುಭಲಕ್ಷಣಗಳೂ ದೇವತೆಗಳಲ್ಲಾಗಲೀ, ಋಷಿಗಳಲ್ಲಾಗಲೀ ಪ್ರಾಯಶಃ ಇರುವುದಿಲ್ಲ—ಎಂದ ಬ್ರಹ್ಮತರ್ಕವು, ದೇವಶ್ರೇಷ್ಠನಾದ ಭಗವಂತನಲ್ಲಿ, ಅವನ ಬಳಿಕ ಚತುರ್ಮುಖನಲ್ಲಿ ಸಕಲ ಶುಭ ಲಕ್ಷಣಗಳೂ ಇವೆ ಎಂಬುದಾಗಿ ತಿಳಿಸಿದೆ.[4] ಅನಾದಿಯಾಗಿ ದುಃಖದಿಂದ ದೂರವಾಗಿರಲು ಸುಖಾಧಿಕ್ಯ ಹೊಂದಿರಲು ಜ್ಞಾಪಕವಾದ ದೈಹಿಕಲಕ್ಷಣವು ಲಕ್ಷ್ಮೀದೇವಿಯ ರುಕ್ಮಿಣೀ

---

1 ಯದ್ಯದ್ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥
-ಗೀ. 10-41

2 ಸ ವಾ ಅಯಮಾತ್ಮಾ... ಸರ್ವಮಯಃ ..
-ಬೃ. ಉ. 6-4-5

* ಪ್ರಕೃತ್ಯಾದಿಗುಣಾ ಯಸ್ಮಾತ್ ತದ್ಗುಣಪ್ರತಿಬಿಂಬಕಾಃ। ಅತಃ ಸರ್ವಮಯೋ ವಿಷ್ಣುಃ
-ಮಹಾಮೀಮಾಂಸಾ (ಬೃ. ಉ ಭಾ)

೫ 3 ಸರ್ವೈಃ ಲಕ್ಷಣೈಃ ದೈಹಿಕೈಃ ದ್ವಾತ್ರಿಂಶಲ್ಲಕ್ಷಣೈಃ ಲಕ್ಷಣ್ಯಃ ಅಂಕನೀಯಃ ದರ್ಶನೀಯೋ ವಾ ಸರ್ವಲಕ್ಷಣಲಕ್ಷಣ್ಯಃ ।

4 ಪ್ರಾಯೋ ದೇವಾಶ್ಚ ಋಷಯೋ ನ ಸರ್ವಶುಭಲಕ್ಷಣಾಃ । ಋತೇ ವಿಷ್ಣುಂ ಸುರಶ್ರೇಷ್ಠಂ ಬ್ರಹ್ಮಾಣಂ ವಾಪ್ಯನಂತರಮ್ ।
-ಬ್ರಹ್ಮತರ್ಕ (ಬೃ. ಉ. ಭಾ. 5-9-26)

ಸತ್ಯಭಾಮಾದಿರೂಪಗಳಲ್ಲಿ ಮುಖ್ಯವಾಗಿ ಇದೆ ಇವರಿಗಿಂತಲೂ ಮುಖ್ಯವಾಗಿ ಭಗವಂತನ ಅವತಾರಗಳಾದ ವೇದವ್ಯಾಸಾದಿರೂಪಗಳಲ್ಲಿ ಕಾಣಿಸುವುದು ಭಗವಂತನಲ್ಲಿರುವ ಅತಿ ಮುಖ್ಯವಾದ ಈ ದೈಹಿಕ ಲಕ್ಷಣವು ಸ್ವಾತಂತ್ರ್ಯಾದಿ ಸಕಲಗುಣ ಸಮುದಾಯಕ್ಕೆ ಜ್ಞಾಪಕವಾಗಿದೆ ಭಗವಂತನೊಬ್ಬನೇ ಸಕಲಗುಣಪೂರ್ಣನಾಗಿರುವ ಪ್ರಯುಕ್ತ ಈ ಲಕ್ಷಣವು ಅವನನ್ನು ಬಿಟ್ಟರೆ ಇನ್ನಾರಲ್ಲೂ ಇಲ್ಲ—ಎಂದು ಶ್ರೀಮದಾಚಾರ್ಯರು ನಿರ್ಣಯಿಸಿರುವರು[1]

೬ ಪೂರ್ಣಗಳಾದ ಲಕ್ಷಣಗಳಿಂದ ಗುರುತಿಸಬೇಕಾದವನು ಅಥವಾ ತಿಳಿಯಬೇಕಾದವನು[2]

ಭಗವಂತನ ಪ್ರತಿಯೊಂದು ಲಕ್ಷಣವೂ ಅವನ ಸ್ವರೂಪಾತ್ಮಕವೇ ಆಗಿದ್ದು[3] ಅವನಂತೆ ಪೂರ್ಣವೇ ಆಗಿದೆ.

೭ ಸರ್ವವೂ ಯಾರಿಗೆ ಜ್ಞಾಪಕವಾಗಿ ಇದೆಯೋ ಅಂತಹವನು ಎಂದು ಗುರುತಿಸಬೇಕಾದವನು ಅಥವಾ ತಿಳಿಯ ಬೇಕಾದವನು.[4]

ಹದಿನಾಲ್ಕು ಲೋಕಗಳೂ ಭಗವಂತನ ಪ್ರತಿಮೆಯಂತೆ ಇದ್ದು ಅವನಿಗೆ ಜ್ಞಾಪಕವೆನಿಸಿದೆ.[5]

---

1 ಅನಾದಿದುಃಖಹೀನತ್ವೇ ಸುಖಾಧಿಕ್ಯೇ ಚ ಲಕ್ಷಣಮ್ । ರುಗ್ಮಿಣೀ ಸತ್ಯಭಾಮಾದಿರೂಪಾಯಾಃ ಶ್ರಿಯ ಏವ ತು । ಮುಖ್ಯಂ ತತೋಽತಿಮುಖ್ಯಂ ತು ಸ್ವಾತಂತ್ರ್ಯನೇರಶೇಷತಃ, ಗುಣರಾಶೇಃ ಪರಂ ಲಿಂಗಂ ನಿತ್ಯಂ ವ್ಯಾಸಾದಿರೂಪಿಣಃ ॥ ವಿಷ್ಣೋರೇವ ನ ಚಾನಸ್ಯ ಸ ಹ್ಯೇಕಃ ಪೂರ್ಣಸದ್ಗುಣಃ -ಮ ಭಾರ. ತಾ. 30-131 . 133

೬ 2 ಸರ್ವಾಣಿ ಪೂರ್ಣಾನಿ ಚ ತಾನಿ ಲಕ್ಷಣಾನಿ ಚ ಸರ್ವಲಕ್ಷಣಾನಿ । 'ಸರ್ವಃ ಪೂರ್ಣಃ ಸಮುದ್ದಿಷ್ಟಃ ' । ತೈಃ ಲಕ್ಷಣ್ಯಃ ಅಂಕನೀಯಃ ದರ್ಶನೀಯೋ ವಾ ಸರ್ವಲಕ್ಷಣಲಕ್ಷಣ್ಯಃ ।

3 ' ತತ್ಸರ್ವಂ ಭಗವಾನೇವ ಯೇ ಚ ಧರ್ಮಾ ಬಲಾದಯಃ '
-ಅ ಉ ಭಾ. (13-10)

೭ 4 ಸರ್ವಂ ಅಖಿಲಮಪಿ ಲಕ್ಷಣಂ ಜ್ಞಾಪಕಂ ಯಸ್ಯ ಸಃ ಸರ್ವಲಕ್ಷಣಃ। ಸರ್ವಲಕ್ಷಣ ಇತಿ ಲಕ್ಷಣ್ಯಃ ಅಂಕನೀಯೋ ದರ್ಶನೀಯೋ ವಾ ಸರ್ವಲಕ್ಷಣಲಕ್ಷಣ್ಯಃ ।

5 ಶಿಲಾವತ್ ಪ್ರತಿಮೈಷಾ ಹಿ ವಿಷ್ಣೋರ್ಲೋಕಚತುರ್ದಶೀ
-ಭಾಗ. ತಾ. ನಿ. 4-11-17

೮ ಸಕಲ ಪದಾರ್ಥಗಳ ನಾಮಗಳೂ ಮುಖ್ಯವಾಗಿ ಅವನಿಗೆ ಸೇರಿವೆ ಎಂದು ಗುರುತಿಸಬೇಕಾದವನು ಅಥವಾ ತಿಳಿಯಬೇಕಾದವನು[1]

ಎಲ್ಲ ಹೆಸರುಗಳೂ ಮುಖ್ಯವಾಗಿ ಭಗವಂತನನ್ನೇ ಪ್ರತಿಪಾದಿಸುತ್ತಿವೆ[2] ಹೀಗೆ ಮುಖ್ಯವಾಗಿ ಅವನಿಗೆ ಸೇರಿರುವ ನಾಮಗಳನ್ನು ವ್ಯವಹಾರವನ್ನು ಕೂಡಿಸುವುದಕ್ಕಾಗಿ ಅವನಲ್ಲಿಂದ ಸಮಾಕರ್ಷ ಮಾಡಿ ಔಪಚಾರಿಕವಾಗಿಯಷ್ಟೇ ಇತರರಲ್ಲಿ ಪ್ರಯೋಗಿಸಲಾಗುವುದು[3] ಈ ರೀತಿಯಾಗಿ ಅವನನ್ನು ಗುರುತಿಸಿಕೊಳ್ಳಬೇಕು. ಅರಿಯಬೇಕು

೯ ಪೂರ್ಣವಾದ ಸ್ವರೂಪ ಉಳ್ಳವನೆಂದು ಗುರುತಿಸಬೇಕಾದವನು ಅಥವಾ ತಿಳಿಯಬೇಕಾದವನು[4]

೧೦ ಸರ್ವಶುಭವಸ್ತುಗಳೇ ಚಿಹ್ನೆಗಳಾಗಿ ಉಳ್ಳ ಜಗತ್ಸೃಷ್ಟ್ಯಾದಿಕರ್ಮರೂಪಲಕ್ಷಣದಿಂದ ಉಂಟಾಗುವ ಜ್ಞಾನಕ್ಕೆ ಗೋಚರಿಸುವವನು[5]

---

೮ 1 ಸರ್ವಾಣಿ ಲಕ್ಷಣಾನಿ ನಾಮಾನಿ ಯಸ್ಯ ಸಃ ಸರ್ವಲಕ್ಷಣಃ । 'ಲಕ್ಷಣಂ ನಾಮ್ನಿ ಚಿಹ್ನೇ ಚ .।' ಸರ್ವಲಕ್ಷಣ ಇತಿ ಲಕ್ಷಣ್ಯಃ ಅಂಕನೀಯೋ ದರ್ಶನೀಯೋ ವಾ ಸರ್ವಲಕ್ಷಣಲಕ್ಷಣ್ಯಃ ।

2 'ನಾಮಾನಿ ಸರ್ವಾಣಿ ಯಮಾವಿಶಂತಿ ತಂ ಸ್ಮ ವಿಷ್ಣುಂ ಪರಮಮುದಾಹರಂತಿ'
—ಐ ಉ ಭಾ. 2-1-2-12

3 ತಸ್ಯೈವ ಮುಖ್ಯನಾಮಾನಿ ಸಮಾಕೃಷ್ಯೇತರೇಷ್ವಪಿ । ಉಪಚಾರಾತ್ ಪ್ರವರ್ತಂತೇ ವ್ಯವಹಾರಪ್ರಸಿದ್ಧಯೇ' -ಐ ಉ. ಭಾ 2-1-2 12

೯ 4 ಸರ್ವಂ ಪೂರ್ಣಂ ಲಕ್ಷಣಂ ಸ್ವರೂಪಂ ಯಸ್ಯ ಸಃ ಸರ್ವಲಕ್ಷಣಃ । 'ಲಕ್ಷಣಂ ಲಕ್ಷ್ಯಮಾತ್ರಾ ಚ ಸ್ವರೂಪಮಿತಿ ಕಥ್ಯತೇ -ಅಭಿಧಾನಮ್ (ಭಾಗ. ತಾ. ನಿ. 3-11-10)। ಸರ್ವಲಕ್ಷಣ ಇತಿ ಲಕ್ಷಣ್ಯಃ ಇತಿ ಅಂಕನೀಯೋ ದರ್ಶನೀಯೋ ವಾ ಸರ್ವಲಕ್ಷಣಲಕ್ಷಣ್ಯಃ ।

೧೦ 5 ಸರ್ವಾಣಿ ಶುಭವಸ್ತೂನಿ ಲಕ್ಷಣಾನಿ ಚಿಹ್ನಾನಿ ಯೇಷಾಂ ತಾನಿ ಸರ್ವಲಕ್ಷಣಾನಿ ಜಗತ್ಸರ್ಜನಾದಿ ಕರ್ಮಾಣಿ ತೈಃ ಲಕ್ಷಣ್ಯಃ ಲಕ್ಷಣಂ ಅಸಾಧಾರಣೋ ಧರ್ಮಃ ತೇನ ತಜ್ಜನ್ಯಪ್ರತೀತಿರ್ಲಕ್ಷ್ಯತೇ । ಸರ್ವಜಗದ್ವಿಷಯಕಸರ್ಜನಾದಿಬಹುಕರ್ಮಾಖ್ಯಲಕ್ಷಣಜನ್ಯಪ್ರತೀತಿವಿಷಯಃ, ಬಹುಕರ್ಮೇತಿ ಯಾವತ್ । -ಶೀ. ಚಂ.

೧೧ ಸಕಲ ಜೀವಾತ್ಮರನ್ನೂ ಅವರವರಿಗೆ ಯೋಗ್ಯವಾದ ಗುರಿಯ ಕಡೆಗೆ ಕರೆದೊಯ್ಯು ವವನು ಹಾಗೂ ತಿಳಿಯಲು ಯೋಗ್ಯನಾದವನು [1]

ಸ್ವಯಂ ಪರಿಪೂರ್ಣವಾದ ಭಗವಂತನು ಜಗತ್ತಿನ ಸೃಷ್ಟ್ಯಾದಿಗಳಲ್ಲಿ ತೊಡಗುವುದೇ ಆಯಾಯ ಜೀವಾತ್ಮರನ್ನು ಅವರವರ ಸ್ವಭಾವಕ್ಕೆ ಯೋಗ್ಯವಾದ ಗುರಿಗೆ ತಲುಪಿಸಬೇಕೆಂಬುವ ಉದ್ದೇಶದಿಂದಲೇ. [2]

ಜಿಜ್ಞಾಸೆ

[ಅಪ್ರಾಕೃತಗಳು ಅಪರಿಮಿತಗಳು]

ಪ್ರ – ಪರಮಾತ್ಮನಲ್ಲಿ ಸರ್ವಲಕ್ಷಣಗಳು ಇರುವವು ಎಂದು ಹೇಳಿದಾಗ ಪೃಥಿವೀಲಕ್ಷಣವಾದ ಗಂಧ ವತ್ವ, ಜಲದ ಲಕ್ಷಣವಾದ ಶೀತಸ್ಪರ್ಶವತ್ವ, ತೇಜಸ್ಸಿನ ಲಕ್ಷಣವಾದ ಉಷ್ಣ ಸ್ಪರ್ಶವತ್ವ, ವಾಯುಲಕ್ಷಣ ರೂಪರಹಿತತ್ವೇ ಸತಿ ಸ್ಪರ್ಶವತ್ವ, ಆಕಾಶ ಲಕ್ಷಣವಾದ ಶಬ್ದವತ್ವ ಇವುಗಳು ಪರಮಾತ್ಮನಲ್ಲಿ ಇವೆ ಎಂದು ಹೇಳಿದಂತೆ ಆಗಿ ಇವುಗಳು ಪರಮಾತ್ಮನು ಪೃಥಿವ್ಯಾದಿಗಳಿಂದ ಅಭಿನ್ನನು ಎಂದು ಹೇಳಿದಂತೆ ಆಯಿತಲ್ಲವೆ?

ಉ - ಪೃಥಿವ್ಯಾದಿಗಳಿಗೆ ಇರುವ ಗಂದವತ್ವಾದಿಗಳು ಪ್ರಾಕೃತಗಳು ಪರಿಮಿತಗಳು. ಪರಮಾತ್ಮನಲ್ಲಿ ಇರುವ ಗಂಧವತ್ವಾದಿಗಳು ಅ ಪ್ರಾಕೃತಗಳು ಅಪರಿಮಿತಗಳು ಈ ರೀತಿ ವ್ಯತ್ಯಾಸವು ಇರುವದರಿಂದ ಪರಮಾತ್ಮನು ಪೃಥಿವ್ಯಾದಿಗಳಿಂದ ಅಭಿನ್ನನಾಗುವದಿಲ್ಲ



## ೬೬೨ ಲಕ್ಷ್ಮೀವಾನ್

೧ ನಿತ್ಯವೂ ಲಕ್ಷ್ಮೀದೇವಿಯಿಂದ ಕೂಡಿರುವವನು [3]

---

೧೧ 1 ಸರ್ವಾನ್ ಜೀವಾನ್ ಸ್ವಸ್ವಯೋಗ್ಯಂ ಲಕ್ಷಂ ಲಕ್ಷ್ಯಂ ನಯತಿ ಪ್ರಾಪಯತೀತಿ ಸರ್ವ ಲಕ್ಷಣಃ । 'ಲಕ್ಷ್ಮರ ಲಕ್ಷ್ಯಂ ಶರವ್ಯಂ ಚ' । ಲಕ್ಷಣ್ಯಃ ದ್ರಷ್ಟವ್ಯಃ । ಸರ್ವಲಕ್ಷಣಶ್ಚಾಸೌ ಲಕ್ಷಣಶ್ಚ ಸರ್ವಲಕ್ಷಣಲಕ್ಷಣ್ಯಃ ।

2 'ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವಸಂಭೂತಯೇ ಭವತಿ . '
–ಮ. ಭಾರ ತಾ. ನಿ. 1-5

೧ 3 ಲಕ್ಷ್ಮೀಃ ನಿತ್ಯಂ ಅಸ್ಯಾಸ್ತೀತಿ ನಿತ್ಯಯೋಗೇ ಅರ್ಥವಿಶೇಷೇ ವಿವಕ್ಷಿತೇ ಮತುಪ್ ।

ಭಗವಂತನು ನಿತ್ಯಾವಿಯೋಗಿನಿ ಎನಿಸಿರುವ ಲಕ್ಷ್ಮೀದೇವಿಯಿಂದ ಯಾವಾಗಲೂ ಕೂಡಿಕೊಂಡೇ ಇರುವನು.[1]

೨ ಲಕ್ಷಣಗಳ ಆದಿಕ್ಯ ಉಳ್ಳವನು.[2]

'ಸರ್ವಲಕ್ಷಣ ಲಕ್ಷಣ್ಯ'[3]—ಎಂದೇ ಎನಿಸಿರುವ ಭಗವಂತನು ಶುಭಲಕ್ಷಣಗಳ ಪರಮಾಧಿಕ್ಯವನ್ನು ಪಡೆದಿರುವನು.[4]

೩ ಸರ್ವಾಧಿಕವಾದ ಸಂಪತ್ತನ್ನು ನಿತ್ಯವೂ ಹೊಂದಿರುವವನು[5]

ಭಗವಂತನು ಪೂರ್ಣೈಶ್ವರ್ಯ ಸಂಪನ್ನನಾದುದರಿಂದ ಇವನ ಸಂಪತ್ತು ಪರಮಾ ಎನಿಸಿದೆ ಎಂದು ಉಪನಿಷತ್ತು ಉಲ್ಲೇಖಿಸಿದೆ[6]

---

1 ಭಗವತಃ ಲಕ್ಷ್ಮ್ಯಾ ಸಾಕಂ ನಿತ್ಯಯೋಗಮಧಿಕೃತ್ಯ ಅಧಿಕಃ ವಿಚಾರಃ ೧೮೬ ತಮಸ್ಯ 'ಶ್ರೀಮಾನ್' ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೨ 2 ಲಕ್ಷ್ಮೀಃ ಲಕ್ಷಣೋನ್ನಾಹೋ ಅಸ್ಯಾಸ್ತೀತಿ ಲಕ್ಷ್ಮೀವಾನ್ । ' ಲಕ್ಷಣೋನ್ನಾಹೋ ಲಕ್ಷ್ಮೀಶಬ್ದೇನ ಭಣ್ಯತೇ -ಬ್ರಹ್ಮತರ್ಕ (ಭಾಗ. ತಾ. ನಿ 2-6-44)

3 'ಸರ್ವಲಕ್ಷಣಲಕ್ಷಣ್ಯಃ' -ವಿ ಸ ನಾ ೩೬೧

4 ಭಗವತಃ ಶುಭಲಕ್ಷಣೋಪೇತತ್ವಮಧಿಕೃತ್ಯ ಅಧಿಕ। ವಿಚಾರಃ ಸರ್ವಲಕ್ಷಣಲಕ್ಷಣ್ಯ ಇತಿ ೩೬೧ ತಮಸ್ಯ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೩ 5 ಲಕ್ಷ್ಮೀಃ ಸಂಪತ್ ಸರ್ವಾತಿಶಯಿತಾ ನಿತ್ಯಮಸ್ಯಾಸ್ತೀತಿ ಲಕ್ಷ್ಮೀವಾನ್ । ಅತಿಶಯಾರ್ಥೇ ನಿತ್ಯಯೋಗಾರ್ಥೇ ಚ ವಿವಕ್ಷಿತೇ ಮತುಪ್ । 'ಲಕ್ಷ್ಮೀಃ ಸಂಪತ್ತಿಶೋಭಯೋಃ' -ಮೇದಿನೀ ।

6 '.. ಅಸ್ಯ ಪರಮಾ ಸಂಪತ್. . ' -ಬೃ. ಉ. 6-3-32

ಪೂರ್ಣೈಶ್ವರ್ಯಾದಸ್ಯ ಸಂಪತ್ ಪರಮಾ ಸಂಪ್ರಕೀರ್ತಿತಾ । -ಬೃ. ಉ ಭಾ.

* ಭಗವತಃ ಸಂಪದಮಧಿಕೃತ್ಯಾಧಿಕಃ ವಿಚಾರಃ ೬೧೩ ತಮಸ್ಯ 'ಶ್ರೀಮಾನ್' ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೪ ಸರ್ವಾತಿಶಯವಾದ ಸೌಂದರ್ಯವನ್ನು ನಿತ್ಯವೂ ಹೊಂದಿರುವವನು[1]

೫ ಉಳಿದವರಲ್ಲಿ ಇರುವ ಲಕ್ಷಣಗಳ ಆಧಿಕ್ಯ ಅಥವಾ ಸಂಪತ್ತು ಅಥವಾ ಸೌಂದರ್ಯ— ಇವುಗಳಿಗೆ ನಿಯಾಮಕನಾಗಿರುವವನು[2]

ಎಲ್ಲರಲ್ಲಿರುವ ಎಲ್ಲ ಧರ್ಮಗಳನ್ನೂ ನಿಯಮಿಸುವ ಭಗವಂತನೇ[3] ಲಕ್ಷಣಾಧಿಕ್ಯ ಉಳ್ಳ ವ್ಯಕ್ತಿಗಳ ಲಕ್ಷಣಾಧಿಕ್ಯಕ್ಕೂ, ಸಂಪನ್ನ ವ್ಯಕ್ತಿಗಳ ಸಂಪತ್ತಿಗೂ, ಸುಂದರ ವ್ಯಕ್ತಿಗಳ ಸೌಂದರ್ಯಕ್ಕೂ ನಿಯಾಮಕನಾಗಿರುವವನು ಆದ್ದರಿಂದಲೇ ಚತುರ್ಮುಖನು ಲೋಕದಲ್ಲಿ ಯಾವುದು ಸೌಂದರ್ಯ, ಲಕ್ಷಣಾದಿಕ್ಯ ಮುಂತಾದ ಗುಣಗಳುಳ್ಳ ಆಶ್ಚರ್ಯವಸ್ತು ಆಗಿದೆಯೋ ಅದು ವಿಶೇಷವಾಗಿ ಶ್ರೀಹರಿಯ ಆವಾಸ ಸ್ಥಾನವಾಗಿದ್ದು, ಅವನ ರೂಪದಂತೆ ಇರುವಂತಹದ್ದೆಂದು ಸ್ತುತಿಸಿರುವರು[4]

---

೪ 1 ಲಕ್ಷ್ಮೀಃ ಶೋಭಾ ಸರ್ವಾತಿಶಯಾ ನಿತ್ಯಮಸ್ಯಾಸ್ತೀತಿ ಲಕ್ಷ್ಮೀವಾನ್। ಅತಿಶಯೋ ನಿತ್ಯ-ಯೋಗೇ ಚಾರ್ಥವಿಶೇಷೇ ವಿವಕ್ಷಿತೇ ಮತುಪ್ ।

ಭಗವತಃ ಶೋಭಾಮಧಿಕೃತ್ಯ ೧೮೭ ತಮಸ್ಯ ಶ್ರೀನಿವಾಸ ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಮ್ ।

೫ 2 ಲಕ್ಷ್ಮೀಃ ಅನ್ಯೇಷು ವಿದ್ಯಮಾನಃ ಲಕ್ಷಣೋನ್ನಾಹಃ, ಸಂಪತ್ ಸೌಂದರ್ಯಂ ವಾ ನಿಯಮ್ಯತಯಾ ಅಸ್ಯಾಸ್ತೀತಿ ಲಕ್ಷ್ಮೀವಾನ್ ।

3 ಏವಂ ಸ ಸರ್ವತಶ್ಚಾನ್ಯಃ ಸ್ವತಂತ್ರಶ್ಚೈವ ಸರ್ವಗಃ । ವ್ಯವಸ್ಥಯೈವ ಸರ್ವೇಷಾಂ ಸರ್ವದಾ ಸರ್ವದಃ ಪ್ರಭುಃ । -ಗೀ ತಾ. 7-12

4 ಯತ್ಕಿಂ ಚ ಲೋಕೇ ಭಗವನ್ ಮಹಸ್ವದೋಜಃಸಹಸ್ವದ್ ಬಲವತ್ ಕ್ಷಮಾವತ್ । ಹ್ರೀಶ್ರೀವಿಭೂತ್ಯಾತ್ಮವದದ್ಭುತಾರ್ಣಂ ತತ್ತತ್ ಪರಂ ರೂಪವದಸ್ವರೂಪಮ್
-ಭಾಗ. 2-6-44

• ಅದ್ಭುತಾರ್ಣಂ ಆಶ್ಚರ್ಯಸಮುದ್ರಂ ಏವಮಾದಿ ಯದ್ಯದಸ್ತಿ ತತ್ತತ್ ಭೂಮ್ನಃ ಪೂರ್ಣಸ್ವಭಾವಸ್ಯ ಪದಂ ಆವಾಸಸ್ಥಾನಮ್ । ಅಸ್ವರೂಪಮಪಿ ಈಶ್ವರಸ್ವರೂಪಭಿನ್ನ-ಮಪಿ ಏತತ್ ಸರ್ವಂ ರೂಪವದ್ ಭವತಿ ಈಶ್ವರದೇಹವದೇವ ಭವತಿ । ಈಶ್ವರಸ್ಯ ಏಷ್ಟವಸ್ಥಾನಾತ್ -ಯಾದವೇಂದ್ರತೀರ್ಥಾಃ

## ಜಿಜ್ಞಾಸೆ

### [ಸ್ತ್ರೀಗೆ ಸ್ವಾತಂತ್ರ್ಯ ಇಲ್ಲ]

ಪ್ರ - ಶ್ರೀ ನಾರಾಯಣನು ಲಕ್ಷ್ಮೀಪತಿಯಾಗಿದ್ದರಿಂದ ಶ್ರೀನಾರಾಯಣನಲ್ಲಿ ಯಾವ ಮಹಿಮೆಗಳು ತಿಳಿಯಲ್ಪಡುತ್ತವೆ?

ಉ – ಲಕ್ಷ್ಮೀಪತಿತ್ವದಿಂದ ಸಿದ್ಧವಾಗುವ ಮಹಿಮೆಗಳನ್ನು ಪೂರ್ಣವಾಗಿ ತಿಳಿಯಲು ನಮಗೆ ಅರ್ಹತೆಯು ಇಲ್ಲ ಆದರೂ ಕೆಲವನ್ನು ಆದರೂ ತಿಳಿಯಲು ಪ್ರಯತ್ನ ಮಾಡಬೇಕು.

ಎಲ್ಲರೂ ಲಕ್ಷ್ಮೀ ಕಟಾಕ್ಷವನ್ನು ತಮಗೆ ಬೇಕು ಎಂದು ಅಪೇಕ್ಷಿಸುತ್ತಾರೆ ಅಂತಹ ಲಕ್ಷ್ಮಿಗೂ ಶ್ರೀನಾರಾಯಣನು ಪತಿಯಾದ್ದರಿಂದ ಅಂತಹ ಲಕ್ಷ್ಮಿಯು ಶ್ರೀನಾರಾಯಣನ ಕಟಾಕ್ಷವು ತನ್ನಲ್ಲಿ ಇರಬೇಕು ಎಂದು ಅಪೇಕ್ಷಿಸುತ್ತಾ ಇದ್ದಾಳೆ. ಆದ್ದರಿಂದ ಶ್ರೀನಾರಾಯಣನಲ್ಲಿ ಸರ್ವೋತ್ತಮತ್ವವು ಸಿದ್ಧವಾಗುತ್ತದೆ

ಜಗತ್ ಸೃಷ್ಟಿ ಕರ್ತನಾದ ಚತುರ್ಮುಖನ ದೆಸೆಯಿಂದ ಕೋಟಿ ಗುಣಾಧಿಕಗಳಾದ ಲಕ್ಷ್ಮೀ ದೇವಿಗೂ ಶ್ರೀನಾರಾಯಣನ ಎಲ್ಲ ಗುಣಗಳ ಜ್ಞಾನವು ಇಲ್ಲ ಲೋಕದಲ್ಲಿ ಸದ್ಗೃಹಸ್ಥನು ಪತಿವ್ರತೆಯಾದ ತನ್ನ ಪತ್ನಿಗೆ ತನ್ನ ಎಲ್ಲ ವಿಷಯಗಳನ್ನೂ ತಿಳಿಸುತ್ತಾನೆ. ಆದರೆ ಪರಮಾತ್ಮನು ಪರಮ ಭಕ್ತಳಾದ ಪತಿವ್ರತೆಯಾದ ಲಕ್ಷ್ಮಿಗೂ ಸಹ ತನ್ನ ಎಲ್ಲ ಗುಣಗಳನ್ನು ತಿಳಿಸುವದಿಲ್ಲ ಕಾರಣ ಏನೆಂದರೆ ಅವಳಿಗೂ ತಿಳಿಯಲು ಅಸಾಧ್ಯಗಳಾದ ಗುಣಗಳು ಶ್ರೀನಾರಾಯಣನಲ್ಲಿ ಇವೆ ಆದ್ದರಿಂದ ಅವಳು ಅವನ ಗುಣಗಳನ್ನು ತಿಳಿಯಲಿಲ್ಲ ಎಂದು ಸಿದ್ಧವಾಯಿತು. ಇದರಿಂದ ಪರಮಾತ್ಮನ ಗುಣಗಳು ಅನಂತ ಎಂದು ಶಾಸ್ತ್ರವು ಹೇಳುತ್ತದೆ, ಇದು ಅಸಂಭಾವಿತ ಎಂಬ ಶಂಕೆಯು ಇಲ್ಲದಂತೆ ಆಯಿತು

ಶ್ರೀ ನಾರಾಯಣನು ಲಕ್ಷ್ಮಿಯ ಅಪೇಕ್ಷೆ ಇಲ್ಲದೆ ತನ್ನ ನಾಭಿಯಿಂದ ಬ್ರಹ್ಮನನ್ನು ಸೃಷ್ಟಿ ಮಾಡಿದನು ಲಕ್ಷ್ಮಿಯು ಪರಮಾತ್ಮನನ್ನು ಬಿಟ್ಟು ಯಾರನ್ನೂ ಸೃಷ್ಟಿ ಮಾಡಲಿಲ್ಲ ಇದರಿಂದ ತಿಳಿಯುವುದೇನೆಂದರೆ ಸ್ತ್ರೀಗೆ ಸ್ವಾತಂತ್ರ್ಯವು ಇಲ್ಲ ಆದ್ದರಿಂದ ಶಕ್ತಿ ಎಂಬ ಸ್ತ್ರೀ ದೇವತೆಗೆ ಸ್ವತಂತ್ರವಾಗಿ ಅಪತ್ಯೋತ್ಪಾದಕತ್ವವನ್ನು ಹೇಳುವ ಶಾಕ್ತ ಮತವು ಅಯುಕ್ತವೆಂದು ಸಿದ್ಧವಾಯಿತು



## ೩೬೩ ಸಮಿತಿಂಜಯಃ

೧ ಯುದ್ಧವನ್ನು ಗೆಲ್ಲುವವನು.[1]

---

೧ 1 ಸಮಿತಿಂ ಯುದ್ಧಂ ಜಯತೀತಿ ಸಮಿತಿಂಜಯಃ ।

೨ ವಿದ್ವತ್ ಸಭೆಯನ್ನು ಗೆಲ್ಲುವವನು[1]

ಯುದ್ಧದಲ್ಲಿ ಅಥವಾ ವಿದ್ವತ್ ಸಭೆಯಲ್ಲಿ ಗೆಲ್ಲುವವರಲ್ಲಿ 'ಜಯ' ನಾಮಕ ವಿಭೂತಿರೂಪದಿಂದ ಇದ್ದು ಅವರಿಗೆ ಜಯವನ್ನು ನೀಡುವವನು ತಾನೆಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು[2]

೩ ಸಾಮ್ಯವನ್ನು ಅತಿಕ್ರಮಿಸಿರುವವನು[3]

ಸ್ವತಂತ್ರನಾದ, ನಿರ್ದುಷ್ಟನಾದ, ಗುಣಪೂರ್ಣನಾದ ಭಗವಂತನಿಗೆ ಸಮಾನವಾದವರು ಯಾರೂ ಇಲ್ಲದ ಪ್ರಯುಕ್ತ ಅವನು ಸಾಮ್ಯವನ್ನು ಮೀರಿ ಇರುವವನು[4]

೪ (ಅನಂತಕಲ್ಯಾಣ ಗುಣಗಳ) ಸಂಗಮವನ್ನು ಹೊಂದಿರುವವನು[5]

ಅನಂತಕಲ್ಯಾಣ ಗುಣಗಳೂ ಭಗವಂತನಲ್ಲಿ ಒಟ್ಟು ಸೇರಿವೆ

೫ ಗುಣಾದಿಗಳ ವಿಷಯದಲ್ಲಿ ಮಿತಿ ಇಲ್ಲದವನು[6]

---

೨ 1 ಸಮಿತಿಂ ಸಭಾಂ ಜಯತೀತಿ ಸಮಿತಿಂಜಯಃ । -ವಿ. ರಾ

2 'ಜಯೋಽಸ್ಮಿ ' -ಗೀ 10-33

ಜಯಿನಾಂ ಜಯರೂಪಸಾರಪ್ರದತ್ವಹೇತುನಾ ಜಯೋಽಸ್ಮಿ ।
-ಗೀ ವಿ.

೩ 3 ಸಮಿತಿಂ ಸಾಮ್ಯಂ ಜಯತಿ ಅಭಿಭವತಿ, ಅತಿಕ್ರಾಮತೀತಿ ಯಾವತ್ ಸಮಿತಿಂಜಯಃ । 'ಸಮಿತಿರ್ಯುಧಿ ಸಂಗಮೇ । ಸಾಮ್ಯೇ ಸಭಾಯಾಮ್' -ಇತಿ ಹೇಮಚಂದ್ರಃ ।

4 ಭಗವತಃ ಸಾಮ್ಯರಾಹಿತ್ಯಮಧಿಕೃತ್ಯ ಅಧಿಕಃ ವಿಚಾರಃ ೩೫೬ ತಮಸ್ಯ 'ಅತುಲಃ' ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೪ 5 ಸಮಿತಿಂ ಅನಂತಕಲ್ಯಾಣಗುಣಾನಾಂ ಸಂಗಮಂ ಜಯತಿ ಪ್ರಾಪ್ನೋತೀತಿ ಸಮಿತಿಂಜಯಃ ಜಯಶಬ್ದಸ್ಯ ಪ್ರಾಪ್ತ್ಯರ್ಥಕತ್ವಂ 'ಜಯೋ ನಾಮ ಪ್ರಾಪ್ತಿರೇವ । 'ಧನಜಿತೇ ಸ್ವರ್ಜಿತೇ' ಇತ್ಯಾದಿವತ್, ಇತಿ ಛಾಂ. ಉ. ಭಾಷ್ಯೇ(2-2-1)ಶ್ರೀಮದಾಚಾರ್ಯೈಃ ಸಮರ್ಥಿತಮ್।

೫ 6 ಮಿತೇರ್ಜಯೇನ ಸಹಿತಃ ಸಮಿತಿಂ ಜಯಃ । -ವಿ. ರಾ.

೭ ಮೃತ್ಯುವನ್ನು ಗೆದ್ದಿರುವವನು.[1]

೭ ನಾರಸ್ವರೂಪಿ ಮಂತ್ರ ಮೃತ್ಯುವನ್ನು ಗೆದ್ದವನು[2]

೮ ಮೃತ್ಯುವನ್ನು ಗೆದ್ದ ಮುಕ್ತಾತ್ಮರಿಂದ ಕೂಡಿಕೊಂಡಿರುವವನು[3]

೯ ಜ್ಞಾನವನ್ನು ಪಡೆದ ಜ್ಞಾನಿಗಳಿಂದ ಕೂಡಿಕೊಂಡಿರುವವನು[4]

ಭಗವಂತನು ಎಲ್ಲರ ಜೊತೆಗೂ ಇರುವನು. ಆದರೆ ಜ್ಞಾನಿಗಳ, ಮುಕ್ತರ ಜೊತೆಗೆ ವಿಶೇಷವಾಗಿ ಇರುವನು. ಅಲ್ಲದೆ, ಅವರು ತಮ್ಮ ಜೊತೆಗೆ ಭಗವಂತನಿರುವನೆಂಬುದನ್ನು ವಿವೇಚಿಸಿಕೊಳ್ಳುತ್ತಿರುವರು.

೧೦ ಯಥಾರ್ಥ ಜ್ಞಾನವನ್ನು ಪೂರ್ಣ ಪ್ರಮಾಣದಲ್ಲಿ ಹೊಂದಿರುವವನು[5]

## ಜಿಜ್ಞಾಸೆ

[ಇರುವ ಪದಾರ್ಥಗಳನ್ನು ತಿಳಿಯುವುದು]

ಪ್ರ - ಪರಮಾತ್ಮನು ಸರ್ವಜ್ಞನು. ಅವನು ಶುಕ್ತಿರಜತ ರಜ್ಜುಭುಜಂಗ ಮೊದಲಾದವುಗಳನ್ನು ತಿಳಿದಿದ್ದಾನೋ ಇಲ್ಲವೋ? ಇಲ್ಲವಾದರೆ ಅವನು ಸರ್ವಜ್ಞನಾಗಲಾರನು. ಅವುಗಳನ್ನು ಅವನು

---

೬ 1 ಮಿತೇಃ ಲಯಸ್ಯ, ಮರಣಸ್ಯೇತಿ ಯಾವತ್, ಜಯಃ ಅತಿಕ್ರಮಣಂ ಮಿತಂಜಯಃ। ತೇನ ಸಹಿತಃ ಸಮಿತಿಂಜಯಃ । 'ಮಾನಂ ಜ್ಞಾನಂ ಲಯಶ್ಚೈವ ಮರ್ಯಾದಾ ಚೈವ ಧ್ಯತೇ, ಉತ್ಪಾದನಂ ಚ ಸಂಖ್ಯಾನಂ ಚ ಬಲಂ ಕ್ವಚಿದುಚ್ಯತೇ'— ಇತಿ ಶಬ್ದನಿರ್ಣಯೇ (ಬೃ ಉ ಭಾ. 3-2-5) ಮಿತಿಃ ಅನೇಕಾರ್ಥತಯಾ ಪಠ್ಯತೇ ।

೭ 2 ನಾರರೂಪತ್ವಾತ್ ಸಃ । ಮಿತಿಂ ಮರಣಂ ಜಯತೀತಿ ಮಿತಿಂಜಯಃ । ಸಶ್ಚಾಸೌ ಮಿತಿಂಜಯಶ್ಚ ಸಮಿತಿಂಜಯಃ ।

೮ 3 ಮಿತಿಂ ಮೃತ್ಯುಂ ಜಯಂತೀತಿ ಮಿತಿಂಜಯಾಃ। ತೈಃ ಸಹ ವರ್ತತ ಇತಿ ಸಮಿತಿಂಜಯಃ

೯ 4 ಮಿತಿಂ ಪ್ರಮಿತಿಂ ಜಯಂತಿ ಪ್ರಾಪ್ನುವಂತೀತಿ ಮಿತಿಂಜಯಾಃ, ತೈಃ ಸಹ ವರ್ತತ ಇತಿ ಸಮಿತಿಂಜಯಃ ।

೧೦ 5 ಸಮೀಚೀನಾ ಇತಿಃ ಸಮಿತಿಃ ಯಥಾರ್ಥಜ್ಞಾನಂ, ತತ್ ಪರಿಪೂರ್ಣತಯಾ ಜಯತಿ ಪ್ರಾಪ್ನೋತೀತಿ ಸಮಿತಿಂಜಯಃ ।

ತಿಳಿಯುತ್ತಾನೆಂದು ಹೇಳಿದರೆ ಇಲ್ಲದ ಶುಕ್ತಿರಜತಾದಿಗಳನ್ನು ತಿಳಿದಿರುವ ಪರಮಾತ್ಮನು ಭ್ರಾಂತನಾಗುತ್ತಾನೆ

ಉ – ಇರುವ ಎಲ್ಲ ಪದಾರ್ಥಗಳನ್ನು ತಿಳಿಯುವದೇ ಪರಮಾತ್ಮನ ಸರ್ವಜ್ಞತ್ವವೆಂದರೆ ಆದುದರಿಂದ ಇಲ್ಲದ ಶುಕ್ತಿರಜತಾದಿಗಳನ್ನು ಪರಮಾತ್ಮನು ತಿಳಿಯದೆ ಇದ್ದರೂ ಅವನು ಸರ್ವಜ್ಞನಾಗುತ್ತಾನೆ ಈ ವಿಷಯವು ಸಮಿತಿಂಜಯ ನಾಮದಿಂದ ಸಿದ್ಧವಾಗುತ್ತದೆ ಯಥಾರ್ಥ ಜ್ಞಾನವನ್ನು ಪರಿಪೂರ್ಣವಾಗಿ ಪರಮಾತ್ಮನು ಹೊಂದಿದ್ದರಿಂದ ಅವನಿಗೆ ಸಮಿತಿಂಜಯ ಎಂದು ಹೆಸರು ಇದೆ



ವಿಕ್ಷರೋ ರೋಹಿತೋ ಮಾರ್ಗೋ ಹೇತುರ್ದಾಮೋದರಃ ಸಹಃ ।

ಮಹೀಧರೋ ಮಹಾಭಾಗೋ ವೇಗವಾನಮಿತಾಶನಃ ॥ ೪೦ ॥

೪೭೪ ವಿಕ್ಷರಃ

೧ (ಭಕ್ತರಿಗೆ ವಿಶೇಷವಾಗಿ) ಸಕಲ ಉಪಯುಕ್ತ ಪದಾರ್ಥಗಳನ್ನು ಸತತವಾಗಿ ನೀಡುತ್ತಿರುವವನು[1]

೨ ಜ್ಞಾನಿಗಳಿಗೆ ಸಂತತ ದಾನವನ್ನು ಮಾಡುತ್ತಿರುವವನು[2]

ಭಗವಂತನು ಸಕಲ ಭೂತಗಳಿಗೂ ಅತ್ಯಧಿಕವಾಗಿ ಸಂತತವಾಗಿ ಗಾಳಿ, ಆಹಾರ, ನೀರು ಮುಂತಾದುವನ್ನೆಲ್ಲ ದಾನಮಾಡುತ್ತಿದ್ದಾನೆ ಇವನನ್ನು ಮೀರಿ ಅಧಿಕ ದಾನಮಾಡುವವರೇ ಇಲ್ಲ— ಆದುದರಿಂದಲೇ ಐತರೇಯೋಪನಿಷತ್ತು—ಇವನೇ ನಿಜವಾದ 'ಅಕ್ಷರ' ಎಂದು ಸಾರಿದೆ ತನ್ನನ್ನು ಮೀರಿ ಯಾರೂ ಸಂತತ ದಾನ ಮಾಡದಷ್ಟು ಅಧಿಕವಾಗಿ ದಾನಮಾಡುತ್ತಿರುವುದರಿಂದ ಭಗವಂತನನ್ನು ಜ್ಞಾನಿಗಳು 'ಅಕ್ಷರ' ಎಂದು ಕರೆಯುವರೆಂದು ಜ್ಞಾನಿಗಳ ಸಂವಾದವನ್ನು ತೋರಿಸಿಕೊಟ್ಟಿದೆ.[3]

---

೧ 1 ಭಕ್ತೇಭ್ಯಃ ವಿಶೇಷೇಣ ಕ್ಷರತಿ ಸಂತತಂ ದದಾತೀತಿ ವಿಕ್ಷರಃ । 'ಕ್ಷರ ವಿನಾಶಸಂತತ-ದಾನಯೋಃ' ।

* ವಿಶೇಷತೋ ದದಾತೀತಿ ವಿಕ್ಷರಃ । –ವಿ ರಾ.

೨ 2 ವಂ ಜ್ಞಾನಂ ಏಷಾಮಸ್ತೀತಿ ವಿನಃ । ತೇಭ್ಯಃ ಕ್ಷರತಿ ಸಂತತಂ ದದಾತೀತಿ ವಿಕ್ಷರಃ ।

3 ಏಷ ವಾ ಅಕ್ಷರಮೇಷ ಹ್ಯೇಭ್ಯ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ ನಚೈನಮತಿ ಕ್ಷರಂತಿ ತಸ್ಮಾದಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತ ಏತಮೇವ ತಥಾ ಸಂತಮ್
–ಐ. ಉ. 2-1-2-11

ತಂದೆ, ತಾಯಿ, ತತ್ತ್ವಾಭಿಮಾನಿದೇವತೆಗಳೇ ಮುಂತಾದವರೂ ದಾನ ಮಾಡುತ್ತಿರುವರಾದರೂ, ಭಗವಂತನ ಪ್ರೇರಣೆಗನುಸಾರವಾಗಿ ನೀಡುತ್ತಿರುವ ಅವರ ದಾನಕ್ಕಿಂತಲೂ ಸ್ವತಂತ್ರವಾಗಿ ನೀಡುತ್ತಿರುವ ಭಗವಂತನ ದಾನವು ವಿಶಿಷ್ಟವೆನಿಸಿದೆ

ಹೀಗೆ ಭಗವಂತನು ಎಲ್ಲರಿಗೂ ಸತತ ದಾನ ಮಾಡುತ್ತಿದ್ದರೂ, ತನ್ನ ಭಕ್ತರಿಗೆ, ಜ್ಞಾನಿಗಳಿಗೆ ವಿಶೇಷವಾಗಿ—ಸಾಕ್ಷಾತ್ತಾಗಿ ಸಂತತದಾನ ಮಾಡುವನು ಅಲ್ಲದೆ, ಭಗವಂತನ ದಾನವನ್ನು ಅವರು ವಿವೇಚಿಸಿಕೊಳ್ಳುವರು,

೩ ಯಾವುದೇ ರೀತಿಯ ನಾಶಕ್ಕೊಳಗಾಗದವನು.[1]

ತನ್ನ ಸ್ವರೂಪವನ್ನೇ ಕಳಕೊಳ್ಳುವುದು, ತನ್ನ ದೇಹವನ್ನು ಕಳಕೊಳ್ಳುವುದು, ದುಃಖವನ್ನು ಹೊಂದುವುದು ಹಾಗೂ ಅಪೂರ್ಣತೆ ಎಂಬ ನಾಲ್ಕು ರೀತಿಯ ನಾಶಗಳಲ್ಲಿ ಯಾವುದೇ ನಾಶಕ್ಕೂ ಒಳಗಾಗದವನೆಂದರೆ ಭಗವಂತನೊಬ್ಬನೇ.[2]

೪ (ಜೀವಾತ್ಮರಿಗೆ) ಇಂದ್ರಿಯಗಳನ್ನು ನೀಡಿರುವವನು[3]

೫ (ಜೀವಾತ್ಮರ) ಇಂದ್ರಿಯಗಳಲ್ಲಿ ಕ್ರೀಡಿಸುತ್ತಿರುವವನು.[4]

---

ಅಧಿಕಂ ಕ್ಷರತೀತ್ಯಕ್ಷರಮ್ । ಕ್ಷರಣಂ ನಾಮ ಸಂತತದಾನಮ್ । 'ಕ್ಷರ ವಿನಾಶಸಂತತ-ದಾನಯೋಃ' ಇತಿ ಧಾತೋಃ । —ಐ ಉ. ಭಾ.

೩ 1 ನ ಕ್ಷರತೀತಿ ವಿಕ್ಷರಃ । ವಿವರ್ಣಸ್ಯ ಭಿನ್ನಾರ್ಥಕತ್ವಂ—'ವಿಮುಕ್ತ ಇತ್ಯಮುಕ್ತ ಇತ್ಯರ್ಥ ವಿಪ್ರಿಯಂ ಇತಿವತ್ । ಅವಿಹಾಯೇತಿ ಚ'— ಇತಿ ಅಥರ್ವಣೋಪನಿಷದ್ಭಾಷ್ಯೇ (4-1-10) ಸಮರ್ಥಿತಮ್ ।

* ವಿಕ್ಷರಃ ಕ್ಷರಣರಹಿತಃ । —ನಾ. ರಾ.

2 ಏತದಧಿಕೃತ್ಯಾಧಿಕಃ ವಿಚಾರಃ ೧೩ ತಮಸ್ಯ 'ಅಕ್ಷರ' ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

೪ 3 ವಿ ಕ್ಷಯಂತೀತಿ ವಿಕಾಣಿ ಅಕ್ಷಾಣಿ ಇಂದ್ರಿಯಾಣಿ। ಕ್ಷಿಕ್ಷಯೇ ಇತಿ ಧಾತೋಃ । ತೃತೀ-ಯೋಽತಿಶಯೇ ಇತಿ ನ್ಯಾಯಾತ್-ತತ್ತ್ವಮಂಜರ್ಯಾಧಾರೇಣ। ತಾದೃಶಾನಿ ವಿಕ್ಷಾಣಿ ಇಂದ್ರಿಯಾಣಿ ರಾತಿ ದದಾತೀತಿ ವಿಕ್ಷರಃ 'ರಾ ದಾನೇ' ।

೫ 4 ವಿಕ್ಷೇಷು ಜೀವಾತ್ಮನಾಂ ಇಂದ್ರಿಯೇಷು ರಮತ ಇತಿ ವಿಕ್ಷರಃ ।

ಜೀವಾತ್ಮನ ಸ್ವರೂಪೇಂದ್ರಿಯವು ಮುಖ್ಯವಾಗಿ ನಿತ್ಯವಾಗಿರುವುದರಿಂದಲೂ, ಬಾಹ್ಯೇಂದ್ರಿಯಗಳು ಅಮುಖ್ಯವಾಗಿ ನಿತ್ಯಗಳಾಗಿರುವುದರಿಂದಲೂ 'ಅಕ್ಷ' ಎನಿಸಿವೆ[1] ಜೀವಾತ್ಮನು ತನ್ನ ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಹೊಂದುವಾಗ ಅವನ ಇಂದ್ರಿಯಗಳನ್ನು ಹಿಡಿದು ಕೊಂಡು ಅವನ ಶರೀರವನ್ನು ಪ್ರವೇಶಿಸಿ ಅವನಿಗೆ ಇಂದ್ರಿಯಗಳ ಸಂಬಂಧವನ್ನು ಕಲ್ಪಿಸಿಕೊಡುವವನು ಭಗವಂತನೇ.[2] ಹಾಗೆಯೇ ಭಗವಂತನು ಜೀವಾತ್ಮನ ಶ್ರೋತ್ರಾದಿ ಇಂದ್ರಿಯಗಳಲ್ಲಿದ್ದು, ಆ ಇಂದ್ರಿಯಗಳ ಮೂಲಕ ವಿಷಯ ಪದಾರ್ಥಗಳ ಸಾರಭಾಗವನ್ನು ಸ್ವೀಕರಿಸುತ್ತ ಕ್ರೀಡಿಸುವನು.[3] ಭಗವಂತನು 'ಅಕ್ಷರ' ಎನಿಸಲು ಇದೂ ಒಂದು ಪ್ರವೃತ್ತಿ ನಿಮಿತ್ತ ಎನಿಸಿದೆ—ಎಂದು 'ತಾತ್ಪರ್ಯ' ತಿಳಿಸಿದೆ[4]

೬ ವಿವಿಧ ಹಾಗೂ ವಿಶಿಷ್ಟ ಜೀವಾತ್ಮರಿಗೆ ಕಾರಣನಾಗಿರುವವನು[5]

---

1 ಅಕ್ಷಯಂ ಪುರುಷಸ್ಯಾಕ್ಷಂ ಸ್ವರೂಪೇ ಮುಖ್ಯಮೇವ ತತ್ । ಉಪಚಾರಸ್ತದನ್ಯತ್ರ ಸೃಷ್ಟ್ಯಾವುಪಚಯೋ ಯತಃ —ಬ್ರಹ್ಮತರ್ಕ (ವಿ. ತ. ವಿ)

2 ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥
—ಗೀ. 15-8

ಯತ್ ಯದಾ ಶರೀರಮಾಪ್ನೋತಿ ಉತ್ಕ್ರಾಮತಿ ಚ ಜೀವಃ ತದೇಶ್ವರ ಏತಾನಿ ಗೃಹೀತ್ವಾ ಸಂಯಾತಿ । —ಗೀ. ಭಾ.

3 ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ । ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ । —ಗೀ. 15-8

ಭುಂಕ್ತೇ ಹರಿಃ ಶುಭಾನ್ ಭೋಗಾನಿಂದ್ರಿಯೇಷು ವ್ಯವಸ್ಥಿತಃ ।
ಪೂರ್ಣಾನಂದೋಽಪಿ ಭಗವಾನ್ ಕ್ರೀಡಯಾ ಭುಂಕ್ತ ಏವ ತು ॥
—ನಾರಾಯಣ ಶ್ರುತಿ (ಗೀ. ತಾ.)

4 ಅಕ್ಷೇಷು ರಮಣಾದಪಿ । ಅಕ್ಷರಂ ಭಗವಾನ್ ವಿಷ್ಣುಃ
—ತಾತ್ಪರ್ಯ (ಛಾಂ. ಉ. ಭಾ. 1-1-1)

೬ 5 ವಿ ವಿವಿಧಾಃ ವಿಶಿಷ್ಟಾಶ್ಚ ಕ್ಷರಾಃ ಕ್ಷರಪುರುಷಾಃ ಯಸ್ಮಾತ್ ಸಃ ವಿಕ್ಷರಃ ।

ಚತುರ್ಮುಖ ರುದ್ರ ಮುಂತಾದ ಸಕಲ ಜೀವಾತ್ಮರೂ ನಾಶಶಾಲಿ ಶರೀರವನ್ನು ಹೊಂದಿರುವುದರಿಂದ 'ಕ್ಷರ' ಎನಿಸಿರುವರು.[1] ಬೇರೆ ಬೇರೆ ರೀತಿಯಾಗಿರುವ ಈ ಜೀವಾತ್ಮರು ಭಗವಂತನಿಂದಲೇ ಉತ್ಪನ್ನವಾಗುವವರು. ಚೆನ್ನಾಗಿ ಪ್ರಕಾಶಿಸುವ ಅಗ್ನಿಯಿಂದ ಸಾವಿರಾರು ಕಿಡಿಗಳು ಉಂಟಾಗುವಂತೆ ಅಕ್ಷರನಾಮಕ ಭಗವಂತನಿಂದ ದೇವ, ದಾನವ ಮಾನವಾದಿ ಬೇರೆ ಬೇರೆ ಪ್ರಕಾರಗಳನ್ನೊಳಗೊಂಡ ಭಾವಗಳು ಉಂಟಾಗುವವೆಂದು ಆಥರ್ವಣೋಪನಿಷತ್ತಿನಲ್ಲಿದೆ.[2] ಪದಾರ್ಥಗಳ ವೈಶಿಷ್ಟ್ಯಕ್ಕೆ ಕಾರಣನಾಗಿರುವ[3] ಭಗವಂತನೇ ವಿಶಿಷ್ಟ ಜೀವಾತ್ಮರಿಗೂ, ಅಂದರೆ ಜೀವಾತ್ಮರಲ್ಲಿರುವ ಬೇರೆ ಬೇರೆ ರೀತಿಯ ವೈಶಿಷ್ಟ್ಯಕ್ಕೂ ಕಾರಣನಾಗಿರುವನು.

೭ ವಿಶಿಷ್ಟನಾಗಿರುವವನು ಮತ್ತು ಸಂತತ ದಾನ ಮಾಡುವವನು[4]

೮ ಗರುಡಪಕ್ಷಿಗೆ ಅಭೀಷ್ಟವನ್ನು ಅನುಗ್ರಹಿಸಿರುವವನು[5]

---

1 ಕ್ಷರಃ ಸರ್ವಾಣಿ ಭೂತಾನಿ -ಗೀ 15-16

ಬ್ರಹ್ಮರುದ್ರಾದಯಃ ಸರ್ವೇ ಶರೀರಕ್ಷರಣಾತ್ ಕ್ಷರಾಃ ।

-ನಾರಾಯಣಶ್ರುತಿ (ಗೀ. ತಾ. 15-16)

2 ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ।
ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿಯಂತಿ ।

-ಅ. ಉ. 1-3 1

ವಿವಿಧಾಃ ದೇವದಾನವಮಾನವಾದಿಭೇದೇನ ನಾನಾವಿಧಾಃ ಭಾವಾಃ ಪದಾರ್ಥಾಃ ।

-ಉ. ಖಂ.

3 ಯದ್ಯದ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥

-ಗೀ. 10-41

೭ 4 ವಿಶಿಷ್ಟತ್ವಾತ್ ವಿಃ। ಕ್ಷರತಿ ಜೀವೇಭ್ಯಃ ಸಂತತಂ ದದಾತೀತಿ ಕ್ಷರಃ। 'ಕ್ಷರಂ ಸಂತತದಾನೇ' ವಿಶ್ಚಾಸೌ ಕ್ಷರಶ್ಚ ವಿಕ್ಷರಃ ।

೮ 5 'ವಿಃ ಪಕ್ಷಿಪರಮಾತ್ಮನೋಃ' ಇತಿ ವಿಃ ಪಕ್ಷೀ ಗರುಡ ಇತಿ ಯಾವತ್, ತಸ್ಮೈ ಕ್ಷರತಿ ಅಭೀಷ್ಟಂ ದದಾತೀತಿ ವಿಕ್ಷರಃ ।

೯ ನಾಪರಹಿತರಾದ ಮುಕ್ತಾತ್ಮರಲ್ಲಿ ಕ್ರೀಡಿಸುತ್ತಿರುವವನು ಅಥವಾ ಅವರು ಕ್ರೀಡಿಸು ವಂತೆ ಮಾಡುವವನು[1]

## ಜಿಜ್ಞಾಸೆ

### [ಶಾಸ್ತ್ರದ ಆಧಾರ]

ಪ್ರ - ಪರಮಾತ್ಮನು ಸಕಲ ಉಪಯುಕ್ತ ಪದಾರ್ಥಗಳನ್ನು ಸೃಷ್ಟಿ ಮಾಡತಕ್ಕವನು ಎಂದು ಯಾವ ಯುಕ್ತಿಯಿಂದ ಸಾಧಿಸಬಹುದು? ಪರಮಾತ್ಮನು ಬಂಡೆ ಕಲ್ಲಿನ ಮೇಲೆ ಮಳೆ ಸುರಿಸುತ್ತಾನೆ. ಇದರಿಂದ ಏನು ಉಪಯೋಗ? ದುಃಖವನ್ನು ಸೃಷ್ಟಿ ಮಾಡಿದ್ದಾನೆ, ಇದರಿಂದ ಏನು ಉಪ ಯೋಗ? ಅಜಾಗಲಸ್ತನವು ನಿರರ್ಥಕವೆಂದು ಪ್ರಸಿದ್ಧ. ಇಂತಹ ಅನಂತಗಳಾದ ನಿರರ್ಥಕ ಪದಾರ್ಥಗಳನ್ನು ಪರಮಾತ್ಮನು ಸೃಷ್ಟಿ ಮಾಡುತ್ತಿರುವಾಗ ಅವನಿಗೆ ವಿಕ್ಷರ ಎಂಬ ಹೆಸರು ಹೇಗೆ ಬಂತು?

ಉ;- ಪರಮಾತ್ಮನು ಪರಾರ್ಥಕ್ಕಾಗಿಯೇ ಇಡೀ ಜಗತ್ತನ್ನು ಸೃಷ್ಟಿ ಮಾಡಿದ್ದಾನೆಂದು ಶಾಸ್ತ್ರ ಪ್ರಮಾಣದಿಂದ ಸಿದ್ಧವಾಗಿದೆ. ಅಲ್ಪಜ್ಞರಾದ ನಮಗೆ ಒಂದು ವಸ್ತುವಿನ ಜ್ಞಾನವೂ ಪೂರ್ಣವಾಗಿ ಇಲ್ಲ 'ಏಕಂ ಚ ತತ್ವತೋ ಜ್ಞಾತುಂ ವಿನಾ ಸರ್ವಜ್ಞತಾಂ ನರಃ' ಒಂದು ವಸ್ತುವನ್ನು ಪೂರ್ಣ ವಾಗಿ ತಿಳಿಯಬೇಕಾದರೂ ಸರ್ವಜ್ಞತ್ವವು ಬೇಕು. ಎಂದು ಶಾಸ್ತ್ರವು ಹೇಳುತ್ತದೆ. ಇದು ನಮ್ಮ ಅನುಭವ ಸಿದ್ಧವಾಗಿದೆ ಆದುದರಿಂದ ಶಾಸ್ತ್ರವು ಪರಮಾತ್ಮನು ಸೃಷ್ಟಿಮಾಡಿದ ವಸ್ತುಗಳೆಲ್ಲವೂ ಉಪಯುಕ್ತಗಳು ಎಂದು ಹೇಳುವದರಿಂದ ಶಾಸ್ತ್ರದ ಆಧಾರದಿಂದಲೇ ಅದನ್ನು ಒಪ್ಪಬೇಕು.



## ೩೬೫ ರೋಹಿತಃ

೧ ಕೆಂಪು ಬಣ್ಣವುಳ್ಳವನು[2]

ಭಗವಂತನ ನಾಲ್ಕು ಬಣ್ಣಗಳಲ್ಲಿ ಕೆಂಪು ಬಣ್ಣವೂ ಒಂದಾಗಿದೆ.[3] ಪ್ರಕೃತಿಯ ರಜೋಗುಣಕ್ಕೆ

---

೯ 1 ವಿಕ್ಷಾಃ ವಿಗತಕ್ಷಯಾಃ ಮುಕ್ತಾಃ ತೇಷು ರಮತೇ ತಾನ್ ರಮಯತೀತಿ ವಾ ವಿಕ್ಷರಃ ।

೧ 2 ಲೋಹಿತವರ್ಣಃ ಲೋಹಿತಃ । -ವಿ. ರಾ.

* ರೋಹಿತೋ ಲೋಹಿತೋ ರಕ್ತ .. -ಅ. ಕೋ.

3 ತಸ್ಯ ಹ್ಯೇತಸ್ಯ ಪರಮಸ್ಯ ನಾರಾಯಣಸ್ಯ ಚತ್ವಾರಿ ರೂಪಾಣಿ ಶುಕ್ಲಂ ರಕ್ತಂ ರೌಗ್ಮಂ ಕೃಷ್ಣಮಿತಿ । -ಬ್ರ. ಸೂ. ಭಾ. (1-2-23)

ಆಶ್ರಯವಾದ ಲೋಕದಲ್ಲಿ ರಜೋಗುಣವನ್ನು ಪ್ರವರ್ತಿಸುವ ಪರಶುರಾಮ ಮುಂತಾದ ಕೆಂಪು ಬಣ್ಣದ ಭಗವದ್ರೂಪಗಳು ಸೃಷ್ಟಿಗಾಗಿ ಭಗವಂತನಿಂದ ಪರಿಕಲ್ಪಡುವವು[1] ಸೃಷ್ಟಿಯ ಸಂಕೇತವಾಗಿಯೇ ಆ ರೂಪಗಳಿಗೆ ಕೆಂಪು ಬಣ್ಣ ಭಗವಂತನ ಆ ಕೆಂಪು ಬಣ್ಣ ಸ್ವರೂಪಾತ್ಮಕವೇ ಹೊರತು ಪ್ರಾಕೃತವಾದುದಲ್ಲ[2] ಪರಶುರಾಮನ ಧ್ಯಾನದಲ್ಲಿ ಸುಡುವ ಕೆಂಡದಂತೆ ಕೆಂಪು ಬಣ್ಣ ಉಳ್ಳವನೆಂದು ಮೊದಲೇ ಉಲ್ಲೇಖಿಸಲಾಗುವುದು[3]

೨ ಪ್ರಾದುರ್ಭವಿಸುವವನು[4]

೩ ಅನೇಕ ರೂಪಗಳಿಂದ ಪ್ರಾದುರ್ಭವಿಸುವವನು ಮತ್ತು ವ್ಯಾಪ್ತನಾಗಿರುವವನು[5]

ಸಜ್ಜನರ ರಕ್ಷಣೆಗಾಗಿ, ದುಷ್ಟರ ದಮನಕ್ಕಾಗಿ, ಧರ್ಮದ ಸ್ಥಾಪನೆಗಾಗಿ ತಾನು ಯುಗ ಯುಗದಲ್ಲಿ ಪ್ರಾದುರ್ಭವಿಸುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು[6] ರಕ್ಷಣೆ, ಮುಂತಾದವು

---

1 'ಸ ತ್ವಂ ಸ್ವಮಾಯಯಾ ಬಿಭರ್ಷಿ . ವರ್ಣಮಾತ್ಮನಃ । ಸರ್ಗಾಯ ರಕ್ತಂ ರಜಸೋಪಬೃಂಹಿತಂ ' —ಭಾಗ. 10-4-20

'ರಜಸೋಪಬೃಂಹಿತಂ ರಜೋಗುಣಾಶ್ರಯಂ ಲೋಕೇ ರಜಃಪ್ರವರ್ತಕಂ ರಕ್ತರೂಪಂ ಜಾಮದಗ್ನ್ಯಾದಿ ಸೃಷ್ಟಯೇ' -ಬ. ಗೋ. (ಭಾಗ ತಾ. ಸಿ.)

'ವರ್ಧಯಂಸ್ತು ರಜೋ ಯೇನ ಜಗದುತ್ಪಾದಯೇದ್ಧರಿಃ । ತದ್ ರಕ್ತಂ ಜಾಮದಗ್ನ್ಯಾದಿರೂಪಂ ' -ಬ್ರಹ್ಮತರ್ಕ (ಭಾಗ. ತಾ ಸಿ.)

2 ಆತ್ಮನ ಇತ್ಯನೇನ ನೈತೇ 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಇತಿ ಶ್ರುತಿಗದಿತಾಃ ಪ್ರಾಕೃತವರ್ಣಾಃ ಕಿಂತ್ವಪ್ರಾಕೃತಾ ಭಗವತಃ ಸ್ವರೂಪಭೂತಾ ಏವೇತ್ಯಾಹ । ಅತ ಏವ ರೂಪರೂಪಿಣೋರಭೇದಬೋಧನಾಯ 'ರಕ್ತಂ ವರ್ಣಮ್' ಇತ್ಯೇವಾಹ ।
-ಬ ಗೋ (ಭಾಗ. ಟಿ.)

3 ಅಂಗಾರವರ್ಣಂ ಧ್ಯಾಯೇತ್ -ತಂ. ಸಾ ಸಂ. 4 34

೨ 4 ರೋಹತಿ ಪ್ರಾದುರ್ಭವತೀತಿ ರೋಹಿತಃ । 'ರುಹ ಪ್ರಾದುರ್ಭಾವೇ' ।

೩ 5 ರೋಹತೀತಿ ರೋಹಿಃ । ತತತ್ವಾತ್ ತಃ । ರೋಹಿಃ ಚಾಸೌ ತಶ್ಚ ರೋಹಿತಃ ।

6 ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥
-ಗೀ. 4-8

ಗಳಿಗಾಗಿ ಪ್ರಾದುರ್ಭಾವವನ್ನು ತಾಳಲೇಬೇಕೆಂಬ ನಿಯಮವಿಲ್ಲ, ಮೂಲರೂಪದಿಂದಲೇ ಅವೆಲ್ಲವನ್ನೂ ನಿರ್ವಹಿಸಲು ಬರುವುದು ಆದರೂ ಕ್ರೀಡೆಯಿಂದ, ತನ್ನ ಸ್ವಭಾವಕ್ಕನುಗುಣವಾಗಿ ತನಗಿಷ್ಟ ಬಂದಂತೆ ನಡೆದುಕೊಳ್ಳುವನು—ಎಂದು ಶ್ರೀಮದಾಚಾರ್ಯರು ಸ್ಪಷ್ಟೀಕರಿಸಿರುವರು[1]

೪ ಅಶ್ವತ್ಥ ಎಂದೆನಿಸಿ ಅಶ್ವತ್ಥ ವೃಕ್ಷದಲ್ಲಿ ವ್ಯಾಪಿಸಿರುವವನು.[2]

ತಾನು ಅಶ್ವತ್ಥ ಎಂದೆನಿಸಿ, ಅಶ್ವತ್ಥ ವೃಕ್ಷದಲ್ಲಿದ್ದು ಅದು ಇತರ ವೃಕ್ಷಗಳಲ್ಲೆಲ್ಲ ಶ್ರೇಷ್ಠ ಎನಿಸುವಂತೆ ಅನುಗ್ರಹಿಸುತ್ತಿರುವುದಾಗಿ ಗೀತಾಚಾರ್ಯನು ಸಂದೇಶಿಸಿರುವನು[3]

೫ ಮೋಕ್ಷ ಪದವಿಯನ್ನು ಏರುವ ಮುಕ್ತಾತ್ಮರಲ್ಲಿ (ವಿಶೇಷವಾಗಿ) ವ್ಯಾಪಿಸಿರುವವನು.[4]

೬ ಕ್ರೀಡಾರೂಪಿಯಾದ ಭಗವಂತನನ್ನು ಕುರಿತು ವಿಚಾರ ನಡೆಸುತ್ತಿರುವ ಜ್ಞಾನಿಗಳಲ್ಲಿ ವ್ಯಾಪಿಸಿರುವವನು[5]

---

1 ನ ಜನ್ಮನ್ಯೈವ ಪರಿತ್ರಾಣಾದಿ ಕಾರ್ಯಮಿತಿ ನಿಯಮಃ । ತಥಾಽಪಿ ಲೀಲಯಾ ಸ್ವಭಾವೇನ ಚ ಯಥೇಷ್ಟಚಾರೀ । --ಗೀ. ಭಾ.

೪ 2 'ರೋಹೀ ರೋಹಿತಕೇಽಶ್ವತ್ಥವಟಪಾದಪಯೋಃ ಪುಮಾನ್' ಇತಿ ರೋಹೀ ಅಶ್ವತ್ಥಃ । ತತ್ರ ಅಶ್ವತ್ಥನಾಮಾ ಸನ್ ತತಃ ಇತಿ ರೋಹಿತತಃ, ರೋಹಿತತ ಏವ ರೋಹಿತಃ ।

3 ಅಶ್ವತ್ಥಃ ಸರ್ವವೃಕ್ಷಾಣಾಂ -ಗೀ. 10-26

'.. ತಥಾಽಶ್ವತ್ಥಸ್ಥಿತೋ ಹರಿಃ । ಉತ್ಕರ್ಷಹೇತುರ್ವೃಕ್ಷೇಭ್ಯೋ ಯ ಅಶ್ವತ್ಥನಾಮಕಃ'
-ವಿಭೂತಿತತ್ತ್ವ (ಗೀ. ತಾ)

* ಅಶ್ವಾಕಾರಸ್ಥಿತೋಽಶ್ವತ್ಥಃ . -ವಿಭೂತಿತತ್ತ್ವ (ಗೀ. ತಾ.)

೫ 4 ರೋಹಃ ಮೋಕ್ಷಂ ಪ್ರತಿ ಆರೋಹಃ ಯೇಷಾಮಸ್ತೀತಿ ರೋಹಿಣಃ ಮುಕ್ತಾತ್ಮಾನಃ । ತೇಷು ತತತ್ವಾತ್ ರೋಹಿತಃ ।

೬ 5 ರಂ ರಮಣರೂಪಂ ಭಗವಂತಂ ಊಹಂತೇ ವಿತರ್ಕಯಂತೀತಿ ರೋಹಿಣಃ ಜ್ಞಾನಿನಃ । ತೇಷು ತತಃ ರೋಹಿತಃ ।

೭ ಅಗ್ನಿ ಪ್ರತೀಕದಲ್ಲಿ ಅಥವಾ ವಾಯುಪ್ರತೀಕದಲ್ಲಿ ಇದ್ದವನಾಗಿ ಶಾಸ್ತ್ರದಲ್ಲಿ ಚರ್ಚಿಸಲ್ಪಡುವವನು[1]

೮ ಇಂದ್ರಿಯ ಸ್ಥಿತನಾಗಿ ಶಾಸ್ತ್ರದಲ್ಲಿ ವಿಚಾರಿಸಲ್ಪಟ್ಟವನು.[2]

೯ ಸರ್ವೇಷ್ಟವನ್ನು ನೀಡುವವನು ಮತ್ತು ಸರ್ವ ಶಾಸ್ತ್ರಗಳಿಂದ ವಿಚಾರಿಸಲ್ಪಡುವವನು.[3]

೧೦ ಕ್ರೀಡಾರೂಪಿ, ಉಚ್ಚನಾಗಿರುವವನು ಮತ್ತು ಹಿತ ರೂಪಿಯಾಗಿರುವವನು.[4]

೧೧ ವಾಯು ಹಾಗೂ ರುದ್ರ ಇವರಿಗೆ ಹಿತ ಆಗಿರುವವನು[5]

## ಜಿಜ್ಞಾಸ

[ರೋಹಿತರೂಪವೂ ಧ್ಯೇಯ]

ಪ್ರ - 'ಧ್ಯಾಯೇದ್ಧರಿನ್ಮಣಿನಿಭಂ' ಎಂದು ಇಂದ್ರ ನೀಲಮಣಿಯಂತೆ ಇರುವ ಪರಮಾತ್ಮನನ್ನು ಧ್ಯಾನ ಮಾಡಬೇಕು ಎಂದು ಶಾಸ್ತ್ರವಚನವು ಇದೆ ಪರಮಾತ್ಮನ ರೋಹಿತ ವರ್ಣದ ಧ್ಯಾನವನ್ನು ಮಾಡಬೇಕು ಎಂದು ಶಾಸ್ತ್ರದಲ್ಲಿ ಎಲ್ಲಿ ಹೇಳಿದೆ? ಆ ವರ್ಣದ ಧ್ಯಾನವನ್ನು ಮಾಡುವದು ಬೇಡ

---

೭ 1 'ರಶ್ಚ ರಾಮೇऽನಿಲೇ ವಹ್ನೌ' — ಇತ್ಯೇಕಾಕ್ಷರಕೋಶಾನುರೋಧೇನ ರಃ ವಹ್ನಿರ್ವಾಯುರ್ವಾ । ತತ್ರ ಊಹಿತಃ ಚರ್ಚಿತಃ ಅಗ್ನಿಸ್ಥಿತತ್ವೇನ ವಾಯುಸ್ಥಿತತ್ವೇನ ವಾ ಶಾಸ್ತ್ರೇ ವಿಚಾರಿತಃ ಇತಿ ಯಾವತ್ ರೋಹಿತಃ । 'ಊಹ ವಿತರ್ಕೇ' ।

೮ 2 ವಿಷಯಾನುಭವಂ ರಾಂತಿ ದದತೀತಿ ರಾಣಿ ಇಂದ್ರಿಯಾಣಿ । ತೇಷು ಸ್ಥಿತತ್ವೇನ ಶಾಸ್ತ್ರೇ ಊಹಿತಃ ವಿಚಾರಿತ ಇತಿ ರೋಹಿತಃ ।

೯ 3 ಸರ್ವೇಷ್ಟಂ ರಾತೀತಿ ಸರ್ವೇಷ್ಟಪ್ರದತ್ವಾತ್ ರಃ । ಊಹಿತಃ ಸರ್ವಶಾಸ್ತ್ರೈಃ ವಿಚಾರಿತಃ । ರಶ್ಚಾಸೌ ಊಹಿತಶ್ಚ ರೋಹಿತಃ ।

೧೦ 4 ರಮಣರೂಪತ್ವಾತ್ ರಃ । ಉಚ್ಚತ್ವಾತ್ ಉಃ । ಹಿತತ್ವಾತ್ ಹಿತಃ ।

೧೧ 5 ರಸ್ಯ ವಾಯೋಃ ಓಶ್ಚ ಶಂಭೋಶ್ಚ ಹಿತಃ ರೋಹಿತಃ । 'ಉಕಾರಃ ಶಂಕರಃ ಪ್ರೋಕ್ತಃ'-ಏಕಾಕ್ಷರಕೋಶಃ ।

ಎಂದು ಹೇಳಬಾರದು 'ಓಂ ಅಧ್ಯಾಯನಾಯ ಪ್ರಯೋಜನಾಭಾವಾತ್ ಓಂ' ಎಂಬ ಸೂತ್ರದಲ್ಲಿ ಪರಮಾತ್ಮನ ಗುಣರೂಪ ಕ್ರಿಯೆಗಳನ್ನು ಶಾಸ್ತ್ರದಲ್ಲಿ ಹೇಳುವದು ಅದರ ಧ್ಯಾನಕ್ಕಾಗಿಯೇ ಬೇರೆ ಪ್ರಯೋಜನವು ಇಲ್ಲ ಎಂದು ಹೇಳಲಾಗಿದೆ

ಉ – 'ಉದ್ಯದ್ಭಾಸ್ವತ್ಸಮಾಭಾಸಃ' ಎಂಬ ಧ್ಯಾನ ಶ್ಲೋಕದಲ್ಲಿ ಉದಯಿಸಿ ಬರುವ ಸೂರ್ಯನಂತೆ ಇರುವ ಪರಮಾತ್ಮನನ್ನು ಧ್ಯಾನಿಸಬೇಕು ಎಂದು ಹೇಳಿರುತ್ತದೆ ಉದಯಿಸುತ್ತಿರುವ ಸೂರ್ಯನ ಬಣ್ಣ ಕೆಂಪು ಆದ್ದರಿಂದ ರೋಹಿತ ರೂಪವೂ ಧ್ಯೇಯವೇ ಆದ್ದರಿಂದ ಅದನ್ನು ಶಾಸ್ತ್ರದಲ್ಲಿ ಹೇಳಿದ್ದು ವ್ಯರ್ಥವಲ್ಲ



## ೩೭೬ ಮಾರ್ಗಃ

೧ (ನಿತ್ಯವೂ) ತನ್ನ ಪ್ರಾಪ್ತಿಗೆ ಕಾರಣನಾಗಿರುವವನು [1]

ಭಗವಂತನು ಯಾರಿಗೆ ಒಲಿಯುವನೋ ಅವನಿಗಷ್ಟೇ ಅವನು ಪ್ರಾಪ್ಯನು; ಅವನಿಗೆ ತನ್ನ ಸ್ವರೂಪವನ್ನು ಪ್ರಕಟಿಸುವನು.[2] ಹೀಗೆ ಭಗವಂತನು ತನ್ನ ಪ್ರಾಪ್ತಿಗೆ ತಾನೇ ಕಾರಣನಾಗಿರುವುದರಿಂದ ಐತರೇಯೋಪನಿಷತ್ತಿನಲ್ಲಿ ಅವನನ್ನು 'ಪಂಥಾಃ' ಎಂದು ಉಲ್ಲೇಖಿಸಲಾಗಿದೆ.[3] ಬೃಹದಾರಣ್ಯಕೋಪನಿಷತ್ತಿನಲ್ಲೂ ಉದಾಹರಿಸಿದ ಸಂವಾದ ಶ್ಲೋಕಗಳಲ್ಲಿ ಭಗವಂತನನ್ನು 'ಪಂಥಾಃ' ಎಂದು ಉಲ್ಲೇಖಿಸಲಾಗಿದೆ[4] ಪರಬ್ರಹ್ಮನ ಸ್ವರೂಪವನ್ನು ಅರಿತವನು, ಲಕ್ಷ್ಮೀದೇವಿಯನ್ನು ಬಲ್ಲವನು

---

೧ 1 ಸ್ವಪ್ರಾಪ್ತಿಹೇತುತ್ವಾತ್ ಮಾರ್ಗಃ ।

2 ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನುಂ ಸ್ವಾಮ್
–ಅಥ. ಉ. 4–1–3

3 'ಏಷ ಪಂಥಾಃ . –ಐ. ಉ. 1-1-1

'ಏಷ ಏವ ಸದಾ ಪಂಥಾ ಭಗವಾನ್ ಪುರುಷೋತ್ತಮಃ । ನಿತ್ಯಂ ಸ್ವಪ್ರಾಪ್ತಿ–ಹೇತುತ್ವಾತ್ ..' –ಐ. ಉ. ಭಾ.

4 ತದೇತೇ ಶ್ಲೋಕಾ ಭವಂತಿ । ಅಣುಃ ಪಂಥಾಃ...
–ಬೃ. ಉ. 6–4–8

ತತ್ಪ್ರಾಪ್ತೇಃ ಸುಖಹೇತುತ್ವಾತ್ ಪಂಥಾ ಇತಿ ಹರಿಃ ಶ್ರುತಃ ।
–ಬೃ. ಉ. ಭಾ.

ಹಾಗೂ ಭಗವಂತನ ತೃಪ್ತಿಗಾಗಿ ಕರ್ಮಗಳನ್ನು ಆಚರಿಸುವವನೂ ಕೂಡಾ ಭಗವಂತನ ಪ್ರಸಾದದಿಂದಲೇ ಅವನ ಲೋಕವನ್ನು ಹೊಂದಿರುವನು ಆದುದರಿಂದಲೇ ಚತುರ್ಮುಖನು ಭಗವಂತನನ್ನು 'ಪಂಥಾಃ' ಎಂದೇ ತಿಳಿದಿರುವನೆಂದೂ ಬೃಹದಾರಣ್ಯಕದಲ್ಲಿ ಸಂವಾದಗಳಾಗಿ ಉಲ್ಲೇಖಿಸಲ್ಪಟ್ಟ ಶ್ಲೋಕಗಳಲ್ಲಿ ಇದೆ[1]

೨ (ಸಂಸಾರಕ್ಕೆ ಕಾರಣಗಳಾದ ಜೀವಾತ್ಮರ) ಅವಿದ್ಯಾ, ಕಾಮ ಕರ್ಮಾದಿ ದೋಷಗಳನ್ನು ಪರಿಹರಿಸಿ, (ಅವರನ್ನು) ಮೋಕ್ಷಕ್ಕೆ ತಲುಪಿಸುವವನು[2]

೩ ಸಂಸಾರವನ್ನು ಹೋಗಲಾಡಿಸುವವನು ಮತ್ತು ಮೋಕ್ಷವನ್ನು ಹೊಂದಿಸುವವನು[3]

೪ ಲಿಂಗ ಶರೀರವನ್ನು ನಾಶಪಡಿಸುವವನು ಮತ್ತು ಮೋಕ್ಷವನ್ನು ಹೊಂದಿಸುವವನು[4]

---

1 ಏಷ ಪಂಥಾ ಬ್ರಹ್ಮಣಾ ಹಾನುವಿತ್ತಸ್ತೇನೈತಿ ಬ್ರಹ್ಮವಿತ್ ಪುಣ್ಯಕೃತ್ ತೈಜಸಶ್ಚ ।
—ಬೃ ಉ 6-4-9

'ಸ ಪಂಥಾ ಬ್ರಹ್ಮಣಾ ಜ್ಞಾತಃ ಪದ್ಮಜೇನೈವ ಸಂತತಮ್ । ಪರಬ್ರಹ್ಮ ಸ್ವರೂಪಜ್ಞೋ ಮಹಾತೇಜಾಃ ಶ್ರಿಯಸ್ತಥಾ ।' ಸಮ್ಯಕ್ ಸ್ವರೂಪವಿಜ್ಞಾನಾತ್ ತೈಜಸತ್ವೇನ ಕೀರ್ತಿತಃ । ಭಗವತ್ಕರ್ಮಕರ್ತೃತ್ವಾತ್ ಪುಣ್ಯಕಶ್ಚಾಭಿಧೀಯತೇ । ಏವಂವಿಧೋಽಪಿ ತಸ್ಯೈವ ಪ್ರಸಾದಾದ್ ಯಾತಿ ತಾಂ ಗತಿಮ್ । ಅತಃ ಪಂಥಾಃ ಸಮುದ್ದಿಷ್ಟೋ ಭಗವಾನ್ ಕೇಶವಃ ಸ್ವಯಮ್' ಬೃ ಉ. ಭಾ.

೨ 2 ಮಾರಯಿತ್ವಾ ಜೀವಾತ್ಮನಾಂ ಸಂಸಾರಕಾರಣೀಭೂತಾನ್ ಅವಿದ್ಯಾಕಾಮಕರ್ಮಾದೀನ್ ದೋಷಾನ್ ಪರಿಹೃತ್ಯ ಗಮಯತಿ ತಾನ್ ಮೋಕ್ಷಂ ಪ್ರತಿ ಪ್ರಾಪಯತೀತಿ ಮಾರ್ಗಃ । ಯಥಾ ಬೃಹತ್ಸಂಹಿತಾಯಾಂ(ಐ ಉ ಭಾ 2-1-2 12) ಮಾರಯಿತ್ವಾ ಪ್ರಭಕ್ಷೈವ ಜರಯತ್ಯಖಿಲಂ ಜಗತ್ । ತೇನ ಮಾರ್ಜಾರ ಉದ್ದಿಷ್ಟಃ. 'ಇತಿ ಭಗವತಃ ಮಾರ್ಜಾರ-ಶಬ್ದ ವ್ಯಾಚ್ಯತ್ವಂ ಪ್ರದರ್ಶಿತಂ ತದ್ವದತ್ರಾಪಿ ।

೩ 3 ಮಾರಯತಿ ಸಂಸಾರಂ ಗಮಯತ್ಯಪವರ್ಗಮಿತಿ ಮಾರ್ಗಃ ।
—ಮಾ. ರಾ.

೪ 4 ಮಾರಯತಿ ಲಿಂಗಶರೀರಂ ಗಮಯತ್ಯಪವರ್ಗಮಿತಿ ಮಾರ್ಗಃ ।
—ಶ. ಸಂ.

೫ ಪರಮಾನಂದ ಪ್ರಾಪ್ತಿಗೆ ಕಾರಣನಾಗಿರುವವನು[1]

೬ ಮುಮುಕ್ಷುಗಳಿಂದ ಶೋಧಿಸಲ್ಪಡುವವನು

ವೇದಾರ್ಥವಿಚಾರಕುಶಲರಾದ ವಿದ್ವಾಂಸರ ಸಭೆಯಲ್ಲಿ ಭಗವಂತನು ಇದ್ದೇ ಇರುವನೆಂದು ಜಿಜ್ಞಾಸಿಸಲ್ಪಡುವನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು[3]

೭ ಜ್ಞಾನದಿಂದ ಸಂಪಾದಿಸಲ್ಪಡುವವನು[4]

ಭಗವಂತನನ್ನು ಪುರುಷಸೂಕ್ತದಲ್ಲಿ ನಿರೂಪಿಸಿದ ರೀತಿಯಾಗಿ ಬಲ್ಲವನೇ ಮೋಕ್ಷವನ್ನು ಹೊಂದಬಲ್ಲನು. ಮುಕ್ತಿಯನ್ನು ಪಡೆಯಲು ಜ್ಞಾನದ ಮಾರ್ಗವಲ್ಲದೆ ಬೇರೆ ಮಾರ್ಗವಿಲ್ಲ[5]

---

೫ 1 ಪರಮಾನಂದೋ ಯೇನ ಪ್ರಾಪ್ಯತೇ ಸ ಮಾರ್ಗ ಇತಿ ।
—ಶಾಂ ಭಾ.

ಮಾರ್ಗ ಇವ ಮಾರ್ಗಃ, ಯಥಾ ಮಾರ್ಗಃ ಗ್ರಾಮಾದೇರಿಷ್ಟಾರ್ಥಸ್ಯ ಪ್ರಾಪ್ತಿಹೇತುಃ ಏವಂ ಪರಮಾತ್ಮಾಽಪಿ ಶ್ರವಣಮನನಾದಿನಾ ಪರಮಾನಂದರೂಪಸ್ಯ ಮೋಕ್ಷರೂಪೇಷ್ಟಾರ್ಥಸ್ಯ ಪ್ರಾಪ್ತಿಹೇತುರಿತಿ ಗೌಣ್ಯಾಪಿ ವ್ಯಾಚಷ್ಟೇ—ಪರಮಾನಂದ ಇತಿ ।
-ವಿವೃತಿಃ

೬ 2 ಮುಮುಕ್ಷವಃ ತಂ ದೇವಂ ಮಾರ್ಗಯಂತೀತಿ ಮಾರ್ಗಃ ।
-ಶಾಂ ಭಾ

ಮಾರ್ಗ್ಯತೇ ವಿಚಾರ್ಯತೇ ಮುಮುಕ್ಷುಭಿರಿತಿ ಮಾರ್ಗಃ । 'ಮಾರ್ಗ ಅನ್ವೇಷಣೇ' ಇತ್ಯಸ್ಮಾತ್ ಕರ್ಮಣಿ ಘಞ್ ತ್ಯಾಹ—ಮುಮುಕ್ಷವ ಇತಿ । -ವಿವೃತಿಃ ।

* ಉಪಾಸಕೈರ್ಮಾರ್ಗ್ಯತ ಇತಿ ಮಾರ್ಗಃ । -ಪ. ಭ.

3 ತನ್ನ ಕಿಂ ನೇತಿ ವಿದ್ವತ್ಸು ಮೀಮಾಂಸಿತಮ್ । ಪ್ರೀಣಯಾಮೋ ವಾಸುದೇವಮ್ ।
-ದ್ವಾ. ಸ್ತೋ.

ವಿದ್ವತ್ಸು ವೇದಾರ್ಥವಿಚಾರಕುಶಲೇಷು ತದ್ ಬ್ರಹ್ಮ ನ ಕಿಂ ಅಸ್ತ್ಯೇವ ನಾಸ್ತೀತಿ ಯತ್ ತನ್ನ । ಇತಿ ಮೀಮಾಂಸಿತಂ ವಿಚಾರಿತಂ ವಾಸುದೇವಂ ಪ್ರೀಣಯಾಮಃ ।
-ವಿ. ಪ. ಟೀ.

೭ 4 ಮಯಾ ಜ್ಞಾನೇನ ಅರ್ಜ್ಯತೇ ಸಂಪಾದ್ಯತ ಇತಿ ಮಾರ್ಗಃ । 'ಅರ್ಜ ಅರ್ಜನೇ' ।

5 'ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ವಿದ್ಯತೇಽಯನಾಯ'
—ಯ. ಪು. ಸೂ.

[ಅರ್ಥವಿಶೇಷಗಳನ್ನು ೩೯೭ನೆಯ 'ಮಾರ್ಗಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

## ಜಿಜ್ಞಾಸೆ

[ಸಾಧ್ಯ ಮತ್ತು ಸಿದ್ಧ ಮಾರ್ಗಗಳು]

ಪ್ರ:- ಮೋಕ್ಷಕ್ಕೆ ಪರಮಾತ್ಮನು ಮಾರ್ಗನೋ ಅವನ ಜ್ಞಾನವು ಮಾರ್ಗವ್ರೋ? 'ಏಷಃ ಪಂಥಾಃ ಎಂಬ ಐತರೇಯೋಪನಿಷತ್ ಪರಮಾತ್ಮನು ಮೋಕ್ಷಮಾರ್ಗ. ಎಂದು ಹೇಳಿದರೆ ಪುರುಷ ಸೂಕ್ತವು 'ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾಃ' ಎಂದು ಪರಮಾತ್ಮನ ಜ್ಞಾನ ರೂಪ ಮಾರ್ಗ ಹೊರತು ಮೋಕ್ಷಕ್ಕೆ ಬೇರೆ ಮಾರ್ಗವು ಇಲ್ಲ ಎಂದು ಹೇಳುತ್ತದೆ?

ಉ – ಸಾಧಕನ ಪ್ರಯತ್ನದಿಂದ ಸಾಧ್ಯವಾದ ಮೋಕ್ಷದ ಮಾರ್ಗವು ಜ್ಞಾನಮಾರ್ಗ. ಅವನ ಪ್ರಯತ್ನ ದಿಂದ ಸಾಧ್ಯವಾಗದ ಅನಾದಿಕಾಲದಿಂದ ಸಿದ್ಧವಾದ ಸಾಧನವು ಪರಮಾತ್ಮ ಆದುದರಿಂದ ಶಾಸ್ತ್ರದಲ್ಲಿ ಹೇಳಿದ್ದು ಎರಡೂ ವಿವಕ್ಷಾಭೇದದಿಂದ ಸತ್ಯ



### ೩೬೭ ಹೇತುಃ

೧ ಎಲ್ಲದಕ್ಕೂ ಕಾರಣನಾಗಿರುವವನು.[1]

ಜ್ಞಾನ,ವಿವೇಕ ಮುಂತಾದ ಶಬ್ದಗಳಿಂದ ತನ್ನ ಕೆಲವು ಅಸಾಧಾರಣ ಗುಣಗಳನ್ನು ಉಲ್ಲೇಖಿಸಿದ ಶ್ರೀಕೃಷ್ಣ ನು ಸ್ವತಂತ್ರನಾದ ತಾನು ಸೃಷ್ಟಿಕಾಲದಲ್ಲಿ ಹಾಗೂ ಸಂಹಾರಕಾಲದಲ್ಲಿ ಸೃಷ್ಟಿಸಂಹಾರಗಳಿಗೆ ಹೇತುಆಗಿರು ವಂತೆ ಸ್ಥಿತಿ ಕಾಲದಲ್ಲೂ ಪಾಲನೆಗೆ ಹೇತು ಆಗಿರುವುದಾಗಿ ಉದ್ಧವನಿಗೆ ಉಪದೇಶಿಸಿರುವನು.[2] ಭಗವಂತನು

---

೧ 1 ಹೇತುರ್ನಾ ಕಾರಣಂ ಬೀಜಂ -ಅ. ಕೋ.

2 ಜ್ಞಾನಂ ವಿವೇಕೋ ನಿಗಮಸ್ತಪಶ್ಚ ಪ್ರತ್ಯಕ್ಷಮೈತಿಹ್ಯಮಥಾನುಮಾನಮ್ । ಆದ್ಯಂತ- ಯೋರಸ್ಯ ಯದೇವ ಕೇವಲಂ ಕಾಲಶ್ಚ ಹೇತುಶ್ಚ ತದೇವ ಮಧ್ಯೇ

– ಭಾಗ. 11-28-18

ಅಸ್ಯ ಜಗತಃ ಯತ್ ಕೇವಲಂ ಸ್ವತಂತ್ರಂ ಆದೌ ಉತ್ಪತ್ತೇಃ ಪೂರ್ವಮುತ್ಪತ್ತಿಸಮಯೇ ಹೇತುಃ ಸೃಷ್ಟಿಕರ್ತೃ ಅಂತೇ ನಾಶಸಮಯೇ ಯತ್ ಕೇವಲಂ ಸ್ವತಂತ್ರಂ ಕಾಲಃ ಲಯ ಕರ್ತೃ ಚ ಸದ್ ವರ್ತತೇ ಮಧ್ಯೇಽಪಿ ಸ್ಥಿತಿಕಾಲೇಽಪಿ ತದೇವ ಕೇವಲಂ ಸ್ವತಂತ್ರಮೇವ ಪಾಲನಾದಿಕರ್ತೃ -ಯಾದವೇಂದ್ರತೀರ್ಥಾಃ

ಎಲ್ಲದಕ್ಕೂ ಮುಖ್ಯಹೇತು ಆಗಿದ್ದರೂ, ಜೀವಾತ್ಮರಿಗೆ ಶರೀರ ಇಂದ್ರಿಯಾದಿಗಳನ್ನು ಉಂಟು ಮಾಡುವಲ್ಲಿ ಪ್ರಕೃತಿಗೆ ಇರುವ ಹೇತುತ್ವಕ್ಕಿಂತಲೂ ಜೀವಾತ್ಮರಿಗೆ ಭೋಕ್ತೃತ್ವಶಕ್ತಿಯನ್ನು ನೀಡು ವಲ್ಲಿ ಇರುವ ಹೇತುತ್ವವು ಅಲ್ಪ ಪ್ರಮಾಣದ್ದೆಂದು ತಿಳಿಸುವುದಕ್ಕಾಗಿಯಷ್ಟೇ ಗೀತಾಚಾರ್ಯನು ಜೀವಾತ್ಮರಿಗೆ ಶರೀರಾದಿಗಳನ್ನು ಉಂಟು ಮಾಡುವಲ್ಲಿ ಪ್ರಕೃತಿಯು ಕಾರಣವೆನಿಸಿದರೆ, ಸುಖ ದುಃಖಾದಿ ಭೋಗವನ್ನುಂಟು ಮಾಡುವುದರಲ್ಲಿ ಪುರುಷನಾಮಕನಾದ ಭಗವಂತನು ಹೇತು ಎನಿಸಿ ರುವನೆಂದು ಸಂದೇಶಿಸಿರುವನು.[1] ಜಗತ್ತಿನ ಸೃಷ್ಟಿಪ್ರಲಯಾದಿ ಸಕಲ ವಿಕಾರಗಳೂ ಯಾರಿಂದಾಗಿ ಉಂಟಾಗುವವೋ, ಕೊನೆಗೆ ಎಲ್ಲವೂ ಯಾರಲ್ಲಿ ಲಯ ಹೊಂದುವವೋ ಅಂತಹ ಎಲ್ಲದಕ್ಕೂ ಹೇತು ಎನಿಸಿರುವ ಸ್ವಾಮಿಗೆ ಪ್ರಣಾಮ—ಎಂದು ಭೀಷ್ಮಾಚಾರ್ಯರು ಸ್ತುತಿಸಿರುವರು.[2]

೨ ಎಲ್ಲದರ ಒಳಗೂ ಹೊರಗೂ ವ್ಯಾಪಿಸಿರುವವನು[3]

ಕಣ್ಣಿಗೆ ಕಾಣುವ ಅಥವಾ ಶಾಸ್ತ್ರದಲ್ಲಿ ಪ್ರತಿಪಾದ್ಯವಾದ ಏನೆಲ್ಲ ಇದೆಯೋ ಅವೆಲ್ಲದರ ಒಳಗೂ ಹೊರಗೂ ವ್ಯಾಪಿಸಿಕೊಂಡು ಶ್ರೀಮನ್ನಾರಾಯಣನಿರುವನೆಂದು ಮಹಾನಾರಾಯಣೋಪನಿಷತ್ತು

---

1 ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥
—ಗೀ 13-21

ಪರಮೇಶ್ವರಸ್ಯೈವ ಸರ್ವಕರ್ತೃತ್ವೇಽಪಿ ಭೋಕ್ತೃತ್ವದಾನೇ ದೇವ್ಯಾ ಅಲ್ಪಪ್ರವೃತ್ತಿರಿತಿ ದರ್ಶಯಿತುಂ 'ಉಚ್ಯತೇ' ಇತಿ ಸ್ಥಾನದ್ವಯೇಽಪ್ಯುಕ್ತಮ್ । ಕರ್ತೃತ್ವೇಽಪಿ ಸ ಏವ ಮುಖ್ಯಹೇತುಃ । ತಥಾಽಪಿ ಭೋಕ್ತೃತ್ವಾಪೇಕ್ಷಯಾ ತಸ್ಯಾ ಅಧಿಕಪ್ರವೃತ್ತಿರಿತಿ 'ಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ' ಇತಿ, ಸರ್ವಹೇತುತ್ವೇಽಪಿ ವಿಷ್ಣೋಃ ಪ್ರಕೃತೇ-ರ್ಜೀವಂ ಪ್ರತಿ ಭೋಕ್ತೃತ್ವದಾನೇಽಲ್ಪಪ್ರವೃತ್ತಿರಿತಿ 'ಪುರುಷೋ ಭೋಕ್ತೃತ್ವೇ ಹೇತು-ರುಚ್ಯತೇ' ಇತಿ ವಿಶೇಷಹೇತೋರೇವಮುಚ್ಯತ ಏವ । ಮುಖ್ಯತಸ್ತು ಸರ್ವ ಹೇತುತ್ವಂ ವಿಷ್ಣೋರೇವೇತಿ ಭಾವಃ । —ಗೀ. ತಾ.

2 ಯಸ್ಮಾತ್ಸರ್ವಾಃ ಪ್ರಸೂಯಂತೇ ಸರ್ಗಪ್ರಲಯವಿಕ್ರಿಯಾಃ ।
ಯಸ್ಮಿಂಶ್ಚೈವ ಪ್ರಲೀಯಂತೇ ತಸ್ಮೈ ಹೇತ್ವಾತ್ಮನೇ ನಮಃ ॥
—ಮ. ಭಾರ. ಶಾಂತಿ. 47-62

೨ 3 ಹಿನೋತಿ ವ್ಯಾಪ್ನೋತಿ ಸರ್ವಮಂತರ್ಬಹಿಶ್ಚೇತಿ ಹೇತುಃ । 'ಹಿ ಗತೌ' ।

ಸಂದೇಶಿಸಿದೆ[1] ಭಗವಂತನು ವಿಶ್ವದ ಸುತ್ತ ವ್ಯಾಪಿಸಿರುವನೆಂದು ಶ್ವೇತಾಶ್ವತರೋಪನಿಷತ್ತು ಅಲ್ಲಲ್ಲಿ ತಿಳಿಸಿದೆ[2]

೩ ಹೇಯನಾದ ಅಥವಾ ಹೀನವಾದ ಜ್ಞಾನವುಳ್ಳ ದುಷ್ಟರನ್ನು ದಂಡಿಸುವವನು.[3]

೪ ಹೇಯವಾದ ಗಮನವುಳ್ಳ ದುಷ್ಟರನ್ನು ದಂಡಿಸುವವನು[4]

೫ ಅಖಿಲ ದೋಷಗಳಿಂದಲೂ ನಿತ್ಯವೂ ರಹಿತನಾಗಿರುವವನು, ಜ್ಞಾನ ಸ್ವರೂಪಿ ಹಾಗೂ (ಎಲ್ಲೆಡೆ ವಾಸಿಸುತ್ತಿದ್ದು ಪ್ರತಿಯೊಂದು ವಸ್ತುವೂ ಪರಸ್ಪರವಾಗಿ) ಭಿನ್ನವಾಗಿರುವಂತೆ ಮಾಡಿರುವವನು[5]

---

1 'ಯಚ್ಚ ಕಿಂಚಿಜ್ಜಗತ್ ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ। ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' -ಮ. ನಾರಾ. ಉ 13-1

2 ವಿಶ್ವಸ್ಯೈಕಂ ಪರಿವೇಷ್ಟಿತಾರಂ -ಶ್ವೇ. ಉ 3-7, 4-14, 16, 5-13

೩ 3 'ಅಹೇಯತ್ವಾದಹಂ ವಿಷ್ಣುಃ ' ಇತಿ ಬ್ರಹ್ಮವೈವರ್ತೇ (ಐ. ಉ ಭಾ 2-4-1 8) ಅಹಂಶಬ್ದಾರ್ಥನಿರೂಪಣಸಂದರ್ಭೇ ಹಕಾರಸ್ಯ ಹೇಯಾರ್ಥಕತ್ವಮಭ್ಯುಪಗತಮ್ । ಏವಂ 'ಅಹೀನತ್ವಾದಹಃ . ' ಇತಿ ಬೃ. ಉ. ಭಾಷ್ಯೇ (5.4) ಅಹಶ್ಶಬ್ದನಿರ್ವಚನಸಂದರ್ಭೇ ಹಕಾರಸ್ಯ ಹೀನಾರ್ಥಕತ್ವಮಭ್ಯುಪಗತಮ್ । ತಥಾಚ ಹಃ ಹೇಯಃ ಹೀನೋ ವಾ ಇಃ ಜ್ಞಾನಂ ಯೇಷಾಂ ತೇ ಹೇಯಜ್ಞಾನಾಃ ಹೀನಜ್ಞಾನಾ ವಾ ದುಷ್ಟಾಃ ತಾನ್ ತುದತಿ ವ್ಯಥಯತಿ, ದಂಡಯತೀತಿ ಯಾವತ್ ಹೇತುಃ 'ತುದ ವ್ಯಥನೇ'। 'ವಾಸೇನೇದಂ ಯತಸ್ತುನ್ನಮತಸ್ತದ್ ಬ್ರಹ್ಮಶಬ್ದ್ಯತೇ' ಇತಿ ಸ್ಕಾಂದೇ ಬ್ರಹ್ಮಣಃ ವಸ್ತುಶಬ್ದವಾಚ್ಯತ್ವಸಮರ್ಥನ ಸಂದರ್ಭೇ ತಾದತೇಃ ತುಶಬ್ದಃ ಅಭ್ಯುಪಗತಃ ।

೪ 4 ಹಃ ಹೇಯಃ ಇಃ ಗತಿಃ ಯೇಷಾಂ ತೇ ಹೇಯಗತಯಃ ದುಷ್ಟಾಃ। ತಾನ್ ತುದತಿ ವ್ಯಥಯತೀತಿ ಹೇತುಃ ।

೫ 5 'ನಿತ್ಯಂ ಹೀನೋಽಖಿಲೈರ್ದೋಷೈಃ .ಹರಿಃ । ಹಂಸ ಇತ್ಯುಚ್ಯತೇ....' ಇತಿ ಮಹಾಕೌರ್ಮೇ (ಕಾ. ಉ ಭಾ. 2-2-2) ಹಂಸಶಬ್ದನಿರ್ವಚನಸಂದರ್ಭೇ ಅಖಿಲದೋಷಹೀನಾರ್ಥಕತ್ವಂ ಹಕಾರಸ್ಯ ಉಕ್ತಮ್ । ಜ್ಞಾನರೂಪತ್ವಾತ್ ಇಃ । ಇದಂ ಸರ್ವಂ ತುದ್ಯತೇ ಪರಸ್ಪರಂ ಭಿದ್ಯತೇ ಅನೇನೇತಿ ತುಃ । 'ವಾಸೇನೇದಂ ಯತಸ್ತುನ್ನಮತಸ್ತದ್ ಬ್ರಹ್ಮಶಬ್ದ್ಯತೇ' ಇತಿ ಸ್ಕಾಂದೇ (ಭಾಗ ತಾ ನಿ 1-1 1) ವಸ್ತುಶಬ್ದನಿರ್ವಚನಸಂದರ್ಭೇ ತುಶಬ್ದಸ್ಯಾಯಮೇವಾರ್ಥಃ ವ್ಯಾಖ್ಯಾತಃ ।

## ಜಿಜ್ಞಾಸೆ

[ಅನ್ವಯವ್ಯತಿರೇಕಗಳಷ್ಟೇ ಸಾಧಕಗಳಲ್ಲ]

ಪ್ರ.- ಲೋಕದಲ್ಲಿ ಈ ಪದಾರ್ಥವು ಈ ವಸ್ತುವು ಹುಟ್ಟಲಿಕ್ಕೆ ಕಾರಣ ಎಂದು ನಿರ್ಣಯಿಸುವುದು ಅನ್ವಯವ್ಯತಿರೇಕಗಳಿಂದ ಅಂದರೆ ಈ ಪದಾರ್ಥವು ಇದ್ದರೆ ಈ ವಸ್ತುವು ಹುಟ್ಟುತ್ತದೆ. ಈ ಪದಾರ್ಥವು ಇಲ್ಲವಾದರೆ ಈ ವಸ್ತುವು ಹುಟ್ಟುವದಿಲ್ಲ ಇದು ಅನ್ವಯವ್ಯತಿರೇಕಗಳು ಇದಕ್ಕೆ ಉದಾಹರಣೆ—ಹತ್ತಿಯು ಇದ್ದರೆ ವಸ್ತ್ರವು ಸಿದ್ಧ ಆಗುತ್ತದೆ ಹತ್ತಿಯು ಇಲ್ಲವಾದರೆ ವಸ್ತ್ರವು ಇಲ್ಲ ಎಂಬ ಅನ್ವಯವ್ಯವ್ಯತಿರೇಕದಿಂದ ಹತ್ತಿಯು ವಸ್ತ್ರಕ್ಕೆ ಕಾರಣವೆಂದು ಎಲ್ಲರೂ ನಿರ್ಣೈಸುವರು. ಆದರೆ ಪರಮಾತ್ಮನಿಗೆ ವ್ಯತಿರೇಕವು ಇಲ್ಲ ವ್ಯತಿರೇಕವೆಂದರೆ ಅಭಾವ. ಎಲ್ಲ ದೇಶ ಕಾಲಗಳಲ್ಲಿ ಇದ್ದದ್ದರಿಂದ ಅವನ ಅಭಾವವು ಎಲ್ಲಿಯೂ ಇಲ್ಲ. ಈ ರೀತಿ ಪರಮಾತ್ಮನು ಕಾರಣ ಎಂದು ಸಾಧಿಸಲಿಕ್ಕೆ ಅನ್ವಯ ವ್ಯತಿರೇಕಗಳು ಇಲ್ಲವಾದ್ದರಿಂದ ಅವನನ್ನು ಹೇತು ಎಂದು ಹೇಗೆ ಹೇಳುವದು?

ಉ - ಆಕಾಶಕ್ಕೆ ಅನ್ವಯವ್ಯತಿರೇಕಗಳು ಇಲ್ಲ. ಆಕಾಶವು ಸರ್ವ ದೇಶ ಕಾಲಗಳಲ್ಲಿ ಇದೆ ಆದರೆ ಪ್ರಾಣಿಸಂಚಾರಕ್ಕೆ ಅವಕಾಶರೂಪವಾದ ಆಕಾಶವು ಕಾರಣವೆಂದು ನಿರ್ಧಾರವಾದದ್ದು ಹೇಗೋ ಹಾಗೆಯೇ ಪರಮಾತ್ಮನಿಗೆ ಅನ್ವಯವ್ಯತಿರೇಕಗಳು ಇಲ್ಲವಾದರೂ ಅವನು ಕಾರಣವೆಂದು ಸಿದ್ಧವಾಗುತ್ತದೆ

ಪ್ರ:- ಅವಕಾಶವು ಪ್ರಾಣಿಸಂಚಾರಕ್ಕೆ ಕಾರಣ ಎಂದು ಸಾಕ್ಷಿಪ್ರಮಾಣದಿಂದ ಸಿದ್ಧವಾಗಿದೆ. ಪರಮಾತ್ಮನು ಸರ್ವಕ್ಕೂ ಕಾರಣ ಎಂದು ಸಾಕ್ಷಿಯಿಂದ ಸಿದ್ಧವಾಗಿಲ್ಲ?

ಉ - ಶಾಸ್ತ್ರದಿಂದ ಪರಮಾತ್ಮನು ಸರ್ವ ಕಾರಣವೆಂದು ಸಿದ್ಧವಾಗುತ್ತದೆ. ಅನ್ವಯ ವ್ಯತಿರೇಕಗಳೇ ಕಾರಣತ್ವಸಾಧಕವೆಂದು ತಿಳಿಯಬಾರದು ಎಂಬ ಅಂಶಕ್ಕೆ ಆಕಾಶದ ದೃಷ್ಟಾಂತವನ್ನು ಕೊಟ್ಟದ್ದು.



## ೩೬೮ ದಾಮೋದರಃ

೧ ಲೋಕಗಳು ಯಾರ ಉದರದಲ್ಲಿ ಇವೆಯೋ ಅಂತಹವನು.[1]

ಲೋಕಗಳೇ ದಾಮಗಳೆನಿಸಿದ್ದು, ಅವುಗಳನ್ನು ಉದರದಲ್ಲಿ ಹೊತ್ತಿರುವ ಪ್ರಯುಕ್ತ ಭಗವಂತನು

---

೧ 1 ದಾಮಾನಿ ಲೋಕನಾಮಾನಿ ಯಸ್ಯ ಉದರೇ ಸಃ ದಾಮೋದರಃ ।

-ಶಾಂ. ಭಾ. ಆಧಾರೇಣ

ದಾಮೋದರ ಎಂದೆನಿಸಿರುವನೆಂದು ಪ್ರಮಾಣವೊಂದು ಸಾರುತ್ತಿದೆ[1]

೨ ಕೃಷ್ಣಾವತಾರದಲ್ಲಿ (ಯಶೋದೆಯಿಂದ) ಹಗ್ಗದಿಂದ ಉದರದಲ್ಲಿ ಬದ್ಧನಾಗಿರು ವವನು.[2]

ಬಾಲಕೃಷ್ಣನು ದಧಿಪಾತ್ರೆಯನ್ನು ಒಡೆದು ಹಾಕಲು ಯಶೋದೆಯು ಅವನನ್ನು ಅಟ್ಟಿಸಿ ಕೊಂಡು ಬಂದು ಹಗ್ಗದಿಂದ ಬಂಧಿಸುವಳು ಮೊದಲು ಎಷ್ಟು ಹಗ್ಗಗಳನ್ನು ಜೋಡಿಸಿದರೂ ಬಂಧನಕ್ಕೆ ಸಿಲುಕದ ಶ್ರೀಕೃಷ್ಣನು, ಕೊನೆಗೆ ತಾನು ಭಕ್ತಪರಾಧೀನನೆಂಬುದನ್ನು ತೋರಿಸಿಕೊಡುತ್ತಾ ಯಶೋದೆಯ ಬಂಧನಕ್ಕೊಳಗಾಗುವನು[3] ಹೀಗೆ ಯಶೋದೆಯಿಂದ ಉದರಲ್ಲಿ ಕಟ್ಟಲ್ಪಟ್ಟಿರುವುದ ರಿಂದಲೇ ಅವನು ದಾಮೋದರ ಎಂದೆನಿಸಿರುವನೆಂದು 'ಬ್ರಹ್ಮ ಪುರಾಣ' ತಿಳಿಸಿದೆ[4] ಹೀಗೆ ಹಗ್ಗದಿಂದ 'ಉಲೂಖಲ'ಕ್ಕೆ ಕಟ್ಟಲ್ಪಟ್ಟ ಬಾಲಕೃಷ್ಣನು ಆ ಉಲೂಖಲವನ್ನೇ ಎಳೆದೊಯ್ದು ದೊಡ್ಡ ಮರ ಗಳನ್ನು ಬೀಳಿಸಿದನೆಂದು ತಿಳಿಸುವಾಗ ಭಾಗವತದಲ್ಲಿ ಅವನನ್ನು 'ದಾಮೋದರ' ಎಂದೇ ಉಲ್ಲೇಖಿಸ ಲಾಗಿದೆ[5]

೩ ಇಂದ್ರಿಯಗಳ ನಿಗ್ರಹವುಳ್ಳವರು ಉನ್ನತಿಯನ್ನು ಹೊಂದುವಂತೆ ಅನುಗ್ರಹಿಸು ವವನು.[6]

---

1 ದಾಮಾನಿ ಲೋಕನಾಮಾನಿ ತಾನಿ ಯಸ್ಯೋದರಾಂತರೇ ।
ತೇನ ದಾಮೋದರೋ ದೇವಃ ಶ್ರೀಧರಸ್ತು ರಮಾಶ್ರಿತಃ ॥
-ಶಾಂ. ಭಾ. (ವ್ಯಾಸವಚನತಯಾ ಉದಾಹೃತವತ್)

೨ 2 ಯಶೋದಯಾ ದಾಮ್ನಾ ಉದರೇ ಬದ್ಧ ಇತಿ ದಾಮೋದರಃ ।
-ಶಾಂ ಭಾ.

3 ದಶಮಸ್ಕಂಧ ಭಾಗವತಸ್ಯ ನವಮಾಧ್ಯಾಯೇ ದ್ವಾದಶತಮ ಶ್ಲೋಕಾದುಪರಿ ಇಯಮಾ- ಖ್ಯಾಯಿಕಾ ನಿರೂಪಿತಾ ।

4 ತಯೋರ್ಮಧ್ಯಗತಂ ಬದ್ಧಂ ದಾಮ್ನಾ ಗಾಢಂ ತಯೋದರೇ ।
ತತಶ್ಚ ದಾಮೋದರತಾಂ ಸ ಯಯೌ ದಾಮಬಂಧನಾತ್ ॥
–ಬ್ರಹ್ಮಪುರಾಣ 184-41, 42

5 'ಬಾಲೇನ ನಿಷ್ಕರ್ಷಯತಾನ್ವಗುಲೂಖಲಂ ತದ್‌ದಾಮೋದರೇಣ ತರಸೋತ್ಕಲಿತಾಂಘ್ರಿ- ಬಂಧೌ । ನಿಷ್ಪೇತತುಃ ..' –ಭಾಗ. 10–10–27

೩ 6 ದಮಃ ಇಂದ್ರಿಯನಿಗ್ರಹಃ, ತತ್ಸಂಬಂಧಿನಃ ದಾಮಾಃ ದಾಂತಾಃ ತೇ ಉದ್ಗಚ್ಛಂತಿ ಉದ್ಗ- ಚ್ಛಂತಿ ಉನ್ನತಿಂ ಪ್ರಾಪ್ನುವಂತಿ ಅನೇನೇತಿ ದಾಮೋದರಃ ।

ಜನರು ಇಂದ್ರಿಯ ನಿಗ್ರಹದಿಂದ ಸಿದ್ಧಿಯನ್ನು ಬಯಸುತ್ತ, ನನ್ನಿಂದ ಸ್ವರ್ಗಾದಿಗಳನ್ನು ಬಯಸುವರು, ಆದುದರಿಂದಲೇ ನಾನು ದಾಮೋದರ ಎಂದೆನಿಸಿರುವೆನೆಂದು ಶ್ರೀಕೃಷ್ಣನು ಅರ್ಜುನನಿಗೆ ತಿಳಿಸಿರುವನು.[1]

೪ ಇಂದ್ರಿಯ ನಿಗ್ರಹವುಳ್ಳ ದೇವತೆಗಳಿಗೆ ತನ್ನ ಅಪರೋಕ್ಷ ಜ್ಞಾನವನ್ನು ಅನುಗ್ರಹಿಸಿರುವವನು[2]

ಸಂಜಯನು ಶ್ರೀಕೃಷ್ಣನ ನಾಮಗಳ ವ್ಯುತ್ಪತ್ತಿಯನ್ನು ತಿಳಿಸುತ್ತ, ದಮ ಉಳ್ಳ ದೇವತೆಗಳಿಗೆ ತನ್ನ ಅಪರೋಕ್ಷ ಜ್ಞಾನವನ್ನು ಅನುಗ್ರಹಿಸಿರುವುದರಿಂದ ಭಗವಂತನು 'ದಾಮೋದರ' ಎಂದೆನಿಸಿರುವನೆಂದು ತಿಳಿಸಿರುವನು[3]

೫ ಇಂದ್ರಿಯ ನಿಗ್ರಹವುಳ್ಳವರಿಂದಲೇ ಹೊಂದಲ್ಪಡುವವನು[4]

೬ ಇಂದ್ರಿಯ ನಿಗ್ರಹದಿಂದ ಪ್ರಾಪ್ಯನಾಗಿರುವವನು ಮತ್ತು ದೋಷರಹಿತನಾಗಿರುವವನು[5]

---

1 ದಮಾತ್ಸಿದ್ಧಿಂ ಪರೀಪ್ಸಂತೋ ಮಾಂ ಜನಾಃ ಕಾಮಯಂತಿ ಹಿ ।
ದಿವಂ ಚೋರ್ವೀಂ ಚ ಮಧ್ಯಂ ಚ ತಸ್ಮಾದ್ದಾಮೋದರೋ ಹ್ಯಹಮ್ ॥
–ಮ ಭಾರ. ಶಾಂತಿ 341–44

೪ 2 ದಮಸ್ಯೇವೇ ದಾಮಾಃ ದಾಂತಾಃ ದೇವಾಃ । ತೇಷಾಂ ಸ್ವಸ್ಯ ಪ್ರಕಾಶಾಖ್ಯಂ ಉತ್ಕೃಷ್ಟಂ ಅರಂ ಜ್ಞಾನಂ ಯಸ್ಮಾತ್ಸಃ ದಾಮೋದರಃ ।

3 ದೇವಾನಾಂ ಸ್ವಪ್ರಕಾಶತ್ವಾದ್ದಮಾದ್ದಾಮೋದರೋ ವಿಭುಃ ।
–ಮ. ಭಾರ. ಉದ್ಯೋಗ. 70–8

೫ 4 ದಮಸ್ಯೇಮೋ ದಾಮಾಃ ದಾಂತಾಃ । ತೈರೇವ ಉದರ್ಯತೇ ಉದ್ಗಮ್ಯತ ಇತಿ ದಾಮೋದರಃ ।

೬ 5 ದಮೇನ ಪ್ರಾಪ್ಯ ಉದ್ಗತದೋಷ ಇತಿ ದಾಮೋದರಃ ।
–ವಿ. ರಾ

* ಪ್ರಾಪ್ಯತಯಾ ದಮಸ್ಯಾಯಂ ದಾಮಃ । ಉದ್ಗತಾಃ ಅರಾಃ ದೋಷಾಃ ಯಸ್ಮಾತ್ಸಃ ಉದರಃ । ದಾಮಶ್ಚಾಸೌ ಉದರಶ್ಚ ದಾಮೋದರಃ ।

ಭಕ್ತಿ, ಜ್ಞಾನ, ಶಾಸ್ತ್ರನಿಷಿದ್ಧಗಳ ತ್ಯಾಗ, ನಿತ್ಯಹರಿಸ್ಮರಣೆ, ರಾಗಾಭಾವ, ಹಾಗೂ ಶಾಸ್ತ್ರ ವಿಹಿತಾತ್ಯಾಗ—ಈ ಆರು ಒಟ್ಟು ಸೇರಿದಾಗಲೇ ಭಗವಂತನ ಅಪರೋಕ್ಷ ಜ್ಞಾನವಾಗುವುದೆಂದು ಸತ್ತತ್ತ್ವವು ತಿಳಿಸುವುದರಿಂದ[1] ಭಗವಂತನ ಪ್ರಾಪ್ತಿಗೆ ಇಂದ್ರಿಯನಿಗ್ರಹವೂ ಅತ್ಯಾವಶ್ಯಕ ಎಂದು ಸೂಚಿಸಿದಂತಾಗುವುದು

೭ ದಮಯುಕ್ತರಾದ ಜೀವಾತ್ಮರಿಗೆ ಸುಖವನ್ನು ನೀಡುವವನು[2]

ವಿಷಯುಪದಾರ್ಥಗಳನ್ನು ಬಿಟ್ಟು ಶ್ರೀರಾಮನಲ್ಲೇ ಮನಸನ್ನು ನೆಲೆಗೊಳಿಸಿದವರಿಗೆ ಭಗವಂತನಿಂದ ಆನಂದವು ದೊರಕುವುದೆಂದು ನಾರಾಯಣಾಷ್ಟಾಕ್ಷರಕಲ್ಪವು[3] ತಿಳಿಸಿದೆ ಮನಸ್ಸಿನ ಕಾಮನೆಗಳನ್ನೆಲ್ಲ ಬಿಟ್ಟು ಭಗವಂತನಲ್ಲೇ ಆಸಕ್ತನಾಗಿರುವ 'ಸ್ಥಿತಪ್ರಜ್ಞ'ನಿಗೆ ಭಗವಂತನ ಪ್ರಸಾದದಿಂದಲೇ ತುಷ್ಟಿಯು ಉಂಟಾಗುವುದೆಂದು ಗೀತಾಚಾರ್ಯನೂ ಸಂದೇಶಿಸಿರುವನು[4]

---

1 ಭಕ್ತ್ಯಾ ಜ್ಞಾನಾನ್ನಿಷಿದ್ಧಾನಾಂ ತ್ಯಾಗಾನ್ನಿತ್ಯಹರಿಸ್ಮೃತೇಃ । ಅರಾಗಾದ್ ವಿಹಿತಾತ್ಯಾಗಾದಿತ್ಯೇತೈರೇವ ಸಂಯುತೈಃ । ಅಪರೋಕ್ಷದರ್ಶನಂ ವಿಷ್ಣೋರ್ಜಾಯತೇ ನಾನ್ಯಥಾ ಕ್ವಚಿತ್—ಸತ್ತತ್ತ್ವ (ಗೀ ತಾ 8-9)

೭ 2 ದಮಸ್ಯೇಮೇ ದಾಮಾಃ ದಾಂತಾಃ । ದಾಮಾಶ್ಚ ತೇ ಉದಾಃ ಜೀವಾಶ್ಚ ದಾಮೋದಾಃ । 'ಅ ಇತ್ಯುಕ್ತಃ ಪರೋ ವಿಷ್ಣುರ್ಯೇಭ್ಯ ಉಚ್ಚ ಸ ಏವ ತು । ತ ಉದಾ ಜೀವಸಂಘಾಃ ಸ್ಯುಃ .. '—ಇತಿ ಯಜುಃಸಂಹಿತಾಯಾಂ (ತೈ ಉ ಭಾ. 2-12) ಜೀವಾನಾಂ ಉದಶಬ್ದವಾಚತ್ವಂ ವಿವೃತಮ್ । ತಾದೃಶಾನ್ ದಾಮೋದಾನ್ ರಮಯತೀತಿ ದಾಮೋದರಃ ।

3 ವಿಷಯಾಂಸ್ತು ಪರಿತ್ಯಜ್ಯ ರಾಮೇ ಸ್ಥಿತಮತಸ್ತತಃ । ದೇವಾದ್ ಭವತಿ ವೈ ತುಷ್ಟಿರ್ನಾನ್ಯಥಾ ತು ಕದಾಚನ । ನಾರಾಯಣಾಷ್ಟಾಕ್ಷರಕಲ್ಪ (ಗೀ. ಭಾ. 2-55)

4 ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾಽತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥
-ಗೀ 2-45

ಆತ್ಮನಾ ಪರಮಾತ್ಮನಾ । ಪರಮಾತ್ಮನ್ಯೇವ ಸ್ಥಿತಃ ಸನ್ । ಆತ್ಮಾಖ್ಯೇ ತಸ್ಮಿನ್ ಸ್ಥಿತಸ್ಯ ತತ್ಪ್ರಸಾದಾದೇವ ತುಷ್ಟಿರ್ಭವತಿ । -ಗೀ. ಭಾ.

೮ ದಮದಿಂದ ಕೂಡಿದ ಜೀವಾತ್ಮರಲ್ಲಿ ಕ್ರೀಡಿಸುವವನು[1]

೯ ಇಂದ್ರಿಯಗಳ ನಿಗ್ರಹದಿಂದ ಕೂಡಿದವನು ಮತ್ತು ಜೀವಾತ್ಮರಲ್ಲಿ ಕ್ರೀಡಿಸುವವನು.[2]

ಧರಣೀದೇವಿಯು ಭಗವಂತನ ವಿಶಿಷ್ಟ ಗುಣಗಳಾಗಿ ಉಲ್ಲೇಖಿಸಿರುವ ನಲ್ವತ್ತು ಗುಣಗಳಲ್ಲಿ ದಮವೂ ಒಂದಾಗಿದೆ.[3] ಅಂತರ್ಯಾಮಿ ಬ್ರಾಹ್ಮಣದಲ್ಲಿ ಭಗವಂತನು ಎಲ್ಲರ ಅಂತರ್ಯಾಮಿಯಾಗಿ ಇರುವನೆಂದು ಸಂದೇಶಿಸುವಾಗ, ಅವನಿಗೆ 'ಅಂತರಃ' ಎಂಬ ವಿಶೇಷಣವನ್ನು ನೀಡುವುದರ ಮೂಲಕ ಅವನು ಬಾಹ್ಯಾಪೇಕ್ಷೆಯಿಲ್ಲದೆ ರಮಿಸುತ್ತಿರುವವನೆಂದು ತಿಳಿಸಲಾಗಿದೆ[4]

೧೦ ದಾನಶೀಲರಾದ ಸಜ್ಜನರಿಗೆ ವಿಶೇಷವಾದ ಸುಖವನ್ನು ನೀಡುವವನು[5]

ದಾನಶೀಲರಿಗೆ ಪ್ರಿಯನಾಗಿರುವ ಭಗವಂತನು[6] ಅವರಿಗೆ ದಾನಕ್ಕೆ ತಕ್ಕ ಫಲ ನೀಡಿ[7] ಅವರಿಗೆ ವಿಶೇಷವಾದ ಆನಂದವನ್ನು ನೀಡುವನು

---

೮ 1 ದಾಮಾಃ ದಮಯುಕ್ತಾಶ್ಚ ಉದಾಶ್ಚ(ಜೀವಾಶ್ಚ) ದಾಮೋದಾಃ । ದಾಮೋದೇಷು ರಮತ ಇತಿ ದಾಮೋದರಃ । -ಸ ಸಂ.

೯ 2 ದಮಯುಕ್ತತ್ವಾತ್ ದಾಮಃ ಉದೇಷು ಜೀವೇಷು ರಮತ ಇತಿ ಉದರಃ । ದಾಮಶ್ಚಾಸೌ ಉದರಶ್ಚ ದಾಮೋದರಃ ।

3 ಶಮೋ ದಮಸ್ತಪಃ । ಇಮೇ ಚಾನ್ಯೇ ಚ ಭಗವನ್ ನಿತ್ಯಾ ಯತ್ರ ಮಹಾಗುಣಾಃ ಭಾಗ 1-16-29

4 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ....' -ಬೃ. ಉ. 5-7-3

ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ । -ಬ್ರಹ್ಮತರ್ಕ (ಬೃ. ಉ. ಭಾ.)

೧೦ 5 ದದತೀತಿ ದಾಃ ಸಂಪದ್ದಾನಶೀಲಾಃ ಸಜ್ಜನಾಃ ತೇಷಾಂ (ಅ) ಮೋದಃ ಸುಖಂ ರಾತೀತಿ ದಾಮೋದರಃ । 'ರಾ ದಾನೇ' । -ವಿ. ಪ. ಟೀ.

6 ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್ । -ಬೃ. ಉ. 5-9-34

ಸ ಪ್ರಿಯಃ ಸರ್ವದಾತ್ಣಾಂ....। -ನಾರದೀಯ(ಬೃ. ಉ. ಭಾ.)

7 ಫಲಮತ ಉಪಪತ್ತೇಃ -ಬ್ರ. ಸೂ. 3-2-39

೧೧ ಇಂದ್ರಿಯನಿಗ್ರಹ ಉಳ್ಳವರು ಅಥವಾ ಭಗವದ್ಭಕ್ತರಾಗವರು ಸಮರ್ಪಿಸಿದ ಜಲಾದಿಗಳಿಂದ ಸಂತುಷ್ಟನಾಗುವವನು[1]

೧೨ ಪ್ರಲಯ ಕಾಲದ ಜಲದಲ್ಲಿ ಕ್ರೀಡಿಸುವವನು[2]

೧೩ ದುಷ್ಟರನ್ನು ದಂಡಿಸುವವನು ಹಾಗೂ ತನ್ನನ್ನು ಉತ್ಕೃಷ್ಟನನ್ನಾಗಿ ಜ್ಞಾಪಿಸಿ ಕೊಡುವವನು[3]

## ಜಿಜ್ಞಾಸೆ

[ಲಾಕ್ಷಣಿಕಾರ್ಥ ಯುಕ್ತವಲ್ಲ]

ಪ – ಪರಮಾತ್ಮನು ಅವ್ಯಕ್ತನೆಂದು 'ಓಂ ತದವ್ಯಕ್ತಮಾಹ ಹಿ ಓಂ' ಎಂಬ ಸೂತ್ರವು ಹೇಳುತ್ತದೆ ಅವ್ಯಕ್ತವೆಂದರೆ ಅಪ್ರತ್ಯಕ್ಷವೆಂದು ಅರ್ಥ, ಪರಮಾತ್ಮನಿಗೆ ರೂಪವು ಇಲ್ಲ ಎಂದು 'ಅಶಬ್ದಮ-ಸ್ಪರ್ಶಮರೂಪಮವ್ಯಯಂ' ಈ ಶ್ರುತಿಯು ಹೇಳುತ್ತದೆ. ಯಾವುದಕ್ಕೆ ರೂಪವು ಇಲ್ಲವೋ ಅದು ಅಪ್ರತ್ಯಕ್ಷ ಎಂದು ಕಂಡಿದೆ ಆದ್ದರಿಂದಲೂ ಪರಮಾತ್ಮನು ಅಪ್ರತ್ಯಕ್ಷ ಎಂದು ರಾಮಾನುಜಾಚಾರ್ಯರ ಸಿದ್ಧಾಂತ 'ಆತ್ಮಾ ವಾರೇ ದ್ರಷ್ಟವ್ಯಃ' ಎಂಬ ಶ್ರುತಿಗೆ ಪರಮಾತ್ಮನು ಪರಮ ಪಾಟವಾಪನ್ನ ಧ್ಯಾನ ವಿಷಯವೆಂದು ಲಾಕ್ಷಣಿಕವಾದ ಅರ್ಥವನ್ನು ಅವರು ಹೇಳುತ್ತಾರೆ ಅರ್ಜುನನಿಗೆ ದಿವ್ಯ ಚಕ್ಷುಸ್ಸಿನಿಂದ ವಿಶ್ವರೂಪ ದರ್ಶನವು ಗೀತೆಯಲ್ಲಿ ಹೇಳಲ್ಪಟ್ಟಿದೆ ಅದು ವಿಶಿಷ್ಟರೂಪೇಣ ಹೊರತು ಸ್ವರೂಪತ್ವೇ ಸಾಕ್ಷಾತ್ಕಾರವು ಅಲ್ಲ. ಈ ರೀತಿಯಾದ ಅವರ ಸಿದ್ಧಾಂತವು ಯುಕ್ತವೋ?

---

೧೧ 1 ದಮ ಇಂದ್ರಿಯನಿಗ್ರಹಃ । ತತ್ಸಂಬಂಧಿನೋ ದಾಮಾಃ । ದಮಯತಿ ಮರ್ದಯತಿ ದೈತ್ಯಾನಿತಿ ದಾಮೋ ವಿಷ್ಣುಃ 'ಉಗ್ರಮುಗ್ರಂ ದಮಯನ್ನಿತಿ' ಶ್ರುತೇಃ। ತತ್ಸಂ-ಬಂಧಿನೋ ದಾಮಾ ವಾ ಭಗವದ್ಭಕ್ತಜನಾಃ । ತೇಷಾಮುದೇನ ತತ್ಸಮರ್ಪಿತೋದಕೇನ, ಉಪಲಕ್ಷಣಮೇತತ್ 'ಪತ್ರಂ ಪುಷ್ಪಂ ಫಲಂ ತೋಯಮ್'ಇತಿ ಪತ್ರಪುಷ್ಪಫಲಾದಿನಾ ರಮಂತೇ ಪರಿತುಷ್ಯತೀತಿ ದಾಮೋದರಃ । –ವಿ. ಷ. ಟೀ.

೧೨ 2 ದಮ್ಯಂತೇ ಹರಿಣಾ ಹನ್ಯಂತೇ ಬ್ರಹ್ಮಾದಯೋಽಸ್ಮಿನ್ನಿತಿ ದಮಃ ಪ್ರಲಯಕಾಲಃ ತಸ್ಯ ಸಂಬಂಧಿ ದಾಮಂ ತಚ್ಚೋದಂ ಚ ದಾಮೋದಂ ಪ್ರಲಯಜಲಂ ತಸ್ಮಿನ್ ರಮತ ಇತಿ ದಾಮೋದರಃ । –ವಿ ಷ. ಟೀ

೧೩ 3 ದುಷ್ಟಾನ್ ದಮಯತೀತಿ ದಾಮಃ ಉದರ್ಪಯತಿ ಉತ್ಕೃಷ್ಟತ್ವೇನ ಜ್ಞಾಪಯತೀತಿ ಉದರಃ । 'ಋ ಗತೌ' ಣಿಚ್ । ದಾಮಶ್ಚಾಸೌ ಉದರಶ್ಚ ದಾಮೋದರಃ ।

ಉ - ಪರಮಾತ್ಮನಿಗೆ ತನ್ನ ಸ್ವರೂಪದ ಸಾಕ್ಷಾತ್ಕಾರವು ಉಂಟೋ ಇಲ್ಲವೋ? ಅವನಿಗೂ ತನ್ನ ಸ್ವರೂಪದ ಸಾಕ್ಷಾತ್ಕಾರವು ಇಲ್ಲವೆಂದರೆ ಪರಮಾತ್ಮನು ಸರ್ವ ಸಾಕ್ಷಾತ್ಕಾರವುಳ್ಳವನಲ್ಲವಾದ್ದರಿಂದ ಅವನನ್ನು ಸರ್ವಜ್ಞ ಎಂದು ಹೇಳಬಾರದು ಎಂದು ಆಯಿತು. ಪರಮಾತ್ಮನಿಗೆ ಇರುವ ಎಲ್ಲ ವಸ್ತುವಿನ ಸಾಕ್ಷಾತ್ಕಾರವು ಇಲ್ಲವಾದರೆ ಅವನಿಗೆ ತನ್ನ ಸ್ವರೂಪದ ಜ್ಞಾನವು ಇಲ್ಲವೆಂದು ಹೇಳಬೇಕಾಗುತ್ತದೆ ಅವನು ರೂಪರಹಿತನಾದರೂ ಅವ್ಯಕ್ತನೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟರೂ ಅವನಿಗೆ ತನ್ನ ಸ್ವರೂಪದ ಸಾಕ್ಷಾತ್ಕಾರವು ಇರುವದಾದರೆ ಅದರಂತೆ ಇತರ ಜ್ಞಾನಿಗಳಿಗೂ ದಿವ್ಯ ಚಕ್ಷುಸ್ಸಿನಿಂದ ಅವನ ಸ್ವರೂಪದ ಸಾಕ್ಷಾತ್ಕಾರವು ಏಕೆ ಇರಬಾರದು ನಿಷ್ಕಾರಣವಾಗಿ 'ದ್ರಷ್ಟವ್ಯಃ ಎಂಬ ಶ್ರುತಿಗೆ ಲಾಕ್ಷಣಿಕಾರ್ಥವನ್ನು ಏಕೆ ಹೇಳಬೇಕು ಅದ್ದರಿಂದ ರಾಮಾನುಜಾಚಾರ್ಯರ ಆ ಸಿದ್ಧಾಂತವು ಅಯುಕ್ತ



## ೩೭೮ ಸಹಃ

೧ ನಿಷ್ಠುರವನ್ನು ಸಹಿಸಿಕೊಳ್ಳುವ ಸಾಮರ್ಥ್ಯ ಸ್ವರೂಪವಾಗಿ ಉಳ್ಳವನು[1]

ಧರಣೀದೇವಿಯು ಭಗವಂತನ ಅಸಾಧಾರಣಗುಣಗಳಾಗಿ ಉಲ್ಲೇಖಿಸಿರುವ ನಲ್ವತ್ತು ಗುಣಗಳಲ್ಲಿ 'ಸಹ' ಎನಿಸುವ ಗುಣವೂ ಒಂದಾಗಿದೆ[2] ಈ ಗುಣಗಳು ನಿತ್ಯವೂ ಭಗವಂತನಲ್ಲಿರುವವು, ಎಂದೆಂದೂ ಮತ್ತೊಬ್ಬರು ಹೊಂದುವಂತಿಲ್ಲ[3]—ಎನ್ನುವುದರ ಮೂಲಕ ಇವು ಭಗವಂತನ ಸ್ವರೂಪಾತ್ಮಕಗಳೆಂಬುದನ್ನು ಸೂಚಿಸಿರುವಳು.[4]

---

೧ 1 ನಿಷ್ಠುರಸಹನಶಕ್ತಿಃ ಸಹಃ ತತ್ಸ್ವರೂಪತ್ವಾತ್ ಭಗವಾನ್ ಸಹಃ ।

2 ಪ್ರಾಗಲ್ಭ್ಯಂ ಪ್ರಶ್ರಯಃ ಶೀಲಂ ಸಹ ಓಜೋ ಬಲಂ ಭಗಃ ।
-ಭಾಗ. 1-16-28

ಸಹಃ ನಿಷ್ಠುರಸಹನಶಕ್ತಿಃ । -ಪ್ರಾಚೀನವ್ಯಾ ।

3 ಇಮೇ ಚಾನ್ಯೇ ಚ ಭಗವನ್ ನಿತ್ಯಾ ಯತ್ರ ಮಹಾಗುಣಾಃ ।...ನಚ ಯಾಂತಿ ಸ್ಮ ಕರ್ಹಿಚಿತ್ ॥ -ಭಾಗ. 1-16-29

4 'ಗುಣೈಃ ಸ್ವರೂಪಭೂತೈಸ್ತು ಗುಣ್ಯಸೌ ಹರಿರೀಶ್ವರಃ । ನ ವಿಷ್ಣೋರ್ನ ಚ ಮುಕ್ತಾನಾಂ ಕ್ವಾಪಿ ಭಿನ್ನೋ ಗುಣೋ ಮತಃ
-ಬ್ರಹ್ಮತರ್ಕ (ಭಾಗ. ತಾ. ನಿ. 1-16-29)

ಎಲ್ಲವನ್ನೂ ನಿರ್ವಹಿಸುವ ಭಗವಂತನ ಪಾಲಿಗೆ ಎಲ್ಲವೂ ಪ್ರಿಯವಾದುದೇ. ಅಪ್ರಿಯ ಎಂಬುದೇ ಇಲ್ಲ.[1] ಆದುದರಿಂದ ಅವನ ಪಾಲಿಗೆ ನಿಷ್ಠುರವನ್ನು ಸಹಿಸಿಕೊಳ್ಳಬೇಕಾದ ಸಂದರ್ಭವೇ ದುರ್ಲಭ. ಆದರೂ ಸರ್ವಗುಣ ಪರಿಪೂರ್ಣನಾದ ಅವನಲ್ಲಿ ಈ ಗುಣವೂ ಇದ್ದೇ ಇದೆ ಅವನು ತನ್ನ ರಾಮಕೃಷ್ಣಾದ್ಯವತಾರಗಳಲ್ಲಿ ಈ ಗುಣವನ್ನು ಪ್ರಕಟಪಡಿಸಿರುವನು

೨ ಪರಾಜಯಗೊಳ್ಳದಿರಲು ಬೇಕಾದ ಸಾಮರ್ಥ್ಯಪ್ರದಾನರೂಪವಾದ ಗುಣವೇ ಸ್ವರೂಪವಾಗಿ ಉಳ್ಳವನು[2]

ಮಹಾಭಾರತವು ಪರಾಜಯಬಾರದಿರುವಂತೆ ಶಕ್ತಿಯನ್ನು ನೀಡುವ ಪ್ರಯುಕ್ತ ಪ್ರಾಣನನ್ನು 'ಸಹಃ' ಎಂದು ಕರೆದಿದೆ[3] ಪ್ರಾಣನಿಗೆ ಬಿಂಬರೂಪಿಯಾಗಿರುವ[4] ಭಗವಂತನು ಅವನಿಗಿಂತಲೂ ಮುಖ್ಯವಾಗಿ ಈ ಗುಣವನ್ನು ಹೊಂದಿರುವ ಪ್ರಯುಕ್ತ ಪ್ರಧಾನವಾಗಿ 'ಸಹಃ' ಎನಿಸಿರುವನು

೩ ಭಕ್ತರ ಅಪರಾಧಗಳನ್ನೆಲ್ಲ ಸಹಿಸಿಕೊಳ್ಳುವವನು[5]

---

1 ಪ್ರಿಯಮೇವ ಯತಃ ಸರ್ವಮಪ್ರಿಯಂ ನಾಸ್ತಿ ಕುತ್ರಚಿತ್ । ಸ್ವಯಮೇವ ಯತಃ ಕರ್ತಾ ಶಾಂತೋಽತೋ ಹರಿರೀಶ್ವರಃ -ಬ್ರಹ್ಮತರ್ಕ (ಭಾಗ ತಾ. ನಿ. 1-16-26)

೨ 2 ಅನಭಿಭವಶಕ್ತಿದತ್ವಗುಣಾತ್ಮಕತ್ವಾತ್ ಸಹಃ ।

3 ..ಅನಭಿಭಾವ್ಯತ್ವಾತ್ ಸಹಶ್ಚ ವಾಯುರುಚ್ಯತೇ

-ಮಹಾಭಾರತ (ಭಾಗ. ತಾ ನಿ. 2-5-25)

* ಅನಭಿಭವಶಕ್ತಿದತ್ವಾತ್ ಸಹ ಇತಿ । . .ಏತದ್ಗುಣಾತ್ಮಕೋಽನಿಲ ಇತಿ ತಾತ್ಪರ್ಯಂ- —ಅನಂತತೀರ್ಥಾಃ ।

4 'ಆಭಾಸಕೋಽಸ್ಯ ಪವನಃ ' -ಮ. ಭಾರ. ತಾ. ನಿ. 1-14

೩ 5 ಸಹತೇ ಸರ್ವಾನ್ ಭಕ್ತಾಪರಾಧಾನ್ ಕ್ಷಮತ ಇತಿ ಸಹಃ ।

* ತದ್ (ಯಶೋದಾ) ಬಂಧನತರ್ಜನಭರ್ತ್ಸನಾದಿಕಂ ಸಹತ ಇತಿ ಸಹಃ ।

-ಪ. ಭ.

ಭಗವತಃ ಭಕ್ತಾಪರಾಧಸಹಿಷ್ಣುತ್ವಮಧಿಕೃತ್ಯ ೧೪೮ ತಮಸ್ಯ 'ಸಹಿಷ್ಣುಃ' ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಮ್ ।

೪ ಎಲ್ಲರನ್ನೂ ಎದುರಿಸುವವನು.[1]

೫ ಗುಣಪೂರ್ಣನಾಗಿದ್ದು ಸಾರ ಎನಿಸಿರುವವನು ಮತ್ತು ಸಕಲ ದೋಷಗಳಿಂದ ದೂರನಾದವನು.[2]

ಭಗವಂತನು ನಿತ್ಯ ಸಕಲ ದೋಷಗಳಿಂದ ಹೀನನಾಗಿರುವುದರಿಂದಲೂ, ಸಾರರೂಪನಾಗಿರುವುದರಿಂದಲೂ 'ಹಂಸ' ಎನಿಸಿರುವನೆಂದು ಮಹಾಕೌರ್ಮ ತಿಳಿಸಿದೆ.[3]

೬ (ಪರಿಪೂರ್ಣವಾದ) ಸರ್ವವನ್ನೂ ಅಥವಾ ಸಾರವನ್ನೂ ಹೊಂದಿರುವವನು.[4]

ಭಗವಂತನು ತಾನು ಹೊಂದಲು ಯೋಗ್ಯವಾದ ಪೂರ್ಣವಾದ, ಸರ್ವೋತ್ಕೃಷ್ಟವಾದ ಸಾರವನ್ನು ಪೊಂದಿರುವುದರಿಂದಲೇ 'ಪರಮ ಹಂಸ' ಎಂದೆನಿಸಿರುವನೆಂದು ಗಾರುಡನಲ್ಲಿ ತಿಳಿಸಿರುವನು.[5]

೭ ಸಾರಪದಾರ್ಥಗಳನ್ನು ನಿಯಾಮಕನಾಗಿ ಹೊಂದಿರುವವನು[6]

ಭಗವಂತನು ತನ್ನ ವಿಭೂತಿರೂಪಗಳಿಂದ ಶ್ರೇಷ್ಠ ಪದಾರ್ಥಗಳಲ್ಲಿ ಇದ್ದು, ಶ್ರೇಷ್ಠವೆನಿಸುವಂತೆ ನಿಯಮಿಸುತ್ತಿರುವನು

---

೪ 1 ಸಹತೇ ಸರ್ವಾನ್ ಅಭಿಭವತೀತಿ ಸಹಃ ।

ಭಗವತಃ ಸರ್ವಾಭಿಭವಮಧಿಕೃತ್ಯ ೫೭೫ ತಮಸ್ಯ ಸಹಿಷ್ಣು ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಮ್ ।

೫ 2 ಸಾರತ್ವಾತ್ ಸಃ । ಸಕಲದೋಷಹೀನತ್ವಾತ್ ಹಃ । ಸಶ್ಚಾಸೌ ಹಶ್ಚ ಸಹಃ ।

3 'ನಿತ್ಯಂ ಹೀನೋಽಖಿಲೈರ್ದೋಷೈಃ ಸಾರರೂಪೋ ಯತೋ ಹರಿಃ । ಹಂಸ ಇತ್ಯುಚ್ಯತೇ ತಸ್ಮಾತ್ ..' –ಮಹಾಕೌರ್ಮ (ಕಾ. ಉ. ಭಾ. 2-2-1)

೬ 4 ಸಂ ಪರಿಪೂರ್ಣಂ ಸರ್ವಂ ಸಾರಮಿತಿ ವಾ ಹಂತಿ ಪ್ರಾಪ್ನೋತೀತಿ ಸಹಃ । 'ಹನ ಗತೌ' ।

5 ಶ್ರೀ ಭಗವಾನುವಾಚ । ಪರೋ ಹಂಸೋಽಹಮೇವೈಕೋ.. ಪ್ರಾಪ್ಯಂ ಪ್ರಾಪ್ತಂ ಯತೋ ಽತ್ಯರ್ಥ ಪೂರ್ಣಂ ಸರ್ವೋತ್ತಮಂ ಮಯಾ । ಅತಃ ಪರಮಹಂಸೋಽಹಂ...' –ಗಾರುಡ (ಭಾಗ. ತಾ. ನಿ. 10–94–40)

೭ 6 ಸಕಾರಃ ಸಾರವಾಚಕಃ । ಸಾರಾನ್ ಪದಾರ್ಥಾನ್ ಹಂತಿ ನಿಯಾಮಕತಯಾ ಗಚ್ಛತೀತಿ ಸಹಃ ।

## ಜಿಜ್ಞಾಸೆ

[ದೋಷವಲ್ಲ; ಗುಣ]

ಪ್ರ – ಪರಮಾತ್ಮನು ದೋಷರಹಿತನು ಹೇಗೆ? ಅವನಲ್ಲಿ ವೈಷಮ್ಯ ನೈರ್ಘೃಣ್ಯಗಳೆಂಬ ದೋಷಗಳನ್ನು ಬ್ರಹ್ಮಸೂತ್ರದಲ್ಲಿ 'ಉಪಪದ್ಯತೇ ಚಾಪ್ಯುಪಲಭ್ಯತೇ ಚ' । ಎಂಬಲ್ಲಿ ಒಪ್ಪಿದ್ದಾರೆ ಅಲ್ಲವೆ?

ಉ – ಬ್ರಹ್ಮಸೂತ್ರದಲ್ಲಿ ಪರಮಾತ್ಮನಲ್ಲಿ ವೈಷಮ್ಯ ನೈರ್ಘೃಣ್ಯಗಳನ್ನು ಒಪ್ಪಿದ್ದು ಹೌದು ಆದರೆ ಅದು ಅವನಲ್ಲಿ ದೋಷವಾಗುವದಿಲ್ಲ ಎಂದು ನಿರ್ಣಯಿಸಿದ್ದಾರೆ ಅದು ಹೇಗೆಂದರೆ ನ್ಯಾಯಾಧೀಶನು ನ್ಯಾಯ ಸ್ಥಾನದಲ್ಲಿ ಸರಿಯಾಗಿ ವಿಚಾರ ಮಾಡಿ ವ್ಯಕ್ತಿಯು ದೊಡ್ಡ ಅಪರಾಧಿ ಎಂದು ನಿರ್ಣಯಿಸಿದ ನಂತರ ಆ ವ್ಯಕ್ತಿಗೆ ಅವನ ಅಪರಾಧಕ್ಕೆಅನುಗುಣವಾದ ಜೀವಾವಧಿ ಶಿಕ್ಷೆಯನ್ನು ವಿಧಿಸಿದಾಗ ಆ ನ್ಯಾಯಾಧೀಶನಿಗೆ ನಿರ್ದಯತ್ವವು ಇದ್ದರೂ ಅದು ದೋಷವು ಅಲ್ಲ. ಅದರಂತೆ ಪರಮಾತ್ಮನು ಒಂದು ಜೀವನಿಂದ ಒಳ್ಳೆ ಕರ್ಮವನ್ನು ಮಾಡಿಸಿ ಆದಕ್ಕೆ ಫಲವಾಗಿ ಒಳ್ಳೆ ಸುಖವನ್ನು ಕೊಡುತ್ತಾನೆ ಹಾಗೆಯೇ ಅವನು ಇನ್ನೊಬ್ಬನಿಂದ ಪಾಪಕರ್ಮವನ್ನು ಮಾಡಿಸಿ ನರಕ ದುಃಖವನ್ನು ಕೊಡುತ್ತಾನೆ. ಇದು ವೈಷಮ್ಯ ನೈರ್ಘೃಣ್ಯ- ಆದರೆ ಪರಮಾತ್ಮನು ಆ ಜೀವರ ಅನಾದಿಯಾದ ಜೀವಸ್ವರೂಪ ಯೋಗ್ಯತೆಗೆ ಅನುಗುಣವಾಗಿ ಸತ್ಕರ್ಮಗಳನ್ನು ಮಾಡಿಸಿ ಆಯಾಯ ಕರ್ಮದ ಫಲವನ್ನಾಗಿ ಸುಖದುಃಖಗಳನ್ನು ಕೊಡುತ್ತಾನೆ. ಆದ್ದರಿಂದ ಅದು ಅವನಿಗೆ ದೋಷವಲ್ಲ ವೇದಗಳಲ್ಲಿ ಪರಮಾತ್ಮನು ಹಾಗೆ ಮಾಡುವದು ಅವನ ಗುಣ ಎಂದು ನಿರ್ಣಯಿಸಲಾಗಿದೆ



### ೩೭೦ ಮಹೀಧರಃ

೧ ಭೂದೇವಿಯು ಜಗತ್ತನ್ನು ಧರಿಸುವಂತೆ ಅನುಗ್ರಹಿಸಿರುವವನು[1]

ಭಗವಂತನ ನಿಯತಿಗೆ ಒಳಗಾಗಿಯೇ ಗಿರಿಗಳಿಂದ ಸಹಿತವಾದ ಭೂಮಿಯು ಮುಳುಗದೆ ಜಗತ್ತಿಗೆ ಧಾರಕವಾಗಿದೆ ಎಂದು ಕಪಿಲನಾಮಕ ಭಗವಂತನು ಉಪದೇಶಿಸಿರುವನು.[2] ಧರಣೀದೇವಿಯು ಭಗವಂತನಲ್ಲಿ ಹೀಗೆ ಪ್ರಾರ್ಥಿಸಿಕೊಳ್ಳುವನು—'ಪ್ರಾಣಿಗಳ ಭುವನವನ್ನು ನೀನೇ ಧರಿಸುವಿ. ಮತ್ತು

---

೧ 1 ಮಹೀ ಭೂಮಿಃ ಧರಾ ಜಗದ್ಧಾರಯಿತ್ರೀ ಯೇನ ಸಃ ಮಹೀಧರಃ ।

—ನಾ. ರಾ.

2 ಸಗಿರಿಭಿರ್ಭೂರ್ನ ಮಜ್ಜತಿ ಯದ್ಭಯಾತ್ ।

-ಭಾಗ. 3-29-42

ಪೋಷಿಸುವಿ. ನಿನ್ನ ಬಲ ಮತ್ತು ತೇಜಸ್ಸುಗಳಿಂದ ಧೃತವಾದದ್ದನ್ನು ನಿನ್ನ ಅನುಗ್ರಹದಿಂದ ನಾನು ಧರಿಸುವೆನಷ್ಟೇ ನೀನು ಧರಿಸಿದ್ದನ್ನೇ ನಾನು ಧರಿಸುವೆನು ಹೊರತು ನಿನ್ನಿಂದ ಧೃತವಾಗದದ್ದನ್ನು ನಾನು ಧರಿಸಲಾರೆ[1] ಭೂದೇವಿ ಭಗವದನುಗ್ರಹದಿಂದಲೇ ಜಗತ್ತನ್ನು ಧರಿಸಿ ಕೊಂಡಿರುವಳೆಂಬುದು ಇದರಿಂದ ಸ್ಪಷ್ಟವಾಗುವುದು

೨ ಪೂಜೆಯನ್ನು ಧರಿಸಿಕೊಂಡಿರುವವನು[2]

ತಂದೆಯು ಶಿಶುವಿನ ಮೂಲಕ ತನ್ನ ಪ್ರಣಾಮವನ್ನು ಮಾಡಿಸಿಕೊಂಡಂತೆ ಭಗವಂತನು ತನ್ನ ಪೂಜೆಯನ್ನು ಜೀವಾತ್ಮರ ಮೂಲಕ ಮಾಡಿಸಿಕೊಳ್ಳುವನು. ಹೀಗೆ ಜೀವರ ಮೂಲಕ ನಡೆಯುವ ಭಗವಂತನ ಪೂಜೆ ಅವನಿಗೆ ಅಧೀನವಾಗಿರುವುದಾದರೂ ಜೀವಾತ್ಮರು ಅದಕ್ಕೆ ಮಾಧ್ಯಮ ಆಗಿರುವ ಪ್ರಯುಕ್ತ ಜೀವಕೃತ ಪೂಜೆ ಎಂದು ವ್ಯವಹರಿಸಲ್ಪಡುವುದೆಂದು ತಿಳಿಸುವ 'ಪ್ರವೃತ್ತಿ'[3]ವು ಭಗವಂತನ ಪೂಜೆಗೆ ಮುಖ್ಯಾಧಾರ ಭಗವಂತನೇ ಎಂಬುದನ್ನು ಸೂಚಿಸಿಕೊಡುವುದು.

೩ ಪೂಜೆಯನ್ನು ನೀಡುವವರಲ್ಲಿ ಕ್ರೀಡಿಸುವವನು[4]

ಶ್ರೀಬ್ರಹ್ಮರುದ್ರ ಮುಂತಾದವರಲ್ಲಿ ಅವರವರ ಯೋಗ್ಯತೆಗನುಗುಣವಾಗಿ ಇರುವ ಭಗವಂತನು ಅವರ ಮೂಲಕ ತನ್ನನ್ನು ತಾನೇ ಅರ್ಚಿಸಿಕೊಳ್ಳುವ[5] ಮೂಲಕ ಕ್ರೀಡಿಸುವನು.

---

1 ತ್ವಂ ಧಾರಯಸಿ ಭೂತಾನಾಂ ಭುವನಂ ತ್ವಂ ಬಿಭರ್ಷಿ ಚ। ಯತ್ ತ್ವಯಾ ಧಾರ್ಯತೇ ಕಿಂಚಿತ್ ತೇಜಸಾ ಚ ಬಲೇನ ಚ । ತತಸ್ತವ ಪ್ರಸಾದೇನ ಮಯಾ ಪಶ್ಚಾತ್ತು ಧಾರ್ಯತೇ ॥ ತ್ವಯಾ ಧೃತಂ ಧಾರಯಾಮಿ ನಾಧೃತಂ ಧಾರಯಾಮ್ಯಹಮ್ ।

–ಹರಿವಂಶ. ಭವಿಷ್ಯ 34-19,20,21

೨ 2 ಮಹೀಂ ಪೂಜಾಂ ಧರತೀತಿ ಮಹೀಧರಃ । –ಶಾಂ. ಭಾ.

3 ಸ್ತವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಮ್ । ಏವಂ ಪೂಜಾ ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪಿ—ಪ್ರವೃತ್ತಿ (ಗೀ. ತಾ. 5-10)

೩ 4 ಮಹೀಂ ಪೂಜಾಂ ದಧತೇ ದದತೀತಿ ಮಹೀಧಾಃ । ಧಾಞ್ ದಾನೇ । ತೇಷು ರಮತ ಇತಿ ಮಹೀಧರಃ ।

5 ಶ್ರೀಬ್ರಹ್ಮರುದ್ರಪೂರ್ವೇಷು ಕ್ರಮಾತ್ ಸ್ಥಿತ್ವಾ ಜನಾರ್ದನಃ। ಸ್ವಾತ್ಮಾನಮರ್ಚಯತಿ...

–ತಂತ್ರಭಾಗವತ (ಭಾಗ. ತಾ. ನಿ. 10-94-20)

ಳ ಪೂಜೆಯನ್ನು ನೀಡುವವರನ್ನು ಆನಂದಪಡಿಸುವವನು[1]

ಭಗವಂತನು ತನ್ನನ್ನು ಅರ್ಚಿಸಿದವರಿಗೆ ನಾಲ್ಕು ಪುರುಷಾರ್ಥಗಳಲ್ಲಿ ಯಾವುದನ್ನು ಬೇಕಾದರೂ ಅನುಗ್ರಹಿಸಿ ಆನಂದಪಡಿಸುವವನು ಆದ್ದರಿಂದಲೇ ಮಾರ್ಕಂಡೇಯರು—ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ಸಾಧನೆಗೆ ಹೃಷೀಕೇಶನ ಅರ್ಚನೆಯು ಹೊರತಾಗಿ ಬೇರೆ ಉಪಾಯವಿಲ್ಲ—ಎಂದು ದೃಢವಾಗಿ ಸಾರಿರುವರು[2]

೫ ಉತ್ಸವಗಳಿಗೆ ನಿಯಾಮಕನಾಗಿರುವವನು ಮತ್ತು ಚಲನೆಗೆ ಅಥವಾ ಬುದ್ಧಿಗೆ ಧಾರಕನಾಗಿರುವವನು.[3]

ನಮ್ಮ ಚಲನೆಗೆ, ಜ್ಞಾನಕ್ಕೆ ಪ್ರೇರಕನಾದ ಭಗವಂತನೇ ದುಃಖವನ್ನು ಪರಿಹರಿಸಿ ಸುಖದ ವಾತಾವರಣವನ್ನು ಕಲ್ಪಿಸಿಕೊಡುವ ಮೂಲಕ ನಮ್ಮ ಪಾಲಿಗೆ ಉತ್ಸವಗಳನ್ನು' ಅನುಗ್ರಹಿಸುವನು ಆದುದರಿಂದಲೇ ಮಂಗಲಾಯತನನಾದ ಅಂತಹ ಭಗವಂತನನ್ನು ಹೃದಯದಲ್ಲಿ ಧರಿಸಿಕೊಂಡವರ ಪಾಲಿಗೆ ನಿತ್ಯೋತ್ಸವವು ಸಂಭವಿಸುವುದೆಂದು ಸಂದೇಶಿಸಲಾಗಿದೆ[4]

ಓ ಮಾಹಾತ್ಮ್ಯ ಮತ್ತು ಚಲನೆ ಅಥವಾ ಜ್ಞಾನ ಇವುಗಳ ಧಾರಕನಾಗಿರುವವನು[5]

---

ಳ 1 ಮಹೀಂ ಪೂಜಾಂ ದಧತೇ ದದತೀತಿ ಮಹಿಧಾಃ। 'ಧಾಞ್ ದಾನೇ'। ತಾನ್ ರಮಯತೀತಿ ಮಹೀಧ್ರಃ ।

2 ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಪಾಯೋಸ್ತಿ ವಿದ್ಯತೇ ।
ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ ॥
-ಕೃ ವ. 21

೫ 3 ' ಮಹ ಉತ್ಸವತೇಜಸೋಃ ಇತಿ ಮಹಾಃ ಉತ್ಸವಾಃ ಅಸ್ಯ ನಿಯಮ್ಯತಯಾ ಸಂತೀತಿ ಮಹೀ ಉತ್ಸವನಿಯಾಮಕ ಇತ್ಯಭಿಪ್ರಾಯಃ। ಇಂ ಗತಿಂ ಚಲನಂ ಜ್ಞಾನಂ ವಾ ಧರತೀತಿ ಇಧರಃ । ಇಣ್ ಗತೌ। ಮಹೀ ಚಾಸೌ ಇಧರಶ್ಚ ಮಹೀಧರಃ ।

4 ನಿತ್ಯೋತ್ಸವೋ ನಿತ್ಯತಾ ಚ ನಿತ್ಯಶ್ರೀರ್ನಿತ್ಯಶೋ ಜಯಃ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥
-ಕೃ. ಮ 205

ಓ 5 'ಮಹೀತ್ಯುಕ್ತಂ ಹಿ ಮಾಹಾತ್ಮ್ಯಂ '(ಬೃ. ಉ. ಭಾ. 5-9-2) ಇತ್ಯುಕ್ತದಿಶಾ ಮಹೀಃ ಮಾಹಾತ್ಮ್ಯಂ ಇಃ ಗತಿಃ ಜ್ಞಾನಂ ವಾ । ಮಹಿಶ್ಚ ಇಶ್ಚ ಮಹೀ। ತಯೋಃ ಧರಃ ಮಹೀಧರಃ ।

ಎಲ್ಲರ ಚಲನೆ ಹಾಗೂ ಜ್ಞಾನಗಳನ್ನು ಧರಿಸಿಕೊಂಡಿರುವ ಭಗವಂತ ಅವುಗಳ ಮೂಲಕ ಪ್ರಕಟವಾಗುವ ಎಲ್ಲರ ಮಾಹಾತ್ಮ್ಯಕ್ಕೂ ಧಾರಕನಾಗಿರುವನು

೭ ತೇಜಸ್ವಿಗಳಾದ ಹಾಗೂ ಜ್ಞಾನಪ್ರದರಾದ ತತ್ತ್ವಾಭಿಮಾನಿ ದೇವತೆಗಳಲ್ಲಿ ಕ್ರೀಡಿಸುವವನು ಅಥವಾ ಅವರನ್ನು ಆನಂದಪಡಿಸುವವನು[1]

[ಅರ್ಥವಿಶೇಷಗಳನ್ನು ೩೨೮ನೇಯ 'ಮಹೀಧರ'ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

## ಜಿಜ್ಞಾಸ

### [ಅಮೃತಪಾನದ ಆನಂದದಂತೆ]

ಪ್ರ - ಭಗವಂತನನ್ನು ಪ್ರತ್ಯಕ್ಷದರ್ಶನ ಪಡೆದ ಮಹಾಜ್ಞಾನಿಗಳು ಎಲ್ಲರೂ ನಿತ್ಯೋತ್ಸವವುಳ್ಳವರೆಂದು ಹೇಳಬಹುದೇ? ಪ್ರಹ್ಲಾದನು ಮಹಾಜ್ಞಾನಿ ಆದರೂ ತಂದೆಯಾದ ಹಿರಣ್ಯಕಶಿಪು ಪ್ರಹ್ಲಾದನಿಗೆ ವಿಷಪಾನ ಮಾಡಿಸುವದೇ ಮೊದಲಾದ ಕಷ್ಟಗಳನ್ನು ಕೊಟ್ಟಿದ್ದಾನೆಯಲ್ಲವೆ?

ಉ ಮಹಾ ಜ್ಞಾನಿಗಳಿಗೆ ಹೃದಯಗುಹೆಯಲ್ಲಿ ಭಗವಂತನನ್ನು ನೋಡುತ್ತಾ ಇರೋಣದರಿಂದ ಮಹಾನಂದವು ಇರುತ್ತದೆ ಅಮೃತವನ್ನು ಕುಡಿಯುತ್ತಿರುವಾಗ ಒಂದು ಸಣ್ಣ ಇರುವೆಯು ಕಚ್ಚಿದರೂ ಅದರಿಂದ ದುಃಖಲೇಶವು ಆದರೂ ಅಮೃತ ಪಾನದ ಆನಂದದಲ್ಲಿ ಹೇಗೆ ಅದು ಗಣನೀಯವಲ್ಲವೋ ಹಾಗೆ ಪ್ರಹ್ಲಾದನಂತಹ ಮಹಾ ಜ್ಞಾನಿಗಳಿಗೆ ಭಗವದ್ದರ್ಶನದ ಮಹಾನಂದವು ಇದ್ದುದ್ದರಿಂದ ಹಿರಣ್ಯಕಶಿಪು ಕೊಡುವ ಕಷ್ಟವು ಗಣನೀಯವೇ ಆಗಿಲ್ಲ



## ೩೭೧ ಮಹಾಭಾಗಃ

೧ ಮಹತ್ತ್ವಪೂರ್ಣಗಳಾದ ಸ್ವರೂಪಾಂಶಗಳು ಉಳ್ಳವನು.[2]

---

೭ 1 ಮಹಃ ತೇಜಃ ಯೇಷಾಂ ಅಸ್ತೀತಿ ಮಹಿನಃ ತೇಜಸ್ವಿನಃ । ಇಂ ಜೀವೇಭ್ಯಃ ಜ್ಞಾನಂ ದಧತೇ ದದತೀತಿ ಇಧಾಃ । ಮಹಿನಶ್ಚ ತೇ ಇಧಾಶ್ಚ ಮಹೀಧಾಃ । ತೇಷು ರಮತ ಇತಿ ತಾನ್ ರಮಯತೀತಿ ವಾ ಮಹೀಧರಃ ।

೧ 2 ಮಹಾಂತಃ ಭಾಗಾಃ ಸ್ವರೂಪಾಂಶಾಃ ಯಸ್ಯ ಸಃ ಮಹಾಭಾಗಃ । 'ಅಂಶಭಾಗೌ ತು ವಂಟಕೇ' -ಅ. ಕೋ.

ಭಗವಂತನಿಗೆ ಪ್ರತಿಬಿಂಬಾಂಶಗಳು ಹಾಗೂ ಸ್ವರೂಪಾಂಶಗಳು ಎಂಬುದಾಗಿ ಎರಡು ರೀತಿಯ ಅಂಶಗಳಿವೆ ಜೀವಾತ್ಮರು ಪ್ರತಿಬಿಂಬಾಂಶಗಳಾದರೆ ಅವನ ಪ್ರಾದುರ್ಭಾವರೂಪಗಳು ಸ್ವರೂಪಾಂಶಗಳೆನಿಸಿವೆ. ಪ್ರತಿಬಿಂಬಾಂಶಗಳಲ್ಲಿ ಭಗವಂತನ ಅಲ್ಪ ಸಾಮ್ಯವಷ್ಟೇ ಇರುವುದಾದರೆ, ಸ್ವರೂಪಾಂಶಗಳು ಅವನ ಸ್ವರೂಪಾತ್ಮಕಗಳೇ ಆಗಿವೆ—ಎಂಬುದಾಗಿ ನಿರೂಪಿಸುತ್ತಿರುವ 'ವಾರಾಹ'[1]ದಲ್ಲಿ ಅವನ ಸ್ವರೂಪಾಂಶಗಳಲ್ಲಿಯ ಮಹತ್ತ್ವವು ಸೂಚಿತವಾಗಿದೆ

೨ ಮಹತ್ತತ್ತ್ವಾಭಿಮಾನಿ ಚತುರ್ಮುಖನೂ ಪ್ರತಿಬಿಂಬಾಂಶನಾಗಿ ಉಳ್ಳವನು[2]

ಲಕ್ಷ್ಮೀದೇವಿಯ ಬಳಿಕ ಭಗವಂತನ ಮುಖ್ಯ ಪ್ರತಿಬಿಂಬಾಂಶರು ಚತುರ್ಮುಖ ಮತ್ತು ವಾಯುದೇವರು[3]

೩ ಶ್ರೇಷ್ಠವಾದ (ಯಜ್ಞದ) ಭಾಗ ಉಳ್ಳವನು[4]

೪ ಯಜ್ಞದಲ್ಲಿ ಒಳ್ಳೆಯ ಭಾಗ ಉಳ್ಳವನು.[5]

ಮುಖ್ಯವಾಗಿ ಯಜ್ಞಭೋಕ್ತಾರನೆನಿಸಿರುವ ಭಗವಂತನಿಗೆ ಯಜ್ಞದಲ್ಲಿ ಶ್ರೇಷ್ಠ ಭಾಗವು ಸಲ್ಲುವುದು.

---

1 ದ್ವಿರೂಪಾವಂಶಕೌ ತಸ್ಯ ಪರಮಸ್ಯ ಹರೇರ್ವಿಭೋಃ। ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ । ಪ್ರತಿಬಿಂಬಾಂಶಕಾ ಜೀವಾಃ ಪ್ರಾದುರ್ಭಾವಾಃ ಪರೇ ಸ್ಮೃತಾಃ । ಪ್ರತಿಬಿಂಬೇಷ್ವಲ್ಪಸಾಮ್ಯಂ ಸ್ವರೂಪಾಣೀತರಾಣಿ ತು

-ವಾರಾಹ (ಬ್ರ. ಸೂ. ಭಾ. 2-3-49)

೨ 2 ಮಹಾನ್ ಮಹತ್ತತ್ತ್ವಾಭಿಮಾನೀ ಚತುರ್ಮುಖಃ ಭಾಗಃ ಪ್ರತಿಬಿಂಬಾಂಶಃ ಯಸ್ಯ ಸಃ ಮಹಾಭಾಗಃ ।

3 'ಆಭಾಸಕೋಽಸ್ಯ ಪವನಃ...' -ಮ. ಭಾರ. ತಾ ನಿ. 1-14

೩ 4 ಮಹಾನ್ ಯಜ್ಞಭಾಗಃ ಯಸ್ಯ ಸಃ ಮಹಾಭಾಗಃ ।

-ವಿ. ರಾ.

೪ 5 ಮಹೇಷು ಯಜ್ಞೇಷು ಅ ಸಮ್ಯಗ್ ಭಾಗೋ ಯಸ್ಯ ಸಃ ಮಹಾಭಾಗಃ ।

೫ ಶ್ರೇಷ್ಠವಾದ (ವಿಷಯ ಪದಾರ್ಥದ) ಭಾಗ ಉಳ್ಳವನು.[1]

ಜೀವಾತ್ಮರು ತಮ್ಮ ಇಂದ್ರಿಯಗಳ ಮೂಲಕ ವಿಷಯ ಪದಾರ್ಥಗಳನ್ನು ಸೇವಿಸುವಾಗ ಅದರಲ್ಲಿಯ ಸಾರಭಾಗವನ್ನು ಭಗವಂತನು ಸ್ವೀಕರಿಸುವನು[2]

೬ ಮಹತ್ತಾದ ಭಾಗ್ಯವನ್ನು ಅನುಗ್ರಹಿಸುವವನು[3]

೭ ಶ್ರೇಷ್ಠನಾಗಿರುವವನು ಮತ್ತು ಐಶ್ವರ್ಯಾದಿ ಷಡ್ಗುಣಗಳಿಗೆ ಆಧಾರನಾಗಿರುವವನು[4]

೮ ಶ್ರೇಷ್ಠವಾದ ಕಾಂತಿ ಉಳ್ಳ ಗೋವರ್ಧನ ಅಥವಾ ಮಂದರ ಪರ್ವತ ಉಳ್ಳವನು.[5]

೯ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನು ಐಶ್ವರ್ಯಾದಿ ಷಡ್ಗುಣಗಳಿಗೆ ಆಧಾರನಾಗುವಂತೆ ಅನುಗ್ರಹಿಸಿರುವವನು[6]

೧೦ ಮಹತ್ತ್ವಪೂರ್ಣವಾದ ಕಾಂತಿ ಉಳ್ಳವನು ಹಾಗೂ ಸ್ಥಿರನಾಗಿರುವವನು.[7]

---

೫ 1 ಮಹಾನ್ ಶ್ರೇಷ್ಠಃ ವಿಷಯಪದಾರ್ಥೇಷು ಭಾಗಃ ಯಸ್ಯ ಸಃ ಮಹಾಭಾಗಃ ।

2 ಭುಂಕ್ತೇ ಹರಿಃ ಶುಭಾನ್ ಭೋಗಾನಿಂದ್ರಿಯೇಷು ವ್ಯವಸ್ಥಿತಃ ।
—ನಾರಾಯಣಶ್ರುತಿ (ಗೀ. ತಾ )

೬ 3 ಮಹಾನ್ ಭಾಗಃ ಭಾಗ್ಯಂ ಯಸ್ಮಾತ್ ಸಃ ಮಹಾಭಾಗಃ ।

೭ 4 ಭಗಾ ಐಶ್ವರ್ಯಾದಿಷಡ್ಗುಣಾಸ್ತೇಷಾಮಾಧಾರತ್ವೇನಾಯಂ ಭಾಗೋ ಮಹಾಂಶ್ಚಾಸೌ ಭಾಗಶ್ಚೇತಿ ಮಹಾಭಾಗಃ । —ಸ ಸಂ

೮ 5 ಮಹತೀ ಭಾ ಯಸ್ಯ ಸ ಮಹಾಭಃ । ಮಹಾಭೋಽಗೋ ಗೋವರ್ಧನೋ ಮಂದರೋ ವಾ ಯಸ್ಯೇತಿ । ಸ. ಸಂ

೯ 6 ಮಹಾನ್ ಮಹತ್ತತ್ತ್ವಾಭಿಮಾನೀ ಚತುರ್ಮುಖಃ ಭಾಗಃ ಭಗಸ್ಯಾಯಂ ಐಶ್ವರ್ಯಾಧಾರಃ ಯಸ್ಮಾತ್ ಸಃ ಮಹಾಭಾಗಃ ।

೧೦ 7 ಮಹತೀ ಭಾ ಯಸ್ಯ ಸಃ ಮಹಾಭಃ । ನ ಗಚ್ಛತೀತಿ ಅಗಃ ಸ್ಥಿರ ಇತಿ ಯಾವತ್ । ಮಹಾಭಶ್ಚಾಸೌ ಅಗಶ್ಚ ಮಹಾಭಾಗಃ ।

೧೧ ಮಹತ್ತಾದ ಶೋಭೆಯನ್ನು ಹೊಂದಿರುವವನು.[1]

೧೨ ಪೂಜ್ಯನಾದವನು ಮತ್ತು ಚೆನ್ನಾಗಿ ಪ್ರಕಾಶಿಸುವವನು ಹಾಗೂ ಎಲ್ಲೆಡೆ ಇರುವವನು.[2]

೧೩ ಮಹತ್ತಾದ ಪ್ರಕಾಶವುಳ್ಳ ಸೂರ್ಯನಲ್ಲಿ ಚೆನ್ನಾಗಿ ಸನ್ನಿಹಿತನಾಗಿರುವವನು[3]

* * *

ನಾರದರು ಶ್ರೀ ವೇದವ್ಯಾಸರನ್ನು 'ಮಹಾಭಾಗ' ಎಂದೇ ಸಂಬೋಧಿಸಿರುವರು.[4]

## ಜಿಜ್ಞಾಸೆ

[ಸ್ವರೂಪಾಂಶಗಳು, ಭಿನ್ನಾಂಶಗಳು]

ಪ್ರ – ಸ್ವರೂಪಾಂಶ, ಪ್ರತಿಬಿಂಬಾಂಶ ಎಂದು ಅಂಶವು ಎರಡು ಪ್ರಕಾರವುಳ್ಳದ್ದು ಎಂದು ಪ್ರಮಾಣ ಸಿದ್ಧವಾಗಿದೆ ಆದರೆ ಅಂಶ ಶಬ್ದಕ್ಕೆ ಏಕದೇಶವೆಂದು ಅರ್ಥ. ಸ್ವರೂಪಾಂಶವು ಮತ್ತು ಪ್ರತಿಬಿಂಬಾಂಶವು ಏಕದೇಶರೂಪವು ಅಲ್ಲ. ಆದ್ದರಿಂದ ಅವುಗಳನ್ನು ಅಂಶ ಎಂದು ಹೇಗೆ ಹೇಳುವದು?

ಉ - ನಾರಾಯಣನ ಕೃಷ್ಣಕೇಶವೇ ಕೃಷ್ಣ. ನಾರಾಯಣನ ಕೃಷ್ಣಕೇಶವು ನಾರಾಯಣನಿಂದ ಅತ್ಯಂತಾ ಭಿನ್ನ ಆದುದರಿಂದ ಕೃಷ್ಣನು ಸ್ವರೂಪಾಂಶನು ಮತ್ಸ್ಯಾದಿಗಳು ನಾರಾಯಣನ ಪಾದಾದಿ ಅವಯವಗಳ ಅವತಾರವೆಂದು ಶಾಸ್ತ್ರದಲ್ಲಿ ಹೇಳದಿದ್ದರೂ ಮತ್ಸ್ಯಾದಿಗಳು ತಮ್ಮ ಎಲ್ಲ ಮಹಾತ್ಮ್ಯಗಳನ್ನು ವ್ಯಕ್ತಮಾಡಲಿಲ್ಲ ಆದುದರಿಂದ ಅವುಗಳು ಅಂಶಗಳೆಂದು ಹೇಳಲ್ಪಡುವವು.

---

೧೧ 1 ಮಹತೀ ಚ ಸಾ ಭಾ ಶೋಭಾ ಮಹಾಭಾ । ತಾಂ ಗಚ್ಛತಿ ಪ್ರಾಪ್ನೋತೀತಿ ಮಹಾಭಾಗಃ ।

೧೨ 2 ಮಹತ್ಯೇ ಪೂಜ್ಯಃ ಇತಿ ಮಹಃ । ಆ ಸಮ್ಯಕ್ ಭಾತಿ ಪ್ರಕಾಶತ ಇತಿ ಆಭಃ । ಆ ಸಮಂತಾತ್ ಗಚ್ಛತೀತಿ ಆಗಃ । ಮಹಶ್ಚಾಸೌ ಆಭಶ್ಚಾಸೌ ಆಗಶ್ಚ ಮಹಾಭಾಗಃ ।

೧೩ 3 ಮಹತೀ ಭಾ ಪ್ರಕಾಶಃ ಯಸ್ಯ ಸಃ ಮಹಾಭಃ ಸೂರ್ಯಃ । ತಂ ಆ ಸಮ್ಯಕ್ ಗಚ್ಛತಿ ಸನ್ನಿಧತ್ತೇ ಇತಿ ಮಹಾಭಾಗಃ ।

4 'ಅತೋ ಮಹಾಭಾಗ ಭವಾನಮೋಘದೃಕ್...'

-ಭಾಗ. 1-5-13

ಪ್ರತಿಬಿಂಬಾಂಶಗಳಲ್ಲಿ ನಾರಾಯಣನ ಸಾದೃಶ್ಯವು ಸ್ವಲ್ಪವೇ ಇದೆ. ಮತ್ಸ್ಯಾದಿಗಳಲ್ಲಿ ನಾರಾಯಣನ ಸಂಪೂರ್ಣ ಸಾದೃಶ್ಯವಿದೆಯಾದುದರಿಂದ ಅವುಗಳು ಸ್ವರೂಪಾಂಶಗಳಾಗಿವೆ. ಪ್ರತಿಬಿಂಬಾಂಶಗಳಲ್ಲಿ ಸ್ವಲ್ಪ ಸಾದೃಶ್ಯವಿರುವುದರಿಂದ ಅವುಗಳು ಭಿನ್ನಾಂಶಗಳು ಎಂದು ಪ್ರತಿಬಿಂಬಾಂಶಗಳೆಂದೂ ಕರೆಯಲ್ಪಡುವವು



## ೩೭೨ ವೇಗವಾನ್

೧ ಸರ್ವಾತಿಶಯವಾದ, ಪ್ರಶಂಸನೀಯವಾದ ವೇಗವನ್ನು ನಿತ್ಯ ಪಡೆದಿರುವವನು.[1]

ಸಾಮಾನ್ಯವಾಗಿ ಮನಸ್ಸಿನ ವೇಗವೇ ಉಳಿದೆಲ್ಲರ ವೇಗಕ್ಕಿಂತಲೂ ಅಧಿಕವಾದುದೆಂದು ಪ್ರಸಿದ್ಧಿ. ಆದರೆ ಭಗವಂತನು ಅಂತಹ ಮನಸ್ಸಿಗಿಂತಲೂ ಅಧಿಕವಾದ ವೇಗ ಉಳ್ಳವನೆಂಬುದಾಗಿ ಈಶಾವಾಸ್ಯೋಪನಿಷತ್ತು ಸಂದೇಶಿಸಿದೆ[2] ಅಲ್ಲದೆ, ಮುಂದೆ ಭಗವಂತನ ವೇಗಾತಿಶಯವನ್ನು ಹೀಗೆ ಪರಿಚಯಿಸಿಕೊಟ್ಟಿದೆ—'ಭಗವಂತನು ಒಂದೆಡೆ ಇದ್ದುಕೊಂಡೇ ವೇಗವಾಗಿ ಸಾಗುತ್ತಿರುವ ಉಳಿದೆಲ್ಲರನ್ನೂ ಅತಿಕ್ರಮಿಸುವನು[3]' ಭಗವಂತನು ಅಚಿಂತ್ಯಶಕ್ತಿಸಂಪನ್ನನಾಗಿರುವುದರಿಂದಲೂ, ಎಲ್ಲೆಡೆ ಇರುವವನಾದುದರಿಂದಲೂ ಇದು ಸಾಧ್ಯವೆಂಬುದಾಗಿ 'ಬ್ರಹ್ಮಾಂಡ' ವಿವರಿಸಿದೆ[4]

ಹೀಗೆ ಸರ್ವಾತಿಶಯವಾಗಿ ಉಪನಿಷತ್‌ಪ್ರಶಂಸನೀಯವಾದ ಭಗವಂತನ ವೇಗವು ಅವನ ಸ್ವರೂಪಾತ್ಮಕವಾಗಿದ್ದು[5] ಅವನಲ್ಲಿ ಯಾವಾಗಲೂ ಇದ್ದೇ ಇರುವುದು.

---

೧ 1 ವೇಗಃ ಜವಸ್ತದಸ್ಯಾಸ್ತೀತಿ ಅತಿಶಾಯನೇ, ಪ್ರಶಂಸಾಯಾಂ, ನಿತ್ಯಯೋಗೇ ಚ ಅರ್ಥವಿಶೇಷೇ ವಿವಕ್ಷಿತೇ ಮತುಬಿ ಸರ್ವಾತಿಶಯಃ ಪ್ರಶಂಸನೀಯಃ ವೇಗಃ ನಿತ್ಯಂ ಅಸ್ಯಾಸ್ತೀತಿ ಪರ್ಯವಸ್ಯತಿ ।

2 'ಅನೇಜದೇಕಂ ಮನಸೋ ಜವೀಯಃ ' —ಈ. ಉ. 1–4

ಮನಸೋಽಪಿ ಜವೀಯಃ ವೇಗವತ್ತರಮ್ । —ಈ. ಉ. ಖಂ.

3 ತದ್ ಧಾವತೋಽನ್ಯಾನತ್ಯೇತಿ ತಿಷ್ಠತ್... —ಈ. ಉ. 1–4

4 ಅಚಿಂತ್ಯಶಕ್ತಿತಶ್ಚೈವ ಸರ್ವಗತ್ವಾಚ್ಚ ತತ್ ಪರಮ್ । ದ್ರವತೋಽತ್ಯೇತಿ ಸಂತಿಷ್ಠತ್...
—ಬ್ರಹ್ಮಾಂಡ (ಈ. ಉ. ಭಾ.)

5 '...ತತ್ ಸರ್ವಂ ಭಗವಾನೇವ ಯೋ ಚ ಧರ್ಮಾ ಬಲಾದಯಃ'
—ಅ ಉ. ಭಾ. 1–3–10

೨ (ವೇಗವುಳ್ಳ ಗಾಳಿ, ಮನಸ್ಸು ಮುಂತಾದವುಗಳ) ವೇಗವನ್ನು ನಿಯಮಿಸುವವನು.[1]

ಸಕಲ ಪದಾರ್ಥಗಳ ಸರ್ವ ಧರ್ಮಗಳನ್ನೂ ನಿಯಂತ್ರಿಸುತ್ತಿರುವ[2] ಭಗವಂತನು ವೇಗವುಳ್ಳ ಗಾಳಿ, ಮನಸ್ಸು ಮುಂತಾದವುಗಳ ವೇಗವನ್ನೂ ನಿಯಮಿಸುತ್ತಿರುವನು ಗಾಳಿಯು ಭಗವಂತನ ನಿಯತಿಗೊಳಗಾಗಿಯೇ ಬೀಸುತ್ತಿರುವುದು[3] ಭಗವಂತನ ನಿಯಮನಕ್ಕೊಳಗಾಗಿಯೇ ಮನಸ್ಸು ಮನನದಲ್ಲಿ ತೊಡಗುವುದು[4] ಅಂದ ಮೇಲೆ ಇವುಗಳ ವೇಗವು ಭಗವದಧೀನವೆಂಬುದು ಸ್ಪಷ್ಟ

೩ (ನದಿಗಳ) ಪ್ರವಾಹವನ್ನು ನಿಯಮಿಸುವವನು[5]

ಭಗವಂತನ ನಿಯತಿಗೊಳಗಾಗಿಯೇ ಹರಿಯುತ್ತಿರುವ[6] ನದಿಗಳ ಪ್ರವಾಹಕ್ಕೂ ಭಗವಂತನೇ ನಿಯಾಮಕ

೪ ಪ್ರಶಸ್ತವಾದ ರೇತಸ್ಸು ಉಳ್ಳವನು[7]

---

೨ 1 ವೇಗಃ ವೇಗವತಾಂ ಸರ್ವೇಷಾಂ ಜವಃ ಅಸ್ಯ ನಿಯಮ್ಯತಯಾಽಸ್ತೀತಿ ವೇಗವಾನ್ ।

2 'ಸರ್ವಸ್ವಭಾವೋ ನಿಯತಸ್ತೇನೈವ ಕಿಮುತಃ ಪರಮ್'
-ಗೀ. ಭಾ. (7-8)

3 ಯದ್ಭಯಾದ್ವಾತಿ ವಾತೋಽಯಂ -ಭಾಗ. 3-29-40

4 ಕೇನೇಷಿತಂ ಪತಿತಂ ಪ್ರೇಷಿತಂ ಮನಃ ಮನಸೋ ಮನೋ ಯತ್ .ಯೇನಾ-ಹುರ್ಮನೋ ಮತಮ್ । ತದೇವ ಬ್ರಹ್ಮ '
-ತ ಉ 1 1,2

೩ 5 'ವೇಗಃ ಪ್ರವಾಹಜವಯೋರಪಿ' -ಅ ಕೋ. ಇತಿ ವೇಗಃ ನದೀನಾಂ ಪ್ರವಾಹಃ ನಿಯ-ಮ್ಯತಯಾಽಸ್ಯಾಸ್ತೀತಿ ವೇಗವಾನ್ ।

6 ಸ್ರವಂತಿ ಸರಿತೋ ಭೀತಾಃ. . -ಭಾಗ 3-29-42

೪ 7 ವೇಗಃ ಪ್ರಶಸ್ತಂ ರೇತಃ ಅಸ್ಯಾಸ್ತೀತಿ ವೇಗವಾನ್ । ಪ್ರಶಂಸಾರ್ಥವಿಶೇಷೇ ವಿವಕ್ಷಿತೇ ಮತುಬ್ । 'ವೇಗೋ ರೇತಃ ಕಿಂಪಾಕಯೋಶ್ಚಾಪಿ...' -ಹೈಮಃ ।

ಜಡಪ್ರಕೃತಿಯು ಸೂಕ್ಷ್ಮರೂಪವೇ ಭಗವಂತನ ರೇತಸ್ಸು ಆಗಿದೆ ಸೃಷ್ಟಿಯು ಪ್ರಾರಂಭದಲ್ಲಿ ಪುರುಷನಾಮಕ ಭಗವಂತನು ಜಲದಂತೆ ಸೂಕ್ಷ್ಮರೂಪದಲ್ಲಿರುವ ಪ್ರಕೃತಿನಾಮಕ ಲಕ್ಷ್ಮಿಯು ಅಭಿಮಾನಿನಿಯಾಗಿ ಉಳ್ಳ ಪ್ರಕೃತಿಯನ್ನು ಸೃಷ್ಟಿಸಿ ಅದರಲ್ಲಿ ಸ್ವಲ್ಪ ಘನರೂಪದಲ್ಲಿರುವ ಪ್ರಕೃತ್ಯಾತ್ಮಕವಾದ ತನ್ನ ವೀರ್ಯವನ್ನು ವಿಸರ್ಜಿಸುವನು[1] ಚಿನ್ನದ ಬಣ್ಣವುಳ್ಳ[2] ಈ ವೀರ್ಯದಿಂದಲೇ ಚತುರ್ಮುಖನೂ ಬ್ರಹ್ಮಾಂಡವೂ, ಅದರೊಳಗಿನ ಪ್ರಜೆಗಳೂ ಸೃಷ್ಟರಾಗುವರು[3]. ಇಂತಹ ಪ್ರಾಶಸ್ತ್ಯವು ಭಗವಂತನ ವೀರ್ಯದ್ದಾಗಿದೆ

೫ ರೇತಸ್ಸನ್ನು ನಿಯಮಿಸುವವನು[4]

ಆದಿತ್ಯನಲ್ಲಿರುವ ಆದಿತ್ಯನಾಮಕ ಭಗವಂತನು ಪುರುಷನ ರೇತಸ್ಸಿನಲ್ಲಿ ಆದಿತ್ಯನಂತಹ ಪ್ರಭೆ ಉಳ್ಳವನಾಗಿ ಪುರುಷರೂಪದಲ್ಲಿ ಇರುವನು ಇವನ ಸನ್ನಿಧಾನದಿಂದಾಗಿಯೇ ಸ್ತ್ರೀಯು ಪುರುಷನ ರೇತಸ್ಸಿನ ಬಗ್ಗೆ ಜುಗುಪ್ಸೆ ಪಡುವುದಿಲ್ಲೆಂದು ಐತರೇಯೋಪನಿಷತ್ತು ಸಂದೇಶಿಸಿದೆ[5]. ಬೃಹದಾರಣ್ಯ

---

1 ಯಃ ಶೇತೇ ಪ್ರಲಯೇ ವಿಷ್ಣುಃ ಶೂನ್ಯನಾಮಾ ಮಹಾಕೃತಿಃ । ಸ ತು ನಾರಾಯಣೋ ನಾಮ ನರಾಣಾಮಯನತ್ವತಃ । ರೂಪಂ ದ್ವಿತೀಯಂ ಭವತಿ ದೀಪಾದ್ ದೀಪಾಂತರಂ ಯಥಾ । ಸಿಸೃಕ್ಷೋಸ್ತಸ್ಯ ಪುರುಷ ಇತ್ಯಾಹುಸ್ತದ್ ವಿದೋ ಜನಾಃ । ಸ ರಮಾಯಾ ದ್ವಿತೀಯೇ ತು ರೂಪೇ ಪ್ರಕೃತಿಸಂಜ್ಞಿತೇ । ವೀರ್ಯಮಾಧತ್ತ ಪುರುಷೋ ಮಹಾಂಸ್ತಸ್ಮಾದಜಾಯತ । ಯೋಽಸೌ ಹಿರಣ್ಯಗರ್ಭಾಖ್ಯಃ ಪುರುಷಃ ಸೋಽಪಿ ಭಣ್ಯತೇ ।
-ವ್ಯೋಮಸಂಹಿತಾ (ಭಾಗ. ತಾ. ನಿ. 2-6-4)

2 ವೀರ್ಯಂ ಹಿರಣ್ಮಯಂ ದೇವೋ ಮಾಯಯಾ ವ್ಯಸೃಜತ್ ಹಿರಣ್ಮಯಂ ಸ್ವರ್ಣವರ್ಣಂ . -ಭಾಗ. 3-10-13

3 ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ । ತದಂಡಮಭವದ್ಧೈಮಂ......।
-ಮ. ಸ್ಮೃ (1-8)

* ಪುಮಾನ್ ರೇತಃ ಸಿಂಚತಿ ಯೋಷಿತಾಯಾಂ ಬಹ್ವೀಃ ಪ್ರಜಾಃ ಪುರುಷಾತ್ ಸಂಪ್ರಸೂತಾಃ -ಅಥ. ಉ. 1-3-5

೫ 4 ವೇಗಃ ರೇತಃ ನಿಯಮ್ಯತಯಾಽಸ್ಯಾಸ್ತೀತಿ ವೇಗವಾನ್ ।

5 ಅಥ ಯನೇತತ್ ಪುರುಷೇ ರೇತೋ ಭವತ್ಯಾದಿತ್ಯಸ್ಯ ತದ್ರೂಪಂ ತಸ್ಮಾತ್ ತಸ್ಮಾನ್ನ ಬೀಭತ್ಸೇತ... -ಐ. ಉ. 2-2-6-15

ಕೋಪನಿಷತ್ತಿನ ಅಂತರ್ಯಾಮಿ ಬ್ರಾಹ್ಮಣದಲ್ಲಿ ರೇತಸ್ಸನ್ನು ಪ್ರತ್ಯೇಕವಾಗಿಯೇ ಉಲ್ಲೇಖಿಸಿ ಅದರಲ್ಲಿ ಭಗವಂತನು ಅಂತರ್ಯಾಮಿಯಾಗಿ ಇರುವನೆಂದು ಸಾರಲಾಗಿದೆ[1]

೬ ಗಜೇಂದ್ರಾದಿ ಭಕ್ತರ ರಕ್ಷಣೆಯಲ್ಲಿ ವೇಗ ಉಳ್ಳವನು.[2]

## ಜಿಜ್ಞಾಸೆ

[ಎರಡೂ ಗುಣಗಳೇ]

ಪ್ರ:- ಗುಣಕ್ಕೆ ವಿರುದ್ಧವಾದದ್ದು ದೋಷ ಸ್ಥಿರತ್ವರೂಪಗುಣಕ್ಕೆ ವಿರುದ್ಧವಾದ ವೇಗವತ್ತ್ವವು ದೋಷವಾಗಬೇಕು ಆದುದರಿಂದ ಸ್ಥಿರನಾದ ಪರಮಾತ್ಮನಲ್ಲಿರುವ ವೇಗವತ್ತ್ವವು ದೋಷವಾಗಲಿಕ್ಕಿಲ್ಲವೆ?

ಉ.- ಲೋಕದಲ್ಲಿ ಗುಣವಿರುದ್ಧವಾದದ್ದು ದೋಷವೆಂದು ವ್ಯವಹರಿಸಲ್ಪಡುವದಾದರೂ ಲೋಕವಿಲಕ್ಷಣನಾದ ಪರಮಾತ್ಮನಲ್ಲಿ ಸ್ಥಿರತ್ವ ವೇಗವತ್ತ್ವಗಳಿಗೆ ವಿರೋಧವು ಇಲ್ಲವಾದ್ದರಿಂದ ಸ್ಥಿರತ್ವ ವೇಗವತ್ತ್ವಗಳೆರಡೂ ಉತ್ಕರ್ಷ ಪ್ರಯೋಜಕಗಳಾದ್ದರಿಂದ ಅವುಗಳು ಎರಡೂ ಗುಣಗಳೇ ಆಗುತ್ತವೆ.



### ೩೭೩ ಅಮಿತಾಶನಃ

೧ ಅಪರಿಮಿತವಾದ ತನ್ನ ಸ್ವರೂಪವನ್ನು ಅನುಭವಿಸುತ್ತಿರುವವನು.[3]

---

. ತಥಾ ಪುಂರೇತಸಿ ಸ್ಥಿತಃ । ಆದಿತ್ಯೇ ಸಂಸ್ಥಿತೋ ವಿಷ್ಣುರಾದೇರುಪಧಿತ್ವನಾಮಕಃ । ತಸ್ಮಾನ್ನ ರೇತಸೋ ಭಾರ್ಯಾ ಬಿಭರ್ತ್ಯೇತ ಹತಿಸ್ಥಿತಾತ್. ಪುರುಷೋ ಭಗವಾನ್ ವಿಷ್ಣೂ ರೇತಸಿಸ್ಥೋ ದ್ಯುಮತ್ಸ್ವಭಃ । -ಐ ಉ. ಭಾ.

1 ಯೋ ರೇತಸಿ ತಿಷ್ಠನ್ ರೇತಸೋಽಂತರೋ ಯಂ ರೇತೋ ನ ವೇದ ಯಸ್ಯ ರೇತಃ ಶರೀರಂ ಯೋ ರೇತೋಽಂತರೋ ಯಮಯತ್ಯೇಷ ತ ಆತ್ಮಾಽಂತರ್ಯಾಮ್ಯಮೃತಃ
-ಬೃ. ಉ. 5-7 23

೬ 2 ಗಜೇಂದ್ರಾದಿಭಕ್ತರಕ್ಷಣೇ ವೇಗೋಽಸ್ಯಾಸ್ತೀತಿ ವೇಗವಾನ್ ।
-ಸ ಸಂ.

೧ 3 ಅಮಿತಂ ಅನಂತಂ ಸ್ವರೂಪಂ ಅಶ್ನಾತಿ ಅನುಭವತೀತಿ ಅಮಿತಾಶನಃ ।

೨ ಅಪರಿಮಿತಗಳಾದ ತನ್ನ ಗುಣಗಳನ್ನು ಅನುಭವಿಸುತ್ತಿರುವವನು [1]

೩ ಅಪರಿಮಿತವಾದ ತನ್ನ ಆನಂದವನ್ನು ಅನುಭವಿಸುತ್ತಿರುವವನು.[2]

೪ ಅನಾಮಕನಾದ ತನ್ನಿಂದ ತಿಳಿಯಲ್ಪಟ್ಟ ತನ್ನ ಸ್ವರೂಪವನ್ನು, ಅಥವಾ ತನ್ನ ಗುಣಗಳನ್ನು ಅಥವಾ ತನ್ನ ಆನಂದವನ್ನು ಅನುಭವಿಸುತ್ತಿರುವವನು.[3]

ಪೂರ್ಣ ಸರ್ವಗುಣಾತ್ಮಕವಾದ ತನ್ನ ಸ್ವರೂಪವನ್ನು ಯಾರ ಅನುಗ್ರಹವೂ ಇಲ್ಲದೆ, ಯಾವುದೇ ವ್ಯವಧಾನವಿಲ್ಲದೆ ಕಾಣುತ್ತ ಅನುಭವಿಸುತ್ತಿರುವವನು ಭಗವಂತನೊಬ್ಬನೇ[4] ಅವನು ಪ್ರಲಯ ಕಾಲದಲ್ಲೂ ತನ್ನ ಗುಣಪರಿಪೂರ್ಣವಾದ ಸ್ವರೂಪವನ್ನು ಅನುಭವಿಸುತ್ತಲೇ ಇರುವವನು[5] ಗುಣ ಪರಿಪೂರ್ಣತ್ವದ ಪರಿಪಕ್ವಾನುಭವವೇ 'ಉನ್ಮೇಷ'—ಎನಿಸಿದ್ದು, ಇಂತಹ ಉನ್ಮೇಷ'ವು ಶ್ರೀವಿಷ್ಣುವನ್ನು ಬಿಟ್ಟರೆ ಇನ್ನಾರಲ್ಲೂ ಇಲ್ಲ ಅವನಾದರೂ ಯಾವಾಗಲೂ ಇಂತಹ ಉನ್ಮೇಷವನ್ನು ನಡೆ

---

೨ 1 ಅಮಿತಾನ್ ಅನಂತಾನ್ ಗುಣಾನ್ ಅಶ್ನಾತಿ ಅನುಭವತೀತಿ ಅಮಿತಾಶನಃ ।

೩ 2 ಅಮಿತಂ ಅಪರಿಮಿತಂ ಆನಂದಂ ಅಶ್ನಾತಿ ಅನುಭವತೀತಿ ಅಮಿತಾಶನಃ ।

೪ 3 ಅನಾಮಕೇನ ಸ್ವೇನ ಮಿತಂ ಪ್ರಮಿತಂ ಸ್ವಸ್ವರೂಪಂ ಸ್ವಗುಣಾನ್ ಸ್ವಾನಂದಂ ವಾ ಅಶ್ನಾತೀತಿ ಅಮಿತಾಶನಃ ।

4 ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ

ಬೃ. ಉ. 5-4-1

ವಿನೈವಾನ್ಯಪ್ರಸಾದೇನ ಪೂರ್ಣಸರ್ವಗುಣಾತ್ಮಕವತ್। ಪಶ್ಯನ್ನನುಭವತ್ಯೇವ ಸ್ವಂ ರೂಪಂ ಕೇಶವಃ ಪ್ರಭುಃ ।. . ಸಾಕ್ಷಾದೇವಾಪರೋಕ್ಷಾತ್ ಸ ವಿಷ್ಣುರೇವ ತತಃ ಸ್ಮೃತಃ

–ಬೃಹಚ್ಛ್ರುತಿ (ಬೃ. ಉ. ಭಾ.)

5 ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ ಕಿಂಚನ ಮಿಷತ್ ..

–ಐ. ಉ 2-3-1-1

ಏಕೋ ನಾರಾಯಣಸ್ತ್ವಾಸೀತ್ ಪ್ರಳಯೇ ರಮಯಾ ಸಹ ..ಸ್ವತಂತ್ರೋನ್ಮೇಷ ಏಕರಾಟ್ । ನಾರಾಯಣೋ ನ ಚಾನ್ಯೋಽಸ್ತಿ ಪೂರ್ಣೋನ್ಮೀಲದ್ಗುಣಾತ್ಮಕಃ ।

–ಐ. ಉ. ಭಾ.

ಸುತ್ತ ಇರುವನೆಂಬುದಾಗಿ 'ಸತ್ತತ್ತ್ವ'ವು ತಿಳಿಸಿದೆ[1] ಭಗವಂತನ ಆನಂದಾದಿಗುಣಗಳು ಅವನ ಸ್ವರೂಪಾತ್ಮಗಳೇ ಆಗಿರುವವಾದರೂ ವಿಶೇಷದ ಸಾಮರ್ಥ್ಯದಿಂದಾಗಿ ಅವುಗಳ ಅನುಭವವೂ ಅವನಿಗೆ ಕೂಡದಿರದು [2]ಸಮಗ್ರವಾಗಿ ಮಾತಿಗೆ ಮನಸ್ಸಿಗೆ ಎಟಕದಷ್ಟು ಆನಂದ ಭಗವಂತನದು[3] ಅಂತಹ ಆನಂದವನ್ನು ಅನುಭವಿಸುತ್ತಿರುವುದರಿಂದಲೇ ಅವನು ಲೋಕದ ಸಕಲ ಚೇಷ್ಟೆಗಳನ್ನೂ ಪ್ರೇರಿಸುತ್ತಿರುವನು[4]

ಔ (ಪ್ರಲಯ ಕಾಲದಲ್ಲಿ) ಸರ್ವವನ್ನೂ—ಅಪರಿಮಿತವಾದದ್ದನ್ನು ಭಕ್ಷಿಸುವವನು[5]

ಓ ಅನಂತ ಜೀವೇಂದ್ರಿಯಗಳಲ್ಲಿದ್ದುಕೊಂಡು ಅಮಿತ ಭೋಗಗಳನ್ನು ಅನುಭವಿಸುವವನು.[6]

---

1 ಉನ್ಮೇಷೋ ಗುಣಸಂಪೂರ್ತೇ ರುದ್ರಿಕ್ತಾನುಭವಃ ಸ್ಮೃತಃ । ತದೇವ ಮಿಷಣಂ ನಾಮ ಸದ್ರೂಪಂ ಮಿನುತೇ ಯತಃ। ಮಿಷಚ್ಚ ನಾನ್ಯತ್ ವಿಷ್ಣೋರ್ಹಿ ಕಿಮುತೋನ್ಮಿಷದಿಷ್ಯತೇ। ಉಚ್ಚೈರ್ವಿರ್ಮಿಷನ್ ಹಿ ಭಗವಾನ್ ಸರ್ವದೈವ ಜನಾರ್ದನಃ

–ಸತ್ತತ್ತ್ವ (ಐ ಉ ಭಾ 2-3-1-1)

2 ತದಾಭಿನ್ನಾ ಗುಣಾ ನಿತ್ಯಮಪಿ ಸರ್ವೇ ವಿಶೇಷತಃ । ಗುಣತ್ವೇನ ಗುಣಿತ್ವೇನ ಭೋಕ್ತೃ-ಭೋಗ್ಯತಯಾ ಸ್ಥಿತಾಃ । –ಅ. ವ್ಯಾ 3-2-158

* ಗುಣರೂಪೋಽಪಿ ಭಗವಾನ್ ಗುಣಭುಕ್ ಚ ಸದಾ ಶ್ರುತಃ ।
ಅಹಮಿತಾತ್ಮಭೋಗೋ ಯತ್ ಸರ್ವೇಷಾಮನುಭೂಯತೇ ।
ಅಭಿನ್ನೇಽಪಿ ವಿಶೇಷೋಽಯಂ ಸದಾಽನುಭವಗೋಚರಃ ।

–ಪರಮಶ್ರುತಿ (ಗೀ ತಾ 2-25)

3 ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್.. । –ತೈ. ಉ. 2-18

4 ಸುಖಂ ಲಬ್ಧ್ವಾ ಹಿ ಕುರುತೇ ಲೋಕಚೇಷ್ಟಾಂ ಜನಾರ್ದನಃ । ಅಲ್ಪಾತ್ ಸುಖಾದಲ್ಪ-ಕರ್ಮಾ ಪೂರ್ಣಾನಂದಾದ್ಧಿ ಸರ್ವಕೃತ್ ।

–ಯಜುಃಸಂಹಿತಾ (ತೈ. ಉ. ಭಾ. 2-12)

ಔ 5 ಪ್ರಲಯೇ ಸರ್ವಂ ಅಶ್ನಾತೀತಿ ಅಮಿತಾಶನಃ । –ವಿ. ರಾ.

ಓ 6 ಅನಂತಜೀವೇಂದ್ರಿಯಸ್ಥಃ ಸನ್ ಅಮಿತಂ ಯಥೇಷ್ಟಂ ಅಶ್ನಾತೀತಿ ಅಮಿತಾಶನಃ ।

–ವಿ. ರಾ.

೭ ಜೀವಾತ್ಮರಿಂದ ಅನುಭವಿಸಲ್ಪಡದ ಸಾರಭಾಗವನ್ನು ಅನುಭವಿಸುವವನು[1]

ಭಗವಂತನು ತನ್ನ ಸ್ವರೂಪದಿಂದಲೇ ಭೋಗವನ್ನು ಅನುಭವಿಸಲು ಸಮರ್ಥನಾಗಿರುವನಾದರೂ, ಜೀವಾತ್ಮರ ಶರೀರದಲ್ಲಿದ್ದುಕೊಂಡು ತನ್ನ ಇಂದ್ರಿಯಗಳ ಸಂಪರ್ಕದಿಂದಾಗಿ ಪ್ರಕಾಶಿತಗಳಾದ ಜೀವಾತ್ಮರ ಇಂದ್ರಿಯಗಳ ಮೂಲಕ ಭೋಗಗಳಲ್ಲಿ ಸಾರಭಾಗವನ್ನು ಅನುಭವಿಸುವನು.[2]

೮ (ಮುಕ್ತಜೀವಾತ್ಮರು) ಸಂಸಾರದಲ್ಲಿ ಅನುಭೂತನಾದದ್ದಕ್ಕಿಂತ ವಿಲಕ್ಷಣವಾದ ಆನಂದವನ್ನು ಅನುಭವಿಸುವಂತೆ ಮಾಡುವವನು[3]

ಜೀವಾತ್ಮರು ಸಂಸಾರದೆಶೆಯಲ್ಲಿ ವಿಷಯ ಪದಾರ್ಥಗಳಿಂದ ಉಂಟಾದ ದುಃಖಮಿಶ್ರಿತ ಆನಂದವನ್ನು ಅನುಭವಿಸಿರುವರು ಅಂತಹ ಜೀವಾತ್ಮರಿಗೆ ತನ್ನ ಅನುಗ್ರಹದಿಂದ ಮುಕ್ತಿಯನ್ನು ಕರುಣಿಸುವ ಭಗವಂತನು ಅಲ್ಲಿ ಅವರು ಅದುವರೆಗೆ ಅನುಭವಿಸದ ತಮ್ಮ ನೈಜಾನಂದವನ್ನು ಅನುಭವಿಸುವಂತೆ ಅನುಗ್ರಹಿಸುವನು[4]

೯ ಪರಿಮಿತವಾದ ಆನಂದವನ್ನು ಅನುಭವಿಸುವ ಜೀವಾತ್ಮರಿಗಿಂತ ವಿಲಕ್ಷಣನಾದವನು.[5]

---

೭ 1 ಅಮಿತಂ ಜೀವೈರನನುಭೂತಂ (ಸಾರಭೂತಂ) ಅಶನಮಸ್ಯೇತಿ ಅಮಿತಾಶನಃ ।

2 ಸ ಏತೈರಿಂದ್ರಿಯೈರ್ವಿಷ್ಣುರ್ಭೋಗಾನನುಭವತ್ಯಜಃ । ಸ್ವರೂಪೇಣೈವ ಶಕ್ತೋಽಪಿ ಜೀವದೇಹಸ್ಥಿತೋ ಹರಿಃ । ಭುಂಕ್ತೇ ತದಿಂದ್ರಿಯೈರ್ಭೋಗಾಂಶ್ಚರಿತೈರಿಂದ್ರಿಯೈಃ ಸ್ವಕೈಃ । .. ಭುಂಕ್ತೇ ತತ್ತದ್ಗುಣಾನ್ ವಿಷ್ಣುರ್ನೈವ ದೋಷಾನ್ ಕದಾಚನ ।

ಸಾಮಸಂಹಿತಾ (ಛಾಂ ಉ. ಭಾ. 8-4-3)

೮ 3 ಅಮಿತಂ ಸಂಸಾರೇ ಅನನುಭೂತಂ ಮುಕ್ತಾತ್ಮನಂ ಅಶಯತಿ ಭೋಜಯತೀತಿ ಅಮಿತಾಶನಃ ।

4 ಏವಂ ಸಮ್ಯಕ್ ಪ್ರಸಾದೇನ ವಿಷ್ಣೋರ್ಮುಕ್ತೋಽಪಿ ಯೋಽಪರಃ । ಯಂ ಪ್ರಾಪ್ಯ ತೇ ನಿಜಾನಂದಮಾಪ್ನುವಂತಿ ಸ ಕೇಶವಃ ।

-ಸಾಮಸಂಹಿತಾ (ಛಾಂ. ಉ. ಭಾ. 8-4-2)

೯ 5 ಮಿತಮಶ್ನಾತೀತಿ ಮಿತಾಶನಃ ಸ ನ ಭವತೀತ್ಯಮಿತಾಶನಃ ।

-ಸ. ಸಂ.

ಜೀವಾತ್ಮರು ಮುಕ್ತರಾದ ಮೇಲೂ ಭಗವಂತನ ಆನಂದದ ಪ್ರತಿಬಿಂಬವನ್ನಷ್ಟೇ ಅನುಭವಿಸುವರು.[1] ಇಂತಹ ಜೀವಾತ್ಮರಿಗಿಂತ ಪೂರ್ಣಾನಂದವನ್ನು ಅನುಭವಿಸುತ್ತಿರುವ ಭಗವಂತನು ಅತ್ಯಂತ ವಿಲಕ್ಷಣನು.

೧೦ ಅಮಿತಾಶೆಗಳುಳ್ಳ ಜೀವಾತ್ಮರನ್ನು ಪ್ರೇರಿಸುವವನು.

೧೧ ಅಪರಿಮಿತನಾದವನು, ಸಮೀಚೀನ ಸುಖ ಉಳ್ಳವನು ಮತ್ತು (ಸರ್ವರನ್ನೂ) ಪ್ರೇರಿಸುವವನು[3]

೧೨ ಸಂಸಾರಾವಸ್ಥೆಯಲ್ಲಿ ಅನನುಭೂತವಾದ ಸಮೀಚೀನವಾದ ಸುಖ ಉಳ್ಳ ಮುಕ್ತಾತ್ಮರನ್ನು ಪ್ರೇರಿಸುವವನು[4]

೧೩ ‘ಅ’ ಎಂಬುದಾಗಿ ಪ್ರಮಿತನಾಗಿರುವವನು ಮತ್ತು (ಮುಕ್ತಾತ್ಮರಿಗೆ) ಸಮೀಚೀನವಾದ ಸುಖವನ್ನು ತಲುಪಿಸುವವನು.[5]

---

1 ಪೂರ್ಣಾನಂದಸ್ಯ ತಸ್ಯೈವ ಮುಕ್ತಾ ವಿಪ್ರುಟ್ ಸುಖಾತ್ಮಕಾಃ ।
-ಬೃಹಚ್ಛ್ರುತಿ (ಬೃ. ಉ. ಭಾ 5 5-1)

೧೦ 2 ಬಹ್ವಾಶಾವತೋ ಜೀವಾನ್ನಯತೀತಿ ಅಮಿತಾಶನಃ ।
—ವಿ ರಾ.

ಅಮಿತಾಃ ಆಶಾಃ ಯೇಷಾಂ ತೇ ಅಮಿತಾಶಾಃ ಜೀವಾತ್ಮಾನಃ ತಾನ್ ನಯತಿ ಪ್ರೇರಯತೀತಿ ಅಮಿತಾಶನಃ ।

೧೧ 3 ಅಪರಿಮಿತತ್ವಾತ್ ಅಮಿತಃ । ಆ ಸಮೀಚೀನಂ ಶಂ ಯಸ್ಯ ಸಃ ಆಶಃ । ನಯತಿ ಸರ್ವಾನ್ ಪ್ರಣಯತಿ ಪ್ರೇರಯತೀತಿ ನಃ ಅಮಿತಶ್ಚಾಸೌ ಆಶಶ್ಚಾಸೌ ನಶ್ಚ ಅಮಿತಾಶನಃ ।

೧೨ 4 ಅಮಿತಂ ಸಂಸಾರಾವಸ್ಥಾಯಾಂ ಅನನುಭೂತಂ ಆ ಸಮೀಚೀನಂ ಶಂ ಯೇಷಾಂ ತೇ ಅಮಿತಾಶಾಃ ಮುಕ್ತಾತ್ಮಾನಃ । ತಾನ್ ನಯತೀತಿ ಅಮಿತಾಶನಃ ।

೧೩ 5 ಅ ಇತಿ ಮಿತಃ ಪ್ರಮಿತಃ ಅಮಿತಃ । ಆ ಸಮೀಚೀನಂ ಶಂ ಆಶಂ ಮೌಕ್ತಿಕಾನಂದಃ, ತತ್ ನಯತಿ ಮುಕ್ತಾನ್ ಪ್ರತಿ ಪ್ರಾಪಯತೀತಿ ಆಶನಃ । ಅಮಿತಶ್ಚಾಸೌ ಆಶನಶ್ಚ ಅಮಿತಾಶನಃ ।

## ಜಿಜ್ಞಾಸೆ

[ಸಂಪೂರ್ಣಸಾಮ್ಯ ಅಲ್ಲ]

ಪ್ರ.- ಮುಕ್ತಿಯಲ್ಲಿ ಜೀವರು ಪರಮಾತ್ಮನಿಂದ ಪರಮ ಸಾಮ್ಯವನ್ನು ಹೊಂದುತ್ತಾರೆಂದು ಕೆಲವರು ಹೇಳುತ್ತಾರೆ 'ಪರಮಂ ಸಾಮ್ಯಮುಪೈತಿ' ಎಂಬ ಶ್ರುತಿಯೂ ಹೇಳುತ್ತದೆ ಮಧ್ವಸಿದ್ಧಾಂತ ದಲ್ಲಿ ಅದನ್ನು ಒಪ್ಪುವುದಿಲ್ಲ, ಅದು ಏಕೆ?

ಉ - ಪರಮ ಸಾಮ್ಯ ಎಂದರೆ ಉತ್ತಮ ಸಾಮ್ಯವೆಂದು ಅರ್ಥವಾದರೆ ಅದು ಮಧ್ವಸಿದ್ಧಾಂತದಲ್ಲಿ ಅಂಗೀಕೃತವೇ ಆಗಿರುತ್ತದೆ ಸಂಪೂರ್ಣ ಸಾಮ್ಯ ಎಂದು ಅರ್ಥವಾದರೆ ಅದು ಅಂಗೀಕೃತವಲ್ಲ. ಪರಮಾತ್ಮನಿಗೆ ಅಮಿತಾಶನ ಎಂಬ ನಾಮವು ಇದ್ದದ್ದರಿಂದ ಅದರ ವಿರೋಧವು ಸಂಪೂರ್ಣಾ ನಂದವನ್ನು ಮುಕ್ತರಿಗೆ ಒಪ್ಪಿದರೆ ಬರುತ್ತದೆ. ಸಂಪೂರ್ಣಾನಂದವನ್ನು ಮುಕ್ತರು ಪರಮಾತ್ಮ ನಂತೆ ಅನುಭವಿಸುವರಾದರೆ ಮುಕ್ತರೂ ಅಮಿತಾಶನ ಎಂಬ ನಾಮವುಳ್ಳವರಾಗಬೇಕಾಗುತ್ತದೆ. ಮುಕ್ತರಿಗೆ ಆ ನಾಮವು ಇಲ್ಲ. ಪರಮಾತ್ಮನಿಗೆ ಮಾತ್ರ ಆ ನಾಮ ಇದೆ



ಉದ್ಭವಃ ಕ್ಷೋಭಣೋ ದೇವಃ ಶ್ರೀಗರ್ಭಃ ಪರಮೇಶ್ವರಃ ।
ಕರಣಂ ಕಾರಣಂ ಕರ್ತಾ ವಿಕರ್ತಾ ಗಹನೋ ಗುಹಃ ॥ ೪೧ ॥

೩೭೪ ಉದ್ಭವಃ

೧ ಉತ್ಪಾದಿಸುವವನು[1]

ಗೀತಾಚಾರ್ಯನು ತಾನು 'ಉದ್ಭವ' ಎಂಬ ಹೆಸರುಳ್ಳವನಾಗಿ ಹುಟ್ಟುವ ಪದಾರ್ಥಗಳೆಲ್ಲದರ ಹುಟ್ಟಿಗೆ ಕಾರಣನಾಗಿರುವುದಾಗಿ ಸಂದೇಶಿಸಿರುವನು[2]

---

೧ 1 ಉದ್ಭಾವಯತಿ ಉತ್ಪಾದಯತೀತಿ ಉದ್ಭವಃ । ಅಥವಾ ಉದ್ಭವತಿ ಜಗದಸ್ಮಾದಿತಿ ಉದ್ಭವಃ ।

2 .....ಅಹಮುದ್ಭವಶ್ಚ ಭವಿಷ್ಯತಾಮ್ । -ಗೀ. 10-34

ಭವಿಷ್ಯತಾಮುತ್ಪತ್ಸ್ಯಮಾನಾನಾಮುದ್ಭಾವಯತೀತಿ ವ್ಯುತ್ಪತ್ತ್ಯೋದ್ಭವನಾಮಾ ಉದ್ಭ-ವಶ್ಚ । -ಗೀ. ವಿ.

೨ ಯಾರು ಉತ್ಪತ್ತಿಯಿಂದ ದೂರನಾಗಿರುವನೋ ಅಂತಹವನು.[1]

ಪರಾಧೀನವಾದ ವಿಶೇಷವನ್ನು ಹೊಂದುವುದೇ ಉತ್ಪತ್ತಿ ಎನಿಸಿದ್ದು, ಉಳಿದೆಲ್ಲರೂ ಇಂತಹ ಉತ್ಪತ್ತಿಯನ್ನು ಹೊಂದಿಯೇ ತೀರುವರು[2] ಸ್ವತಂತ್ರನಾದ ಭಗವಂತನಿಗೊಬ್ಬನಿಗೇ ಯಾವುದೇ ರೀತಿಯಾದ ಉತ್ಪತ್ತಿ ಇಲ್ಲ[3]

೩. ಯಾರು ಸಂಸಾರದಿಂದ ದೂರನಾಗಿರುವನೋ ಅಂತಹವನು[4]

ಪ್ರಕೃತಿಯ ಸತ್ತ್ವ, ರಜಸ್ಸು ಹಾಗೂ ತಮಸ್ಸು ಜೀವಾತ್ಮನನ್ನು ಸಂಸಾರದಲ್ಲಿ ಹೇಗೆ ತೊಡಗಿಸುವವು ಎಂಬುದನ್ನು ತೋರಿಸಿಕೊಡುತ್ತಿರುವ ಪಾದ್ಮವು—ಪ್ರಕೃತಿಗೆ ನಿಯಾಮಕನಾದ ಭಗವಂತನ ಪ್ರೇರಣೆಗೊಳಗಾಗಿಯೇ ಜೀವಾತ್ಮನು ಸಂಸಾರಕ್ಕೊಳಗಾಗುವನು ಎಂದು ತಿಳಿಸಿ, ಭಗವಂತನಾದರೂ ಸ್ವತಂತ್ರನಾಗಿರುವುದರಿಂದ, ಸರ್ವಾಧಿಕನಾಗಿರುವುದರಿಂದ ಎಂದೂ ಸಂಸಾರಬಂಧನಕ್ಕೊಳಗಾಗುವುದಿಲ್ಲ—ಎಂದು ಸಾರಿದೆ.[5] ಪರಮಾತ್ಮನೂ ಜೀವಾತ್ಮನ ಜೊತೆಗೆಯೇ ಅವನ ಶರೀರದಲ್ಲಿಯೇ ಇರುವವನಾದರೂ ಸರ್ವಜ್ಞನಾಗಿರುವುದರಿಂದ ಎಂದೂ ಸಂಸಾರಬಂಧನಕ್ಕೊಳಗಾಗುವುದಿಲ್ಲ—ಎಂದು ವಿವೇಕ ತಿಳಿಸಿದ[6]

---

೨ 1 ಉದ್ಗತಃ ಭವಃ ಉದ್ಭವಃ, ಉತ್ಪತ್ತಿರಿತಿ ಯಾವತ್ ಯಸ್ಮಾತ್ ಸಃ ಉದ್ಭವಃ ।
'ಭವಃ. ..ಪ್ರಾಪ್ತಿಜನ್ಮನೋಃ'

2 ನೈವ ಕಿಂಚಿತ್ ತತೋ ಜನ್ಮವರ್ಜಿತಂ ಪರಮಾದ್ಯತೇ ।
-ಅ ವ್ಯಾ. 2-3-20

3 ಸ್ವತಂತ್ರತ್ವಾತ್ ಪರಾತ್ಮನಃ। ನೈವೋತ್ಪತ್ತಿಃ ಕಥಮಪಿ ನ ಸ್ವತಂತ್ರಂ ತತೋಽಪರಮ್।
-ಅ. ವ್ಯಾ. 2-3-23

೩ 4 ಉದ್ಗತಃ ಭವಃ ಸಂಸಾರೋ ಯಸ್ಮಾದಿತಿ ಉದ್ಭವಃ ।
-ವಿ ರಾ.

5 ..ಏವಂ ಜೀವಃ ಪರೇಣೈವ ಪ್ರೇರಿತಃ ಸಂಸೃತಿಂ ವ್ರಜೇತ್ । ನ ಪರಃ ಸಂಸೃತಿಂ ಕ್ವಾಪಿ ಸ್ವಾತಂತ್ರ್ಯಾದಧಿಕತ್ವತಃ । -ಪಾದ್ಮ (ಭಾಗ. ತಾ. ನಿ. 2-5-18)

6 ಶರೀರಸ್ಥೋಽಪಿ ವಿದ್ವತ್ತ್ವಾನ್ನ ವಿಷ್ಣುರ್ಬಧ್ಯತೇ ಕ್ವಚಿತ್ ।
-ವಿವೇಕ (ಭಾಗ. ತಾ. ನಿ. 11-11-8)

೪ (ಯೋಗ್ಯ ಅಧಿಕಾರಿಗಳು) ಸಂಸಾರಬಂಧನದಿಂದ ದೂರ ಸರಿಯುವಂತೆ ಅನುಗ್ರಹಿಸುವವನು[1]

೫ ಉತ್ಕೃಷ್ಟವಾದ ಸ್ಥಿತಿಯನ್ನು ಹೊಂದಿರುವವನು.[2]

೬ ಉತ್ಕೃಷ್ಟವಾದ ಸ್ಥಿತಿಯನ್ನು ಅನುಗ್ರಹಿಸುವವನು[3]

ಭಗವಂತನು ಜ್ಞಾನೈಶ್ವರ್ಯಾದಿ ಸಂಪತ್ತನ್ನು ಕರುಣಿಸುವುದರಿಂದ 'ಭೂತಿ' ಎಂಬ ಹೆಸರುಳ್ಳವನು ಅಜ್ಞಾನಾದಿಗಳನ್ನು ನೀಡುವ ಪ್ರಯುಕ್ತ 'ಅಭೂತಿ' ಎಂಬ ಹೆಸರುಳ್ಳವನು ವಾಯ್ವಾದಿ ದೇವತೆಗಳು ಭಗವಂತನನ್ನು ತಮಗೆ ಜ್ಞಾನೈಶ್ವರ್ಯಾದಿ ಭೂತಿಯನ್ನು ದಯಪಾಲಿಸುವವನು ಹಾಗೂ ಸ್ವಯಂ ಅಂತಹ ಐಶ್ವರ್ಯದಿಂದ ಪರಿಪೂರ್ಣನಾದವನೆಂದು ಉಪಾಸಿಸಿದರು ಆದುದರಿಂದಲೇ ಅವರು ಸುಖಜ್ಞಾನಾದಿ ಸರ್ವಗುಣಗಳಿಂದ ಕೂಡಿದ ಒಳ್ಳೆಯ ಸ್ಥಿತಿಯನ್ನು ಪಡೆದರು. ದೇವತೋತ್ತಮನಾದ ವಾಯುದೇವನು ಸುಪ್ತ ಜೀವಾತ್ಮರಲ್ಲಿ ಇದ್ದು 'ಭೂಃ' 'ಭೂಃ' ಎಂದು ಸ್ತುತಿಸುತ್ತಿರುವನು 'ಭೂಃ' ಎಂದರೆ 'ಭೂತಿಃ' ಎಂದೇ ಅರ್ಥ ಅಸುರರಾದರೂ ಭಗವಂತನು ತಮಗೆ ಅಜ್ಞಾನಾದಿಗಳನ್ನು ನೀಡಿರುವವನು ಸ್ವಯಂ ಐಶ್ವರ್ಯಾದಿ ಗುಣರಹಿತನು ಎಂಬುದಾಗಿ ಉಪಾಸಿಸುವರು ಆದ್ದರಿಂದಲೇ ಅವರು ಜೀವನದಲ್ಲಿ ಅಯಶಸ್ವಿಗಳಾಗುವರು ಜ್ಞಾನಾದ್ಯೈಶ್ವರ್ಯಹೀನರಾಗಿ ಅಂಧಂತಮಸ್ಸಲ್ಲಿ ಬೀಳುವರು.

ಹೀಗೆ ಭಗವಂತನು 'ಭೂತಿದ' ಹಾಗೂ 'ಭೂತಿ ಸ್ವರೂಪಿ' ಹಾಗೆಯೇ ದೇವತೆಗಳ ಪಾಲಿಗೆ ಭೂತಿ ಆದರೆ, ದೈತ್ಯರ ಪಾಲಿಗೆ 'ಅಭೂತಿ'—ಎಂದು ಯಾರು ತಿಳಿಯುವರೋ ಅವನೂ ಭಗವಂತನ ಅನುಗ್ರಹದಿಂದ ಜ್ಞಾನೈಶ್ವರ್ಯಾದಿಗಳಿಂದ ಯುಕ್ತನಾಗುವನು. ಅವನನ್ನು ಕಾಡಿಸುತ್ತಿರುವ ಪಾಪವು ಪರಾಜಯ ಹೊಂದುವುದು—ಎಂದು ಸಂದೇಶಿಸುತ್ತಿರುವ ಐತರೇಯೋಪನಿಷತ್ತು.[4]

---

೪ 1 ಸಂಸಾರಾದುದ್ಗತಾಃ ಭವಂತ್ಯನೇನೇತಿ ಉದ್ಭವಃ ।

೫ 2 ಉತ್ಕೃಷ್ಟಃ ಭವಃ ಸತ್ತಾ ಯಸ್ಯ ಸಃ ಉದ್ಭವಃ । 'ಭವಃ.. ಸತ್ತಾಯಾಂ ಪ್ರಾಪ್ತಿ-ಜನ್ಮನೋಃ'

೬ 3 ಉತ್ಕೃಷ್ಟಃ ಭವಃ ಸತ್ತಾ ಉತ್ತಮಾಧಿಕಾರಿಣಾಂ ಯಸ್ಮಾತ್ ಸಃ ಉದ್ಭವಃ ।

4 '.. ಸ ಏಷ ಭೂತಿಶ್ಚಾಭೂತಿಶ್ಚ ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿ ಸುಪ್ತೋ ಭೂಭೂರಿತ್ಯೇವ ಪ್ರಶ್ವಸಿತ್ಯಭೂತಿರಿತ್ಯಸುರಾಸ್ತೇ ಹ ಪರಾಬಭೂವುರ್ಭವತ್ಯಾತ್ಮನಾ ಪರಾಸ್ಯ ದ್ವಿಷನ್ ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ' —ಐ. ಉ. 1-6-2

ಭಗವಂತನು ಜ್ಞಾನೈಶ್ವರ್ಯಾದಿಗಳಿಂದ ಕೂಡಿದ ಉತ್ತಮ ಸ್ಥಿತಿಯನ್ನು ಪಡೆದಿರುವನೆಂದೂ, ತನ್ನ ಉಪಾಸಕರಿಗೆ ಉತ್ತಮ ಸ್ಥಿತಿಯನ್ನು ಅನುಗ್ರಹಿಸುವನೆಂದೂ ಸೂಚಿಸುತ್ತಿದೆ.

೭ ಉತ್ಕೃಷ್ಟವಾದ ಮಂಗಲ ಸ್ವರೂಪಿ.[1]

'ಮಂಗಲಾನಾಂ ಚ ಮಂಗಲಂ'[2] ಎನಿಸಿರುವ ಭಗವಂತನು ಮಂಗಲ ಪದಾರ್ಥಗಳಿಗೆಲ್ಲ ಮಾಂಗಲ್ಯವನ್ನು ನೀಡುವವನು ಹಾಗೂ ಅಂತಹ ಪದಾರ್ಥಗಳಲ್ಲೆಲ್ಲ ಶ್ರೇಷ್ಠನಾದವನು

೮ ಪಾಪರಹಿತನಾದವನು ಅಥವಾ ಸರ್ವೋಚ್ಚನಾಗಿರುವವನು ಹಾಗೂ ಎಲ್ಲವನ್ನೂ ತನ್ನದ್ದನ್ನಾಗಿ ಹೊಂದಿರುವವನು[3]

ಆದಿತ್ಯನಲ್ಲಿ ಇರುವ ಭಗವಂತನು ಸಕಲ ಪಾಪಗಳನ್ನೂ ಮೀರಿ ಇರುವುದರಿಂದ 'ಉತ್' ಎನಿಸಿರುವನೆಂದು ಛಾಂದೋಗ್ಯೋಪನಿಷತ್ತು ಸಂದೇಶಿಸಿದೆ.[4] 'ಸತ್ಪತ್ತ್ವ'ವು ಅವನು ಉಚ್ಚನಾಗಿರು

---

ಸ ಏವ ಭೂತಿನಾಮಾಽಪಿ ಜ್ಞಾನೈಶ್ವರ್ಯಾದಿಭೂತಿದಃ । ಅಜ್ಞಾನಾದಿಪ್ರದತ್ವಾತ್ ಸ ಏವಾಽನೂತಿನಾಮಕಃ । ಸುಖಜ್ಞಾನಾದಿಗುಣದಂ ಪೂರ್ಣಂ ಸರ್ವಗುಣೈಃ ಪ್ರಭುಮ್ । ಉಪಾಸತೇ ತಂ ವಾಯ್ವಾದ್ಯಾ ದೇವಾಸ್ತಸ್ಮಾಚ್ಚ ತೇಽಖಿಲಾಃ । ಬಭೂವುಃ ಸುಖಸ-ಜ್ಞಾನಪೂರ್ವೈಃ ಸರ್ವಗುಣೈರ್ಯುತಾಃ।ದೇವಾನಾಮಪಿ ಸರ್ವೇಷಾಂ ಪ್ರಧಾನೋಽ-ದ್ಯಾಪಿ ಮಾರುತಃ । ಸ್ಥಿತ್ವಾ ಸುಪ್ತೇಷು ವಿಷ್ಣುಂ ತಂ ಭೂರ್ಭೂರಿತ್ಯೇವ ಶಂಸತಿ । ಭೂ-ಶಬ್ದಾರ್ಥೋ ಭೂತಿರಿತಿ ವೈಪರೀತ್ಯೇನ ಚಾಸುರಾಃ । ಅಭೂತಿಕಾರಣೋಽಸ್ಮಾಕಮೈಶ್ವ-ರ್ಯಾದಿಗುಣೋಜ್ಝಿತಃ । ಇತ್ಯೇವೋಪಾಸತೇ ತಸ್ಮಾತ್ ಪರಾಭೂತಾಶ್ಚ ಸರ್ವಶಃ । ಜ್ಞಾನೈಶ್ವರ್ಯಾದಿಭಿರ್ಹೀನಾಃ ಪೇತುರಂಧೇ ತಮಸ್ಯಥ । ಯ ಏವಂ ವೇದ ತಂ ವಿಷ್ಣುಂ ಭೂತಿದಂ ಭೂತಿರೂಪಿಣಮ್ । ಭಾವಾಭಾವಂ ಚ ದೇವಾನಾಂ ದೈತ್ಯಾನಾಂ ಚೈವಮೇವ ತಂ । ಜ್ಞಾನೈಶ್ವರ್ಯಾದಿಭಿಃ ಸೋಽಪಿ ಭವೇತ್ ತಸ್ಯ ಪರಾತ್ಮನಃ । ಪ್ರಸಾದಾದಸ್ಯ ಪಾಪ್ಮಾ ಚ ಪರಾಭವತಿ ಸರ್ವಶಃ । -ಐ ಉ ಭಾ.

೭ 1 ಉತ್ಕೃಷ್ಟಃ ಭವಃ ಮಂಗಲಂ ಉದ್ಭವಃ ।

2 ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಂ

-ವಿ. ಸ. ನಾ. ಪೀಠಿಕಾ

೮ 3 ಪಾಪೋದ್ಗತತ್ವಾತ್ ಉಚ್ಚತ್ವಾದ್ವಾ ಉತ್ । ಭವತೀ ಸರ್ವಂ ಆತ್ಮೀಯತಯಾ ಪ್ರಾಪ್ನೋತೀತಿ ಭವಃ । ಭೂ ಪ್ರಾಪ್ತೌ ।

4 'ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ' -ಛಾಂ.ಉ. 1 3-7

ವುದರಿಂದಲೂ ಉತ್ ಎನಿಸಿರುವನೆಂದು ತಿಳಿಸಿದೆ[1] ಹೀಗೆ ಭಗವಂತನು ಸರ್ವೋಚ್ಚನಾಗಿರುವುದ ರಿಂದಲೇ ಸರ್ವ ಪದಾರ್ಥಗಳಿಗೂ ಒಡೆಯನಾಗಿರುವನು.

[ಅರ್ಥವಿಶೇಷಗಳನ್ನು ಇರ್ಲನೆಯ 'ಉದ್ಭವಃ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

## ಜಿಜ್ಞಾಸೆ

[ಕ್ಷಣಿಕವೆನಿಸಲಾರವು]

ಪ್ರ - ಪರಾಧೀನವಿಶೇಷಾವಾಪ್ತಿಯು ಉತ್ಪತ್ತಿಶಬ್ದದ ಅರ್ಥ ಎಂದು ಹೇಳುವುದಾದರೆ ಆಕಾಶಕ್ಕೆ ಪರಾಧೀನ ವಿಶೇಷವು ಮೂರ್ತ ದ್ರವ್ಯದ ಸಂಬಂಧ ರೂಪವಾದುದರಿಂದ ಅಂತಹ ಮೂರ್ತ ದ್ರವ್ಯಗಳ ಸಂಬಂಧಗಳು ಆಕಾಶಕ್ಕೆ ಪ್ರತಿಕ್ಷಣಗಳಲ್ಲಿ ಬೇರೆ ಬೇರೆ ಆಗುತ್ತಾ ಇರುವದರಿಂದ ಆಕಾಶವು ಪ್ರತಿಕ್ಷಣದಲ್ಲಿ ಉತ್ಪತ್ತಿಯುಳ್ಳದ್ದಾಗಿ ಕ್ಷಣಿಕವೆಂದು ವ್ಯವಹರಿಸಲ್ಪಡಬೇಕಾಗುತ್ತದೆ ಯಲ್ಲವೇ?

ಉ - ನಾಮಾಂತರ ರೂಪಾಂತರಗಳು ವಸ್ತುಗಳಿಗೆ ಆದರೆ ಆ ವಸ್ತುವಿಗೆ ವಿಕಾರವಾಯಿತು ಎಂದು ಹೇಳಬಹುದು ಹತ್ತಿಗೆ ವಸ್ತ್ರವೆಂದು ಹೆಸರು ಮತ್ತು ಆಕಾರ ವಿಶೇಷವು ಬಂದಾಗಲೇ ಆ ಹತ್ತಿಯು ವಸ್ತ್ರರೂಪ ವಿಕಾರವನ್ನು ಹೊಂದಿತು ಎಂದು ವ್ಯವಹಾರವು ಇದೆ ಇಂತಹ ವಿಕಾರ ರೂಪ ಉತ್ಪತ್ತಿಯು ಪ್ರತಿಕ್ಷಣದಲ್ಲಿ ಯಾವ ವಸ್ತುವಿಗೆ ಆಗುತ್ತದೋ ಆ ವಸ್ತು ಮಾತ್ರ ಕ್ಷಣಿಕವೆಂದು ವ್ಯವಹರಿಸಲ್ಪಡುವದು ಆಕಾಶಾದಿಗಳಿಗೆ ಇಂತಹ ವಿಕಾರವು ಮೂರ್ತದ್ರವ್ಯಗಳ ಸಂಬಂಧವು ಆದರೂ ಆಗುವುದಿಲ್ಲವಾದುದರಿಂದ ಆಕಾಶಾದಿಗಳು ಕ್ಷಣಿಕವಾಗಲಾರವು



## ೩೭೫ ಕ್ಷೋಭಣಃ

೧ ಸೃಷ್ಟಿಗೆ ಬೇಕಾದ ಕ್ಷೋಭೆಯನ್ನು—ಸ್ಪಂದನವನ್ನು ಉಂಟುಮಾಡುವವನು[2]

ಪ್ರಲಯಕಾಲದಲ್ಲಿ ಸೃಷ್ಟಿಕಾರ್ಯವು ಸ್ಥಗಿತವಾಗಿರುವುದರಿಂದ ಚಿತ್ಪ್ರಕೃತಿಯು ಜಗದ್ವ್ಯಾಪಾರ ದಿಂದ ಉಪರತಳಾಗಿರುವಳು ಸೃಷ್ಟಿಕಾರ್ಯವನ್ನು ಪ್ರಾರಂಭಿಸಬೇಕೆಂದು ಸಂಕಲ್ಪಿಸುವ ಭಗವಂತನು ತನ್ನ ಪತ್ನಿಯಾದ ಚಿತ್ಪ್ರಕೃತಿಯಲ್ಲಿ ಅನುರಾಗರೂಪವಾದ ಕ್ಷೋಭೆಯನ್ನುಂಟು ಮಾಡಿ ಗರ್ಭಾಧಾನ ಮಾಡುವನು. ಆಕೆ ಚತುರ್ಮುಖನಿಂದ ಅಭಿಮನ್ಯಮಾನವಾದ ಮಹತ್ತತ್ತ್ವವನ್ನು ಸೃಷ್ಟಿಸುವಳು.[3]

---

1 . ಉನ್ನಾಮಾ ಪಾಪ್ಮೋದ್ಗತಶ್ಚೋಚ್ಚ ಏವ ಚ । -ಸತ್ತತ್ತ್ವ (ಛಾಂ. ಉ. ಭಾ.)

೧ 2 ಸೃಷ್ಟ್ಯರ್ಥಂ ಕ್ಷೋಭಯತೀತಿ ಕ್ಷೋಭಣಃ ।

3 ದೈವಾತ್ ಕ್ಷುಭಿತಧರ್ಮಿಣ್ಯಾಂ ಸ್ವಸ್ಯಾಂ ಯೋನೌ ಪರಃ ಪುಮಾನ್ । ಆಧತ್ತ ವೀರ್ಯಂ ಸಾಸೂತ ಮಹತ್ತತ್ತ್ವಂ ಹಿರಣ್ಮಯಮ್ -ಭಾಗ. 3-27-20

ಪ್ರಕೃತಿಯಿಂದ ಪುರುಷ ಎನಿಸುವ ಹಿರಣ್ಯಗರ್ಭನೂ, ಪ್ರಕೃತಿ ಎನಿಸುವ ಶ್ರದ್ಧಾನಾಮಕಳಾದ ಚತುರ್ಮುಖನ ಪತ್ನಿಯೂ ಹುಟ್ಟುವರು[1] ಭಗವಂತನು ಸ್ವೇಚ್ಛೆಯಿಂದ ಅವರಿಬ್ಬರನ್ನೂ ಪ್ರವೇಶಿಸಿ ಅವರಲ್ಲಿ ಕ್ಷೋಭೆಯನ್ನುಂಟು ಮಾಡುವನು[2]. ಹಾಗೆಯೇ ತ್ರಿಗುಣಾತ್ಮಿಕವಾದ ಜಡಪ್ರಕೃತಿಯಲ್ಲಿ ತನ್ನ ಸಾಮರ್ಥ್ಯದಿಂದ ಕ್ಷೋಭೆಯನ್ನುಂಟು ಮಾಡಿ, ಅದರ ಗುಣಗಳ ಪ್ರಮಾಣದಲ್ಲಿ ವೈಷಮ್ಯ ಸಂಭವಿಸುವಂತೆ ಮಾಡುವನು ಆ ಮೂಲಕ ಜಗತ್ತಿನ ಸೃಷ್ಟಿಯನ್ನು ಮಾಡುವನು[8] ಗಂಧವು ಹೇಗೆ ತನ್ನ ಸನ್ನಿಧಾನದಿಂದ ಮನಸ್ಸಿನ ಮೇಲೆ ಕ್ಷೋಭೆಯನ್ನುಂಟು ಮಾಡುವುದೋ ಅಂತೆಯೇ ಭಗವಂತನು ತನ್ನ ಸನ್ನಿಧಾನದಿಂದಲೇ ಕ್ಷೋಭಕನಾಗಿರುವನು[4]

---

* ದೈವಾಖ್ಯನಾರಾಯಣಪ್ರೇರಣಾತ್ ಕ್ಷುಭಿತಧರ್ಮಿಣ್ಯಾಂ ಮನಸಿ ರಾಗಾಖ್ಯಕ್ಷೋಭವತ್ಯಾಂ ಸ್ವಸ್ಯಾಂ ಯೋನೌ ಸ್ವಭಾರ್ಯಾಯಾಂ ಪ್ರಕೃತಿಸಂಜ್ಞಾಯಾಂ ಶ್ರೀದೇವ್ಯಾಂ ಪರಃ ಪುಮಾನ್ ಮೂಲರೂಪಾದಭಿವ್ಯಕ್ತಪರಮಪುರುಷಾಖ್ಯದ್ವಿತೀಯರೂಪವಾನ್ ಪರಮಾತ್ಮಾ ವೀರ್ಯಮಾಧತ್ತ ಗರ್ಭಮದಧಾತ್ । ಸಾ ಹಿರಣ್ಮಯಂ ಮಹತ್ತತ್ತ್ವಂ ಬ್ರಹ್ಮಾಣಾಽಭಿಮನ್ಯಮಾನಮಸೂತ -ಅನಂತತೀರ್ಥಾಃ

* ಪ್ರಕೃತೇಃ ಕ್ಷೋಭಕಂ ರೂಪಂ ದೈವಂ ನಾರಾಯಣಾಭಿಧಮ್ । -ಕಾಪಿಲೇಯ (ಭಾಗ ತಾ ನಿ )

1 ವೀರ್ಯಮಾಧತ್ತ ಪುರುಷೋ ಮಹಾಂಸ್ತಸ್ಮಾದಜಾಯತ । ಯೋಽಸೌ ಹಿರಣ್ಯಗರ್ಭಾಖ್ಯಃ ಪುರುಷಃ ಸೋಽಪಿ ಭಣ್ಯತೇ । ಶ್ರದ್ಧೇತ್ಯುಕ್ತಾ ಹಿ ತತ್ಪತ್ನೀ ಸಾಽಪಿ ಪ್ರಕೃತಿರುಚ್ಯತೇ । -ವ್ಯೋಮಸಂಹಿತಾ (ಭಾಗ ತಾ. ನಿ. 2-6-41)

2 ಪ್ರಧಾನಪುರುಷೌ ಚಾಪಿ ಪ್ರವಿಶ್ಯಾತ್ಮೇಚ್ಛಯಾ ಹರಿಃ । ಕ್ಷೋಭಯಾಮಾಸ ಸಂಪ್ರಾಪ್ತೇ ಸರ್ಗಕಾಲೇ -ವಿ ಪು ಪ್ರ ಅಂಶ 2-29

* ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ । ಕ್ಷೋಭಯಾಮಾಸ ಭಗವಾನ್ ಸೃಷ್ಟ್ಯರ್ಥಂ ಜಗತೋ ವಿಭುಃ । -ಕೌರ್ಮ (ಬ್ರ ಸೂ ಭಾ. 2-1 21)

3 ಕೇವಲಾತ್ಮಾನುಭಾವೇನ ಸ್ವಮಾಯಾಂ ತ್ರಿಗುಣಾತ್ಮಿಕಾಮ್ ।
ಸಂಕ್ಷೋಭಯನ್ ಸೃಜತ್ಯಾದೌ ತಯಾ ಸೂತ್ರಮರಿಂದಮ ।
-ಭಾಗ. 11-9-19

4 ಯಥಾ ಸನ್ನಿಧಿಮಾತ್ರೇಣ ಗಂಧಃ ಕ್ಷೋಭಾಯ ಜಾಯತೇ । ಮನಸೋ ನೋಪಕರ್ತೃತ್ವಾತ್ತಥಾಽಸೌ ಪರಮೇಶ್ವರಃ ॥ ಸ ಏವ ಕ್ಷೋಭಕಃ...
-ವಿ. ಪು. ಪ್ರ. ಅಂಶ 2-30

೨ (ಸೃಷ್ಟಿಗೆ ಅನುಕೂಲವಾದ) ಕ್ಷೋಭೆಯನ್ನು ಹೋಗಲಾಡಿಸುವವನು.[1]

ಸೃಷ್ಟಿಕಾಲದಲ್ಲಿ ಸೃಷ್ಟಿಗಾಗಿ ಪ್ರಕೃತ್ಯಾದಿಗಳಲ್ಲಿ ಕ್ಷೋಭೆಯನ್ನುಂಟು ಮಾಡುವ ಭಗವಂತನು, ಪ್ರಲಯಕಾಲದಲ್ಲಿ ಸಂಹಾರಮಾಡಬೇಕೆಂದು ಸಂಕಲ್ಪಿಸಿದಾಗ ಪ್ರಕೃತ್ಯಾದಿಗಳಲ್ಲಿರುವ ಕ್ಷೋಭೆಯನ್ನು ಹೋಗಲಾಡಿಸುವನು.

೩ (ಸಮುದ್ರದಲ್ಲಿ) ಸಂಚಲನೆಯನ್ನು ಒದಗಿಸಿರುವನು[2]

ಉಗ್ರಶ್ರವಸ್‌ಸೂತರು ಭಾಗವತದ ಉಪಸಂಹಾರದಲ್ಲಿ ಕೂರ್ಮರೂಪಿ ಭಗವಂತನನ್ನು ಸ್ತುತಿಸುತ್ತ—ಕೂರ್ಮರೂಪಿ ಭಗವಂತನ ಬೆನ್ನ ಮೇಲೆ ಮಂದರ ಪರ್ವತದಿಂದ ಮಂಥನ ನಡೆದಾಗ, ಅವನಿಗೆ ಅದು ತುರಿಸುವಂತೆ ಅನಿಸಿ, ಅದರಿಂದ ಆರಾಮವಾಗಿ ನಿದ್ರಿಸಿದ ಅವನ ಶ್ವಾಸಾನಿಲದಿಂದಾಗಿ ಸಮುದ್ರದಲ್ಲಿ ತರಂಗಗಳು ಎದ್ದಿದ್ದವು, ಅದರ ಸಂಸ್ಕಾರದಿಂದಾಗಿಯೇ ಈಗಲೂ ತರಂಗಗಳ ಹೊಡೆತಗಳು ನಡೆಯುತ್ತಲೇ ಇವೆ—ಕೂರ್ಮನ ಅಂತಹ ಶ್ವಾಸಾನಿಲಗಳು ನಮ್ಮನ್ನು ಕಾಪಾಡಲಿ[3]—ಎಂದು ಪ್ರಾರ್ಥಿಸುವುದರ ಮೂಲಕ ಸಮುದ್ರದಲ್ಲಿ ತರಂಗಗಳ ಮೂಲಕ ಉಂಟಾಗುವ ಸಂಚಲನೆಗೆ ಭಗವಂತನೇ ಕಾರಣನೆಂದು ಆಲಂಕಾರಿಕವಾಗಿ ಸೂಚಿಸಿರುವರು

## ಜಿಜ್ಞಾಸೆ

[ಎರಡು ಪ್ರಕಾರದ ಪ್ರಕೃತಿ]

ಪ್ರ:- ಪ್ರಕೃತಿಯು ಸರ್ವತ್ರ ವ್ಯಾಪ್ತವೆಂದು ಮಧ್ವಸಿದ್ಧಾಂತ. ತತ್ತ್ವೋದ್ಯೋತ ಗ್ರಂಥದಲ್ಲಿ ಪರಿಚ್ಛಿನ್ನತ್ವರೂಪ ಹೇತುವಿಗೆ ಪ್ರಕೃತಿಯಲ್ಲಿ ಅಸಿದ್ಧಿಯನ್ನು ಹೇಳಿದ್ದಾರೆ ಇದರಿಂದ ಪ್ರಕೃತಿಯು ಅಪರಿಚ್ಛಿನ್ನ—ವ್ಯಾಪ್ತವೆಂದು ಆಚಾರ್ಯರ ಅಭಿಪ್ರಾಯ ಎಂದು ತಿಳಿಯುತ್ತದೆ. ಅಂತಹ ವ್ಯಾಪ್ತವಾದ ಪ್ರಕೃತಿಯಲ್ಲಿ ಸೃಷ್ಟಿಗೆ ಅನುಕೂಲವಾದ ಕ್ಷೋಭೆಯನ್ನು ಅಂದರೆ ಕ್ರಿಯೆಯನ್ನು ಪರಮಾತ್ಮನು ಹೇಗೆ ಸೃಷ್ಟಿ ಮಾಡುವನು?

---

೨ 1 ಸೃಷ್ಟ್ಯನುಕೂಲಂ ಕ್ಷೋಭಂ ಅಪನಯತೀತಿ ಕ್ಷೋಭಣಃ ।

೩ 2 ಕ್ಷೋಭಂ ಸಮುದ್ರೇ ಸಂಚಲನಂ ನಯತಿ ಪ್ರಾಪಯತೀತಿ ಕ್ಷೋಭಣಃ ।

3 ಪೃಷ್ಠೇ ಭ್ರಾಮ್ಯದಮಂದಮಂದರಗಿರಿಗ್ರಾವಾಗ್ರಕಂಡೂಯನಾನ್ನಿದ್ರಾಲೋಃ ಕಮಠಾಕೃತೇರ್ಭಗವತಃ ಶ್ವಾಸಾನಿಲಾಃ ಪಾಂತು ವಃ। ಯತ್ಸಂಸ್ಕಾರಕಲಾನುವರ್ತನವಶಾದ್ ವೇಲಾನಿಭೇನಾಂಭಸಾಂ ಯಾತಾಯಾತಮತಂದ್ರಿತಂ ಜಲನಿಧೇರ್ನಾದ್ಯಾಪಿ ವಿಶ್ರಾಮ್ಯತಿ॥
-ಭಾಗ. 12-13-2

ಉ,- ಪ್ರಕೃತಿಯು ಎರಡು ಪ್ರಕಾರದ್ದು ಇದೆ. ಒಂದು ವ್ಯಾಪ್ತ, ಇನ್ನೊಂದು ಸೂಕ್ಷ್ಮ. ಮರವು ಹುಟ್ಟಬೇಕಾದರೆ ಮಣ್ಣು ಮತ್ತು ಬೀಜ ಎರಡೂ ಉಪಾದಾನ ಕಾರಣ. ಅದರಂತೆ ಪ್ರಪಂಚಕೆ ವ್ಯಾಪ್ತ ಪ್ರಕೃತಿ ಸೂಕ್ಷ್ಮಪ್ರಕೃತಿ ಈ ಎರಡೂ ಪ್ರಕೃತಿಗಳು ಬೇಕು ಆ ಸೂಕ್ಷ್ಮಪ್ರಕೃತಿಯಲ್ಲಿ ಕ್ರಿಯಾರೂಪ ಕ್ಷೋಭೆಯನ್ನು ಪರಮಾತ್ಮನು ಉಂಟು ಮಾಡುತ್ತಾನೆ. ಸ್ಥೂಲ ಪ್ರಕೃತಿಯಲ್ಲಿ ಅವಸ್ಥಾ ವಿಶೇಷರೂಪ ಕ್ಷೋಭೆಯನ್ನು ಉಂಟುಮಾಡುತ್ತಾನೆ.



## ೩೭೬ ದೇವಃ

೧ ಪ್ರಕಾಶಿಸುವವನು.[1]

೨ (ಎಲ್ಲವನ್ನೂ) ಜಯಿಸುವವನು.[2]

೩ (ಜೀವಾತ್ಮರಿಗೆ ಕರ್ಮಫಲಗಳನ್ನು ಕೊಡಲು) ಇಚ್ಛಿಸುವವನು.[3]

೪ ಎಲ್ಲರಿಂದಲೂ ಸ್ತುತಿಸಲು ಯೋಗ್ಯನಾದವನು.[4]

೫ (ಜಗತ್ತಿನ) ಸೃಷ್ಟ್ಯಾದಿ ವ್ಯವಹಾರವನ್ನು ನಡೆಸುವವನು.[5]

೬ ಎಲ್ಲೆಡೆ ಇರುವವನು.[6]

---

೧ 1 ದೀವ್ಯತಿ ದ್ಯೋತತ ಇತಿ ದೇವಃ । 'ದಿವು ದ್ಯುತೌ' ।

೨ 2 ದೀವ್ಯತಿ ಸರ್ವಂ ಜಯತೀತಿ ದೇವಃ । 'ದಿವು ವಿಜಯೇ' ।

೩ 3 ದೀವ್ಯತಿ ಜೀವಾತ್ಮನಾಂ ಕರ್ಮಫಲಂ ದಾತುಮಿಚ್ಛತೀತಿ ದೇವಃ । 'ದಿವು ಕಾಂತೌ' । ಕಾಂತಿರಿಚ್ಛಾ ।

೪ 4 ದೀವ್ಯತೇ ಸರ್ವೈಃ ಸ್ತೂಯತ ಇತಿ ದೇವಃ । 'ದಿವು ಸ್ತುತೌ' ।

೫ 5 ದೀವ್ಯತಿ ಜಗತ್ಸೃಷ್ಟ್ಯಾದೌ ವಿಷಯೇ ವ್ಯವಹರತೀತಿ ದೇವಃ । 'ದಿವು ವ್ಯವಹೃತೌ'

೬ 6 ದೀವ್ಯತಿ ಸರ್ವತ್ರ ಗಚ್ಛತೀತಿ ದೇವಃ । 'ದಿವು ಗತೌ' ।

೭ ಕ್ರೀಡಿಸುತ್ತಿರುವವನು[1]

ಮೇಲಿನ ಈ ಏಳೂ ಅರ್ಥಗಳನ್ನು ಇಟ್ಟುಕೊಂಡು ಅಗ್ನಿ ಸೂಕ್ತದಲ್ಲಿ ಅಗ್ನಿನಾರಾಯಣನನ್ನು 'ದೇವ' ಎಂದು ವಿಶೇಷಿಸಲಾಗಿದೆ[2]—ಎಂದು ಶ್ರೀಮದಾಚಾರ್ಯರು ಸ್ಪಷ್ಟಪಡಿಸಿರುವರು.[3]

೮ ದಾನ ಮಾಡುವವನು ಮತ್ತು ಎಲ್ಲೆಡೆ ಇರುವವನು.[4]

ವಾಸುದೇವ ನಾಮದ ಅರ್ಥವನ್ನು ಹೇಳ ಹೊರಟ ಸೌಕರಾಯಣ ಶ್ರುತಿಯು 'ದೇವ'ಶಬ್ದವನ್ನು ಈ ಅರ್ಥದಲ್ಲೂ ಭಗವಂತನಲ್ಲಿ ಸಮನ್ವಯಿಸಿದೆ.[5]

೯ ಸ್ವಪ್ನಾವಸ್ಥೆಯನ್ನು ನಿದ್ರಾವಸ್ಥೆಯನ್ನು, ನಿಯಮಿಸುವವನು.[6]

---

೭ 1 ದೀವ್ಯತಿ ರಮಂತೇ ಇತಿ ದೇವಃ । 'ದಿವು ರತೌ' ।

2 ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಂ ..

—ಋ. ವೇ. 1–1

3 ದ್ಯೋತನಾದ್ ವಿಜಯಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ । ಗತ್ಯಾ ರತ್ಯಾ ಚ ದೇವಾಖ್ಯಂ... -ಋ. ಭಾ.

* ದ್ಯೋತನಾದೇಃ ಕರ್ತೃತ್ವಾತ್ತಥಾ ಸ್ತುತ್ಯಾ ಸ್ತುತಿಕರ್ಮತ್ವಾದ್ದೇವಾಖ್ಯಮ್ । ದೀವ್ಯತೇ-ರ್ದ್ಯೋತನಾದ್ಯರ್ಥಾತ್ ಕರ್ತರಿ ಪಚಾದ್ಯಚ್ । ಸ್ತುತ್ಯರ್ಥಾತ್ ಕರ್ಮಣಿ ಘಞ್ ।

—ಋ. ಭಾ. ಟೀ.

೮ 4 ದಾಶೃತಃ ದಾತೃತ್ವಾದ್ದದಾತೇರೇಕಾರಃ, 'ಕ್ವಸ್ಯೇಜಂತಃ' ಇತ್ಯವ್ಯಯಮ್ । ಸರ್ವತ್ರ ವರ್ತತ ಇತಿ ವಃ । 'ವೃತು ವರ್ತನೇ' ಅತೋ ಡಃ । ದೇ ಚಾಸೌ ವಶ್ಚ ದೇವಃ ।

—ಕ. ನಿ. ಟೀಕಾಧಾರೇಣ

5 '.....ದಾತೃತ್ವತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ'

-ಸೌಕರಾಯಣಶ್ರುತಿ (ಕ.ನಿ.)

೯ 6 ದೇವಯತಿ ಸ್ವಾಪಯತಿ ಸ್ವಪ್ನಾವಸ್ಥಾಂ, ನಿದ್ರಾವಸ್ಥಾಂ ಚ ನಿಯಮಯತೀತಿ ದೇವಃ । 'ದಿವು ಸ್ವಪ್ನೇ' ।

ಭಗವಂತನ ತೈಜಸನಾಮಕ ರೂಪವು ಜೀವಾತ್ಮರಿಗೆ ಸ್ವಪ್ನಾವಸ್ಥೆಯನ್ನೂ,[1] ಪ್ರಾಜ್ಞನಾಮಕ ರೂಪವು ಸುಷುಪ್ತ್ಯವಸ್ಥೆಯನ್ನೂ ನಿಯಮಿಸುತ್ತಿರುವುದು.[2]

೧೦ ಯಾವಾಗಲೂ ಆನಂದವನ್ನನುಭವಿಸುವವನು[3]

ಜೀವಾತ್ಮರು ಸುಷುಪ್ತ್ಯವಸ್ಥೆಯಲ್ಲಿ ಮಾತ್ರ ಆನಂದವನ್ನು ಅನುಭವಿಸುತ್ತಿರುವರು ಭಗವಂತನಾದರೂ ಸುಷುಪ್ತಿಗೊಳಗಾಗದಿದ್ದರೂ ಸುಖಿಯಾಗಿರುವನು ಆದ್ದರಿಂದಲೇ ಶಾಸ್ತ್ರವು ಅವನನ್ನು ಸುಖರೂಪಿ ಎಂದು ಸಾರುತ್ತಿವೆ—ಎಂದು ಶ್ರೀಮದಾಚಾರ್ಯರು ಸಂದೇಶಿಸಿರುವರು.[4] ದೇವಶಬ್ದವು ದೇವತಾಸಾಮಾನ್ಯವಾಚಕವಾದರೂ, ವಿಶೇಷವಾಗಿ ಸವಿತೃನಾಮಕ ಭಗವಂತನೇ ದೇವನು. ಉಳಿದವರೆಲ್ಲ ದೇವಾಭಾಸರಷ್ಟೇ ಎಂದಿದೆ ಋಗ್ವೇದ[5] ಶ್ರೀಮನ್ನಾರಾಯಣನೇ 'ದೇವ'ನು. ಆದ್ದರಿಂದಲೇ ಶಾಸ್ತ್ರವಲ್ಲಿ ಬರೇ ದೇವಶಬ್ದದಿಂದಲೂ ಭಗವಂತನನ್ನು ಉಲ್ಲೇಖಿಸುವುದಿದೆ[6]

---

1 ಚಿತ್ತಸ್ಥೋ ದರ್ಶಯೇದ್ ಯಸ್ಮಾತ್ ತೈಜಸಃ ಸ್ವಪ್ನಕೃದ್ಧರಿಃ ।
–ಪ್ರಕಾಶಿತಾ (ಮಾಂ. ಉ ಭಾ. 1-1 4)

2 ಸುಷುಪ್ತಂ ತು ತಮೋ ಜ್ಞೇಯಂ ಹರಿಂ ಪ್ರಾಪ್ಯ ತದಾವೃತಃ । ನ ಕಾಮಯೇನ್ನೈವ ಪಶ್ಯೇಜ್ಜೀವಃ ಸ್ವಾತ್ಮತಮೋ ವಿನಾ । ಕಾಲಂ ಚ ತಸ್ಯ ಸ್ಥಾನಸ್ಯ ಪತಿಃ ಪ್ರಾಜ್ಞೋ ಹರಿಃ ಸ್ವಯಮ್" । ಪ್ರಕಾಶಿಕಾ(ಮಾಂ ಉ. ಭಾ. 1-1 5)

೧೦ 3 ದೀವ್ಯತಿ ಸತತಂ ಮೋದತೇ ಇತಿ ದೇವಃ । 'ದಿವು ಮೋದೇ'

4 'ಯದಸುಪ್ತಿಗತೋ ಹರಿಃ ಸುಖವಾನ್ । ಸುಖರೂಪಿಣಮಾಹುರತೋ ನಿಗಮಾಃ'
-ದ್ವಾ. ಸ್ತೋ. 4 14

5 'ಸಃ ದೇವತಾ '। –ಋ. ವೇ. 22–5

ಸ ಏವ ದೇವತಾ ಮುಖ್ಯಾ . । –ಋ. ಭಾ.
ಅತ್ರ ದೇವತಾಶಬ್ದೋ ದೇವಪರ್ಯಾಯೋ ಗೃಹೀತಃ । ....ಸ ಏವ ದೇವತಾ ಅನ್ಯೇ ತು ದೇವಾಭಾಸಾಃ । –ಋ ಭಾ. ಟೀ

6 ಸಹಸ್ರಶೀರ್ಷಂ ದೇವಂ .. । –ಮ. ನಾರಾ. ಉ.13 1

* ಏಷೋ ಹ ದೇವಃ . । –ಶ್ವೇ. ಉ. 2–16
* ಏಷ ದೇವೋ ವಿಶ್ವಕರ್ಮಾ... –ಶ್ವೇ. ಉ 4–17

## ಜಿಜ್ಞಾಸೆ

[ಶಾಸ್ತ್ರಂ ಪ್ರಮಾಣಂ]

ಪ್ರ - ಸ್ವಪ್ನದಲ್ಲಿ ಪರಮಾತ್ಮನು ಬಹು ವಿಚಿತ್ರ ಪದಾರ್ಥಗಳನ್ನು ಸೃಷ್ಟಿಮಾಡಿ ಜೀವನಿಗೆ ತೋರಿಸು ವನು ಆ ಸ್ವಪ್ನ ಪದಾರ್ಥಗಳು ಕ್ಷಣಿಕಗಳು ಇಂತಹ ಪದಾರ್ಥಗಳಿಂದ ಯಾವ ಕಾರ್ಯವೂ ಆಗುವುದಿಲ್ಲ. ಆದುದರಿಂದ ಪರಮಾತ್ಮನ ಸ್ವಾಪ್ನವಸ್ತುವಿನ ಸೃಷ್ಟಿಯು ವ್ಯರ್ಥವಾಯಿತಲ್ಲ? 'ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ' ಎಂಬ ಶ್ರುತಿಯು ಪರಮಾತ್ಮನು ಮಾಡುವ ಸೃಷ್ಟಿಯು ಮೋಘವು ಅಲ್ಲ ಎಂದು ಹೇಳುತ್ತದೆ ಅದು ಹೇಗೆ ಸತ್ಯವಾಗುತ್ತದೆ?

ಉ – ಪರಮಾತ್ಮನು ಸೃಷ್ಟಿಮಾಡಿದ ವಸ್ತುಗಳಿಗೆಲ್ಲ ಪ್ರಯೋಜನವನ್ನು ನಮಗೆ ತಿಳಿಯಲು ಯೋಗ್ಯತೆ ಇಲ್ಲ ಶಾಸ್ತ್ರದಲ್ಲಿ ಪರಮಾತ್ಮನ ಯಾವ ಸೃಷ್ಟಿಯೂ ವ್ಯರ್ಥವಲ್ಲ ಎಂದು ಹೇಳು ತ್ತದೆ 'ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ' ಎಂದು ಗೀತೆಯಲ್ಲಿ ಹೇಳಿದಂತೆ ಶಾಸ್ತ್ರವನ್ನು ನಾವು ಪ್ರಮಾಣವನ್ನಾಗಿ ತಿಳಿದು ಅದು ಹೇಳಿದಂತೆ ತಿಳಿಯಬೇಕು ಹಾಗೆ ಮಾಡಬೇಕು ತಾಯಿಯು ತನ್ನ ಮಗುವಿಗೆ ಏನನ್ನು ಹೇಳುತ್ತಾಳೋ ಅದನ್ನು ಮಗುವು ಹಾಗೆ ತಿಳಿದು ಹಾಗೆ ಮಾಡುತ್ತದೆ



## ೩೭೭ ಶ್ರೀಗರ್ಭಃ

೧ ಲಕ್ಷ್ಮೀದೇವಿಯ ಗರ್ಭಕ್ಕೆ ಆಧಾಯಕನಾಗಿರುವವನು.[1]

ಪ್ರಲಯಕಾಲದಲ್ಲಿ ನಾರಾಯಣ ಎಂದೆನಿಸಿದ್ದ ಭಗವಂತನು ಜಗತ್ ಸೃಷ್ಟಿ ಮಾಡಲು ಸಂಕಲ್ಪಿಸಿ ಪುರುಷ ಎನಿಸುವ ಮತ್ತೊಂದು ರೂಪವನ್ನು ಧರಿಸಿ, ರಮಾದೇವಿಯ ಪ್ರಕೃತಿ ಎಂಬ ಹೆಸರಿನ ಮತ್ತೊಂದು ರೂಪದಲ್ಲಿ ವೀರ್ಯಸೇಚನೆ ಮಾಡುವನು ಎಂಬುದಾಗಿ ವ್ಯೋಮಸಂಹಿತೆ ತಿಳಿಸಿದೆ.[2] ಹೀಗೆ

---

* ಏಕೋ ದೇವಃ ಸರ್ವಭೂತೇಷು ಗೂಢಃ. । -ಶ್ವೇ. ಉ. 6-11

* ದೇವಸ್ಯೈಷ ಮಹಿಮಾ ತು ಲೋಕೇ... । -ಶ್ವೇ. ಉ. 6-1

* ದೇವಸ್ಯೈಷಃ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ ॥ -ಮಾಂ. ಉ. -1-1-15

೧ 1 ಶ್ರಿಯೋ ಗರ್ಭೋ ಯಸ್ಮಾದಿತಿ ಶ್ರೀಗರ್ಭಃ । -ಸ. ಸಂ.

2 ಯಃ ಶೇತೇ ಪ್ರಳಯೇ ವಿಷ್ಣುಃ ಶೂನ್ಯನಾಮಾ ಮಹಾಕೃತಿಃ । ಸ ತು ನಾರಾಯಣೋ ನಾಮ ನರಾಣಾಮಯನತ್ವತಃ । ರೂಪಂ ದ್ವಿತೀಯಂ ಭವತಿ ದೀಪಾದ್ ದೀಪಾಂತರಂ

ರಮಾದೇವಿಯಲ್ಲಿ ನಡೆಸಿದ ವೀರ್ಯಸೇಚನೆಯಿಂದಾಗಿ, ಆಕೆಯಲ್ಲಿ ಗರ್ಭಾಧಾನ ಮಾಡಿದಂತಾಯಿತು. ಈ ಗರ್ಭವೇ ಸಕಲ ಪ್ರಜೆಗಳ ಉತ್ಪತ್ತಿಗೂ ಕಾರಣವಾಗಿದೆ[1]

೨ ಲಕ್ಷ್ಮೀದೇವಿಯಿಂದ ಸ್ತುತಿಸಲ್ಪಡುವವನು[2]

ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿದ್ದರೂ ಭಗವಂತನಲ್ಲಿ ಭಕ್ತಿ ವಿಶೇಷವಿರುವುದರಿಂದ ಭಗವಂತನ ಉಪಾಸನಾದಿಗಳನ್ನು ನಡೆಸುತ್ತಲೇ ಇರುವಳೆಂದು ಬ್ರಹ್ಮಸೂತ್ರವೊಂದು ಸಿದ್ಧಾಂತಿಸಿದೆ[3] ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿದ್ದು ಪ್ರಾಪ್ತಕಾಮಳಾಗಿದ್ದರೂ ನಿತ್ಯವೂ ಶ್ರೀಹರಿಯನ್ನು ಉಪಾಸಿಸುತ್ತಿರುವಂತೆ ಭಗವದ್ಭಕ್ತನಾದವನು ಯಾವತ್ತೂ ಭಗವಂತನನ್ನು ಉಪಾಸಿಸುತ್ತಿರಬೇಕೆಂದು 'ಬೃಹತ್ತಂತ್ರ' ಸಂದೇಶಿಸಿದೆ[4] ಭಗವಂತನ ಅನುಗ್ರಹದಿಂದ ವೈಕುಂಠವನ್ನು ಕಂಡ

---

ಯಥಾ । ಸಿಸೃಕ್ಷೋಽಸ್ತಸ್ಯ ಪುರುಷ ಇತ್ಯಾಹುಸ್ತದ್ ವಿದೋ ಜನಾಃ । ಸ ರಮಾಯಾ ದ್ವಿತೀಯೇ ತು ರೂಪೇ ಪ್ರಕೃತಿಸಂಜ್ಞಿತೇ । ವೀರ್ಯಮಾಧತ್ತ

ವ್ಯೋಮಸಂಹಿತಾ (2-6-41)

1 ವಾಸುದೇವಃ ಪುಮಾನ್ ನಾಮ ಪೂರ್ಣತ್ವಾತ್ ಸ ಸ್ತ್ರಿಯೋಽಕ್ಷಿತಿ । ರಮಾಯಾಂ ಗರ್ಭಮದಧಾತ್ ಪ್ರಜಾಸ್ತಸ್ಮಾತ್ ಪ್ರಜಜ್ಞಿರೇ । ಆ ಉ ಭಾ. (1 3-5)

* ಮಮ ಯೋನಿರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ । ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ -ಗೀ 14-3

ಮಮ ಯೋನಿರಿತಿ ಗರ್ಭಾಧಾನಾರ್ಥಂ ಯೋನಿಃ ।

-ಗೀ. ಭಾ.

೨ 2 ಶ್ರಿಯಾ ಲಕ್ಷ್ಮ್ಯಾ ಗೀರ್ಯತೇ ಶಬ್ದ್ಯತೇ, ಸ್ತೂಯತ ಇತಿ ಯಾವತ್ ಶ್ರೀಗರ್ಭಃ। 'ಗೃ ಶಬ್ದೇ' ।

3 'ಆದರಾದಲೋಪಃ' ಬ್ರ. ಸೂ. 3-3-41

ಅಬದ್ಧತ್ವೇಽಪಿ ಭಕ್ತಿವಿಶೇಷಾದೇವೋಪಾಸನಾದ್ಯಲೋಪಃ ಶ್ರಿಯಾ ಭವತಿ ।

-ಬ್ರ. ಸೂ. ಭಾ.

4 ಯಥಾ ಶ್ರೀರ್ನಿತ್ಯಮುಕ್ತಾಪಿ ಪ್ರಾಪ್ತಕಾಮಾಪಿ ಸರ್ವದಾ । ಉಪಾಸ್ತೇ ನಿತ್ಯಶೋ ವಿಷ್ಣುಮೇವಂ ಭಕ್ತೋ ಹರೇರ್ಭವೇತ್

-ಬೃಹತ್ತಂತ್ರ (ಬ್ರ. ಸೂ. ಭಾ. 3-3-41)

ಚತುರ್ಮುಖನು, ಅಲ್ಲಿ ಲಕ್ಷ್ಮೀದೇವಿಯು ತನ್ನ ವಲ್ಲಭನ ಭಕ್ತಪಾಲನಾದಿ ಕರ್ಮಗಳನ್ನು ಅನಂತ ವೇದಾದಿಗಳಿಂದ ಹಾಡಿ ಹೊಗಳುತ್ತ ಗೌರವಿಸುತ್ತಿರುವುದನ್ನು ಕಂಡಿರುವನು[1]

೩ ಸರಸ್ವತಿಯಿಂದ ಸ್ತುತಿಸಲ್ಪಡುವವನು[2]

ಶ್ರುತ್ಯಭಿಮಾನಿನಿಯಾದ ಸರಸ್ವತೀ ದೇವಿಯು ದೇವತೆಗಳನ್ನು ಸಂಬೋಧಿಸಿ, ತನ್ನಿಂದ ಅಭಿಮನ್ಯಮಾನವಾದ ಶಾಸ್ತ್ರವು ಯಾವಾಗಲೂ ಭಗವಂತನ ಗುಣೋಕ್ತಿಪರವಾಗಿಯೇ ಇರುವಂತಹದ್ದು ಪ್ರಾಸಂಗಿಕವಾಗಿ ಬೇರೆ ವಿಚಾರ ಪ್ರಸ್ತಾಪಿಸಲ್ಪಟ್ಟರೂ ಅದರ ಮುಖ್ಯೋದ್ದೇಶ ಭಗವಂತನ ಗುಣಗಳ ಪ್ರತಿಪಾದನೆಯೇ ಆಗಿರುವುದು ಭಗವಂತನ ಗುಣಗಳಿಗೆ ವಿರೋಧಿಯಾದ ಅರ್ಥವು ಶಾಸ್ತ್ರದ ಅರ್ಥವಾಗಲು ಸಾಧ್ಯವೇ ಇಲ್ಲ ಹೀಗೆ ತನ್ನಿಂದ ಅಭಿಮನ್ಯಮಾನವಾದ ಶಾಸ್ತ್ರದ ಮೂಲಕ ತಾನು ಭಗವಂತನನ್ನು ಅನುಸರಿಸಿಕೊಂಡೇ ಇರುವುದರಿಂದಲೇ 'ಸರಸ್ವತೀ' ಎಂದೆನಿಸಿರುವುದಾಗಿ ಸಂದೇಶಿಸಿರುವುದನ್ನು ಮಹೋಪನಿಷತ್ತು ಉಲ್ಲೇಖಿಸಿದೆ[3]

೪ ಪುರುಷಾರ್ಥತ್ರಯಕ್ಕೆ ಅಥವಾ ಸಂಪತ್ತಿಗೆ ಅಥವಾ ಶೋಭೆಗೆ ಉದರದಂತೆ ಆಧಾರನಾಗಿರುವವನು[4]

---

1 ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ ಕರೋತಿ ಮಾನಂ ಬಹುಧಾ ವಿಭೂತಿಭಿಃ । ಪ್ರಿಯಕರ್ಮ ಗಾಯತೀ —ಭಾಗ. 2-9-13

* ಸ್ವಯಂ ಮುಕುಂದಸ್ಯ ಭರ್ತುಃ ಕರ್ಮ ಗಾಯತೀ ಅನಂತವೇದಾದಿಭಿರ್ಗಾಯಂತೀ ಮಾನಂ ಕರೋತಿ -ಅನಂತತೀರ್ಥಾಃ

೩ 2 ಶ್ರಿಯಾ ಸರಸ್ವತ್ಯಾ ಗೀರ್ಯತೇ ಸ್ತೂಯತ ಇತಿ ಶ್ರೀಗರ್ಭಃ । 'ಲಕ್ಷ್ಮೀಸರಸ್ವತೀಧಾ. . ಶೋಭಾಸು । ಶ್ರೀರಿತಿ ಪ್ರಥಿತಾ' —ವ್ಯಾಡಿಃ ।

3 ವಿಷ್ಣೋರ್ಗುಣೋಕ್ತಿಪರತಾ ಮಮ ನಿತ್ಯಂ ಸುರೇಶ್ವರಾಃ । ತದರ್ಥಮನ್ಯದ್ ವಚನಮಶಸ್ತಸ್ಯ ವಿರೋಧಿ ಯತ್ । ತನ್ಮಮಾರ್ಥೋ ನಹಿ ಕ್ವಾಪಿ ಸಾಽಹಂ ತತ್ಸರಣಾತ್ ಸದಾ । ಸರಸ್ವತೀತಿ ಸಂಪ್ರೋಕ್ತಾ -ಮಹೋಪನಿಷತ್ (ಮಾಂ. ಉ. ಭಾ. 1-2-3)

೪ 4 ಶ್ರಿಯಃ ತ್ರಿವರ್ಗಸ್ಯ ಸಂಪದಃ ಶೋಭಾಯಾ ವಾ ಗರ್ಭಃ ಇವ ಉದರಮಿವ ಆಧಾರಃ ಶ್ರೀಗರ್ಭಃ । ' . ತ್ರಿವರ್ಗಸಂಪದ್ವಿಭೂತಿಶೋಭಾಸು । . ಶ್ರೀರಿತಿ ಪ್ರಥಿತಾ'

-ವ್ಯಾಡಿಃ ।

೫ ಲಕ್ಷ್ಮೀದೇವಿಯು ಯಾರ ಉದರದಲ್ಲಿರುವಳೋ ಅಂತಹವನು[1]

೬ ಸೌಂದರ್ಯಯುಕ್ತವಾದ ಉದರ ಉಳ್ಳವನು[2]

ಭಗವಂತನ ಉದರವು ಅಖಿಲವನ್ನು ಧರಿಸಿಕೊಂಡಿರುವಂತಹದ್ದು. ಆದರೂ ತೆಳ್ಳಗಾಗಿಯೇ ಇರುವುದು. ವಲಿತ್ರಯದಿಂದ ಅಂಕಿತವಾಗಿದೆ. ನಿತ್ಯವೂ ಲಕ್ಷ್ಮೀದೇವಿಯು ಇದನ್ನು ಆಲಿಂಗಿಸಿ ಕೊಂಡಿರುವಳು. ಆದುದರಿಂದಲೇ ಇದು ಚಿಂತ್ಯವೆನಿಸಿದೆ ಎಂದು ಶ್ರೀಮದಾಚಾರ್ಯರು ಸ್ತುತಿಸಿರುವರು.[3]

## ಜಿಜ್ಞಾಸೆ

[ದೇವತೆಗಳು ಸರ್ವಾಶ್ರಮಿಗಳು]

ಪ್ರ:- ಪರಮಾತ್ಮನು ಶ್ರೀಗರ್ಭ ಎಂಬ ನಾಮವುಳ್ಳವನಾದ್ದರಿಂದ ಗೃಹಸ್ಥನಾಗಿದ್ದಾನೆ. ದೇವತೆಗಳು ಋಷಿಗಳು ಕೂಡ ಗೃಹಸ್ಥರೇ ಆಗಿದ್ದಾರೆ. ಗೃಹಸ್ಥಾಶ್ರಮಕ್ಕಿಂತ ಸನ್ಯಾಸಾಶ್ರಮವು ಶ್ರೇಷ್ಠವಾದ್ದರಿಂದ ಅವರೆಲ್ಲರೂ ಸನ್ಯಾಸಿಗಳು ಏಕೆ ಆಗಲಿಲ್ಲ?

ಉ - ದೇವತೆಗಳು ನಾಲ್ಕು ಆಶ್ರಮಿಗಳೂ ಆಗಿದ್ದಾರೆಂದು ಶ್ರುತಿಯು ಹೇಳುತ್ತದೆ. ಪರಮಾತ್ಮನು ಯಾವ ಆಶ್ರಮಿಯೂ ಅಲ್ಲ

ಪ್ರ:- ನಾಲ್ಕು ಆಶ್ರಮ ಧರ್ಮಗಳು ಪರಸ್ಪರ ವಿರುದ್ಧವಾದ್ದರಿಂದ ದೇವತೆಗಳು ನಾಲ್ಕು ಆಶ್ರಮಿಗಳು ಹೇಗೆ ಆಗುತ್ತಾರೆ?

ಉ - ಸನ್ಯಾಸಿಗಳ ಮುಖ್ಯಧರ್ಮ ಸದಾ ಭಗವದುಪಾಸನೆ. ಅದು ದೇವತೆಗಳಲ್ಲಿ ಇದೆ. ಇದೇ ರೀತಿ ಎಲ್ಲ ಆಶ್ರಮಗಳ ಮುಖ್ಯಧರ್ಮಗಳು ದೇವತೆಗಳಲ್ಲಿ ಇದ್ದದ್ದರಿಂದ ಅವರು ಸರ್ವಾಶ್ರಮಿಗಳು ಆಗುತ್ತಾರೆ



---

೫ 1 ಶ್ರೀರ್ಗರ್ಭೇ ಯಸ್ಯ ಸಃ ಶ್ರೀಗರ್ಭಃ । 'ಯತಃ ಪ್ರಸೂತಾ ಜಗತಃ ಪ್ರಸೂತಿಃ' ಇತಿ ಶ್ರುತೇಃ । -ಸ. ಸಂ.

೬ 2 ಶ್ರಿಯಾ ಸೌಂದರ್ಯೇಣ ಯುಕ್ತಃ ಗರ್ಭಃ ಉದರಂ ಯಸ್ಯ ಸಃ ಶ್ರೀಗರ್ಭಃ ।

3 ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್ ।
ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥
-ದ್ವಾ. ಸ್ತೋ.

## ೩೭೮ ಪರಮೇಶ್ವರಃ

೧ ಉತ್ತಮನಾದ ಒಡೆಯನು[1]

ಭಗವಂತನೇ ಇಂದ್ರ ಎನಿಸುವನೆಂದು ಸಮರ್ಥಿಸುವಾಗ, ಇಂದ್ರನಾಮದ ಪ್ರವೃತ್ತಿ ನಿಮಿತ್ತವಾದ ಪರಮೈಶ್ವರ್ಯವು ಭಗವಂತನಲ್ಲೇ ಇರುವಂತಹದ್ದು, ಯಾಕೆಂದರೆ ಅವನೇ ತಾನೇ 'ಪರಮೇಶ್ವರನು'—ಎಂಬುದಾಗಿ ಶ್ರೀಮದಾಚಾರ್ಯರು ಸಂದೇಶಿಸಿರುವರು.[2]

೨ ಉತ್ತಮನಾದವನೂ ಮತ್ತು (ಎಲ್ಲರಿಗೂ) ಒಡೆಯನೂ.[3]

೩ ಉತ್ತಮ ಸ್ವಾಮಿ ಮತ್ತು ಶ್ರೇಷ್ಠನಾದವನು[4]

ಭಗವಂತನು ಸರ್ವೋತ್ತಮನಾಗಿರುವನೆಂಬುದನ್ನು 'ಪರಮ' ನಾಮವನ್ನು ಉಲ್ಲೇಖಿಸಿಯೇ ಅಲ್ಲಲ್ಲಿ ಸಂದೇಶಿಸಲಾಗಿದೆ.[5] ಹೀಗೆ ಸರ್ವೋತ್ತಮನಾಗಿರುವುದರಿಂದಲೇ ಅವನು ಸರ್ವರಿಗೂ ಒಡೆಯ

---

೧ 1 ' ಸ್ವಾಮೀ ತ್ವೀಶ್ವರಃ ಪತಿರೀಶಿತಾ'—ಇತಿ ಈಶ್ವರಃ ಸ್ವಾಮೀ । ಪರಮಃ ಉತ್ತಮಃ। ಪರಮಶ್ಚಾಸೌ ಈಶ್ವರಶ್ಚ ಪರಮೇಶ್ವರಃ ।

2 ಇಂದ್ರೇ ಹೀಂದ್ರಶಬ್ದೋಽಪಿ ನ ಮುಖ್ಯತೋ ವರ್ತತೇ । ಪರಮೈಶ್ವರ್ಯಾಭಾವಾತ್ । ಇಂದ್ರಶಬ್ದೋಽಪಿ ವಿಷ್ಣಾವೇವ ವರ್ತತೇ । ಸಹಿ ಪರಮೇಶ್ವರಃ ।

-ಐ ಉ. ಭಾ 2-1-2-13

೨ 3 ಪರಮಃ ಉತ್ತಮಃ । ಈಶ್ವರಃ ಸರ್ವೇಷಾಂ ಸ್ವಾಮೀ । ಅಸಾಧಾರಣ್ಯೇನ ವ್ಯಪದೇಶಃ । ಪರಮಶ್ಚಾಸೌ ಈಶ್ವರಶ್ಚ ಪರಮೇಶ್ವರಃ ।

೩ 4 ಪರಮಶ್ಚಾಸೌ ಈಶಶ್ಚ ಪರಮೇಶಃ । ಪರಮೇಶಶ್ಚಾಸೌ ವರಶ್ಚ ಪರಮೇಶ್ವರಃ ।

5 ಏಕೋಽವಿಭಕ್ತಃ ಪರಮಃ ಪುರುಷೋ ವಿಷ್ಣುರುಚ್ಯತೇ ।

-ಬೃಹತ್ಸಂಹಿತಾ (ಬ್ರ. ಸೂ. ಭಾ. 2-3-7)

* ' ಸೋಽಚಿಂತ್ಯಃ ಪರಮೋ ಗರೀಯಾನ್'

-ಶಾಂಡಿಲ್ಯಶ್ರುತಿ (ಬ್ರ. ಸೂ. ಭಾ. 2-4-11

* 'ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್...'

-ಕೌಶಿಕಶ್ರುತಿ (ಬ್ರ. ಸೂ. ಭಾ. 2-3-27)

ನಾಗಿರುವನು ಭಗವಂತನು ಪರಮನಾಗಿರುವುದರಿಂದಲೇ ಯಾರ ಅಧೀನನಾಗಿಯೂ ಇಲ್ಲ—ಎಂದು ಸಾರುತ್ತಿರುವ ಪೈಂಗಿ ಶ್ರುತಿಯು[1] ಭಗವಂತನ ಸ್ವಾತಂತ್ರ್ಯವನ್ನು ಹೇಳುವುದರ ಮೂಲಕ ಅವನ ಸರ್ವೇಶ್ವರತ್ವವನ್ನೂ ಸೂಚಿಸಿದೆ.

ಳ ಉತ್ತಮ ಒಡೆಯರಲ್ಲಿ ಅಥವಾ ಉತ್ತಮ ಸಮರ್ಥರಲ್ಲಿ ಶ್ರೇಷ್ಠನಾಗಿರುವವನು[2]

ಬ್ರಹ್ಮಾದಿಗಳು ಇಂದ್ರಾದಿ ಒಡೆಯರಿಗಿಂತ ಉತ್ತಮರೆನಿಸಿರುವರು. ಅಂತಹ ಬ್ರಹ್ಮಾದಿಗಳಿ ಗಿಂತಲೂ ಶ್ರೇಷ್ಠನಾಗಿರುವವನು ಭಗವಂತನು ಶ್ವೇತಾಶ್ವತರೋಪನಿಷತ್ತಲ್ಲಿ—ಮನುಷ್ಯರಾದ ನಮಗೆ ಈಶ್ವರರಾದವರು ತತ್ತ್ವಾಭಿಮಾನಿ ದೇವತೆಗಳು ಅವರಲ್ಲೂ ಶ್ರೇಷ್ಠನಾಗಿದ್ದು, ಈಶ್ವರಾಣಾಂ ಪರಮ ಎನಿಸಿರುವವನು ದೇವೇಂದ್ರನು ಅವನಿಗಿಂತಲೂ ಮಹತ್ತ್ವೋಪೇತರಾದವರು ಗರುಡ ಶೇಷರುದ್ರರು ಇವರಿಗೂ ಈಶರಾಗಿರುವವರು ಬ್ರಹ್ಮವಾಯುಗಳು ಇವರಿಗಿಂತಲೂ ಶ್ರೇಷ್ಠ ನಾದವನು ಭಗವಂತನು ಎಂಬ ಅಭಿಪ್ರಾಯದಲ್ಲಿ—'ಈಶ್ವರಾಣಾಂ ಪರಮಂ ಮಹೇಶ್ವರಂ'—ಎಂದು ಭಗವಂತನನ್ನು ವಿಶೇಷಿಸಲಾಗಿದೆ 'ಪರಮೇಶ್ವರ' ನಾಮವೂ ಸ್ಥೂಲವಾಗಿ ಇದೇ ಅಭಿಪ್ರಾಯವನ್ನೊಳಗೊಂಡಿದೆ[3]

ಭಗವಂತನನ್ನು 'ಈಶ' 'ಈಶ್ವರ' ಎಂದೂ ಉಲ್ಲೇಖಿಸುವ ಶಾಸ್ತ್ರ 'ಪರಮೇಶ್ವರ' ಎಂದು ಉಲ್ಲೇಖಿಸುವ ಉದ್ದೇಶ—ಭಗವಂತನನ್ನು ಈಶ ಅಥವಾ ಈಶ್ವರ ಎಂದಷ್ಟೇ ಉಪಾಸಿಸಿದರೆ ಸಾಲದು. ಈಶ ಎನಿಸುವ ವ್ಯಕ್ತಿಗಳ ಸ್ಥಾನಮಾನ, ಅವರಲ್ಲೂ ಶ್ರೇಷ್ಠರಾಗಿ ಈಶ್ವರ ಎನಿಸುವ ವ್ಯಕ್ತಿಗಳ ಸ್ಥಾನಮಾನ, ಅವರಿಗಿಂತಲೂ ಶ್ರೇಷ್ಠರಾಗಿದ್ದು ಪರೇಶ್ವರ ಎನಿಸುವವರ ಸ್ಥಾನಮಾನ—ಇವುಗಳನ್ನು ತಿಳಿದು—ತಾರತಮ್ಯ ಜ್ಞಾನಪೂರ್ವಕವಾಗಿ 'ಪರಮೇಶ್ವರ' ಎನಿಸುವ ಭಗವಂತನ ಮಹಿಮೆಯನ್ನು ಅರಿಯಬೇಕೆಂಬುದು.

---

1 ಪ್ರಾಣಸ್ಯೈತದ್ ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ । ನ ಪರಃ ಕಂಚಿದಾಶ್ರಿತ್ಯ ವರ್ತತೇ ಪರಮೋ ಯತಃ —ಪೈಂಗಿಶ್ರುತಿ (ಬ್ರ. ಸೂ. ಭಾ. 2-4-11)

ಳ 2 ಪರಮಾಶ್ಚ ತೇ ಈಶಾಃ ಸ್ವಾಮಿನಃ ಸಮರ್ಥಾ ವಾ ಪರಮೇಶಾಃ ತೇಷು ವರಃ ಶ್ರೇಷ್ಠಃ ಪರಮೇಶ್ವರಃ ।

3 'ತಮೀಶ್ವರಾಣಾಂ ಪರಮಂ ಮಹೇಶ್ವರಂ....ಪತಿಂ ಪತೀನಾಂ ಪರಮಂ....'
—ಶ್ವೇ. ಉ. 6-7

೫ ಉತ್ತಮರು ಒಡೆಯರೆನಿಸಿರುವ ಬ್ರಹ್ಮಾದಿಗಳಿಂದಲೂ ವರಿಸಲ್ಪಡುವವನು.[1]

ಚತುರ್ಮುಖನೇ ಮುಂತಾದ ಪ್ರತಿಯೊಬ್ಬರಿಂದಲೂ ಜಪಿಸಲು ಯೋಗ್ಯವಾದ ಗಾಯತ್ರಿ ಮಂತ್ರದಲ್ಲಿಯ 'ವರೇಣ್ಯಂ' ಎಂಬ ವಿಶೇಷಣವು[2] ಭಗವಂತನು ಚತುರ್ಮುಖನೇ ಮೊದಲಾದ ಪ್ರತಿಯೊಬ್ಬರಿಗೂ ವರಣೀಯನೆನಿಸಿರುವನೆಂಬುದನ್ನು ಸೂಚಿಸಿದೆ

೬ ಶ್ರೇಷ್ಠಳಾದ ಜಗನ್ಮಾತೆ ಲಕ್ಷ್ಮೀದೇವಿಗೆ ಒಡೆಯನಾಗಿರುವನು[3]

೭ ಶ್ರೇಷ್ಠನಾಗಿರುವವನು ಮತ್ತು ಜಗನ್ಮಾತೆಗಿಂತಲೂ ಶ್ರೇಷ್ಠನಾಗಿರುವವನು[4]

೮ ಶ್ರೇಷ್ಠಳಾದ ಜಗನ್ಮಾತೆಯಿಂದಲೂ ವರಿಸಲ್ಪಡುವವನು.[5]

ಲಕ್ಷ್ಮೀದೇವಿಯು ಭಗವಂತನ ಅನುಗ್ರಹದಿಂದ ತಾನು ಅವನನ್ನು ಸರ್ವದಾ ಆಶ್ರಯಿಸಿ ಕೊಂಡಿರುವುದಾಗಿ ತಿಳಿಸಿ, ಮತ್ಸ್ಯಾದಿರೂಪವುಳ್ಳ ಶ್ರೀವಿಷ್ಣುವನ್ನು ಆಶ್ರಯಿಸಬೇಕೆಂದು ಸಕಲ ಪ್ರಜೆಗಳನ್ನು ಕುರಿತು ಸಂದೇಶಿಸಿರುವಳು[6]

---

೫ 1 ಪರಮಾಶ್ಚ ತೇ ಈಶಾಶ್ಚ ಪರಮೇಶಾಃ । ತೈರಪಿ ವ್ರಿಯತೇ ಇತಿ ಪರಮೇಶ್ವರಃ ।

2 ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।

—ಋ ವೇ. 3-62-10

೬ 3 ಪರಾ ಚ ಸಾ ಮಾ ಶ್ರೀಶ್ಚ ಪರಮಾ । 'ಮಾ ಸ್ತ್ರೀ ಮಾನೇ ಮೃತೌ ವೇದಾ ಮೇಧಾಶ್ರೀ-ಮಧ್ಯಮಾತ್ಮಸು' । ಪರಮಾಯಾಃ ಈಶ್ವರಃ ಭರ್ತಾ ಪರಮೇಶ್ವರಃ ।

೭ 4 ಮಾ ಚ ಸಾ ಈಶಾ ಚ ಮೇಶಾ । ಮೇಶಾಯಾಃ ವರಃ ಮೇಶ್ವರಃ । ಪರಶ್ಚಾಸೌ ಮೇಶ್ವ-ರಶ್ಚ ಪರಮೇಶ್ವರಃ ।

೮ 5 ಪರಮಾ ಚ ಸಾ ಈಶಾ ಚ ಪರಮೇಶಾ । ತಯಾಽಪಿ ವ್ರಿಯತ ಇತಿ ಪರಮೇಶ್ವರಃ ।

6 ....ವಿಷ್ಣುಂ ಸದಾ ಹ್ಯಹಮ್ । ಪ್ರಪದ್ಯೇ ತತ್ಪ್ರಸಾದೇನ ಕೇವಲಂ ನಾತ್ಮಶಕ್ತಿತಃ । .. ತಸ್ಮಾನ್ಮತ್ಸ್ಯಾದಿರೂಪಂ ತಂ ವಿಷ್ಣುಮೇವ ಪ್ರಪದ್ಯಥ । ಹೇ ಜನಾ ಇತ್ಯವೋಚತ್ ಸಾ ಲಕ್ಷ್ಮೀಃ ಸರ್ವಾಃ ಪ್ರಜಾಃ ಪ್ರತಿ । —ಛಾಂ. ಉ. ಭಾ. 3-3-2

೯ ಶ್ರೇಷ್ಠವಾದ ಜ್ಞಾನಕ್ಕೆ ಒಡೆಯನಾಗಿರುವವನು[1]

೧೦ ಉತ್ತಮವಾದ ಜ್ಞಾನ ಮತ್ತು ಸುಖ ಉಳ್ಳವನು ಹಾಗೂ ಶ್ರೇಷ್ಠನಾಗಿರುವವನು[2]

ಭಗವಂತನು ಉತ್ತಮ ಜ್ಞಾನ ಹಾಗೂ ಸುಖ ಉಳ್ಳವನಾಗಿರುವುದರಿಂದಲೇ ಶ್ರೇಷ್ಠ ಎನಿಸಿರುವನು. ಪ್ರಲಯಕಾಲದಲ್ಲಿರುವ ಭಗವಂತನನ್ನು 'ಏಕ' ಹಾಗೂ 'ಅದ್ವೈತ' ಶಬ್ದಗಳಿಂದ ವಿಶೇಷಿಸಿ, ಅವನು ಸಮಾನರಹಿತನು ಮತ್ತು ವಿರೋಧಿಶೂನ್ಯನು ಎಂದು ಬೋಧಿಸುವುದರ ಮೂಲಕ ಅವನ ಶ್ರೇಷ್ಠತ್ವವನ್ನು ಸೂಚಿಸಿದ ಬೃಹದಾರಣ್ಯಕೋಪನಿಷತ್ತು—ಇದಕ್ಕೆ ಪೋಷಕವಾಗಿ ಅವನ ಜ್ಞಾನವು ಪರಮ, ಆನಂದವು ಪರಮ—ಎಂದು ಸಂದೇಶಿಸಿದೆ[3]

೧೧ (ಎಲ್ಲರನ್ನೂ) ರಕ್ಷಿಸುವವನು ಮತ್ತು ರಮಾವಲ್ಲಭನಾಗಿರುವವನು.[4]

ಚಿತ್ಪ್ರಕೃತಿಗೆ ಸ್ವಾಮಿ ಆಗಿರುವ ಭಗವಂತನು ಸರ್ವರಕ್ಷಕನು

೧೨ ಜ್ಞಾನಿಗಳಾದ ಬ್ರಹ್ಮಾದಿಗಳಿಗೆ ಒಡೆಯನಾಗಿರುವವನು[5]

---

೯ 1 ಪರಾ ಚ ಸಾ ಮಾ ಮೇಧಾ ಚ ಪರಮಾ ಶ್ರೇಷ್ಠಂ ಜ್ಞಾನಮ್ । ತಸ್ಯ ಈಶ್ವರಃ ಸ್ವಾಮೀ।

೧೦ 2 ಈಃ ಜ್ಞಾನಂ ಶಂ ಸುಖಂ ಈಶೇ ಜ್ಞಾನಸುಖೇ । ಪರಮೇ ಉತ್ಕೃಷ್ಟೇ ಈಶೇ ಯಸ್ಯ ಸಃ ಪರಮೇಶಃ । ಸರ್ವಶ್ರೇಷ್ಠತ್ವಾತ್ ವರಃ । ಪರಮೇಶಶ್ಚಾಸೌ ವರಶ್ಚ ಪರಮೇಶ್ವರಃ ।

3 ಸಲಿಲ ಏಕೋ ದ್ರಷ್ಟಾಽದ್ವೈತೋ ಭವತಿ ಏಷೋಽಸ್ಯ ಪರಮೋ ಲೋಕ ಏಷೋಽಸ್ಯ ಪರಮ ಆನಂದಃ . -ಬೃ. ಉ. 6-3-32

'ಯದಾ ಹಿ ಸಲಿಲತ್ವೇನ ಪ್ರಕೃತಿರ್ವ್ಯಾಪ್ಯ ತಿಷ್ಠತಿ। ತದಾ ತಸ್ಯಾಂ ಪರೋ ವಿಷ್ಣುರೇಕೋ ದ್ರಷ್ಟಾ ವ್ಯವಸ್ಥಿತಃ । ಅವಿರೋಧಾದದ್ವಿತೀಯ ಏಕೋಽಸೌ ಸಂಪ್ರವರ್ಜನಾತ್ ...... ಸಾರ್ವಜ್ಞ್ಯಾತ್ ಪರಮೋ ಲೋಕೋ ವಿಷ್ಣೋರಾನಂದ ಏವ ಚ । ಸ್ವಾತಂತ್ರ್ಯಾತ್ ಪರಮೋ ಜ್ಞೇಯಃ.. ...' -ಬೃ. ಉ ಭಾ

೧೧ 4 ಪಾತಿ ಸರ್ವಂ ರಕ್ಷತೀತಿ ಪಃ । ಅಸಾಧಾರಣ್ಯೇನ ವ್ಯಪದೇಶಃ । ಪಶ್ಚಾಸೌ ರಮೇಶ್ವರಶ್ಚ ಪರಮೇಶ್ವರಃ । -ಪ ಸಂ. ಆಧಾರೇಣ

೧೨ 5 ಪರಾ ಮಾ ಜ್ಞಾನಂ ಯೇಷಾಂ ತೇ ಪರಮಾಃ ಜ್ಞಾನಿನಃ ಬ್ರಹ್ಮಾದಯಃ । ತೇಷಾಮೀಶ್ವರಃ ।

## ಜಿಜ್ಞಾಸೆ

[ಬ್ರಹ್ಮೈಕ್ಯವೇ ಅರ್ಥ]

ಪ್ರ – ಗೀತೆಯಲ್ಲಿ'ಈಶ್ವರೋಽಹಮಹಂ ಭೋಗೀ'ಎಂದು ಇದೆ 'ಪರಮೇಶ್ವರೋಽಹಂ'ಎಂದು ಇಲ್ಲ. 'ಪರಮೇಶ್ವರೋಽಹಂ' ಎಂದು ಇರುತ್ತಿದ್ದರೆ ತಮಗೆ ಬ್ರಹ್ಮೈಕ್ಯವನ್ನು ತಿಳಿಯುವದು ಅಸುರರ ಲಕ್ಷಣ ಎಂದು ಎಣ್ಣಿಸಬಹುದಿತ್ತು. 'ಈಶ್ವರೋಽಹಂ'ಎಂದು ಗೀತೆಯ ವಾಕ್ಯಕ್ಕೆನಾನು ಶ್ರೇಷ್ಠನು ಎಂದು ಅರ್ಥವನ್ನೂ ಹೇಳಬಹುದು ಆದುದರಿಂದ ಗೀತಾವಾಕ್ಯದ ಆಧಾರದಿಂದ ತಮಗೆ ಬ್ರಹ್ಮೈಕ್ಯವನ್ನು ತಿಳಿಯುವದು ಅಸುರರ ಸ್ವಭಾವ ಎಂದು ಸಿದ್ಧವಾಗುತ್ತದೆಂದು ದ್ವೈತಿಗಳು ಹೇಳುವದು ಯುಕ್ತವೋ?

ಉ – ಇಂದ್ರಾದಿ ದೇವತೆಗಳು ದೊಡ್ಡ ಅಧಿಕಾರದಲ್ಲಿದ್ದಾರೆ. ಅವರೂ ತಾವು ಶ್ರೇಷ್ಠರೆಂದು ತಿಳಿಯು ತ್ತಾರೆ ಇಂದ್ರದೇವರು ತನ್ನನ್ನು ಇಂದ್ರ ಎಂದು ತಿಳಿದಿದ್ದಾರೆ. ಇಂದ್ರ ಎಂದರೆ ಶ್ರೇಷ್ಠ ಎಂದು ಅರ್ಥ, ತಾನು ಶ್ರೇಷ್ಠ ಎಂದು ತಿಳಿಯುವ ಸ್ವಭಾವವು ದೇವತೆಗಳಲ್ಲಿ ಎಲ್ಲರಲ್ಲಿಯೂ ಇದೆಯಾದ್ದ ರಿಂದ ಅದನ್ನು ಅಸುರ ಸ್ವಭಾವವೆಂದು ಹೇಳಬಾರದು. ಆದ್ದರಿಂದ 'ಈಶ್ವರೋಽಹಂ' ಎಂಬ ಗೀತಾವಾಕ್ಯಕ್ಕೆ ನಾನು ಪರಮೇಶ್ವರನು ಎಂದು ಅರ್ಥವನ್ನು ಹೇಳಬೇಕು ಆದುದರಿಂದ ಈ ಗೀತಾವಾಕ್ಯವು ಬ್ರಹ್ಮೈಕ್ಯವನ್ನು ತಿಳಿಯುವದು ಅಸುರ ಸ್ವಭಾವವೆಂದು ಹೇಳುತ್ತದೆ ಎಂದು ದ್ವೈತಿಗಳು ಹೇಳುವದು ಯುಕ್ತವು.

ಪ್ರ – ಅಹಂಕಾರದಿಂದ ನಾನು ಶ್ರೇಷ್ಠನು ಎಂದು ದೇವತೆಗಳು ತಿಳಿಯುವದಿಲ್ಲ ಅಸುರರು ನಾನು ಶ್ರೇಷ್ಠನೆಂದು ತಿಳಿಯುತ್ತಾರೆಂದು ಹೇಳುವದರ ಅಭಿಪ್ರಾಯ ಅವರಿಗೆ ಅಹಂಕಾರವು ಇದೆ ಎಂದು.

ಉ – ಅದೇ ಅಧ್ಯಾಯದಲ್ಲಿ ಅದೇ ಪ್ರಕರಣದಲ್ಲಿ ಅಸುರರಿಗೆ ಅಹಂಕಾರವಿದೆ ಎಂದು ಬೇರೆ ಶ್ಲೋಕ ದಿಂದ ಹೇಳಲ್ಪಟ್ಟಿದೆ. 'ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ' ಅಸುರರು ಅಹಂಕಾರದಿಂದ ಕೂಡಿದವರು ಎಂದು ಹೇಳಿದ್ದರಿಂದ ಪುನರುಕ್ತಿ ದೋಷವು ಬರುವದು. ಆದುದರಿಂದ ಈಶ್ವರೋಽಹಂ ಎಂಬುದಕ್ಕೆ ಬ್ರಹ್ಮೈಕ್ಯವೆಂದು ಅರ್ಥ ಹೊರತು ಬೇರೆ ಅರ್ಥವು ಅಲ್ಲ.



## ೪೭೯ ಕರಣವತ್

೧ (ಪ್ರತಿಯೊಂದು ಕಾರ್ಯಕ್ಕೂ) ಮುಖ್ಯಸಾಧನ ಆಗಿರುವವನು.[1]

೧ 1 ಕ್ರಿಯಂತೇಽನೇನೇತಿ ಕರಣವತ್ । –ವಿ. ರಾ.

• 'ಕರಣಂ ಸಾಧಕತಮಂ...' –ಅ. ಕೋ.

ದಕ್ಷಪ್ರಜಾಪತಿಯು ಭಗವಂತನನ್ನು ಸ್ತುತಿಸುತ್ತ—ಪ್ರತಿಯೊಂದರ ಅಧಿಕರಣ ಅಪಾದಾನಾದಿ ವಿಭಕ್ತ್ಯರ್ಥ ಬ್ರಹ್ಮನೇ ಎಂದಿರುವಂತೆ, ತೃತೀಯಾವಿಭಕ್ತ್ಯರ್ಥಕರಣವೂ ಬ್ರಹ್ಮನೇ ಎಂದೂ ತಿಳಿಸಿರುವನು. ಉಳಿದ ಕರಣಗಳಿಗೂ ಅವನೇ ಹೇತುವಾಗಿದ್ದು, ಅವುಗಳಿಗೆ ಸತ್ತಾದಿಗಳನ್ನು ನೀಡುವವನೂ ಅವನೇ ಆಗಿರುವುದರಿಂದ ಮುಖ್ಯವಾಗಿ ಅವನೇ ಕರಣ ಬ್ರಹ್ಮಾದಿಗಳಿಗೂ ಅವನೇ ಮುಖ್ಯ ಹೇತು ಆಗಿರುವುದರಿಂದ ಅವರೂ ಮುಖ್ಯವಾಗಿ ಕರಣ ಎಂದೆನಿಸಲಾರರು—ಎಂದು ಸೂಚಿಸಿರುವನು.[1]

೨ (ಜೀವಾತ್ಮರ) ಶರೀರ ಅಥವಾ ಇಂದ್ರಿಯಕ್ಕೆ ಅತ್ಯಂತ ಒಡೆಯನಾಗಿರುವವನು.[2]

ಜೀವಾತ್ಮರ ಶರೀರವು ಪ್ರಧಾನವಾಗಿ ಪುರುಷ ಎನಿಸಿರುವ ಭಗವಂತನಿಗೆ ಸೇರಿರುವಂತಹದ್ದು. ಹಾಗೆಯೇ 'ಹೃಷೀಕೇಶ' ಎನಿಸಿರುವ ಅವನೇ ಜೀವಾತ್ಮರ ಇಂದ್ರಿಯಗಳಿಗೂ ಒಡೆಯನು ಆದುದರಿಂದಲೇ ಶರೀರವನ್ನು ಹಾಗೂ ಇಂದ್ರಿಯವನ್ನು ಹೇಳುವ 'ಕರಣ' ಶಬ್ದದಿಂದ ಅವನು ಪ್ರತಿಪಾದ್ಯನಾಗಿರುವನು.

---

1 ಯಸ್ಮಿನ್ ಯತೋ ಯೇನ ಚ. ಪರಾವರೇಷಾಂ ಪರಮಂ. ತದ್ ಬ್ರಹ್ಮ ತದ್ಧೇತುಃ. .
—ಭಾಗ 6-4-30

ಯಸ್ಮಿನ್ ಇದಂ ಸರ್ವಂ ತತ್ ಮುಖ್ಯಮಧಿಕರಣಂ ಬ್ರಹ್ಮ । ಯತ ಇದಮುದ್ಗತಂ ತದಪಾದಾನಮಪಿ ಬ್ರಹ್ಮ । ಯೇನೇದಂ ತತ್ಕರಣಮಪಿ ಬ್ರಹ್ಮ .ಕಥಂ ಬ್ರಹ್ಮೈವ? ಅನ್ಯಾನ್ಯಪಿ ಹಿ ಭೂತಲಾದೀನಿ ಸಂಭವಂತ್ಯಧಿಕರಣಾನ್ಯಪಾದಾನಾದೀನಿ ವಾ । ನೇತ್ಯಾಹ—ತದ್ಧೇತುಃ । ತೇಷಾಂ ಸರ್ವೇಷಾಂ ಬ್ರಹ್ಮೈವ ಹೇತುಃ ಸತ್ತಾದಿಪ್ರದಂ ಚೇತಿ ತದೇವ ಮುಖ್ಯತೋ ವಿಭಕ್ತ್ಯರ್ಥಃ । ನಾನ್ಯೇ । . ನನು ಸೃಷ್ಟ್ಯಾದಿಹೇತುಷು ವಿರಿಂಚಾದಿಷ್ವಪಿ ವಿಭಕ್ತ್ಯರ್ಥಾಃ ಸಂಭವೇಯುಃ । ನೇತ್ಯಾಹ—ಪರಾವರೇಷಾಮ್ । ಪರೇಷಾಮವರೇಷಾಂ ಚ ಹೇತೂನಾಂ ಪರಮಂ ಮುಖ್ಯಹೇತುಃ ।

-ಬಿ. ಗೋ (ಭಾಗ. ಟಿ)

೨ 2 'ಕರಣಂ ಸಾಧಕತಮಂ ಕ್ಷೇತ್ರಗಾತ್ರೇಂದ್ರಿಯೇಷ್ವಪಿ' ಇತಿ ಕರಣಂ ಗಾತ್ರಂ ಇಂದ್ರಿಯಂ ವಾ । 'ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ' (ಭವಿಷ್ಯತ್ಪರ್ವ) ಇತಿ ನಿಯಮಾನುಸಾರೇಣ ಜೀವಾತ್ಮನಾಂ ಶರೀರಸ್ಯ ಇಂದ್ರಿಯಸ್ಯ ವಾ ಸತ್ತಾ ಭಗವದಧೀನಾ ಇತಿ ಭಗವಾನ್ ಶರೀರವಾಚಕೇನ ಇಂದ್ರಿಯವಾಚಕೇನ ವಾ ಕರಣಶಬ್ದೇನ ಭಣ್ಯತೇ

೩. ಯಾವುದೇ ಕರ್ಮಕ್ಕೆ ಅತ್ಯಂತ ಒಡೆಯನಾಗಿರುವವನು[1]

ಭಗವಂತನು ಜೀವಾತ್ಮನಿಗೆ ಕ್ರಿಯೆಯಲ್ಲಿ ಸ್ವಾತಂತ್ರ್ಯವನ್ನಾಗಲೀ, ಅದೃಷ್ಟೋತ್ಪಾದನೆಯಲ್ಲಿ ಸ್ವಾತಂತ್ರ್ಯವನ್ನಾಗಲೀ, ಫಲಪ್ರಾಪ್ತಿಯಲ್ಲಿ ಸ್ವಾತಂತ್ರ್ಯವನ್ನಾಗಲೀ ಸೃಷ್ಟಿಸುವುದಿಲ್ಲ ಸ್ವತಂತ್ರನಾದ ತಾನೇ ಯಾವಾಗಲೂ, 'ಎಲ್ಲೆಡೆ ಪ್ರವರ್ತಿಸುವವನು—ಎಂಬ ಗೀತಾಚಾರ್ಯನ ಸಂದೇಶವು[2]. ಕ್ರಿಯೆಯೂ ಭಗವಂತನನ್ನು ಎಷ್ಟರಮಟ್ಟಿಗೆ ಅವಲಂಬಿಸಿದೆ ಎಂಬುದನ್ನು ಸೂಚಿಸಿಕೊಡಬಲ್ಲದು

೪ (ಮನುಷ್ಯರಿಗೆ) ಕೈಗಳನ್ನು ಅಥವಾ (ಆನೆಗಳಿಗೆ) ಸೊಂಡಿಲನ್ನು ಅನುಗ್ರಹಿಸಿರುವವನು[3]

ಎಲ್ಲರಿಗೆ ಶರೀರೇಂದ್ರಿಯಾದಿಗಳನ್ನು ಕೊಟ್ಟಿರುವ ಭಗವಂತನೇ ಮನುಷ್ಯರಿಗೆ ಕೈಗಳನ್ನೂ, ಆನೆಗಳಿಗೆ ಸೊಂಡಿಲನ್ನೂ ಅನುಗ್ರಹಿಸಿರುವವನು.

೫ (ಸೂರ್ಯ ಚಂದ್ರಾದಿಗಳಿಗೆ) ಕಿರಣಗಳನ್ನು ಒದಗಿಸಿರುವವನು.[4]

೬. (ಸೂರ್ಯಚಂದ್ರಾದಿಗಳಿಂದ ಹೊರಟ) ಕಿರಣಗಳನ್ನು (ಆಯಾಯ ಪದಾರ್ಥದ ಕಡೆಗೆ) ಒಯ್ಯುವವನು[5]

---

೩. 1 'ಕರಣಂ ಹೇತುಕರ್ಮಣೋಃ..' ಇತಿ ಕರಣಂ ಕರ್ಮ। ತಸ್ಯ ಅತ್ಯಂತಂ ಭಗವದಧೀನತ್ವಾತ್ 'ಯದಧೀನಾ ಯಸ್ಯ ಸತ್ತಾ .' ಇತಿ ನ್ಯಾಯಾನುಸಾರೇಣ ಭಗವಾನ್ ತದ್ವಾಚಕಶಬ್ದೇನ ಭಣ್ಯತೇ ।

2 ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗ ಸ್ವಭಾವಸ್ತು ಪ್ರವರ್ತತೇ ॥
—ಗೀ. 5-14

೪ 3 ಮನುಷ್ಯಾಣಾಂ ಕರೌ ಪಾಣೀ ಗಜಾನಾಂ ಕರಂ ಶುಂಡಂ ವಾ ನಯತಿ ಪ್ರಾಪಯತೀತಿ ಕರಣಮ್ ।

೫ 4 ಕರಾನ್ ಕಿರಣಾನ್ ಸೂರ್ಯಚಂದ್ರಾದೀನ್ ಪ್ರತಿ ನಯತಿ ಪ್ರಾಪಯತೀತಿ ಕರಣಮ್।

೬. 5 ಕರಾನ್ ಸೂರ್ಯಚಂದ್ರಾದಿಭ್ಯಃ ಪ್ರವೃತ್ತಾನ್ ಕಿರಣಾನ್ ತತ್ತತ್ಪದಾರ್ಥಂ ಪ್ರತಿ ನಯತಿ ಪ್ರಾಪಯತೀತಿ ಕರಣಮ್ ।

೭ ಕಿರಣಗಳನ್ನು ಹಿಂದಕ್ಕೆ ತೆಗೆದುಕೊಳ್ಳುವವನು[1]

ಹಗಲು ಸೂರ್ಯನಿಂದ, ರಾತ್ರಿ ಚಂದ್ರನಿಂದ ಕಿರಣಗಳು ಹೊರಡುವಂತೆ ಮಾಡುವ ಭಗವಂತನು ರಾತ್ರಿ ಸೂರ್ಯನ ಕಿರಣಗಳು ಕಾಣದಂತೆಯೂ, ಹಗಲು ಚಂದ್ರನ ಕಿರಣಗಳು ಕಾಣದಂತೆಯೂ ಮಾಡುವನು.

೮ ಸುಖವನ್ನು ಅಥವಾ ಬಲವನ್ನು ದಯಪಾಲಿಸುವ ಹಸ್ತ ಉಳ್ಳವನು[3]

೯ ಚತುರ್ಮುಖನಿಗೆ ಅಥವಾ ವಾಯುದೇವನಿಗೆ ಕ್ರೀಡೆ ಮತ್ತು ಆನಂದವನ್ನು ಅನುಗ್ರಹಿಸುವವನು[3]

೧೦ ಚತುರ್ಮುಖನಿಂದ ಅಥವಾ ವಾಯುದೇವನಿಂದ ಸ್ತುತಿಸಲ್ಪಡುವವನು.[4]

೧೧ ಇತರರಿಗೆ ಆನಂದವನ್ನು ನೀಡುವ ಆನಂದ ಉಳ್ಳವನು.[5]

ಬ್ರಹ್ಮಾದಿ ಸಕಲ ಮುಕ್ತಾತ್ಮರೂ ಭಗವಂತನ ಪೂರ್ಣಾನಂದದ ಪ್ರತಿಬಿಂಬ ರೂಪವಾದ ಏಕ ದೇಶವನ್ನಷ್ಟೇ ಉಪಜೀವಿಸಿಕೊಂಡಿರುವರೆಂದು ಬೃಹದಾರಣ್ಯಕೋಪನಿಷತ್ತು ಸಂದೇಶಿಸಿದೆ[6]

---

೭ 1 ಕರಾನ್ ನಯತಿ ಅಪನಯತೀತಿ ಕರಣಮ್ ।

೮ 2 ಕರೇಣ ಣಃ ಸುಖಂ ಬಲಂ ವಾ ಯಸ್ಯ ತತ್ಕರಣಮ್ । —ಶ. ಸಂ.

೯ 3 ರಂ ಕ್ರೀಡಾ । ಣಃ ಆನಂದಃ । 'ಣೋ ಹಿ ನಿರ್ವೃತಿವಾಚಕಃ' (ವಿು. ಭಾ.3-12) ಕಸ್ಯ ಚತುರ್ಮುಖಸ್ಯ ಮಾರುತಸ್ಯ ವಾ ರಣೌ ಯಸ್ಮಾತ್ ತತ್ ಕರಣಮ್ । 'ಮಾರುತೇ ವೇಧಸಿ .. ಕಃ ' —ಅ. ಕೋ.

೧೦ 4 ಕೇನ ಚತುರ್ಮುಖೇನ ವಾಯುನಾ ವಾ ರಣ್ಯತೇ ಸ್ತೂಯತ ಇತಿ ಕರಣಮ್ ।

೧೧ 5 ಇತರೇಷಾಂ ಕಂ ರಾತೀತಿ ಕರಃ । ಕರಃ ಣಃ ಯಸ್ಯ ತತ್ ಕರಣಮ್ ।

6 ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ
—ಬೃ. ಉ. 6-3-32

* ಪ್ರತಿಬಿಂಬರೂಪವಿಷ್ಣ್ವಟ್ಟ್ಯಾಂಸ್ತದಾನಂದಸ್ಯ ಚಾಖಿಲಾಃ ಮುಕ್ತಾ ಬ್ರಹ್ಮಾದಯೋऽಶ್ನಂತಿ ತಾರತಮ್ಯೇನ ನಿತ್ಯದಾ —ಬೃ. ಉ. ಭಾ

## ಜಿಜ್ಞಾಸೆ

[ಸ್ವತಃ ಕಿರಣಗಳಿಲ್ಲ]

ಪ್ರ – ಚಂದ್ರನಿಗೆ ಸ್ವತಃ ಕಿರಣಗಳು ಇಲ್ಲ. ಸೂರ್ಯಕಿರಣಗಳೇ ಚಂದ್ರನ ದ್ವಾರಾ ಭೂಮಿಗೆ ಬರುವವು ಎಂದು ಅಭಿಜ್ಞರು ಹೇಳುತ್ತಾರೆ. ಸಾಮಾನ್ಯಜನರು ಚಂದ್ರನಿಗೆ ಸ್ವತಃ ಕಿರಣವು ಇದೆ ಎಂದು ತಿಳಿದಿದ್ದಾರೆ. ಭಗವಂತನು ಚಂದ್ರನಿಗೆ ಕಿರಣಗಳನ್ನು ಕೊಟ್ಟಿದ್ದಾನೆಂದು ಅರ್ಥವಾಗುತ್ತದೆ ಸಾಧಾರಣ ಜನರು ತಿಳಿದಂತೆ ಕರಣ ಎಂಬ ನಾಮವೂ ಹೇಳುವುದು ಯುಕ್ತವೋ?

ಉ – ಚಂದ್ರನ ದ್ವಾರಾ ಸೂರ್ಯ ಕಿರಣವು ಭೂಮಿಗೆ ಬರುವದೂ ಪರಮಾತ್ಮನ ಶಕ್ತಿಯಿಂದ ಈ ಅಭಿಪ್ರಾಯವನ್ನು ಕರಣ ಎಂಬ ಪರಮಾತ್ಮನ ನಾಮವು ಹೇಳುತ್ತದೆ. ಕರಣ ಎಂಬ ನಾಮವು ಸೂರ್ಯನಿಗೆ ಸ್ವಾಭಾವಿಕ ಕಿರಣ ಇರುವಂತೆ ಚಂದ್ರನಿಗೆ ಸ್ವಾಭಾವಿಕ ಕಿರಣ ಇದೆ ಎಂದು ಹೇಳುವ ಅಬಿಪ್ರಾಯವುಳ್ಳದ್ದಲ್ಲ



## ೩೮೦ ಕಾರಣಮ್

೧ ಎಲ್ಲದ್ದಕ್ಕೂ ಕಾರಣನಾಗಿರುವವನು[1]

ಭಗವಂತನ ಪ್ರೇರಣೆಯಿಲ್ಲದೆ ಯಾವುದೇ ಕರ್ಮ ನಡೆಯದು[2]. ಆದ್ದರಿಂದ ಪ್ರತಿಯೊಂದಕ್ಕೂ ಭಗವಂತನೇ ಕಾರಣನು[3]. ಕಂಡು ಮುನಿಯ ದರ್ಶನಕ್ಕೆ ಗೋಚರವಾದ ಬ್ರಹ್ಮಪಾರ ಸ್ತೋತ್ರದಲ್ಲಿ ಭಗವಂತನ ಕಾರಣತ್ವವನ್ನು ಸ್ಪಷ್ಟೀಕರಿಸುತ್ತ—ಭಗವಂತನು ಎಲ್ಲದ್ದಕ್ಕೂ ಕಾರಣನು. ಕಾರಣಗಳಿಗೂ ಕಾರಣನು. ಜಗತ್ತಿಗೆ ಕಾರಣಗಳಾದ ಪಂಚಭೂತಗಳಿಗೂ ಮೂಲ ಕಾರಣವಾದ ಪ್ರಕೃತಿತತ್ತ್ವಕ್ಕೂ ಅವನೇ ಕಾರಣನು ಎಲ್ಲದ್ದಕ್ಕೂ ಕಾರಣವಾದ ಮೂಲಪ್ರಕೃತಿಯೆನಿಸಿದ ಶ್ರೀತತ್ತ್ವಕ್ಕೆ ಕೂಡಾ ಅವನು

---

೧ 1 'ಹೇತುರ್ನಾ ಕಾರಣಂ ಬೀಜಂ...' –ಅ. ಕೋ. 'ಅಸಾಧಾರಣ್ಯೇನ ವ್ಯಪದೇಶಃ' ಇತಿ ಸರ್ವಸ್ಯಾಪಿ ಕಾರಣಮಿತಿ ಲಭ್ಯತೇ ।

2 "ವ್ಯತಿರೇಕಾನವಸ್ಥಿತೇಃ...' –ಬ್ರ ಸೂ. 2–2–4

'ನ ಋತೇ ತ್ವತ್ಕ್ರಿಯತೇ ಕಿಂಚನಾರೇ' ಇತಿ ತದ್ವ್ಯತಿರೇಕೇಣ ಕಸ್ಯಾಪಿ ಕರ್ಮಣೋಽನವಸ್ಥಿತೇಃ...' –ಬ್ರ. ಸೂ. ಭಾ.

3 'ಸ ಕಾರಣಂ. .' –ಶ್ವೇ. ಉ. 6-9

ಕಾರಣನು. ಜಗತ್ತಿನ ಕಾರಣಗಳಲ್ಲೆಲ್ಲ ಆತನು ಅಂತರ್ಯಾಮಿಯಾಗಿ ನೆಲೆಸಿರುವನೆಂದೆ ಅವು ಕಾರಣಗಳಾಗಿ ಉಳಿದಿವೆ ಹೀಗೆ ಕರ್ಮ, ಕರ್ತೃ ಮುಂತಾದ ಕಾರಣಗಳಲ್ಲಿ ಹಾಗೆಯೇ ಕಾರ್ಯಗಳಲ್ಲೂ ಸನ್ನಿಹಿತನಾಗಿರುವ ಆತನು ಅವುಗಳ ಮೂಲಕ ಎಲ್ಲವನ್ನೂ ರಕ್ಷಿಸುತ್ತಿರುವನು—ಎಂದು ಸಂದೇಶಿಸಲಾಗಿದೆ[1] ಸ್ವಾಯಂಭುವ ಮನು ತನ್ನ ಮೊಮ್ಮಗ ಧ್ರುವನಿಗೆ ಭಗವಂತನ ಬಗ್ಗೆ ಉಪದೇಶಿಸುತ್ತ ಭಗವಂತನು ಕರ್ಮ, ಸ್ವಭಾವ, ಕಾಲ, ಅದೃಷ್ಟ ಹಾಗೂ ಕಾಮ—ಇವುಗಳಲ್ಲಿ ಆಯಾಯ ಹೆಸರಿಂದ ಇದ್ದು ಅವುಗಳ ಮೂಲಕ ಸರ್ವಕ್ಕೂ ಕಾರಣನಾಗಿರುವನೆಂದು ಪ್ರತಿಪಾದಿಸಿರುವನು[2] ಹೀಗೆ ಭಗವಂತನು ಆಶ್ಚರ್ಯಕರವಾಗಿ ಎಲ್ಲದ್ದಕ್ಕೂ ಕಾರಣನಾಗಿರುವ ಪ್ರಯುಕ್ತ ಗಜೇಂದ್ರನು 'ಅಖಿಲ ಕಾರಣನಾದ, ಅದ್ಭುತಕಾರಣನಾದ, ನಿನಗೆ ನಮೋ ನಮಃ'—ಎಂದು ಆತನನ್ನು ನಮಿಸಿರುವನು.[3]

೨ (ಸಾತ್ತ್ವಿಕರಿಗೆ ತತ್ತ್ವಗಳ ಬಗ್ಗೆ) ನಿಶ್ಚಯವನ್ನು ಒದಗಿಸುವವನು.[4]

೩ (ಸಾತ್ತ್ವಿಕಭಿನ್ನರಿಗೆ ತತ್ತ್ವಗಳ ಬಗ್ಗೆ) ನಿಶ್ಚಯ ಬಾರದಂತೆ ಮಾಡುವವನು.[5]

---

1 'ಸ ಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತುಹೇತುಃ । ಕಾರ್ಯೇಷು ಚೈವಂ ಸ ಹ ಕರ್ಮಕರ್ತೃರೂಪೈರಶೇಷೈರವತೀಹ ಸರ್ವಮ್' ॥
-ವಿ ಪು ಪ್ರಥಮ 15-56

2 ಕೇಚಿತ್ ಕರ್ಮ ವದಂತ್ಯೇನಂ ಸ್ವಭಾವಮಪರೇ ನೃಪ । ಏಕೇ ಕಾಲಂ ಪರೇ ದೈವಂ ಪುಂಸಃ ಕಾಮಮುತಾಪರೇ ॥ -ಭಾಗ ತಾ. ನಿ. 4-10-52

'ಕಾಮಕರ್ಮಸ್ವಭಾವೇಷು ಕಾಲೇ ಚಾವಸ್ಥಿತೋ ಹರಿಃ । ಸರ್ವಕಾರಣಭೂತಃ ಸಂಸ್ತತ್ತನ್ನಾಮ್ನಾಽಭಿಧೀಯತೇ' -ತತ್ತ್ವಸಂಹಿತಾ (ಭಾಗ. ತಾ ನಿ.)

'ಜ್ಞಾನಿನಸ್ತ್ವೇತ್ತೈಃ ಶಬ್ದೈರೇಷು ಸ್ಥಿತಂ ನಾರಾಯಣಮೇವ ಕಾರಣಂ ವದಂತಿ । ಅಜ್ಞಾನಿನಸ್ತು ಕರ್ತೃತ್ವಂ ಕರ್ಮಾದಿಷು ಭ್ರಮಂತಿ -ಬ. ಗೋ.

3 'ನಮೋ ನಮಸ್ತೇಽಖಿಲಕಾರಣಾಯ ಅದ್ಭುತಕಾರಣಾಯ'
-ಭಾಗ 8-3-15

೨ 4 ಕಾರಂ ತತ್ತ್ವೇಷು ಸಾತ್ತ್ವಿಕಾನಾಂ ನಿಶ್ಚಯಂ ನಯತಿ ಪ್ರಾಪಯತೀತಿ ಕಾರಣಮ್ । 'ಕಾರೋ ವಧೇ ನಿಶ್ಚಯೇ ಚ ಬಲೌ ರತ್ನೇ ಯತಾವಪಿ'—ವಿಶ್ವಮೇದಿನ್ಯೌ ।

೩ 5 ಕಾರಂ ತತ್ತ್ವೇಷು ಸಾತ್ತ್ವಿಕಭಿನ್ನಾನಾಂ ನಿಶ್ಚಯಂ ನಯತಿ ಅಪನಯತೀತಿ ಕಾರಣಮ್ ।

೪ ವಧೆಗೊಳಗಾಗದಂತೆ ಮಾಡುವವನು[1]

೫ ವಧೆಗೊಳಗಾಗುವಂತೆ ಮಾಡುವವನು[2]

ಗೀತಾಚಾರ್ಯನು ತಾನು ಜೀವಾತ್ಮರ ಇಂದ್ರಿಯಾದಿಗಳಲ್ಲಿದ್ದು ಅವರ ದೇಹವನ್ನು ಧರಿಸುವುದರ ಮೂಲಕ ಅವರು ವಧೆಗೊಳಗಾಗದಂತೆ ಮಾಡುವ ಪ್ರಯುಕ್ತ 'ಅಮೃತ' ಎಂದೆನಿಸಿರುವನೆಂದೂ ಪ್ರಲಯಕ್ಕಿಂತ ಇತರ ಕಾಲದಲ್ಲಿ ಜೀವಾತ್ಮರ ಸಂಹಾರಕನಾಗಿದ್ದು, 'ಮೃತ್ಯು' ಎಂದೆನಿಸಿರುವನೆಂದೂ ಸಂದೇಶಿಸುವುದರ[3] ಮೂಲಕ ಜೀವಾತ್ಮರು ವಧೆಗೊಳಗಾಗದಂತೆ ರಕ್ಷಿಸುವವನೂ, ಒಮ್ಮೆ ವಧೆಗೊಳಗಾಗುವಂತೆ ಮಾಡುವವನೂ ತಾನೇ ಎಂದು ಸೂಚಿಸಿರುವನು

೬ ಜಲವೇ ಆಶ್ರಯವಾಗಿ ಉಳ್ಳವನು[4]

೭ ವಾಯು ಮತ್ತು ಚತುರ್ಮುಖ ಇವರಿಗೆ ಆಶ್ರಯನಾಗಿ ಇರುವವನು.[5]

೮ ಪರಮಾನಂದಸ್ವರೂಪಿ ಹಾಗೂ ಸರ್ವಾಶ್ರಯನಾಗಿರುವವನು.[6]

---

೪ 1 ಕಾರಂ ವಧಂ ನಯತಿ ಅಪನಯತೀತಿ ಕಾರಣಮ್ ।

೫ 2 ಕಾರಂ ವಧಂ ನಯತಿ ಪ್ರಾಪಯತೀತಿ ಕಾರಣಮ್ ।

3 ಅಮೃತಂ ಚೈವ ಮೃತ್ಯುಶ್ಚ ಅಹಮರ್ಜುನ । -ಗೀ. 9-19

ಅಹಮಿಂದ್ರಿಯೇಷು ಸ್ಥಿತ್ವಾ ತೇಷಾಂ ದೇಹಧಾರಣೇನ ಮೃತಿಂ ಪರಿಹರಾಮೀತಿ ಹೇತೋ-ರಮೃತಂ ಅಹಮ್ । ಪ್ರಲಯಕಾಲಾದನ್ಯಕಾಲೇ ಸಂಹರ್ತೃತ್ವಾನ್ಮೃತ್ಯುರಹಮ್
-ಗೀ. ವಿ.

೬ 4 ಕಂ ಜಲಮರಣಮಾಶ್ರಯೋ ಯಸ್ಯ ತತ್ ಕಾರಣಮ್ ।
-ಸ. ಸಂ.

೭ 5 ಕಯೋರ್ವಾಯುಬ್ರಹ್ಮಣೋರರಣಮಿತಿ ಕಾರಣಮ್ ।
-ಸ. ಸಂ.

೮ 6 ಪರಮಾನಂದರೂಪಿತ್ವಾತ್ ಕಃ । ಸರ್ವಾಶ್ರಯತ್ವಾದರಣಮ್ । ಕಶ್ಚ ತತ್ ಅರಣಂ ಚ ಕಾರಣಮ್ ।

ಭಗವಂತನು ಪರಮಾನಂದಸ್ವರೂಪಿಯಾಗಿರುವುದರಿಂದಲೇ 'ಕ' ಎನಿಸಿರುವನೆಂದು ನಾರಾಯಣೀಯ' ತಿಳಿಸಿದೆ[1] ಇಂತಹ ಭಗವಂತನು ಸರ್ವಾಶ್ರಯನು ಗಜೇಂದ್ರನು 'ಅರಣ' ಶಬ್ದವನ್ನು ಬಳಸಿಯೇ ಅವನ ಆಶ್ರಯವನ್ನು ಪ್ರಾರ್ಥಿಸಿಕೊಂಡಿರುವನು[2]

೯ ಸುಖಸ್ವರೂಪಿ ಹಾಗೂ (ಭಕ್ತರ) ದೋಷಗಳನ್ನು ದೂರಗಲಾಡಿಸುವವನು.[3]

೧೦ ಚತುರ್ಮುಖನಿಗೆ ಅಥವಾ ವಾಯುದೇವನಿಗೆ ಸುಖವನ್ನು ಚೆನ್ನಾಗಿ ತಲುಪಿಸಿರುವವನು[4]

ವಾಯುದೇವರ ಅವತಾರ ಎನಿಸಿದ ಆನಂದತೀರ್ಥರಿಗೆ ಪರಾನಂದದ ವರವನ್ನು ಅನುಗ್ರಹಿಸಿದವನು ಭಗವಂತನೆಂದು ಆನಂದತೀರ್ಥರು ಸ್ತುತಿಸಿರುವರು.[5]

ಜಿಜ್ಞಾಸೆ

[ವಿಷಜಂತುಗಳಂತೆ]

ಪ್ರ:- ಪರಮಾತ್ಮನು ದೈತ್ಯರ ವಧ ಮತ್ತು ದುರ್ಗತಿಗೆ ಕಾರಣನಾದ್ದರಿಂದ ದೈತ್ಯರು ಪರಮಾತ್ಮನಲ್ಲಿ ದ್ವೇಷಮಾಡುವದು ನ್ಯಾಯವಲ್ಲವೇ? ಶಾಸ್ತ್ರವು 'ಆತತಾಯಿನಮಾಯಾಂತಂ ಹನ್ಯಾದೇವ' ಎಂದು ಹೇಳುತ್ತದೆ. ಆದ್ದರಿಂದ ದೈತ್ಯರು ಶಾಸ್ತ್ರಕ್ಕೆ ಸರಿಯಾಗಿ ಇದ್ದರೆ ಅವರದ್ದು ಏನು ತಪ್ಪು?

ಉ - ವಿಷಯುಕ್ತಜಂತುಗಳನ್ನು ನಾವು ಕೊಲ್ಲುತ್ತೇವೆ ನಾವು ಅವುಗಳನ್ನು ಕೊಲ್ಲತಕ್ಕವರು ಎಂಬ ಕಾರಣದಿಂದ ಆ ಜಂತುಗಳು ನಮಗೆ ಕಚ್ಚುವವು ಆ ಜಂತುಗಳು ಮರಗಿಡಗಳಿಗೆ ಕಚ್ಚುವದಿಲ್ಲ.

---

1 ಕೋ ನಾಮ ಭಗವಾನ್ ವಿಷ್ಣುಃ ಪರಮಾನಂದರೂಪತಃ ।
-ನಾರಾಯಣೀಯ (ಬೃ ಉ. ಭಾ. 3-6-6)

2 ಅರಣಂ ತಮೀಮಹಿ ॥ -ಭಾಗ. 8-2-33

೯ 3 ಆನಂದರೂಪಿತ್ವಾತ್ ಕಃ । ಭಕ್ತಾನಾಂ ಅರಂ ದೋಷಂ ನಯತಿ ಅಪನಯತೀತಿ ಅರಣಾವ್ । ಕಶ್ಚ ತತ್ ಅರಣಂ ಚ ಕಾರಣವ್ ।

೧೦ 4 ಕಸ್ಯ ಚತುರ್ಮುಖಸ್ಯ ಮುಖ್ಯಪ್ರಾಣಸ್ಯ ವಾ ಆ ಸಮ್ಯಕ್ ರಂ ಸುಖಂ ನಯತಿ ಪ್ರಾಪಯತೀತಿ ಕಾರಣವ್ ।

5 ಆನಂದತೀರ್ಥಪರಾನಂದವರದ । -ದ್ವಾ. ಸ್ತೋ.

ಏಕೆ? ಮರಗಳು ವಿಷ ಜಂತುಗಳನ್ನು ಕೊಲ್ಲುವುದಿಲ್ಲ ಆದುದರಿಂದ ವಿಷ ಜಂತುಗಳು ನಮ್ಮನ್ನು ಕಚ್ಚುವದು ಅವುಗಳ ಅಪರಾಧವಲ್ಲ ಎಂದು ಹೇಳಬೇಕೇ? ನಮಗೆ ಕಚ್ಚುವದು ವಿಷ ಜಂತುಗಳ ಅಪರಾಧವಾಗುವುದಾದರೆ ದೈತ್ಯರು ಪರಮಾತ್ಮನ ದ್ವೇಷ ಮಾಡುವದು ದೈತ್ಯರಿಗೆ ಅಪರಾಧ ಏಕೆ ಆಗಬಾರದು



## ೩೮೧ ಕರ್ತಾ

### ೧ ಎಲ್ಲವನ್ನೂ ಸ್ವತಂತ್ರವಾಗಿ ಮಾಡುವವನು[1]

ಭಗವಂತನೇ ಎಲ್ಲವನ್ನೂ ಸ್ವತಂತ್ರವಾಗಿ ಮಾಡುವವನು ಕ್ರಿಯಾಸ್ವಾತಂತ್ರ್ಯರೂಪದ ಕರ್ತೃತ್ವವು ಭಗವಂತನ ಅಸಾಧಾರಣ ಧರ್ಮವೆನಿಸಿದ್ದು, ಅವನು ಲೋಕಕ್ಕೆ ಅಂತಹ ಕರ್ತೃತ್ವವನ್ನು ನೀಡಲೇ ಇಲ್ಲ[2] ಆದುದರಿಂದಲೇ 'ಪೈಂಗಿಶ್ರುತಿ'ಯು ಭಗವಂತನೊಬ್ಬನೇ ಸ್ವಾಭಾವಿಕವಾಗಿ ಕರ್ತೃ ಎನಿಸಿರುವವನು ಉಳಿದವರೆಲ್ಲ ಅವನಿಂದ ಪ್ರೇರಿತರಾಗಿ ಕರ್ತೃಗಳಾಗಿರುವುದಷ್ಟೇ. ಅವನಲ್ಲಿಯ ಕರ್ತೃತ್ವವಾದರೂ ಸ್ವಾಭಾವಿಕವಾದುದರಿಂದ ಎಂದೂ ನಾಶವಾಗಲಾರದು—ಎಂದು ಸಿದ್ಧಾಂತಿಸಿದೆ[3] ಜೀವಾತ್ಮರ ಸಂಸಾರ ಬಂಧನದ ನಿವೃತ್ತಿಗಾಗಿಯೇ ಭಗವಂತನಲ್ಲಿ ಚಿದಾತ್ಮಕವಾದ ಕರ್ತೃತ್ವವು ನಿತ್ಯಾರೂಢವಾಗಿ, ಸಹಜವಾಗಿ ಇದೆ—ಎಂದು ಭವಿಷ್ಯತ್ಪುರಾಣ ಸಂದೇಶಿಸಿದೆ.[4] ಇಚ್ಛಾಪೂರ್ವಕವಾದ ಕ್ರಿಯಾದಾನವೇ

---

೧ 1 ಸರ್ವಂ ಸ್ವಾತಂತ್ರ್ಯೇಣ ಕರೋತೀತಿ ಕರ್ತಾ । ಅಸಾಧಾರಣ್ಯೇನ ವ್ಯಪದೇಶಃ ।

* ಕರೋತಿ ಸರ್ವಮಿತಿ ಕರ್ತಾ । ಸ. ಸಂ.

2 ನ ಕರ್ತೃತ್ವಂ .ಲೋಕಸ್ಯ ಸೃಜತಿ ಪ್ರಭುಃ । -ಗೀ. 5-14

ಯಥಾ ಪಿತ್ರಾ ದತ್ತಂ ಪಾಲಕತ್ವಂ ರಾಜಪುತ್ರಾಣಾಮೇವಂ ಪರಮಾತ್ಮದತ್ತಂ ಕ್ರಿಯಾಸ್ವಾತಂತ್ರ್ಯಲಕ್ಷಣಂ ಕರ್ತೃತ್ವಂ . ಜೀವಾನಾಮಸ್ತ್ವಿತ್ಯಾಶಂಕಾಂ ಪರಿಹರತಿ—ನ ಕರ್ತೃತ್ವಮಿತ್ಯಾದಿನಾ । ಕ್ರಿಯಾಯಾಂ ...ಸ್ವಾತಂತ್ರ್ಯಂ ಲೋಕಸ್ಯ ನ ಸೃಜತೀಶ್ವರ ಇತ್ಯರ್ಥಃ । -ಗೀ. ಭಾ.

3 ಹರಿಃ ಸ್ವಭಾವತಃ ಕರ್ತಾ ಸರ್ವಮನ್ಯತ್ ತದೀರಿತಮ್ । ಅತಃ ಸಾ ಕರ್ತೃತಾ ತಸ್ಯ ನ ಕದಾಚಿತ್ ವಿನಶ್ಯತಿ -ಪೈಂಗಿಶ್ರುತಿ (ಗೀ. ತಾ 5-14)

4 ಪ್ರತಿಷೇಧಾಯ ಬಂಧಸ್ಯ ಜೀವಾನಾಂ ಪರಮೇಶಿತುಃ । ಸ್ವೇಚ್ಛಯೈವ ತು ಕರ್ತೃತ್ವಂ ನಿತ್ಯಾರೂಢಂ ಚಿದಾತ್ಮಕಮ್ -ಭವಿಷ್ಯತ್ಪುರಾಣ (ಭಾಗ. ತಾ. ನಿ. 2-10-45)

ಕತೃತ್ವವೆನಿಸಿದೆ[1] ಎನ್ನುವ ಪೈಂಗಿ ಶ್ರುತಿಯೂ, ಜೀವಾತ್ಮರಲ್ಲಿ ಇಂತಹ ಕರ್ತೃತ್ವವು ಭಗವದನುಗ್ರಹ ದಿಂದಷ್ಟೇ ಇರುವುದೆಂದು ಸಂದೇಶಿಸಿದೆ[2] ಈ ಶ್ರುತಿಯ ಆಧಾರದಿಂದಲೇ ಬ್ರಹ್ಮಸೂತ್ರವೊಂದರಲ್ಲೂ ಜೀವಾತ್ಮನ ಕರ್ತೃತ್ವವು ಭಗವದಧೀನವೆಂದು ಸಿದ್ಧಾಂತಿಸಲಾಗಿದೆ[3] ಭಗವಂತನು ಆಯಾಯ ಜೀವಾತ್ಮರಲ್ಲಿದ್ದು, ಅವರವರ ಶಕ್ತಿಯನ್ನು ಪ್ರಬೋಧಿಸುವನೆನ್ನುವ 'ವಾಮನ'ವು,[4] ಆ ಮೂಲಕ ಅವನು ಅವರ ಕರ್ತೃತ್ವವನ್ನು ಅನುಗ್ರಹಿಸುವನೆಂಬುದಾಗಿ ಸೂಚಿಸಿದೆ ಸಕಲ ಪ್ರಾಣಿಗಳ ಮೂಲಕ ನಡೆಯುವ ಕರ್ಮಗಳೂ ಶ್ರೀವಿಷ್ಣುವಿನ ಕರ್ಮಗಳೆಂದೇ ತಿಳಿಯಬೇಕೆಂದು ವಿಷ್ಣುಸೂಕ್ತ ಬೋಧಿಸಿದೆ.[5]

ಹೀಗೆ ಮುಖ್ಯವಾಗಿ ಸರ್ವಕರ್ತೃ ಭಗವಂತನೇ.[6] ಆದುದರಿಂದಲೇ ನಾನು ಕರ್ತೃ ಅಲ್ಲ,

---

1 'ಇಚ್ಛಾಪೂರ್ವಕ್ರಿಯಾದಾನಂ ಕರ್ತೃತ್ವಂ ಮುಖ್ಯಮೀರಿತಮ್
—ಪೈಂಗಿಶ್ರುತಿ (ಗೀ. ತಾ. 13-30)

2 'ಕರ್ತೃತ್ವಂ ..ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ'
—ಪೈಂಗಿಶ್ರುತಿ (ಬ್ರ. ಸೂ ಭಾ. 2-3-40)

3 'ಪರಾತ್ತು ತಚ್ಛ್ರುತೇಃ' -ಬ್ರ. ಸೂ. 2-3-40

ಸಾ ಚ ಕರ್ತೃತ್ವಶಕ್ತಿಃ ಪರಾದೇವ । -ಬ್ರ ಸೂ. ಭಾ

4 ತತ್ರ ತತ್ರ ಸ್ಥಿತೋ ವಿಷ್ಣುಸ್ತತಚ್ಛಕ್ತೀಃ ಪ್ರಬೋಧಯನ್ । ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ' —ವಾಮನ (ಬ್ರ. ಸೂ. ಭಾ. 2-3 11)

5 ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ..।
—ಯ. ವೇ 23-19

ಯಾನೀಹ ವಿಷ್ಣುಕರ್ಮಾಣಿ ಪ್ರಾಣಿಕರ್ಮಾಣ್ಯಶೇಷತಃ । ಯತೋ ಜಾತಾನಿ...
—ಯ. ಭಾ.

6 ಕರ್ತಾ ಸರ್ವಸ್ಯ ವೈ ವಿಷ್ಣುರೇಕ ಏವ ನ ಸಂಶಯಃ । ಇತರೇಷಾಂ ತು ಸತ್ತಾದ್ಯಾ ಯತ ಏವ ತದಾಜ್ಞಯಾ—ಭವಿಷ್ಯತ್ಪುರಾಣ (ಬ್ರ. ಸೂ. ಭಾ. 2-3-11)

* 'ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ'
—ಮೋಕ್ಷಧರ್ಮ (ಗೀ. ಭಾ. 14-19)

ಶ್ರೀಹರಿಯೇ ಎಲ್ಲದ್ದಕ್ಕೂ ಕರ್ತೃ ಎಂದು ವಿಶ್ಲೇಷಿಸಿಕೊಂಡವನೇ 'ಸನ್ಯಾಸಿ' ಎಂದು 'ನಿವೃತ್ತ' ತಿಳಿಸಿದೆ.[1] ಜೀವಾತ್ಮನು ತನ್ನಲ್ಲಿ ಕರ್ತೃತ್ವವನ್ನು ಆರೋಪಿಸಿಕೊಳ್ಳುವುದರಿಂದಲೇ ಸ್ವರ್ಗಾದಿಗಳು, ಗುಣಗಳು, ದೋಷಗಳು ಅವನಲ್ಲಿ ಉಂಟಾಗುವವು. ಪರಮಾತ್ಮನೊಬ್ಬನೇ ಕರ್ತೃ ಎಂದು ತಿಳಿದು ಕೊಳ್ಳುವವನು ಸಂಸಾರ ಬಂಧನವನ್ನು ಕಳೆದುಕೊಳ್ಳುವನು ಹಾಗೂ ಭಗವಂತನನ್ನು ಹೊಂದುವನು—ಸಂದೇಶಿಸುವ ಮಹಾಭಾರತವು ಭಗವಂತನೇ ಮುಖ್ಯ ಕರ್ತೃ ಎಂದು ಸೂಚಿಸಿದೆ ಜೀವಾತ್ಮನು ಮುಕ್ತಿ ಪಡೆಯಲು ಸಾಕ್ಷಾತ್ಕರಿಸಿಕೊಳ್ಳಬೇಕಾದ ಭಗವಂತನ ಗುಣಗಳಲ್ಲಿ ಕರ್ತೃತ್ವವೂ ಒಂದು ಎಂಬುದಾಗಿ ಆಥರ್ವಣೋಪನಿಷತ್ತು ಸಂದೇಶಿಸಿದೆ[3]

ಭಗವದ್ಗೀತೆಯಲ್ಲಿ ಭಗವಂತನನ್ನು 'ಸ್ಥಾಣು'—ನಿರ್ವಿಕಾರ ಎನ್ನಲಾಗಿದೆ.[4] ಆದರೆ ಭಗವಂತನಲ್ಲಿ ಕರ್ತೃತ್ವವನ್ನು ತಿಳಿಸುವ ಬೇರೆ ವಾಕ್ಯಗಳೂ ಶಾಸ್ತ್ರದಲ್ಲಿ ಇರುವುದರಿಂದ, ಭಗವಂತನು ನಿರ್ವಿಕಾರ ನಾದರೂ ಅವನ ಸಾಮರ್ಥ್ಯದಿಂದಾಗಿ ಅವನಲ್ಲಿ ಕರ್ತೃತ್ವವೂ ಇದ್ದೇ ಇದೆ ಎಂದು ಒಪ್ಪಬೇಕೆಂದು ಶ್ರೀಮದಾಚಾರ್ಯರು ಸಿದ್ಧಾಂತಿಸಿರುವರು[5]

---

* 'ಸ ಹಿ ಕರ್ತಾ' -ಗೀ. ತಾ. 13-30

* 'ಏಷ ಕರ್ತಾ ನ ಕ್ರಿಯತೇ ಕಾರಣಂ ಚ ಜಗತ್ಪತಿಃ'
-ಭಾರತ (ಭಾಗ. ತಾ. ನಿ. 3-27-8)

1 'ನಾಹಂ ಕರ್ತಾ ತು ಸರ್ವಸ್ಯ ಕರ್ತೈಕೋ ವಿಷ್ಣುರವ್ಯಯಃ । ಇತಿ ವಿಜ್ಞಾಯ ತು ಸನ್ಯಾಸೀ ನಾನ್ಯಥಾ ತು ಕಥಂಚನ'
-ನಿವೃತ್ತ (ಭಾಗ. ತಾ. ನಿ. 11-12-2)

2 'ಸ್ವರ್ಗಾದ್ಯಾಶ್ಚ ಗುಣಾಃ ಸರ್ವೇ ದೋಷಾಃ ಸರ್ವೇ ತಥೈವ ಚ । ಆತ್ಮನಃ ಕರ್ತೃತಾ-ಭ್ರಾಂತ್ಯಾ ಜಾಯಂತೇ ನಾತ್ರ ಸಂಶಯಃ । ಪರಮಾತ್ಮಾನಮೇವೈಕಂ ಕರ್ತಾರಂ ವೇತ್ತಿ ಯಃ ಪುಮಾನ್ । ಸ ಮುಚ್ಯತೇಽಸ್ಮಾತ್ ಸಂಸಾರಾತ್ ಪರಮಾತ್ಮಾನಮೇತಿ ಚ'—ಭಾರತ (ಭಾಗ. ತಾ ನಿ. 11-7-8)

3 ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪರಮಂ ಸಾಮ್ಯಮುಪೈತಿ'
-ಆಥ. ಉ. 3-1-3

4 ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ।
-ಗೀ. 2-24

5 ಸ್ಥಾಣುತ್ವೇಽಪ್ಯೈಕ್ಷತೇತ್ಯಾದ್ಯವಿರುದ್ಧಮೀಶ್ವರಸ್ಯ । ಉಭಯವಿಧವಾಕ್ಯಾತ್ । ಅಚಿಂತ್ಯ-ಶಕ್ತೇಶ್ಚ । -ಗೀ. ಭಾ.

ಹಾಗೆಯೇ ಅವನು ಪ್ರಾಕೃತಚಲನಾದಿ ಕ್ರಿಯೆಗಳಿಲ್ಲದ ಪ್ರಯುಕ್ತ 'ಅಚಲ' ಎಂದೆನಿಸಿರುವನೇ ಹೊರತು ಅವನಲ್ಲಿ ಕ್ರಿಯೆಗಳೇ ಇಲ್ಲ ಎನ್ನುವಂತಿಲ್ಲ ಯಾಕೆಂದರೆ ಅವನಲ್ಲಿ ಕ್ರಿಯೆಗಳು ಇವೆ ಎಂಬುದಾಗಿ ಪ್ರಮಾಣಗಳು ಸಾರುತ್ತಿವೆ—ಎಂಬುದಾಗಿಯೂ ಶ್ರೀಮದಾಚಾರ್ಯರು ನಿರ್ಣಯಿಸಿರುವರು.[1]

೨ ಎಲ್ಲರಿಂದಲೂ ಮಾಡಿಸುವವನು.[2]

[ಅರ್ಥವಿಶೇಷಗಳನ್ನು ೩೧೬ನೆಯ 'ಕರ್ತಾ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು.]

ಜಿಜ್ಞಾಸೆ

[ಯತ್ನಕ್ಕೆ ಸ್ವಾಮಿಯೇ ಕರ್ತೃ]

ಪ್ರ.- ಕರ್ತಾ ಎಂದರೆ ಪ್ರಯತ್ನಕ್ಕೆ ಆಶ್ರಯ ಎಂದು ಅರ್ಥ. ಪ್ರಯತ್ನವು ಅಂತಃಕರಣಧರ್ಮ ಎಂದು ಶ್ರುತಿಯು ಹೇಳುತ್ತದೆ ಆದುದರಿಂದ ಆತ್ಮನು ಕರ್ತಾ ಹೇಗೆ ಆಗುತ್ತಾನೆ? ಅಂತಃಕರಣವು 'ಕರ್ತಾ' ಆಗಬೇಕು ತಾನೆ?

ಉ - ಶ್ರುತಿಯು ಅಂತಃಕರಣವು ಪ್ರಯತ್ನಕ್ಕೆ ಪರಿಣಾಮಿಕಾರಣ ಎಂದು ಹೇಳುತ್ತದೆ ಹತ್ತಿಯು ವಸ್ತ್ರಕ್ಕೆ ಪರಿಣಾಮಿ ಕಾರಣವಾದ್ದರಿಂದ ಹತ್ತಿಯನ್ನು ವಸ್ತ್ರವಾನ್ ಎಂದು ಹೇಳುವದಿಲ್ಲ. ವಸ್ತ್ರದ ಸ್ವಾಮಿಯನ್ನು ವಸ್ತ್ರವಾನ್ ಎಂದು ಹೇಳುವದು ಕಂಡಿದೆ ಅದರಂತೆ ಪ್ರಯತ್ನಕ್ಕೆ ಸ್ವಾಮಿಯು ಆತ್ಮನು ಆದ್ದರಿಂದ ಆತ್ಮನನ್ನು ಕರ್ತಾ ಎಂದು ಹೇಳುವದೇ ಯುಕ್ತವು ಅದ್ವೈತಿಗಳು ಕರ್ತೃತ್ವವು ಅಂತಃಕರಣಧರ್ಮವಾದ್ದರಿಂದ ಆತ್ಮನಲ್ಲಿ ಕರ್ತೃತ್ವವು ಮಿಥ್ಯಾ ಎಂದು ಹೇಳುತ್ತಾರೆ. ಅವರು ಹಾಗೆ ಹೇಳುವದು ಸಾಕ್ಷ್ಯನುಭವವಿರುದ್ಧವಾದ್ದರಿಂದ ಕರ್ತೃತ್ವವನ್ನು ಆತ್ಮನಲ್ಲಿ ಮಿಥ್ಯಾವೆಂದು ಹೇಳಬಾರದು



---

* ಐಶ್ವರ್ಯಜಂ ತು ಕರ್ತೃತ್ವಂ ಸಮ್ಯಕ್ ತತ್ತ್ವವೇದಿನಃ ।

-ಪಾದ್ಮ (ಭಾಗ. ತಾ. ನಿ. 1-3-35)

1 ಅಚಲತ್ವಂ ತು—'ಅಪ್ರಹರ್ಷಮನಾನಂದಮ್' 'ಅದುಃಖಮಸುಖಮ್' 'ನ ಪ್ರಜ್ಞಮ್' 'ಅಸನ್ನ್ವ' ಇತ್ಯಾದಿವತ್ । ಕ್ರಿಯಾದ್ಯಪೇಕ್ಷ । -ಗೀ. ಭಾ.

೨ 2 ಕಾರಯತೀತಿ ಕರ್ತಾ । -ವಿ. ರಾ.

## ೩೮೨ ವಿಕರ್ತಾ

೧ ಅದ್ಭುತವಾಗಿ ಅಥವಾ ವಿಶಿಷ್ಟವಾಗಿ ಅಥವಾ ವೈವಿಧ್ಯವನ್ನೊಳಗೊಳ್ಳುವಂತೆ ಜಗತ್ತನ್ನು ನಿರ್ಮಿಸಿರುವವನು[1]

ಜಗತ್ತು ಬಹಳ ಅದ್ಭುತ, ವೈಶಿಷ್ಟ್ಯ ಹಾಗೂ ವೈವಿಧ್ಯಪೂರ್ಣವಾದದ್ದು. ಇಂತಹ ಅತ್ಯದ್ಭುತ ಹಾಗೂ ವೈವಿಧ್ಯೋಪೇತವಾದ ಜಗತ್ತನ್ನು ರಚಿಸಿರುವ ಭಗವಂತನು ಉತ್ತಮ ಸಾಮರ್ಥ್ಯವುಳ್ಳವನು ಹಾಗೂ ಅನಂತಗುಣಪರಿಪೂರ್ಣನು, ಆದುದರಿಂದಲೇ ಸರ್ವೋತ್ತಮನು ಎಂಬುದಾಗಿ ಶ್ರೀಮದಾಚಾರ್ಯರು ಸಮರ್ಥಿಸಿರುವರು[2]

೨ ತನ್ನನ್ನು ವಿವಿಧರೂಪವುಳ್ಳವನನ್ನಾಗಿ ಸೃಷ್ಟಿಸಿಕೊಂಡಿರುವವನು[3]

ನಾನಾ ಚೇತನಾಚೇತನ ಪದಾರ್ಥಗಳನ್ನು ಸೃಷ್ಟಿ ಮಾಡಿದ ಭಗವಂತನು ಅವುಗಳ ಸುಪ್ತ ಶಕ್ತಿಯ ಅಭಿವ್ಯಕ್ತಿ, ರಕ್ಷಣೆ ಮೊದಲಾದ ಉದ್ದೇಶಗಳಿಗಾಗಿ ಅವುಗಳ ಅಂತರ್ಯಾಮಿಗಳಾಗಿ, ಬಿಂಬ ರೂಪಗಳಾಗಿ ತನ್ನ ಅನೇಕ ರೂಪಗಳನ್ನು ಸೃಷ್ಟಿಸಿಕೊಳ್ಳುವನು. ಜಗತ್ತನ್ನು ಸೃಷ್ಟಿಸಿ ತಾನು ಅದಕ್ಕೆ ನಿಯಾಮಕನಾಗಿ ಬಹುರೂಪವುಳ್ಳವನಾಗಬೇಕೆಂದು ಸಂಕಲ್ಪಿಸಿಯೇ ಸೃಷ್ಟಿಯಲ್ಲಿ ತೊಡಗುವ ಭಗವಂತನು. 'ಸತ್' 'ತ್ಯತ್' 'ನಿರುಕ್ತ' 'ಅನಿರುಕ್ತ' 'ವಿಜ್ಞಾನ' 'ಅವಿಜ್ಞಾನ' 'ಸತ್ಯ' 'ಅನೃತ'— ಮುಂತಾದ ಹೆಸರುಗಳುಳ್ಳ ಪದಾರ್ಥಗಳನ್ನು ಸೃಷ್ಟಿಸಿ, ಅವುಗಳಲ್ಲಿ ಆಯಾಯ ನಾಮಕನಾಗಿ ತಾನೂ ಪ್ರವೇಶಿಸಿದನೆಂದು ತೈತ್ತಿರೀಯೋಪನಿಷತ್ತು ಸಂದೇಶಿಸಿದೆ[4]. ದೇವಾದಿಗಳ ದೇಹಗಳನ್ನು

---

೧ 1 ವಿಚಿತ್ರಂ ವಾ ವಿಶಿಷ್ಟಂ ವಾ ವಿವಿಧಂ ವಾ ಕರೋತೀತಿ ವಿಕರ್ತಾ ।
-ವಿ. ರಾ.

* ವಿವಿಧಂ ಕರೋತೀತಿ ವಿಕರ್ತಾ । -ವಿ ರಾ.

2 ಬಹುಚಿತ್ರಜಗದ್ಬಹುಧಾಕರಣಾತ್ ಪರಶಕ್ತಿರನಂತಗುಣಃ ಪರಮಃ ।
-ದ್ವಾ. ಸ್ತೋ.

೨ 3 ಆತ್ಮಾನಂ ವಿವಿಧಂ ವಿವಿಧರೂಪೋಪೇತಂ ಕರೋತಿ ಸೃಜತೀತಿ ವಿಕರ್ತಾ ।

4 ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ... ಇದಂ ಸರ್ವಮಸೃಜತ । ಯದಿದಂ ಕಿಂಚ । ತತ್ ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ। ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ.. -ತೈ. ಉ. 2-11

ಸೃಷ್ಟಿಸಿದ ಭಗವಂತನು ಹೀಗೆ ಜೀವಾತ್ಮರನ್ನು ಬಹು ವಿಧವಾಗಿ ಅವರಿಗೆ ನಿಯಾಮಕನಾಗಿ ತನ್ನನ್ನೂ ಬಹುರೂಪವುಳ್ಳವನನ್ನಾಗಿ ಮಾಡಿಕೊಂಡನೆಂದು ನಾರದೀಯವೂ ತಿಳಿಸಿದೆ.[1]

೩ ವಿಶೇಷವಾಗಿ ಕರ್ತೃ ಆಗಿರುವವನು.[2]

೪ ವಿಶಿಷ್ಟನಾಗಿರುವವನು ಮತ್ತು ಎಲ್ಲದರ ಕರ್ತೃ ಆಗಿರುವವನು.[3]

೫ ವಿಲಕ್ಷಣನಾದ ಕರ್ತೃ ಆಗಿರುವವನು.[4]

೬ ಇತರ ಸಾಮಾನ್ಯಕರ್ತೃಗಳಿಗಿಂತ ವಿಲಕ್ಷಣನಾಗಿರುವ ಪ್ರಯುಕ್ತ 'ಅಕರ್ತೃ' ಎಂದೆನಿಸಿರುವವನು.[5]

---

…ಸತ್ಯಕಾಮಯತ್ । ಸೃಷ್ಟ್ವಾ ಚ ಜಗದಿದಂ ಸರ್ವಂ ನಿಯಾಮಕತಯಾಽಸ್ಯ ತು । ಬಹುರೂಪೋ ಭವಾನೀತಿ . ದ್ವಿತೀಯೇನ ರೂಪೇಣ ಬಹಿರಾಕ್ಷಿಪೇತ್ । ರೂಪಾಂತರೇಣಾಽವಿಶಚ್ಚ ಜಗತ್ ಸರ್ವಂ ಜನಾರ್ದನಃ। ತ್ಯಚ್ಚಾನಿರುಕ್ತಂ ವಿಜ್ಞಾನಂ ತಥಾ ನಿಲಯನಂ ಮಹಾನ್ । ಸತ್ಯಂ ಪ್ರಾಣಸ್ತಥಾ ಶ್ರೀಶ್ಚ ಸನ್ನಿರುಕ್ತಂ ತಥಾಽನೃತಮ್ । ಅವಿಜ್ಞಾನಂ ಚಾನಿಲಯನಂ ಪ್ರಕೃತಿಪ್ರಾಣಯೋಃ ಪರಮ್ । ತದ್ಗವಿಷ್ಣೋಸ್ತು ಸಂಬಂಧಾತ್ ಸ್ವತಸ್ತನ್ನಾಮಕೋ ಹರಿಃ । ತತೋ ನಿಯಾಮಕಶ್ಚೇತಿ .

—ಯಜುಃಸಂಹಿತಾ (ತೈ. ಉ. ಭಾ.)

1 'ಸೃಷ್ಟ್ವಾ ದೇವಾದಿದೇಹಾನ್ ಸ ಆತ್ಮಾನಂ ಬಹುಧಾಽಕರೋತ್।ತನ್ನಿಯಂತೃತಯಾಽತ್ಮಾನಂ . ' -ನಾರದೀಯ (ಭಾಗ. ತಾ ನಿ. 3-11-28)

೩ 2 ವಿಶೇಷೇಣ ಕರ್ತಾ ವಿಕರ್ತಾ । —ರಾ ಸೂ.

೪ 3 ವಿಶಿಷ್ಟತ್ವಾತ್ ವಿಃ । ಸರ್ವಂ ಕರೋತೀತಿ ಚ ಕರ್ತಾ ।

೫ 4 ವಿಲಕ್ಷಣಃ ಸನ್ ಕರ್ತಾ ವಿಕರ್ತಾ ।

೬ 5 ನ ಕರ್ತಾ ವಿಕರ್ತಾ । ಇತರಕರ್ತೃ ವಿಲಕ್ಷಣತ್ವಾತ್ ಅಕರ್ತೇತಿ ಶಾಸ್ತ್ರೇಷು ವ್ಯವಹ್ರಿಯಮಾಣ ಇತಿ ಯಾವತ್ ।

ಭಗವಂತನು ಯಾವುದೇ ಕರ್ಮವನ್ನು ಸ್ವತಂತ್ರನಾಗಿ, ಏನೂ ಪ್ರಯಾಸವಿಲ್ಲದೆ ಮಾಡುವವನು. ಪರಿಪೂರ್ಣನಾದ ಅವನ ಯಾವ ಕರ್ಮಾಚರಣೆಗೂ ಸ್ವಪ್ರಯೋಜನವೆಂಬುದಿಲ್ಲ. ಅವನು ಮಾಡುವ ಕರ್ಮಗಳೆಲ್ಲ ಅವನ ಸ್ವರೂಪಾತ್ಮಕಗಳೇ ಆಗಿವೆ. ಹೀಗೆ ಭಗವಂತನು ವಿಲಕ್ಷಣನಾದ, ವಿಶಿಷ್ಟನಾದ ಕರ್ತೃ ಆಗಿರುವುದರಿಂದಲೇ ಶಾಸ್ತ್ರದಲ್ಲಿ ಅವನನ್ನು ಅಕರ್ತೃ ಎಂದೂ ಕರೆಯುವುದಿದೆ[1]. ಆದರೆ ಭಗವಂತನನ್ನು ಅಕರ್ತೃ ಎಂದಾಕ್ಷಣ ಅವನಲ್ಲಿ ಕರ್ತೃತ್ವ ಇಲ್ಲ, ಭ್ರಾಂತಿಮೂಲಕವಾಗಿಯೆಷ್ಟೇ ಕರ್ತೃತ್ವವು ಕಾಣಿಸುವುದು—ಎಂದು ಭಾವಿಸಬಾರದು. ಭಗವಂತನ ನಿಜರೂಪವನ್ನು ಅರಿಯದವರಷ್ಟೇ ಹೀಗೆ ಹೇಳುವರು. ಅವನ ಸ್ವರೂಪವನ್ನು ಯಥಾರ್ಥವಾಗಿ ಬಲ್ಲ ಜ್ಞಾನಿಗಳು ಅವನಲ್ಲಿ ಸಾಮರ್ಥ್ಯದಿಂದ ಉಂಟಾದ ಕರ್ತೃತ್ವವನ್ನು ಒಪ್ಪುವರು. ಭಗವಂತನು ಏನೂ ಯತ್ನವಿಲ್ಲದೆ, ಕ್ಲೇಶವಿಲ್ಲದೆ ಕರ್ಮವನ್ನು ಆಚರಿಸುವುದರಿಂದ, ಸ್ವತಂತ್ರನಾಗಿ ಆಚರಿಸುವುದರಿಂದ, ಸ್ವಪ್ರಯೋಜನಾಭಿಲಾಷೆ ಇಲ್ಲದೆ ಆಚರಿಸುವುದರಿಂದ, ಹಾಗೂ ಅವನು ಆಚರಿಸುವ ಕ್ರಿಯೆ ಅವನ ಸ್ವರೂಪಕ್ಕಿಂತ ಭಿನ್ನವಲ್ಲದೆ ಇರುವುದರಿಂದ ಅವನು 'ಅಕರ್ತಾ' ಎಂದೆನಿಸಿರುವನೆಂದು ಭಾಷ್ಯ ವಿವರಿಸಿದೆ[2].

---

1 ಏವಂ ಜನ್ಮಾನಿ ಕರ್ಮಾಣಿ ಹ್ಯಕರ್ತುರಜನಸ್ಯ ಚ ।
—ಭಾಗ. 1-3-35

* ಅಜಸ್ಯ ಕರ್ಮಾಕ್ಯಕರ್ತುರ್ಗ್ರಹಣಾಯ ಪುಂಸಾಮ್ ।
—ಭಾಗ. 3-1-44

* ಅಕರ್ತುರೀಶಸ್ಯ । —ಭಾಗ 3-27-8

* ಸ .ಕರ್ಮಾsಕರ್ಮಣಃ ಪರಃ । —ಭಾಗ 2 10 36

* ವಿಶ್ವೋದ್ಭವಸ್ಥಾನನಿರೋಧಕರ್ಮ ತೇ ಹ್ಯಕರ್ತುಃ .
—ಭಾಗ. 5-18-5

* ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ।
ಗೀ. 4-13

2 ಅಪ್ರಯತ್ನತ್ವಾತ್ ಸ್ವತಂತ್ರತ್ವಾತ್ ಫಲಾನಾಂ ಚ ವಿವರ್ಜನಾತ್ । ಕ್ರಿಯಾಯಾಶ್ಚ ಸ್ವರೂಪತ್ವಾದಕರ್ತೇತಿ ಚ ತಂ ವಿದುಃ। ಕರ್ತೃತ್ವಂ ಭ್ರಾಂತಿಜಂ ಪ್ರಾಹುರತತ್ತ್ವವಿದೋ ಜನಾಃ । ಐಶ್ವರ್ಯಜಂ ತು ಕರ್ತೃತ್ವಂ ಸಮ್ಯಕ್ ತತ್ತ್ವವೇದಿನಃ ।
—ಭಾಷ್ಯ (ಭಾಗ. ತಾ. ನಿ. 1-3-35)

* ...ಅಸೌ ನಿಷ್ಫಲತ್ವಾದಕರ್ಮಕಃ ।
—ಭಾಗ. ತಾ. ನಿ. 2-10-36

೭ ಯಾರಿಗೆ ಮತ್ತೊಬ್ಬ ಕರ್ತೃ ಇಲ್ಲವೋ ಅಂತಹವನು.[1]

೮ ವಿಶಿಷ್ಟನಾಗಿರುವ ಪ್ರಯುಕ್ತ ವಿ ಎನಿಸುವ ತಾನೇ ತನಗೆ ಕರ್ತೃ—ಸ್ರಷ್ಟ ಆಗಿರುವವನು[2]

ಭಗವಂತನಿಗೆ ಕರ್ತೃ—ಸ್ರಷ್ಟ ಮತ್ತೊಬ್ಬರು ಇಲ್ಲ ಎಂಬ ದೃಷ್ಟಿಯಿಂದ ಅವನನ್ನು ಶಾಸ್ತ್ರಗಳು 'ಅಕರ್ತೃ' ಎಂದೇ ಕರೆದಿವೆ[3] ಸರ್ವಸ್ರಷ್ಟ ಆದ ಭಗವಂತನು ಪ್ರಕೃತಿಯ ಮೂಲಕ ದೇವಾದಿಗಳ ದೇಹಗಳನ್ನು ಸೃಷ್ಟಿಸಿ, ಅವುಗಳಿಗೆ ನಿಯಾಮಕನನ್ನಾಗಿ ಹಾಗೂ ಮತ್ಸ್ಯಾದಿ ರೂಪವುಳ್ಳವನನ್ನಾಗಿ ತನ್ನನ್ನು ತಾನೇ ಅಭಿವ್ಯಕ್ತೀಕರಿಸಿಕೊಂಡನು—ಎಂಬುದಾಗಿ ಮೈತ್ರೇಯರು ತಿಳಿಸಿರುವರು[4] ಭಗವಂತನು ತಾನು ಬಹುರೂಪಿಯಾಗುವುದರಲ್ಲಿ ಕರ್ತೃ, ಕರಣ ಹಾಗೂ ಕರ್ಮ ತಾನೇ ಆಗಿರುವ

---

* ಹರಿಃ ಕರ್ತಾಸ್ಯಕರ್ತೇತಿ ಫಲಾಭಾವೇನ ಭಣ್ಯತೇ ।
  —ಭಾಗ ತಾ ನಿ 3-1-44
* 'ಅಶ್ಲಿಷ್ಟತ್ವಾದಕರ್ತಾಽಸೌ...' —ಭಾಗ ತಾ. ನಿ 3-27-8
* ಅಪ್ರಯಾಸೇನ ಕರ್ತೃತ್ವಮಕರ್ತೃತ್ವಮಿಹೋಚ್ಯತೇ । ಮಹಾಶಕ್ತಿತ್ವತಸ್ತಚ್ಚ ಯುಜ್ಯತೇ ಪರಮಸ್ಯ ತು । —ತಂತ್ರಸಾರ (ಭಾಗ ತಾ. ನಿ. 5-18-5)

೭ 1 ವಿಗತಃ ಕರ್ತಾ ಯಸ್ಮಾತ್ ಸಃ ವಿಕರ್ತಾ ।

೮ 2 ವಿಶಿಷ್ಟತ್ವಾತ್ ವಿಃ ಭಗವಾನ್ । ಸ ಏವ ಕರ್ತಾ ಯಸ್ಯ ಸಃ ವಿಕರ್ತಾ ।

3 ಕರ್ತಾಽಪಿ ಭಗವಾನ್ ವಿಷ್ಣುರಕರ್ತೇತಿ ಚ ಕಥ್ಯತೇ । ಅಸ್ಯ ಕರ್ತಾ ಯತೋ ನಾನ್ಯಃ ಸ್ವತಂತ್ರತ್ವಾತ್ ಪರಾತ್ಮನಃ —ಗೀ ತಾ 4-13

...ಅಕರ್ತಾಽಸಾವಕಾರ್ಯತ್ವಾದಥಾಪಿ ವಾ ।
—ಭಾಗ. ತಾ. ನಿ. 3 27 8

4 ಏವಂ ರಜಃಪ್ಲುತಃ ಸ್ರಷ್ಟಾ ಕಲ್ಪಾದಿಷ್ವಾತ್ಮಭೂರ್ಹರಿಃ । ಸೃಜತ್ಯಮೋಘಸಂಕಲ್ಪ ಆತ್ಮೈವಾತ್ಮಾನಮಾತ್ಮನಾ ॥ —ಭಾಗ. 3 11-28
ಸರ್ವಸ್ರಷ್ಟಾ ಸ್ವಯಂಭೂರ್ಹರಿಃ...ಪ್ರಕೃತ್ಯುಪಾದಾನೇನ ದೇವಾದಿದೇಹಾನ್ ಸೃಷ್ಟ್ವಾ ತನ್ನಿಯಾಮಕತಯಾ ಮತ್ಸ್ಯಕೂರ್ಮಾದಿಭಾವೇನ ಚ ಆತ್ಮಾ ಸ್ವಯಮೇವ ಆತ್ಮನಾ ಸ್ವೇಚ್ಛಯಾ ಆತ್ಮಾನಂ ಸ್ವಸ್ವರೂಪಂ ಸೃಜತಿ ಅಭಿವ್ಯಕ್ತೀಕರೋತಿ-ಅನಂತತೀರ್ಥಾಃ

ನೆಂದು ಆಗ್ನೇಯದಲ್ಲಿ ತಿಳಿಸಿದೆ.[1]

೯ (ಯೋಗ್ಯ ಅಧಿಕಾರಿಗಳನ್ನು) ಜ್ಞಾನಿಗಳನ್ನಾಗಿ ಮಾಡುವವನು.[2]

ಜ್ಞಾನದಾನ ಮಾಡಿ ಋಷಿಗಳನ್ನಾಗಿ ಮಾರ್ಪಡಿಸುವವನು ನೀನೇ ಎಂಬುದಾಗಿ ಅಗ್ನಿಯಲ್ಲಿ ನಿವೇದಿಸಿಕೊಳ್ಳಲಾಗಿದೆ.[3]

೧೦ ವಿಶಿಷ್ಟಗಳನ್ನಾಗಿ ಮಾಡುವವನು.[4]

ಭಗವಂತನು ತನ್ನ ವಿಭೂತಿರೂಪಗಳ ಸನ್ನಿಧಾನದಿಂದಾಗಿ ವಿಶಿಷ್ಟ ಪದಾರ್ಥಗಳು ತಮ್ಮ ತಮ್ಮ ಜಾತಿ, ಪಂಗಡಗಳಲ್ಲಿ ವಿಶಿಷ್ಟಗಳೆನಿಸುವಂತೆ ಮಾಡುವವನು

೧೧ ಬಲವುಳ್ಳವರನ್ನಾಗಿ ಅಥವಾ ಸುಖವುಳ್ಳವರನ್ನಾಗಿ ಮಾಡುವವನು.[5]

---

1 ಕರ್ತಾ ಚ ಕರಣಂ ಚೈವ ಕರ್ಮ ಚೈವ ಸ್ವಯಂ ಹರಿಃ । ಆತ್ಮನೋ ಬಹುಧಾಭಾವೇ..
—ಆಗ್ನೇಯ್ಯಾ (ಭಾಗ. ತಾ ನಿ. 3-11-28)
ಆತ್ಮನೋ ಬಹುಧಾಭಾವೇ ಸ್ವಯಮೇವಾತ್ಮಾ ಹರಿರೇವ ಕರ್ತಾ ಕರಣಂ ಕರ್ಮ ಚ । ನ ಸಾಧನಾಂತರಾಪೇಕ್ಷಾ । —ಬ. ಗೋ. (ಭಾ. ತಾ. ನಿ. ಟಿ)

೯ 2 'ವಾ ಗತಿಗಂಧನಯೋಃ' ಇತ್ಯತಃ ವಂ ಜ್ಞಾನಮ್ । ತತ್ ವಿಷಾಮಸ್ತೀತಿ ವಿನಃ । ತಾನ್ ಕರೋತೀತಿ ವಿಕರ್ತಾ । ಅಥವಾ ವೀನ್ ವಿಶಿಷ್ಟಾನ್ ಜ್ಞಾನಿನಃ ಕರೋತೀತಿ ವಿಕರ್ತಾ । ಜ್ಞಾನಿನಃ ವಿಶಿಷ್ಟತ್ವಾದೇವ 'ವಯಃ ಸುಪರ್ಣಾ...' ಇತಿ ಋಗ್ವೇದೇ (10-73-11) 'ವಯಃ' ಇತಿ ಉಲ್ಲಿಖಿತಾಃ ।

3 ಅಗ್ನೇ ಅಸಿ ಋಷಿಕೃನ್ಮರ್ತ್ಯಾನಾಮ್ । ಋಗ್ ವೇ. 31-16
.. ಋಷೀಣಾಂ ಕರ್ತಾ ತಥಾ ಜ್ಞಾನದಾನೇನ ದೇವ । —ಋ. ಭಾ.

೧೦ 4 ವೀನ್ ವಿಶಿಷ್ಟಾನ್ ಕರೋತೀತಿ ವಿಕರ್ತಾ ।

೧೧ 5 ವಂ ಬಲಂ ಸುಖಂ ವಾ ವಿಷಾಮಸ್ತೀತಿ ವಿನಃ । ತಾನ್ ಕರೋತೀತಿ ವಿಕರ್ತಾ । 'ಸುವಃ ಸುಬಲರೂಪತ್ವಾತ್ .' ಇತಿ ವ್ಯಾಹೃತಿಸಾರೇ (ತೈ. ಉ. ಭಾ. 1-14) ವಕಾರಸ್ಯ ಬಲಾರ್ಥಕತ್ವಂ, . ಅನಂತಸುಖೋ ಯದ್ ವ್ಯಾಹೃತೀರಿತಃ' (ಋ ಭಾ 2) ಇತಿ ಋಗ್ಭಾಷ್ಯೇ ವಕಾರಸ್ಯ ಸುಖಾರ್ಥಕತ್ವಂ ಚ ಅಭ್ಯುಪಗತಮ್ ।

೧೨ ಪಕ್ಷಿಗಳನ್ನು ಸೃಷ್ಟಿಸಿದಂಥವನು.[1]

## ಜಿಜ್ಞಾಸೆ

[ನೇಹನಾನಾಽಸ್ತಿ ಕಿಂಚನ]

ಪ್ರ:- ಜಗತ್ತು ಸುಳ್ಳು ಆದ್ದರಿಂದ ವಿವಿಧ ವಿಚಿತ್ರ ಜಗತ್ಸೃಷ್ಟಿಕರ್ತೃತ್ವವು ಸುಳ್ಳು ಎಂದು 'ನೇಹ ನಾನಾಽಸ್ತಿ ಕಿಂಚನ' ಶ್ರುತಿಯು ಹೇಳುತ್ತದೆ ಎಂದು ಅದ್ವೈತಿಗಳು ಹೇಳುತ್ತಾರೆ. ಅದು ಯುಕ್ತವೋ?

ಉ:- 'ನೇಹ ನಾನಾಽಸ್ತಿಕಿಂಚನ' ಶ್ರುತಿಯು ಪರಮಾತ್ಮನಲ್ಲಿ ಭಿನ್ನಗುಣಗಳು ಭಿನ್ನ ಕ್ರಿಯೆಗಳು ಭಿನ್ನ ಅವಯವಗಳು ಇಲ್ಲ ಎಂದು ಹೇಳುತ್ತದೆ ಹೊರತು ಪರಮಾತ್ಮನಲ್ಲಿ ಏನೂ ಇಲ್ಲ ಎಂದು ಹೇಳುವದಿಲ್ಲ. ಪರಮಾತ್ಮನಲ್ಲಿ ವ್ಯಾವಹಾರಿಕಗುಣ ಕ್ರಿಯಾದಿಗಳನ್ನು ಅದ್ವೈತಿಗಳು ಸ್ವೀಕರಿಸಿದ್ದರಿಂದ ಪರಮಾತ್ಮನಲ್ಲಿ ಏನೂ ಇಲ್ಲ ಎಂದು ಆ ಶ್ರುತಿಯು ಹೇಳುವದು ಅದ್ವೈತಿಗಳಿಗೂ ಅಸಮ್ಮತ. ಪಾರಮಾರ್ಥಿಕವಾಗಿ ಪರಮಾತ್ಮನಲ್ಲಿ ಏನೂ ಇಲ್ಲ ಎಂದು ಆ ಶ್ರುತಿಯು ಅರ್ಥ ಎಂದು ಹೇಳಿದರೆ ಪರಮಾತ್ಮನಲ್ಲಿ ಪಾರಮಾರ್ಥಿಕತ್ವವೂ ಪಾರಮಾರ್ಥಿಕವಾಗಿ ಇಲ್ಲ ಎಂದು ಅರ್ಥವಾಗಿ ಪರಮಾತ್ಮನೂ ಸುಳ್ಳು ಎಂದು ಶ್ರುತಿಯು ಹೇಳುತ್ತದೆಂದು ಆದೀತು



## ೩೮೩ ಗಹನಃ

೧ ಸಮಗ್ರವಾಗಿ ಯಾರಿಗೂ ತಿಳಿಯದವನು.[2]

ಅನಂತ ಗುಣ ಪರಿಪೂರ್ಣನಾದ ಭಗವಂತನನ್ನು ಯಾರೂ ಸಮಗ್ರವಾಗಿ ತಿಳಿಯಲಾರರು. ಅದುದರಿಂದಲೇ ಚತುರ್ಮುಖನು ರುದ್ರದೇವನಲ್ಲಿ ಭಗವತ್ತತ್ವದ ದುಜ್ಞೇಯತ್ವದ ಬಗ್ಗೆ ವಿವರಿಸುತ್ತ—'ಹೇ ಮಹೇಶ್ವರ! ಒಂದು ವೇಳೆ ನೀನು ಭಗವಂತನನ್ನು ಚೆನ್ನಾಗಿ ಬಲ್ಲೆ ಎಂದು ತಿಳಿಯುವಿಯಾದರೂ ಭಗವಂತನನ್ನು ಅಲ್ಪವೇ ತಿಳಿದಿರುವೆ ಎಂದು ತಿಳಿ. ಯಾಕೆಂದರೆ ನೀನಾಗಲೀ, ಇತರ ದೇವತೆಗಳಾಗಲೀ ಭಗವಂತನನ್ನು ಇನ್ನೂ ಜಿಜ್ಞಾಸೆ ನಡೆಸಿ ತಿಳಿದುಕೊಳ್ಳಬೇಕಾಗಿದೆ'—ಎಂದು

---

೧೨ 1 ವೀನ್ ಪಕ್ಷಿಣಃ ಕರೋತಿ ಸೃಜತೀತಿ ವಿಕರ್ತಾ । 'ವಿಃ ಪಕ್ಷಿಪರಮಾತ್ಮನೋಃ'

೧ 2 ಸಾಕಲ್ಯೇನ ಕೇನಾಪಿ ಜ್ಞಾತುಮಶಕ್ಯಃ ಗಹನಃ ।

* ಕೇನಾಪಿ ಜ್ಞಾತುಮಶಕ್ಯತ್ವಾದ್ ಗಹನಃ । —ವಿ. ರಾ.

ಸಂದೇಶಿಸಿ ಭಗವಂತನ ಅನಂತತ್ವವನ್ನು ಸೂಚಿಸಿರುವನು[1]

೨ (ಅವನ ಅನುಗ್ರಹವಿಲ್ಲದೆ) ಪ್ರವೇಶಿಸಲು ಅಶಕ್ಯನಾಗಿರುವವನು.[2]

ಅನನ್ಯವಾದ ಭಕ್ತಿಯಿಂದಷ್ಟೇ ತನ್ನನ್ನು ತಾತ್ತ್ವಿಕವಾಗಿ ತಿಳಿಯಲು, ನೋಡಲು ಹಾಗೂ ಪ್ರವೇಶಿಸಲು ಸಾಧ್ಯವಿದೆ[3]—ಎಂದು ಸಂದೇಶಿಸುವ ಗೀತಾಚಾರ್ಯನು, ಅಂತಹ ಭಕ್ತಿಗೆ ಪ್ರಸನ್ನನಾಗುವ ತನ್ನ ಅನುಗ್ರಹವೇ ತನ್ನನ್ನು ಅರಿಯಲು, ಸಾಕ್ಷಾತ್ಕರಿಸಿಕೊಳ್ಳಲು ಹಾಗೂ ಪ್ರವೇಶಿಸಲು ಕಾರಣ ಎಂದು ಸೂಚಿಸಿರುವನು.

೩ ಜ್ಞಾನಿಗಳಿಂದ ಶಾಸ್ತ್ರಗಳ ಮೂಲಕ ವಿಮರ್ಶಿಸಲ್ಪಡುವವನು[4]

ವೇದಾರ್ಥ ವಿಚಾರ ಕುಶಲರಿಂದ ಭಗವಂತನು ಇದ್ದೇ ಇರುವನೆಂಬುದಾಗಿ ವಿಮರ್ಶಿಸಲ್ಪಡುತ್ತಿರುವ ವಾಸುದೇವನನ್ನು ಒಲಿಸುವೆವೆಂದು ಶ್ರೀಮದಾಚಾರ್ಯರು ಸ್ಮರಿಸಿರುವರು[5]

೪ ದುಃಖಕ್ಕೆ ನಿಯಾಮಕನಾಗಿರುವವನು[6]

---

1 ಯದಿ ಮನ್ಯಸೇ ಸುವೇದೇತಿ ದಹರಮೇವಾಪಿ ನೂನಂ ತ್ವಂ ವೇತ್ಥ ಬ್ರಹ್ಮಣೋ ರೂಪಂ ಯದಸ್ಯ ತ್ವಂ ಯದಸ್ಯ ದೇವೇಷ್ವಥ ನು ಮೀಮಾಂಸ್ಯಮೇವ ತೇ

—ಕೇ. ಉ 3 1

೨ 2 ' ಕಲಿಲಂ ಗಹನಂ ಸಮೇ'– ಇತಿ ಕೋಶೇ ದುಷ್ಪ್ರವೇಶೇ ಅರ್ಥೇ ಗಹನಶಬ್ದಃ ಪಠ್ಯತೇ

3 ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಂ ಏವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥

—ಗೀ. 11-54

೩ 4 ಗಾಹ್ಯತೇ ಅವಗಾಹ್ಯತೇ ಜ್ಞಾನಿಭಿಃ ಶಾಸ್ತ್ರದ್ವಾರಾ ವಿಮೃಶ್ಯತ ಇತಿ ಗಹನಃ ।
5 ...ತನ್ನ ಕಿಂ ನೇತಿ ವಿದ್ವತ್ಸು ಮೀಮಾಂಸಿತಪದ್ । ಪ್ರೀಣಯಾಮೋ ವಾಸುದೇವಂ. '

-ದ್ವಾ. ಸ್ತೋ.

೪ 6 'ಗಹನಂ ವನದುಃಖಯೋಃ...' ಇತಿ ಗಹನಂ ದುಃಖಮ್ । ತದಸ್ಯ ನಿಯಮ್ಯತಯಾಸ್ತೀತಿ ಅರ್ಶ ಆದ್ಯಚಿ ಗಹನಃ ।

ಪ್ರಕೃತಿ ಹಾಗೂ ರಾಜಸೀ ಪ್ರಕೃತಿ ಜೀವಾತ್ಮನ ಸ್ವರೂಪವನ್ನು ಮತ್ತು ಪರಮಾತ್ಮನ ಸ್ವರೂಪವನ್ನು ಆಚ್ಛಾದಿಸಲು ಭಗವದಿಚ್ಛೆ ಪ್ರಧಾನ ಕಾರಣವೆನಿಸಿದೆ.[1] ಆದುದರಿಂದ ಮುಖ್ಯವಾಗಿ ಪ್ರಕೃತಿಯ ಮೂಲಕ ಆಚ್ಛಾದಿಸುವವನು ಭಗವಂತನೇ.

೪ (ರಾತ್ರಿ ಕಾಲದಲ್ಲಿ ಸಕಲ ಪದಾರ್ಥಗಳನ್ನೂ ಅಂಧಕಾರದಿಂದ) ಆಚ್ಛಾದಿಸುವವನು.[2]

ರಾತ್ರಿ ಕಾಲದಲ್ಲಿ ಅಂತರಿಕ್ಷವನ್ನು ಅಂಧಕಾರದಿಂದ ತುಂಬಿಸುವ[3] ಸವಿತೃನಾಮಕ ಭಗವಂತನೇ ಅಂಧಕಾರದ ಮೂಲಕ ಸಕಲ ಪದಾರ್ಥಗಳನ್ನೂ ಆಚ್ಛಾದಿಸುವವನು.

೫ ಸರ್ವ ಸಂಹಾರಕನಾಗಿ ಇರುವವನು.[4]

೬ ಸರ್ವಗತನಾಗಿರುವವನು.[5]

೭ ಸಮಸ್ತವನ್ನೂ ರಕ್ಷಿಸುವವನು ಮತ್ತು (ಸಂಹಾರಕಾಲದಲ್ಲಿ) ಸಂಹರಿಸುವವನು.[6]

---

1 'ಈಶ್ವರೇಚ್ಛಾ ಅತ್ರ ಪ್ರಧಾನಾ ತಾಂ ವಿನಾ ನಹಿ ಕಿಂಚನ'
-ಭವಿಷ್ಯತ್ಪರ್ವ (ಬಾಗ. ತಾ. ಸ. 2 ೧-4)

* ಪರಮೇಶ್ವರಶಕ್ತಿರೇವ ಜೀವಸ್ವರೂಪಾವರಣೇ ಮುಖ್ಯಮ್ । ಅವಿದ್ಯಾ ತು ನಿಮಿತ್ತ-ಮಾತ್ರಮ್ । -ನ್ಯಾ. ಸುಧಾ.

೪ 2 ಗೂಹತೇ ರಾತ್ರೌ ಅಂಧಕಾರೇಣ ಸರ್ವಾನ್ ಪದಾರ್ಥಾನ್ ಸಂವೃಣೋತೀತಿ ಗುಹಃ ।

3 'ಹಿರಣ್ಯಪಾಣಿಃ ಸವಿತಾ. ಕೃಷ್ಣೇನ ರಜಸಾ ದ್ಯಾಮೃಣೋತಿ'
-ಋ. ಸಂ. 35 9
ಋಣೋತಿ ಸಂಪೂರಯತಿ । -ಋ. ಭಾ

೫ 4 ಗೋಹತಿ ಸರ್ವಂ ಸಂಹರತೀತಿ ಗುಹಃ । 'ಗುಹ ಹಿಂಸಾಗತ್ಯೋಃ' (ಕಾಶಕೃತ್ಸ್ನ ಧಾತುಪಾಠಃ)

೬ 5 ಗೋಹತಿ ಸರ್ವತ್ರ ಗಚ್ಛತೀತಿ ಗುಹಃ ಸರ್ವಗತಃ ।

೭ 6 ಗೂಹತಿ ಸರ್ವಂ ರಕ್ಷತೀತಿ ಗುಃ । ಹಂತಿ ಸಂಹಾರಕಾಲೇ ಸರ್ವಂ ಸಂಹರತಿ ಇತಿ ಹಃ । ಗುಶ್ಚಾಸೌ ಹಶ್ಚ ಗುಹಃ ।

## ಜಿಜ್ಞಾಸೆ

### [ಸ್ವೇಚ್ಛೆಯಿಂದಲೇ ನಿಂದಿತ]

ಪ್ರ.– ಪರಮಾತ್ಮನನ್ನು ನಿಂದಿಸಿದರೆ ಹಾಗೆಯೇ ಅವನನ್ನು ಯಥಾರ್ಥವಾಗಿ ತಿಳಿಯದಿದ್ದರೆ ಅವನಿಗೆ ನಿಂದೆ ಮಾಡಿದವರ ಮೇಲೆ ಮತ್ತು ತನ್ನ ಅಜ್ಞಾನಿಗಳ ಮೇಲೆ ಅಸಮಾಧಾನವು ಇದೆಯೋ ಇಲ್ಲವೋ? ಪೂರ್ಣಾನಂದನಿಗೆ ಅಸಮಾಧಾನವು ಆಗಲು ಶಕ್ಯವಿಲ್ಲ ಎಂದು ಹೇಳುವದಾದರೆ ನಿಂದೆ ಮಾಡಿದವರಿಗೆ ಮತ್ತು ತನ್ನ ಅಜ್ಞಾನಿಗಳಿಗೆ ನರಕಶಿಕ್ಷೆಯನ್ನು ಏಕೆ ಕೊಡುತ್ತಾನೆ?

ಉ.– ಇವನು ತನ್ನ ನಿಂದೆ ಮಾಡಲಿ, ಇವನು ನನ್ನನ್ನು ಯಥಾರ್ಥವಾಗಿ ತಿಳಿಯದೆ ಇರಲಿ ಎಂದು ಪರಮಾತ್ಮನಿಗೆ ಇಚ್ಛೆಯು ಇದೆ ಆದ್ದರಿಂದ ಅವರ ಮೇಲೆ ಪರಮಾತ್ಮನಿಗೆ ಅಸಮಾಧಾನವಾಗಲು ಕಾರಣವು ಇಲ್ಲ ಪರಮಾತ್ಮ ನಿಂದೆ ಮಾಡುವದು ಮತ್ತು ಪರಮಾತ್ಮನನ್ನು ತಿಳಿಯದೆ ಇರುವದು ಜೀವರ ಅಪರಾಧವು. ಆದ ಕಾರಣ ಅವರಿಗೆ ಶಿಕ್ಷೆಯನ್ನು ಕೊಡುವದೂ ಕೂಡುತ್ತದೆ. ಪರಮಾತ್ಮನು ತನ್ನ ಇಚ್ಛೆಯಿಂದಲೇ ಆಚ್ಛಾದಿತನಾಗುತ್ತಾನೆ. ಆದ್ದರಿಂದ ಅವನಿಗೆ ಗುಹ ಎಂದು ಹೆಸರು ಎಂಬುದರಿಂದಲೇ ಪರಮಾತ್ಮನು ತನ್ನ ಇಚ್ಛೆಯಿಂದಲೇ ಜನರಿಂದ ನಿಂದಿತನಾಗುತ್ತಾನೆಂದೂ ತಿಳಿಯುತ್ತದೆ.



ವ್ಯವಸಾಯೋ ವ್ಯವಸ್ಥಾನಃ ಸಂಸ್ಥಾನಃ ಸ್ಥಾನದೋ ಧ್ರುವಃ ।
ಪರರ್ದ್ಧಿಃ ಪರಮಸ್ಪಷ್ಟಸ್ತುಷ್ಟಃ ಪುಷ್ಟಃ ಶುಭೇಕ್ಷಣಃ ॥ ೪೨ ॥

ಶ್ಲೋಕ ವ್ಯವಸಾಯಃ

೧ ನಿಶ್ಚಯಾತ್ಮಕ ಜ್ಞಾನ ಸ್ವರೂಪಿ.[1]

ಗೀತಾಚಾರ್ಯನು, ತಾನು ನಿಶ್ಚಯಾತ್ಮಕ ಜ್ಞಾನ ಸ್ವರೂಪಿಯಾಗಿರುವುದರಿಂದ 'ವ್ಯವಸಾಯ' ಎಂಬ ಹೆಸರಿನ ವಿಭೂತಿರೂಪದಿಂದ ನಿಶ್ಚಯವುಳ್ಳವರಲ್ಲಿ ಇದ್ದುಕೊಂಡು ಅವರಿಗೆ ನಿಶ್ಚಯಾತ್ಮಕ ಜ್ಞಾನವನ್ನು ಅನುಗ್ರಹಿಸುತ್ತಿರುವುದಾಗಿ ಸಂದೇಶಿಸಿರುವನು.[2]

---

೧ 1 ನಿಶ್ಚಯಾತ್ಮಕಜ್ಞಾನಂ ವ್ಯವಸಾಯಃ । ತಾದೃಶಜ್ಞಾನಸ್ವರೂಪತ್ವಾತ್ ಭಗವಾನ್ ವ್ಯವಸಾಯಃ ।

2 '...ವ್ಯವಸಾಯೋऽಸ್ಮಿ ' –ಗೀ. 10–36

೨ (ಎಲ್ಲದರ) ನಿಶ್ಚಯಸ್ವರೂಪನು.[1]

ಎಲ್ಲವನ್ನೂ ಸಾಕ್ಷಾತ್ತಾಗಿಯೇ ಕಾಣುವ ಭಗವಂತನು[2] ಸಕಲ ಪದಾರ್ಥಗಳ ನಿಶ್ಚಯಾತ್ಮಕ ಜ್ಞಾನವನ್ನೇ ಹೊಂದಿರುವನು

೩ ಜ್ಯೋತಿಶ್ಚಕ್ರವು ಅತಿಶಯವಾಗಿ ಯಾರಲ್ಲಿ ಬದ್ಧವಾಗಿದೆಯೋ ಅಂತಹವನು.[3]

ಶಿಂಶುಮಾರರೂಪಿ ಭಗವಂತನು ಜ್ಯೋತಿಶ್ಚಕ್ರಕ್ಕೆ ಆಧಾರನಾಗಿರುವನು

೪ ವಿಶಿಷ್ಟನಾದ ಹಾಗೂ ಪೂರ್ಣನಾದ ತನ್ನ ಜ್ಞಾನದಿಂದ (ಸಂಸಾರಬಂಧನವನ್ನು) ಕೊನೆಗೊಳಿಸುವವನು.[4]

---

'ಜ್ಞಾನಂ ಜ್ಞಾನಾತ್ಮಕೋ ' ಇತಿ 'ವಿಭಕ್ತಿಶಕ್ತ್ಯ'ಸ್ಯೈವ ಭಗವತಃ ವ್ಯವಸಾಯ - ಶಬ್ದಪ್ರತಿಪಾದ್ಯತ್ವಮಪಿ ವ್ಯಾಖ್ಯಾತಂ ಭವತಿ ।

* ವ್ಯವಸಾಯೋ ನಿಶ್ಚಯಃ। ವ್ಯವಸಾಯಿನಾಂ ವ್ಯವಸಾಯಾನುಸಾರಫಲದಾತಾಽಸ್ಮೀ- ತ್ಯರ್ಥೋ ಜ್ಞೇಯಃ । ಗೀ. ವಿ.

೨ 1 ವ್ಯವಸಾಯಃ ನಿಶ್ಚಯವಾನ್ । -ವಿ. ರಾ.

* ವ್ಯವಸ್ಯತಿ ಸರ್ವಂ ನಿಶ್ಚಿನೋತೀತಿ ವ್ಯವಸಾಯಃ । -ರ. ಸೂ.

* ವೀರಪ್ರಸೂತ್ವ, ಶೂರತ್ವ, ಸ್ಥಿರತ್ವ, ಮನಃಪ್ರಾಣಕ್ಯ ಲೋಕಪಾಲೋಪಜೀವ್ಯತ್ವ ವಿಷಯಕೋ ವ್ಯವಸಾಯೋ ನಿಶ್ಚಯೋ ಯಸ್ಮಿನ್ ಸಃ ಗುಣವಚನೇಭ್ಯೋ ಮತುಪೋ ಲುಗಿಷ್ಟ ಇತಿ । ಶ್ರೀ. ಚಂ.

2 'ಏಕೋ ದೇವಃ . ಸಾಕ್ಷೀ ಚೇತಾ.. ' ಶ್ವೇ. ಉ. 6-11

೩ 3 ಅತಿಶಯೇನ ಸೀಯತೇ ಬಧ್ಯತೇಽಸ್ಮಿನ್ ಜ್ಯೋತಿಶ್ಚಕ್ರಮಿತಿ ವ್ಯವಸಾಯಃ । ಅಧಿಕರಣೇ ಘಞ್ । -ಪ. ಭ.

೪ 4 ವಿಶಿಷ್ಟತ್ವಾತ್ ವಿಃ । ಪೂರ್ಣತ್ವಾತ್ ಅಃ । ವಿಶ್ಚಾಸೌ ಅಶ್ಚ ವ್ಯಃ ಭಗವಾನ್ । ತಸ್ಯ ಸ್ವಂ ಜ್ಞಾನಂ ವ್ಯವ್ಯಮ್ । ತೇನ ಸ್ಯತಿ ಸಮಾಪಯತಿ ಸಂಸಾರಮಿತಿ ವ್ಯವಸಾಯಃ॥ 'ಷೋಽನ್ತಕರ್ಮಣಿ' 'ಶ್ಯಾದ್ವ್ಯಧಾ ..' ಇತಿ ಣಃ ।

೫ ವಿಶಿಷ್ಟನಾದವನು; ಪೂರ್ಣನಾದವನು; ಸರ್ವತ್ರ ಚಲಿಸುವವನು ಹಾಗೂ (ಸಂಹಾರ ಕಾಲದಲ್ಲಿ ಎಲ್ಲವನ್ನೂ) ಸಂಹರಿಸುವವನು.[1]

೬ (ಸ್ಥಿತಿಕಾಲದಲ್ಲಿ) ವಿಶೇಷವಾಗಿ ರಕ್ಷಿಸುವವನು ಮತ್ತು (ಸಂಹಾರಕಾಲದಲ್ಲಿ) ಸಂಹರಿಸುವವನು.[2]

೭ (ಜಗತ್ತನ್ನು) ಸೃಷ್ಟಿಸುವವನು, ರಕ್ಷಿಸುವವನು ಹಾಗೂ ಸಂಹರಿಸುವವನು.[3]

೮ (ಸಮಸ್ತವನ್ನೂ) ವಿಶೇಷವಾಗಿ—ಅಂತರ್ಯಾಮಿಯಾಗಿ ಪ್ರವೇಶಿಸುವವನು ಹಾಗೂ ಅಸ್ವತಂತ್ರ ಚೇತನರಿಗಿಂತೆಲ್ಲ ಸಾರಭೂತಳಾದ ಲಕ್ಷ್ಮೀದೇವಿಯಲ್ಲೂ (ನಿಯಾಮಕನಾಗಿ) ಪ್ರವೇಶಿಸಿರುವವನು.[4]

ಭಗವಂತನು ಎಲ್ಲರಲ್ಲೂ ಅಂತರ್ಯಾಮಿಯಾಗಿ ಪ್ರವೇಶಿಸಿರುವವನು. ಅಸ್ವತಂತ್ರ ಚೇತನವರ್ಗದಲ್ಲೇ ಶ್ರೇಷ್ಠಳಾದ ರಮಾದೇವಿಯನ್ನೂ ಅಂತರ್ಯಾಮಿಯಾಗಿ ಪ್ರವೇಶಿಸಿರುವವನು.

---

೫ 1 ವಿಶಿಷ್ಟತ್ವಾತ್ ವಿಃ, 'ವೀತಿ ವಿಷ್ಣುಃ ಸಮುದ್ದಿಷ್ಟೋ ವಿಶಿಷ್ಟತ್ವಾತ್ಸ ಸರ್ವಶಃ' -ಛಾಂ ಉ. ಭಾ. (1-2-2) । ಪೂರ್ಣತ್ವಾತ್ ಅಃ । ಸರ್ವತ್ರ ವಾತಿ ಗಚ್ಛತೀತಿ ವಃ । ಸ್ಯತಿ ಸಂಹಾರಕಾಲೇ ಸರ್ವಂ ಸಂಹರತೀತಿ ಸಾಯಃ ।

೬ 2 (ಸ್ಥಿತಿಕಾಲೇ) ವಿಶೇಷೇಣ ಅವತಿ (ಸಂಹಾರಕಾಲೇ) ಸ್ಯತಿ ಸಂಹರತೀತಿ ಚ ವ್ಯವಸಾಯಃ ।

೭ 3 ವೇತಿ ಜಗತ್ ಪ್ರಸೂತೇ ಇತಿ ವಿಃ । ವೀ ಪ್ರಜನನೇ । ಅವತಿ ಜಗದ್ರಕ್ಷತೀತಿ ಅವಃ । ಸ್ಯತಿ ಜಗತ್ ಸಂಹರತೀತಿ ಸಾಯಃ ।

೮ 4 ಸರ್ವಂ ವಿಶೇಷೇಣ ಅಂತರ್ಯಾಮಿತಯಾ ಅವತಿ ಪ್ರವಿಶತೀತಿ ವ್ಯವಃ । ಅವ ಪ್ರವೇಶೇ । ಅಸ್ವತಂತ್ರಚೇತನೇಷು ಸಾರಭೂತತ್ವಾತ್ ಸಾ ರಮಾ । 'ಸಾರತ್ವಾತ್ ಸ್ತ್ರೀಷು ಸಾ ದೇವೀ ಸೇತ್ಯುಕ್ತಾ...' ('ಬೃ. ಉ. ಭಾ. 3-3-22) ಇತಿ ಛಾಂಧಾ ಸರಸ್ವತ್ಯಾಃ ಸೇತ್ಯಕ್ಷರಪ್ರತಿಪಾದ್ಯತ್ವಂ ತಥಾ ರಮಾಯಾ ಅಪಿ । ತಾಂ ಅಯತೇ ಅಂತರ್ಯಾಮಿತಯಾ ಗಚ್ಛತೀತಿ ಸಾಯಃ ।

## ಜಿಜ್ಞಾಸೆ

[ಪ್ರಮಾಣಸಿದ್ಧ ಅಂಗೀಕಾರಾರ್ಹ]

ಪ್ರ:- ರಮಾದೇವಿಯ ದೇಹದ ಒಳಗೆ ಅಂತರ್ಯಾಮಿಯಾಗಿ ಪರಮಾತ್ಮನು ಇದ್ದಾನೆ. ಆ ಅಂತರ್ಯಾಮಿ ಪರಮಾತ್ಮನ ವಕ್ಷಃಸ್ಥಳದಲ್ಲಿ ಲಕ್ಷ್ಮಿಯು ಇದ್ದಾಳೆ ಆ ಲಕ್ಷ್ಮಿಯ ದೇಹದ ಒಳಗೆ ಪರಮಾತ್ಮನು ಅಂತರ್ಯಾಮಿಯಾಗಿ ಇದ್ದಾನೆ. ಆ ಅಂತರ್ಯಾಮಿಯ ವಕ್ಷಃಸ್ಥಳದಲ್ಲಿ ರಮಾದೇವಿಯು ಇದ್ದಾಳೆ. ಈ ಅನವಸ್ಥೆಗೆ ಪರಿಹಾರವು ಉಂಟೇ?

ಉ:- ಪೂರ್ವ ಪೂರ್ವ ಕರ್ಮ ಪರಂಪರೆ ಮತ್ತು ಪೂರ್ವ ಪೂರ್ವ ವೃಕ್ಷಬೀಜಗಳ ಪರಂಪರೆಯು ಅಪರ್ಯವಸಿತವಾದುದರಿಂದ ತೋರುವ ಪ್ರಾಮಾಣಿಕವಾದ ಅನವಸ್ಥೆಗೆ ಪರಿಹಾರವು ಇಲ್ಲ ಎಂದು ಎಲ್ಲ ಮತಸ್ಥರೂ ಅಂಗೀಕರಿಸಿದ್ದಾರೆ ಅಂತಹವರು ಬಹು ವಿಚಿತ್ರ ಶಕ್ತಿಯುಳ್ಳ ರಮಾನಾರಾಯಣರ ರೂಪಗಳ ಅಪರ್ಯವಸಿತ ಪರಂಪರೆಗೆ ಏಕೆ ಹೆದರಬೇಕು? ಸ್ಪಷ್ಟ ಪ್ರಮಾಣವು ಇದ್ದರೆ ಅಂತಹ ಪ್ರಮಾಣಸಿದ್ಧವಾದ ಎಲ್ಲವನ್ನೂ ಒಪ್ಪಲೇಬೇಕು. ಅಂತಹ ವಿಷಯಗಳು ಯುಕ್ತಿ ವಿರುದ್ಧವೆಂದು ಆಕ್ಷೇಪಾರ್ಹಗಳು ಆಗುವುದಿಲ್ಲ.



## ೩೮೭ ವ್ಯವಸ್ಥಾನಃ

೧ ಎಲ್ಲವೂ ಯಾರ ಆಧಾರದಿಂದಾಗಿ ವ್ಯವಸ್ಥಿತವಾಗಿ ಇರುವುವೋ ಅಂಥವನು.[1]

೨ ಸಕಲ ಧರ್ಮಗಳನ್ನು ವ್ಯವಸ್ಥೆಗೊಳಿಸುವವನು.[1]

ಜಗತ್ತಿನ ಪ್ರತಿಯೊಂದು ಪದಾರ್ಥವೂ ಭಗವಂತನಿಂದ ವ್ಯವಸ್ಥಿತವಾಗಿದೆ. ಹಗ್ಗದಲ್ಲಿ ಮಣಿಗಳು ವ್ಯವಸ್ಥಿತವಾಗಿ ಪೋಣಿಸಲ್ಪಟ್ಟಂತೆ[3] ತನ್ನಲ್ಲಿ ಸಮಸ್ತವೂ ಪೋಣಿಸಲ್ಪಟ್ಟಿದೆ— ಎಂದು ಗೀತಾಚಾರ್ಯನು ಸಂದೇಶಿಸಿರುವನು. ಸ್ವತಂತ್ರನಾಗಿ ಎಲ್ಲೆಡೆ ಇರುವ ಈತನು ಸಕಲ ಪದಾರ್ಥಗಳಿಗೂ

---

೧ 1 ಸರ್ವಂ ವ್ಯವತಿಷ್ಠತೇ ಅಸ್ಮಿನ್ನಿತಿ ವ್ಯವಸ್ಥಾನಃ। -ರಾ. ಸೂ.

೨ 2 ಸರ್ವಧರ್ಮವ್ಯವಸ್ಥಾಪಕತ್ವಾದ್ ವ್ಯವಸ್ಥಾನಃ ವಿ. ರಾ.

* ಸರ್ವೇ ಧರ್ಮಾಃ ವ್ಯವತಿಷ್ಠಂತೇ ಅನೇನೇತ್ಯರ್ಥೇ 'ಕೃತ್ಯಲ್ಯುಟೋ ಬಹುಲಮಿತಿ ಬಹುಲಗ್ರಹಣಾತ್ ಕರ್ತರಿ ಲ್ಯುಟ್ ವ್ಯವಸ್ಥಾನಃ। ಇತಿ ಸಿದ್ಧ್ಯತಿ।

3 'ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ' -ಗೀ. 7-7

ಆಯಾಯ ಧರ್ಮಗಳನ್ನು ವ್ಯವಸ್ಥಿತವಾಗಿ ನೀಡುವನು.[1] ಆದುದರಿಂದ ಆಯಾಯ ಧರ್ಮಗಳು ಆಯಾಯ ಪದಾರ್ಥಗಳ ಅಸಾಧಾರಣ ಧರ್ಮಗಳಾಗಿ ಇವೆ.[2]

೧ ಇಂದ್ರಿಯಾದಿಗಳು ಆಯಾಯ ಸ್ಥಾನದಲ್ಲಿ ಇರುವಂತೆ, ಆಯಾಯ ವಿಷಯವನ್ನು ಗ್ರಹಿಸುವಂತೆ, ಆಯಾಯ ಕರ್ಮವನ್ನು ನಿರ್ವಹಿಸುವಂತೆ ನಿಯಮಿಸುವವನು.[3]

೨ (ಸಕಲ ಪದಾರ್ಥಗಳಲ್ಲೂ) ವಿಶಿಷ್ಟನಾಗಿ ಇರುವವನು.[4]

೩ (ಪ್ರತಿಯೊಂದು ಪದಾರ್ಥಕ್ಕೂ) ವಿಲಕ್ಷಣವಾದ ಹಾಗೂ ವಿಶಿಷ್ಟವಾದ ಸ್ಥಿತಿಯನ್ನು ಅನುಗ್ರಹಿಸಿರುವವನು.[5]

ಭಗವಂತನು ವಿಶಿಷ್ಟನಾಗಿ, ವಿಲಕ್ಷಣನಾಗಿ ಸರ್ವಪದಾರ್ಥಗಳಲ್ಲೂ ಇದ್ದು, ಆಯಾಯ ಪದಾರ್ಥವು ತನ್ನ ವಿಶಿಷ್ಟವಾದ ವಿಲಕ್ಷಣವಾದ ಸ್ವಭಾವ ಗುಣ ನೆತಕೆಗಳಿಂದಾಗಿ ಇತರ ಎಲ್ಲ ಪದಾರ್ಥಗಳಿಗಿಂತ ವಿಶಿಷ್ಟವೆನಿಸುವಂತೆ, ವಿಲಕ್ಷಣವೆನಿಸುವಂತೆ ಮಾಡುವನು. 'ಭಗವಂತನು ರಸಾದಿಗಳ ಅಭಿಮಾನಿ ದೇವತೆಗಳಲ್ಲಿ ಇದ್ದು, ರಸಾದಿಗಳು ರಸಾದಿಗಳಾಗಿರುವಂತೆ, ಜಲಾದಿಗಳ ಸ್ವಭಾವಗಳಾಗಿರುವಂತೆ, ಜಲಾದಿಗಳಲ್ಲಿರುವ ಇತರ ಧರ್ಮಗಳಿಗಿಂತ ಶ್ರೇಷ್ಠಗಳೆನಿಸಿರುವಂತೆ ವಿಶೇಷವಾಗಿ ಕಾರಣ

---

1 'ಏವಂ ಸ ಸರ್ವತಶ್ಚಾನ್ಯ ಸ್ವತಂತ್ರಶ್ಚೈವ ಸರ್ವಗಃ । ವ್ಯವಸ್ಥಯೈವ ಸರ್ವೇಷಾಂ ಸರ್ವದಾ ಸರ್ವದಃ ಪ್ರಭುಃ ।' -ಗೀ. ತಾ 7 1

2 ರಸಾದಿಸ್ವಭಾವಾನಾಂ ರಸಾದೀನಾಂ ಚ ಸ್ವಭಾವತ್ವೇ ರಸತ್ವೇ ಚ ವಿಶೇಷತೋಽಪಿ ಸ ಏವ ನಿಯಾಮಕಃ । -ಗೀ. ಭಾ (7-18)

೧ 3 ಇಂದ್ರಿಯಾದೀನಾಂ ವ್ಯವಸ್ಥಾಪನಂ ತತ್ತತ್ ಸ್ಥಾನವಿಷಯಕರ್ಮಾದೀನಾಂ ನಿಯಾಮನಂ ಯಸ್ಮಾದ್ ಭವತಿ ಸಃ ವ್ಯವಸ್ಥಾನಃ । -ಶೀ. ಚಂ

* ಇಂದ್ರಿಯಾಣಿ ವ್ಯವಸ್ಥಾಪಯತೀತಿ ವ್ಯವಸ್ಥಾನಃ ।

೨ 4 (ಸರ್ವೇಷು ಪದಾರ್ಥೇಷು) ವಿಶಿಷ್ಟಃ ವಿಲಕ್ಷಣಶ್ಚ ಸನ್ ಅವತಿಷ್ಠತೀತಿ ವಿಶಿಷ್ಟ ವಿಲಕ್ಷಣಮವಸ್ಥಾನಂ ಸ್ಥಿತಿಃ ಯಸ್ಯ ಸಃ ವ್ಯವಸ್ಥಾನಃ ।

೩ 5 ಸರ್ವಪದಾರ್ಥಾನಾಂ ಪ್ರತ್ಯೇಕಂ ವಿಲಕ್ಷಣಂ ವಿಶಿಷ್ಟಂ ಚ ಅವಸ್ಥಾನಂ ಸ್ಥಿತಿಃ ಯಸ್ಮಾತ್ ಸಃ ವ್ಯವಸ್ಥಾನಃ ।

ದಲ್ಲೂ, ಸ್ವಪ್ನವನ್ನು ಪ್ರೇರಿಸುವ ತೈಜಸನು ಮನಸ್ಸಲ್ಲೂ, ಸುಷುಪ್ತಿಯನ್ನು ಪ್ರೇರಿಸುವ ಪ್ರಾಜ್ಞನು ಹೃದಯಾಕಾಶದಲ್ಲೂ ವ್ಯವಸ್ಥಿತನಾಗಿರುವನು ಎಂಬುದಾಗಿ ಮಾಂಡೂಕೋಪನಿಷತ್ತು ಸಂದೇಶಿಸಿದೆ.[1]

೯ ಲೋಕಪಾಲಾದಿಗಳ ಅಧಿಕಾರ, ಜರಾಯುಜ, ಅಂಡಜ, ಸ್ವೇದಜ ಹಾಗೂ ಉದ್ಭಿಜ್ಜ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಅವಾಂತರವರ್ಣಗಳು, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಎಂಬ ಆಶ್ರಮಗಳು ಹಾಗೂ ಅವುಗಳ ಧರ್ಮಗಳನ್ನು (ಶ್ರುತಿಸ್ಮೃತಿಗಳ ಮೂಲಕ) ವಿಭಜಿಸಿರುವವನು.[2]

೧೦ ಕಲಾಮುಹೂರ್ತಾದಿಸ್ವರೂಪದ ಕಾಲವು ಯಾರಲ್ಲಿ ವ್ಯವಸ್ಥಿತವಾಗಿದೆಯೋ ಅಂತಹವನು.[3]

೧೧ ವಿಶಿಷ್ಟನಾದುದರಿಂದ ವಿ ಎನಿಸುವ ತನ್ನಲ್ಲೇ ತನ್ನ ಸ್ಥಿತಿ ಇರುವವನು.[4]

ತನ್ನ ಮಹಿಮೆಯಲ್ಲೇ ಪ್ರತಿಷ್ಠಿತನಾದ[5] ಭಗವಂತನ ಸ್ಥಿತಿಯು ತನ್ನನ್ನೇ ಆಧರಿಸಿಕೊಂಡಿರುವುದು.[6]

---

* ಸುಷುಪ್ತಿಮೋಹಬೋಧಾಂಶ್ಚ ಸ್ವವಶಸ್ತದ್ವಶಂ ಸದಾ । ಜೀವಂ ನಯತಿ ದೇವೇಶೋ ನಾನ್ಯಃ ಕರ್ತಾಽಸ್ಯ ಕಶ್ಚನ ॥ -ಅ. ವ್ಯಾ. ೩-2-102

1 ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ । ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ -ಮಾಂ. ಉ 1-1-8

೯ 2 ಲೋಕಪಾಲಾದ್ಯಧಿಕಾರಜರಾಯುಜಾಂಡಜಸ್ವೇದಜೋದ್ಭಿಜ್ಜಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರಾವಾಂತರವರ್ಣಬ್ರಹ್ಮಚರ್ಯಗಾರ್ಹಸ್ಥ್ಯವಾನಪ್ರಸ್ಥಸನ್ಯಾಸಲಕ್ಷಣಾಶ್ರಮತದ್ಧರ್ಮಾದಿಕಾನ್ ವಿಭಜ್ಯ ಕರೋತೀತಿ ವ್ಯವಸ್ಥಾನಃ । -ಶಾಂ. ಭಾ.

೧೦ 3 ..ಕಾಲಃ ಕಲಾಮುಹೂರ್ತಾದ್ಯಾತ್ಮಾ ತತ್ರೈವ ವ್ಯವತಿಷ್ಠತ ಇತಿ ವ್ಯವಸ್ಥಾನಃ । -ಪ. ಭ.

೧೧ 4 ವಿಶಿಷ್ಟತ್ವಾತ್ ವಿಃ ಭಗವಾನ್ । ತಸ್ಮಿನ್ ಅವಸ್ಥಾನಂ ಅವಸ್ಥಿತಿಃ ಯಸ್ಯ ಸಃ ವ್ಯವಸ್ಥಾನಃ ।

5 'ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ...' -ಛಾಂ. ಉ. 7-2-9

6 ತದಾಶ್ರಿತಂ ಜಗತ್ಸರ್ವಂ ನಾಸೌ ಕುತ್ರಚಿದಾಶ್ರಿತಃ -ಗೀತಾಕಲ್ಪ (ಗೀ. ಭಾ. 7-12)

೧೮ ವಿಶೇಷವಾಗಿ ಪ್ರವೇಶಿಸುವವನು; ಇರುವವನು ಹಾಗೂ ಚೇಷ್ಟಕನಾಗಿರುವವನು.[1]

ಭಗವಂತನು ಎಲ್ಲವನ್ನೂ ವಿಶೇಷವಾಗಿ ಪ್ರವೇಶಿಸಿ, ವಿಶೇಷವಾಗಿ ಅಲ್ಲಿದ್ದುಕೊಂಡು, ವಿಶೇಷವಾಗಿ ಪ್ರೇರಿಸುವನು

### ಜಿಜ್ಞಾಸೆ

[ಬ್ರಾಹ್ಮಣ್ಯದಲ್ಲಿಯ ಪ್ರಭೇಧದಂತೆ]

ಪ್ರ:- ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರ ಈ ನಾಲ್ಕು ವರ್ಣಗಳು ಗುಣಕರ್ಮಪ್ರಯುಕ್ತವಾದವು ಎಂದು ಕೆಲವು ಪ್ರಮಾಣಗಳು ಇವೆ. ಕೆಲವು ಪ್ರಮಾಣಗಳು ಆ ವರ್ಣಗಳು ಸ್ವಾಭಾವಿಕವೆಂದು ಹೇಳುತ್ತವೆ ಪರಮಾತ್ಮನ ಮುಖದಿಂದ ಹುಟ್ಟಿದವನು ಬ್ರಾಹ್ಮಣನು. ಪರಮಾತ್ಮನ ಬಾಹುವಿನಿಂದ ಹುಟ್ಟಿದವನು ಕ್ಷತ್ರಿಯನು. ಪರಮಾತ್ಮನ ತೊಡೆಯಿಂದ ಹುಟ್ಟಿದವನು ವೈಶ್ಯನು. ಪರಮಾತ್ಮನ ಪಾದದಿಂದ ಹುಟ್ಟಿದವನು ಶೂದ್ರನು ಎಂದು ಪುರುಷಸೂಕ್ತದಲ್ಲಿ ಇದೆ. ಈ ಪ್ರಮಾಣದಿಂದ ವರ್ಣಗಳು ಹುಟ್ಟು ಧರ್ಮ ಎಂದು ಅರ್ಥವಾಗುತ್ತದೆ. ಈ ವಿರೋಧವನ್ನು ಹೇಗೆ ಪರಿಹರಿಸುವುದು?

ಉ:- ಎರಡೂ ಪ್ರಮಾಣಗಳು ಸ್ಪಷ್ಟವಾಗಿ ಇರುವದರಿಂದ ಎರಡೂ ಪಕ್ಷವೂ ಸರಿ ಎಂದೇ ಹೇಳಬೇಕು. ಅದು ಹೇಗೆಂದರೆ ಬ್ರಾಹ್ಮಣ್ಯಾದಿಗಳು ಉಪನಯನಾದಿ ಸಂಸ್ಕಾರದಿಂದ ಹುಟ್ಟುವವು. ಅವುಗಳು ನಿಷಿದ್ಧ ಕರ್ಮದಿಂದ ನಷ್ಟವೂ ಆಗುವವು. ಆದರೆ ಇನ್ನೊಂದು ಬ್ರಾಹ್ಮಣ್ಯಾದಿಯು ಹುಟ್ಟುವಾಗ ಇದ್ದದ್ದು ಉಪನಯನಾದಿಗಳಿಂದ ಬರಲೂ ಇಲ್ಲ ಹಾಗೆಯೇ ನಿಷಿದ್ಧ ಕರ್ಮಗಳಿಂದ ನಷ್ಟವೂ ಆಗುವದಿಲ್ಲ. ಈ ರೀತಿ ಸಾದಿವಿನಾಶಿ ಬ್ರಾಹ್ಮಣ್ಯಾದಿ, ಸ್ವಾಭಾವಿಕ ಬ್ರಾಹ್ಮಣ್ಯಾದಿ ಎಂದು ಬ್ರಾಹ್ಮಣ್ಯಾದಿ ಎರಡು ಪ್ರಕಾರವಾಗಿ ಇದೆ



## ೩೮೭ ಸಂಸ್ಥಾನಃ

೧ ಜಗತ್ತು ಯಾರಲ್ಲಿ ಇದ್ದುದಾಗಿ ಕಾಣಿಸುವುದೋ ಅಂತಹವನು.[2]

---

೧೮ 1 ಅವತಿ ಪ್ರವಿಶತೀತಿ ಅವಃ । ತಿಷ್ಠತೀತಿ ಸ್ಥಃ । ಆನಯಂತಿ ಚೇಷ್ಟಯಂತೀತಿ ಆನಃ । ಅವಶ್ಚಾಸೌ ಸ್ಥಶ್ಚಾಸೌ ಆನಶ್ಚ ಅವಸ್ಥಾನಃ । ವಿಶೇಷೇಣ ಅವಸ್ಥಾನಃ ವ್ಯವಸ್ಥಾನಃ ।

೧ 2 ಜಗದತ್ರ ಸ್ಥಿತಂ ದೃಶ್ಯತ ಇತಿ ಸಂಸ್ಥಾನಃ । —ವಿ. ರಾ.

ಅರ್ಜುನನು ಶ್ರೀಕೃಷ್ಣನ ವಿಶ್ವರೂಪದಲ್ಲಿ ಸಮಸ್ತ ಜಗತ್ತನ್ನು ಕಂಡಿರುವನೆಂಬುದಾಗಿ ಸಂಜಯನು ತಿಳಿಸಿರುವನು.[1] ಜ್ಞಾನಿಗಳು ಮೂಲಾಧಾರವನ್ನು ಅಧಿಷ್ಠಾನವೆಂದು ಕರೆದರೆ, ವಸ್ತುವು ಯಾವುದರಲ್ಲಿ ಇದ್ದದ್ದಾಗಿ ಕಾಣಿಸುವುದೋ ಅದನ್ನು 'ಸಂಸ್ಥಾನ' ಎಂದು ಪರಿಗಣಿಸುವರೆಂದು ತಿಳಿಸುವ 'ವಾಮನ'ವು ಜಗತ್ತಿಗೆ ಭಗವಂತನು ಅಧಿಷ್ಠಾನವೂ ಸಂಸ್ಥಾನವೂ ಆಗಿರುವನೆಂದು ಸಂದೇಶಿಸಿರುವುದು.[2]

೨ ನಿರ್ದುಷ್ಟನಾಗಿರುವವನು ಮತ್ತು ಸರ್ವಾಧಾರನಾಗಿರುವವನು[3]

ಭಗವಂತನು ನಿರ್ದುಷ್ಟನಾಗಿರುವ ಪ್ರಯುಕ್ತ ಅವನನ್ನು ಶ್ರುತಿಯಲ್ಲಿ 'ಸಂ' ಎಂದೇ ಉಲ್ಲೇಖಿಸಲಾಗಿದೆ.[4] ಗೀತಾಚಾರ್ಯನು ತಾನು ಜಗತ್ತಿಗೆ ಆಧಾರನಾಗಿರುವ ಪ್ರಯುಕ್ತ 'ಸ್ಥಾನ' ಎನಿಸಿರುವೆನೆಂದು ಸಂದೇಶಿಸಿರುವನು[5]

೩ ನಿರ್ದುಷ್ಟನಾಗಿರುವ ಪ್ರಯುಕ್ತ 'ಸಂ' ಎನಿಸುವ ತನ್ನಲ್ಲೇ ತನ್ನ ಸ್ಥಿತಿ ಉಳ್ಳವನು[6]

---

1 ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।
ಅಪಶ್ಯದ್ ದೇವದೇವಸ್ಯ ಶರೀರೇ ಪಾಂಡವಸ್ತದಾ ॥
—ಗೀ. 11-13

2 'ಅಧಿಷ್ಠಾನಮಿತಿ ಪ್ರೋಕ್ತಂ ಮೂಲಾಧಾರಂ ವಿಚಕ್ಷಣೈಃ । ಯಸ್ಮಿನ್ ಸ್ಥಿತಂ ದೃಶ್ಯತೇ ವಸ್ತು ಸಂಸ್ಥಾನಂ ತದುದೀರಿತಮ್ । ಉಭಯಂ ಹರಿರೇವಾಸ್ಯ ಜಗತೋ ಮುನಿಪುಂಗವ'
—ವಾಮನ (ಭಾಗ. ತಾ. ನಿ. 2-5-2)

೨ 3 ನಿರ್ದುಷ್ಟತ್ವಾತ್ ಸಮ್। 'ಅಕಾರಪ್ರಭೃತಿಸಂಭೂತಮಸಹಾವಿಷ್ಣುವಾಚಕಾಃ। ಏಕಾಕ್ಷರಾಃ ...ಶಬ್ದನಿರ್ಣಯಃ (ಬೃ. ಉ. ಭಾ 5-7-3) ತಿಷ್ಠತಿ ಸರ್ವಮತ್ರೇತಿ ಸ್ಥಾನಃ । ಸಂ ಚಾಸೌ ಸ್ಥಾನಶ್ಚ ಸಂಸ್ಥಾನಃ ।

4 'ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ'
—ಅಥ. ಉ. 1-1-1

'....ಬ್ರಹ್ಮಾ ವಿಷ್ಣೋಃ ಸುತೋಽಗ್ರಜಃ' —ಬ್ರಹ್ಮಾಂಡ (ಛಾ. ಉ. ಭಾ)

5 ಪಿತಾಮಹಸ್ಯ ಜಗತೋ... ಸ್ಥಾನಂ... —ಗೀ 9 18
ಸ್ಥಾನಂ ಸರ್ವಾಧಾರೋಽಹಮ್ । —ಗೀ. ವಿ.

೩ 6 ಸಂ ನಾಮಕೇ ಸ್ವಸ್ಮಿನ್ನೇವ ಸ್ಥಾನಂ ಸ್ಥಿತಿಃ ಯಸ್ಯ ಸಃ ಸಂಸ್ಥಾನಃ ।

೪ ತನ್ನಲ್ಲೇ ಇರುವವನು ಮತ್ತು ಉಳಿದೆಲ್ಲರನ್ನೂ ಚೆನ್ನಾಗಿ ಪ್ರೇರಿಸುವವನು.[1]

ಸರ್ವಾಧಾರನಾಗಿರುವ ಭಗವಂತನು, ತಾನು ಮಾತ್ರ ತನ್ನನ್ನೇ ಆಧರಿಸಿಕೊಂಡಿರುವನು. ತನ್ನ ಆಧಾರದಲ್ಲೇ ತಾನಿದ್ದುಕೊಂಡು ಉಳಿದೆಲ್ಲರನ್ನೂ ಪ್ರೇರಿಸುತ್ತಿರುವನು

೫ ಚೆನ್ನಾಗಿ ಇರುವವನು ಮತ್ತು ಎಲ್ಲರನ್ನೂ ಪ್ರೇರಿಸುವವನು.[2]

೬ ವೈಕುಂಠವೇ ಮುಂತಾದ ಸಮೀಚೀನ ಸ್ಥಾನಗಳುಳ್ಳವನು.[3]

೭ (ತನ್ನ ಭಕ್ತರಿಗೆ) ವೈಕುಂಠವೇ ಮುಂತಾದ ಸಮೀಚೀನ ಸ್ಥಾನಗಳನ್ನು ಅನುಗ್ರಹಿಸುವವನು.[4]

೮ ಸಮೀಚೀನ ಸ್ಥಿತಿ ಉಳ್ಳವನು[5]

೯ (ತನ್ನ ಭಕ್ತರಿಗೆ) ಸಮೀಚೀನವಾದ ಸ್ಥಿತಿಯನ್ನು ಅನುಗ್ರಹಿಸುವವನು[6]

ಸ್ವತಂತ್ರನಾದ ಪರಿಪೂರ್ಣನಾದ ಭಗವಂತನು ಯಾವಾಗಲೂ ಸಮೀಚೀನ ಸ್ಥಿತಿಯನ್ನೇ ಹೊಂದಿರುವನು ತನ್ನ ಭಕ್ತರಿಗೂ ಮುಕ್ತಿಯನ್ನು ಅನುಗ್ರಹಿಸಿ, ಆ ಮೂಲಕ ದುಃಖಾಜ್ಞಾನಾದಿ ದೋಷಗಳಿಲ್ಲದ ಸಮೀಚೀನಸ್ಥಿತಿಯನ್ನು ಕರುಣಿಸುವನು.

---

೪ 1 ಸಂನಾಮಕೇ ಸ್ವಸ್ಮಿನ್ನೇವ ತಿಷ್ಠತೀತಿ ಸಂಸ್ಥಃ । ಅನಯತಿ ಚೇಷ್ಟಯತೀತಿ ಅನಃ । ಸಂಸ್ಥಶ್ಚಾಸೌ ಅನಶ್ಚ ಸಂಸ್ಥಾನಃ ।

೫ 2 ಸಮ್ಯಕ್ ತಿಷ್ಠತೀತಿ ಸರ್ವಂ ಅನಯತಿ ಚೇಷ್ಟಯತೀತಿ ಅನಃ । ಸಂಸ್ಥಶ್ಚಾಸೌ ಅನಶ್ಚ ಸಂಸ್ಥಾನಃ ।

೬ 3 ಸಮೀಚೀನಂ ಸ್ಥಾನಮಸ್ಯೇತಿ ಸಂಸ್ಥಾನಃ । —ಶಾಂ. ಭಾ.

೭ 4 ಸ್ವಭಕ್ತೇಭ್ಯಃ ಸಂ ಸಮೀಚೀನಂ ಸ್ಥಾನಂ ವೈಕುಂಠಾದಿ ಯಸ್ಮಾತ್ ಸಃ ಸಂಸ್ಥಾನಃ ।

೮ 5 ಸಂ ಸಮೀಚೀನಂ ಸ್ಥಾನಂ ಸ್ಥಿತಿಃ ಭಕ್ತೇಭ್ಯಃ ಯಸ್ಯ ಸಃ ಸಂಸ್ಥಾನಃ ।

೯ 6 ಸಂ ಸಮೀಚೀನಂ ಸ್ಥಾನಂ ಸ್ಥಿತಿಃ ಭಕ್ತೇಭ್ಯ ಯಸ್ಮಾತ್ ಸ ಸಂಸ್ಥಾನಃ ।

ವಷ್ಟ ಆನಂದಾನುಭವದ ವಿಷಯದಲ್ಲಿ ಹಾಗೂ ಲಿಂಗಭೇದದ ವಿಷಯದಲ್ಲಿ—ಆಷ್ಟೇ ಎಂದು ನಾರಾಯಣಾಷ್ಟಾಕ್ಷರ ಸ್ಪಷ್ಟೀಕರಿಸಿದೆ[1] ಮತ್ತೊಂದು ಪ್ರಮಾಣವು ಜಗದ್ವ್ಯಾಪಾರ ಹಾಗೂ ಆನಂದಾದಿ ಗುಣಗಳನ್ನು ಹೊರತಾಗಿ ವಿಷಯನಿಮಿತ್ತಕವಾದ ಭೋಗದಿಂದ ಮುಕ್ತಾತ್ಮರು ಭಗವಂತನಿಗೆ ಸಮರರಾಗುವರೆಂದು ತಿಳಿಸಿದೆ[2] ಈ ರೀತಿಯ ಸಾಮ್ಯವನ್ನು ಭಗವಂತನೇ ಅನುಗ್ರಹಿಸುವನು.

## ಜಿಜ್ಞಾಸ

[ಸ್ವಾಭಾವಿಕವಾಗಿ ಒಳ್ಳೆಯವರು]

ಪ್ರ - ಪರಮಾತ್ಮನು ತನ್ನ ಹೆಂಡತಿಯಾದ ಲಕ್ಷ್ಮೀದೇವಿಯನ್ನು ತನ್ನ ಮಕ್ಕಳಾದ ಬ್ರಹ್ಮ ವಾಯುಗಳನ್ನು ನಿರ್ದುಷ್ಟರನ್ನಾಗಿ ಮಾಡಿ ಅವರನ್ನು ಒಳ್ಳೆ ರೀತಿಯಿಂದ ರಕ್ಷಿಸುತ್ತಾನೆ. ಇತರರನ್ನು ಹಾಗೆ ರಕ್ಷಿಸುವುದಿಲ್ಲ ಪಾಮರರಾದ ಲೌಕಿಕ ಗೃಹಸ್ಥರು ಇರುವಂತೆ ಸರ್ವಸ್ವಾಮಿಯಾದ ಪರಮಾತ್ಮನು ಹೀಗೆ ಇರುವದು ನ್ಯಾಯವೇ?

ಉ - ಲಕ್ಷ್ಮೀದೇವಿಯು ಬ್ರಹ್ಮವಾಯುಗಳು ಸ್ವಾಭಾವಿಕವಾಗಿ ನಿರ್ದುಷ್ಟರು ಒಳ್ಳೆಗುಣ ಉಳ್ಳವರು ಆದುದರಿಂದ ರಮಾದೇವಿಯನ್ನು ಹೆಂಡತಿಯನ್ನಾಗಿ ಬ್ರಹ್ಮ ವಾಯುಗಳನ್ನು ಮಕ್ಕಳನ್ನಾಗಿ ಪರಮಾತ್ಮನು ಸ್ವೀಕರಿಸಿದನು. ಅವರು ತನ್ನ ಹೆಂಡತಿ ತನ್ನ ಮಕ್ಕಳು ಎಂಬ ಕಾರಣದಿಂದ ಅವರನ್ನು ನಿರ್ದುಷ್ಟರನ್ನಾಗಿ ಚೆನ್ನಾಗಿ ಇರುವದನ್ನಾಗಿ ಪರಮಾತ್ಮನು ಮಾಡಲಿಲ್ಲ.



## ೭೮೮ ಸ್ಥಾನದಃ

೧ ಅಧಿಕಾರಿಗಳ ಯೋಗ್ಯತೆಗೆ ಅನುಗುಣವಾಗಿ ಸ್ಥಾನವನ್ನು ನೀಡುವವನು[3]

---

1 ದುಃಖಾಭಾವಃ ಪರಾನಂದೋ ಲಿಂಗಭೇದಸ್ಸಮಾ ಮತಾಃ । ತಥಾಽಪಿ ಪರಮಾನಂದೋ ಜ್ಞಾನಭೇದಾತ್ತು ಭಿದ್ಯತೇ -ನಾರಾಯಣಾಷ್ಟಾಕ್ಷರ ಕಲ್ಪ (ಗೀ. ಭಾ. 2-52)

2 'ಆಧಿಪತ್ಯವೃತೇ ಚೈವ ಭೋಗೇನ** ವಿಷಯೇಣ ಚ । ಆನಂದಾದೇನ್ಯತೇ ಮುಕ್ತಾಃ ಸರ್ವೇ ತೇ ಬ್ರಹ್ಮಣಃ ಸಮಾಃ' -ಛಾಂ. ಉ. ಭಾ -2-2-12

* ಆಧಿಪತ್ಯಂ ಚರ್ತೇ ಆನಂದಾದೀಂಶ್ಚರ್ತೇ ವಿಷಯೇಣ ವಿಷಯನಿಮಿತ್ತಕಭೋಗೇನ ಸಮಾ ಇತಿ ಯೋಜ್ಯಮ್ । -ವೇದೇಶೀಯ

೧ 3 ಅಧಿಕಾರಿಯೋಗ್ಯತಾನುಗುಣಂ ಸ್ಥಾನಂ ದದಾತೀತಿ ಸ್ಥಾನದಃ । -ವಿ. ರಾ.

ಸಕಲ ದೇವತೆಗಳಿಗೂ ಅವರವರ ಪದವಿಯನ್ನು ಭಗವಂತನು ಅನುಗ್ರಹಿಸುವವನೆಂದು 'ಪ್ರಧಾನ ಸಂಹಿತೆ' ತಿಳಿಸಿದೆ[1] ತಾನು ಅನುಗ್ರಹಿಸುವ ಪದವಿಯನ್ನೇ ಬ್ರಹ್ಮಾದಿ ದೇವತೆಗಳು ಸ್ವೀಕರಿಸುವರೆಂಬುದಾಗಿ ಮಹಿದಾಸರೂಪಿ ಭಗವಂತನು ಸಂದೇಶಿಸಿರುವನು.[2] ಆಯಾಯ ದೇವತೆಗಳಿಗೆ ಸಂಬಂಧಿಸಿರುವ ಪದವಿಗಳೆಲ್ಲ ವೈಷ್ಣವ ಪದವಿಗಳೇ – ಅಂದರೆ ಶ್ರೀವಿಷ್ಣುವಿನಿಂದ ಅನುಗೃಹೀತಗಳಾದ ಪದವಿಗಳೇ ಎಂಬುದಾಗಿ ಅಭಿಪ್ರಾಯಪಡುವ ತಂತ್ರಭಾಗವತವು[3] ರುದ್ರಾದಿಗಳು ಶೇಷದೇಹಸ್ಥನಾದ, ಸಂಕರ್ಷಣನಾಮಕ ಭಗವಂತನು ಶೇಷಾಂತರ್ಯಾಮಿ ಎಂದು ತಿಳಿದೇ ತಮ್ಮ ಪದವಿಯನ್ನು ಹೊಂದಿರುವರೆಂದು ತಿಳಿಸಿದೆ[4] ಋಜುಗಳು ಶತಜನ್ಮಗಳಲ್ಲಿ ಭಗವಂತನ ವಿಶೇಷೋಪಾಸಕರಾಗಿ ತಮ್ಮ ಬ್ರಹ್ಮಪದವಿಯನ್ನು ಹೊಂದುವರು, ನಲ್ವತ್ತು ಜನ್ಮಗಳಲ್ಲಿ ಭಗವಂತನ ವಿಶೇಷೋಪಾಸನೆಯಿಂದಾಗಿ ರುದ್ರನ ಪದವಿಯೂ ದೊರಕುವುದು, ಇಪ್ಪತ್ತು ಜನ್ಮಗಳಲ್ಲಿಯ ವಿಶೇಷೋಪಾಸನೆಯಿಂದ ಇಂದ್ರನ ಪದವಿಯೂ, ದಶಜನ್ಮಗಳಲ್ಲಿಯ ವಿಶೇಷೋಪಾಸನೆಯಿಂದ ಇತರರ ಪದವಿಯೂ ದೊರಕುವುದೆಂದು ತಿಳಿಸುವ 'ಷಾಡ್ಗುಣ್ಯ'ವು[5] ತನ್ನ ವಿಶೇಷೋಪಾಸನೆಯಿಂದ ಪ್ರಸನ್ನನಾಗುವ ಭಗವಂತನೇ ಆಯಾಯ ಪದವಿಯನ್ನು ಅನುಗ್ರಹಿಸುವನೆಂದು ಸೂಚಿಸಿದ ವಿನಾಯಕನು ಭಗವಂತನ ವಿಶ್ವ ಮತ್ತು ತೈಜಸ ರೂಪಗಳ ಧ್ಯಾನದಿಂದ ಗಜವಕ್ತ್ರತ್ವವನ್ನು—ತನ್ನ ಪದವಿಯನ್ನು ಹೊಂದಿರುವನು. ಇಂದ್ರನು ಭಗವಂತನ ವಿಶ್ವ, ತೈಜಸ, ಹಾಗೂ ಪ್ರಾಜ್ಞ ರೂಪಗಳ ಧ್ಯಾನದಿಂದ

---

1 ಪ್ರಾಪಕಃ ಸರ್ವದೇವಾನಾಂ ಪದಾನಾಂ ಪುರುಷೋತ್ತಮಃ ।
–ಪ್ರಧಾನ ಸಂಹಿತಾ (ಭಾಗ. ತಾ. ನಿ 10 94 32)

2 'ಮಯೈವೈತೇ ಹಿ ಪ್ರದತ್ತಾನಿ ಪದಾನಿ ಬ್ರಹ್ಮಪೂರ್ವಕಾಃ । ಅಧಿತಿಷ್ಠಂತಿ '
ಐ ಉ. ಭಾ 1-6-1

3 ತೇಷಾಂ ತ್ವೇಷಾಂ ಪದಾನ್ಯೇವ ವೈಷ್ಣವಾನಿ ಪದಾನಿ ತು ।
ತಂತ್ರಭಾಗವತ (ಭಾಗ. ತಾ. ನಿ. 6-15-36)

4 ರುದ್ರಾದ್ಯಾಃ ಶೇಷದೇಹಸ್ಥಂ ವಿಷ್ಣುಂ ಸಂಕರ್ಷಣಾಭಿಧಮ್ । ಶೇಷಾಂತರ್ಯಾಮಿಣಂ ಜ್ಞಾತ್ವಾ ಸ್ವಪದಂ ಪ್ರಾಪುರಂಜಸಾ'
–ತಂತ್ರಭಾಗವತ (ಭಾಗ. ತಾ. ನಿ. 6-15-36)

5 '... ವಿಶಿಷ್ಟಾ ಜ್ಞಾನಭಕ್ತ್ಯಾದೌ ಸರ್ವಜೀವನಿಕಾಯತಃ । ಸರ್ವದಾಽಪಿ ವಿಶೇಷೇಣ ಶತಜನ್ಮಪ್ರಯತ್ನತಃ । ಸ್ವಪದಪ್ರಾಪ್ತಿರುದ್ದಿಷ್ಟಾ ತತೋ ಮುಕ್ತಿರವಾಪ್ಯತೇ । ತಥೈವ ಚತ್ವಾರಿಂಶದ್ಭಿಃ ಪದಂ ಶೈವಂ ಚ ಜನ್ಮಭಿಃ । ವಿಂಶದ್ಭಿರೈಂದ್ರಂ ದಶಭಿರನ್ಯೇಷಾಮುಪ್ರ-ಪಿರೀತಿವ' –ಷಾಡ್ಗುಣ್ಯ (ಭಾಗ. ತಾ. ನಿ. 4-23-29)

ತನ್ನ ಪದವಿಯನ್ನು ಹೊಂದಿರುವನು. ರುದ್ರನು ಭಗವಂತನ ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರೀಯ ಎಂಬ ನಾಲ್ಕು ರೂಪಗಳ ಧ್ಯಾನದಿಂದ ತನ್ನ ಪದವಿಯನ್ನು ಪಡೆದಿರುವನು— ಎನ್ನುವ 'ಮಹಾಯೋಗ'[1]ದಿಂದ ವಿನಾಯಕಾದಿಗಳ ಪದವಿಯನ್ನು ಭಗವಂತನೇ ಅನುಗ್ರಹಿಸಿರುವ ನೆಂಬುದು ಸೂಚಿತವಾಗುವುದು.

ಹೀಗೆ ಅಧಿಕಾರಿ ಪುರುಷರಾದ ದೇವತೆಗಳಿಗೆ ಅವರವರ ಸ್ಥಾನವನ್ನು ಕರುಣಿಸುವವನು ಭಗವಂತನೆಂದ[2] ಮೇಲೆ, ಉಳಿದ ಅಧಿಕಾರಿಗಳಿಗೂ ಅವರವರಿಗೆ ಯೋಗ್ಯವಾದ ಸ್ಥಾನವನ್ನು ನೀಡು ವವನು ಭಗವಂತನೇ ಎಂಬುದು ಸ್ಪಷ್ಟ.[3] ದೈವಸ್ವಭಾವದವರಿಗೆ ಒಳ್ಳೆಯ ಬುದ್ಧಿಯನ್ನು ಅನುಗ್ರಹಿಸಿ ಅದಕ್ಕೆ ಅನುಗುಣವಾಗಿ ಉತ್ತಮ ಸ್ಥಾನವನ್ನು ನೀಡುವ ಭಗವಂತನೇ ಅಸುರ ಸ್ವಭಾವದವರಿಗೆ ಕೆಟ್ಟ ಬುದ್ಧಿಯನ್ನು ನೀಡಿ, ಅದಕ್ಕೆ ತಕ್ಕಂತೆ ನೀಚಸ್ಥಾನವನ್ನೂ ನೀಡುವನು.[4]

೨ (ಅಯೋಗ್ಯರ) ಸ್ಥಾನವನ್ನು ಕೆಡಿಸುವವನು[5]

ಬ್ರಹ್ಮಪದವಿಯೇ ಮುಂತಾದ ಸರ್ವಪದವಿಗಳಿಗೂ ಯೋಗ್ಯರಾದ ಋಜುಗಳೇ ಮುಂತಾದ ಬೇರೆ ಬೇರೆ ಅಧಿಕಾರಿಗಳ ಗಣಗಳಿವೆ. ಆಯಾಯ ಅಧಿಕಾರಿಗಳೇ ಅವರವರಿಗೆ ಯೋಗ್ಯವಾದ ಪದವಿಯನ್ನು ಹೊಂದಬೇಕು. ಈ ನಿಯಮವನ್ನು ಎಂದೂ ಯಾರೂ ಉಲ್ಲಂಘಿಸುವಂತಿಲ್ಲ. ಯಾರಾದರೂ ಒಂದು ವೇಳೆ ತನಗೆ ಅಯೋಗ್ಯವಾದ ಪದವಿಯನ್ನು ಬಯಸಿದನೆಂದರೆ ಅವನ

---

1 'ವಿನಾಯಕಸ್ತು ವಿಶ್ವಸ್ಯ ಧ್ಯಾನಾದೈದ್ ಗಜವಕ್ತ್ರತಾಮ್ ।
ತಥೈವ ತೈಜಸಧ್ಯಾನಾತ್ ತ್ರಿಧ್ಯಾನಾದಿಂದ್ರ ಇಂದ್ರತಾಮ್ ।
ಚತುರ್ಧ್ಯಾನಾಚ್ಚ ರುದ್ರತ್ವಂ ರುದ್ರ ಆಪ ಜನಾರ್ದನಾತ್ ।
ಏವಂಭೂತಗುಣೋ ವಿಷ್ಣುಶ್ಚತುರಾತ್ಮಾ ಪರಾತ್ ಪರಃ'
-ಮಹಾಯೋಗ (ವಾಂ. ಉ. ಭಾ. 1-1-3)

2 'ಶರ್ವಗುರ್ವಾದಿಗೀರ್ವಾಣಸಂಸ್ಥಾನದಃ ..' —ದ್ವಾ. ಸ್ತೋ.

3 ಪುನಸ್ತದನ್ಯಾನಧಿಕಾರಯೋಗ್ಯಾಂಸ್ತತ್ತದ್ಗುಣಾನೇವ ಪದೇ ನಿಯುಂಕ್ತೇ ।
—ಮ. ಭಾರ. ತಾ. ನಿ. 3-38

4 '....ಕೇಶವಃ । ತಾದೃಗ್‌ಬುದ್ಧೇಃ ಕಾರಣಂ ಚ ಸ್ಥಾನಯೋಶ್ಚೋಚ್ಚನೀಚಯೋಃ'
-ಭಾಗ. ತಾ. ನಿ. 6-4-32

೨ 5 ಅಯೋಗ್ಯಾನಾಂ ಸ್ಥಾನಂ ದ್ಯತಿ ಖಂಡಯತೀತಿ ಸ್ಥಾನದಃ । -ಸ. ಸಂ.

ಪತನ ನಿಶ್ಚಿತ—ಎಂದು ಅಂಥಾಯ ಪದವಿ ಪ್ರಾಪ್ತಿಯ ಬಗ್ಗೆ ಇರುವ ನಿಯಮವನ್ನು ವಿವರಿಸಿದ ಶ್ರೀಮದಾಚಾರ್ಯರು, ಇದು ಭಗವಂತನ ನಿಯಮವೆನಿಸಿದ್ದು, ಯಾರೂ ಇದನ್ನು ಉಲ್ಲಂಘಿಸುವಂತಿಲ್ಲ[1]—ಎಂದು ಎಚ್ಚರಿಸುವುದರ ಮೂಲಕ, ಈ ನಿಯಮವನ್ನು ಅತಿಕ್ರಮಿಸಿ ತನಗೆ ಅಯೋಗ್ಯವಾದ ಸ್ಥಾನವನ್ನು ಬಯಸಿದಲ್ಲಿ ಅಂತಹ ಅನಧಿಕಾರಿಗೆ ಆ ಸ್ಥಾನವನ್ನು ದೊರಕದಂತೆ ಮಾಡುವವನೂ ಭಗವಂತನೇ ಎಂದು ಸೂಚಿಸಿರುವರು.

ಬಲಿಯು ಅದೇ ಮನ್ವಂತರದಲ್ಲಿ ಇಂದ್ರಪದವಿಯನ್ನು ಬಯಸಿ, ಅದಕ್ಕಾಗಿ ಯಜ್ಞಗಳ ಆಚರಣೆಯಲ್ಲಿ ತೊಡಗಿದಾಗ ವಾಮನರೂಪಿಯಾಗಿ ಬಂದ ಭಗವಂತನು ಬಲಿಯಿಂದ ಸರ್ವಸ್ವವನ್ನೂ ಸ್ವೀಕರಿಸಿ ಆ ಮನ್ವಂತರದಲ್ಲಿ ಅನಧಿಕಾರಿಯಾದ ಅವನಿಗೆ ಇಂದ್ರಪದವಿ ದೊರಕದಂತೆ ಮಾಡಿರುವನು.

೩ (ಅಗ್ನ್ಯಾದಿ ತತ್ತ್ವಾಭಿಮಾನಿ ದೇವತೆಗಳಿಗೆ ಜೀವಾತ್ಮರ ದೇಹಗಳಲ್ಲಿ) ಮುಖಾದಿ ಸ್ಥಾನಗಳನ್ನು ನೀಡಿರುವವನು[2].

೪ ಭಕ್ತರಿಗೆ ವೈಕುಂಠಾದಿ ಸ್ಥಾನವನ್ನು ನೀಡುವವನು[3].

೫ ತ್ರಿವಿಧ ಜೀವಾತ್ಮರಿಗೂ ಅವರವರಿಗೆ ಯೋಗ್ಯವಾದ ಸ್ಥಾನವನ್ನು ನೀಡುವವನು[4].

ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಹಾಗೂ ತಮೋಯೋಗ್ಯರು ಎಂಬುದಾಗಿ ಜೀವಾತ್ಮರಲ್ಲಿ

---

1 'ಬ್ರಹ್ಮತ್ವಯೋಗ್ಯಾ ಋಜವೋ ನಾಮ ದೇವಾಃ ಪೃಥಗ್ಗಣಾಃ । ತೈರೇವಾಪ್ಯಂ ಪದಂ ತತ್ತು ನೈವಾನ್ಯೈಸ್ಸಾಧನೈರಪಿ ॥ ಏವಂ ಸರ್ವಪದಾನಾಂ ಚ ಯೋಗ್ಯಾಃ ಸಂತಿ ಪೃಥಗ್ಗಣಾಃ । ..ತಚ್ಚ ನೈವಾನ್ಯಥಾ ಕರ್ತುಂ ಶಕ್ಯಂ ಕೇನಾಪಿ ಕುತ್ರಚಿತ್ । ಅಯೋಗ್ಯವಾಂಛನ್ ಪುರುಷಃ ಪತತ್ಯೇವ ನ ಸಂಶಯಃ । ನಿಯಮೋಽಯಂ ಹರೇರ್ಯಸ್ಮಾನ್ನೋಲ್ಲಂಘ್ಯಃ ಸರ್ವಚೇತನೈಃ'

-ಮ. ಭಾರ. ತಾ. ನಿ. 1-94..98

೩ 2 ವಾಗಾದಿದೇವಾನಾಂ ಮುಖಾದಿಸ್ಥಾನದತ್ವಾತ್ ಸ್ಥಾನದಃ । -ಶೀ. ಚಂ.

೪ 3 ಭಕ್ತೇಭ್ಯೋ ವೈಕುಂಠಾದಿಸ್ಥಾನಂ ದದಾತೀತಿ ಸ್ಥಾನದಃ । -ಸ. ಸಂ.

೫ 4 'ಷ್ಠಾ ಗತಿನಿವೃತ್ತೌ' ಇತಿ ಧಾತೋಃ ತ್ರಿವಿಧಜೀವಾನಾಮಪಿ ತತ್ತದ್ಯೋಗ್ಯಸ್ಥಾನಪ್ರದಃ ಸ್ಥಾನದಃ । -ವಾ. ರಾ.

ಮೂರು ಪ್ರಭೇದಗಳಿವೆ. ದೇವತೆಗಳು ಹಾಗೂ ಮಾನುಷೋತ್ತಮರು ಮುಕ್ತಿಯೋಗ್ಯರು. ಮಧ್ಯಮ ಮನುಷ್ಯರು, ಸಂಸಾರಯೋಗ್ಯರು ದಾನವರು ತಮೋಯೋಗ್ಯರು.[1] ಹೀಗೆ ಮುಕ್ತ್ಯಾದಿ ಸ್ಥಾನಗಳಿಗೆ ಯೋಗ್ಯರಾದ ದೇವಾದಿಗಳಿಗೆ ಆಯಾಯ ಸ್ಥಾನವನ್ನು ನೀಡುವವನು ಭಗವಂತನೇ.[2]

೬ ಅವಕಾಶವನ್ನು ನೀಡುವವನು[3]

ಅವಕಾಶ ಪ್ರದತ್ವವು ಆಕಾಶದ ಧರ್ಮ ಎಂದರೆ ಆಕಾಶವು ಭಗವಂತನ ನಿಯಮಕ್ಕೊಳಗಾಗಿಯೇ ಅವಕಾಶವನ್ನು ನೀಡುವುದೆಂದು ಕಪಿಲನಾಮಕ ಭಗವಂತನು ಸಂದೇಶಿಸಿರುವನು.[4] ತಿಂದ ಆಹಾರಕ್ಕೆ ಉದರದಲ್ಲಿ ಅವಕಾಶ ನೀಡುವನು ಹಾಗೆಯೇ ವಾಹನಾದಿಗಳಲ್ಲಿ ಸಂಚರಿಸುವಾಗ ಅವಕಾಶ ನೀಡುವವನು ಆಕಾಶದಲ್ಲಿರುವ ವಾಸುದೇವನೆಂಬುದಾಗಿ ಐತರೇಯಸಂಹಿತೆ ತಿಳಿಸಿದೆ.[5]

೭ (ಲಕ್ಷ್ಮೀದೇವಿಗೆ) ತನ್ನ ಸಾದೃಶ್ಯವನ್ನು ನೀಡಿರುವವನು[6]

---

1 'ತ್ರಿವಿಧಾ ಜೀವಸಂಘಾಸ್ತು ದೇವಮಾನುಷದಾನವಾಃ । ತತ್ರ ದೇವಾ ಮುಕ್ತಿಯೋಗ್ಯಾ ಮಾನುಷೇಷೂತ್ತಮಾಸ್ತಥಾ । ಮಧ್ಯಮಾ ಮಾನುಷಾ ಯೇ ತು ಸೃತಿಯೋಗ್ಯಾಃ ಸದೈವ ತು ॥ ಅಧಮಾ ನಿರಯಾಯೈವ ದಾನವಾಸ್ತು ತಮೋಲಯಾಃ ।

ಮ. ಭಾರತ ತಾ. ನಿ. 1-86,87

2 'ಏಷ ಹ್ಯೇವ . ಯಮೇಭ್ಯೋ ಲೋಕೇಭ್ಯ ಉನ್ನಿನೀಷತ ಏಷ ಉ ಏವ... . ಯಮಧೋ ನಿನೀಷತೇ' -ಬ್ರ. ಸೂ. ಭಾ 2-1-36

೬ 3 ಸ್ಥಾನಂ ಅವಕಾಶಂ ದದಾತೀತಿ ಸ್ಥಾನದಃ । 'ಅವಕಾಶೇ ಸ್ಥಿತೌ ಸ್ಥಾನಮ್'

-ಅ. ಕೋ

4 'ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ'

-ಭಾಗ 3-29-43

5 '.....ಅವಕಾಶಪ್ರದೋ ನಿತ್ಯಂ ವಾಸುದೇವೋ ನಭಃ ಸ್ಥಿತಃ. ।

... ..ಆಕಾಶಗೋ ವಾಸುದೇವಃ ಪಂಚಮೋಽತ್ರಾಪ್ಯುಪಾಸ್ಯತೇ ।...'

-ಐತರೇಯ ಸಂಹಿತಾ (ಐ. ಆ. ಭಾ. 2-2-5-1)

೭ 6 ಸ್ಥಾನಂ ಲಕ್ಷ್ಮ್ಯಾಃ ಸ್ವಸಾದೃಶ್ಯಂ ದದಾತೀತಿ ಸ್ಥಾನದಃ। 'ಸ್ಥಾನಂ ಸಾದೃಶ್ಯೇಽವಕಾಶೇ... ......' -ಮೇದಿನೀ

'ಸಮಾನಾ' ಎನಿಸಿರುವ ಲಕ್ಷ್ಮೀದೇವಿಯು ದೇಶತಃ ವ್ಯಾಪ್ತಿ, ಕಾಲತಃ ವ್ಯಾಪ್ತಿ ಹಾಗೂ ಬಂಧಾಭಾವ—ಇವುಗಳ ವಿಷಯದಲ್ಲಿ ಭಗವಂತನಿಗೆ ಸದೃಶಳಾಗಿರುವಳು. ಲಕ್ಷ್ಮೀದೇವಿಗೆ ವ್ಯಾಪ್ತಿರೂಪವಾದ ಗುಣವನ್ನಾಗಲಿ, ನಿತ್ಯಮುಕ್ತತ್ವವನ್ನಾಗಲೀ[1] ಅನುಗ್ರಹಿಸಿರುವ ಭಗವಂತನೇ[2] ಆಕೆ ಆ ಗುಣಗಳಿಂದ ತನಗೆ ಸದೃಶಳಾಗುವಂತೆ ಅನುಗ್ರಹಿಸಿರುವನು.

## ಜಿಜ್ಞಾಸೆ

[ವಿಧಮಾನದ್ವಿಟ್]

ಪ್ರ:- ಭಗವಂತನು ಅವರವರ ಯೋಗ್ಯತೆಗೆ ಅನುಗುಣವಾದ ಪದವಿಯನ್ನು ಅನುಗ್ರಹಿಸುವನು ಎಂದು ಹೇಳುವದು ಯಾವ ಆಧಾರದಿಂದ? ಪರಮಾತ್ಮನು ಎಲ್ಲರಿಗೂ ಸಮಾನನು ಎಂದು ಕೆಲವರು ಹೇಳುತ್ತಾರೆ. ಇವುಗಳಲ್ಲಿ ಯಾವುದು ಯುಕ್ತ?

ಉ:- ವೇದಗಳಲ್ಲಿ ಪರಮಾತ್ಮನಿಗೆ 'ವಿಧಮಾನದ್ವಿಟ್' ಎಂದು ನಾಮವು ಇದೆ. ಈ ನಾಮದ ಆಧಾರದಿಂದ ಅವರವರ ಯೋಗ್ಯತೆಗೆ ಅನುಗುಣ ಪದವಿಗಳನ್ನು ಪರಮಾತ್ಮನು ಕೊಡುವನು ಎಂದು ಸಿದ್ಧವಾಗುತ್ತದೆ. ಯೋಗ್ಯತೆ ಮೀರಿ ಪುಣ್ಯವನ್ನು ಮಾಡಿದರೆ ಅದನ್ನು ಪರಮಾತ್ಮನು ದ್ವೇಷಿಸುವನು ಎಂದು ಆ ನಾಮದ ಅರ್ಥ. ರಾಜಸೂಯಯಾಗದಿಂದ ಯೋಗ್ಯತೆ ಮೀರಿ ಪುಣ್ಯವು ಧರ್ಮರಾಜನಿಗೆ ಉಂಟಾದ್ದರಿಂದ ಅದನ್ನು ಕಳೆಯುವದಕ್ಕಾಗಿ ದ್ಯೂತಕ್ರೀಡೆಯಲ್ಲಿ ಧರ್ಮರಾಜನಿಗೆ ಪ್ರವೃತ್ತಿಯನ್ನುಂಟು ಮಾಡಿದನು. ಪರಮಾತ್ಮನಿಗೆ ಅನಂತಶಕ್ತಿಯು ಇರುವಾಗ ಭಕ್ತರಿಗೆ ಪರಿಮಿತ ಐಶ್ವರ್ಯವನ್ನು ಮಾತ್ರ ಅನುಗ್ರಹಿಸುವದು ಏಕೆ? ಎಂಬ ಪ್ರಶ್ನೆಗೆ ಪರಿಹಾರವು ಸಿಗಬೇಕಾದರೆ ಅವರವರ ಯೋಗ್ಯತೆಗೆ ಅನುಗುಣವಾದ ಪದವಿಯನ್ನು ಅನುಗ್ರಹಿಸುತ್ತಾನೆಂದು ಹೇಳಬೇಕು.



1 ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ । ಉಭಯೋರಪ್ಯಬದ್ಧತ್ವಂ... ಪ್ರಕೃತೇಃ ಪ್ರಾಕೃತಸ್ಯಾಪಿ ಯೇ ಗುಣಾಸ್ತೇ ತು ವಿಷ್ಣುನಾ । ನಿಯತಾಃ..

—ಭವಿಷ್ಯತ್ಪರ್ವ (ಬ್ರ. ಸೂ. ಭಾ. 4-2-11)

2 ....ಶ್ರೀಶ್ಚ ತದತ್ಯಾಗಾನ್ನಿತ್ಯಮುಕ್ತಾ ಗುಣಾಧಿಕಾ ।

—ಐ. ಉ. ಭಾ. 1-1-1

೩೮೯ ಧ್ರುವಃ

೧ ನಿರ್ವಿಕಾರನಾಗಿರುವವನು.[1]

೨ ನಿತ್ಯನಾಗಿರುವವನು[2]

ಶಾಶ್ವತನಾಗಿರುವ ಭಗವಂತನಿಗೆ ಕಾಲಕ್ಕೆ, ದೇಶಕ್ಕೆ ಅಥವಾ ಗುಣಗಳಿಗೆ ಸಂಬಂಧಿಸಿದಂತೆ ಆದಿ ಅಂತ್ಯ, ವೃದ್ಧಿ ಅಥವಾ ಹ್ರಾಸ—ಇವು ಇಲ್ಲ—ಎಂಬುದಾಗಿ ಭಗವಂತನ ವಿಕಾರಶೂನ್ಯತ್ವವನ್ನೂ ನಿತ್ಯತ್ವವನ್ನೂ ಶ್ರೀಮದಾಚಾರ್ಯರು ವಿವರಿಸಿದ್ದಾರೆ.[3]

ಭಗವಂತನು ನಿರ್ವಿಕಾರನು, ನಿತ್ಯನು ಎಂಬ ಅಭಿಪ್ರಾಯದಲ್ಲೇ ಅವನನ್ನು 'ಧ್ರುವ' ಶಬ್ದದಿಂದ ಕಾಠಕೋಪನಿಷತ್ತಲ್ಲಿ ಉಲ್ಲೇಖಿಸಲಾಗಿದೆ[4] ಹಾಗೆಯೇ ಋಗ್ವೇದದಲ್ಲಿ ದ್ಯುಲೋಕ, ಪೃಥಿವೀ, ಪರ್ವತಗಳು ಹಾಗೂ ಈ ಸಮಸ್ತ ಪ್ರಪಂಚವೂ ಪ್ರವಾಹತಃ ನಿತ್ಯವಾಗಿರುವಂತಹದ್ದೆಂಬ ಅಭಿಪ್ರಾಯದಲ್ಲಿ ಧ್ರುವವಾಗಿರುವಂತಹದ್ದೆಂದು ತಿಳಿಸಿ, ಇಂದ್ರನಾಮಕ ಭಗವಂತನು ಪ್ರಜೆಗಳಿಗೆ ಶಾಶ್ವತ, ನಿತ್ಯ ರಾಜನಾಗಿರುವನೆಂಬುದಾಗಿ 'ಧ್ರುವ' ವಿಶೇಷಣದಿಂದಲೇ ಸಂದೇಶಿಸಲಾಗಿದೆ[5]

---

೧ 1 ಧ್ರುವತಿ ಸ್ಥಿರೋ ಭವತೀತಿ ಧ್ರುವಃ । 'ಧ್ರು ಗತಿಸ್ಥೈರ್ಯಯೋಃ' 'ಧ್ರುವೋ.. ಶಾಶ್ವತೇ ತ್ರಿಷು'

೨ 2 ಅವಿನಾಶಿತ್ವಾದ್ ಧ್ರುವಃ । -ವಿ. ರಾ.

3 'ಕಾಲಾಚ್ಚ ದೇಶಗುಣತೋಽಸ್ಯ ನ ಚಾದಿರಂತೋ ವೃದ್ಧಿಕ್ಷಯೌ ನತು ಪರಸ್ಯ ಸದಾತನಸ್ಯ' -ಮ. ಭಾ. ತಾ. ನಿ. 1-12

* ಭಗವತಃ ನಿರ್ವಿಕಾರತ್ವಮಧಿಕೃತ್ಯ ಅಧಿಕಃ ವಿಚಾರಃ 'ಸ್ಥಾಣುಃ' (೨೮) ಇತ್ಯಾದಿ ನಾಮಸ್ವಾಂ ವ್ಯಾಖ್ಯಾನೇಷು ದ್ರಷ್ಟವ್ಯಃ ।

4 ' .ನಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್' -ಕಾ. ಉ. ಭಾ.
ಧ್ರುವೋ ಭಗವಾನ್ ಅಧ್ರುವೈಸ್ತದ್ಭಕ್ತಿವರ್ಜಿತೈರ್ನ ಪ್ರಾಪ್ಯತೇ ।
ಕಾ. ಉ. 1-5-10

5 ಧ್ರುವಾ ದ್ಯೌರ್ಧ್ರುವಾ ಪೃಥಿವೀ ಧ್ರುವಾಸಃ ಪರ್ವತಾ ಇಮೇ ।
ಧ್ರುವಂ ವಿಶ್ವಮಿದಂ ಜಗದ್ ಧ್ರುವೋ ರಾಜಾ ವಿಶಾಮಯಮ್ ॥
- ಋ. ವೇ. 10-173-4

೩. ಸರ್ವದಾ ಚಲಿಸುತ್ತಿರುವವನು[1]

ಭಗವಂತನು ನಿರ್ವಿಕಾರಿಯಾಗಿದ್ದು 'ಧ್ರುವ' ಎನಿಸಿರುವನಾದರೂ ಚಲನೆಯೇ ಮೊದಲಾದ ಕ್ರಿಯೆಗಳನ್ನೂ ನಡೆಸುತ್ತಿರುವನು. ಭಗವಂತನನ್ನು 'ಧ್ರುವ' ಎಂದು ಕರೆಯುವ ಶಾಸ್ತ್ರವೇ ಅವನಲ್ಲಿ ಕರ್ತೃತ್ವವನ್ನೂ ಪ್ರತಿಪಾದಿಸಿದೆ ಪರಸ್ಪರವಾಗಿ ವಿರುದ್ಧಗಳೆನಿಸಿರುವ ಧರ್ಮಗಳೂ ಒಂದೆಡೆ ಸೇರುವಂತೆ ಮಾಡುವ ಭಗವಂತನ ಅಚಿಂತ್ಯ ಶಕ್ತಿಯಿಂದಾಗಿ ಅವನಲ್ಲಿ ನಿರ್ವಿಕಾರತ್ವವೂ, ಕರ್ತೃತ್ವವೂ ಕೂಡಬಹುದಾಗಿದೆ—ಎಂದು ಶ್ರೀಮಂದಾಚಾರ್ಯರು ಸಮರ್ಥಿಸಿರುವರು[2]

೪ ಧಾರಣಶೀಲರಾದ ದೇವತೆಗಳನ್ನು ಪ್ರವರ್ತಿಸುವವನು.[3]

ವಾಯ್ವಾದಿದೇವತೆಗಳು ಜಗದ್ಧಾರಕರು. ಭಗವಂತನು ಅಂತಹ ದೇವತೆಗಳಿಗೂ ಧಾರಕನಾಗಿ[4] ಅವರನ್ನು ನಡೆಸುವವನು

೫ ಧಾರಣಶೀಲನಾಗಿರುವವನು ಮತ್ತು ಬಲರೂಪಿಯಾಗಿರುವವನು[5]

ಭಗವಂತನು ಉತ್ತಮ ಬಲಸ್ವರೂಪಿಯಾಗಿರುವ ಪ್ರಯುಕ್ತ 'ಸುವಃ' ಎಂದೆನಿಸಿರುವವನು[6]

---

೩ 1 ಧ್ರವತಿ ಸರ್ವದಾ ಗಚ್ಛತೀತಿ ಧ್ರುವಃ । 'ಧ್ರು ಗತೌ' ಅಸಾಧಾರಣ್ಯೇನಮ್ಯಸದೇಶ ಇತಿ ಸರ್ವದೇತಿ ಲಭ್ಯತೇ ।

2 ಸ್ಥಾಣುತ್ವೇಽಪಿ 'ಐಕ್ಷತ' ಇತ್ಯಾದ್ಯವಿರುದ್ಧವೀಕ್ಷ್ವರಸ್ಯ । ಉಭಯವಿಧವಾಕ್ಯಾತ್ ಅಚಿಂತ್ಯಶಕ್ತೇಶ್ಚ । -ಗೀ. ಭಾ 2 24

೪ 3 ಧಾರಣಶೀಲಾನ್ ದೇವಾನ್ ವರ್ತಯತೀ (ಪ್ರವರ್ತಯತಿ) ತಿ ಧ್ರುವಃ ।

-ವಾ. ರಾ.

4 ಅತೋ ಧರ್ಮಾಣಿ ಧಾರಯನ್ । -ಋ. ವೇ. 22-18

' ಧಾರಕಾಂಶ್ಚೈವ ವಾಯ್ವಾದೀನ್ ಧಾರಯನ್ ವರ್ತತೇ ತತಃ' -ಋ. ಭಾ.

೫ 5 ಸರ್ವಂ ಧಾರಯಿತುಂ ಶೀಲಮಸ್ಯಾಸ್ತೀತಿ ಧ್ರುಃ । ಬಲರೂಪತ್ವಾತ್ ವಃ । ಧ್ರುಶ್ಚಾಸೌ ವಶ್ಚ ಧ್ರುವಃ ।

6 'ಸುವಃ ಸುಬಲರೂಪತ್ವಾತ್ .' ನ್ಯಾಯಸುಧಾಸಾರ (ತೈ. ಉ. ಭಾ. 1-11)

ಬಲಸ್ವರೂಪಿಯಾಗಿರುವುದರಿಂದಲೇ ಅವನು ಸರ್ವಾಧಾರಕ. 'ಧ್ರುವ' ಎಂಬ ನಾಮವು ಅವನ ಸರ್ವಾಧಾರಕತ್ವವನ್ನು ಪ್ರತಿಪಾದಿಸುತ್ತಿದೆ.[1]

## ಜಿಜ್ಞಾಸೆ

[ಬುದ್ಧಿಪ್ರೇರಣೆಗಳಿಗನುಗುಣವಾಗಿ]

ಪ್ರ.- ಶಾಶ್ವತ ಫಲವನ್ನು ಕೊಡತಕ್ಕವನಾದ್ದರಿಂದ ಪರಮಾತ್ಮನಿಗೆ ಧ್ರುವ ಎಂಬ ನಾಮವು ಇದೆ ಹೀಗಿರುವಾಗ ಎಲ್ಲರೂ ಇದನ್ನು ತಿಳಿದು ಶಾಶ್ವತ ಫಲಕ್ಕಾಗಿ ಆ ಭಗವಂತನನ್ನು ಏಕೆ ಆರಾಧಿಸಬಾರದು?

ಉ.- ದೊಡ್ಡ ವ್ಯಾಪಾರವನ್ನು ಮಾಡಿದರೆ ಕೋಟ್ಯಂತರ ರೂಪಾಯಿಗಳು ಬರುವದು ಕಂಡಿದೆ ಆದರೂ ಎಲ್ಲರಿಗೂ ಅಂತಹ ವ್ಯಾಪಾರವನ್ನು ಮಾಡುವ ಬುದ್ಧಿಯು ಬರುತ್ತಾ ಇಲ್ಲ? ಅದರಂತೆ ಪ್ರಕೃತದಲ್ಲಿ ಸಮಾಧಾನವನ್ನು ತಿಳಿಯಬೇಕು. ಎಲ್ಲರಿಗೂ ಬುದ್ಧಿಪ್ರೇರಕನು ಪರಮಾತ್ಮನು ಅವನು ಅವರವರ ಪೂರ್ವಕರ್ಮದ ಅನುಸಾರ ಬುದ್ಧಿ ಪ್ರೇರಣ ಮಾಡುತ್ತಾನೆ ಯಾರಿಗೆ ದೊಡ್ಡ ವ್ಯಾಪಾರದಿಂದ ಕೋಟ್ಯಂತರ ರೂಪಾಯಿಗಳನ್ನು ಸಂಪಾದಿಸಲಿಕ್ಕೆ ಬೇಕಾದ ಪೂರ್ವಜನ್ಮದ ಕರ್ಮವು ಉಂಟೋ ಅವನಿಗೆ ಪರಮಾತ್ಮನು ದೊಡ್ಡ ವ್ಯಾಪಾರ ಮಾಡಲಿಕ್ಕೆ ಬುದ್ಧಿಯನ್ನು ಪ್ರೇರಿಸುತ್ತಾನೆ ಅದರಂತೆ ಯಾರಿಗೆ ಶಾಶ್ವತ ಫಲವನ್ನು ಹೊಂದಲಿಕ್ಕೆ ಬೇಕಾದ ಯೋಗ್ಯತೆ ಮತ್ತು ಪೂರ್ವಜನ್ಮ ಸುಕೃತ ವಿಶೇಷವು ಇದೆಯೋ ಅವರಿಗೆ ಮಾತ್ರ ಶಾಶ್ವತ ಫಲವನ್ನು ಸಾಧಿಸುವದಕ್ಕಾಗಿ ಪರಮಾತ್ಮನನ್ನು ಆರಾಧಿಸಬೇಕು ಎಂಬ ಬುದ್ಧಿಯು ಬರುತ್ತದೆ ಈ ಸಮಾಧಾನವನ್ನು ಪೂರ್ವಜನ್ಮವನ್ನು ಒಪ್ಪದೆ ಇರುವವರಿಗೆ ಕೊಡಲಿಕ್ಕೆ ಆಗದೆ ಅವರು ನಿರುತ್ತರರು ಆಗುತ್ತಾರೆ



## ೪೮೦ ಪರರ್ಧಿಃ

೧ ಶ್ರೇಷ್ಠವಾದ ಸಮೃದ್ಧಿ ಉಳ್ಳವನು.[2]

---

1 ಧ್ರುವೋಽರ್ಕ ಭಗವಾನ್ । ಸರ್ವಂ ಜಗದ್ ಧತ್ತ ಇತಿ ಧ್ರುವಃ ।

-ಗೀ. ಭಾ. 9 2

೧ 2 ಪರಾ ಶ್ರೇಷ್ಠಾ ಋದ್ಧಿಃ ಸಮೃದ್ಧಿಃ ಯಸ್ಯ ಸಃ ಪರರ್ದ್ಧಿಃ ।

'ಋದ್ಧಿಃ ಸ್ಯಾತ್... ಸಮೃದ್ಧಾವಪಿ ಯೋಷಿತಿ' -ಮೇದಿನೀ ।

ಎಲ್ಲರಿಗಿಂತಲೂ ಅತ್ಯಧಿಕನಾದ ಭಗವಂತನ ಸಮೃದ್ಧಿಯು ಸರ್ವಶ್ರೇಷ್ಠವಾದುದು. ಉದ್ಗೀಥ ನಾಮಕ ಭಗವಂತನ ಉಚ್ಚತ್ವವನ್ನು ತಾರತಮ್ಯಪೂರ್ವಕವಾಗಿ ಹೇಳಹೊರಟ ಛಾಂದೋಗ್ಯೋಪನಿಷತ್ತು,—ಈ ಎಲ್ಲ ಸ್ಥಾವರ ಜಂಗಮಗಳಿಗಿಂತ ಧರಾದೇವಿಯು ಶ್ರೇಷ್ಠಳಾಗಿದ್ದು ರಸ ಎನಿಸಿದರೆ, ಆಕೆಗಿಂತಲೂ ಉತ್ತಮನಾದ ಜಲಾಭಿಮಾನಿ ವರುಣನು 'ರಸತರ' ಎನಿಸುವನು ಇವನಿಗಿಂತಲೂ ಉತ್ತಮನಾದ ಓಷಧ್ಯಭಿಮಾನಿ ಚಂದ್ರನು ರಸತಮ' ಎನಿಸುವನು ಪುರುಷತತ್ತ್ವಕ್ಕೆ ಅಭಿಮಾನಿಯಾಗಿರುವ ರುದ್ರನು ಚಂದ್ರನಿಗಿಂತಲೂ ಉತ್ತಮನೆನಿಸಿ. ಪರಮರಸತಮ ಎನಿಸಿರುವನು. ರುದ್ರನಿಗಿಂತಲೂ ಉತ್ತಮಳಾದ ವಾಗಭಿಮಾನಿನಿ ಸರಸ್ವತಿಯು ಪರಮರ್ದ್ಧ್ಯ ರಸತಮ ಎನಿಸಿರುವಳು ಸರಸ್ವತಿಗಿಂತಲೂ ಉತ್ತಮನಾದ ಪ್ರಾಣದೇವನು ಪರಮಪರಾರ್ದ್ಧ್ಯರಸತಮ ಎನಿಸಿರುವನು. ಪ್ರಾಣದೇವನಿಗಿಂತಲೂ ಉತ್ತಮನಾದ ಉದ್ಗೀಥನಾಮಕ ಭಗವಂತನು ಪರಮಪರಾರ್ದ್ಧ್ಯರಸತಮ ಎನಿಸಿರುವನು[1]—ಎಂದು ಸಂದೇಶಿಸುವುದರ ಮೂಲಕ ಸರ್ವಾಧಿಕವಾದ ಸಮೃದ್ಧಿ ಭಗವಂತನದೆಂದು ಸೂಚಿಸಿದೆ

೨ ಬ್ರಹ್ಮಾದಿಗಳಿಗೆ ಉತ್ತಮವಾದ ಸಮೃದ್ಧಿಯನ್ನು ಅನುಗ್ರಹಿಸುವವನು.[2]

---

1 . . ಏಷಾಂ ಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋ ರಸೋಽಪಾಮೋಷಧಯೋ ರಸ ಓಷಧೀನಾಂ ಪುರುಷೋ ರಸಃ ಪುರುಷಸ್ಯ ವಾಗ್ ರಸೋ ವಾಚ ಋಗ್ ರಸ ಋಚಃ ಸಾಮ ರಸಃ ಸಾಮ್ನ ಉದ್ಗೀಥೋ ರಸಃ ಸ ಏಷ ರಸಾನಾಂ ರಸತಮಃ ಪರಮಃ ಪರಾರ್ದ್ಧ್ಯೋಽಷ್ಟಮೋ ಯದುದ್ಗೀಥಃ'

-ಛಾಂ ಉ. 1 1 1

'ಪೃಥಿವೀ ಸರ್ವಭೂತೇಭ್ಯಃ ಸದಾ ಸರ್ವಗುಣೈರ್ವರಾ । ರಸಃ ಸಾರೋ ವರಶ್ರೇಷ್ಠ ಇತಿ ಶಬ್ದಾಃ ಏಕಾರ್ಥವಾಚಕಾಃ । ಪೃಥಿವ್ಯಾ ವರುಣಃ ಶ್ರೇಷ್ಠಸ್ತಸ್ಮಾದೋಷಧಿದೇವತಾ । ಸೋಮಸ್ತಸ್ಮಾತ್ತು ಪುರುಷೋ ರುದ್ರೋ ಯತ್ ಪುಂಸ್ಯದೇವತಾ । ತಸ್ಮಾತ್ ಸರಸ್ವತೀ ವಾಗ್ಧಿ ಶ್ರೇಷ್ಠಾಽಸ್ಯಾ ಋಕ್ಸ್ವರೂಪಿಣೀ । ಸೈವ ಶ್ರೇಷ್ಠಾ ತತೋ ವಾಯುರ್ವರಿಷ್ಠಃ ಸಾಮನಾಮಕಃ । ಸಮತ್ವಾತ್ ಸರ್ವಭೂತೇಷು ಸಾಮ ಸಾಮ್ನಾಂ ಚ ದೇವತಾ । ತತಃ ಶ್ರೇಷ್ಠತಮೋ ವಿಷ್ಣುಃ ಶ್ರೇಷ್ಠಶ್ರೇಷ್ಠತಮಃ ಸದಾ । ಶ್ರೇಷ್ಠಾಚ್ಛ್ರೇಷ್ಠತಮಾಚ್ಚಾಪಿ ಪರಮಾತ್ ಪರಮೋ ವಿಭುಃ । ಪರಮರ್ದ್ಧಿಯುತತ್ವಾಚ್ಚ ಪರಾರ್ದ್ಧ್ಯ ಇತಿ ಕೀರ್ತಿತಃ'

-ಸಾರನಿರ್ಣಯ (ಛಾಂ. ಉ. ಭಾ.)

೨ 2 ಬ್ರಹ್ಮಾದೀನಾಂ ಪರಾ ಉತ್ತಮಾ ಋದ್ಧಿಃ ಸಮೃದ್ಧಿಃ ಯಸ್ಮಾತ್ ಸಃ ಪರರ್ದ್ಧಿಃ ।

ಸಮುದ್ರಕ್ಕೆ ಪೂರ್ಣಚಂದ್ರನಂತೆ ತನ್ನ ಭಕ್ತರ ಸಂವೃದ್ಧಿಗೆ ಭಗವಂತನು ಕಾರಣನಾಗಿರುವ ನೆಂದು ಶ್ರೀಮದಾಚಾರ್ಯರು ಸ್ತುತಿಸಿರುವರು.[1]

೩. ಬ್ರಹ್ಮಾದಿಗಳಿಗಿಂತ ಉತ್ತಮಳಾದ ಸಂಪದ್ದೇವತೆ ಯಾರ ಪತ್ನಿ ಆಗಿರುವಳೋ ಅಂತಹವನು.[2]

೪ ಸಂಪದ್ದೇವತೆಯಾದ ಲಕ್ಷ್ಮೀದೇವಿಯು ಬ್ರಹ್ಮಾದಿಗಳಿಗಿಂತ ಉತ್ತಮಳೆನಿಸುವಂತೆ ಅನುಗ್ರಹಿಸಿರುವವನು.[3]

ಲಕ್ಷ್ಮೀದೇವಿಯು ಭಗವಂತನನ್ನು ತ್ಯಜಿಸದೆ, ಅವನನ್ನು ಸರ್ವದಾ ಉಪಾಸಿಸುತ್ತಿರುವುದ ರಿಂದಲೇ, ಆಕೆ ನಿತ್ಯಮುಕ್ತಳೂ ಬ್ರಹ್ಮಾದಿಗಳಿಗಿಂತೆಲ್ಲ ಗುಣಾಧಿಕಳೂ ಆಗಿರುವಳು[4]

೫ ಶ್ರೇಷ್ಠನಾಗಿರುವವನು ಮತ್ತು ಯಥಾರ್ಥಜ್ಞಾನವನ್ನು ಧರಿಸಿಕೊಂಡಿರುವವನು[5]

ಯಥಾರ್ಥಜ್ಞಾನವನ್ನು ಯೋಗ್ಯರಿಗೆ ಅನುಗ್ರಹಿಸುವವನು ಭಗವಂತನೇ. ಆದುದರಿಂದಲೇ ಶ್ವೇತಾಶ್ವತರೋಪನಿಷತ್ತಲ್ಲಿ 'ಭಗವಂತನು ನಮಗೆ ಶುಭ ಬುದ್ಧಿಯನ್ನು ಸಂಯೋಜಿಸಲಿ!'—ಎಂದು ಪ್ರಾರ್ಥಿಸಿಕೊಳ್ಳಲಾಗಿದೆ.[6]

---

1 'ಸ್ವಜನೋದಧಿ ಸಂವೃದ್ಧಿಪೂರ್ಣಚಂದ್ರೋ ಗುಣಾರ್ಣವಃ'

-ದ್ವಾ. ಸ್ತೋ.

೩. 2 ಪರಾ ಬ್ರಹ್ಮಾದಿಭ್ಯಃ ಉತ್ತಮಾ ಋದ್ಧಿಃ ಸಂಪದ್ದೇವತಾ ಯಸ್ಯ ಪತ್ನೀ ಸಃ ಪರರ್ದ್ಧಿಃ

೪ 3 ಪರಾ ಋದ್ಧಿಃ ಸಂಪದ್ದೇವತಾ ಯಸ್ಮಾತ್ ಯದನುಗ್ರಹಾತ್ ಸಃ ಪರರ್ದ್ಧಿಃ ।

4 ..ಶ್ರೀಶ್ಚ ತದತ್ಯಾಗಾನ್ನಿತ್ಯಮುಕ್ತಾ ಗುಣಾಧಿಕಾ ।

-ಐ. ಉ. ಭಾ. (1-1-1)

೫ 5 ಋತಂ ಯಥಾರ್ಥಜ್ಞಾನಂ ಧತ್ತ ಇತಿ ಋದ್ಧಿಃ । ಉದಧಿ ಇತಿ ವತ್ । ಪರಶ್ಚಾಸೌ ಋದ್ಧಿಶ್ಚ ಪರರ್ದ್ಧಿಃ ।

6 '..ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು'

-ಶ್ವೇ. ಉ. 4-12

## ಜಿಜ್ಞಾಸೆ

### [ಲಕ್ಷ್ಮೀದೇವಿಗೆ ಅಸಮ್ಮತ]

ಪ್ರ:- ಲಕ್ಷ್ಮಿಯು ಸಂಪದಭಿಮಾನಿ ದೇವತೆ ಆದ್ದರಿಂದ ಸರ್ವಶ್ರೇಷ್ಠವಾದ ಮೋಕ್ಷದ ಸಂಪತ್ತಿಗೂ ಅವಳು ಅಭಿಮಾನಿನಿ ಆಗುವಳು. ಆದುದರಿಂದ ಮೋಕ್ಷ ಸಂಪತ್ ಸಿಗಬೇಕಾದರೆ ಲಕ್ಷ್ಮಿಯ ಅನುಗ್ರಹವು ಬೇಕು ಲಕ್ಷ್ಮಿಯು ಮಹಾ ಪತಿವ್ರತೆಯಾದ್ದರಿಂದ ಲಕ್ಷ್ಮಿಯು ಸಂತುಷ್ಟಳಾಗ ಬೇಕಾದರೆ ಪತಿಯಾದ ವಿಷ್ಣುವನ್ನು ಸರ್ವೋತ್ತಮನು ಎಂದು ಆರಾಧಿಸಬೇಕು ಎಂದು ಹೇಳುವದಾದರೆ ಸರಸ್ವತಿಯು ವಿದ್ಯಾದೇವತೆ ಅವಳು ಸಂತುಷ್ಟಳಾದರೆ ಮಾತ್ರ ಸರ್ವ ವಿದ್ಯಾಶ್ರೇಷ್ಠವಾದ ಮೋಕ್ಷ ಸಾಧನವಾದ ವಿದ್ಯೆಯನ್ನು ಕೊಡುತ್ತಾಳೆ. ಅವಳು ಮಹಾ ಪತಿವ್ರತೆಯಾದ್ದರಿಂದ ಅವಳು ಸಂತುಷ್ಟಳಾಗಬೇಕಾದರೆ ಅವಳ ಪತಿಯಾದ ಬ್ರಹ್ಮನನ್ನು ಸರ್ವೋತ್ತಮ ಎಂದು ಆರಾಧಿಸಬೇಕು. ಎಂದು ಯಾರಾದರೂ ಪ್ರತಿ ಹೇಳಿದರೆ ಏನು ಉತ್ತರ?

ಉ - ವಿದ್ಯೆಯು ಮೋಕ್ಷ ಸಂಪತ್ತಿಗೋಸ್ಕರ ಇರುವದರಿಂದ ಮೋಕ್ಷ ಸಂಪತ್ತಿಗೆ ವಿರುದ್ಧವಾದ ವಿದ್ಯೆಯು ನಮಗೆ ಬೇಡ ಪ್ರಭುವಿನ ಸೇವೆಯನ್ನು ಹಣಕ್ಕಾಗಿ ಮಾಡುವದರಿಂದ ಹಣಕ್ಕೆ ವಿರೋಧಿಯಾದ ಪ್ರಭುವಿನ ವಿರೋಧಿಗಳ ಸೇವೆಯನ್ನು ಮಾಡಬಾರದು ಅದರಂತೆ ಉದ್ದೇಶ್ಯ ಮೋಕ್ಷಸಂಪದಭಿಮಾನಿದೇವತೆಗೆ ಇತರ ದೇವತೆಯ ಸರ್ವೋತ್ತಮತ್ವ ಜ್ಞಾನವು ಅಸಮ್ಮತವಾದುದು. ಆದುದರಿಂದ ದೇವತೆಗಳನ್ನು ಸರ್ವೋತ್ತಮತ್ವೇನ ಆರಾಧಿಸಬಾರದು.



## ೪೯೧ ಪರಮಸ್ಪಷ್ಟಃ

೧ (ಅಜ್ಞಾನಿಗಳಿಗೆ) ಪ್ರತ್ಯಕ್ಷಾಯೋಗ್ಯನಾದವನು ಶ್ರೇಷ್ಠಜ್ಞಾನವುಳ್ಳ ಜ್ಞಾನಿಗಳಿಗೆ ಕಾಣಿಸಿಕೊಳ್ಳುವನು.[1]

ಅಜ್ಞಾನಿಗಳಿಗೆ ಪ್ರತ್ಯಕ್ಷಾಗೋಚರನಾದವನು ಭಗವಂತನು ಜ್ಞಾನಿಗಳಿಗೆ ಮಾತ್ರ ಕಾಣಿಸಿಕೊಳ್ಳುವನು. ವಿಷ್ಣುಸೂಕ್ತದಲ್ಲಿ ಈ ಅರ್ಥವಿಶೇಷವನ್ನು ಕೊಡುವ 'ಸ್ಪಶ' ಕ್ರಿಯಾಪದದ ರೂಪವನ್ನು ಬಳಸಿ ಭಗವಂತನ ಈ ಗುಣವನ್ನು ಸಾರಲಾಗಿದೆ[2]

---

೧ 1 ಪರಾ ಮಾ ಜ್ಞಾನಂ ಯೇಷಾಂ ತೇ ಪರಮಾಃ । ಇತರೇಷಾಂ ಅಜ್ಞಾನಿನಾಂ ಪ್ರತ್ಯಕ್ಷಾ-ಯೋಗ್ಯೋಽಪಿ ಪರಮೈಃ ಜ್ಞಾನಿಭಿಃ ದೃಷ್ಟತ್ವಾತ್ ಪರಮಸ್ಪಷ್ಟಃ । 'ಸ್ಪಶ ಅಜ್ಞಾತದೃಶೌ -ಅಜ್ಞಾತದೃಶೌ ಪ್ರತ್ಯಕ್ಷಾಯೋಗ್ಯಸ್ಯ ದರ್ಶನೇ-(ವಿ. ಭಾ. ಟೀ)

2 '....ಯತೋ ವ್ರತಾನಿ ಪಸ್ಪಶೇ' -ಋ. ವೇ. 22-19

ಶಾಸ್ತ್ರ ಜೀವನ ಸ್ವರೂಪವನ್ನು ಸಪ್ರಾಣತ್ವದಿಂದ ಬಂಬುದನ್ನೇ ಸ್ಪಷ್ಟೀಕರಿಸುವುದು.

೬. ವಿಲಕ್ಷಣನಾಗಿರುವವನು, ಜ್ಞಾನಸ್ವರೂಪ ಹಾಗೂ ಪ್ರಕಟನಾಗುವವನು[1]

ಭಗವಂತನು ಸರ್ವವಿಲಕ್ಷಣನಾಗಿದ್ದು ಜ್ಞಾನಸ್ವರೂಪಿಯಾದರೂ ವ್ಯಕ್ತನಾಗುವನು.

ಜಿಜ್ಞಾಸೆ

[ದ್ವೈತಾಚಾರ್ಯರ ಉಪದೇಶ]

ಪ್ರ - ಕಾಣದ ಪರಮಾತ್ಮನು ಇಲ್ಲ ಎಂದು ಹೇಳುವ ನಾಸ್ತಿಕರು ಮತತ್ರಯಾಚಾರ್ಯರ ಪೈಕಿ ಯಾವ ಆಚಾರ್ಯರ ಉಪದೇಶದಿಂದ ಆಸ್ತಿಕರು ಆಗಬಹುದು?

ಉ - ಅದ್ವೈತಾಚಾರ್ಯರು ಯಾವುದು ಕಾಣುತ್ತದೋ ಅದೆಲ್ಲ ಮಿಥ್ಯ ಎಂದು ಹೇಳುತ್ತಾರೆ ಆದ್ದರಿಂದ ಈಶ್ವರನನ್ನು ನಾನು ನೋಡಿದ್ದೇನೆ ಆದುದರಿಂದ ಪ್ರತ್ಯಕ್ಷೈಕಪ್ರಮಾಣವಾದಿಗಳಾದ ನಾಸ್ತಿಕರು ನಮ್ಮ ಉಪದೇಶದಿಂದ ಆಸ್ತಿಕರು ಆಗುತ್ತಾರೆಂದು ಹೇಳುವಂತಿಲ್ಲ ವಿಶಿಷ್ಟಾದ್ವೈತಾಚಾರ್ಯರು ಈಶ್ವರನು ಯಾರಿಗೂ ಕಾಣುವದಿಲ್ಲ. ಆದ್ದರಿಂದ ನಾನು ಈಶ್ವರನನ್ನು ನೋಡಲಿಲ್ಲ ಎಂದು ಹೇಳುತ್ತಾರೆ ಇದರಿಂದ ಅವರ 'ಉಪದೇಶ'ದಿಂದ ಪ್ರತ್ಯಕ್ಷೈಕಪ್ರಮಾಣವಾದಿಗಳು ಆಸ್ತಿಕರು ಆಗುವಂತಿಲ್ಲ. ದ್ವೈತ ಸಿದ್ಧಾಂತದ ಆಚಾರ್ಯರು ನನಗೆ ಈಶ್ವರನು ಸದಾ ಕಾಣಿಸುತ್ತಾ ಇದ್ದಾನೆಂದು ಹೇಳುತ್ತಾರೆ ಹಾಗೆಯೇ ಆ ಆಚಾರ್ಯರ ಉಪದೇಶದಂತೆ ಸಾಧನಾನುಷ್ಠಾನ ಮಾಡಿದ ಶ್ರೀ ಜಯತೀರ್ಥರು ಶ್ರೀ ವ್ಯಾಸತೀರ್ಥರು ಶ್ರೀ ವಾದಿರಾಜರು ಶ್ರೀ ರಾಘವೇಂದ್ರರು ಶ್ರೀ ಪುರಂದರದಾಸರು "ನಾವುಗಳು ಈಶ್ವರನನ್ನು ನೋಡಿದ್ದೇವೆ" ಎಂದು ಸಾಕ್ಷಿ ಹೇಳುತ್ತಾರೆ. ಆದ್ದರಿಂದ ದ್ವೈತಾಚಾರ್ಯರ ಉಪದೇಶದಿಂದಲೇ ನಾಸ್ತಿಕರು ಆಸ್ತಿಕರು ಆಗಲು ಸಾಧ್ಯ.

❦

೩೮೫ ತುಷ್ಟಃ

೧ ಸರ್ವದಾ ತನ್ನ ಸ್ವಕೀಯ ಸಂತೋಷದಿಂದ ತೃಪ್ತಿಗೊಂಡವನು.[2]

---

೬ 1 ವಿಲಕ್ಷಣತ್ವಾತ್ ಪರಃ । ಜ್ಞಾನರೂಪತ್ವಾತ್ ಮಃ । ವ್ಯಕ್ತತ್ವಾತ್ ಸ್ಪಷ್ಟಃ ।

೧ 2 ಸರ್ವದಾ ಸ್ವತ ಏವ ತುಷ್ಯತೀತಿ ತುಷ್ಟಃ । 'ಅಸಾಧಾರಣ್ಯೇನ ವ್ಯಪದೇಶಃ' ಇತಿ 'ಸರ್ವದಾ' 'ಸ್ವತ ಏವ' ಇತಿ ಚ ಲಭ್ಯತೇ ।

ಭಗವಂತನು ಸರ್ವದಾ ಸಂತುಷ್ಟನಾಗಿರುವವನು. ಆನಂದ ಪರಿಪೂರ್ಣನಾದ ಅವನು ಸ್ವಸಂತೋಷಕ್ಕಾಗಿ ಬೇರೆ ಯಾವುದೇ ಕಾರಣವನ್ನಾಗಲೀ, ವ್ಯಕ್ತಿಯನ್ನಾಗಲೀ, ಅಪೇಕ್ಷಿಸದೆ ತನ್ನಷ್ಟಕ್ಕೆ ಸಂತೋಷ ಪಡುತ್ತಿರುವವನು.

೧ ಭಕ್ತರ ಸೇವೆಯಿಂದ ಸಂತೋಷಪಡುವವನು[1]

ಆನಂದಪೂರ್ಣನಾದ ಭಗವಂತನು ತನ್ನಷ್ಟಕ್ಕೇ ಸಂತುಷ್ಟನಾಗಿರುವವನಾದರೂ, ಭಕ್ತರು ಸಲ್ಲಿಸಿದ ಬೇರೆ ಬೇರೆ ಸೇವೆಯಿಂದ ಇನ್ನಷ್ಟು ಸಂತುಷ್ಟನಾಗುವನು. ಆದ್ದರಿಂದಲೇ ಶ್ರೀಮದಾಚಾರ್ಯರು ಈಗಾಗಲೇ ಸಾಕಷ್ಟು ಪ್ರೀತನಾಗಿರುವ ಭಗವಂತನು ಇನ್ನಷ್ಟು ಪ್ರೀತನಾಗಲಿ!' —ಮುಂತಾದ ಹಾರೈಕೆಗಳನ್ನು ಸಲ್ಲಿಸಿರುವರು[2]

೨ ನಿತ್ಯತುಷ್ಟನಾಗಿರುವವನು ಮತ್ತು ವ್ಯಾಪ್ತನಾಗಿರುವವನು[3]

೩ ನಿತ್ಯತುಷ್ಟರಾಗಿರುವ ಮುಕ್ತಾತ್ಮರಲ್ಲಿ ವಿಶೇಷವಾಗಿ ವ್ಯಾಪ್ತನಾಗಿರುವವನು[4]

೪ ಸಂತುಷ್ಟನಾಗಿರುವವರಿಗೆ ನಿಯಾಮಕನಾಗಿರುವವನು[5]

---

೧ 1 ಭಕ್ತಕೃತಸೇವಯಾ ತುಷ್ಯತೀತಿ ತುಷ್ಟಃ ।

2 'ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ನಃ ಪರಮಸ್ಸುಹೃತ್'

—ಮ. ಭಾರ. ತಾ.ನಿ. 32-182

೨ 3 ನಿತ್ಯಂ ತುಷ್ಯತೀತಿ ತುಷಃ । ಟ ತನೋತೀತಿ ಟಃ । 'ತಥಾ ವಕ್ರಾತ್ಮಕೌ ಪ್ರೋಕ್ತೌ ವ್ಯಾಪ್ತಿಸ್ಥಿತಿವಿಧಾಯಕೌ' । ತುಷಶ್ಚಾಸೌ ಟಶ್ಚ ತುಷ್ಟಃ । ಷಕಾರೋತ್ತರಾಕಾರಸ್ತು ನಿರುಕ್ತತ್ವಾಲ್ಲೋಪಃ ।

೩ 4 ನಿತ್ಯಂ ತುಷ್ಯಂತೀತಿ ತುಷಾಃ ಮುಕ್ತಾತ್ಮಾನಃ । ತೇಷು ತನೋತೀತಿ ತುಷ್ಟಃ ।

೪ 5 ತುಷ್ಟಾಃ ಅಸ್ಯ ನಿಯಮ್ಯತಯಾ ಸಂತೀತಿ ಅರ್ಶಆದ್ಯಚಿ ತುಷ್ಟಃ ತುಷ್ಟನಿಯಾಮಕ ಇತ್ಯರ್ಥಃ ಸಿದ್ಧ್ಯತಿ ।

## ಜಿಜ್ಞಾಸೆ

### [ಈಶ್ವರೇಚ್ಛೆಯೇ ಈಶ್ವರ ಸಂತೋಷ]

ಪ್ರ.– ನಿತ್ಯದಲ್ಲಿ ಪರಿಪೂರ್ಣವಾದ ಸಂತೋಷವುಳ್ಳ ಪರಮಾತ್ಮನು ಭಕ್ತರ ವಿಶೇಷ ಸೇವೆಯಿಂದ ವಿಶೇಷ ಸಂತುಷ್ಟನಾಗುತ್ತಾನೆಂದು ಹೇಳುವದು ವ್ಯಾಹತವಲ್ಲವೇ?

ಉ:– ಭಕ್ತರ ಸೇವೆಯಿಂದ ಪರಮಾತ್ಮನು ಸಂತುಷ್ಟನಾಗುತ್ತಾನೆಂದರೆ ಆನಂದವನ್ನು ಹೊಂದುತ್ತಾನೆಂದು ಅರ್ಥವು ಅಲ್ಲ ಈ ಭಕ್ತನನ್ನು ಬೇಗನೆ ಉದ್ಧಾರ ಮಾಡುತ್ತೇನೆಂದು ಇಚ್ಛಿಸುತ್ತಾನೆ ಎಂದು ಅರ್ಥ 'ಈಶ್ವರ ಸಂತೋಷ' 'ಈಶ್ವರ ಪ್ರಸಾದ' ಶಬ್ದಗಳು ಪರ್ಯಾಯ ಶಬ್ದಗಳು. ಈಶ್ವರ ಪ್ರಸಾದವೆಂದರೆ ಅವನ ಇಚ್ಛಾ ಎಂದು ನ್ಯಾಯಸುಧಾದಲ್ಲಿ ಹೇಳಿದ್ದಾರೆ ಆದ್ದರಿಂದ ಈಶ್ವರ ಸಂತೋಷ ಶಬ್ದಕ್ಕೂ ಈಶ್ವರೇಚ್ಛಾ ಎಂಬ ಅರ್ಥವು ನ್ಯಾಯಸುಧೆಯ ಆಧಾರದಿಂದ ಸಿದ್ಧವಾಗುವದು.



**೩೯೩ ಪುಷ್ಟಃ**

೧ ಸರ್ವಗುಣಪರಿಪೂರ್ಣನಾಗಿರುವವನು[1]

೨ ಪೋಷಿಸುವವನು[2]

ಭಗವಂತನು ಸ್ವಯಂ ಸರ್ವಗುಣ ಪರಿಪೂರ್ಣನಾಗಿರುವವನು ಭಕ್ತರಿಗೆ ಜ್ಞಾನ ಮತ್ತು ಮೋಕ್ಷಗಳನ್ನು ನೀಡಿ, ಅವರು ತಮ್ಮ ತಮ್ಮ ಯೋಗ್ಯತೆಗನುಗುಣವಾದ ಪೂರ್ಣತೆಯನ್ನು ಪಡೆಯುವಂತ ಪೋಷಿಸುವನು. ಹಾಗೆಯೇ ಆ ಸಾಧನೆಗೆ ಬೇಕಾದ ದೈಹಿಕ ಪೋಷಣೆಯನ್ನು ಅವನೇ ಅನುಗ್ರಹಿಸುವನು.

ಹೀಗೆ ಭಗವಂತನು ಸ್ವಯಂ ಪರಿಪೂರ್ಣನಾಗಿರುವುದರಿಂದ ಹಾಗೂ ಭಕ್ತರನ್ನು ವಿಶೇಷವಾಗಿ

---

೧ 1 ಸಕಲಗುಣಸಂಪೂರ್ಣತ್ವಾತ್ ಪುಷ್ಟಃ ।

* ಸರ್ವಸಂಪೂರ್ಣತ್ವಾತ್ ಪುಷ್ಟಃ । –ಶಾಂ. ಭಾ.

* ಏವಂ ಮಹಾಗುಣೈಃ ಪರಿಪೂರ್ಣಃ ಪುಷ್ಟಃ । ಪ ಭ.

೨ 2 ಪುಷ್ಣಾತಿ ಇತಿ ಪುಷ್ಟಃ ॥ –ಸ. ಸಂ.

ಪೋಷಿಸುವುದರಿಂದ ಆವನ ಅಗ್ನಿನಾಮಕ ರೂಪವನ್ನು ಋಗ್ವೇದದಲ್ಲಿ 'ಪೂಷಣಂ' ಎಂದು ವಿಶೇಷಿಸಿ ಸ್ತುತಿಸಲಾಗಿದೆ.[1]

೩ ಪರಿಪೂರ್ಣನಾಗಿಯೇ ಎಲ್ಲೆಡೆ ವ್ಯಾಪಿಸಿರುವವನು[2]

೪ ಜ್ಞಾನ ಭಕ್ತ್ಯಾದಿಗುಣಗಳಿಂದ ಪೂರ್ಣನಾದವರಿಗೆ ಆಶ್ರಯನಾಗಿರುವವನು.[3]

ಯದೃಚ್ಛಾಲಾಭಸಂತುಷ್ಟರಾಗಿದ್ದು, ಜ್ಞಾನಭಕ್ತ್ಯಾದಿಗಳಿಂದ ಪುಷ್ಟರಾದ, ಅತ್ಯಂತ ಶಿಷ್ಟರಾದ ಪ್ರಜೆಗಳಿಗೆ ಆಶ್ರಯನಾಗಿರುವ ವಾಸುದೇವನನ್ನು ಸಂತೋಷಪಡಿಸುವುದಾಗಿ ಶ್ರೀಮದಾಚಾರ್ಯರು ಸ್ತುತಿಸಿರುವರು[4]

## ಜಿಜ್ಞಾಸೆ

[ಯೋಗ್ಯ ಪೂರ್ಣತ್ವದ ಪ್ರಾಪ್ತಿ]

ಪ್ರ:- ಮುಕ್ತರು ಪೂರ್ಣರಾಗಿ ಇರುವುದರಿಂದ ಪರಬ್ರಹ್ಮ ಎಂದು ಕರೆಯಲ್ಪಡುತ್ತಾರೆಂದು 'ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಣಿ ಮುಕ್ತಿಗಾಃ' ಎಂಬ ಶಾಸ್ತ್ರವು ಹೇಳುತ್ತದೆ. ಮುಕ್ತರು ಪೂರ್ಣರಾಗುವುದು ಪರಮಾತ್ಮನನ್ನು ಪೂರ್ಣ ಎಂದು ಉಪಾಸನೆ ಮಾಡಿದ್ದರಿಂದ. ಆದರೆ ಮುಕ್ತರ ಪೂರ್ಣತ್ವವು ಪರಮಾತ್ಮನ ಪೂರ್ಣತ್ವದಂತೆ ಇಲ್ಲ. ಪರಮಾತ್ಮನು ನಿರತಿಶಯ ಪೂರ್ಣತ್ವವುಳ್ಳವನು. ಮುಕ್ತರು ಸಾತಿಶಯ ಪೂರ್ಣತ್ವವುಳ್ಳವರು ಆಗಿದ್ದಾರೆ. ಪರಮಾತ್ಮನು ನಿರತಿಶಯ

---

1 ಮಿತ್ರಾಗ್ನಿಂ ಪೂಷಣಂ ಭಗವತ್ । -ಋ. ವೇ. 14-3

ಪೂಷಾ ನಾಮ ಪೋಷಣಾತ್ ಪೂರ್ಣತ್ವಾದ್ವಾ... ।

-ಋ. ಭಾ.

* ಪೋಷಣಂ ಜ್ಞಾನಮೋಕ್ಷಪ್ರದಾನೇನ ।

ತತ್ತ್ವದೀಪಿಕಾ (ಬ್ರ. ಸೂ. 1-1-2)

೩. 2 ಪುಷ್ಟನ್ ಪರಿಪೂರ್ಣಃ ಸನ್ ತತಃ ಸರ್ವತ್ರ ವ್ಯಾಪ್ತಃ ಪುಷ್ಟಃ ।

೪ 3 ಪುಷ್ಟಾಃ ಜ್ಞಾನಭಕ್ತ್ಯಾದಿಭಿಃ ಪೂರ್ಣಾಃ ಅಸ್ಯ ಆಶ್ರಿತತ್ವೇನ ಸಂತೀತಿ ಅರ್ಶ ಆದ್ಯಚಿ ಪುಷ್ಟಃ ।

4 'ಹೃಷ್ಟ ಪುಷ್ಟಾನುಶಿಷ್ಟಪ್ರಜಾಸಂಶ್ರಯಮ್ । ಪ್ರೀಣಯಾಮೋ ವಾಸುದೇವಂ .'

-ದ್ವಾ. ಸ್ತೋ.

ಪೂರ್ಣನಾಗಿರುವನು ಎಂದು ಉಪಾಸನೆ ಮಾಡಿದರೂ ನಿರತಿಶಯ ಪೂರ್ಣತ್ವವು ಮುಕ್ತರಿಗೆ ಬರಲಿಲ್ಲವಾದ್ದರಿಂದ 'ತಂ ಯಥಾಯಥೋಪಾಸತೇ ತದೇವ ಭವತಿ' ಈ ಶ್ರುತಿಯು ವಿರೋಧವು ಬಂತಲ್ಲ?

ಉ:- ನೂರು ರೂಪಾಯಿ ಉಳ್ಳವರಲ್ಲಿ ೧೦,೨೦,೩೦ ೪೦ ೫೦ ರೂಪಾಯಿಗಳು ಇವೆ. ಅದರಂತೆ ನಿರತಿಶಯ ಪೂರ್ಣತ್ವವುಳ್ಳ ಪರಮಾತ್ಮನಲ್ಲಿ, ಅದಕ್ಕಿಂತ ಕಡಿಮೆ ಪೂರ್ಣತ್ವಗಳೂ ಇವೆ ಸಮುದ್ರದಲ್ಲಿ ಜಲಪೂರ್ಣತ್ವವು ಇದೆ ಅಂತಹ ಸಮುದ್ರದಲ್ಲಿ ನದಿಯ, ಸರೋವರದ, ಬಾವಿಯ, ಕೊಡದ ಜಲಪೂರ್ಣತ್ವಗಳೂ ಇವೆ ಈ ರೀತಿ ಪೂರ್ಣತ್ವಗಳು ನಾನಾ ವಿಧಗಳು ಇರುವುದರಿಂದ ಆಯಾಯ ಪೂರ್ಣತ್ವಗಳನ್ನು ತಿಳಿದು ಉಪಾಸನೆ ಮಾಡುವವರಿಗೆ ಆಯಾಯ ಪೂರ್ಣತ್ವವು ಪ್ರಾಪ್ತವಾಗುತ್ತದೆ. ಶ್ರೇಷ್ಠವಾದ ಪೂರ್ಣತ್ವಗಳನ್ನು ನಿಷೇಧಿಸದೆ ತಮಗೆ ತಿಳಿಯಲಿಕ್ಕೆ ಯೋಗ್ಯಗಳಾದ ಪೂರ್ಣತ್ವಗಳನ್ನು ಮುಕ್ತಿ ಯೋಗ್ಯರು ಉಪಾಸನೆ ಮಾಡುತ್ತಾರೆ ಅಂತಹ ಪೂರ್ಣತ್ವವು ಅವರಿಗೆ ಪ್ರಾಪ್ತವಾಗುತ್ತದೆ.

ಪರಮಾತ್ಮನು ಸರ್ವೋತ್ತಮನು ಎಂದು ಉಪಾಸನವನ್ನು ಮಾಡಿದವನು ಸರ್ವೋತ್ತಮನು ಆಗುವದಿಲ್ಲ. ಆದ್ದರಿಂದ ಪರಮಾತ್ಮನ ಉಪಾಸನೆಗೆ ತಕ್ಕಂತೆ ಫಲಪ್ರಾಪ್ತಿ ಎಂಬ ಶ್ರುತಿವಾಕ್ಯಕ್ಕೆ ಯಾವ ಫಲವು ಯೋಗ್ಯವೋ ಅದು ಮಾತ್ರ ಸಿಗುತ್ತದೆ. ಆ ಫಲವು ಉಪಾಸ್ಯ ದರ್ಮಕ್ಕೆ ಸ್ವಲ್ಪವಾದರೂ ಸದೃಶವಾಗಿರುತ್ತದೆಂದು ಅರ್ಥ



## ೪೯೪ ಶುಭೇಕ್ಷಣಃ

೧ ಯಾರು ನೋಡುವುದು ಅಥವಾ ಯಾರನ್ನು ನೋಡುವುದು ಶುಭಕರವಾಗುವುದೋ ಅಂತಹವನು.[1]

ಭಗವಂತನು ಅನುರಾಗಪೂರ್ವಕವಾಗಿ ನೋಡುವುದೂ ಶುಭಕಾರಿ, ಹಾಗೆಯೇ ಅವನನ್ನು ನಾವು ಭಕ್ತ್ಯಾದರಪೂರ್ವಕವಾಗಿ ಕಾಣುವುದೂ ಶುಭಕಾರಿ. 'ಪೂರ್ಣಾನಂದನಾದ ಶ್ರೀರಾಮನ ಅನುರಾಗಪೂರ್ವಕವಾದ ನೋಟವು ಸಂಸಾರತಾಪಗಳನ್ನು ಪರಿಹರಿಸಬಲ್ಲ ಅಮೃತಸಾಗರದಂತೆ ಇರುವಂತಹದ್ದು'—ಎಂದು ಶ್ರೀಮದಾಚಾರ್ಯರು ಅದನ್ನು ಸ್ಮರಿಸಿಕೊಂಡಿರುವರು.[2]

---

೧ 1 ಶುಭಂ (ಶುಭಕರಂ) ಈಕ್ಷಣಮಸ್ಯ ಕರ್ತೃಃ ಕರ್ಮಣೋ ವೇತಿ ಶುಭೇಕ್ಷಣಃ ।

—ಸ ಸಂ.

2 ಸ್ಮರಾಮಿ ಭವಸಂತಾಪಹಾನಿದಾಮೃತಸಾಗರಮ್ । ಪೂರ್ಣಾನಂದಸ್ಯ ರಾಮಸ್ಯ ಸಾನುರಾಗಾವಲೋಕನಮ್ । —ದ್ವಾ. ಸ್ತೋ.

ಶ್ರೀಕೃಷ್ಣನು, ಚೇತನದೇಹಾದ್ಯಂತರ್ಯಾಮಿಯಾದ ತಾನು ನೋಡಲ್ಪಡುತ್ತಿರಲು ಉಪಾಸಕನ ಅಂತಃಕರಣರೂಪವಾದ ಬಂಧನವು ರಜಸ್ಸು ಮತ್ತು ತಮಸ್ಸುಗಳಿಂದ ಬೇರ್ಪಡುವುದು. ಇದ್ದರಿಂದಲೇ ಅವನ ಸರ್ವಸಂಶಯಗಳೂ ಸರ್ವ ಅನಿಷ್ಟಕರ್ಮಗಳೂ ನಾಶ ಹೊಂದುವವು. ಎಂದು ಉಪದೇಶಿಸುವುದರ[1] ಮೂಲಕ ತನ್ನನ್ನು ನೋಡುವಿಕೆಯ ಶುಭತ್ವವನ್ನು ಸ್ಪಷ್ಟೀಕರಿಸಿರುವನು

೨ ಯಾರ ಜ್ಞಾನವು ಶುಭಕರವಾದುದೋ ಅಂತಹವನು[2]

ಭಗವಂತನ ಚರಿತ್ರೆಯು, ಮಹಿಮೆಯ ಶ್ರವಣಾದಿಗಳಿಂದ ನಮ್ಮ ಅಂತಃಕರಣದಲ್ಲಿ ಅವನ ಅನುಸಂಧಾನವನ್ನು ತಂದುಕೊಂಡಲ್ಲಿ ಅವನು ನಮ್ಮ ಹೃದಯದಲ್ಲಿರುವವನಾಗಿ ನಮ್ಮ ಅಮಂಗಲಗಳನ್ನೆಲ್ಲ ಪರಿಹರಿಸುವನು.[3] ಆದ್ದರಿಂದಲೇ 'ಮಂಗಲಾಯತನ'ನಾದ ಅವನ ಸನ್ನಿಧಾನದಿಂದಾಗಿ ನಮ್ಮ ಪಾಲಿಗೆ ನಿತ್ಯೋತ್ಸವ, ನಿತ್ಯ ಸಂಪತ್ತು, ನಿತ್ಯಜಯ—ಇವುಗಳು ಸಂಭವಿಸುವಂತೆ ಅನುಗ್ರಹಿಸುವನು.[4]

---

1 ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ಮಯಿ ದೃಷ್ಟೇಽಖಿಲಾತ್ಮನಿ ॥
-ಭಾಗ 11-20-31

ಹೃದಯಗ್ರಂಥಿರಂತಃಕರಣಾಖ್ಯೋ ಬಂಧಃ । -ಭಾಗ ತಾ. ನಿ

ಹೃದಯಸ್ಯ ಗ್ರಂಥಿಃ ಅಂತಃಕರಣಾಖ್ಯೋ ಬಂಧಃ । ರಜಸ್ತಮೋಭಾಗಾವಿತ್ಯರ್ಥಃ । ಧ್ಯಾನೋತ್ಕರ್ಷೇಣ ಅಖಿಲಾತ್ಮನಿ ಚೇತನದೇಹಾದ್ಯಂತರ್ಯಾಮಿಣಿ ಮಯಿ ದೃಷ್ಟೇ ಸತ್ಯೇವ ಕ್ಷೀಯಂತೇ ಸರ್ವಾಣ್ಯನಭಿಮತಕರ್ಮಾಣಿ ಅಶ್ಲೇಷಾದಿಲಕ್ಷಣಂ ಕ್ಷಯಂ ಯಾಂತೀತ್ಯರ್ಥಃ -ಯಾದವೇಂದ್ರಶ್ರೀಧರಾಃ ।

೨ 2 ಶುಭಂ ಶುಭಕರಂ ಈಕ್ಷಣಂ ಜ್ಞಾನಮಸ್ಯೇತಿ ಶುಭೇಕ್ಷಣಃ ।

3 ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ ।
ಹೃದ್ಯಂತಃಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ಸತಾಮ್ ॥
-ಭಾಗ. 1-2-17

4 ನಿತ್ಯೋತ್ಸವೋ ನಿತ್ಯತಾ ಚ ನಿತ್ಯಶ್ರೀರ್ನಿತ್ಯಶೋ ಜಯಃ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥
ಕೃ. ಮ. 205

೧ ಶ್ರೇಯಸ್ಕರವಾದ ದರ್ಶನವನ್ನು ಅಥವಾ ಜ್ಞಾನವನ್ನು ಅನುಗ್ರಹಿಸುವವನು.[1]

೨ ಶೋಭನಗಳಾದ ಕಣ್ಣುಗಳುಳ್ಳವನು.[2]

೩ (ಮುಕ್ತಾತ್ಮರಿಗೆ) ಮಂಗಲಕರವಾದ ಜ್ಞಾನವನ್ನು ಅನುಗ್ರಹಿಸುವವನು.[3]

೪ ಮಂಗಲಸ್ವರೂಪಿ ಹಾಗೂ ಎಲ್ಲವನ್ನೂ ಕಾಣುತ್ತಿರುವವನು.[4]

೫ ಮಂಗಲಕರವಾದ ಇಚ್ಛೆ ಉಳ್ಳವನು.[5]

ಭಗವಂತನ ಜಗತ್ತಿನ ಸೃಷ್ಟಿಗೆ ಸಂಬಂಧಿಸಿದ ಇಚ್ಛೆಯೇ[6] ಮುಂತಾದ ಇಚ್ಛೆಗಳು ಸ್ವಾರ್ಥ, ಕಾಮ ರಾಗಾದಿಗಳ ಮೂಲಕಗಳಾಗಿರದೆ ಪರಾರ್ಥ ದೃಷ್ಟಿಯಿಂದಲೇ ಹೊರಟಿದ್ದು ಪರಮಮಂಗಲವೆನಿಸಿವೆ.

---

೧ 1 ಶುಭಂ ಈಕ್ಷಣಂ ದರ್ಶನಂ ಜ್ಞಾನಂ ವಾ ಯಸ್ಮಾತ್ ಸಃ ಶುಭೇಕ್ಷಣಃ ।

೨ 2 ಶುಭೇ ಈಕ್ಷಣೇ ಯಸ್ಯ ಸಃ ಶುಭೇಕ್ಷಣಃ । —ಶಂ.

* 'ಶುಂಭನಂ ಶೋಭನಂ ಶೂನಂ ಶುಭಂ ಪರ್ಯಾಯವಾಚಕಾಃ' ಇತ್ಯಭಿಧಾನೇನ (ಭಾಗವತ. ಟಿ 10-36-12) ಶುಭಶಬ್ದಸ್ಯ ಶೋಭನಾರ್ಥಕತ್ವಂ ಸಿದ್ಧಮ್ । ಈಕ್ಷಣಶಬ್ದಸ್ಯ 'ಈಕ್ಷಣಂ ದರ್ಶನೇ ದೃಶಿ'—ಇತಿ ಮೇದಿನ್ಯನುಸಾರೇಣ ನೇತ್ರಾರ್ಥೇಽಪಿ ಪ್ರಯುಜ್ಯತೇ ।

೩ 3 ಶುಭಂ ಈಕ್ಷಣಂ ಮುಕ್ತಾತ್ಮನಾಂ ಯಸ್ಮಾತ್ ಸಃ ಶುಭೇಕ್ಷಣಃ ।

೪ 4 ಭದ್ರಸ್ವರೂಪತ್ವಾತ್ ಶುಭಃ । ಸರ್ವಂ ಈಕ್ಷತೇ ಇತಿ ಈಕ್ಷಣಃ । ಶುಭಶ್ಚಾಸೌ ಈಕ್ಷಣಶ್ಚ ಶುಭೇಕ್ಷಣಃ ।

೫ 5 ಶುಭಂ ಭದ್ರಂ ಈಕ್ಷಣಂ ಇಚ್ಛಾ ಯಸ್ಯ ಸಃ ಶುಭೇಕ್ಷಣಃ ।

6 'ಭಗವತ್ಯಾ ನಿಜಾಶ್ರಿತಜನಸ್ಯ ಹಿ ಸ್ವೇಚ್ಛಯೈವ ವೀಕ್ಷಾ ಬಭೂವ ಪರಮಾವನಿಮೋಕ್ಷಕಾಂಕ್ಷೇ' ಮ. ಭಾರ. ತಾ. ನಿ. 1-3

೮ (ಯೋಗ್ಯರಿಗೆ) ಶುಭ ಇಚ್ಛೆಗಳನ್ನು ಅನುಗ್ರಹಿಸುವವನು[1]

ಸನತ್ಕುಮಾರ ಋಷಿಯ ಅಂತರ್ಯಾಮಿಯಾಗಿರುವ ಸನತ್ಕುಮಾರನಾಮಕ ಭಗವಂತನು ನನ್ನನ್ನು ಅಯೋಗ್ಯ ಕಾಮನೆಯಿಂದ ರಕ್ಷಿಸಲಿ—ಎಂದು ಪ್ರಾರ್ಥಿಸುವುದರ[2] ಮೂಲಕ ಶುಭ ಇಚ್ಛೆಗಳನ್ನು ನೀಡುವವನು ಅವನೇ ಎಂದು ಸೂಚಿಸಿದಂತಾಗುವುದು.

ಜಿಜ್ಞಾಸೆ

[ಅಂತರ್ಯಾಮಿಯಲ್ಲಿ ಪ್ರಾರ್ಥನೆ]

ಪ್ರ - 'ಸನತ್ಕುಮಾರೋಽವತು ಕಾಮದೇವಾತ್' ಸನತ್ಕುಮಾರ ನಾಮವುಳ್ಳ ಪರಮಾತ್ಮನು ನನ್ನನ್ನು ಕಾಮದೇವನ ಪೀಡೆಯಿಂದ ರಕ್ಷಿಸಲಿ ಎಂದು ಪ್ರಾರ್ಥನೆಯನ್ನು ಭಾಗವತದ ನಾರಾಯಣ ವರ್ಮಸ್ತೋತ್ರದಲ್ಲಿ ಹೇಳಲಾಗಿದೆ. ಸನತ್ಕುಮಾರನನ್ನು ಈ ರೀತಿ ಪ್ರಾರ್ಥನೆ ಮಾಡಲು ಕಾರಣವೇನು

ಉ - ಸನತ್ಕುಮಾರ ನಾಮವುಳ್ಳ ಪರಮಾತ್ಮನ ರೂಪವು ಸನತ್ಕುಮಾರನೆಂಬ ಬ್ರಹ್ಮಪುತ್ರನಾದ ಋಷಿಯ ಅಂತರ್ಯಾಮಿಯಾಗಿದ್ದಾನೆ ಆ ಋಷಿಯು ಆ ಕಾಮದೇವನ ಸ್ವರೂಪವು. ಅಂತಹ ಕಾಮದೇವನ ಸ್ವರೂಪನಾದ ಸನತ್ಕುಮಾರನ ಅಂತರ್ಯಾಮಿಯಾಗಿ ಇದ್ದ ಸನತ್ಕುಮಾರ ನಾಮಕ ಪರಮಾತ್ಮನು ತನ್ನ ಅಧೀನದಲ್ಲಿರತಕ್ಕವನಿಗೆ ಪ್ರೇರಿಸಿ ಅವನಿಂದ ನಮಗೆ ಪೀಡೆಯು ಬಾರದ ಹಾಗೆ ಮಾಡಲು ಅವಕಾಶವು ಇದೆ. ಆದ್ದರಿಂದ ಆ ರೀತಿ ಪ್ರಾರ್ಥನೆಯು ಯುಕ್ತವು



ರಾಮೋ ವಿರಾಮೋ ವಿರಜೋ ಮಾರ್ಗೋ ನೇಯೋ ನಯೋಽನಯಃ ।
ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ ॥ ೪೩ ॥

೪೦೫ ರಾಮಃ

೧ ನಿತ್ಯವಾದ ಮತ್ತು ಪೂರ್ಣವಾದ ಸುಖ ಮತ್ತು ಜ್ಞಾನಸ್ವರೂಪನಾಗಿ ಉಳ್ಳವನು.[3]

---

೮ 1 ಯೋಗ್ಯಾಧಿಕಾರಿಣಾಂ ಶುಭಂ ಈಕ್ಷಣಂ ಇಚ್ಛಾ ಯಸ್ಮಾತ್ ಸಃ ಶುಭೇಕ್ಷಣಃ ।

2 ಸನತ್ಕುಮಾರನಾಮಾ ತು ಬ್ರಹ್ಮಚರ್ಯವಪುರ್ಹರಿಃ । ಸನತ್ಕುಮಾರಮುಹರಂ ಬ್ರಹ್ಮಪುತ್ರಂ ವಿಶೇಷ ಯಃ। ಸ ಮಾಂ ಯೋಗ್ಯೇತರಾತ್ ಕಾಮಾತ್ ಪಾತು ವಿಶ್ವೇಶ್ವರಃ ಪ್ರಭುಃ ।

೧ 3 ರಾಮ ಇತ್ಯತ್ರ ಮಧ್ಯಗತ ಅಕಾರೋ ದೇಹಲೀದೀಪ ಇವ ಪೂರ್ವಂ ಪರಸ್ತಾಚ್ಚಾನ್ವೇತಿ । ಅ ಶಬ್ದಾತ್ ಪೂರ್ಣಂ ರಂ ರಮಣಂ ಸುಖಂ ಮಂ ಜ್ಞಾನಂ ಚ ಯಸ್ಯಾಸೌ ರಾಮಃ ನಿತ್ಯಪೂರ್ಣಸುಖಜ್ಞಾನರೂಪಃ । —ಪ. ಗೊ. (ಭಾಗ. ತಾ. ನಿ. ಟಿ)

ಕೇಶಾತ್ಮಕನಾದ ಭಗವಂತನು ಜಗತ್ತನ್ನು ಆನಂದ ಪಡಿಸುವುದರಿಂದಲೇ ರಾಮ ಎನಿಸಿರುವನು[1] ಇವನ ಸಂಪರ್ಕದಿಂದಷ್ಟೇ ಬಲರಾಮನು ಗೌಣವಾಗಿ ರಾಮ ಎನಿಸಿರುವನೆಂದು ಸ್ಕಾಂದ ತಿಳಿಸಿದೆ.[2]

೮) ಆನಂದಸ್ವರೂಪಿಯಾಗಿರುವವನು ಮತ್ತು ಎಲ್ಲೆಡೆ ಇರುವವನು.[3]

ಭಗವಂತನು ಆನಂದಸ್ವರೂಪಿಯಾಗಿದ್ದು, ಎಲ್ಲೆಡೆ ಇರುವವನಾಗಿರುವುದರಿಂದಲೂ 'ರಾಮ' ಎಂದೆನಿಸಿರುವನೆಂದು ಸ್ಕಾಂದವು ಸೂಚಿಸಿದೆ[4]

೯) ಪೂರ್ಣಾನಂದ ಸ್ವರೂಪಿಯಾಗಿರುವವನು.[5]

ಶ್ರುತಿಯೊಂದರ 'ನಿರಾಮಿನ್' ಶಬ್ದವನ್ನು ವ್ಯಾಖ್ಯಾನಿಸುವಾಗ ಆನಂದ ರೂಪಿಯಾಗಿರುವುದರಿಂದ[6] ರಾಮ ಎನಿಸಿರುವವನು ಭಗವಂತನೆಂದು ಶ್ರೀಮಧ್ವಾಚಾರ್ಯರು

---

1 ರಾಮ ಏಕೋ ಹ್ಯನಂತಾಂಶಸ್ತತ್ರ ರಾಮಾಭಿಧೋ ಹರಿಃ । ಶುಕ್ಲಕೇಶಾತ್ಮಕಸ್ತಿಷ್ಠನ್ ರಮಯಾಮಾಸ ವೈ ಜಗತ್ । -ಬ್ರಾಹ್ಮ (ಭಾಗ. ತಾ. ನಿ. 2-7-26)

2 'ಹರಿರ್ಹಿ ತತ್ರ ತತ್ರಸ್ಥೋ ರಮಣಾದೀನ್ ಕರೋತ್ಯಜಃ । ಅತಸ್ತಸ್ಯೈವ ನಾಮಾನಿ ಮುಖ್ಯಾದನ್ಯಗತಾನಿ ತು । ವ್ಯವಹಾರಪ್ರವೃತ್ತ್ಯರ್ಥಂ '
-ಸ್ಕಾಂದ (ಭಾಗ. ತಾ. ನಿ. 2-7-35)

೮) 3 ಅಮತಿ ಗಚ್ಛತಿ ಸರ್ವತ್ರೇತಿ ಅಮಃ । 'ಅಮ ಗತೌ' । ರಶ್ಚಾಸಾವಮಶ್ಚ । ಆನಂದ ರೂಪಃ ಸರ್ವಗತಶ್ಚ । ಬ. ಗೋ. (ಭಾಗ. ತಾ. ನಿ. ಟಿ. 9-9-18)

4 ...ಅಸೌ ರತೋ ವಿಭುಃ । ಅತೋಽಸ್ಯ ರಾಮ ಇತ್ಯಾಖ್ಯಾ ..
-ಸ್ಕಾಂದ (ಭಾಗ. ತಾ. ನಿ. 9-9-18)

ಅರ್ಥಾಂತರಂ ಚಾಹ-ವಿಭುಃ । ಅಮಹದಾಭೋಽಯಮ್ ।
-ಬ. ಗೋ.

೯) 5 ರಮಣರೂಪತ್ವಾತ್ ರಾಮಃ ।

6 'ಮಾ ನಃ ಸ್ತೇನೇಭ್ಯೋ ಅಭಿದ್ರುಹಸ್ಪದೇ ನಿರಾಮಿಣೋ ರಿಪವೇ...'
-ಐ. ಉ. ಭಾ.. 2-7-5-5

ಅವತರಿಸಿದ ಅವನನ್ನು 'ರಾಮ'[1] ಎಂದು ಸಜ್ಜನರು ತಿಳಿದರು-ಎಂಬುದಾಗಿ ನಾರಾಯಣ ಪಂಡಿತಾಚಾರ್ಯರು ತಿಳಿಸಿರುವರು.

೧೧ ಆಪತ್ತುಗಳನ್ನು ಪರಿಹರಿಸುವವನು.[2]

೧೨ ಸಂಪತ್ತನ್ನು ನೀಡುವವನು[3]

೧೩ ಲಕ್ಷ್ಮೀದೇವಿಯನ್ನು (ವಿಶೇಷವಾಗಿ) ಸಂತೋಷಪಡಿಸುವವನು.[4]

ಸಕಲ ಆಪತ್ತುಗಳನ್ನು ಪರಿಹರಿಸುವ, ಸರ್ವ ಸಂಪತ್ತುಗಳನ್ನು ನೀಡುವ, ಸಮಸ್ತಲೋಕವನ್ನೇ ಸಂತೋಷಪಡಿಸುವ ಆದುದರಿಂದಲೇ ಅನ್ವರ್ಥಕವಾಗಿ ರಾಮ ಎಂದೆನಿಸಿರುವವನನ್ನು ಮತ್ತ ಮತ್ತೆ ನಮಿಸುವೆನೆಂದು ಸ್ತುತಿಸಲಾಗಿದೆ.[5]

೧೪ ಬೆಳ್ಳಗಾಗಿರುವವನು

---

ರಾಮಃ ಸರ್ವಾಭಿರಾಮತ್ವಾದಾತ್ಮಾರಾಮತ್ವತೋಽಪಿ ವಾ ।
ದೇವೋ ಮರಕತಶ್ಯಾಮ ಇತಿ ವಾ ರಾಮನಾಮಕಃ ॥
ನಿತ್ಯಂ ರಮಾಭಿಸಂಬಂಧಾದ್ವಾನಶ್ರೀಸ್ಯಸ್ಯ ಹೇತಿ ವಾ ।
ರಾಮಾಣಾಂ ಹೃದ್ಯಭಾವಾದ್ವಾ ರಾಮಂ ತಂ ಸಜ್ಜನಾ ವಿದುಃ ॥

-ಸಂ. ರಾ. ಬಾಲ. 3-44,45

೧೧ 2 ಆಪದಃ ಮಾರಯತೀತಿ ಮಾರಃ । ಮಾರ ಏವ ರಾಮಃ । ವರ್ಣವಿಪರ್ಯಯಃ ।

೧೨ 3 ಮಾಂ ಸಂಪದಂ ರಾತಿ ದದಾತೀತಿ ಮಾರಃ। ಮಾರ ಏವ ರಾಮಃ। ವರ್ಣವಿಪರ್ಯಯಃ।

೧೩ 4 ಶ್ರಿಯಂ ರಮಯತೀತಿ ರಾಮಃ । ಅಸಾಧಾರಣ್ಯೇನ ವ್ಯಪದೇಶಃ ।

5 ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಮ್ ।
ಲೋಕಾಭಿರಾಮಂ ಶ್ರೀರಾಮಂ ಭೂಯೋಭೂಯೋ ನಮಾಮ್ಯಹಮ್ ।

೧೪ 6 '......ತ್ರಿಷು ಚಾರೌ ಸಿತಾಽಸಿತೇ' ಇತಿ ಮೇದಿನ್ಯಾಂ ರಾಮಶಬ್ದಃ ಸಿತಾರ್ಥೇಽಪಿ ಪಠಿತಃ ।

ಜಗತ್ತಿನಲ್ಲಿ ಜ್ಞಾನವೈರಾಗ್ಯಾದಿಗಳಿಂದ ಸತ್ತ್ವಗುಣವನ್ನು ಅಭಿವೃದ್ಧಿ ಪಡಿಸಿ ಜಗತ್ತನ್ನು ಭಗವಂತನು ಸ್ವೀಕರಿಸುವ ಹಯಗ್ರೀವಾದಿ ರೂಪಗಳು ಬಿಳಿಬಣ್ಣವನ್ನು ಹೊಂದಿರುವವು—ಎಂದು ಬೃಹತ್ತರ್ಕ ತಿಳಿಸಿದೆ[1] ಬಲರಾಮನಲ್ಲಿ ರಾಮ ಎಂಬ ಹೆಸರಿನಿಂದ ಇರುವ ಶುಕ್ಲಕೇಶಾತ್ಮಕವಾದ ಭಗವಂತನು ಬಿಳಿ ಬಣ್ಣದವನೇ ಆಗಿರುವನು[2]

೧೫ ಸುಂದರನಾಗಿರುವವನು[3]

೧೬ (ಯೋಗಿಗಳು) ಯಾರ ವಿಷಯದಲ್ಲಿ ಆನಂದಪಡುತ್ತಿರುವರೋ ಅಂಥವನು.[4]

ಯೋಗಿಗಳು ನಿತ್ಯಾನಂದಾತ್ಮಕನಾದ ಚಿತ್ಸ್ವರೂಪಿಯಾದ ಅನಂತನಲ್ಲಿ ರಮಿಸುತ್ತಿರುವರು. ಆದುದರಿಂದಲೇ ಬ್ರಹ್ಮನು 'ರಾಮ' ಎನಿಸುವನೆಂದು ಪದ್ಮಪುರಾಣ ತಿಳಿಸಿದೆ[5]

೧೭ ಭಕ್ತರಿಗೆ ಜ್ಞಾನವನ್ನು ಚೆನ್ನಾಗಿ ಅನುಗ್ರಹಿಸುವವನು[6]

---

1 'ಜಗತಾಂ ವರ್ಧಯನ್ ಸತ್ತ್ವಂ ಯದಾ ರಕ್ಷತಿ ಕೇಶವಃ । ಹಯಗ್ರೀವಾದಿರೂಪೇಣ ಶುಕ್ಲವರ್ಣಸ್ತದಾ ವಿಭುಃ' -ಬೃಹತ್ತರ್ಕ (ಭಾಗ. ತಾ. ನಿ 10-4-20)

ರಾಮ ಏಕೋ ಹ್ಯನಂತಾಂಶಸ್ತತ್ರ ರಾಮಾಭಿಧೋ ಹರಿಃ । ಶುಕ್ಲಕೇಶಾತ್ಮಕಃ....'
-ಬ್ರಾಹ್ಮೇ (ಭಾಗ ತಾ. ನಿ 2-7-26)

2 'ಶಂಖಚಕ್ರಭೃದೀಶೋಽಪಿ ಶ್ವೇತವರ್ಣೋ ಮಹಾಭುಜಃ । ಅನಿಷ್ಟಃ ಶ್ವೇತಕೇಶಾತ್ಮಾ ಶೇಷಾಂಶಂ ರೋಹಿಣೀಸುತಮ್' -ವಾರಾಹ (ಭಾಗ. ತಾ. ನಿ 1 3-23)

೧೫ 3 ರಾಮಶಬ್ದಃ ಚಾರ್ತ್ವರ್ಥಕತಯಾಽಪಿ ಮೋದಿನಾಂ ಹರಿಃ ।

* ರಮಣೀಯತ್ವಾತ್ ರಾಮಃ । ವಿ. ಧಾ.

4 ರಮಂತೇ ಯೋಗಿನೋಽಸ್ಮಿನ್ನಿತಿ ರಾಮಃ ।

5 ರಮಂತೇ ಯೋಗಿನೋಽನಂತೇ ನಿತ್ಯಾನಂದೇ ಚಿದಾತ್ಮನಿ ।
ಇತಿ ರಾಮಪದೇನಾಸೌ ಪರಂ ಬ್ರಹ್ಮಾಭಿಧೀಯತೇ ॥
-ಪ. ಪು. (ಶಾ. ಭಾ.)

೧೭ 6 ರಮಂತ ಇತಿ ರಾಃ ಭಕ್ತಾಃ ತೇಷಾಂ ಅ ಸಮ್ಯಕ್ ಮಯಾ ಜ್ಞಾನಂ ಯಸ್ಮಾತ್ ಸಃ [illegible] ।

೧೮ ನಾಶಯೋಗ್ಯರಾದ ಅಸುರರಿಗೆ ಅಜ್ಞಾನವನ್ನು ನೀಡುವವನು.[1]

೧೯ ನಾಶಯೋಗ ರಾದ ಅಸುರರನ್ನು ದಂಡಿಸುವವನು[2]

೨೦ ಜ್ಞಾನಿಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವವನು[3]

೨೧ ರಮಾದೇವಿಯಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವವನು.[4]

೨೨ ರಮಾದೇವಿಯು ದೇಶತಃ ಹಾಗೂ ಕಾಲತಃ ಅಮಿತಳಾಗುವಂತೆ ಅನುಗ್ರಹಿಸಿರುವವನು[5]

೨೩ ಅಸುರರಿಂದ ತಿಳಿಯಲ್ಪಡದವನು[6]

೨೪ ಜ್ಞಾನಿಗಳಿಂದ ಚೆನ್ನಾಗಿ ತಿಳಿಯಲ್ಪಡುವವನು[7]

೨೫ ಆನಂದ ಸ್ವರೂಪಿ, ಅಧಿಕನಾಗಿರುವವನು ಹಾಗೂ ಜ್ಞಾನಸ್ವರೂಪಿ[8]

---

೧೮ 1 'ರೀಙ್ ಕ್ಷಯೇ' ಇತಿ ಧಾತೋಃ ರಾಃ ನಾಶಯೋಗ್ಯಾಃ ಅಸುರಾಃ ತೇಷಾಂ ಅಮಾ ಅಜ್ಞಾನಂ ಯಸ್ಮಾತ್ ಸಃ ರಾಮಃ ।

೧೯ 2 ರಾನ್ ಅಸುರಾನ್ ಅಮಯತಿ ನಾಶಯಂತೀತಿ ರಾಮಃ । 'ಅಮ ಪೀಡಾಯಾಮ್'

೨೦ 3 ರಮಂತ ಇತಿ ಸುಖಯೋಗ್ಯಾಃ ಜ್ಞಾನಿನಃ ।, ತಾನ್ ಅಮತಿ ವಿಶೇಷೇಣ ಗಚ್ಛತಿ ಸನ್ನಿಧಾಪಯತೀತಿ ರಾಮಃ । 'ಅಮ ಗತೌ'

೨೧ 4 ರಮತ ಇತಿ ರಾ ರಮಾ । ತಾಂ ಅಮತಿ ಸನ್ನಿಧಾನಾತಶಯಾ ವಿಶೇಷೇಣ ಗಚ್ಛತೀತಿ ರಾಮಃ ।

೨೨ 5 ರಾ ರಮಾ ಅಮಾ ಅಮಿತಾ ಯಸ್ಮಾತ್ ಸಃ ರಾಮಃ ।

೨೩ 6 ರೈಃ ನಾಶಯೋಗ್ಯೈಃ ಅಸುರೈಃ ನ ಮೀಯತೇ ನ ಜ್ಞಾಯತೇ ಇತಿ ರಾಮಃ ।

೨೪ 7 ರೈಃ ಸುಖಯೋಗ್ಯೈಃ ಜ್ಞಾನಿಭಿಃ ಆ ಸಮ್ಯಕ್ ಮೀಯತೇ ಜ್ಞಾಯತ ಇತಿ ರಾಮಃ

೨೫ 8 ರಮಣರೂಪತ್ವಾತ್ ರಃ । ಅಧಿಕತ್ವಾತ್ ಅಃ । ಜ್ಞಾನರೂಪತ್ವಾತ್ ಮಃ ।

ವೆನು.[1] ಆದುದರಿಂದಲೇ ಅವನು ವಿಶೇಷವಾಗಿ ರಮಿಸುವವನೆನಿಸಿರುವನು.

೩ ವಿಶಿಷ್ಟನಾಗಿರುವವನು ಅಥವಾ ವಿಲಕ್ಷಣನಾಗಿರುವವನು ಹಾಗೂ ಸ್ವತಃ ರಮಿಸು ವವನು ಅಥವಾ ಎಲ್ಲರನ್ನೂ ಆನಂದಪಡಿಸುವವನು.[2]

೪ ವಿಶೇಷವಾಗಿ ಆನಂದಪಡಿಸುವವನು.[3]

ಪತ್ನಿಪುತ್ರಾದಿಗಳು ಅಪ್ರಧಾನವಾಗಿ, ಮಿತವಾಗಿ ಆನಂದಪಡಿಸಿದರೆ, ಭಗವಂತನು ಸ್ವತಂತ್ರವಾಗಿ, ಪ್ರಧಾನವಾಗಿ ಅಮಿತವಾಗಿ ಆನಂದಪಡಿಸುವನು.

೫ ವಿಶಿಷ್ಟರಾದ ಜ್ಞಾನಿಗಳನ್ನು ಆನಂದಪಡಿಸುವವನು.[4]

೬ ಜ್ಞಾನಿಯಾದ ಅಥವಾ ಬಲಶಾಲಿಯಾದ ವಾಯುದೇವನನ್ನು (ವಿಶೇಷವಾಗಿ) ಆನಂದಪಡಿಸುವವನು[5]

---

ಚಾನ್ಯತಃ । ರಮಯಾ ರಮಮಾಣೋಽಪಿ ತತ್ತ್ವೇನೈವ ಸ್ವಿಯಾತ್ಮನಾ । ರಮತೇ ನಾನ್ಯತಃ ಕ್ವಾಪಿ ರತಿರ್ವಿಷ್ಣೋಃ ಸುಖಾತ್ಮನಃ'

-ಐ. ಉ. ಭಾ. 2-2-6-15

1 'ಸ್ವಾನಂದೋಽಪಿ ಭಗವಾನ್ ಕ್ರೀಡಯಾ ಭುಂಕ್ತ ಏವ ತು'

-ನಾರಾಯಣ ಶ್ರುತಿಃ (ಗೀ. ತಾ. 15-9)

೩ 2 ವಿಶಿಷ್ಟತ್ವಾತ್ ವಿಲಕ್ಷಣತ್ವಾದ್ವಾ ವಿಃ। ಸ್ವತಃ ರಮತೇ ಜಗತ್ ರಮಯತೀತಿ ವಾ ರಾಮಃ। ವಿಶ್ಚಾಸೌ ರಾಮಶ್ಚ ವಿರಾಮಃ ।

* ರಾಮನಾಮ್ನಃ (೩೯೬) ಉಕ್ತಾಃ ಸರ್ವೇಽಪ್ಯರ್ಥಾಃ ಅತ್ರಾನುಸಂಧೇಯಾಃ ।

೪ 3 ವಿಶೇಷೇಣ ರಮಯತೀತಿ ವಿರಾಮಃ ।

೫ 4 ವಿಶಿಷ್ಟತ್ವಾತ್ 'ವಯಃ ಸುಪರ್ಣಾಃ....' (ಋ. ವೇ. 15-73-11) ಇತ್ಯತ್ರ ವಿಶಿಷ್ಟತ್ವಾತ್ ಜ್ಞಾನಿನಃ 'ವಯಃ' ಇತ್ಯುಲ್ಲಿಖಿತಾಃ । ವಂ ಜ್ಞಾನಮಸ್ತೀತಿ ವಿನಃ ವಾ ಜ್ಞಾನಿನಃ । ತಾನ್ ರಮಯತೀತಿ ವಿರಾಮಃ ।

೬ 5 ವಂ ಜ್ಞಾನಂ ಬಲಂ ವಾ ಅಸ್ಯಾಸ್ತೀತಿ ವೀ ಜ್ಞಾನೀ ಬಲೀ ವಾಯುದೇವಃ। ತಂ ರಮಯ-ತೀತಿ ವಿರಾಮಃ ।

ಸಂಸಾರಾವಸ್ಥೆಯಲ್ಲಿ ಅಡ್ಡಾಡಿ ದಣಿದ ಜೀವಾತ್ಮರನ್ನು ಕಲ್ಪಾವಸಾನದಲ್ಲಿ ತನ್ನ ಉದರದಲ್ಲಿಟ್ಟು ಕೊಂಡು, ಅವರಿಗೆ ನಿದ್ರೆಯನ್ನು ಅನುಗ್ರಹಿಸಿ, ಆ ಮೂಲಕ ಆನಂದವನ್ನು ಅನುಗ್ರಹಿಸುವವನು[1]

೯ (ಪ್ರಳಯ ಕಾಲದಲ್ಲಿ ಸಕಲ ಜೀವಿಗಳೂ) ಯಾರಲ್ಲಿ ವಿರಮಿಸುವವೋ ಅಂತಹವನು[2]

೧೦ ವಿವಿಧ ಸ್ತ್ರೀ ಆಗಿರುವ ರಮೆಯು ವಿಹಾರ ಪತ್ನಿ ಆಗಿರುವವನೋ ಅಂತಹವನು[3]

೧೧ ಗೋಪಿಕಾದಿ ವಿವಿಧ ಸ್ತ್ರೀಯರು ಯಾರಿಗೆ ಸೇರಿರುವರೋ ಅಂತಹವನು[4]

೧೨ ಪ್ರಾರಂಭಿಸಿದ ಕಾರ್ಯವನ್ನು ಮುಗಿಸಿಯೇ ತೀರುವವನು[5]

೧೩ ವಿಶೇಷವಾಗಿ ಪ್ರಕಾಶಿಸುವವನು ಮತ್ತು ಸಮೀಚೀನವಾದ ಜ್ಞಾನ ಉಳ್ಳವನು[6]

೧೪ ಗರುಡನನ್ನು ಆನಂದಿಸುವವನು[7]

---

1 'ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ ಕಲ್ಪಾವಸಾನೇ ಚ ಯಃ'
-ವಿ ತ ನಿ. ಟೀ ಮಂಗಲಪದ್ಯ

2 ವಿರಮಂತಿ ಭೂತಾನ್ಯಸ್ಮಿನ್ನವಸಾನಂ ಪ್ರಾಪ್ನುವಂತೀತಿ ವಿರಾಮಃ ।
-ವಿ. ರಾ.

೧೦ 3 ವಿಶಿಷ್ಟಾ ರಾಮಾ ರಮಾ ಯಸ್ಯ ಸಃ ವಿರಾಮಃ । -ಸ. ಸಂ.

೧೧ 4 ವಿವಿಧಾ ರಾಮಾಃ ಗೋಪಿಕಾದಿಸ್ತ್ರಿಯೋ ಯಸ್ಯ ಸಃ ವಿರಾಮಃ ।
-ಸ. ಸಂ.

೧೨ 5 ಆರಬ್ಧಕಾರ್ಯಸ್ಯ ವಿರಾಮವಾನ್ ಆರಬ್ಧಾಂತಗಾಮೀ ಇತ್ಯರ್ಥಃ ।
-ನಾ. ರಾ.

೧೩ 6 ವಿಶೇಷೇಣ ರಾಜತ ಇತಿ ವಿರಃ । ಆ ಸಮೀಚೀನಾ ಮಾ ಜ್ಞಾನಂ ಯಸ್ಯ ಸಃ ಆಮಃ । ವಿರಶ್ಚಾಸೌ ಆಮಶ್ಚ ವಿರಾಮಃ ।

೧೪ 7 ವಿಂ ಪಕ್ಷಿಣಂ ಗರುಡಂ ರಮಯತೀತಿ ವಿರಾಮಃ ।

ಎಂದೇ ಅವನನ್ನು 'ನಿರ್ಗುಣ'—ಎಂದು ಉಲ್ಲೇಖಿಸಿದೆ.[1] ಪ್ರಕೃತಿಯ ಸತ್ತ್ವ ಮುಂತಾದ ಯಾವ ಗುಣವೂ ಇಲ್ಲದಿದ್ದರೂ, ಶಾಸ್ತ್ರದಲ್ಲಿ ರಜೋಗುಣವನ್ನೇ ವಿಶೇಷವಾಗಿ ಉಲ್ಲೇಖಿಸಿ, ಅದರ ಅಭಾವವನ್ನು ಹೇಳುವುದರ ಮೂಲಕ ಸಕಲ ಪ್ರಾಕೃತ ಗುಣಗಳ ಪ್ರಭಾವವನ್ನು ನಿರಾಕರಿಸಲಾಗುವುದು.[2] ಬ್ರಹ್ಮಾಂಡದ ಮಧ್ಯದಲ್ಲಿ ಉಪಾಸಿಸಬೇಕಾದ ಬ್ರಹ್ಮನನ್ನು 'ವಿರಜಂ' ಎಂದು ವಿಶೇಷಿಸುವುದರ ಮೂಲಕ ರಜಸ್ಸೇ ಮುಂತಾದ ಪ್ರಾಕೃತಗುಣರಹಿತನಾದವನು ಅವನೆಂಬುದಾಗಿ ಆಥರ್ವಣೋಪನಿಷತ್ತಿನಲ್ಲಿ[3] ಸಂದೇಶಿಸಲಾಗಿದೆ.

೨ (ಯೋಗ್ಯ ಅಧಿಕಾರಿಗಳಿಂ) ರಜೋಗುಣ ಹಾಗೂ ತದುಪಲಕ್ಷಿತವಾದ ತಮೋಗುಣದಿಂದ ದೂರರಾಗುವಂತೆ ಅನುಗ್ರಹಿಸುವವನು[4]

---

* ಪರೋರಜಾಽರಜಸ್ತ್ವಾತ್ -ತಂತ್ರಸಾರೋಕ್ತ (ಭಾಗ. ತಾ. ನಿ.)

* ರಜಸಃ ಪರಃ ಅಪ್ರಾಕೃತಃ ।

1 'ಏಕೋ ದೇವಃ ಸರ್ವಭೂತೇಷು ಗೂಢಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ'

-ಶ್ವೇ. ಉ. 6-11

' ಸತ್ತ್ವಾದಿಗುಣಾಭಾವೋಕ್ತೇಸ್ತತ್ರ। ಅನ್ಯಥಾ'ಏಕೋ ದೇವಸ್ಸರ್ವಭೂತೇಷು ಗೂಢಃ' ಇತ್ಯಾದಿನಾಮಪಿ ಗುಣಾತ್ಮತ್ವಾತ್ ಸ್ವೋಕ್ತಿವಿರೋಧಃ ।

-ಕ. ನಿ.

2 ಯಥಾ ಷಟ್ ಪ್ರಶ್ನೋಪನಿಷದಿ (1-10) ತೇಷಾಮಸೌ ವಿರಜೋ ಬ್ರಹ್ಮಲೋಕಃ ಇತಿ ಸ್ಥಾನಸ್ಯ ವಿರಜ ಇತಿ ವಿಶೇಷಣಮ್ ದತ್ತಮ್ ।

3 ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ ।

-ಅಥ. ಉ. 2-1-11

"ಹಿರಣ್ಮಯೇ ಸುವರ್ಣಾತ್ಮಕೇ ಪರೇ ಉತ್ತಮೇ ಕೋಶೇ ಬ್ರಹ್ಮಾಂಡೇ ವಿರಜಂ ವಿರಜಸ್ಕಂ ರಜೋಗುಣೋಪಲಕ್ಷಿತಸತ್ತ್ವಾದಿಗುಣಹೀನಂ "

-ಅ. ಉ. ಖಂ.

೨ 4 ವಿಗತಃ ಯೋಗ್ಯಾಧಿಕಾರಿಭ್ಯಃ ರಜಃ ರಜೋಗುಣಃ ತದುಪಲಕ್ಷಿತಃ ತಮೋಗುಣಃ ಯಸ್ಮಾತ್, ಯಸ್ಮಾನುಗ್ರಹಾದಿತಿ ಯಾವತ್, ಸಃ ವಿರಜಃ ।

ಮುಕ್ತಿಯಲ್ಲಿ ಪ್ರಕೃತಿಯ ರಜೋಗುಣವೇ ಮೊದಲಾದ ಗುಣಗಳ ಪ್ರಭಾವ ಇರಲಾರದು.[1] ಯೋಗ್ಯ ಅಧಿಕಾರಿಗಳಿಗೆ ಇಂತಹ ಮುಕ್ತಿಯನ್ನು ಅನುಗ್ರಹಿಸುವ ಭಗವಂತನು ಅವರು ಪ್ರಕೃತಿಯ ಗುಣಗಳಿಂದ ದೂರರಾಗುವಂತೆ ಅನುಗ್ರಹಿಸುವನು.

೩ ರಜೋಗುಣದ ಕಾರ್ಯಗಳಾದ ಕಾಮ ಮತ್ತು ಕ್ರೋಧಗಳಿಂದ ದೂರನಾಗಿರುವವನು[2]

೪ (ಯೋಗ್ಯ ಅಧಿಕಾರಿಗಳು) ರಜೋಗುಣದ ಕಾರ್ಯಗಳಾದ ಕಾಮ ಮತ್ತು ಕ್ರೋಧಗಳಿಂದ ದೂರರಾಗಿರುವಂತೆ ಅನುಗ್ರಹಿಸುವವನು[3]

ಕಾಮಕ್ರೋಧಗಳು ರಜೋಗುಣಗಳಿಂದ ಉಂಟಾಗುವವು.[4] ಪ್ರಕೃತಿಪತಿಯಾದ ಭಗವಂತನು ತಾನು ಪ್ರಕೃತಿಯ ಗುಣಗಳನ್ನು ಮೀರಿ ನಿಂತಿದ್ದು, ಅವುಗಳಿಂದಾಗಿ ಉಂಟಾಗುವ ಕಾಮಕ್ರೋಧಾದಿಗಳಿಂದ ದೂರನಾಗಿರುವವನಲ್ಲದೆ, ಯೋಗ್ಯ ಅಧಿಕಾರಿಗಳೂ ರಜೋಗುಣದಿಂದ ಪ್ರಭಾವಿತರಾಗದಂತೆ ಮಾಡಿ, ಆ ಪ್ರಯುಕ್ತ ಕಾಮಕ್ರೋಧಾದಿಗಳಿಗೆ ಒಳಗಾಗದಂತೆ ಅನುಗ್ರಹಿಸುವನು.

೫ ದೋಷಗಳಿಂದ ದೂರನಾಗಿರುವವನು[5]

೬ (ಯೋಗ್ಯ ಅಧಿಕಾರಿಗಳು) ದೋಷಗಳಿಂದ ದೂರರಾಗುವಂತೆ ಅನುಗ್ರಹಿಸುವವನು.[6]

---

1 'ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ತ್ವಂ ಚ ಮಿಶ್ರಂ..' -ಭಾಗ. 2 9-10

೩ 2 ವಿಗತೌ ರಜೋಗುಣಕಾರ್ಯಕಾಮಕ್ರೋಧೌ ಯಸ್ಮಾತ್ಸಃ ವಿರಜಃ । 'ಕಾರ್ಯಕಾರಣಯೋರೇಕಶಬ್ದವ್ಯವಹೃತಿರ್ಭವೇತ್' ಇತಿ ನ್ಯಾಯಾನುಸಾರೇಣ ಕಾರಣವಾಚಿನಾ ರಜಶ್ಶಬ್ದೇನ ರಜೋಗುಣಸ್ಯ ಕಾರ್ಯೇ ಕಾಮಕ್ರೋಧೌ ವ್ಯವಹ್ರಿಯೇತೇ ।

೪ 3 ವಿಗತೇ ರಜೋಗುಣಕಾರ್ಯೇ ಕಾಮಕ್ರೋಧೌ ಯೋಗ್ಯಾಧಿಕಾರಿಭ್ಯಃ ಯಸ್ಮಾತ್ ಯಸ್ಯಾನುಗ್ರಹಾದಿತಿ ಯಾವತ್, ಸಃ ವಿರಜಃ ।

4 ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ । -ಗೀ. 3-37

೫ 5 ವಿಗತೋ ರಜೋ ದೋಷೋ ಯಸ್ಮಾತ್ಸಃ ವಿರಜಃ । -ಶ. ಸಂ.

೬ 6 ಯೋಗ್ಯಾಧಿಕಾರಿಭ್ಯಃ ವಿಗತಃ ರಜಃ ದೋಷಃ ಯಸ್ಮಾತ್, ಯಸ್ಯಾನುಗ್ರಹಾದಿತಿ ಯಾವತ್ ಸಃ ವಿರಜಃ ।

ಭಗವಂತನು ತಾನು ಸ್ವಾಭಾವಿಕವಾಗಿ ನಿರ್ದುಷ್ಟನಾಗಿದ್ದು, ತನ್ನನ್ನು ಉಪಾಸಿಸುವ ಅಧಿಕಾರಿಗಳೂ ದೋಷಗಳಿಂದ ದೂರರಾಗುವಂತೆ ಅನುಗ್ರಹಿಸುವವನು ಆದುದರಿಂದಲೇ ವಿರಜಾಹೋಮವನ್ನು ನಡೆಸುವಾಗ ಪಠಿಸಬೇಕಾದ ಮಂತ್ರಗಳಲ್ಲಿ 'ನಾನು ವಿರಜನಾಗಿ ಪಾಪರಹಿತನಾಗುವಂತಾಗಲಿ'—ಎಂದು ಭಗವಂತನಲ್ಲಿ ತನ್ನನ್ನು ಸಮರ್ಪಿಸಿಕೊಳ್ಳುವುದು ಉಲ್ಲಿಖಿತವಾಗಿದೆ[1]

೨ ರಾಗದಿಂದ ದೂರನಾಗಿರುವವನು[2]

೩ (ಯೋಗ್ಯ ಅಧಿಕಾರಿಗಳು) ರಾಗದಿಂದ ದೂರರಾಗುವಂತೆ ಅನುಗ್ರಹಿಸುವವನು[3]

ನಿತ್ಯವೂ ರಾಗದಿಂದ ಮುಕ್ತನಾಗಿದ್ದು 'ವಿರಜ' ಎನಿಸಿರುವ ಭಗವಂತನನ್ನು ಬಲ್ಲ ಜ್ಞಾನಿಯೂ, ಅವನ ಅನುಗ್ರಹದಿಂದ ರಾಗದಿಂದ ಮುಕ್ತನಾಗುವನೆಂಬುದಾಗಿ ಯಾಜ್ಞವಲ್ಕ್ಯರು ಅಭಿಪ್ರಾಯ ಪಟ್ಟಿರುವರು[4]

---

1 ಅಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ । -ಮ. ನಾ. ಉ. 6-5

೨ 2 ವಿಗತಃ ರಜಃ ರಾಗಃ ಯಸ್ಮಾತ್ ಸಃ ವಿರಜಃ । . 'ವಿಪಾಪೋ ವಿರಜೋಽವಿಚಿಕಿತ್ಸೋ ಬ್ರಾಹ್ಮಣೋ ಭವತಿ' (ಬೃ. ಉ 6-4-24) ಇತ್ಯತ್ರ ರಜಶಬ್ದಃ ರಾಗಾರ್ಥೇ ಪ್ರಯುಕ್ತ ಇತಿ ಶ್ರೀಮದಾಚಾರ್ಯೈಃ ವ್ಯಾಖ್ಯಾತಮ್ ।

ಸ್ವಾನಂದ ಪೂರ್ಣತ್ವೇನ ವಿಷಯಾಭಿಲಾಷಾಭಾವಾದ್ ವಿರಜಾಃ ।
-ವಿ. ರಾ.

. ರಜಶ್ಶಬ್ದೇನ ರಾಗಃ ಪ್ರತಿಪಾದ್ಯತೇ । ವಿಗತಂ ರಜೋ ರಾಗೋಽಸ್ಯ ವಿಷಯಸೇವಾಯಾಮಿತಿ ವಿರಜಃ -ಶಾಂ. ಭಾ. ವಿವೃತಿ

೩ 3 ಯೋಗ್ಯಾಧಿಕಾರಿಭ್ಯಃ ವಿಗತಃ ರಜಃ ರಾಗಃ ಯಸ್ಮಾತ್ ಯಸ್ಯಾನುಗ್ರಹಾತ್ ಸಃ ವಿರಜಃ ।

4 '. . ವಿಪಾಪೋ ವಿರಜೋಽವಿಚಿಕಿತ್ಸೋ ಬ್ರಾಹ್ಮಣೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ....'
-ಬೃ ಉ. 6-4-24

'ರಾಗಸಂದೇಹಪಾಪಾನಿ ತಥಾ ಜಾನಂಸ್ತರಿಷ್ಯತಿ। ನಿತ್ಯೋ ಹಿ ರಾಗಪಾಪಾದೇರ್ಮುಕ್ತೋ ಯತ್ ಪುರುಷೋತ್ತಮಃ' -ಬೃ. ಉ. ಭಾ.

ಪ್ರಾಕೃತಗುಣಾಭಾವವು ಪರಮಾತ್ಮನಲ್ಲಿ ಇದ್ದದ್ದರಿಂದ ಅವನು ಪ್ರಾಕೃತಗುಣವುಳ್ಳ ಅಂದರೆ ದುಷ್ಟಗುಣವುಳ್ಳ ನಮ್ಮಕ್ಕಿಂತ ಉತ್ಕೃಷ್ಟನಾಗುತ್ತಾನೆ. ಈ ರೀತಿ ಉತ್ಕೃಷ್ಟಪ್ರಯೋಜಕಗಳಾದ ದುಷ್ಟಗುಣಾಭಾವ ಮೊದಲಾದ ಅಭಾವಧರ್ಮಗಳು ಸದ್ಗುಣಗಳಾದುದರಿಂದ ಪರಮಾತ್ಮನಲ್ಲಿ ಇರುವ ಎಲ್ಲ ಸದ್ಗುಣಗಳು ಪರಮಾತ್ಮನ ಸ್ವರೂಪವೇ ಎಂದು ಮಧ್ವಸಿದ್ಧಾಂತವಾದ್ದರಿಂದ ಪರಮಾತ್ಮನಲ್ಲಿ ಇರುವ ಈ ಗುಣಗಳೂ ಪರಮಾತ್ಮನ ಸ್ವರೂಪವೆಂದೇ ಹೇಳಬೇಕಲ್ಲವೆ?

ಉ.- ಅಭಾವಧರ್ಮಗಳು ಗುಣಗಳಾದರೂ ಅವುಗಳು ಪರಮಾತ್ಮನ ಸ್ವರೂಪಗಳು ಅಲ್ಲ. ಅಭಾವಗಳಲಿ ಅನ್ಯೋನ್ಯಾಭಾವವನ್ನು ಮಾತ್ರ ಧರ್ಮಿಸ್ವರೂಪವೆಂದು ಇತರ ಅಭಾವಗಳು ಧರ್ಮಿಸ್ವರೂಪಗಳಲ್ಲ ಎಂದು ತತ್ತ್ವವಿವೇಕ ಗ್ರಂಥದಲ್ಲಿ ಸಿದ್ಧವಾಗಿದೆ. ಆದುದರಿಂದ ಪ್ರಾಕೃತಗುಣಾಭಾವವನ್ನು ಪರಮಾತ್ಮನ ಸ್ವರೂಪವೆಂದು ತಿಳಿಯಬಾರದು.



## ೪೯೭ ಮಾರ್ಗ[1]

೧ ಕಾಮನನ್ನು (ಕೈಲಾಸ ಪರ್ವತದಲ್ಲಿ ವಕ್ರನಾಮಕ ಅಸುರನ ವಧೆಗಾಗಿ ತನ್ನ ಉದರದಿಂದ) ಹೊರಗೆ ಹಾಕಿರುವವನು[2]

ವಕ್ರ ಎಂಬ ಹೆಸರಿನ ಅಸುರನು ಚತುರ್ಮುಖನ ವರದಿಂದ ಆಗ ತಾನೇ ಹುಟ್ಟಿದ ವಾಸುದೇವನ ಪುತ್ರ ಕಾಮನಿಂದ ಹೊರತಾಗಿ ಇನ್ನಾರಿಂದಲೂ ಅವಧ್ಯ ಎನಿಸಿದ್ದನು. ಅದಕ್ಕಾಗಿ ಶ್ರೀಕೃಷ್ಣನು ತನ್ನ ಪುತ್ರನಾದ ಪ್ರದ್ಯುಮ್ನನನ್ನು ಉದರದಲ್ಲಿ ಇಟ್ಟುಕೊಂಡು, ಕೈಲಾಸಕ್ಕೆ ಹೋಗಿ ಅಲ್ಲಿ ತನ್ನ ಉದರದಿಂದ ಪ್ರದ್ಯುಮ್ನನನ್ನು ಹೊರಬರಿಸಿ ಅವನ ಮೂಲಕ ಆ ಅಸುರನನ್ನು ಸಂಹರಿಸುವನು. ಹೀಗೆ ಶ್ರೀಕೃಷ್ಣನ ಕೈಲಾಸಯಾತ್ರೆಯ ಉದ್ದೇಶದ ರಹಸ್ಯವನ್ನು ರುದ್ರದೇವನು ಋಷಿಗಳಿಗೆ ತಿಳಿಸಿರುವುದನ್ನು ಶ್ರೀಮದಾಚಾರ್ಯರು ಸ್ವೀಕರಿಸಿರುವರು.[3]

---

1 'ವಿರಜೋಮಾರ್ಗಃ' ಇತ್ಯೇಕನಾಮತಯಾ ಪಾಠಾಂತರಂ ಸೂಚಯಂತಿ ವಿದ್ಯಾಧಿರಾಜರಾಜೇಂದ್ರಯೋ ದ್ವಯೋರಪಿ ನಾಮ್ನೋಃ ಏಕತ್ವೇ ಸಂಖ್ಯಾ ದತ್ತೇತ್ಯತ್ರಾಪಿ ತಥೈವಾನುಸೃತಮ್ ।

2 ಮಾರಂ ಕಾಮಂ ಕೈಲಾಸಶೃಂಗೇ ವಕ್ರನಾಮಕಾಸುರವಧಾರ್ಥಂ ಸ್ವೋದರಾತ್ ಬಹಿರ್ಗಮಯತೀತಿ ಮಾರ್ಗಃ । —ವಾ. ರಾ.

3 'ಯದರ್ಥಮೇಷ ಆಯಾತಃ ಕೇಶವಃ ಶೃಣುತಾಮರಾಃ। ಯೋಽಸುರೋ ವಕ್ರನಾಮಾಽಭೂದವಧ್ಯೋ ಬ್ರಹ್ಮಣೋ ವರಾತ್ ॥ ತದಾ ಜಾತಾದ್ವಾಸುದೇವಪುತ್ರಾತ್ಕಾಮಾದೃತೇ

ಗೀತಾಚಾರ್ಯನು ತಾನು ಸರ್ವಸಂಹಾರಕನಾಗಿ 'ಮೃತ್ಯು' ನಾಮದ ವಿಭೂತಿರೂಪದಿಂದ ಮೃತ್ಯುವಿನಲ್ಲಿ ಇರುವುದಾಗಿ ಸಂದೇಶಿಸಿರುವನು[1]

೬ (ಮುಕ್ತಾತ್ಮರು) ಮರಣವನ್ನು ಹೊಂದದಂತೆ ಅನುಗ್ರಹಿಸುವವನು.[2]

೭ ವಿಘ್ನಗಳನ್ನು ತಲುಪಿಸುವವನು ಅಥವಾ ಹೋಗಲಾಡಿಸುವವನು[3]

ಆಕಾಶಾಭಿಮಾನಿಯಾದ ಗಣಪತಿಯು ಅವಕಾಶವನ್ನು ನೀಡುವುದರ ಮೂಲಕ, ವಿಘ್ನ ಪರಿಹಾರಕನೂ, ಅವಕಾಶವನ್ನು ನೀಡದ ಪ್ರಯುಕ್ತ ವಿಘ್ನಪ್ರದನೂ ಆಗಿರುವನು ಆದರೆ ಗಣಪತಿಯಿಂದ ಅಭಿಮನ್ಯಮಾನವಾದ ಆಕಾಶವೂ ಭಗವದಾಜ್ಞಾನುಸಾರವಾಗಿ ಅವಕಾಶವನ್ನು ಕಲ್ಪಿಸಿಕೊಡುವುದೆಂದು ಸಾರುವ[4] ಭಾಗವತದ ಪ್ರಕಾರ ಗಣಪತಿಯೂ ಭಗವಂತನ ನಿಯಂತ್ರಣಕ್ಕೊಳಗಾಗಿಯೇ ಆಕಾಶವನ್ನು ನಿಯಮಿಸುತ್ತಿರುವನು, ಆದುದರಿಂದಲೇ ಅವನು ನಡೆಸುತ್ತಿರುವ ವಿಘ್ನಪ್ರದಾನ ಪರಿಹಾರಗಳೂ ಮುಖ್ಯವಾಗಿ ಭಗವದಧೀನವಾದವುಗಳೇ, ಈ ಕಾರಣದಿಂದಲೇ—ಸರ್ವ ವಿಘ್ನಗಳು ಉಪಶಮನ ಹೊಂದಲು ಶುಭ್ರ ಬಟ್ಟೆಯನ್ನು ಧರಿಸಿರುವ ಚಂದ್ರನ ಬಣ್ಣದ, ಚತುರ್ಭುಜದ ಪ್ರಸನ್ನವದನದ ಶ್ರೀವಿಷ್ಣುವನ್ನು ಧ್ಯಾನಿಸಬೇಕೆಂದು ವಿಧಿಸಲಾಗಿದೆ[5]

೮ ಸಿಂಹರೂಪವಾದ ಮೃಗಕ್ಕೆ ಸಂಬಂಧಿಸಿದ ಮುಖವುಳ್ಳವನು[6]

---

1 'ಮೃತ್ಯುಃ ಸರ್ವಹರಶ್ಚಾಹಂ ' ಗೀ 10-34

ಸರ್ವಹರೋ ಮಾರಕತ್ವಹೇತುನಾ ಮೃತ್ಯುಸ್ಥಃ । -ಗೀ. ವಿ.

೬ 2 ಮಾರಂ ಮುಕ್ತಾತ್ಮನಾಂ ಮೃತ್ಯುಂ ಗಮಯತಿ ಅಪಗಮಯತೀತಿ ಮಾರ್ಗಃ ।

೭ 3 ಮಾರಾನ್ ವಿಘ್ನಾನ್ ಗಮಯತಿ ಅಪಗಮಯತೀತಿ ವಾ ಮಾರ್ಗಃ ।

4 ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ । -ಭಾಗ. 3-29-43

5 ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ।

೮ 6 ಮೃಗಸ್ಯೇದಂ ಮಾರ್ಗಂ ಸಿಂಹಮುಖಂ ತದಸ್ಯಾಸ್ತೀತಿ ಮಾರ್ಗಃ । ಅರ್ಶಆದ್ಯಚ್ ।
-ಸ. ಸಂ.

೯ ಲಕ್ಷ್ಮೀದೇವಿಗೆ ರತಿಯನ್ನು ತಲುಪಿಸುವವನು.[1]

೧೦ ಸಜ್ಜನರಿಗೆ ಜ್ಞಾನ ಮತ್ತು ಕ್ರೀಡೆಯನ್ನು ಹೊಂದಿಸುವವನು.[2]

೧೧ ಜ್ಞಾನದ ಮೂಲಕ ಸುಖವನ್ನು ಹೊಂದಿಸುವವನು.[3]

[ಅರ್ಥವಿಶೇಷಗಳನ್ನು ೩೬೬ನೆಯ 'ಮಾರ್ಗ' ನಾಮದ ವ್ಯಾಖ್ಯಾನದಲ್ಲಿ ನೋಡಬಹುದು]

## ಜಿಜ್ಞಾಸೆ

### [ಕೈಲಾಸಯಾತ್ರೆಯ ಉದ್ದೇಶ]

ಪ್ರ- ಶ್ರೀಕೃಷ್ಣನು ಕೈಲಾಸಯಾತ್ರೆಯನ್ನು ಮಾಡಿದ್ದು ರುದ್ರದೇವರ ತಪಸ್ಸಿಗಾಗಿ ರುದ್ರದೇವರನ್ನು ತಪಸ್ಸಿನಿಂದ ಪ್ರಸನ್ನೀಕರಿಸಿ ಅವರಿಂದ ವರವನ್ನು ಪಡೆಯುವುದಕ್ಕಾಗಿ ಎಂದು ಕೆಲವರಿಗೆ ತಿಳಿವಳಿಕೆಯಾಗಿದೆ. ಕೆಲವರಿಗೆ ವಕ್ರನಾಮಕ ಅಸುರನನ್ನು ಸಂಹರಿಸುವದಕ್ಕಾಗಿ ಕೈಲಾಸಯಾತ್ರೆಯನ್ನು ಮಾಡಿದ್ದು ಎಂದು ತಿಳಿವಳಿಕೆಯಾಗಿದೆ ಈ ಎರಡು ತಿಳಿವಳಿಕೆಗಳಲ್ಲಿ ಯಾವ ತಿಳಿವಳಿಕೆಯು ಯಥಾರ್ಥ?

ಉ:- ಶ್ರೀಕೃಷ್ಣನು ಅರ್ಜುನನಿಗೆ ದಿವ್ಯ ಚಕ್ಷುಸ್ಸನ್ನು ಅನುಗ್ರಹಿಸಿ ತನ್ನ ಪೂರ್ಣರೂಪವನ್ನು ತೋರಿಸಿದನು. ಈ ಪ್ರತ್ಯಕ್ಷಾನುಭವವು ದಿವ್ಯಚಕ್ಷುಸ್ಸಿನಿಂದ ಉಂಟಾದ್ದರಿಂದ ಯಥಾರ್ಥವಾದದ್ದು. ಈ ಯಥಾರ್ಥ ಪ್ರತ್ಯಕ್ಷಾನುಭವದಿಂದ 'ಬ್ರಹ್ಮಾಣಮೀಶಂ ಕಮಲಾಸನಸ್ಥಂ' ಎಂದು ಹೇಳಿದಂತೆ ಬ್ರಹ್ಮರುದ್ರಾದಿದೇವತೆಗಳೆಲ್ಲರೂ ಶ್ರೀವಿಷ್ಣುವಿನ ಅಧೀನರೆಂದು ಸಿದ್ಧವಾದ್ದರಿಂದ ಶ್ರೀವಿಷ್ಣುರೂಪಿಯಾದ ಕೃಷ್ಣನು ಕೈಲಾಸಯಾತ್ರೆಯನ್ನು ಮಾಡಿದ್ದು ರುದ್ರದೇವರ ಅನುಗ್ರಹವನ್ನು ಪಡೆಯುವದಕ್ಕಾಗಿ ಎಂಬ ತಿಳಿವಳಿಕೆಯು ಅಯಥಾರ್ಥವೆಂದು ಸಿದ್ಧವಾಗುತ್ತದೆ.



---

೯ 1 ಮಾಯಾಃ ರಂ ರತಿಂ ಗಮಯತಿ ಪ್ರಾಪಯತೀತಿ ಮಾರ್ಗಃ ।

೧೦ 2 ಸಜ್ಜನಾನ್ ಮಾಂ ರಂ ಚ ಗಮಯತೀತಿ ಮಾರ್ಗಃ ।

೧೧ 3 ಮಯಾ ಜ್ಞಾನೇನ ರಂ ಸುಖಂ ಗಮಯತೀತಿ ಮಾರ್ಗಃ ।

ಶೀಲ ನೇಯರ್

೧ (ಶಿಷ್ಯಾದಿಗಳಲ್ಲಿ ವ್ಯಾಖ್ಯಾನದ ಮೂಲಕ) ನಿರ್ಣಯಿಸಲು ಯೋಗ್ಯನಾಗಿರುವವನು.[1]

ಅಧ್ಯಯನ ಸಂಪನ್ನನೇ ವೇದೋಕ್ತ ಬ್ರಹ್ಮಜ್ಞಾನದಲ್ಲಿ ಅಧಿಕಾರೀ ಎನ್ನುವ ಬ್ರಹ್ಮತರ್ಕವು[2] ಭಗವಂತನ ಸ್ವರೂಪವು ವ್ಯಾಖ್ಯಾನದಿಂದಲೇ ನಿರ್ಣಯಿಸಲು ಯೋಗ್ಯವಾದುದೆಂಬುದನ್ನು ಸೂಚಿಸಿ ಕೊಡುವುದು

೨ ಗುರುವಿನಿಂದ ಶಿಷ್ಯರಲ್ಲಿ ಕೊಂಡೊಯ್ಯಲು ಯೋಗ್ಯನಾಗಿರುವವನು.[3]

ಸ್ವತಂತ್ರನಾದ ಭಗವಂತನು ಯಾರಿಂದಲೂ, ಎಲ್ಲೂ, ಯಾವಾಗಲೂ ನೇಯ–ಕೊಂಡೊಯ್ಯಲ್ಪಡುವವನು ಆಗಲಾರ. ಹೀಗೆ 'ಅನೇಯ' ಎನಿಸಿರುವ ಭಗವಂತನನ್ನು ಕೊಂಡೊಯ್ಯುದೆಂದರೆ-ಅಲ್ಲಿರುವ ಅವನನ್ನು ಸ್ಮರಿಸಿಕೊಳ್ಳುವುದೇ ಆಗಿದೆ—ಎಂದು ಸ್ಪಷ್ಟೀಕರಿಸುವ ಪ್ರಮಾಣದ[4] ಪ್ರಕಾರ ಗುರುವು ಶಿಷ್ಯರಲ್ಲಿಗೆ ಭಗವಂತನನ್ನು ಕೊಂಡೊಯ್ಯುವುದೆಂದರೆ ಅವನ ಕುರಿತ ಸರಿಯಾದ ಮಾಹಿತಿಯನು ನೀಡುವುದೇ ಆಗಿದೆ

೩ ತನ್ನಿಂದಲೇ ಪ್ರೇರಿಸಲು ಯೋಗ್ಯನಾಗಿರುವವನು[5]

ಸಕಲರಿಗೂ ಪ್ರೇರಕನಾದ ಭಗವಂತನಿಗೆ ಮತ್ತೊಬ್ಬ ಪ್ರೇರಕನಿಲ್ಲ. ತನಗೆ ತಾನೆ ಪ್ರೇರಕನು. ತನ್ನಿಂದಲೇ ಪ್ರೇರ್ಯನಾಗುವವನು ಅವನು. ಬ್ರಹ್ಮಾದಿಗಳೆಲ್ಲ ಅವನ ಅನುಗ್ರಾಹ್ಯತ್ವರೂಪದ

---

೧ 1 ಶಿಷ್ಯಾದಿಷು ವ್ಯಾಖ್ಯಾನೇನ ನೇತುಂ ನಿರ್ಣೇತುಂ ಯೋಗ್ಯಃ ನೇಯಃ । -ವಾ. ರಾ.

2 '...ತಸ್ಮಾದಧ್ಯಯನಾನ್ವಿತಃ । ಬ್ರಹ್ಮಜ್ಞಾನೇ ತು ವೇದೋಕ್ತೇಽಪ್ಯಧಿಕಾರೀ ಸತಾಂ ಮತಃ' -ಬ್ರಹ್ಮತರ್ಕ (ಬ್ರ. ಸೂ ಭಾ 3-4-12)

೨ 3 ಗುರುಣಾ ಶಿಷ್ಯೇಷು ನೇತುಂ ಯೋಗ್ಯೋ ನೇಯಃ । -ವಿ ರಾ.

4 'ಅನೇಯಸ್ಯ ಹರೇರ್ನೀತಿಸ್ತದ್ಗತಸ್ಯ ಹರೇಃ ಸ್ಮೃತಿಃ । ನಹಿ ನೇಯಃ ಕ್ವಚಿತ್ ಕ್ವಾಪಿ ಕೇನಚಿತ್ ಸ್ವವಶತ್ವತಃ' -ಭಾಗ ತಾ. ನಿ 11-15-24

೩ 5 ಸ್ವೇನೈವ ನೇತುಂ ಪ್ರಣೇತುಂ ಪ್ರೇರಯಿತುಮಿತಿ ಯಾವತ್, ಯೋಗ್ಯಃ ನೇಯಃ । ಅಸಾಧಾರಣ್ಯೇನ ವ್ಯಪದೇಶಃ ।

ಉ – ಚಂಡಾಲರಿಗೆ ಜನ್ಮಾಂತರದಲ್ಲಿ ಬ್ರಾಹ್ಮಣ ದೇಹವು ಬಂದು ವೇದೋಕ್ತ ಜ್ಞಾನವು ಉಂಟಾಗಿ ಮೋಕ್ಷವಾಗುತ್ತದೆ.

ಪ್ರ – ಸ್ತ್ರೀಯರಿಗೂ ಜನ್ಮಾಂತರದಲ್ಲಿ ಬ್ರಾಹ್ಮಣ ದೇಹವು ಬಂದು ವೇದೋಕ್ತ ಬ್ರಹ್ಮಜ್ಞಾನವು ಉಂಟಾಗುತ್ತದೆಂದು ಹೇಳಬಹುದೇ?

ಉ – 'ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾತ್ ಬಲವತ್ಕಾರಣೈರಪಿ' ಎಂದು ವಚನವಿದ್ದದ್ದರಿಂದ ಅವರಿಗೆ ಬ್ರಾಹ್ಮಣ ದೇಹವು ಬರುವದಿಲ್ಲ.

ಪ್ರ – ಸ್ತ್ರೀಯರಿಗೆ ಪುರುಷ ಜೀವರಿಂದ ಕೂಡಿ ಪುರುಷ ದೇಹವು ಉಂಟಾಗಬಹುದು. ಆಗ ಅವರು ವೇದೋಕ್ತ ಜ್ಞಾನಾಧಿಕಾರಿಗಳು ಆಗಬಹುದು ಅಲ್ಲವೆ?

ಉ – ಆಗ ಅವರೂ ವೇದಾಧಿಕಾರಿಗಳು ಆಗಬಹುದು.

ಪ್ರ – ಅವರಿಗೆ ನಿಯಮೇನ ಪುರುಷ ಜೀವರಿಂದ ಕೂಡಿ ಪುರುಷ ದೇಹವು ಬರುತ್ತದೆಂದು ಶಾಸ್ತ್ರದಲ್ಲಿ ಹೇಳಿರುತ್ತದೋ?

ಉ – ಚಂಡಾಲರಿಗೂ ನಿಯಮದಿಂದ ಬ್ರಾಹ್ಮಣ ದೇಹವು ಬರುತ್ತದೆಂದು ಶಾಸ್ತ್ರವು ಹೇಳುವದಿಲ್ಲ. ಸ್ತ್ರೀಯರಿಗೂ ಆ ನಿಯಮವನ್ನು ಹೇಳುವದಿಲ್ಲ



೪೯೮ ನಯಃ

೧ (ಎಲ್ಲವನ್ನು) ಪ್ರೇರಿಸುವವನು[1]

೨ (ಉತ್ತಮಾಧಿಕಾರಿಯನ್ನು) ಮೋಕ್ಷಕ್ಕೆ ಕೊಂಡೊಯ್ಯುವವನು.[2]

ಮೋಕ್ಷ ರೂಪವಾದ ಉತ್ತಮ ಸ್ಥಾನಕ್ಕೆ ಕೊಂಡೊಯ್ಯುವ ಪ್ರಯುಕ್ತವೂ ಭಗವಂತನು

---

೧ 1 ನಯತಿ ಸರ್ವಂ ಪ್ರಣಯತಿ, ಪ್ರೇರಯತೀತಿ ಯಾವತ್ ನಯಃ ।

* ಭಗವತಃ ಪ್ರಣೇತೃತ್ವಮಧಿಕೃತ್ಯ 'ನೇತಾ' ಇತಿ ನಾಮ್ನಃ (೨೨೨) ವ್ಯಾಖ್ಯಾನೇ ದ್ರಷ್ಟವ್ಯಮ್ ।

೨ 2 ನಯತಿ ಉತ್ತಮಾಧಿಕಾರಿಣಂ ಮೋಕ್ಷಂ ಪ್ರತಿ ಪ್ರಾಪಯತೀತಿ ನಯಃ ।

'ಅಗ್ನಿ' ಎನಿಸಿದ್ದಾನೆ.[1] ಈ ಅಭಿಪ್ರಾಯದಲ್ಲೇ ಸ್ವಾಯಂಭುವ ಮನು ಯಜ್ಞನಾಮಕ ಭಗವಂತನನ್ನು 'ಅಗ್ನೇ' ಎಂದು ಸಂಬೋಧಿಸಿ, ತನ್ನ ಅನಿಷ್ಟಕರ್ಮಗಳನ್ನು ಪರಿಹರಿಸಿ ಮೋಕ್ಷಕ್ಕೆ ಒಯ್ಯಬೇಕೆಂದು ನಿವೇದಿಸಿಕೊಂಡಿರುವನು.[2]

೩. ಕರ್ಮಫಲಗಳನ್ನು ಹೊಂದಿಸುವವನು.[3]

ಜೀವಾತ್ಮನಿಗೆ ಅವನ ಶುಭಾಶುಭ ಕರ್ಮಫಲಗಳನ್ನು ಸಂಯೋಜಿಸುವವನು ಭಗವಂತನೇ ಎಂಬುದಾಗಿ ಪೈಂಗಿಶ್ರುತಿಯು ಸಾರಿದೆ.[4]

೪ ಎಲ್ಲೆಡೆ ಇರುವವನು ಅಥವಾ ಎಲ್ಲವನ್ನೂ ಬಲ್ಲವನು.[5]

೫ ಎಲ್ಲವನ್ನೂ ರಕ್ಷಿಸುವವನು.[6]

೬ (ದುಷ್ಟರಲ್ಲಿಗೆ) ಹೋಗದಿರುವವನು.[7]

---

1 ಅಗ್ರಂ ಪ್ರಧಾನಂ ಸ್ಥಾನಂ ಮೋಕ್ಷಂ ಪ್ರತಿ ನಯತೀತಿ ಅಗ್ನಿಃ ।

2 'ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜುಹುರಾಣಮೇನೋ ' —ಈಶಾ. ಉ. 5-2

* 'ಯದಸ್ಮಾನ್ ಕುರುತೇಽತ್ಯಲ್ಪಾಂಸ್ತದೇನೋಽಸ್ಮತ್ ವಿಯೋಜಯ । ನಯ ನೋ ಮೋಕ್ಷವಿತ್ತಾಯೇತ್ಯಸ್ತಾದ್ ಯಜ್ಞಂ ಮನುಃ ಸ್ವರಾಟ್'

-ಸ್ಕಾಂದ (ಈಶಾ. ಉ. ಭಾ)

೩ 3 ನಯತಿ ತತ್ತತ್ಕರ್ಮಫಲಾನಿ ಪ್ರಾಪಯತೀತಿ ನಯಃ ।

4 'ಏಷ ಹ್ಯೇವ ಶುಭಾಶುಭೈಃ ಕರ್ಮಫಲೈರೇನಂ ಸಂಯೋಜಯತಿ..'

—ಪೈಂಗಿಶ್ರುತಿ (ಗೀ. ಭಾ. 2-47)

೪ 5 ನಯತೇ ಸರ್ವತ್ರ ಗಚ್ಛತಿ ಸರ್ವಂ ಅವಗಚ್ಛತೀತಿ ವಾ ನಯಃ । 'ಣಯ ಗತೌ'

೫ 6 ನಯತೇ ಸರ್ವಂ ರಕ್ಷತೀತಿ ನಯಃ । 'ಣಯ ರಕ್ಷಣೇ ಚ'

೬ 7 ದುಷ್ಟಾನ್ ಪ್ರತಿ ನ ಏತೀತಿ ನಯಃ । ನೀಗ ಇತಿವತ್ ।

ತನ್ನ ಭಕ್ತರಾದ ಸಜ್ಜನರ ಜೊತೆಗೆಯೇ ವಿಶೇಷವಾಗಿ ಇರಬಯಸುವ ಭಗವಂತನು ಅಭಕ್ತರಾದ ದುಷ್ಟರಲ್ಲಿಗೆ ಹೋಗುವುದನ್ನು, ಅವರ ಜೊತೆಗೆ ಇರುವುದನ್ನು ಇಚ್ಛಿಸುವುದಿಲ್ಲ ಶ್ರೀಕೃಷ್ಣಾವತಾರದಲ್ಲಿ ತನ್ನ ಈ ಸ್ವಭಾವವನ್ನು ಸ್ಪಷ್ಟೀಕರಿಸಿರುವನು

೭ ನೀತಿಗೆ ನಿಯಾಮಕನಾಗಿರುವವನು[1]

ಸಕಲ ನೀತಿಗಳಿಗೂ ನಿಯಾಮಕ ಭಗವಂತನು ಯಾವುದೇ ಕ್ಷೇತ್ರದಲ್ಲಿ ಜಯಗಳಿಸ ಬಯಸುವವರಲ್ಲಿ ನೀತಿ ನಾಮಕ ವಿಭೂತಿ ರೂಪದಿಂದ ಇದ್ದು ಅವರಿಗೆ ನೀತಿಯನ್ನು ಅನುಗ್ರಹಿಸುವವನು ತಾನು ಎಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು[2]

೮ ದೋಷವಿರುದ್ಧ ಗುಣಸ್ವರೂಪಿ ಹಾಗೂ ಎಲ್ಲೆಡೆ ಇರುವವನು[3]

## ಜಿಜ್ಞಾಸೆ

[ಭ್ರಾಂತಿಕಲ್ಪಿತವೆಂಬ ಪಕ್ಷದ ದೋಷ]

ಪ್ರ - ಪ್ರೇರಕನೂ ಪ್ರೇರ್ಯಗಳೂ ಎಲ್ಲವೂ ಸುಳ್ಳು ಅವುಗಳು ಭ್ರಾಂತಿ ಕಲ್ಪಿತಗಳು ನಿರ್ಗುಣ ಬ್ರಹ್ಮವೊಂದೇ ಪಾರಮಾರ್ಥಿಕ ಸತ್ಯ—ಎಂದು ಅದ್ವೈತ ಮತದಲ್ಲಿ ಹೇಳುವದು ಸರಿಯೇ?

ಉ - ಪ್ರೇರಕ ಪ್ರೇರ್ಯಗಳ ಭ್ರಾಂತಿಯು ಯಾರಿಗೆ? ನಿರ್ಗುಣ ಬ್ರಹ್ಮನಿಗೋ? ಪ್ರೇರಕ ಪ್ರೇರ್ಯಗಳಿಗೋ? ನಿರ್ಗುಣ ಬ್ರಹ್ಮನಿಗೆ ಈ ಭ್ರಾಂತಿ ಎಂದು ಹೇಳಿದರೆ ಈ ಭ್ರಾಂತಿಯು ಅನಾದಿ ನಿತ್ಯವೋ? ಸಾದಿ ಅನಿತ್ಯವೋ? ಅದು ಅನಾದಿನಿತ್ಯವಾದರೆ ಅದಕ್ಕೆ ಬಾಧವು ಇಲ್ಲವೆಂದಾಯಿತು ಜ್ಞಾನವನ್ನು ಭ್ರಾಂತಿ ಎಂದು ನಿರ್ಣಯಿಸುವದು ಬಾಧದಿಂದ. ಅಂತಹ ಬಾಧವು ಇಲ್ಲವಾದರೆ ಪ್ರೇರಕ ಪ್ರೇರ್ಯಗಳ ಜ್ಞಾನವು ಭ್ರಾಂತಿಯಾಗಲಾರದು. ಅದು ಯಥಾರ್ಥಜ್ಞಾನವೇ ಆದೀತು ಏವಂ ಚ ಪ್ರೇರಕ ಪ್ರೇರ್ಯಗಳು ಭ್ರಾಂತಿ ಕಲ್ಪಿತವಲ್ಲ ಎಂದು ಒಪ್ಪಿದಂತೆ ಆಯಿತು

---

೭ 1 ನೀತಿಮಾನ್ ನಯಃ । —ವಾ ರಾ.

* ನಯಃ ನೀತಿಃ ಅಸ್ಯ ನಿಯಮ್ಯತಯಾಽಸ್ತೀತಿ ಅರ್ಶ ಆದ್ಯಚಿ ನಯಃ ।

2 . ನೀತಿರಸ್ಮಿ ಜಿಗೀಷತಾಮ್ । —ಗೀ. 10-38

ಜಿಗೀಷತಾಂ ನೀತಿರಸ್ಮಿ ನೀತಿರೂಪಸಾರಪ್ರದೋಽಸ್ಮಿ । —ಗೀ. ವಿ.

೮ 3 ದೋಷವಿರುದ್ಧಗುಣರೂಪತ್ವಾತ್ ನ । ಯಾತಿ ಸರ್ವತ್ರ ಗಚ್ಛತೀತಿ ಯಃ ।

## ೫ ಪೂರ್ಣನಾಗಿ ತಾನೇ ಪ್ರೇರಕನಾಗಿ ಉಳ್ಳವನು[1]

ಭಗವಂತನಲ್ಲದೆ ಎಲ್ಲರನ್ನೂ ಯಾರು ಪ್ರೇರಿಸಿಯಾನು? ಆನಂದ ಪೂರ್ಣನಲ್ಲದಿದ್ದರೆ ಭಗವಂತನಾದರೂ ಎಲ್ಲರನ್ನೂ ಯಾಕೆ ಪ್ರೇರಿಸಿಯಾನು?—ಎಂದು ಸವಾಲು[2] ಹಾಕುವುದರ ಮೂಲಕ ತೈತ್ತಿರೀಯೋಪನಿಷತ್ತು, ಭಗವಂತನೇ ಸರ್ವಚೇಷ್ಟಕ[3], ಆನಂದಸ್ವರೂಪಿಯಾದ ಅವನು ಆನಂದೋದ್ರೇಕದಿಂದಾಗಿ ಸರ್ವಚೇಷ್ಟಕನಾಗಿರುವನು[4]—ಎಂದು ಅಭಿಪ್ರಾಯಪಟ್ಟಿದೆ ಭಗವಂತನು ಪ್ರಾಣದೇವನಲ್ಲಿ ಪ್ರಾಣನಾಮಕನಾಗಿ ಇದ್ದು[5], ಅವನನ್ನು ಪ್ರೇರಿಸುತ್ತ, ಅವನ ಮೂಲಕ ಉಳಿದೆಲ್ಲರನ್ನೂ ಪ್ರೇರಿಸುವನು[6] ಭಗವಂತನ ಸರ್ವಪ್ರೇರಕತ್ವವನ್ನು ಸ್ಪಷ್ಟವಾಗಿ ವಿವರಿಸಿದ ಐತರೇಯೋಪನಿಷತ್ತು—ಅಂತಹ ಭಗವಂತನು ಇನ್ನಾರನ್ನೂ ಆಶ್ರಯಿಸಿದೆ, ತನ್ನ ಆಧಾರದಲ್ಲೇ ಇರುವವನು,—ಎಂದು ಸಂದೇಶಿಸಿದೆ.[7]

---

ಟಿ 1 ಪೂರ್ಣತ್ವಾತ್ ಅನಾವಾ ಸ್ವಯಮೇವ ನಯಃ ನಿಯಾಮಕೋ ಯಸ್ಯ ಸಃ ಅನಯಃ ।

2 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್'
-ತೈ ಉ. 2-12

3 ಅತಃ ಕೇವಲಲೀಲಯಾ ಪ್ರವರ್ತಕೋ ನ ಚೇದೇಷ ಪ್ರಾಣ್ಯಾದನ್ಯಾಚ್ಚ ಕಃ ಪುಮಾನ್ -ಅ ವ್ಯಾ. 1-1-186

4 ಆದಿಷ್ಟಸ್ತ್ವೇಷ ಭಗವಾನ್ ಯದ್ಯಾನಂದೋ ಭವೇನ್ನ ಚ । ಸಾಮಾನ್ಯಚೇಷ್ಟಾಪ್ಯನ್ಯಾನ್ಯಸ್ಯ ಕಸ್ಯ ಸ್ಯಾತ್ ಸ್ವತಂತ್ರ್ಯತೇ ಪ್ರಭುಮ್ ।
-ಯಜುಃಸಂಹಿತಾ (ತೈ ಉ ಭಾ)

5 ಪ್ರಾಣಸ್ತು ಪ್ರಾಣನಾಮಾಽಸೌ ನೇತೃತ್ವಾತ್ ಪುರುಷೋತ್ತಮಃ ।
-ಐ. ಉ ಭಾ 2-1-1-3

6 ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ ।
-ಭಾಗ ತಾ. ನಿ. 10-15-50

7 ... ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ -ಐ ಉ 2-5-1-3

'ಸರ್ವಂ ಜಗದಿದಂ ವಿಷ್ಣೋರ್ವಶೇ ತಿಷ್ಠತಿ ಸರ್ವದಾ । ತೇನೈವ ನೀಯತೇ ನಿತ್ಯಂ ತಸ್ಮಿನ್ನೇವ ಪ್ರತಿಷ್ಠಿತಮ್ । ಮುಕ್ತಾ ಯೇಽಲೋಕನಾಮಾನೋ ನೀಯಂತೇ ತೇಽಪಿ ವಿಷ್ಣುನಾ । ಸ್ವಯಂ ಚಾನನ್ಯನಿಷ್ಠತ್ವಾತ್ ಪ್ರತಿಷ್ಠೇತ್ಯಭಿಧೀಯತೇ'
—ಐತರೇಯಸಂಹಿತಾ (ಐ. ಉ. ಭಾ.)

೧ ಮುಖ್ಯಪ್ರಾಣನನ್ನು ಭೂಲೋಕಕ್ಕೆ ಕಳುಹಿಸಿರುವವನು[1]

ಭಗವಂತನ ಆಜ್ಞಾನುಸಾರವಾಗಿ ಮುಖ್ಯಪ್ರಾಣನು ಹನುಮಂತ, ಭೀಮಸೇನ ಹಾಗೂ ಮಧ್ವಾಚಾರ್ಯರಾಗಿ ಅವತರಿಸಿ, ಅವನ ಸೇವೆಯನ್ನು ನಡೆಸಿರುವನು

೨ (ಬಲಾತ್ಕಾರದಿಂದ) ಯಾರನ್ನೂ ಕೊಂಡೊಯ್ಯಲಾಗದೋ ಅಂತಹವನು.[2]

ಸ್ವತಂತ್ರನಾದ ಭಗವಂತನು ಯಾರಿಂದಲೂ, ಯಾವಾಗಲೂ, ಎಂದೂ ಕೊಂಡೊಯ್ಯಲ್ಪಡುವವನಲ್ಲ.[3] ರಾಮಕೃಷ್ಣಾದ್ಯವತಾರಗಳಲ್ಲಿ ಸ್ವೇಚ್ಛಾನುಸಾರವಾಗಿಯೇ ವಿಶ್ವಾಮಿತ್ರ, ವಸುದೇವ ಅಕ್ರೂರಾದಿಗಳಿಂದ ಸಿದ್ಧಾಶ್ರಮ ಗೋಕುಲ ಮಥುರೆ ಮುಂತಾದೆಡೆಗೆ ಕರೆದೊಯ್ಯಲ್ಪಟ್ಟಿರುವನು

೩ ಯಾರನ್ನು ಹೊರತಾಗಿ ಜಗತ್ತಿಗೆ ಬೇರೆ ಶುಭಾವಹವಿಧಿ ಇಲ್ಲವೋ ಅಂತಹವನು[4]

'ಮಂಗಲಾಯತನ' ಎನಿಸಿರುವ ಭಗವಂತನು ಉಳಿದ ಮಂಗಲ ಪದಾರ್ಥಗಳಿಗೆಲ್ಲ ಮಾಂಗಲ್ಯವನ್ನು ಅನುಗ್ರಹಿಸುತ್ತಿದ್ದು, ಮಂಗಲ ಪದಾರ್ಥಗಳಲ್ಲೆಲ್ಲ ಶ್ರೇಷ್ಠನಾಗಿರುವವನು. ಯಾವುದೇ ವಿಧಿ ಅಥವಾ ವಸ್ತು ಅವನ ಸಂಪರ್ಕದಿಂದಾಗಿಯೇ ಶುಭಪ್ರದವೆನಿಸುವುದು ಆದುದರಿಂದಲೇ ಅವನನ್ನು ಹೊರತಾಗಿ ಬೇರೆ ಶುಭಾವಹ ವಿಧಿಯೇ ಇಲ್ಲ

---

೭ 1 ಅನಂ ಮುಖ್ಯಪ್ರಾಣಂ ಭೂಲೋಕಂ ಪ್ರತಿ ಯಾಪಯತೀತಿ ಅನಯಃ ।

* ತದರ್ಥಮೇವ ಅನಂ ಮಧ್ವರೂಪಂ ವಾಯುಂ ಭೂಲೋಕಂ ಪ್ರತಿ ಯಾಪಯತೀತಿ ಅನಯಃ । ನಾ ರಾ

* ವಾದಿರಾಜೀಯೇ 'ಅನಯಃ ನಯಃ' ಇತಿ ಪಾಠಂ ಆದೃತ್ಯ 'ನಯೋಽನಯಃ' ಇತಿ ಪಾಠಾಂತರಂ ಉಲ್ಲಿಖಿತಮ್ ।

೭ 2 ನ ವಿದ್ಯತೇ ನಯಃ ಬಲಾತ್ಕಾರೇಣ ನಯನಂ ಯಸ್ಯ ಸಃ ಅನಯಃ ।

* ಅಸಂತೃಪ್ತೈರ್ನ ನಯೋಽಸ್ಯಾಸ್ತೀತಿ ಅನಯಃ । -ಪ. ಭ. ಆಧಾರೇಣ

3 ನಹಿ ನೇಯಃ ಕ್ವಚಿತ್ ಕ್ವಾಪಿ ಕೇನಚಿತ್ ಸ್ವವಶತ್ವತಃ ।

-ಭಾಗ. ತಾ. ನಿ 11 15-24

೮ 4 ಅಯಃ ಶುಭಾವಹೋ ವಿಧಿ ಸೋಽಸ್ಮಾದನ್ಯೋ ಜಗತಾಂ ನಾಸ್ತೀತಿ ಅನಯಃ ।

-ಪ. ಭ.

## ಜಿಜ್ಞಾಸೆ

['ಸ್ವೇ ಮಹಿಮ್ನಿ ಪ್ರತಿಷ್ಠಿತಃ']

ಪ್ರ - 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂಬ ಶ್ರುತಿಯಲ್ಲಿ ಪರಮಾತ್ಮನು ಸ್ವಾಶ್ರಯನು ಎಂದು ಹೇಳಿದ್ದರಿಂದ ಆಶ್ರಯಾಶ್ರಯಿಭಾವವು ಒಬ್ಬ ಪರಮಾತ್ಮನಲ್ಲಿ ಕಂಡು ಬಂದದ್ದರಿಂದ ಆಶ್ರಯಾಶ್ರಯಿಭಾವದ ನಿರ್ವಾಹವಾಗುವದಕ್ಕಾಗಿ ಘಟ ಮತ್ತು ಅದರ ರೂಪಗಳಿಗೆ ವಿಶೇಷವು ಅನಗತ್ಯ ಎಂದು ಕೆಲವರು ಹೇಳುತ್ತಾರೆ ಅದು ನಿಜವೋ?

ಉ - ಘಟವು ತನ್ನಲ್ಲಿ ತಾನು ಏಕೆ ಇಲ್ಲ? ಪರಮಾತ್ಮನು ತನ್ನಲ್ಲಿ ತಾನು ಏಕೆ ಇದ್ದಾನೆ? ಈ ಪ್ರಶ್ನೆಯ ಪರಿಹಾರಕ್ಕಾಗಿ ಪರಮಾತ್ಮನಲ್ಲಿ ಅಂತಹ ಶಕ್ತಿವಿಶೇಷವು ಇದೆ ಎಂದೂ ಘಟದಲ್ಲಿ ಅಂತಹ ಶಕ್ತಿವಿಶೇಷವು ಇಲ್ಲವೆಂದೂ ಹೇಳಬೇಕು ಏವಂ ಚ ಭೇದಪ್ರತಿನಿಧಿಯಾದ ವಿಶೇಷವು ಆವಶ್ಯಕವಾಯಿತ ಭೇದಪ್ರತಿನಿಧಿಯಾದ ವಿಶೇಷವೆಂದರೆ ಶಕ್ತಿ ವಿಶೇಷ ಅಥವಾ ವಸ್ತುವಿನ ಸ್ವಭಾವವಿಶೇಷವೆಂದು ವಿಶೇಷವಾದಿಗಳು ಸ್ಪಷ್ಟೀಕರಿಸಿದ್ದಾರೆ ಪರಮಾತ್ಮನಲ್ಲಿ ಶಕ್ತಿವಿಶೇಷವು ಭೇದಪ್ರತಿನಿಧಿಯಾಗಿದೆ ಘಟ ಮತ್ತು ಅದರ ರೂಪಗಳಲ್ಲಿ ಸ್ವಭಾವವಿಶೇಷವು ಭೇದಪ್ರತಿನಿಧಿಯಾಗಿದೆ ತಥಾ ಚ 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂಬ ವೇದವಚನವು ಭೇದಪ್ರತಿನಿಧಿಯಾದ ವಿಶೇಷಸಾಧಕವೇ ಹೊರತು ವಿಶೇಷಕ್ಕೆ ಬಾಧಕವು ಅಲ್ಲ



## ೬೦೧ ವೀರಃ

೧ ಪರಾಕ್ರಮಶಾಲಿಯಾಗಿರುವವನು[1]

ಮುಖ್ಯವಾಗಿ 'ಭಗವಾನ್' ಎನಿಸುವ ಪರಮಾತ್ಮನಲ್ಲಿ ಇರುವ ಭಗ ಎನಿಸುವ ಆರು ಗುಣಗಳಲ್ಲಿ ಸಮಗ್ರ ವೀರ್ಯವೂ ಒಂದಾಗಿದೆ.[2] ಶ್ರೀ ವಿಷ್ಣುವಿನ ವೀರ್ಯಗಳನ್ನು ಸಮಗ್ರವಾಗಿ ಯಾರು ತಾನೇ ಹೇಳಬಲ್ಲರು? ಪೃಥಿವಿಯ ಪರಮಾಣುಗಳನ್ನು ಎಣಿಸಬಲ್ಲ ಚತುರ್ಮುಖನೂ ಭಗ

---

೧ 1 ವೀರಯತಿ ವಿಕ್ರಾಮತೀತಿ ವೀರಃ । 'ಶೂರ ವೀರ ವಿಕ್ರಾಂತೌ' । 'ಶೂರೋ ವೀರಶ್ಚ ವಿಕ್ರಾಂತಃ' —ಅ.ಕೋ.

2 ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ।
-ವಿ. ಪು. 6-5-74

ನಾಗಿ ಇರುವವನು[1]

೨ ಅತ್ಯಧಿಕವಾಗಿ ಸುಖವುಳ್ಳ ಮುಕ್ತಾತ್ಮರಿಗೂ ಪ್ರೇರಕನಾಗಿರುವವನು.[2]

೩ ತತ್ತ್ವಾಭಿಮಾನಿ ದೇವತೆಗಳನ್ನು ಪ್ರೇರಿಸುವವನು[3]

೪ ಜ್ಞಾನಿಗಳಾದ ತತ್ತ್ವಾಭಿಮಾನಿ ದೇವತೆಗಳು (ಉಳಿದ ಜೀವಾತ್ಮರಿಗೆ) ಪ್ರೇರಕರಾಗುವಂತೆ ಅನುಗ್ರಹಿಸಿರುವವನು.[4]

೫ ವಾಯುದೇವನನ್ನು ಪ್ರೇರಿಸುವವನು[5]

೬ ಬಲಶಾಲಿಯಾದ ಅಥವಾ ಜ್ಞಾನಿಯಾದ ಅಥವಾ ವಿಶಿಷ್ಟನಾದ ವಾಯುದೇವನು ಪ್ರೇರಕನಾಗುವಂತೆ ಅನುಗ್ರಹಿಸುವವನು[6]

ದೇವೋತ್ತಮನಾದ ವಾಯುದೇವನು ದೇವ, ಋಷಿ, ಪಿತೃ, ಯಕ್ಷ ಗಂಧರ್ವ, ಮನುಷ್ಯ, ಹಾವು ಹಾಗೂ ಅಸುರ–ಎಂಟು ಪ್ರಭೇದದ ಜೀವರಾಶಿಗಳನ್ನು ತನ್ನ ವಶದಲ್ಲಿರಿಸಿಕೊಂಡು ಪ್ರೇರಿಸುವ

---

1 ವಂ ಜ್ಞಾನಂ ಸುಖಂ ವಾ ಅಸ್ಯಾಸ್ತೀತಿ ವೀ । ತಾದೃಶಃ ಸ್ವಯಮೇವ ಈರಃ ಪ್ರೇರಕಃ ಯಸ್ಯ ಸಃ ವೀರಃ ।

೨ 2 ವಂ ಸುಖಂ ಅತಿಶಯೇನ ವಿಷಾಮಸ್ತೀತಿ ವಿನಃ ಮುಕ್ತಾಃ । ತೇಷಾಮಪಿ ಈರಃ ವೀರಃ ।

೩ 3 ವಿನಃ ತತ್ತ್ವಾಭಿಮಾನಿನಃ ಈರಯತೀತಿ ವೀರಃ ।

೪ 4 ವಂ ಜ್ಞಾನಂ ವಿಷಾಮಸ್ತೀತಿ ವಿನಃ ಜ್ಞಾನಿನಃ ತತ್ತ್ವಾಭಿಮಾನಿನಃ । ತೇ ಈರಾಃ ಅನ್ಯೇಷಾಂ ಜೀವಾತ್ಮನಾಂ ಪ್ರೇರಕಾಃ ಯಸ್ಮಾತ್ಸಃ ವೀರಃ ।

೫ 5 ವಿನಂ ವಾಯುಂ ಈರಯತೀತಿ ವೀರಃ ।

೬ 6 ವಂ ಬಲಂ ಜ್ಞಾನಂ ವಾ ಅಸ್ಯಾಸ್ತೀತಿ ವೀ ವಾಯುಃ । ವಾಯುಶಬ್ದಾರ್ಥೇ ವಕಾರಃ ಬಲಾರ್ಥೇ ಪ್ರಯುಕ್ತ ಇತ್ಯೈತರೇಯಸಂಹಿತಾ (ಐ. ಉ. ಭಾ. 2-2-1-1) ಪ್ರತಿಪಾದಯತಿ–'ಬಲಜ್ಞಾನಸ್ವರೂಪತ್ವಾತ್ ವಾಯುನಾಮಾ ಸ ಏವ ಚ' ಇತಿ । ಸರ್ವದೇವವಿಶಿಷ್ಟತ್ವಾದ್ವಾ ವಿಃ ವಾಯುಃ । ಸಃ ಈರಃ ಯಸ್ಮಾತ್ ಸಃ ವೀರಃ ।

ನ್ನುವ ಐತರೇಯೋಪನಿಷತ್ತು[1]—ಗರುಡನು ಭಗವದನುಗ್ರಹದಿಂದಲೇ ಪ್ರೇರಕನಾಗಿರುವುದೆಂದು ಸೂಚಿಸಿದೆ

[ಅರ್ಥ ವಿಶೇಷಗಳಿಗಾಗಿ ೬೪೩ನೆಯ ಮತ್ತು ೬೫೦ನೆಯ 'ವೀರಃ' ನಾಮದ ವ್ಯಾಖ್ಯಾನವನ್ನು ನೋಡಿರಿ]

## ಜಿಜ್ಞಾಸೆ

[ವೀರನಾಮೋಲ್ಲೇಖದ ಔಚಿತ್ಯ]

ಪ್ರ – 'ತ್ವಷ್ಟೇ ವೀರ ಉಗ್ರಮುಗ್ರಂ' ಎಂಬ ಶ್ರುತಿಯಲ್ಲಿ ವೀರಃ ಎಂಬ ನಾಮವು ಇದೆ ಇದು ವಿಷ್ಣುವಿನ ನಾಮ. ವಿಷ್ಣುವಿಗೆ ಅನೇಕ ನಾಮಗಳು ಇರುವಾಗ ಈ ಶ್ರುತಿಯು ವೀರಃ ಎಂಬ ನಾಮವನ್ನು ಉಪಯೋಗಿಸಿದ್ದು ಯಾವ ಕಾರಣದಿಂದ?

ಉ – ಆ ಶ್ರುತ್ಯರ್ಥವನ್ನು ಸರಿಯಾಗಿ ವಿಮರ್ಶಿಸಿದರೆ ವೀರಃ ಎಂಬ ನಾಮವನ್ನು ಅಲ್ಲಿ ಸ್ವೀಕರಿಸಿದ್ದಕ್ಕೆ ಪ್ರಯೋಜನವು ಗೊತ್ತಾಗುತ್ತದೆ ಆ ಶ್ರುತಿಯಲ್ಲಿ 'ದಮಾಯಸ್' ಎಂಬ ಶಬ್ದವು ಇದೆ ದಮಯಸ್ ಎಂದು ದೀರ್ಘ ಇಲ್ಲದೆ ಪ್ರಯೋಗಿಸಬೇಕಾಗಿತ್ತು 'ಮಾ' ಎಂದು ದೀರ್ಘವನ್ನು ಇಡಲಿಕ್ಕೆ ಏನು ಕಾರಣ ಎಂದು ಪ್ರಶ್ನೆಯು ಸಹಜವಾಗಿ ಬರುತ್ತದೆ ಶ್ರೀ ವಾದಿರಾಜ ಸ್ವಾಮಿಗಳು ಭಗವದ್ದ್ವೇಷಿಗಳಿಗೆ ನರಕವು ನಿತ್ಯವಾದದ್ದು ಎಂದು ತಿಳಿಸಬೇಕಾಗಿದೆ ಅದಕ್ಕಾಗಿ ದೀರ್ಘಪ್ರಯೋಗ ಎಂದು ಹೇಳಿದ್ದಾರೆ ಆದರೆ ಭಗವದ್ದ್ವೇಷಿಗಳಿಗೆ ನರಕವು ದೀರ್ಘ ಹೊರತು ನಿತ್ಯವಲ್ಲ ಎಂದು ತಿಳಿಸುವದಕ್ಕಾಗಿ 'ಮಾ' ಎಂದು ದೀರ್ಘ ಎಂದು ಯಾರಾದರೂ ಹೇಳಬಹುದುದು ಅದನ್ನು ಖಂಡಿಸಿ ಅವರಿಗೆ ನರಕವು ನಿತ್ಯವೇ ಆಗಿದೆ ಎಂದು ಸಮರ್ಥನೆಯನ್ನು ಮಾಡುವದಕ್ಕಾಗಿ ವೀರಃ ಎಂದು ನಾಮವನ್ನು ಪ್ರಯೋಗಿಸಿದ್ದು ವೀರಃ ಎಂದರೆ ತಾನು ಯಾವ ಕಾರ್ಯವನ್ನು ಆರಂಭಿಸುತ್ತಾನೋ ಆ ಕಾರ್ಯವನ್ನು ಮಧ್ಯದಲ್ಲಿ ಅಸಾಮರ್ಥ್ಯದಿಂದ ಬಿಟ್ಟು ಬಿಡುವದಿಲ್ಲ ಎಂದು ಅಭಿಪ್ರಾಯವು ಇದೆ ಇದರಿಂದ ಭಗವದ್ದ್ವೇಷಿಗಳಿಗೆ ನರಕವನ್ನು ಕೊಟ್ಟು ಬಹಳ ದಿವಸಗಳಾದ ಮೇಲೆ ಅವರನ್ನು ನರಕದಿಂದ ಬಿಡುಗಡೆಯನ್ನು ಮಾಡುವದಿಲ್ಲ ಅವರಿಗೆ ವೀರನಾದ ಪರಮಾತ್ಮನು ನಿತ್ಯನರಕವನ್ನೇ ಕೊಡುತ್ತಾನೆಂದು ತಿಳಿಸಿದಂತೆ ಆಯಿತು ಇಷ್ಟರಿಂದ ಇಲ್ಲಿ ವೀರಃ ಎಂಬ ನಾಮವು ಸಾರ್ಥಕ



---

1 ' ತಸ್ಯೈತಸ್ಯ ಬ್ರಹ್ಮಾ ರಸಃ .. ' –ಐ.ಉ. 2–8–3–3

'.....ಬ್ರಹ್ಮಾಖ್ಯೋ ಜ್ಞಾನಬೃಂಹಣಾತ್ । ಸಂಕರ್ಷಣಾಖ್ಯಸ್ತು ಹರಿಃ ಸಾರಃ ಸ ಗರುಡಸ್ಯ ಚ । –ಐ. ಉ. ಭಾ.

## ೪೦೨ ಶಕ್ತಿಮತಾಂ ಶ್ರೇಷ್ಠಃ

೧ ಪ್ರಶಸ್ತವಾದ ಶಕ್ತಿಸಂಪನ್ನರಾದವರೆಲ್ಲರಲ್ಲಿ ಶ್ರೇಷ್ಠನಾಗಿರುವವನು[1]

ಸ್ವತಂತ್ರನಾದ ಭಗವಂತನ ಶಕ್ತಿಗೆ ಯಾವುದೇ ರೀತಿಯ ಮಿತಿ ಇಲ್ಲ[2] ಅದು ಅವನ ಸ್ವರೂಪಾತ್ಮಕವಾಗಿದ್ದು ಚಿದಾನಂದಾತ್ಮಕವೆನಿಸಿದೆ ಅವನಂತೆಯೇ ನಿತ್ಯ ಹೀಗೆ ಭಗವಂತನ ಶಕ್ತಿಯು ಉಳಿದ ಶಕ್ತಿಶಾಲಿಗಳ ಶಕ್ತಿಗಿಂತ ವಿಲಕ್ಷಣವಾಗಿದ್ದು, ವೈಶಿಷ್ಟ್ಯಪೂರ್ಣವೆನಿಸಿದೆ[3] ಅಲ್ಲದೆ, ಉಳಿದೆಲ್ಲರ ಶಕ್ತಿಯು ಭಗವದಧೀನವಾದದ್ದು 'ಅಖಿಲ ಶಕ್ತಿಧರ'ನಾದ ಭಗವಂತನು ಅಲ್ಲಲ್ಲಿದ್ದು ಆಯಾಯ ವಸ್ತುವಿನ ಶಕ್ತಿಯನ್ನು ಪ್ರಚೋದಿಸಿದಾಗಷ್ಟೇ[4] ಅದು ಕಾರ್ಯಕಾರಿಯಾಗುವುದು ಭಗವಂತನ ಶಕ್ತಿಯಾದರೂ ಸ್ವತಂತ್ರ

ಆದುದರಿಂದ ಶಕ್ತಿ ಸಂಪನ್ನರಲ್ಲೆಲ್ಲ ಶ್ರೇಷ್ಠನಾಗಿರುವವನು ಭಗವಂತನೇ

೨ ಶಕ್ತಿಶಾಲಿಗಳಿಗೆ ಶ್ರೇಷ್ಠ್ಯವನ್ನು ಅನುಗ್ರಹಿಸುವವನು[5]

ಬಲಿಷ್ಠರಲ್ಲಿ ಬಲನಾಮಕ ವಿಭೂತಿ ರೂಪದಿಂದ ಇದ್ದು, ಅವರಿಗೆ ವಿಶೇಷವಾಗಿ ಬಲಪ್ರದನಾಗಿ ತಾನು ಇರುವೆನೆಂದು ಸಂದೇಶಿಸುವ[6] ಗೀತಾಚಾರ್ಯನು, ಬಲಿಷ್ಠರು ಉಳಿದೆಲ್ಲರಿಗಿಂತ ಶ್ರೇಷ್ಠರೆನಿಸಲು ತಾನೇ ಕಾರಣನೆಂದು ಸೂಚಿಸಿರುವರು

---

೧ 1 ಪ್ರಶಸ್ತಾ ಶಕ್ತಿಃ ಏಷಾಮಸ್ತೀತಿ ಶಕ್ತಿಮಂತಃ । ಪ್ರಶಂಸಾರ್ಥವಿಶೇಷೇ ವಿವಕ್ಷಿತೇ ಮತುಪ್ । ತೇಷಾಂ ಮಧ್ಯೇ ಶ್ರೇಷ್ಠಃ ।

2 "ಸರ್ವತ್ರಾಖಿಲಸಚ್ಛಕ್ತಿಃ ರಮಾಪತಿಃ"
-ತ ದ್ಯೋ ಮಂಗಲಪದ್ಯಂ

3 ಭಗವತಃ ಶಕ್ತೇಃ ವೈಶಿಷ್ಟ್ಯಮಧಿಕೃತ್ಯ ಅಧಿಕಃ ವಿಚಾರಃ 'ಮಹಾಶಕ್ತಿಃ' (೧೭೯) ಇತಿ ನಾಮ್ನಃ ವ್ಯಾಖ್ಯಾನೇ ದ್ರಷ್ಟವ್ಯಃ ।

4 ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ । ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ । ವಾಮನ (ಬ್ರ. ಸೂ. ಭಾ. 2 3 11)

* ' ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ' ಭಾಗ. 4-9-6

೨ 5 ಪವಿತ್ರಾಣಾಂ ಪವಿತ್ರಂ ಇತ್ಯಾದೌ ಪವಿತ್ರಾಣಾಂ ಪಾವಿತ್ರ್ಯಪ್ರದ ಇತಿ ಯಥಾ ಅರ್ಥಃ ತಥಾಽತ್ರಾಪಿ ।

6 'ಬಲಂ ಬಲವತಾಂ ಚಾಹಂ ' ಗೀ. 7 11

೭ ಶಕ್ತಿ ಎಂಬುದಾಗಿ ತಿಳಿಯಲ್ಪಡುವ ಲಕ್ಷ್ಮೀದೇವಿಯು (ಉಳಿದೆಲ್ಲರಿಗಿಂತ) ಶ್ರೇಷ್ಠ-ನೆನಿಸುವಂತೆ ಅನುಗ್ರಹಿಸುವವನು[1]

೪ ಶಕ್ತ್ಯರೂಪಿ ಜ್ಞಾನಿಗಳ ಮನನಕ್ಕೆ ಗೋಚರಿಸುವವನು, 'ಅಂ' ಎನಿಸುವವನು ಹಾಗೂ ಶ್ರೇಷ್ಠನಾಗಿರುವವನು[2]

## ಜಿಜ್ಞಾಸೆ

### [ಅವನ ಶಕ್ತಿ ಅವನ ಸ್ವರೂಪವೇ]

ಪ್ರ - ಪರಮಾತ್ಮನು ಅಪರಿಮಿತಶಕ್ತಿಯುಳ್ಳವನು ಅವನ ಆ ಶಕ್ತಿಯು ಸ್ವತಂತ್ರವಾದದ್ದು. ಯಾವ ಜಡಕ್ಕೂ ಸ್ವಾತಂತ್ರ್ಯವು ಇಲ್ಲವಾದ್ದರಿಂದ ಸ್ವತಂತ್ರವಾದ ಪರಮಾತ್ಮನ ಶಕ್ತಿಯು ಚೇತನವೇ ಆಗಬೇಕು. ಅಂತಹ ಶಕ್ತಿಯು ಪರಮಾತ್ಮನಿಂದ ಭಿನ್ನವೆಂದು ಹೇಳಿದರೆ ಶಾಕ್ತಮತವನ್ನು ಒಪ್ಪಿದಂತೆ ಆಗುತ್ತದೆಯಲ್ಲವೇ?

ಉ – ರಾಮಾನುಜಾಚಾರ್ಯರು ಪರಮಾತ್ಮನ ಧರ್ಮಗಳೆಲ್ಲವೂ ಪರಮಾತ್ಮನ ದೆಸೆಯಿಂದ ಭಿನ್ನ ವೆಂದು ಅಂಗೀಕರಿಸಿದ್ದರಿಂದ ಅವರು ಪರಮಾತ್ಮನಿಗಿಂತ ಭಿನ್ನವಾದ ಸ್ವತಂತ್ರವಾದ ಶಕ್ತಿಯನ್ನು ಒಪ್ಪಿದ್ದರಿಂದ ಅವರು ಶಾಕ್ತ ಮತದವರು ಆಗುತ್ತಾರೆ ಶ್ರೀಮಧ್ವ ಸಿದ್ಧಾಂತದಲ್ಲಿ ಪರಮಾತ್ಮನ ಎಲ್ಲ ಧರ್ಮಗಳೂ ಪರಮಾತ್ಮನ ಸ್ವರೂಪವೇ ಆದ್ದರಿಂದ ಪರಮಾತ್ಮನ ಧರ್ಮವಾದ ಸ್ವತಂತ್ರ ಶಕ್ತಿಯೂ ಪರಮಾತ್ಮನ ಸ್ವರೂಪವೇ ಆದ್ದರಿಂದ ಮಾಧ್ವ ಸಿದ್ಧಾಂತವು ಶಾಕ್ತ ಸಿದ್ಧಾಂತವಾಗಲಾರದು



೩೦೪ ಧರ್ಮ

೧ ಸಕಲ ಜಗತ್ತನ್ನೂ ಧರಿಸಿಕೊಂಡಿರುವವನು[3]

---

೭ 1 ಶಕ್ತಿರಿತಿ ಮತಾ ಶಕ್ತಿಮತಾ ಲಕ್ಷ್ಮೀಃ । ತಾಂ ಶ್ರೇಷ್ಠಯತೀತಿ ಶಕ್ತಿಮತಾಂಶ್ರೇಷ್ಠಃ ।

೪ 2 ಶಕ್ತಿರೂಪತ್ವಾತ್ ಶಕ್ತಿಃ। ಜ್ಞಾನಿನಾಂ ಮನನವಿಷಯತ್ವಾತ್ ಮತಃ। ಅಂ ಪದ ವಾಚ್ಯಃ। ' ಅಆ ಅಂ ಅಃ ಪುರಃ ಋಷಿಃ ವ್ಯಾಸಃ ಶಾಖಾಸಹಸ್ರಕೃತ್ ' ಇತ್ಯತ್ರ ಅಂ ಇತ್ಯಪಿ ತನ್ನಾ-ಮತಯಾ ಪಠ್ಯತೇ । ಶ್ರೇಷ್ಠತ್ವಾತ್ ಶ್ರೇಷ್ಠಃ ।

೧ 3 ಸರ್ವಂ ಜಗದ್ ಧತ್ತ ಇತಿ ಧರ್ಮಃ । —ಗೀ. ಭಾ. 9-2

ಭಗವಂತನು ಸಕಲಧಾರಕನಾಗಿರುವುದರಿಂದ ಧರ್ಮ ಎಂದೆನಿಸಿರುವನೆಂದ 'ಶಬ್ದನಿರ್ಣಯ' ತಿಳಿಸಿದೆ[1] ತಂತ್ರಭಾಗವತವೂ ಇದೇ ಅಭಿಪ್ರಾಯಪಟ್ಟಿದೆ[2] ಭಗವಂತನು ಜಗದ್ಧಾರಕ ಎಂಬ ಅಭಿಪ್ರಾಯದಲ್ಲೇ ಅವನನ್ನು 'ಧರ್ಮ' ಎಂಬ ನಾಮದಿಂದ ಉಲ್ಲೇಖಿಸಿ, ಸೃಷ್ಟಿಯ ಪೂರ್ವದಲ್ಲಿ ಅವನ ಇರುವಿಕೆಯನ್ನು 'ಸಾಮವೇದದ ಬಾಭ್ರವ್ಯಶಾಖೆ'ಯು ಸಾರಿದೆ[3]. ಕಾಠಕೋಪನಿಷತ್ತಿನಲ್ಲಿಯೂ ಈ ಅರ್ಥದಲ್ಲೇ ಭಗವಂತನನ್ನು "ಧರ್ಮ" ಎಂದು ಉಲ್ಲೇಖಿಸಲಾಗಿದೆ[4]

೨ ಧರ್ಮಕ್ಕೆ ನಿಯಾಮಕನಾಗಿರುವವನು[5]

ಉದ್ಧವನು-ಧರ್ಮವನ್ನು ಕಪಿಲಾದಿರೂಪದಿಂದ ಹೇಳುವವನೂ, ನರನಾರಾಯಣಾದಿ ರೂಪದಿಂದ ಆಚರಿಸುವವನೂ, ಕೃಷ್ಣಾದಿರೂಪದಿಂದ ಧರ್ಮವನ್ನು ರಕ್ಷಿಸುವವನೂ ನೀನು—ಎಂದು ಹೇಳುವುದರ[6] ಮೂಲಕ ಧರ್ಮಕ್ಕೆ ಭಗವಂತನೇ ನಿಯಾಮಕನೆಂದು ಸೂಚಿಸಿರುವನು ಭಿನ್ನ ಭಿನ್ನ ಧರ್ಮಾಚರಣೆಯುಳ್ಳವರು ಭಿನ್ನ ಭಿನ್ನ ಧರ್ಮಫಲವನ್ನು ಬಯಸುತ್ತ ಭಿನ್ನ ಭಿನ್ನ ಧರ್ಮಗಳಿಂದ

---

1 'ಧಾರಣಾದ್ ಭಗವಾನ್ ಧರ್ಮಃ'
—ಶಬ್ದನಿರ್ಣಯ (ಭಾಗ ತಾ ನಿ 3-17 22)

2 'ಧಾರಕತ್ವಾದ್ ಧರ್ಮರೂಪೋ ಹಿ '
—ತಂತ್ರಭಾಗವತ (ಭಾಗ. ತಾ ನಿ 1-10 26)

3 'ಧರ್ಮೋ ವಾ ಇದಮಗ್ರ ಆಸೀನ್ನ ಪೃಥಿವೀ ನ ವಾಯುರ್ನಾಕಾಶೋ ನ ಬ್ರಹ್ಮಾ ನ ರುದ್ರೋ ನೇಂದ್ರೋ ನ ದೇವಾ ನ ಋಷಯಃ ಸೋಽಧ್ಯಾಯತ್'—ಸಾಮವೇದೇ ಬಾಭ್ರವ್ಯಶಾಖಾ (ಗೀ ಭಾ 9-2)

4 ನಹಿ ಸುಜ್ಞೇಯಮಣುರೇಷ ಧರ್ಮಃ ।
—ಕಾ. ಉ. 1-4 2

ಧಾರಕತ್ವಾದ್ ಧರ್ಮೋ ಭಗವಾನ್ । —ಕಾ ಉ. ಭಾ

5 ಧರ್ಮಃ ಅಸ್ಯ ನಿಯಾಮ್ಯತಯಾಽಸ್ತೀತಿ ಅರ್ಶಆದ್ಯಚಿ ಧರ್ಮೀ ।

6 ವಕ್ತಾ ಕರ್ತಾಽವಿತಾ ನಾನ್ಯೋ ಧರ್ಮಸ್ಯಾಚ್ಯುತ ತೇ ಭುವಿ ।
—ಭಾಗ. 11 17-5

ಕಪಿಲಾದಿರೂಪೇಣ ಧರ್ಮಸ್ಯ ವಕ್ತಾ ನರನಾರಾಯಣಾದಿರೂಪೇಣ ಧರ್ಮಸ್ಯ ಕರ್ತಾ ಕೃಷ್ಣಾದಿರೂಪೇಣ ಧರ್ಮಸ್ಯ ಅವಿತಾತ್ವಮೇವ —ಯಾದವೇಂದ್ರತೀರ್ಥಾಃ ।

ಯಾರನ್ನು ಆರಾಧಿಸುವರೋ ಅಂತಹ 'ಧರ್ಮಾತ್ಮ'ನಿಗೆ ಪ್ರಣಾಮ ಎಂಬುದಾಗಿ ಶ್ರೀಕೃಷ್ಣನನ್ನು ಸ್ತುತಿಸುವ[1] ಭೀಷ್ಮಾಚಾರ್ಯರು ಭಗವಂತನ ಧರ್ಮನಿಯಾಮಕತ್ವದ ಮತ್ತೊಂದು ಮುಖವನ್ನು ಸೂಚಿಸಿಕೊಟ್ಟಿರುವರು

೩. ಸ್ವಭಾವಗಳಿಗೆ ನಿಯಾಮಕನಾಗಿರುವವನು[2]

ಎಲ್ಲರ, ಎಲ್ಲದರ ಸ್ವಭಾವವೂ ಭಗವಂತನಿಂದಲೇ ನಿಯತವಾದುದು[3]

೪ ಆಚಾರಕ್ಕೆ ನಿಯಾಮಕನಾಗಿರುವವನು[4]

೫ ಲೋಕಧಾರಕರಾದ ದೇವತೆಗಳನ್ನು ಸೃಷ್ಟಿಸುವವನು.[5]

೬ ಧಾರಕನಾಗಿರುವವನು ಮತ್ತು ಜ್ಞಾನಸ್ವರೂಪಿ[6]

---

1 ಯಂ ಪೃಥಗ್ಧರ್ಮಚರಣಾಃ ಪೃಥಗ್ಧರ್ಮಫಲೈಷಿಣಃ ।
ಪೃಥಗ್ಧರ್ಮೈಃ ಸಮರ್ಚಂತಿ ತಸ್ಮೈ ಧರ್ಮಾತ್ಮನೇ ನಮಃ ॥
—ಮ ಭಾರ ಶಾಂತಿ 47–51

೩ 2 'ಧರ್ಮೋಽಸ್ತ್ರೀ ಪುಣ್ಯ ಆಚಾರೇ ಸ್ವಭಾವೋಪಮಯೋಃ ಕ್ರತೌ'—ಇತಿ ಧರ್ಮಃ । ಸ್ವಭಾವಃ । ಸಃ ನಿಯಮ್ಯತಯಾಽಸ್ತೀತಿ ಧರ್ಮಃ ।

3 ಸರ್ವಸ್ವಭಾವೋ ನಿಯತಸ್ತೇನೈವ -ಗೀ ಭಾ. (7–8)

೪ 4 ಧರ್ಮಃ ಆಚಾರಃ ಅಸ್ಯ ನಿಯಮ್ಯತಯಾಽಸ್ತೀತಿ ಧರ್ಮಃ ಆಚಾರನಿಯಾಮಕಃ

೫ 5 ಧರಂತೀತಿ ಧರಾಃ ಲೋಕಧಾರಕಾಃ ತತ್ತ್ವಾಭಿಮಾನಿದೇವಾಃ । ತಾನ್ ಮಾತಿ ನಿರ್ಮಾತೀತಿ ಧರ್ಮಃ ।

೬ 6 ಧರತೀತಿ ಧರಃ । ಜ್ಞಾನರೂಪತ್ವಾತ್ ಮಃ । ಧರಶ್ಚಾಸೌ ಮಶ್ಚ ಧರ್ಮಃ । ರಕಾರೋತ್ತರಾಕಾರಸ್ಯ ಲೋಪಃ ।

## ಜಿಜ್ಞಾಸೆ

[ಧರ್ಮಶಬ್ದವಾಚ್ಯತ್ವ]

ಪ್ರ- ಧರ್ಮಶಬ್ದದಿಂದ ಭಗವಂತನು ಮತ್ತು ಯಜ್ಞಾದಿ ಅನುಷ್ಠಾನಗಳೂ ಹೇಳಲ್ಪಡುವುದಕ್ಕೆ ಕಾರಣವು ಏನಾದರೂ ಇದೆಯೋ?

ಉ - ಮನೆಯ ಯಜಮಾನನು ತನ್ನ ಪತ್ನಿಯನ್ನು ನಮ್ಮ ಮನೆಯವಳು ಎಂದು ವ್ಯವಹರಿಸುವಂತೆ ಪತ್ನಿಯು ತನ್ನ ಪತಿಯನ್ನು ನಮ್ಮ ಮನೆಯವರು ಎಂದು ವ್ಯವಹರಿಸುತ್ತಾಳೆ. ಒಂದೇ ರೀತಿಯಾಗಿ ಪತಿ ಪತ್ನಿಯರು ಇಬ್ಬರೂ ವ್ಯವಹರಿಸಿದಾಗ ಅದರ ಅರ್ಥವು ಯಾವ ರೀತಿಯಾಗಿ ತಿಳಿಯಲ್ಪಡುತ್ತದೋ ಅದೇ ರೀತಿ ಧರ್ಮ ಎಂಬ ಒಂದೇ ನಾಮದಿಂದ ಭಗವಂತನೂ ಯಜ್ಞಾದಿಗಳೂ ಹೇಳಲ್ಪಡುವಾಗ ಅರ್ಥವು ತಿಳಿಯಲ್ಪಡುತ್ತದೆ. ನಮ್ಮ ಮನೆಯವರು, ಮನೆಯವಳು ಎಂದರೆ ಮನೆಯ ಯಜಮಾನರು ಯಜಮಾನಿ ಎಂದು ಅರ್ಥ. ಒಂದು ಮನೆಗೆ ಇಬ್ಬರು ಸ್ವತಂತ್ರ ಯಜಮಾನರು ಇರಲು ಸಾಧ್ಯವಿಲ್ಲ. ಆದುದರಿಂದ ಪತಿಯು ಸ್ವತಂತ್ರ ಯಜಮಾನನು. ಪತ್ನಿಯು ಅಸ್ವತಂತ್ರ ಯಜಮಾನತ್ವವುಳ್ಳವಳು. ಅವರು ಇಬ್ಬರೂ ಮನೆಯಲ್ಲಿದ್ದರೆ ಮನೆಯು ಚೆನ್ನಾಗಿ ಇರುತ್ತದೆ. ಇಬ್ಬರಲ್ಲಿ ಒಬ್ಬರು ಇಲ್ಲವಾದರೆ ಮನೆಯಲ್ಲಿ ಅಲಂಕಾರವು ಇಲ್ಲವೆಂದಾಗುತ್ತದೆ. ಅದರಂತೆ ಪರಮಾತ್ಮನನ್ನು ಮಾತ್ರ ಅಥವಾ ಧರ್ಮವನ್ನು ಮಾತ್ರ ಆಶ್ರಯಿಸಿದವರು ಚೆನ್ನಾಗಿ ಇರಲಾರರು. ಎರಡರ ಆಶ್ರಯವುಳ್ಳವರು ಮಾತ್ರ ಚೆನ್ನಾಗಿ ಇರುತ್ತಾರೆ. ಆದ್ದರಿಂದ ಪತಿ ಮತ್ತು ಪತ್ನಿಯರು ಇಬ್ಬರೂ ಉಳ್ಳ ಮನೆಗಳಂತೆ ಭಗವಂತ ಮತ್ತು ಧರ್ಮ ಈ ಎರಡೂ ಉಳ್ಳವರೆಲ್ಲರೂ ಶೋಭಿಸುತ್ತಾರೆ.



೪೦೪ ಧರ್ಮವಿದುತ್ತಮಃ

೧ ಧರ್ಮಬಲ್ಲವರಲ್ಲೆಲ್ಲ ಶ್ರೇಷ್ಠನಾಗಿರುವವನು.[1]

೨ ಧರ್ಮವನ್ನು ವಿಚಾರಿಸುವವರಲ್ಲೆಲ್ಲ ಶ್ರೇಷ್ಠನಾಗಿರುವವನು.[2]

---

೧ 1 ಧರ್ಮಂ ವಿದಂತೀತಿ ಧರ್ಮವಿದಃ । ತೇಷಾಂ ಉತ್ತಮಃ ಧರ್ಮವಿದುತ್ತಮಃ ।

೨ 2 ಧರ್ಮಂ ವಿಂದತೇ ವಿಚಾರಯಂತೀತಿ ಧರ್ಮವಿದಃ । ತೇಷಾಂ ಉತ್ತಮಃ । 'ವಿದ ವಿಚಾರಣೇ' ।

೧ ಚೆನ್ನಾಗಿ ಧರ್ಮವನ್ನು ಬಲ್ಲವನು ಮತ್ತು ಶ್ರೇಷ್ಠನಾಗಿರುವವನು.[1]

ಯುಧಿಷ್ಠಿರನು ಶ್ರೀಕೃಷ್ಣನನ್ನು 'ಸರ್ವಧರ್ಮವಿದುತ್ತಮ' ಎಂದೇ ಕರೆದಿರುವನು[2]

೨ ಧರ್ಮವನ್ನು ಬಲ್ಲವನು ಉತ್ತಮನಾಗುವಂತೆ ಅನುಗ್ರಹಿಸುವವನು[3]

೩ ಧರ್ಮ ಎನಿಸುವ ತನ್ನನ್ನು ಬಲ್ಲವನು ಶ್ರೇಷ್ಠ ಎನಿಸುವಂತೆ ಅನುಗ್ರಹಿಸುವವನು[4]

೪ ಯಮಧರ್ಮನ ಅವತಾರಿ ವಿದುರನು ಜ್ಞಾನಿ ಶ್ರೇಷ್ಠನಾಗುವಂತೆ ಅನುಗ್ರಹಿಸಿರುವವನು[5]

ಯಮಧರ್ಮನು ಮಾಂಡವ್ಯ ಋಷಿಗಳ ಶಾಪದಿಂದಾಗಿ ಶೂದ್ರನಾಗಿ ಅಂಬಿಕೆಯ ದಾಸಿಯಲ್ಲಿ ಹುಟ್ಟುವನು ಅವನಿಗೆ ಸರ್ವಜ್ಞತ್ವ ಬರುವಂತೆ ಶ್ರೀವೇದವ್ಯಾಸರು ಅನುಗ್ರಹಿಸುವರು.[6]

೫ ಪುಣ್ಯ ಕರ್ಮಗಳನ್ನು ಸ್ವೀಕರಿಸುವವನು ಮತ್ತು ಶ್ರೇಷ್ಠನು.[7]

---

೧ 1 ಸಮ್ಯಕ್ ಧರ್ಮಂ ವೇತ್ತೀತಿ ಧರ್ಮವಿತ್ । ಅಸಾಧಾರಣ್ಯೇನ ವ್ಯಪದೇಶಃ । ಸ ಚಾಸೌ ಉತ್ತಮಶ್ಚ ಧರ್ಮವಿದುತ್ತಮಃ । -ಮ. ಭಾರ. ಶಾಂತಿ 54-13

2 ತ್ವಂ ಹಿ ನಸ್ತಾತ ಸರ್ವೇಷಾಂ ಸರ್ವಧರ್ಮವಿದುತ್ತಮಃ ।
-ಮ. ಭಾರ ಶಾಂತಿ. 54-13

೨ 3 ಧರ್ಮವಿತ್ ಉತ್ತಮಃ ಯಸ್ಮಾತ್ ಸಃ ಧರ್ಮವಿದುತ್ತಮಃ।

೩ 4 ಧರ್ಮಃ ಭಗವಾನ್ । ತಂ ವೇತ್ತೀತಿ ಧರ್ಮವಿತ್ । ಸಃ ಉತ್ತಮಃ ಯಸ್ಮಾತ್ ಸಃ ಧರ್ಮವಿದುತ್ತಮಃ ।

೪ 5 ಧರ್ಮಃ ಯಮಧರ್ಮಃ ತದವತಾರಃ ವಿದುರಃ ವಿದುತ್ತಮಃ ಜ್ಞಾನಿಶ್ರೇಷ್ಠಃ ಯಸ್ಮಾತ್ ಯಸ್ಯಾನುಗ್ರಹಾತ್ ಸಃ ಧರ್ಮವಿದುತ್ತಮಃ ।

6 ಅವಾಪ ಶೂದ್ರತ್ವಮಥಾಸ್ಯ ನಾಮ ಚಕ್ರೇ ಕೃಷ್ಣಃ ಸರ್ವವಿತ್ತ್ವಂ ತಥಾಽದಾತ್ ।
-ಮ. ಭಾರ. ತಾ. ನಿ. 11-140

೫ 7 ಧರ್ಮಾಃ ಪುಣ್ಯಕರ್ಮಾಣಿ ವಿಂದತಿ ಪ್ರಾಪ್ನೋತಿ ಸ್ವೀಕರೋತೀತಿ ಧರ್ಮವಿತ್ ಉತ್ತಮಶ್ಚ ।

ವಾಯುದೇವರು ತ್ರೇತಾಯುಗದಲ್ಲಿ ಹನುಮಂತನಾಗಿ ಶ್ರೀರಾಮದೇವನ ಕಾರ್ಯಸಾಧಕನಾಗಿಯೂ, ದ್ವಾಪರಯುಗದಲ್ಲಿ ಭೀಮಸೇನನಾಗಿ ಶ್ರೀಕೃಷ್ಣದೇವನ ಕಾರ್ಯಸಾಧಕನಾಗಿಯೂ ಕಲಿಯುಗದಲ್ಲಿ ಮಧ್ವಾಚಾರ್ಯರಾಗಿ ಶ್ರೀವೇದವ್ಯಾಸರ ಕಾರ್ಯಸಾಧಕರಾಗಿಯೂ ಇರುವರೆಂದು ಪುರಾಣವಚನವು ತಿಳಿಸಿದೆ[1]

## ಜಿಜ್ಞಾಸೆ

(ಧರ್ಮ ನಿರ್ಣಯ ಯಾರಿಂದ?)

ಪ್ರ: - ಈ ಕಾಲಕ್ಕೆ ಸರಿಯಾಗಿ ಧರ್ಮವನ್ನು ಬದಲಾಯಿಸಬೇಕು. ಪೀಠಾಧಿಪತಿಗಳು ಎಲ್ಲರೂ ಐಕ್ಯಮತದಿಂದ ಇದ್ದು ಒಂದು ಕಡೆಯಲ್ಲಿ ಸೇರಿ ಈ ಕಾಲಕ್ಕೆ ಅನುಕೂಲವಾಗುವ ಧರ್ಮವನ್ನು ನಿರ್ಣಯಿಸಿ ಶಿಷ್ಯರಿಗೆ ಧರ್ಮಸ್ವರೂಪವನ್ನು ಘೋಷಿಸಬೇಕು. ಇಲ್ಲವಾದರೆ ಜನರಿಗೆ ಪ್ರಾಚೀನ ಧರ್ಮವನ್ನು ಈ ಕಾಲದಲ್ಲಿ ಅನುಷ್ಠಾನ ಮಾಡಲು ಸಾಧ್ಯವಿಲ್ಲದ್ದರಿಂದ ಎಲ್ಲರೂ ಧರ್ಮಬಾಹ್ಯರೇ ಆಗುತ್ತಾರೆಂದು ಬಹು ಜನರ ಅಭಿಪ್ರಾಯವು ಇದೆ. ಇದು ಸರಿಯೋ?

ಉ: - ಪರಮಾತ್ಮನಿಗೆ 'ಧರ್ಮವಿದುತ್ತಮ' ಎಂದು ನಾಮವು ಇದ್ದದ್ದರಿಂದ ಆ ಪರಮಾತ್ಮನು ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನು ಎಂದು ಸಿದ್ಧವಾಗಿದೆ. ಪೀಠಾಧಿಪತಿಗಳಿಗೆ ಧರ್ಮದ ತಿಳಿವಳಿಕೆಯು ಪೂರ್ಣ ಇಲ್ಲ ಎಂದೂ ಸಿದ್ಧವಾಗುತ್ತದೆ. ಆದುದರಿಂದ ಪೀಠಾಧಿಪತಿಗಳ ಧರ್ಮಸ್ವರೂಪದ ನಿರ್ಣಯವು ಪೂರ್ಣ ಧರ್ಮಸ್ವರೂಪಜ್ಞಾನಿಯಾದ ಪರಮಾತ್ಮನ ತಿಳಿವಳಿಕೆಗೆ ವಿರುದ್ಧವಾದರೆ ಅವರ ನಿರ್ಣಯವು ನಿಜವಾದ ಧರ್ಮನಿರ್ಣಯವು ಆಗುವದಿಲ್ಲ. ಆದುದರಿಂದ ಪೀಠಾಧಿಪತಿಗಳ ಧರ್ಮನಿರ್ಣಯವು ಅಪ್ರಯೋಜಕ.



---

1 ಪ್ರಥಮೋ ಹನುಮಾನ್ನಾಮ ದ್ವಿತೀಯೋ ಭೀಮ ಏವ ಚ। ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ । -ಮ. ಭಾರ ತಾ ನಿ. 2-129

ತಪಸ್ವಿನೋ ದಾನಪರಾ ಯಶಸ್ವಿನೋ
ಮನಸ್ವಿನೋ ಮಂತ್ರವಿದಃ ಸುಮಂಗಲಾಃ ।
ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥

